# ವಿಜ್ಞಾನ ಕಲಿಸುವಿಕೆಯನ್ನು ಸುಲಭಗೊಳಿಸುವ ಸಾಧನಗಳು

## ಓವರ್‌ಹೆಡ್ ಪ್ರೊಜೆಕ್ಟರ್‌ಗಾಗಿ ವರ್ಣಪಾರದರ್ಶಿಕೆಗಳು

## COLOUR TRANSPARENCIES FOR OVER HEAD PROJECTOR

★ ಮಾನವ ಶರೀರ ಶಾಸ್ತ್ರ, ಭೂಗೋಳ ಹಾಗೂ ಸಸ್ಯಶಾಸ್ತ್ರ ವಿಷಯಗಳ ಮೇಲೆ ವರ್ಣಪಾರದರ್ಶಿಕೆಗಳು

★ ಕನ್ನಡ ಹಾಗೂ ಇಂಗ್ಲಿಷ್ – ಎರಡೂ ಭಾಷೆಗಳಲ್ಲಿ ವಿವರಣೆ







## ವಿಜ್ಞಾನ ಚಾರ್ಟುಗಳು

★ 100 ಸೆಂ. ಮೀ. X 125 ಸೆಂ. ಮೀ. ಅಳತೆ

★ ಕನ್ನಡ ಹಾಗೂ ಇಂಗ್ಲಿಷ್ – ಎರಡೂ ಭಾಷೆಗಳಲ್ಲಿ ವಿವರಣೆ



## ಜಗತ್ಪ್ರಸಿದ್ಧ ವಿಜ್ಞಾನಿಗಳ ಭಾವಚಿತ್ರಗಳು

★ 55 ಸೆಂ. ಮೀ. X 70 ಸೆಂ. ಮೀ. ಅಳತೆ

★ ಕನ್ನಡ ಹಾಗೂ ಇಂಗ್ಲಿಷ್ – ಎರಡೂ ಭಾಷೆಗಳಲ್ಲಿ ವಿವರಣೆ

ಮುದ್ರಣ ಹಾಗೂ ಪ್ರಕಟಣೆ

**SCREEN** *Craft*™

No. 1, 2nd Cross, Kirlari Road,
BANGALORE - 560 053 ✆ 080-220 2671




ಸಂಪುಟ-೩ ಸಂಚಿಕೆ - ೬ ಜನವರಿ ೨೦೦೨

**ಪ್ರಧಾನ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ ಮಂಡಲಿ**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

**ವ್ಯವಸ್ಥಾಪಕರು**

ಎಸ್. ಸುರೇಂದ್ರ
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**

# ನಮ್ಮ ಗಣರಾಜ್ಯದ ರಕ್ಷಣೆ

ತನ್ನ ಮೂರನೆಯ ವರ್ಷದಲ್ಲಿ ಎರಡನೆಯ ವಿಶೇಷ ಸಂಚಿಕೆಯನ್ನು ಓದುಗರ ಮುಂದಿಡುತ್ತಾ ಅವರಿಗೆ 'ಹೊಸತು' ಶುಭವನ್ನು ಕೋರುತ್ತದೆ, ಈ ವರ್ಷದಲ್ಲಿ ಅರ್ಥವತ್ತಾದ ಬೆಳವಣಿಗೆಗಳು ಸಾಧ್ಯವಾಗಲೆಂದು ಹಾರೈಸುತ್ತದೆ ಮತ್ತು ಅದಕ್ಕಾಗಿ ಕ್ರಿಯಾಶೀಲವಾಗಲು ಅವರೊಂದಿಗೆ ಕೈಜೋಡಿಸುತ್ತದೆ. ಈ ಸಂಚಿಕೆಯನ್ನು ಹೊರತರಲು ಸಹಕರಿಸಿದ ಎಲ್ಲ ಲೇಖಕರಿಗೆ, ಜಾಹಿರಾತುದಾರರಿಗೆ ಹಾಗೂ 'ಹೊಸತು' ಸಿಬ್ಬಂದಿಯವರಿಗೆ ನಮ್ಮ ಕೃತಜ್ಞತೆ ಸಲ್ಲಿಸುತ್ತೇವೆ.

ನಮ್ಮ ಗಣರಾಜ್ಯವು ಅಸ್ತಿತ್ವಕ್ಕೆ ಬಂದು ೫೨ ವರ್ಷಗಳಾದವು. ನಮ್ಮ ಸಾರ್ವಭೌಮತ್ವವನ್ನು ಕಳೆದುಕೊಳ್ಳುತ್ತಿದ್ದೇವೋ ಎಂಬ ಆತಂಕವನ್ನು ಹಿಂದೆಂದಿಗಿಂತಲೂ ಹೆಚ್ಚಾಗಿ ಅನುಭವಿಸುತ್ತಿರುವ ಈ ದಿನಗಳಲ್ಲಿ ನಮಗೆ ಒಡ್ಡಲಾಗಿರುವ ಸವಾಲುಗಳನ್ನು ಸ್ಥೈರ್ಯದಿಂದ ಮತ್ತು ಒಮ್ಮನಸ್ಸಿನಿಂದ ಎದುರಿಸಬೇಕಾದ ಹೊಸ ಗಣರಾಜ್ಯೋತ್ಸವದ ವರ್ಷಕ್ಕೆ ಕಾಲಿರಿಸುತ್ತಿದ್ದೇವೆ. ಸೆಪ್ಟೆಂಬರ್ ೧೧ರ ಘಟನೆ ಜರುಗಿದಾಗ ಇಡೀ ವಿಶ್ವ ತನ್ನೊಟ್ಟಿಗೆ ನಿಂತು ಭಯೋತ್ಪಾದನೆಯನ್ನು ಹಿಮ್ಮೆಟ್ಟಿಸಬೇಕೆಂದು ನಿರೀಕ್ಷಿಸಿದ ಅಮೆರಿಕಾದ ಸರ್ಕಾರ ತನ್ನ ಎಂದಿನ ದುರಹಂಕಾರಿ ಭಯೋತ್ಪಾದಕ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಆಫ್ಘಾನಿಸ್ತಾನದ ಮೇಲೆ ಎರಗಿಬಂತು; ಆದರೆ ಡಿಸೆಂಬರ್ ೧೩ರಂದು ನಮ್ಮ ದೇಶದ ಸಾರ್ವಭೌಮತ್ವದ ಕುರುಹಾದ ಸಂಸತ್ ಭವನದ ಮೇಲೆ

## ಸಂಪಾದಕೀಯ

ನಡೆಸಲಾದ ಭಯೋತ್ಪಾದಕ ಕೃತ್ಯಕ್ಕೆ ಕಾರಣರಾದವರನ್ನು ಹೆಸರಿಸಲು ಅಮೆರಿಕಾ ಈವರೆಗೂ ಹಿಂಜರಿಯುತ್ತಲೇ ಬಂದಿದೆ. ವಿಷವೃಕ್ಷವೇ ಆದರೂ ತಾನೇ ಬೆಳೆಸಿದ ಗಿಡಕ್ಕೆ ಕೊಡಲಿ ಹಾಕಲಾದೀತೇ ಎಂಬ ಕಾಳಿದಾಸನ ಮಾತನ್ನು ತನಗೆ ಅನುಕೂಲವಾದಾಗ ಅಮೆರಿಕಾ ಉಲ್ಲಂಘಿಸುತ್ತದೆ, ಮತ್ತೆ ಕೆಲವು ವೇಳೆ ತಾನು ಶಾಂತಿದೂತನೆಂಬ ವೇಷ ಹಾಕಿಕೊಂಡು ಇತರರಿಗೆ ಉಪದೇಶ ನೀಡುತ್ತದೆ. ತಾಲಿಬಾನನ್ನು ಧ್ವಂಸಮಾಡಲು ಆಫ್ಘಾನಿಸ್ತಾನದ ಅಮಾಯಕರನ್ನು ಆಹುತಿ ತೆಗೆದುಕೊಳ್ಳುವ ಜಾರ್ಜ್ ಬುಷ್ ಮತ್ತು ಕಾಲಿನ್ ಪವೆಲ್ಲರು ನಮ್ಮ ಗಣರಾಜ್ಯದ ಬೇರಿಗೆ ಬೆಂಕಿಯಿಕ್ಕಲು ಬಂದ ಭಯೋತ್ಪಾದಕರ ಮೂಲವನ್ನು ಗುರುತಿಸಲು ಹಿಂದೇಟು ಹಾಕುತ್ತಾರೆ ಮಾತ್ರವಲ್ಲ, ಅದನ್ನು ಉತ್ಪಾಟಿಸ ಹೊರಡುವಾಗ ಸಂಯಮಿಗಳಾಗಿರಬೇಕೆಂದು ನಮಗೆ ಸೂಚನೆ ನೀಡುತ್ತಾರೆ. ಪಶ್ಚಿಮ ಏಷ್ಯಾದ ತೈಲಸಂಪತ್ತನ್ನು ಸೂರೆಮಾಡಲು ತಾವು ಬೆಳೆಸಿರುವ ಮುದ್ದಿನ ಕೂಸು ಇಸ್ರೇಲ್ ನಡೆಸುವ ಎಲ್ಲ ಘೋರ ಕೃತ್ಯಗಳಿಗೂ ಕುಮ್ಮಕ್ಕು ನೀಡುವ ಅಮೆರಿಕಾಕ್ಕೆ ಭಾರತದ ಉಪಖಂಡದಲ್ಲಿ ಯಾರು ಮುದ್ದಿನ ಕೂಸೆಂಬುದು ಸ್ಪಷ್ಟವಾಗಿದೆ. ಆ ಹೀನ ಪದವಿಗೆ ನಮ್ಮ ದೇಶ ಹಾತೊರೆಯುವುದು ಬೇಡ. ಡಿಸೆಂಬರ್ ೧೯ರಂದು ಪ್ರಧಾನಿಯವರು ಲೋಕಸಭೆಯಲ್ಲಿ ಅಮೆರಿಕೆಯನ್ನು ಹೆಸರಿಸದೆ ಆ ದೇಶದ ಸ್ವಾರ್ಥನೀತಿ ಮತ್ತು ಸೋಗಿನ ನಡತೆಯನ್ನು ಟೀಕಿಸಿರುವುದು ಈ ದೃಷ್ಟಿಯಿಂದ ಸ್ವಾಗತಾರ್ಹವಾಗಿದೆ. ಆದರೆ ಅದಕ್ಕನುಗುಣವಾಗಿ ನಡೆದುಕೊಳ್ಳುವ ದಿಟ್ಟತನ ತೋರಬೇಕು. ಈ ಕೂಡಲೆ ಪಾಕಿಸ್ತಾನದ ವಿರುದ್ಧ ಯುದ್ಧ ಹೂಡಬೇಕೆಂದು ಇದರರ್ಥವಲ್ಲ; ಕಾಶ್ಮೀರದ ಜನ 'ಸ್ವಾತಂತ್ರ್ಯ ಹೋರಾಟ' ನಡೆಸುತ್ತಿದ್ದಾರೆಂಬ ಮುಸುಕಿನ ಹಿಂದೆ ಪಾಕಿಸ್ತಾನದ ಸರ್ಕಾರ ವಿನಾಶಕಾರಿ ನೀತಿಯನ್ನು ಅನುಸರಿಸುತ್ತಿರುವುದು ಗುಟ್ಟೇನೂ ಅಲ್ಲ. ಶಾಲಾ-ಕಾಲೇಜುಗಳನ್ನು ನಡೆಸುವುದಕ್ಕಿಂತ ಹೆಚ್ಚಾಗಿ

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಬಿ. ಜಿ. ಗುಜ್ಜಾರಪ್ಪ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಬಸವರಾಜ ಕಲ್ಗುಡಿ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಂ. ಎ. ಸೇತುರಾವ್
ಎಲ್. ಹನುಮಂತಯ್ಯ
ಹಾಲಾಡಿ ಮಾರುತಿರಾವ್

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೨೪೩೦೨



ಭಯೋತ್ಪಾದಕರಿಗೆ ತರಬೇತಿ ನೀಡುವ ಕೇಂದ್ರಗಳನ್ನು ಆಯೋಜಿಸುತ್ತಿರುವ ಪಾಕಿಸ್ತಾನದ ಸರ್ಕಾರವು ತನ್ನ ದೇಶವು ಛಿದ್ರಗೊಳ್ಳುವ ಸಂದರ್ಭವನ್ನು ಆಹ್ವಾನಿಸಿಕೊಳ್ಳುತ್ತಿದೆ. ತಾಲಿಬಾನನ್ನು ಪ್ರೋತ್ಸಾಹಿಸಿ ಆಮೇಲೆ ಅಮೆರಿಕಾದ ಆಜ್ಞೆಯಂತೆ ತಾಲಿಬಾನರನ್ನು ಕೊಲ್ಲುವ ಪ್ರಸಂಗದಲ್ಲಿ ಪಾಕಿಸ್ತಾನ ಭಾಗಿಯಾದ್ದನ್ನು ಪಾಕಿಸ್ತಾನದ ಭಯೋತ್ಪಾದಕರು ಅರಿತುಕೊಳ್ಳಲಾರರು. ಆದ್ದರಿಂದ ಅಲ್ಲಿಯ ರಾಜಕೀಯ ಹಾಗೂ ಮಿಲಿಟರಿ ನಾಯಕರು ಎಚ್ಚೆತ್ತುಕೊಂಡು ಜವಾಬ್ದಾರಿ ನೀತಿಯನ್ನು ಇನ್ನು ಮೇಲಾದರೂ ಅನುಸರಿಸುವುದು ಒಳ್ಳೆಯದು.

ಭಯೋತ್ಪಾದಕತೆಯನ್ನು ಸೋಲಿಸಲು ಇಂದಿನ ಕೇಂದ್ರ ಸರ್ಕಾರ ತಂದಿರುವ ಒಂದು ಕರಾಳ ಶಾಸನವನ್ನು ಸಂಸತ್ತಿನ ಮೇಲೆ ನಡೆದ ಹಲ್ಲೆಯ ಹಿನ್ನೆಲೆಯಲ್ಲಿ ಆಳುವ ವರ್ಗವು ಸಮರ್ಥಿಸುತ್ತಿದೆ. ಸ್ವತಃ ಅಪರಾಧದ ಆರೋಪವನ್ನು ಹೊತ್ತು ವಿಚಾರಣೆಗೆ ಗುರಿಯಾಗಬೇಕಾದ ಗೃಹಮಂತ್ರಿ ಅಡ್ವಾನಿಯಂಥವರು, ಈ ಕರಾಳ ಶಾಸನವನ್ನು ಸಮರ್ಥಿಸದಿರುವವರು ದೇಶದ್ರೋಹಿಗಳಿಗೆ ಸಮವೆಂದು ಹೇಳುವ ಮಟ್ಟಕ್ಕಿಳಿಯುವುದು ಅವರ ದೂರದರ್ಶಿತ್ವದ ಅಭಾವ ಮತ್ತು ಸರ್ವಾಧಿಕಾರಿ ಮನೋಭಾವದ ಸೂಚಕವಾಗಿದೆ. ನಮ್ಮ ಎಷ್ಟೋ 'ಬುದ್ಧಿಜೀವಿ'ಗಳು ಈ ಕಾಕಸ್ವರಕ್ಕೆ ತಾಳ ಹಾಕುತ್ತಾರೆ. ಭಯೋತ್ಪಾದಕತೆಯನ್ನು ಒಂದು ಮತಧರ್ಮೀಯರೊಡನೆ ಸಮೀಕರಿಸುವುದು ಇದಕ್ಕೆ ಕಾರಣ. ದೆಹಲಿಯಲ್ಲಿ ಸಂಸತ್ತಿನ ಮೇಲೆ ನಡೆದ ಹಲ್ಲೆಯ ಸಮಯದಲ್ಲಿ ಈ ಶಾಸನ ಜಾರಿಯಲ್ಲಿದ್ದಿತೆಂಬುದನ್ನು ಇವರೂ ಸೇರಿದಂತೆ ಯಾರೂ ಮರೆಯಬಾರದು. ಆ ಶಾಸನವಿತ್ತು ಮತ್ತು ಹಲ್ಲೆಯ ಅಪಾಯವಿದೆಯೆಂದು ಮುಂಬೈನಿಂದ ಸೂಚನೆಯೂ ಬಂದಿತ್ತು; ಆದರೂ ಅದನ್ನು ಆರಂಭದಲ್ಲೇ ಚಿವುಟಿಹಾಕಲಾಗಲಿಲ್ಲ. ಪಾರ್ಲಿಮೆಂಟಿನ ಬಳಿ ಇದ್ದ ರಕ್ಷಣಾದಳದವರನ್ನು ತ್ಯಾಗಿಗಳೆಂದು ಶ್ಲಾಘಿಸುವಾಗ ಅವರು ಪ್ರಾಣ ಕೊಡಬೇಕಾಗಿ ಬಂದದ್ದೇಕೆ ಎಂಬ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಉಗ್ರಶಾಸನದಿಂದ ನಾಗರಿಕರನ್ನು ಹಿಂಸಿಸಬಹುದೇ ಹೊರತು ಭಯೋತ್ಪಾದಕರನ್ನು ನಿಗ್ರಹಿಸಲಾಗುವುದಿಲ್ಲ. ಒಂದು ಕಡೆ ಗಣರಾಜ್ಯದ ಪ್ರಶಸ್ತ ಚಿಹ್ನೆಯಾದ ಸಂಸತ್ತನ್ನು ಹೊಗಳುವುದು, ಇನ್ನೊಂದೆಡೆ ಅದೇ ಗಣರಾಜ್ಯದ ಮೂಲ ಲಕ್ಷಣವಾದ ಪ್ರಜಾಪ್ರಭುತ್ವ ಕ್ರಮವನ್ನು ತುಳಿದುಹಾಕುವುದು, – ಈ ವಿರೋಧವು ಅಂಗೀಕಾರಾರ್ಹವಲ್ಲ. ಭಯೋತ್ಪಾದಕತೆಯ ಮೂಲೋತ್ಪಾಟನೆ ಅಗತ್ಯ; ಆದರೆ ಅದರ ಹೆಸರಿನಲ್ಲಿ ಕರಾಳ ಶಾಸನಗಳನ್ನು ಜಾರಿಗೊಳಿಸುವುದು ಅಸಮರ್ಥನೀಯ.

ಭಯೋತ್ಪಾದಕತೆ ಯಾವುದು ಮತ್ತು ಅದು ಹುಟ್ಟಿಕೊಂಡಿರುವುದೇಕೆ ಎಂಬುದನ್ನು ವಿಮರ್ಶಿಸಿಕೊಳ್ಳದೆ ಗದೆ ಹಿಡಿದು ಹೊರಡುವ ಪ್ರವೃತ್ತಿ ಪರಿಹಾರವನ್ನೊದಗಿಸುವುದಿಲ್ಲ. ಅದು ಖಂಡನೀಯ ಕೂಡ. ಅಪಥ್ಯವೆನಿಸಬಹುದಾದರೂ ಕೆಲವು ವಾಸ್ತವಿಕ ಸಂಗತಿಗಳನ್ನು ನಮಗೆ ನಾವು ಮರೆಮಾಚಿಸಿಕೊಳ್ಳಬಾರದು: ಬೇರೆಷ್ಟೋ ಅಂಶಗಳಲ್ಲದೆ ಕಾಶ್ಮೀರದ ಪ್ರಶ್ನೆಗೂ ಭಯೋತ್ಪಾದಕ ಕೃತ್ಯಗಳಿಗೂ ನೇರವಾದ ಸಂಬಂಧವಿದೆ. ಆ ಸಮಸ್ಯೆಯ ಪರಿಹಾರಕ್ಕೆ ಆದ್ಯತೆ ನೀಡಬೇಕಾದ್ದು ನಮ್ಮ ಮೊದಲ ಕರ್ತವ್ಯ. ಇದನ್ನು ಹೇಗೆ ಬಗೆಹರಿಸಬೇಕೆಂಬುದಕ್ಕೆ ಸರಳವಾದ ಉತ್ತರಗಳಿಲ್ಲ. ಆದರೆ ಯಾವುದೇ ಕ್ರಮ ಅನುಸರಿಸಿದರೂ ಮೊದಲು ಕಾಶ್ಮೀರದ ಜನರ ಮನಸ್ಸು ಒಲಿಸಿಕೊಳ್ಳಬೇಕಾದ್ದು, ಅವರ ಆಶಯಗಳನ್ನು ಗೌರವಿಸಬೇಕಾದ್ದು, ಅವರೊಡನೆ ಸಂವಾದ ಏರ್ಪಡಿಸಿಕೊಳ್ಳಬೇಕಾದ್ದು, ಅವರ ಪ್ರಾಥಮಿಕ ಮಾನವ ಹಕ್ಕುಗಳಿಗೆ ಚ್ಯುತಿಬಾರದಂತೆ ನಡೆಯಬೇಕಾದ್ದು ತೀರಾ ಅವಶ್ಯಕ. ಇಸ್ರೇಲಿನ ಗೂಢಚಾರಿ ಸಂಸ್ಥೆಯ ಪರಿಣತರನ್ನು ಕಾಶ್ಮೀರಕ್ಕೆ ಕರೆತಂದು ಅವರ ಮಾರ್ಗದರ್ಶನದಲ್ಲಿ ಕಾಶ್ಮೀರದ ಸಮಸ್ಯೆಗೆ ಉತ್ತರ ಕಂಡುಕೊಳ್ಳಬಹುದೆಂಬುದು ಭ್ರಾಂತಿಯಷ್ಟೇ ಅಲ್ಲ, ಅದು ನೀಚತನಕ್ಕೊಂದು ನಿದರ್ಶನವಾಗುತ್ತದೆ. ಅಯೋಧ್ಯೆಯಲ್ಲಿ ಮಸೀದಿಯನ್ನು ಉರುಳಿಸಿದ ವೀರರು ಈಗ ಅದನ್ನು ಮಂದಿರದ ಪವಿತ್ರಸ್ಥಾನವೆಂದು ಹೇಳುತ್ತಾ ಕಾನೂನು ಮುರಿದು ಒಳನುಗ್ಗುತ್ತಾರೆ. ಉತ್ತರ ಪ್ರದೇಶದ ಮುಖ್ಯಮಂತ್ರಿ ಮತ್ತು ಕೇಂದ್ರದ ಗೃಹಮಂತ್ರಿ ಅದನ್ನು ನೋಡಿಯೂ ಮಧ್ಯಪ್ರವೇಶ ಮಾಡುವುದಿಲ್ಲ. ಅಲ್ಲಿಯ ಅತಿಕ್ರಮ ಪ್ರವೇಶವನ್ನು ಪೋಟೋದೊಡನೆ ಪೋಟಿಹಾಕಲು ಇವರು ಸಿದ್ಧರಿರಲಿಲ್ಲ. ಇದಕ್ಕೆ ಪೂರಕವಾಗಿ ಮಾನವ ಸಂಪನ್ಮೂಲ ಸಚಿವರು ಇತಿಹಾಸದ ಪಠ್ಯಪುಸ್ತಕಗಳ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾರೆ. ಐದುಸಾವಿರ ವರ್ಷಗಳ ಹಿಂದೆ ಭಾರತದಲ್ಲಿದ್ದವರು ಗೋಮಾಂಸ ತಿನ್ನುತ್ತಿದ್ದರೆಂದು ಹೇಳಿದರೆ ದೇಶದ ಭಾವನೆಗಳಿಗೆ ಚುರುಕು ಮುಟ್ಟುತ್ತದಂತೆ; ಆದ್ದರಿಂದ ಅದನ್ನು ಹೇಳಬಾರದೆಂದು ವಿಧಿಸುತ್ತಾರೆ. ಅಸ್ಪೃಶ್ಯತೆ, ಜಾತಿ ವಿಭಜನೆ, ಆಕ್ರಮಣಗಳ ಸರಣಿ, ಇವನ್ನೂ ಇನ್ನು ಮುಂದೆ ಉಲ್ಲೇಖಿಸಬಾರದೆಂಬ ಮೂರ್ಖ ಆಣತಿ ಬಂದರೆ ಆಶ್ಚರ್ಯವಿಲ್ಲ. ಇವೆಲ್ಲಾ ಜನರ ಐಕ್ಯತೆಗೆ ಸಾಧನವಾಗುವುದಿಲ್ಲ; ಅವು ಜನತೆಯನ್ನು ವಿಭಜಿಸುವ ಸೂತ್ರಗಳು. ಇದಾವುದೂ ಪ್ರತ್ಯೇಕವಾಗಿ ತಾನೊಂದೇ ಭಯೋತ್ಪಾದಕತೆಯನ್ನು ಸೃಜಿಸುವುದಿಲ್ಲ; ಆದರೆ ಅದರತ್ತ ತೆವಳುವಂತೆ ನೂಕಲು ಇವು ಸಾಧನಗಳು.

ಭಾರತೀಯ ಸಂಸ್ಕೃತಿಯೆಂದರೆ ಸಮಕಾಲೀನ ಸಂದರ್ಭದಲ್ಲಿ ಲಂಚಗುಳಿತನ, ಭ್ರಷ್ಟಾಚಾರ, ಎಂಬಷ್ಟುಮಟ್ಟಿಗೆ ಅವು ವ್ಯಾಪಿಸಿರುವುದು ನಮಗೆ ನಾಚಿಕೆಯೆನಿಸಬೇಕು. ಜಾರ್ಜ್ ಫರ್ನಾಂಡೀಸ್ ಅಂಥವರಿಗೆ ಅದು ತಟ್ಟದಿರುವುದು ನಮ್ಮ ಅಧೋಗತಿಯ ಮಟ್ಟವನ್ನು ತೋರಿಸುತ್ತದೆ. ತೆಹಲ್ಕಾ ಪ್ರಕರಣಕ್ಕಿಂತಲೂ ಹೆಚ್ಚು 'ಹಲ್ಕಾ' ಪ್ರಕರಣವೆಂದರೆ ಕಾರ್ಗಿಲ್ಲಿನಲ್ಲಿ ಬೀಳಿಸಲಾದ ಹೆಣಗಳ ಹಿಂಬದಿಯಲ್ಲಿ ಹೂತುಕೊಂಡು ಹಣ ಮಾಡಿಕೊಳ್ಳುವುದು. ಇದಕ್ಕಿಂತಲೂ ಹೆಚ್ಚು ಅಸಹ್ಯವೆನಿಸುವ ಬೀಭತ್ಸ ಕೃತ್ಯ ಯಾವುದಿರಬಹುದು ! ಅದರಿಂದಲೂ ನಾವು ರೊಚ್ಚಿಗೇಳಬಾರದೆ ? ಲಾಲೂಪ್ರಸಾದ್ ಯಾದವ್ ದನದ ಮೇವನ್ನು ಮೇಯ್ದನೆಂದು ಹೇಳಿದ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್‌ರೇ ಈ ಹೆಣ ಸಾಗಾಣಿಕೆಯ ಹಿಂದಿನ ಪಾತಕವನ್ನು ಹೊರಗೆಡಹಿದ್ದು. ಆದರೆ ಲಾಲೂ ಜೈಲಿಗೆ ಹೋಗಬೇಕು, ಜಾರ್ಜ್ ಸಚಿವನಾಗಬೇಕು; ಏಕೆಂದರೆ ಲಾಲೂಗೆ ಜಾರ್ಜ್‌ಗೆ ಬರುವಷ್ಟು ಇಂಗ್ಲಿಷ್ ಬರುವುದಿಲ್ಲ, ಆತನಿಗೆ ಅಂತರರಾಷ್ಟ್ರೀಯ ಮುತ್ಸದ್ದಿಗಳ ಪರಿಚಯವಿಲ್ಲ ಮತ್ತು ಜಯಾ ಜೇಟ್ಲಿಯವರಂತಹ ಪ್ರತಿಭಾವಂತರ ಸಂಪರ್ಕವಿಲ್ಲ. ಲಾಲೂ ಜೊತೆ ಜಾರ್ಜ್ ಸಹ ಜೈಲಿಗೆ ಹೋದರೆ ಅವರ ಬೌದ್ಧಿಕ ಆರೋಗ್ಯ ಸುಧಾರಿಸುತ್ತದೋ ಏನೋ ಕಾದುನೋಡಬೇಕು. ಆಗ ಅವರಿಗೆ ಸಂಸ್ಕೃತಿಯ ಪಾಠ ಹೇಳಿಕೊಡಲು ಅಡ್ವಾನಿ, ಉಮಾ ಭಾರತಿ, ಮುರಳಿ ಮನೋಹರ ಜೋಶಿ ಮುಂತಾದ ಅಯೋಧ್ಯಾ ಸಿಂಹ-ಸಿಂಹಿಣಿಯರೂ ಜೈಲಿಗೆ ತೆರಳಬಹುದು. ಭಾರತೀಯ ಸಂಸ್ಕೃತಿಯ ಚರಮಗೀತೆ ಹಾಡದಿರಬೇಕಾದರೆ ಇವೆಲ್ಲಾ ಅಗತ್ಯವೆನಿಸುತ್ತದೆ.

ನಮ್ಮ ಸಾರ್ವಭೌಮ ಸಂಸತ್ತಿನಲ್ಲಿ ಚರ್ಚೆಗೆ ಬರಬೇಕಾದ ವಿಷಯಗಳಲ್ಲಿ ಇವಕ್ಕೆ ಆದ್ಯತೆ ಇರಬೇಕು. ಆದರೆ ಭಯೋತ್ಪಾದನೆಯಿಂದಾಗಿ ಸಂಸತ್ತಿನ ಅಧಿವೇಶನ ಮೊಟಕಾಗಬೇಕಾಯಿತು ಮತ್ತು ಅದಕ್ಕೆ ಮೊದಲು ಶವಪೆಟ್ಟಿಗೆಗಳ ಕರ್ಮಕಾಂಡ ಅಧಿವೇಶನವನ್ನು ಆವರಿಸಬೇಕಾಯಿತು. ದೋಹಾದಲ್ಲಿ ನಾವು ದೇಶದ ದೇಹವನ್ನು ಮಾರಿಕೊಂಡುಬಂದೆವು. ಶ್ರೀರಾಮನಿಗೆ ಪ್ರಣಾಮ ಸಲ್ಲಿಸುತ್ತಿದ್ದೇವೆಂದು ತಪ್ಪು ತಿಳಿದು ನಮ್ಮ ಕೇಂದ್ರ ಸರ್ಕಾರದ ಉದ್ದಾಮ ನಾಯಕರು ಅಂತರರಾಷ್ಟ್ರೀಯ ಆರ್ಥಿಕತೆಯ ಪಾತಕಿಗಳಿಗೆ ಸಾಷ್ಟಾಂಗ ನಮಸ್ಕಾರ ಹಾಕಿದ್ದು ದೋಹಾದ ವಿಶ್ವ ವ್ಯಾಪಾರ ಸಂಸ್ಥೆಯ ಸಭೆಯಲ್ಲಿ. ಅಲ್ಲಿ ದೇಶದ ಮಾನವನ್ನು ಹರಾಜಿಗೆ ಹಾಕಿದ್ದಾಯಿತು ಮತ್ತು ನಮ್ಮ ರೈತರ ತಲೆಯ ಮೇಲೆ ಚಪ್ಪಡಿ ಎಳೆದದ್ದಾಯಿತು. ಅಂತರರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯು ದೋಹಾ ಪ್ರಣಾಲಿಕೆಯ ಆಧಾರದಲ್ಲಿ ಮುಂದುವರಿದರೆ ಪ್ರತಿಯೊಂದು ದೇಶದಲ್ಲೂ ಅಸಮಾಧಾನದ ಹೊಗೆ ಬೇರೆ ಬೇರೆ ರೀತಿಗಳಲ್ಲಿ ಪ್ರಕಟವಾಗಲಾರಂಭಿಸುತ್ತದೆ, ವಿಕೃತ ರೂಪಗಳನ್ನು ತಾಳುತ್ತದೆ. ಡಿಸೆಂಬರ್ ಕೊನೆಯ ವೇಳೆಗೆ ಅರ್ಜೆಂಟೈನಾದಲ್ಲಿ ತಲೆದೋರಿದ ಘರ್ಷಣೆಗಳು ಭಾರತವೂ ಸೇರಿದಂತೆ ಹಲವು ಅನಭಿವೃದ್ಧ ದೇಶಗಳಿಗೆ ವ್ಯಾಪಿಸಿದರೆ ಅದೊಂದು ಸಹಜ ಪ್ರಕ್ರಿಯೆಯಾಗುತ್ತದೆ. ಉದ್ಯಮಗಳ ಸ್ಥಗಿತತೆ, ನಿರುದ್ಯೋಗ, ಕೃಷಿ ಉತ್ಪಾದನೆಗೆ ಆದ್ಯತೆ ನೀಡದಿರುವುದು ಮತ್ತು ಬ್ಯಾಂಕುಗಳ ದಿವಾಳಿತನ, – ಇವು ಅಲ್ಲಿಯ ಆರ್ಥಿಕತೆಗೆ ಹೊಡೆತ ನೀಡಿದುವು. ಅಲ್ಲಿಯ ಗಲಭೆಗಳಲ್ಲಿ ಹಲವರು ಮಡಿದರು. ಗಲಭೆಗಳ ಪ್ರಚೋದನೆಗೆ ಭಯೋತ್ಪಾದಕರನ್ನು ಕಲ್ಪಿಸಿಕೊಂಡು ದೂಷಿಸುವುದು ಸುಲಭ. ಜನರು ಬಂಡೇಳುತ್ತಾರೆಂಬುದನ್ನು ಒಪ್ಪಲು ಸಿದ್ಧರಿಲ್ಲದಾಗ ಯಾರೋ ಬಂಡಾಯದ ಭುಗಿಲೆಬ್ಬಿಸುತ್ತಾರೆಂದು ಗೂಬೆ ಕೂರಿಸುವುದರಿಂದ ಯಾವ ಪ್ರಯೋಜನವೂ ಇಲ್ಲ. ಇಂದಿನ ಭಯೋತ್ಪಾದನೆಯ ಜಾಗದಲ್ಲಿ ವೈಯ್ಯಕ್ತಿಕ ಹಿಂಸಾ ಪ್ರಕರಣಗಳು ತಾಂಡವವಾಡಿದರೆ ಆಮೇಲೆ ಮೂಗಿನ ಮೇಲೆ ಬೆರಳಿಡುವುದು ಬೇಡ. ದೇಶೀಯರು ಹಾಗೂ ವಿದೇಶಿಯರು ಇದಕ್ಕೆ ತುತ್ತಾಗಬಹುದು. ಇತ್ತೀಚೆಗೆ ಎನ್ರಾನ್ ಕಂಪನಿ ಮುಳುಗಿದ್ದು ಸರಿಯಷ್ಟೆ: ಅಂಥವರೊಂದಿಗೆ ನಾವು ಸಖ್ಯ ಬೆಳೆಸಿದೆವು, ವ್ಯವಹಾರ ನಡೆಸಿದೆವು, ನಮ್ಮ ಜನರನ್ನು ಗುಂಡಿಗೆ ಹಾಕಿದೆವು. ಮುಳುಗುವ ಎನ್ರಾನ್ ಒಡನೆ ನಮ್ಮ ದೇಶವನ್ನು ಮುಳುಗಿಸುವ ವ್ಯವಹಾರವು ದ್ರೋಹವೋ ಅಥವಾ ರಾಷ್ಟ್ರಪ್ರೇಮವೋ ಎಂಬುದನ್ನು ಜನ ತೀರ್ಮಾನಿಸುತ್ತಾರೆ. ಅಂತಹ ಎಷ್ಟು ಅವ್ಯವಹಾರಗಳಲ್ಲಿ ನಾವು ದೇಶವನ್ನು ಸಿಲುಕಿಸುತ್ತಿದ್ದೇವೆ ಮತ್ತು ದೇಶದ ಸಾರ್ವಜನಿಕ ಆಸ್ತಿಯನ್ನು ನುಂಗಿಹಾಕಲು ದೇಶ-ವಿದೇಶಗಳ ಬಂಡವಾಳಿಗ ತಿಮಿಂಗಿಲಗಳಿಗೆ ಅವಕಾಶ ಮಾಡಿಕೊಡುತ್ತಿದ್ದೇವೆ ?

**ಓದುಗರಿಗೆ, ಲೇಖಕರಿಗೆ,**
**ಜಾಹಿರಾತುದಾರರಿಗೆ, ಹಿತೈಷಿಗಳಿಗೆ**
**'ಹೊಸತು' ಬಳಗದ, ನವಕರ್ನಾಟಕ**
**ಪ್ರಕಾಶನದ ಹೊಸ ವರ್ಷದ ಶುಭಾಶಯಗಳು**

ಮುರಸೋಳಿ ಮಾರನ್, ಯಶವಂತ ಸಿನ್ಹಾ, ಅರುಣ್ ಶೌರಿ, ಜೇಟ್ಲಿ ಮುಂತಾದ ಮಂತ್ರಿಗಳ ನಾಯಕರಾದ ಪ್ರಧಾನಿಯವರು ಇದಕ್ಕೆ ಉತ್ತರ ಕಂಡುಕೊಂಡರೆ ಡಿಸೆಂಬರ್ ೧೯ರಂದು ಅವರು ಸಂಸತ್ತಿನಲ್ಲಿ ಆಡಿದ ಮಾತುಗಳಿಗೆ ಅರ್ಥ ಬರುತ್ತದೆ. ಅವರೆಂದರು: ''ನಮ್ಮ ತೀರ್ಮಾನಗಳನ್ನು ತೀವ್ರವಾದ ವಿಶ್ಲೇಷಣೆಗಳ ನಂತರವೇ ಕೈಗೊಳ್ಳುತ್ತೇವೆ. ಅವು ಆಳುವ ಪಕ್ಷದ ತೀರ್ಮಾನಗಳು ಮಾತ್ರವಾಗಿರುವುದಿಲ್ಲ, ಅವು ರಾಷ್ಟ್ರೀಯ ಪ್ರಜ್ಞೆಯ ಪ್ರತಿಫಲನವಾಗಿರುತ್ತವೆ. ...ನಮ್ಮ ಸಾರ್ವಭೌಮತ್ವಕ್ಕಾಗಿ ಬೇರೆ ಯಾರೂ ಹೋರಾಟ ಮಾಡುವುದಿಲ್ಲ. ನಾವೇ ಆ ಹೋರಾಟ ಮಾಡುತ್ತೇವೆ. ನಾವೇ ಭಯೋತ್ಪಾದನೆಯನ್ನು ಅಳಿಸಿಹಾಕುತ್ತೇವೆ. ಅದಕ್ಕೆ ನಮ್ಮದೇ ಶಕ್ತಿಯನ್ನು ಬಳಸಿಕೊಳ್ಳುತ್ತೇವೆ. ...ನಮಗೆ ಸಹನೆಯನ್ನು ಬೋಧಿಸಲಾಗುತ್ತಿದೆ. ನಮ್ಮ ನೆರೆರಾಷ್ಟ್ರದ ಅಗತ್ಯವಿರುವವರು ನಮಗೆ ಬೋಧನೆಯನ್ನು ನಿಲ್ಲಿಸಿ ಅವರಿಗೆ ಬೋಧನೆಯನ್ನು ನೀಡಲೆಂದು ಅಪೇಕ್ಷಿಸುತ್ತೇವೆ. ಭಯೋತ್ಪಾದನೆಗೆ ಅನೇಕಾರ್ಥಗಳಿಲ್ಲ, ಅದಕ್ಕಿರುವುದು ಒಂದೇ ಅರ್ಥ. ಮಾತು-ಕೃತಿಗಳಲ್ಲಿ ಇದನ್ನು ತೋರಿಸಬೇಕಾಗಿದೆ.''

– ಈ ಮಾತುಗಳನ್ನು ಆರ್ಥಿಕ ಭಯೋತ್ಪಾದನೆಯನ್ನುಂಟುಮಾಡುತ್ತಿರುವ ದೇಶಗಳಿಗೂ ಅನ್ವಯಿಸಬೇಕು. ವಿಶ್ವ ವ್ಯಾಪಾರ ಸಂಸ್ಥೆಯು ಆ ದೇಶಗಳ ಮುಖವಾಣಿ ಮತ್ತು ಆಯುಧವಾಗಿ ಕೆಲಸಮಾಡುತ್ತಿದೆ. ಗೋರ್ಬಚೇವ್ ಆರಂಭಿಸಿದ 'ಮುಕ್ತತೆ'ಯು ಅಭಿವೃದ್ಧಿಶೀಲ ದೇಶಗಳ ಬೆಳವಣಿಗೆ, ಸ್ವಾವಲಂಬನೆ ಮತ್ತು ಸಾರ್ವಭೌಮತ್ವಗಳಿಗೆ ಮುಕ್ತಾಯ ಹಾಡಲಾರಂಭಿಸಿತೆಂಬುದನ್ನು ಇನ್ನಾದರೂ ತಿಳಿಯುವುದು ಹಿತಕರ. ಈ ದೇಶಗಳೆಲ್ಲಾ ಒಟ್ಟಾಗಿ ಆರ್ಥಿಕ ಸಾಮ್ರಾಜ್ಯಶಾಹಿಯನ್ನು ಎದುರಿಸುವಂತೆ ಸಜ್ಜಾಗಿಸುವುದು ಇಂದು ಅನಿವಾರ್ಯವಾಗಿದೆ. ಭಾರತದ ಮಹತ್ಪಾತ್ರ ಇರಬೇಕಾದ್ದು ಇಲ್ಲಿ, ಅಮೆರಿಕದ ಭಂಟನಾಗಿ ಬಾಲ ಅಲ್ಲಾಡಿಸುವುದರಲ್ಲಿ ಅಲ್ಲ. ಅಂತರರಾಷ್ಟ್ರೀಯ ಜಾಲವು ಹೇಗೆ ರೂಪುಗೊಂಡಿದೆಯೆಂದರೆ ಪ್ಯಾಲಿಸ್ಟೈನಿನ ರಸ್ತೆಗಳಲ್ಲಿ ಇಸ್ರೇಲಿನ ಮಿಲಿಟರಿ ಟ್ಯಾಂಕುಗಳು ಓಡಾಡುತ್ತಾ ಎಲ್ಲವನ್ನೂ ನುಚ್ಚುನೂರು ಮಾಡುತ್ತಿರುವಾಗ ಸೌಹಾರ್ದತೆಯೆಂಬ ಮೌಲ್ಯ ಮುದುರಿಹೋಗಿದೆ. ಅದು ಇಂದಿನ ಶಬ್ದಕೋಶದಲ್ಲಿ ಇಲ್ಲ. ಅರಬ್ ರಾಷ್ಟ್ರಗಳಿಗಾಗಲಿ ಇತರ ಹಿಂದುಳಿದ ರಾಷ್ಟ್ರಗಳಿಗಾಗಲಿ ಸ್ವಂತಿಕೆ ಎಂಬುದು ಉಳಿದಿಲ್ಲ; ಅಮೆರಿಕಾದ ಕೈಂಕರ್ಯ ಮಾಡುವುದೊಂದೇ ಅವರ ಮೌಲ್ಯವಾಗಿದೆ. ಪ್ರವಾದಿಯ ಛಾಯಾಚಿತ್ರ ಎಲ್ಲೋ ಅಚ್ಚಾಯಿತೆಂದು ಬೊಬ್ಬೆ ಹಾಕುವ ಜನರಿಗೆ ಜೀವನ ಬೆಂದು ಕರಕಲಾಗುತ್ತಿರುವಾಗ ನಾಲಿಗೆ ಮತ್ತು ಕೈಗಳು ಸೇದಿಹೋಗಿವೆ. ಚೀಣಾ ಒಂದು ಜನತಾ ಗಣರಾಜ್ಯವೆನ್ನುತ್ತಾರೆ. ಆದರೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಆ ದೇಶವು ಕಳೆದ ಹತ್ತು ವರ್ಷಗಳಲ್ಲಿ ಒಮ್ಮೆಯಾದರೂ ಅಂತರರಾಷ್ಟ್ರೀಯ ಜನತೆಯ ಪರವಾಗಿ ಉಸಿರೆತ್ತಿದ್ದಿಲ್ಲ. ನಾಳೆ ಅಮೆರಿಕಾ ಏನಾದರೂ ಕ್ಯೂಬಾಕ್ಕೆ ಲಗ್ಗೆಯಿಟ್ಟರೆ ಆಗಲೂ ಚೀಣಾ ತನ್ನ ಸ್ಮಶಾನಮೌನವನ್ನು ಮುರಿಯಲಾರದೋ ಏನೋ! ಆಫ್ಘಾನಿಸ್ತಾನದ ನಂತರ ಸೋಮಾಲಿಯಾ, ಇರಾಕ್, ಲಿಬ್ಯಾ ಮುಂತಾದ ದೇಶಗಳನ್ನು ವಿಚಾರಿಸಿಕೊಳ್ಳುವುದಾಗಿ ಬುಷ್ ಹೂಂಕಾರ ಮಾಡುತ್ತಿದ್ದರೂ ಚೀಣಾ ತುಟಿ ಬಿಚ್ಚುವುದಿಲ್ಲ. ನ್ಯಾಟೋ ಕೂಟವನ್ನು ಸೇರಬೇಕೆಂಬ ಹುರುಪಿನಲ್ಲಿದ್ದ ರಷ್ಯಾದ ಅಧ್ಯಕ್ಷ ಪುತಿನ್‌ಗೆ ಈಗ ಪೂತನಿಯ ಅವತಾರ ತಿಳಿದಿದೆ; ಏಕೆಂದರೆ, ಅಮೆರಿಕಾ ತನ್ನ ಹಿಂದಿನ ಒಪ್ಪಂದಗಳಿಂದ ದೂರ ಸರಿಯುವುದಾಗಿ ತಿಳುವಳಿಕೆ ನೀಡಿದೆ. ಹಿಂದಿನ ಒಪ್ಪಂದಗಳು ಅಮೆರಿಕಾದ ಅಹಂಕಾರದ ಬಿರುಗಾಳಿಯಿಂದಾಗಿ ರಭಸವಾಗಿ ತೂರಿಹೋಗಿ ಪ್ರಪಂಚವನ್ನು ಪ್ರಪಾತಕ್ಕೆ ದೂಡುತ್ತಿದೆ. ಇಂತಹ ಸಂದರ್ಭದಲ್ಲಿ ಅಭಿವೃದ್ಧಿಶೀಲ ದೇಶಗಳನ್ನು ಒಗ್ಗೂಡಿಸುವ ಕೆಲಸವನ್ನು ಭಾರತ ಕೈಗೊಳ್ಳದಿದ್ದರೆ ತಾನು ಸ್ಥಿರವಾಗಿ ನಿಲ್ಲಲಾರದು ಮತ್ತು ಭಯೋತ್ಪಾದನೆಯನ್ನು ಎದುರಿಸಲಾರದು. ನಮ್ಮ ಆತ್ಮಶೋಧನೆಗೆ ಇಂದು ಅತ್ಯಂತ ಅವಸರವಿದೆಯೆಂಬುದು ಇದರರ್ಥ.

ಹೀಗಿರುವಾಗ ನಮ್ಮ ನಾಯಕರ ಗಮನ ಎತ್ತ ಹರಿದಿದೆ ? ಇದಕ್ಕೆ ತಲೆ ತಗ್ಗಿಸಬೇಕೋ, ಧ್ವನಿ ಎತ್ತರಿಸಬೇಕೋ ಎಂಬುದನ್ನು ಜನ ತೀರ್ಮಾನಿಸಬೇಕು. ಕೊಡಗಿನಲ್ಲಿ ಇತ್ತೀಚೆಗಷ್ಟೇ ನಡೆದ ಕೋಮುಗಲಭೆಯು ದೇಶದ ವಿವಿಧೆಡೆಗಳಲ್ಲಿ ಆಗಾಗ್ಗೆ ಭುಗಿಲೇಳುವ ವಿದ್ಯಮಾನಗಳ ಮಾದರಿಯಲ್ಲೇ ಇದೆ. ಒಂದು ದೇವಸ್ಥಾನವನ್ನು ಹಾಳುಗೆಡವಿದರೆನ್ನಲಾದ ಹಿನ್ನೆಲೆಯಲ್ಲಿ ಒಂದು ವಾರ ಎಲ್ಲೆಯಿಲ್ಲದ ಹಿಂಸಾಚಾರ, ಆಸ್ತಿ-ಪಾಸ್ತಿಗೆ ಬೆಂಕಿ, ಇತ್ಯಾದಿಗಳು ಕಾಣಿಸಿಕೊಂಡವು. ದೇವಸ್ಥಾನಕ್ಕಲ್ಲದಿದ್ದರೆ ಮಸೀದಿಗೆ; ಆಗಲೂ ಪರಿಣಾಮ ಇದೇ. ಒಟ್ಟಿನಲ್ಲಿ ಅನಾಗರಿಕ ಸಂಸ್ಕೃತಿ ನಮ್ಮನ್ನು ಮುತ್ತಿಕೊಂಡಿದೆ. ಕೊಡಗಿಗೆ ಮುಂಚೆ, ನೀರಾ ಚಳುವಳಿಯನ್ನು ಬಗ್ಗುಬಡಿಯಲೆಂದು ಸರ್ಕಾರವು ತನ್ನೆಲ್ಲ ಪ್ರತಾಪವನ್ನೂ ಮೆರೆಯಿತು. ದೇವೇಗೌಡ - ಜೆ. ಎಚ್. ಪಟೇಲ್ ಕಾಲದ ಬಾಗೂರು - ನವಿಲೆ ದೌರ್ಜನ್ಯಗಳನ್ನು ಸ್ಮರಣೆಗೆ ತರುವ ವಿಠಲೇನಹಳ್ಳಿ - ಚನ್ನಪಟ್ಟಣ - ಗುಲ್ಬರ್ಗಾ ದೌರ್ಜನ್ಯಗಳು ನಮ್ಮನ್ನು ಕಾಡುತ್ತಿವೆ. ಬೆಂಗಳೂರು-ಮೈಸೂರು ಹೆದ್ದಾರಿಯ ಹೆಸರಿನಲ್ಲಿ ನಾಳೆ ಹತ್ತಾರು ಹಳ್ಳಿಗಳಲ್ಲಿ ಇಂಥದೇ ದೌರ್ಜನ್ಯ ನಡೆಯುವುದಿದೆ, ಈ ಹೆದ್ದಾರಿಯುದ್ದಕ್ಕೂ ಕೃಷಿರಹಿತ ಪ್ರದೇಶವು ನಮ್ಮ ಕಣ್ಣುಗಳನ್ನು ಸುಡುವುದಿದೆ. ಇಂತಹ ಇನ್ನೂ ಹತ್ತಾರು ಪ್ರಸಂಗಗಳು ನಮ್ಮೆದುರಿಗಿವೆ. ಉದ್ಯಮಗಳನ್ನು ಮುಚ್ಚುತ್ತಿದ್ದೇವೆ; ಹೊಸವು ಯಾವುವನ್ನೂ ಆರಂಭಿಸುವ ಗೊಡವೆಗೇ ಹೋಗಿಲ್ಲ. ಇನ್ನು ಆಹಾರವನ್ನೂ ಆಮದು ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗುತ್ತಿದೆ. ಏನನ್ನು ಮಾರಿ ಇದನ್ನು ಆಮದು ಮಾಡಿಕೊಳ್ಳೋಣ ? ಗೌರವಾಭಿಮಾನಗಳನ್ನು ಮಾರಿಕೊಂಡಾಯಿತು, ಇನ್ನು ದೇಶವನ್ನು ಮಾರಿಕೊಳ್ಳೋಣವೆ ? ನಮ್ಮ ಅಭಿವೃದ್ಧಿ ಮೀಮಾಂಸೆ ಚಲಿಸುತ್ತಿರುವುದು ಈ ದಿಕ್ಕಿನಲ್ಲಿ, ಅಂದರೆ, ಭಯೋತ್ಪಾದನೆಗೆ ಭೂಮಿಕೆಯನ್ನು ರಚಿಸಿಕೊಡುವುದು ''ಅಭಿವೃದ್ಧಿ'' ಎನ್ನುವುದರ ಆಶಯವಾಗುತ್ತಿದೆ; ಅಂತೆಯೇ, ಅಂತರರಾಷ್ಟ್ರೀಯ ಆರ್ಥಿಕ ಭಯೋತ್ಪಾದಕರ ಆಜ್ಞೆಗಳನ್ನು ಪಾಲಿಸುವುದು ನಮ್ಮ ಸಾರ್ವಭೌಮ ರಾಷ್ಟ್ರದ ಹೆಮ್ಮೆಯಾಗುತ್ತಿದೆ. ಆಳುವ ವರ್ಗದ ಹಿಡಿಂಬ ಶಕ್ತಿಯನ್ನು ನಷ್ಟಗೊಳಿಸಲು ಸಾಮುದಾಯಿಕ ಮಧ್ಯಪ್ರವೇಶಕ್ಕೆ ಆಸ್ಪದವಿಲ್ಲವಾಗುವ ದುರಂತ ನಮ್ಮನ್ನು ಬಾಧಿಸುತ್ತಿದೆ. ಭಯೋತ್ಪಾದನಾ ಭಾವನೆಗಳು ಚಿಗುರಲು ಅನುವು ಮಾಡಿಕೊಡುವ ಅಸಮತೋಲನ, ಅನ್ಯಾಯ ಮತ್ತು ದಮನಕ್ರಿಯೆಗಳನ್ನು ಬೆಳೆಯಗೊಟ್ಟು ಪ್ರಜಾಪ್ರಭುತ್ವವನ್ನು ರಕ್ಷಿಸಲಾಗುವುದಿಲ್ಲ. ಜನರ ಆಕಾಂಕ್ಷೆಗಳನ್ನು ತುಳಿದು ಮಣ್ಣು ಮಾಡುವುದು ಸಾರ್ವಭೌಮ ರಾಷ್ಟ್ರವೊಂದರ ಕಾರ್ಯಸೂಚಿಯಾಗಬಾರದು. ಹಾಗಾಗಲು ಅವಕಾಶ ನೀಡದಿದ್ದಾಗ ಸಂಸದ್ಭವನಕ್ಕೆ ನುಗ್ಗಿ ದೇಶದಲ್ಲಿ ವಿಪತ್ತಿನ ಸುರುಳಿಗಳನ್ನು ಬಿಚ್ಚಿಕೊಳ್ಳುವಂತೆ ಮಾಡುವ ಹುನ್ನಾರವನ್ನಿರಿಸಿಕೊಂಡಿರುವ ಭಯೋತ್ಪಾದಕರನ್ನು ನಿರ್ವೀರ್ಯಗೊಳಿಸುವುದು ಸುಲಭವಾಗುತ್ತದೆ.

ಆದರೆ ಬಿ.ಜೆ.ಪಿ. ಸೈದ್ಧಾಂತಿಕ ನೆಲೆಯು ಇಷ್ಟು ವಿಸ್ತಾರವಾದ ತಳಹದಿಯನ್ನು ಹೊಂದಿಲ್ಲ. ದೊಡ್ಡ ದೊಡ್ಡ ಗೂಂಡಾಗಳಿಗೆ ತನ್ನ ಅಧಿಕೃತ ನಿವಾಸದಲ್ಲಿ ವಸತಿ ಸೌಕರ್ಯ ಮಾಡಿಕೊಟ್ಟು ಅತಿಥಿ ಸತ್ಕಾರ ನೀಡುತ್ತಿದ್ದ ಬಿ.ಜೆ.ಪಿ. ಸಚಿವನೊಬ್ಬನನ್ನು ಉತ್ತರ ಪ್ರದೇಶದಲ್ಲಿ ಈಗ ತಾನೆ ಸಂಪುಟದಿಂದ ಒದ್ದೋಡಿಸಲಾಯಿತು ಮತ್ತು ನಂತರ ದಸ್ತಗಿರಿ ಮಾಡಲಾಯಿತು. ಇದು ಆ ಪಕ್ಷದ ಸಂಸ್ಕೃತಿಗೆ ಹಿಡಿದ ಕನ್ನಡಿ. ಜೊತೆಗೆ, ಮುರಳಿ ಮನೋಹರ ಜೋಶಿ ಸ್ವತಃ ಭಯೋತ್ಪಾದಕತೆಯನ್ನು ಅನುಸರಿಸುವಂತೆ ತನ್ನ ಪಕ್ಷದ ಯುವ ಕಾರ್ಯಕರ್ತರಿಗೆ ಪ್ರೇರಣೆ ನೀಡುತ್ತಿದ್ದಾರೆ. ಸಂಸತ್ತಿನ ಮೇಲೆ ಹಲ್ಲೆ ಮಾಡಿದವರಿಗಿಂತಲೂ ಇತಿಹಾಸ ಪಠ್ಯಪುಸ್ತಕಗಳನ್ನು ಬರೆದಿದ್ದ ಕೆಲವರು (ಆರ್. ಎಸ್. ಶರ್ಮಾ, ರೋಮಿಲಾ ಥಾಪರ್, ಬಿಪನ್ ಚಂದ್ರ ಮುಂತಾದವರು) ''ಬೌದ್ಧಿಕ ಭಯೋತ್ಪಾದಕ''ರಾಗಿ ಹೆಚ್ಚು ಅಪಾಯಕಾರಿ ಎಂಬ ಆತನ ಮಾತಿನ ಇಂಗಿತ ಅದೇ ಆಗಿದೆ. ಇಂತಹ ಭಯೋತ್ಪಾದಕ ಸಚಿವರನ್ನು ಸೈದ್ಧಾಂತಿಕ ನಿರೂಪಕರನ್ನಾಗಿ ಹೊಂದಿರುವ ಸರ್ಕಾರಕ್ಕೆ ವೈಯ್ಯಕ್ತಿಕ ಹಾಗೂ ಸಾಮೂಹಿಕ ಭಯೋತ್ಪಾದಕ ಚಟುವಟಿಕೆಗಳಲ್ಲಿ ನಂಬಿಕೆ ಇದೆಯೆಂಬ ಭಾವನೆ ಬಂದರೆ ತಪ್ಪಲ್ಲ. ಹೊರಗಿನಿಂದ ಬರುವ ಆತಂಕವನ್ನು ಎದುರಿಸುವುದರ ಜೊತೆಗೆ ಸರ್ಕಾರದ ಸಚಿವರಿಂದ ಹೊಮ್ಮುವ ಭಯೋತ್ಪಾದಕತೆಯನ್ನೂ ಮೆಟ್ಟಿನಿಲ್ಲಬೇಕಾದ ಜವಾಬ್ದಾರಿ ಜನತೆಗಿದೆ. ಇಂತಹ ಬಿಕ್ಕಟ್ಟಿನಲ್ಲಿ ಆಂತರಿಕ ಮತ್ತು ಅಂತರ್ದೇಶೀಯ ಸಾರ್ವಭೌಮತ್ವಕ್ಕೆ ಯಾವ ಆತಂಕವೂ ಬಾರದಂತೆ ಕ್ರಿಯಾಶೀಲರಾಗುತ್ತೇವೆಂಬ ಪಣ ತೊಡುವುದೇ ಈ ವರ್ಷದ ಗಣರಾಜ್ಯೋತ್ಸವದಂದು ನಾವು ಮಾಡಬೇಕಾದ ಆದ್ಯ ಕರ್ತವ್ಯ.

# ಹೊಸತು

## ಪರಿವಿಡಿ





ಮುಖಚಿತ್ರ : ಕೆ. ಕೆ. ಮಕಾಳಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಒಳಚಿತ್ರಗಳು : ಗುಜ್ಜಾರ್, ಪಿ. ಮಹಮ್ಮದ್, ಹರಿಣಿ, ಸತೀಶ್ ಯಲ್ಲಾಪುರ, ವಸಂತ ಹೊಸಬೆಟ್ಟು , ಮೋನಪ್ಪ , ಶ್ರೀಹರಿ, ಪ್ರದೀಪ್ ಕುಮಾರ್, ರವಿಕುಮಾರ್ ಅಜ್ಜೀಪುರ, ವಿಶ್ವ, ಜಿ. ಎಂ. ಬೊಮ್ನಳ್ಳಿ, ದಿಲೀಪ್, ವಾಗೀಶ್
ಕಚೇರಿ ಸಹಕಾರ : ಜಿ. ವಿ. ತೇಜೋವತಿ



'ಹೊಸತು' ಪತ್ರಿಕೆಯ ಡಿಸೆಂಬರ್ ಸಂಚಿಕೆಯ ಕಡೆಯ ಪುಟದ ಕಡೆಯ ಪಂಕ್ತಿ: ಕುವೆಂಪು ಹೇಳುವಂತೆ 'ಋತು ಮೊಂದೆ ಗೆಲ್ವುದು ಅನೃತ ಮಲ್ತು'.

ಬಿ.ಎಂ.ಶ್ರೀ. ಅವರ 'ಶುಕ್ರಗೀತೆ' ಯಲ್ಲಿ ಈ ಸಾಲುಗಳು ಬರುತ್ತವೆ.

ಋತಮೊಂದೆ ಗೆಲ್ಲುವುದು ಅನೃತಮಲ್ತು
ಅಮೃತಮೆನೆ ವಿದ್ಯೆಯೇ, ಅವಿದ್ಯೆಯಲ್ತು
ವಿಶ್ವಭಾರತಿ ಶರಣು ಕಿರುತೀರ್ಥಮಲ್ತು.

*ಬೆಂಗಳೂರು* ***ಎಲ್. ಎಸ್. ಶೇಷಗಿರಿರಾವ್***

ಡಿಸೆಂಬರ್ ತಿಂಗಳ 'ಹೊಸತು'ವಿನಲ್ಲಿ ಪ್ರಕಟವಾದ ಶ್ರೀನಿವಾಸ ಕಾರ್ಕಳ ಅವರ ''ಮೂಢನಂಬಿಕೆಯ ಜಾಡಿನಲ್ಲಿ'' ಉತ್ತಮವಾಗಿತ್ತು. ದಿನನಿತ್ಯ ಜೀವನದಲ್ಲಿ ಮೂಢನಂಬಿಕೆಗಳಿಂದಾದ ಹಾನಿಯನ್ನು ಅವರು ಚೆನ್ನಾಗಿ ಚಿತ್ರಿಸಿದ್ದಾರೆ. ''ವೈಜ್ಞಾನಿಕ ಮನೋಭಾವ ವ್ಯಾಪಕವಾಗಿ ಮೂಡುವತನಕ ಸದ್ಯ ಕಾಡುತ್ತಿರುವ ಅನೇಕ ಪಿಡುಗುಗಳಿಂದ ನಮಗೆ ಬಿಡುಗಡೆಯೇ ಇಲ್ಲ'' ಎಂಬ ಅವರ ಮಾತು ನೂರಕ್ಕೆ ನೂರರಷ್ಟು ಸತ್ಯ. ಸೋಮಶೇಖರ ವಿ. ಸೊಗಲದ ಅವರ ''ಮಕ್ಕಳಲ್ಲಿ ಮೂಢನಂಬಿಕೆಯನ್ನು ತೊಲಗಿಸಿ: ವೈಜ್ಞಾನಿಕ ಮನೋಭಾವನೆ ಬೆಳೆಸುವಲ್ಲಿ ಶಿಕ್ಷಕರ ಪಾತ್ರ'' ಲೇಖನ ಕೂಡ ಚೆನ್ನಾಗಿತ್ತು. ಆದರೆ ಶಿಕ್ಷಕರೇ ಅಂಧಶ್ರದ್ಧೆಗೆ ಬಲಿಯಾಗುತ್ತಿರಬೇಕಾದರೆ ಅವರು ಮಕ್ಕಳಲ್ಲಿ ವೈಜ್ಞಾನಿಕ ಮನೋಭಾವ ಮೂಡಿಸಲು ಹೇಗೆ ಸಾಧ್ಯ ? ಮಕ್ಕಳಲ್ಲಿ ವೈಜ್ಞಾನಿಕ, ವೈಚಾರಿಕ ಪ್ರಜ್ಞೆ ಮೂಡಿಸುವುದು ಇಂದಿನ ಅಗತ್ಯಗಳಲ್ಲೊಂದಾಗಿದೆ. ಗೊಂದಲಪುರ ಬೀರಣ್ಣ ನವರ ಲೇಖನ ಜನರ ಮೂಢನಂಬಿಕೆಯನ್ನು ನವಿರಾದ ಹಾಸ್ಯದೊಂದಿಗೆ ಬಯಲಿಗೆಳೆಯುವಲ್ಲಿ ಸಫಲವಾಗಿದೆ.

*ಹೆಬ್ರಿ* ***ಗುಂಡೂರಾವ್***

ಡಾ. ಎಂ. ಎನ್. ಕೇಶವ ರಾವ್ ಬರೆದ ಲೇಖನವನ್ನು




ಓದಿದೆ. 'ವಸುಧೈವ ಕುಟುಂಬಕಂ' ನಂಥ ಆಕರ್ಷಕ ನುಡಿಗಟ್ಟಿನ ಮೂಲವನ್ನು ಶೋಧಿಸುವುದರೊಂದಿಗೆ ಮತಾಂಧತೆ ತುಳಿದ ರಕ್ತಸಿಕ್ತ ಮಾರ್ಗಗಳ ನಕಾಶೆಯೂ ಈ ಲೇಖನದಲ್ಲಿದೆ.

ಚೋಮ್‌ಸ್ಕಿ ಸಂವಾದದ ಕನ್ನಡೀಕರಣ ಚೆನ್ನಾಗಿದೆ. ಮುಖಪುಟ ಆಕರ್ಷಕ.

*ಸುಳ್ಯ* ***ಕಿರಣ***

ಡಿಸೆಂಬರ್ ೨೦೦೧ರ 'ಹೊಸತು' ಸಂಚಿಕೆಯ ಸಂಭ್ರಮದ ಸುಖ, ಪಿ.ಟಿ. ಪ್ರಸನ್ನರವರ ಅನಾರೋಗ್ಯವೇ ಭಾಗ್ಯ, ಮೂಢನಂಬಿಕೆಯ ಜಾಡಿನಲ್ಲಿ, ಇವೇ ಮೊದಲಾದವು ಒಂದಕ್ಕಿಂತ ಇಂದು ಭಿನ್ನವಾಗಿ ಮೂಡಿ ಬಂದಿದ್ದು ಓದುಗರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿವೆ. ಡಾ|| ಉದಯ ರವಿಯವರ ಕೇಳೆನೋ ಹರಿ, ತಾಳೆನೋ... ಓದಿದ ನಂತರ ಶಬ್ದ ಮಾಲಿನ್ಯದಿಂದ ಆರೋಗ್ಯದ ಮೇಲಾಗುವ ದುಷ್ಪರಿಣಾಮಗಳು ಮತ್ತು ಪರಿಹಾರಗಳು ತಿಳಿದು ಬಂದವು. ಇಂತಹ ಸದಭಿರುಚಿಯ ಅಂಕಣಗಳನ್ನು ಪ್ರಕಟಿಸಿದ 'ಹೊಸತು'ವಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

*ಬಿ.ಹೆಚ್.ಇ.ಎಲ್.(ಇ.ಡಿ.ಎನ್.)* ***ಮಹಾದೇವಪ್ಪ ಎಂ.ಸಿ.***

ವಿ. ಸೋಮಶೇಖರ ಸೊಗಲದ ಅವರ 'ಮಕ್ಕಳಲ್ಲಿ ಮೂಢನಂಬಿಕೆ ತೊಲಗಿಸಿ' ಮತ್ತು ಶ್ರೀನಿವಾಸ ಕಾರ್ಕಳ ಅವರ ಮೂಢನಂಬಿಕೆಯ ಜಾಡಿನಲ್ಲಿ ಲೇಖನಗಳನ್ನು ಓದಿ ಮನಸ್ಸಿಗೆ ತುಂಬಾ ಸಂತೋಷವಾಯಿತು. ಮೂಢನಂಬಿಕೆಗಳಿಂದ ಆಗುವ ಅನಾಹುತಗಳನ್ನು ಶ್ರೀನಿವಾಸ್ ಅವರು ತುಂಬಾ ಚೆನ್ನಾಗಿ ವರ್ಣಿಸಿದ್ದಾರೆ. ಮಕ್ಕಳಲ್ಲಿ ಮೂಢನಂಬಿಕೆ ತೊಲಗಿದರೆ ಅವರು ಮುಂದೆ ಎಂತಹ ಪ್ರಜೆಗಳಾಗುತ್ತಾರೆ, ಎಂದು ಲೇಖಕರು ಬರೆದಿದ್ದಾರೆ. ಮಕ್ಕಳು ಮೂಢನಂಬಿಕೆಯ ಬದಲು ಆತ್ಮವಿಶ್ವಾಸ, ಧೈರ್ಯ, ಛಲವನ್ನು ಮೈಗೂಡಿಸಿಕೊಂಡು ಬೆಳೆಯಬೇಕೆಂದು ಈ ಲೇಖನಗಳನ್ನು ಓದಿದಾಗ ಅರಿವಾಯಿತು. 'ಹೊಸತು' ಪತ್ರಿಕೆಗೆ ನನ್ನ ಅನಂತ ವಂದನೆಗಳು.

*ಹರಪನಹಳ್ಳಿ* ***ಜೆ. ವಹಿದಾ ಬಾನು***

ಶ್ರೀ ಚಂದ್ರಶೇಖರ ನಂಗಲಿಯವರ, ''ಸ್ವಧರ್ಮೇ ನಿಧನಂ ಶ್ರೇಯಃ'' ಕುರಿತು : ಗೀತೆಯಲ್ಲಿ ಶ್ರೀಕೃಷ್ಣನ ಪ್ರಕಾರ ಸ್ವಧರ್ಮ ವರ್ಣಕ್ಕೆ ಸಂಬಂಧಪಟ್ಟುದೇ. ನಾಲ್ಕು ವರ್ಣದ ವರಿಗೂ ಅವರವರ ವರ್ಣ ಕರ್ತವ್ಯವು, ಸ್ವಧರ್ಮ **ವಿಶೇಷವಾಗಿ**, ಇತರ ವರ್ಣಗಳ ಕರ್ತವ್ಯಗಳೂ ಪ್ರತಿ ವರ್ಣಕ್ಕೂ ಕರ್ತವ್ಯವೇ – **ಸಾಮಾನ್ಯ ಧರ್ಮ**. ಎಲ್ಲ ವರ್ಣಗಳವರಿಗೂ ಎಲ್ಲ ವರ್ಣಗಳ ಕರ್ತವ್ಯಧರ್ಮಗಳು ಪರಿಚಯವಿರಬೇಕು. ತಂತಮ್ಮ ಸ್ವಧರ್ಮವನ್ನು ಅಸಡ್ಡೆ ಮಾಡಬಾರದು...

''ಋತಮೊಂದೆ ಗೆಲ್ವುದು ಅನೃತಮಲ್ತು'' ಎಂಬ ಹೇಳಿಕೆ ಕುವೆಂಪುರವರದಲ್ಲ, ಬಿ. ಎಂ. ಶ್ರೀ.ರವರದು. ''ಕನ್ನಡ ಬಾವುಟ'' ನೋಡಬಹುದು.

*ಸಾಗರ* ***ಬ. ನಾ. ರಘುರಾಮ***

---

# ಕಾಮ್ರೆಡ್ ಎನ್. ಕೆ. ಉಪಾಧ್ಯಾಯ

**ಐ**ವತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಕರ್ನಾಟಕ ರಾಜ್ಯದಲ್ಲಿ ಕಮ್ಯುನಿಸ್ಟ್ ಚಳವಳಿ ಬೆಳೆಸಲು ಅವಿಶ್ರಾಂತವಾಗಿ ದುಡಿದ ಹಿರಿಯ ಕಮ್ಯುನಿಸ್ಟ್ ನಾಯಕ, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿಯ ಸೆಕ್ರೆಟರಿಯಟ್ ಸದಸ್ಯ ಕಾಮ್ರೇಡ್ ಎನ್. ಕೆ. ಉಪಾಧ್ಯಾಯ ಇನ್ನಿಲ್ಲ. ಕೆಲ ದಿನಗಳಿಂದ ಅಸ್ವಸ್ಥರಾಗಿದ್ದ 'ಎನ್ಕೇ' ಎಂದೇ ಎಲ್ಲರಿಗೂ ಪರಿಚಿತರಾಗಿದ್ದ ೮೬ ವಯಸ್ಸಿನ ಉಪಾಧ್ಯಾಯರು ಡಿಸೆಂಬರ್ ೧೨ರಂದು ನಿಧನರಾದರು. ಅವರಿಗೆ 'ಹೊಸತು' ಬಳಗ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.



ಶ್ರದ್ಧಾಂಜಲಿ

ಮಂಗಳೂರಿನಲ್ಲಿ ೧೯೧೬ರ ಫೆಬ್ರವರಿಯಲ್ಲಿ ಜನಿಸಿದ ಎನ್ಕೇ ಕಿರಿಯ ವಯಸ್ಸಿನಲ್ಲೇ ಮಹಾನಗರ ಮುಂಬಯಿ ಸೇರಿದರು. ವಿದ್ಯಾರ್ಥಿಯಾಗಿದ್ದಾಗಲೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದ ಅವರು ನೇತಾಜಿ ಸುಭಾಸ್ ಚಂದ್ರ ಬೋಸರ ಐಎನ್‌ಎಯಲ್ಲಿದ್ದರು. ಆನಂತರ ಅವರು ಮುಂಬಯಿಯಲ್ಲಿ ಕಾರ್ಮಿಕ ಚಳವಳಿಯಲ್ಲಿ ತೊಡಗಿಕೊಂಡು ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾದರು. ಫಾಸಿಸ್ಟ್ ವಿರೋಧಿ ಚಳವಳಿಯಲ್ಲಿ ಭಾಗಿಯಾಗಿದ್ದ ಎನ್ಕೇ ೧೯೪೦ರಲ್ಲಿ ಬಂಧಿತರಾಗಿ ಕಾರಾಗೃಹದಲ್ಲಿದ್ದರು. ಎರಡು ವರ್ಷಗಳ ನಂತರ ಬಿಡುಗಡೆಯಾದ ಅವರು ಕೆಲಕಾಲ ಮುಂಬಯಿಯಲ್ಲೇ ಕಾರ್ಮಿಕರ ಸಂಘಟನೆಯಲ್ಲಿ ದುಡಿಯುತ್ತಿದ್ದರು. ಪಾರ್ಟಿ ಕೇಂದ್ರಸಮಿತಿಯ ಆದೇಶದ ಮೇರೆಗೆ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಚಳವಳಿ ಕಟ್ಟಲು ಹುಬ್ಬಳ್ಳಿಗೆ ಬಂದರು.

ಆಗಿನ ದಿನಗಳಲ್ಲಿ ಹುಬ್ಬಳ್ಳಿ ಕರ್ನಾಟಕ ಕಮ್ಯುನಿಸ್ಟ್ ಪಾರ್ಟಿಯ ಕೇಂದ್ರವಾಗಿತ್ತು. ಕಮ್ಯುನಿಸ್ಟ್ ಮುಖಂಡ ದಿವಂಗತ ಕಾಮ್ರೇಡ್ ಎನ್. ಎಲ್. ಉಪಾಧ್ಯಾಯರ ಸೋದರರಾದ ಎನ್ಕೇ ಕೆಲಕಾಲ ಹುಬ್ಬಳ್ಳಿಯ ರೈಲ್ವೆ ನೌಕರರ ಸಂಘಟನೆಗಾಗಿ ಶ್ರಮಿಸಿದರು. ಪಾರ್ಟಿ ಸಂಘಟನೆಗಾಗಿ ಅವರು ಆಯ್ಕೆ ಮಾಡಿಕೊಂಡಿದ್ದು ಹಿಂದುಳಿದ ಜಿಲ್ಲೆಯಾಗಿದ್ದ ಬಿಜಾಪುರ. ೧೯೪೪ರಲ್ಲಿ ಬಿಜಾಪುರದಲ್ಲಿ ನೆಲೆಸಿದ ಎನ್ಕೇ ಕೊನೆಯವರೆಗೂ ಅಲ್ಲೇ ಪಾರ್ಟಿ ಸಂಘಟನೆ ಮತ್ತು ಕಾರ್ಮಿಕ ಚಳವಳಿಯಲ್ಲಿ ತೊಡಗಿಕೊಂಡಿದ್ದರು. ಎನ್ಕೇ ಮುನಿಸಿಪಲ್ ಕಾರ್ಮಿಕರು, ಬೀಡಿ ಕೆಲಸಗಾರರು, ಹೋಟೆಲ್ ಕೆಲಸಗಾರರು ಮೊದಲಾದ ಅಸಂಘಟಿತ ಕಾರ್ಮಿಕರನ್ನು ಸಂಘಟಿಸಿದರು. ಬಿಜಾಪುರ ಅವರ ಮುಖ್ಯ ಕಾರ್ಯಕ್ಷೇತ್ರವಾಗಿದ್ದರೂ ಅವರ ಚಟುವಟಿಕೆಗಳು ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳಿಗೂ ವ್ಯಾಪಿಸಿತ್ತು.

ಗೋವಾ ವಿಮೋಚನಾ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಸತ್ಯಾಗ್ರಹ ಜಾಥಾದ ನೇತೃತ್ವ ವಹಿಸಿದ್ದ ಎನ್ಕೇ ಕರ್ನಾಟಕ ಏಕೀಕರಣ ಹೋರಾಟದಲ್ಲಿ ಅಗ್ರಗಣ್ಯರಾಗಿದ್ದರು. ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ನಾಯಕರಲ್ಲೊಬ್ಬರಾಗಿದ್ದ ಎನ್ಕೇ ಕರ್ನಾಟಕ ರಾಜ್ಯ ನಿರ್ಮಾಣಕ್ಕಾಗಿ ಹುಬ್ಬಳ್ಳಿಯಲ್ಲಿ ನಡೆದ ಆಂದೋಲನದ ನೇತೃತ್ವ ವಹಿಸಿದ್ದರು. ಕರ್ನಾಟಕ ಕಾಂಗ್ರೆಸ್ ಸಮಿತಿ ಸಭೆ ನಡೆಯುತ್ತಿದ್ದ ಸಂದರ್ಭದಲ್ಲಿ ನಡೆದ ಪ್ರದರ್ಶನದಲ್ಲಿ ಪೊಲೀಸರ ದಬ್ಬಾಳಿಕೆ ಗೋಲೀಬಾರ್ ಪ್ರಕರಣದಲ್ಲಿ ಎನ್ಕೇ ಆಪಾದಿತರಲ್ಲೊಬ್ಬರಾಗಿದ್ದರು.

ಉತ್ತಮ ಭಾಷಣಕಾರ ಎನ್ಕೇ ಒಳ್ಳೆಯ ಬರಹಗಾರರೂ ಆಗಿದ್ದರು. ಪಾರ್ಟಿಯ ಪತ್ರಿಕೆ 'ಜನಶಕ್ತಿ', 'ಐಕ್ಯರಂಗ'ಗಳಿಗೆ ತಪ್ಪದೇ ಲೇಖನಗಳನ್ನು ಬರೆಯುತ್ತಿದ್ದರು. ಅವರ ಪ್ರಕಟಿತ ಕೃತಿಗಳು : ಅಳು-ನಗು (ಕಿರುಗತೆಗಳು), *ಕೃಷ್ಣ ನೀರಿನ ಸಮಪಾಲು, ದೇವರಗುಡಿ, ಪಂಜಾಬಿನ ದಳ್ಳುರಿ ಹಾಗೂ ಆತ್ಮಕಥನ, 'ನಾನು ನಡೆದು ಬಂದ ದಾರಿ.' ಎನ್ಕೇ ಸನ್ಮಿತ್ರರೂ, ಸಹೃದಯರೂ, ಪಾರ್ಟಿಯ ನಿಷ್ಠಾವಂತ ಕಾರ್ಯಕರ್ತರೂ ಆಗಿದ್ದರು.*

■■

# ನಮ್ಮ ಆರ್ಥಿಕ-ಔದ್ಯೋಗಿಕ ಸನ್ನಿವೇಶ : ಸಮಸ್ಯೆಗಳು ಮತ್ತು ಪರಿಹಾರದ ಹಾದಿ

**ಎಚ್ಚೆಸ್ಕೆ**

**ಭಾ**ರತದ ಆರ್ಥಿಕ ಸ್ಥಿತಿಯ ವಿಚಾರ ಬಂದಾಗಲೆಲ್ಲ ಹಳೆಯ ಮಾತೊಂದು ಕೇಳಿಬರುವುದುಂಟು. ನಮ್ಮದು ಬಡವರಿಂದ ಕೂಡಿದ ಶ್ರೀಮಂತ ದೇಶ ಎಂಬುದು ಆ ಮಾತು. ನಮ್ಮದು ದೊಡ್ಡ ದೇಶ. ವಿಸ್ತೀರ್ಣದಲ್ಲಿ ಅಮೆರಿಕದ ಮೂರನೆಯ ಒಂದರಷ್ಟು. ಆದರೆ ಜನಸಂಖ್ಯೆಯಲ್ಲಿ ನಾವು ಅಮೆರಿಕದ ನಾಲ್ಕರಷ್ಟು ಇದ್ದೇವೆ. ಜನ ಸಂಪತ್ತನ್ನು ಪ್ರಧಾನವಾಗಿ ಪರಿಗಣಿಸುವುದಾದರೆ ನಮ್ಮದೇ ಸಂಪದ್ಯುಕ್ತ ದೇಶ ಎನ್ನಬೇಕು. ಆದರೆ ಯಾವುದೇ ಸಂಪತ್ತು ಇದ್ದಲ್ಲೇ ಇದ್ದರೆ, ಜಡವಾಗಿದ್ದರೆ, ಅದು ವ್ಯರ್ಥ. ಅದನ್ನು ಸಂಪತ್ತೆಂದು ಪರಿಗಣಿಸಲಾಗದು. ಸಂಪತ್ತಿನ ಉತ್ಪಾದನೆಯಲ್ಲಿ ಶ್ರಮಿಕ ಬಲವೂ ಒಂದು ಮುಖ್ಯ ಅಂಶ - ಕಾರಕಾಂಶ. ಆ ಬಲವನ್ನು ನಾವು ಉಪಯೋಗಿಸಿಕೊಳ್ಳುತ್ತಿಲ್ಲವಾದ್ದರಿಂದ, ಬಹಳಷ್ಟು ಕೈಗಳು ದುಡಿಮೆಯಲ್ಲಿ ತೊಡಗುವುದು ಸಾಧ್ಯವಿಲ್ಲವಾದ್ದರಿಂದ ದೇಶದ ಒಟ್ಟು ಉತ್ಪಾದನೆ – ಸ್ಥೂಲ ದೇಶೀಯ ಉತ್ಪನ್ನ – ಬಹಳ ಕಡಿಮೆ. ಉತ್ಪಾದನೆಯಾದ್ದನ್ನು ಎಲ್ಲರಲ್ಲೂ ಹಂಚಿದರೆ ನಮ್ಮ ಸರಾಸರಿ ವರಮಾನ - ತಲಾ ವರಮಾನ - ಬಹಳ ಕಡಿಮೆ. ಆದ್ದರಿಂದ ನಾವು ಬಡವರು. ನಮ್ಮ ಜನಸಂಪತ್ತಿನ ಜೊತೆಗೆ ನಿಸರ್ಗ ಸಂಪತ್ತನ್ನೂ ನಾವು ಅನುಕೂಲತಮ ಮಟ್ಟದಲ್ಲಿ ಬಳಸಿಕೊಳ್ಳುತ್ತಿಲ್ಲವಾದ್ದರಿಂದ, ಉತ್ಪಾದನೆಯಾದದ್ದು ನ್ಯಾಯವಾದ ರೀತಿಯಲ್ಲಿ ಎಲ್ಲರಲ್ಲೂ ವಿತರಣೆಯಾಗುತ್ತಿಲ್ಲವಾದ್ದರಿಂದ ನಮ್ಮ ಸಂಕಟ ಸಾರ್ವತ್ರಿಕ. ಅಸಮರ್ಪಕ ವಿತರಣೆಯಿಂದಾಗಿ ತರ-ತಮ ಪರಿಸ್ಥಿತಿ; ಉಳ್ಳವರು ಇಲ್ಲದವರು ಎಂಬ ಎರಡು ಸ್ಥೂಲ ವರ್ಗಗಳ - ಜಗತ್ತುಗಳ - ನಿರ್ಮಾಣ. ಒಟ್ಟಾರೆ ಕಡಮೆ ಉತ್ಪಾದನೆ, ಉತ್ಪಾದಿಸಿದ್ದು ಹಾಳಕವಾಗಿ ಹಂಚಿಕೆಯಾಗದಿರುವ ಪರಿಸ್ಥಿತಿ, ದುಡಿಯಬಲ್ಲ ಹಾಗೂ ದುಡಿಯಬಯಸುವ ಕೈಗಳಿಗೆ ಕೌಶಲವನ್ನಾಗಲಿ ಕೆಲಸವನ್ನಾಗಲಿ ಒದಗಿಸಲಾಗದಿರುವಂಥ ಸನ್ನಿವೇಶ – ಇದು ಭಾರತದ ಆರ್ಥಿಕ ಸ್ಥಿತಿಯ ನಿಜ ಚಿತ್ರ; ದಾರುಣ ಚಿತ್ರ.

ನಾವು ಬಡವರಾದರೂ ನಮ್ಮಲ್ಲಿರುವ ನಿಸರ್ಗ ಸಂಪತ್ತು ಇಂದಿಗೂ ಬಡವಲ್ಲ, ಹಿಂದೆಯೂ ಬಡವಾಗಿರಲಿಲ್ಲ. ಆದ್ದರಿಂದಲೇ ಇದರ ಮೇಲೆ ಪರಕೀಯರ ಕಣ್ಣು, ಪದೇಪದೇ ಆಕ್ರಮಣ, ಶೋಷಣೆಯ ಪ್ರಯತ್ನ. ಇದೇ ನಮ್ಮ ಇತಿಹಾಸ ಸಾರುವ ಸತ್ಯ. ನಮ್ಮ ಇಂದಿನ ಆರ್ಥಿಕ ಔದ್ಯೋಗಿಕ ಸನ್ನಿವೇಶವನ್ನು ಕುರಿತು ವಿಚಾರ ಮಾಡುವಾಗ ಈ ಹಿನ್ನೆಲೆಯನ್ನು ನೆನಪಿನಲ್ಲಿಟ್ಟಿರಬೇಕಾದ್ದು ಅಗತ್ಯ.

ದೀರ್ಘಕಾಲ ಬ್ರಿಟಿಷರ ವಸಾಹತಾಗಿದ್ದ ನಮ್ಮ ದೇಶ ಕಳೆದ ಶತಮಾನದ ನಡುಗಾಲದಲ್ಲಿ ಬಿಡುಗಡೆ ಪಡೆದುಕೊಂಡಾಗ ಸರ್ಕಾರದ ಮುಂದೆ ಇದ್ದ ಒಂದು ದೊಡ್ಡ ಸಮಸ್ಯೆಯೆಂದರೆ, ಶೀಘ್ರ ಆರ್ಥಿಕ ಅಭಿವೃದ್ಧಿಯ ಹಾದಿಯಲ್ಲಿ ಇದನ್ನು ನಡೆಸಿಕೊಂಡು ಹೋಗುವುದು ಹೇಗೆ ಎಂಬುದೇ. ಇದಕ್ಕೆ ದಿಕ್ಸೂಚಿಯಂತಿರತಕ್ಕದ್ದು ನಮ್ಮ ಸಂವಿಧಾನ. ಅದರಲ್ಲಿ ಅಭಿವ್ಯಕ್ತವಾದ ಆಶೋತ್ತರಗಳ ಶೀಘ್ರ ಪೂರೈಕೆಗೆ ಅನುಗುಣವಾದ ವಿಧಾನಗಳನ್ನನುಸರಿಸಬೇಕೆಂದು ಅಂದಿನ ಆಡಳಿತಗಾರರು ಆಲೋಚನೆ ನಡೆಸಿದ್ದು ಸಹಜವೇ. ನಮ್ಮದು ಸಾರ್ವಭೌಮ ಸಮಾಜವಾದಿ ಧರ್ಮನಿರಪೇಕ್ಷ ಜನತಂತ್ರಾತ್ಮಕ ಗಣರಾಜ್ಯ ಎಂದು ಸಂವಿಧಾನ ಸಾರುತ್ತದೆ. ಸಂಸದೀಯ ಸರ್ಕಾರ ವ್ಯವಸ್ಥೆಯ ಅಡಿಯಲ್ಲಿ, ಪ್ರಜೆಗಳ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಾರದ ರೀತಿಯಲ್ಲಿ ಸಂವಿಧಾನದಲ್ಲಿ ಪ್ರೋಕ್ತವಾದ ರಾಜ್ಯನೀತಿಯ ನಿರ್ದೇಶಕ ತತ್ತ್ವಗಳ ಪ್ರಾಚಲಗಳಿಗೆ ಒಳಪಟ್ಟು ಹಾಗೂ ಇತರ ಅಂಶಗಳನ್ನೂ ಗಮನಿಸಿ ನಮ್ಮ ಆರ್ಥಿಕ ಅಭಿವೃದ್ಧಿಯ ರೀತಿ ನೀತಿಗಳನ್ನು ರೂಪಿಸಬೇಕಾಗಿತ್ತೆಂಬುದು ನಿರ್ವಿವಾದ. ಪ್ರತಿಯೊಬ್ಬರಿಗೂ ಸಾಕಷ್ಟು ಜೀವನೋಪಾಯದ ಹಕ್ಕಿರಬೇಕು; ಸಾರ್ವತ್ರಿಕ ಹಿತರಕ್ಷಣೆಗೆ ಬದ್ಧವಾಗುವ ರೀತಿಯಲ್ಲಿ ಸಮುದಾಯದ ಸಂಪನ್ಮೂಲಗಳು ವಿತರಣೆಯಾಗುವಂತೆ ಭೌತ ಸಂಪನ್ಮೂಲಗಳ ಒಡೆತನ ಹಾಗೂ ನಿಯಂತ್ರಣ ಸಾಧಿಸಬೇಕು; ಸಂಪತ್ತು ಹಾಗೂ ಉತ್ಪಾದನೆ ಕೆಲವೇ ಎಡೆಗಳಲ್ಲಿ ಕೇಂದ್ರೀಕೃತವಾಗದಂತೆ ಅರ್ಥವ್ಯವಸ್ಥೆಯ ನಿರ್ವಹಣೆಯಾಗಬೇಕು; ನೈತಿಕ ಮೌಲ್ಯಗಳ ಹಾಗೂ ಭೌತಿಕ ಸಮಾನತೆಯ ಸಮನ್ವಯವನ್ನು ಸಾಧಿಸಬೇಕು – ಎಂಬುದನ್ನು ಮುಖ್ಯವಾಗಿ ಅಂದಿನ ಆಡಳಿತಗಾರರು ಗಮನದಲ್ಲಿಟ್ಟುಕೊಂಡು ಭವಿಷ್ಯದ ಅಭಿವೃದ್ಧಿ ಪಥವನ್ನು ನಿರ್ಧರಿಸಲು ಯತ್ನಿಸಿದರೆನ್ನಬೇಕು.

ಶೀಘ್ರ ಹಾಗೂ ಸಮಗ್ರ ಅಭಿವೃದ್ಧಿ ಸಾಧನೆಗೆ ಆಗ ದೇಶದ ಮುಂದಿದ್ದ ಹಾದಿಗಳು ಮೂರು : ಮೊದಲನೆಯದಾಗಿ ಸಮಾಜವಾದಿ ದೇಶಗಳು ಅವಲಂಬಿಸಿದ್ದ ಕೇಂದ್ರೀಕೃತ ಹಾಗೂ ಪ್ರಭುತ್ವ ನಿರ್ದೇಶಿತ ಯೋಜನೆಯ ಮಾರ್ಗ. ಎರಡನೆಯದು ಅಮೆರಿಕದಂಥ ಬಂಡವಾಳವಾದಿ ಸಮಾಜಗಳು ಅನುಸರಿಸುತ್ತ ಬಂದ ಖಾಸಗಿ ಒಡೆತನ ಹಾಗೂ ಪ್ರಯತ್ನಶೀಲತೆಯ, ಲಾಭದೃಷ್ಟಿಯ, ಮುಕ್ತ ಸ್ಪರ್ಧೆಯ ಹಾದಿ. ಮೂರನೆಯದು ಗಾಂಧೀ ಪ್ರಣೀತವಾದ, ವಿಕೇಂದ್ರೀಕೃತವಾದ, ಸ್ವಾವಲಂಬನೆಯ ಹಾಗೂ ಸ್ವಯಂಪೂರ್ಣ ಸಮಾಜದರ್ಶನ ತಳೆದ ವಿಧಾನ. ಉತ್ಪಾದನೆ - ವಿತರಣೆಗಳನ್ನು ಪ್ರತ್ಯೇಕಗೊಳಿಸುವ, ಸಂಪತ್ತಿನ ಕೇಂದ್ರೀಕರಣಕ್ಕೆ ಆಸ್ಪದ ಕೊಡುವ, ಬಯಕೆಗಳನ್ನು ಹೆಚ್ಚಿಸಿಕೊಳ್ಳುತ್ತ ಅವುಗಳ ಪೂರೈಕೆಗಾಗಿ ಸದಾ ಧಾವಂತಪಡುವ ವ್ಯವಸ್ಥೆಯ ನಿರ್ಮಾಣ ಈ ದೃಷ್ಟಿಗೆ ಹೊರಗು. ಎಲ್ಲರಿಗೂ ದುಡಿಮೆ ನೀಡುವುದು ಇದರ ಗುರಿ. ದುಡಿಯದೆ ತಿನ್ನುವುದಕ್ಕೆ ಯಾರಿಗೂ ಹಕ್ಕಿಲ್ಲ ಎಂಬ ನೈತಿಕ ನಿಲುವು ಇದರದು.

ಸಮಾಜವಾದ, ಬಂಡವಾಳವಾದ ಈ ಎರಡರ ನಡುವಣ, ಮೂರನೆಯ ಮಾರ್ಗವನ್ನು ಅನುಸರಿಸಬೇಕೆಂದು ಸರ್ಕಾರ ನಿರ್ಧರಿಸಿತು. ಮಾರುಕಟ್ಟೆಯ ವ್ಯವಸ್ಥೆಯ ಒಳಗಡೆಯಲ್ಲೇ ಬೆಳವಣಿಗೆಯಲ್ಲಿನ ಸಮತೆ ಮತ್ತು ಸ್ವಾವಲಂಬನೆಯನ್ನು ಸಾಧಿಸುವ ಕನಸು ಇದರದಾಗಿತ್ತು. ಆರ್ಥಿಕ ಸುಖ ಸಾಧನೆಯ ಮಟ್ಟವೊಂದನ್ನು ಸಾಧಿಸುವ ನಿಟ್ಟಿನಲ್ಲಿ ಸಂಪನ್ಮೂಲಗಳ ಅನುಕೂಲತಮ ಬಳಕೆ, ವರಮಾನ ಸಂಪತ್ತುಗಳ ಹಂಚಿಕೆಯಲ್ಲಿಯ ಅಂತರಗಳು ಕಡಮೆಯಾಗುವಂತೆ ಎಲ್ಲರಿಗೂ ಸಮಾನ ಅವಕಾಶ ಕಲ್ಪನೆ, ರಾಷ್ಟ್ರೀಯ ವರಮಾನದ ಹಾಗೂ ತಲಾ ವರಮಾನದ ಗರಿಷ್ಠ ಸಾಧನೆ, ಆಹಾರ ಮತ್ತು ಕಚ್ಚಾ ಸಾಮಗ್ರಿಯಲ್ಲಿ ಸ್ವಯಂ ಪೂರ್ಣತೆಯ ಗಳಿಕೆ, ಶೀಘ್ರ ಕೈಗಾರಿಕೀಕರಣ, ಅರ್ಥ ವ್ಯವಸ್ಥೆಯಲ್ಲಿ ಅಸಮತೋಲದ ನಿವಾರಣೆ, ಅಧೋರಚನೆಯ ನಿರ್ಮಾಣ, ಸರ್ಕಾರಿ ವಲಯದ - ಸಾರ್ವಜನಿಕ ವಲಯದ - ಮೇಲುಗೈ: ಇದು ಸರ್ಕಾರ ಅನುಸರಿಸಿದ ಮಾರ್ಗ.

ಬೆಳವಣಿಗೆ, ಸಾಮ್ಯತೆ, ಸ್ವಾವಲಂಬನೆ – ಈ ಗುರಿಯನ್ನು ಸಾಧಿಸುವ ಸಲುವಾಗಿ ಸರ್ಕಾರ ಅನುಸರಿಸಿದ ಯೋಜನೆಯ ಅಂಗವಾಗಿ ಅದು ಕೆಲವು ಮೂಲಭೂತ ನೀತಿಗಳನ್ನನುಸರಿಸುವುದು ಅನಿವಾರ್ಯವೆನಿಸಿತು. ಸಂಪತ್ತಿನ, ಹಣದ, ಉದರಿಯ ಹರಿವು ಮತ್ತು ಅದರ ಹೂಡಿಕೆ ಅಥವಾ ವಿನಿಯೋಜನೆ ಇದನ್ನು ನಿಯಂತ್ರಿಸಲಾಯಿತು. ಜನಕ್ಕೆ ಬೇಕಾದ ವಸ್ತುಗಳ ವಿತರಣೆಯಲ್ಲಿ ರಾಷ್ಟ್ರೀಯ ಹಾಗೂ ಪ್ರಾದೇಶಿಕ ಮಟ್ಟಗಳಲ್ಲಿ ನಿಬಂಧಿಸಬೇಕಾಯಿತು. ಯಾವ ಕ್ಷೇತ್ರದಲ್ಲಿ ಎಷ್ಟು ಸಂಪತ್ತನ್ನು ತೊಡಗಿಸಬೇಕು, ಯಾವ ಅಭಿವೃದ್ಧಿಗೆ ಆದ್ಯತೆ ದೊರಕಬೇಕು, ಯಾವುದನ್ನು ಅನಂತರ ಸಾಧಿಸಬೇಕು ಎಂದು ಆದ್ಯತೆಗಳನ್ನು ನಿಷ್ಕರ್ಷಿಸುವುದೂ ಯೋಜನಾ ಪ್ರಕ್ರಿಯೆಯ ಒಂದು ಮುಖ್ಯ ಅಂಶ. ಖಾಸಗಿ ವಲಯಕ್ಕೇ ಉತ್ಪಾದನೆಯ ಕಾರ್ಯವನ್ನು ಸಂಪೂರ್ಣವಾಗಿ ವಹಿಸಿಕೊಟ್ಟರೆ ಅಲ್ಲಿ ಲಾಭವೇ ಮುಖ್ಯವಾಗಿ, ಇತರ ಅಗತ್ಯ ಉದ್ಯಮಗಳನ್ನು ಕಡೆಗಣಿಸಿದಂತಾದೀತೆಂಬ ಅಂಜಿಕೆ ಇದ್ದದ್ದು ಸಹಜವೇ. ತತ್‌ಕ್ಷಣವೇ ಲಾಭ ದೊರಕಿಸಿಕೊಡದ, ದೀರ್ಘಕಾಲ ಕಾಯಬೇಕಾದ, ಆದರೆ ಮೂಲಭೂತ ಎನ್ನಬಹುದಾದ ಕೈಗಾರಿಕೆಗಳು ಮೊದಲು ಅಭಿವೃದ್ಧಿ ಹೊಂದಬೇಕು. ಇವಕ್ಕೆ ಅಗತ್ಯವಾದ ಅಗಾಧ ಬಂಡವಾಳ ಸಂಗ್ರಹಣೆ, ತಂತ್ರಜ್ಞಾನದ ಅಳವಡಿಕೆ, ಸಂಘಟನೆ ಇವು ಖಾಸಗಿಯ ಅಳವಿಗೆ ಮೀರಿದವಾಗಿದ್ದುವು. ಅಂತೆಯೇ ಸರ್ಕಾರ ಈ ಕೈಗಾರಿಕೆಗಳ ಅಭಿವೃದ್ಧಿಯ ಹೊಣೆ ವಹಿಸಿಕೊಂಡಿತು. ಆದ್ದರಿಂದಲೇ ಅವೆಲ್ಲ ಸರ್ಕಾರದ ಒಡೆತನಕ್ಕೆ, ನಿರ್ವಹಣೆಗೆ ಒಳಪಟ್ಟುವು. ಖಾಸಗಿ ಹಾಗೂ ಸರ್ಕಾರಿ ಪ್ರಯತ್ನಶೀಲತೆಗಳೆರಡೂ ಕಾರ್ಯಪ್ರವೃತ್ತವಾಗುವ ಇನ್ನೂ ಕೆಲವು ಕ್ಷೇತ್ರಗಳನ್ನೂ, ಪೂರ್ತಿಯಾಗಿ ಖಾಸಗಿ ಉದ್ಯಮಿಗಳೇ ನಿರ್ವಹಿಸಬಹುದಾದಂಥ ಕೈಗಾರಿಕೆಗಳನ್ನೂ ಸರ್ಕಾರ ನಿರ್ಧರಿಸಿ ಘೋಷಿಸಿತು. ಸರ್ಕಾರದ ಕೈಗಾರಿಕಾ ನೀತಿಯ ಮುಖ್ಯ ಅಂಶಗಳು ಇವು. ಕಬ್ಬಿಣ-ಉಕ್ಕು, ರಸಾಯನ, ರಸಗೊಬ್ಬರ, ಪೆಟ್ರೋಲಿಯಂ ಮುಂತಾದವೆಲ್ಲ ಭಾರೀ ಕೈಗಾರಿಕೆಗಳು. ಬಂಡವಾಳಪ್ರಧಾನವಾದ ಆದರೆ

ಮೂಲಭೂತವಾದ ಉದ್ಯಮಗಳ ಸ್ಥಾಪನೆಗಾಗಿ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಹಾಗೂ ಸರ್ಕಾರಗಳ ಮಟ್ಟದಲ್ಲಿ ಬಂಡವಾಳ ಪಡೆಯಲಾಯಿತು. ವಿದೇಶಿ ವಿನಿಮಯದ ಒಳಹರಿವಿಗೆ, ವಿದೇಶಿ ಬಂಡವಾಳದ ಆಗಮನಕ್ಕೆ ನಿಯಂತ್ರಣ ವಿಧಿಸಲಾಯಿತು. ಏಕಸ್ವಾಮ್ಯ ಪ್ರವೃತ್ತಿಗೆ ತಡೆಹಾಕಲು ಕಾನೂನು ಕ್ರಮ ತೆಗೆದುಕೊಳ್ಳಲಾಯಿತು. ಬೃಹತ್ ನೀರಾವರಿ ಯೋಜನೆಗಳು – ವಿವಿಧೋದ್ದೇಶ ಯೋಜನೆಗಳು – ಜನ್ಮ ತಳೆದವು. ಬೃಹತ್ ಕೈಗಾರಿಕೆಗಳೂ ಕಟ್ಟೆಗಳೂ ಆಧುನಿಕ ಭಾರತದ ದೇಗುಲಗಳೆಂಬುದು ನೆಹರೂ ಅವರ ಅನಿಸಿಕೆಯಾಗಿತ್ತು.

ಇದರ ಜೊತೆಗೆ ಸಾಂಸ್ಥಿಕ ಬದಲಾವಣೆಗಳನ್ನೂ ಕೈಗೊಳ್ಳಲಾಯಿತು. ಭೂ ಸುಧಾರಣೆ, ಸಾಮೂಹಿಕ ಬಡತನದ ನಿರ್ಮೂಲನ, ಉಳಿತಾಯ ಸಂಗ್ರಹಣೆ ವಿತರಣೆಗಳ ಸಾಧನಗಳಾದ ವಿಮೆ ಮತ್ತು ಬ್ಯಾಂಕಿಂಗ್ ರಾಷ್ಟ್ರೀಕರಣ, ಹಿಂದುಳಿದ ವರ್ಗಗಳ ಆರ್ಥಿಕ ಮುನ್ನಡೆಗಾಗಿ ಬ್ಯಾಂಕಿಂಗ್ ಶಾಖಾ ಜಾಲದ ವಿಸ್ತರಣೆ, ಬಡತನದ ರೇಖೆಯ ಕೆಳಗಿರುವ ಜನರ ಉತ್ಥಾನಕ್ಕಾಗಿ ಕಾರ್ಯಕ್ರಮಗಳು, ಗ್ರಾಮೀಣ ಹಾಗೂ ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವಯಂ ಉದ್ಯೋಗ ಕಲ್ಪನೆಗಾಗಿ ಯೋಜನೆಗಳು, ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ನೆರವು, ರೈತರಿಗೆ ಪ್ರೋತ್ಸಾಹ ನೀಡಲು ಸಾಲ ಯೋಜನೆಗಳು, ಸಮಗ್ರ ಗ್ರಾಮೀಣ ಅಭಿವೃದ್ಧಿ ಸಾಧನೆ, ವಿಜ್ಞಾನ ಹಾಗೂ ತಂತ್ರಜ್ಞಾನ ಸಂಶೋಧನೆ, ಜನಸಾಮಾನ್ಯರ ಆವಶ್ಯಕ ವಸ್ತುಗಳ ಪೂರೈಕೆ – ಹೀಗೆ ನಾನಾ ನಿಟ್ಟುಗಳಲ್ಲಿ ಸರ್ಕಾರ ಕಾರ್ಯಪ್ರವೃತ್ತವಾಯಿತು.

ಹೀಗೆ ಕೇಂದ್ರ, ನಿಯಂತ್ರಣ, ನಿಯೋಜನೆ ಹಾಗೂ ನಿರ್ದೇಶನಕ್ಕೆ ಒಳಪಟ್ಟು ಪಂಚವಾರ್ಷಿಕ ಯೋಜನೆಗಳ ಅಡಿಯಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ ಗಮನಾರ್ಹವಾದ ಅಭಿವೃದ್ಧಿ ಸಾಧ್ಯವಾಯಿತು ಎಂದು ಒಟ್ಟಾರೆ ಹೇಳಬಹುದು. ನಡನಡುವೆ ರಾಜಕೀಯ ಹಾಗೂ ಇತರ ಅಡೆತಡೆಗಳಿಂದಾಗಿ ಯೋಜನೆಗಳು ಆಗಾಗ 'ನಿಂತು ಹೊರಡಿ' ಎಂಬ ನಿಯಮವನ್ನನುಸರಿಸಬೇಕಾಯಿತಾದರೂ ೧೯೫೦ರಿಂದ ೧೯೯೦ರವರೆಗಿನ ನಲವತ್ತು ವರ್ಷಗಳ ಅವಧಿಯಲ್ಲಿ ಒಟ್ಟು ಏಳು ಪಂಚವಾರ್ಷಿಕ ಯೋಜನೆಗಳು ಬಂದುಹೋದವು. ಕೃಷಿ, ಗ್ರಾಮೀಣ ಅಭಿವೃದ್ಧಿ, ವಿಶೇಷ ಪ್ರದೇಶ ಕಾರ್ಯಕ್ರಮ, ನೀರಾವರಿ ಮತ್ತು ಪ್ರವಾಹ ನಿಯಂತ್ರಣ, ವಿದ್ಯುತ್ ಮತ್ತು ಇತರ ಶಕ್ತಿಗಳು, ಕೈಗಾರಿಕೆ ಮತ್ತು ಖನಿಜ, ಸಾರಿಗೆ, ಸಂವಹನ, ಸಮಾಚಾರ ಮತ್ತು ಪ್ರಸಾರ, ವಿಜ್ಞಾನ ಮತ್ತು ತಂತ್ರಜ್ಞಾನ, ಸಾಮಾಜಿಕ ಸೇವೆ ಮತ್ತು ಇತರ ನಾನಾ ಕ್ಷೇತ್ರಗಳಲ್ಲಿ ಮುನ್ನಡೆ ಸಾಧಿಸಲಾಯಿತು. ತ್ವರಿತ ಬೆಳವಣಿಗೆ ದರ; ಅರ್ಥ ವ್ಯವಸ್ಥೆಯ ಆಧುನೀಕರಣ ಮತ್ತು ಸಂರಚನಾತ್ಮಕ ಪರಿವರ್ತನೆ; ಸ್ವಾವಲಂಬನೆಯ ಸಾಧನೆ; ಬಡತನ, ನಿರುದ್ಯೋಗ ಮತ್ತು ಅಸಮತೆಗಳ ನಿವಾರಣೆ – ಈ ನಾಲ್ಕೂ ನಿಟ್ಟುಗಳಲ್ಲಿ ಅದುವರೆಗಿನ ಸಾಧನೆ - ವೈಫಲ್ಯಗಳು ಪರಿಶೀಲನಾರ್ಹ.



ಭಾರತದ ಅರ್ಥವ್ಯವಸ್ಥೆಯ ಬೆಳವಣಿಗೆಯ ದರ – ಎಂದರೆ ಒಟ್ಟು ವಾರ್ಷಿಕ ಉತ್ಪನ್ನದಲ್ಲಿ ಏರಿಕೆಯ ದರ – ಹೆಚ್ಚಿತೆಂಬುದು ನಿಜ. ಬ್ರಿಟಿಷರ ಆಡಳಿತ ಕಾಲದಲ್ಲಿ ಕಳೆದ ಶತಮಾನದ ಪ್ರಥಮಾರ್ಧದಲ್ಲಿ ವಾರ್ಷಿಕವಾಗಿ ಶೇ. ೧ರಂತೆ ಮಾತ್ರ ಬೆಳವಣಿಗೆ ಸಾಧಿಸಲಾಗುತ್ತಿತ್ತು. ಭಾರತದ ಪರಂಪರಾಗತ ದಾರಿದ್ರ್ಯ ನಿವಾರಣೆಗೆ, ವರ್ಷೇ ವರ್ಷೇ ಅಧಿಕವಾಗುತ್ತಿದ್ದ ಜನಸಂಖ್ಯೆಯ ಅಗತ್ಯದ ಪೂರೈಕೆಯ ದೃಷ್ಟಿಯಿಂದ ಇದು ಏನೇನೂ ಸಾಲದಾಗಿತ್ತು. ಅರ್ಥ ವ್ಯವಸ್ಥೆಯಲ್ಲಿಯ ಜಡತೆಯ ನಿವಾರಣೆಯಾಗಬೇಕಾದರೆ ಹೆಚ್ಚು ವೇಗವಾಗಿ ಬೆಳವಣಿಗೆ ಸಾಧಿಸುವುದು ಅಗತ್ಯವಾಗಿತ್ತು. ಜನಸಂಖ್ಯೆಯೇ ವಾರ್ಷಿಕವಾಗಿ ಶೇ. ೧.೫ರಂತೆ ಬೆಳೆಯುತ್ತಿದ್ದಾಗ ಶೇ. ೧ರ ಆರ್ಥಿಕ ಬೆಳವಣಿಗೆ ಏತೇತಕ್ಕೂ ಸಾಲದಾಗಿತ್ತು. ವಾಸ್ತವವಾಗಿ ಇದು ಹಿನ್ನಡೆಯೇ ಆಗಿತ್ತು. ಯೋಜನೆಯ ಯುಗದಲ್ಲಿ – ಸ್ವಾತಂತ್ರ್ಯಾನಂತರದ ಮೊದಲ ನಾಲ್ಕು ದಶಕಗಳಲ್ಲಿ – ಬೆಳವಣಿಗೆ ದರ ಏರಿತಾಗಲಿ, ಅದು ಒಂದೇ ಸಮನಾಗಿರಲಿಲ್ಲ, ದೃಢವಾಗಿರಲಿಲ್ಲ, ಪೂರ್ವಾರ್ಜಿತ ದಾರಿದ್ರ್ಯ ಸಂಚಯವನ್ನು ತೊಡೆದುಹಾಕಿ ಚೈತನ್ಯ ಮೂಡಿಸಲು ಸಾಕಾಗಿರಲಿಲ್ಲ. ೧೯೫೦ರ ದಶಕದಲ್ಲಿ ಶೇ. ೩.೮, ಅರವತ್ತರ ದಶಕದಲ್ಲಿ ಶೇ. ೩.೫, ಎಪ್ಪತ್ತರ ದಶಕದಲ್ಲಿ ಶೇ. ೩.೪ ಮತ್ತು ಎಂಬತ್ತರ ದಶಕದಲ್ಲಿ ಶೇ. ೫.೨ ಆಗಿತ್ತು. ಅನೇಕ ಏಷ್ಯನ್ ದೇಶಗಳು ಶೇ. ೮ರಂತೆ ಬೆಳವಣಿಗೆ ಸಾಧಿಸಿದಾಗ ನಮ್ಮದು ತೀರ ಕಡಮೆ. ಸಮಾಜವಾದ, ಸುಭದ್ರವಾದ ಅಸ್ತಿವಾರದ ರಚನೆ, ಹಾಳತವಾದ ವಿತರಣೆ, ಶೀಘ್ರ ಅಭ್ಯುದಯ ಸಾಧನೆ ಮುಂತಾದ ಮಾತುಗಳೆಲ್ಲ ಗಾಳಿಯಲ್ಲಿ ಹಾರಿಬಿಟ್ಟ ಬಲೂನುಗಳಂತೆ ಆಕಾಶದಲ್ಲಿ ತೇಲಾಡಿದುದಷ್ಟೆ. ಆದರೂ ಆದರ್ಶ ಇದ್ದದ್ದೊಂದು ಸಮಾಧಾನಕರ ಸಂಗತಿ. ಗುರಿಗೂ ಸಾಧನೆಗೂ ನಡುವಣ ಅಂತರ ಬಲು ಅಗಲವಾಗಿತ್ತು.

ಸಂರಚನಾತ್ಮಕ ಪರಿವರ್ತನೆ, ಆಧುನೀಕರಣ, ಸ್ವಾವಲಂಬನೆ, ದಾರಿದ್ರ್ಯ, ನಿರುದ್ಯೋಗ ಮತ್ತು ಅಸಮತೆಯ ನಿವಾರಣೆಯ ನಿಟ್ಟಿನಲ್ಲಿ ಸಾಧನೆ ಒಂದೇ ಸಮನಾಗಿಲ್ಲ. ವಸ್ತುನಿಷ್ಠೆಯ ಮಾಪನ ಕಷ್ಟ ಸಾಧ್ಯ. ಕೈಗಾರಿಕೆಗಳ ವಿಸ್ತರಣೆಯೇನೋ ಆಯಿತು. ಊಳಿಗಮಾನ್ಯ ವ್ಯವಸ್ಥೆಯ ಸರಪಣಿಯನ್ನು ಕಳಚಿಕೊಂಡು, ಪ್ರಾಥಮಿಕ ವಲಯದ ಮೇಲಣ ಅವಲಂಬನೆಯನ್ನು ಕಡಮೆ ಮಾಡಿ, ಕೈಗಾರಿಕೆಗಳ ವಲಯದಿಂದ ಒಟ್ಟು ನೈಜ ರಾಷ್ಟ್ರೀಯ ವರಮಾನಕ್ಕೆ ಹೆಚ್ಚಿನ ಕೊಡುಗೆ ಸಲ್ಲುವಂತೆಯೂ ಆಯಿತು. ಈ ಅವಧಿಯಲ್ಲಿ ಪ್ರಾಥಮಿಕ ವಲಯದ ಕೊಡುಗೆಯ ಪ್ರಮಾಣ ಶೇ. ೫೮.೩ರಿಂದ ಶೇ. ೩೫.೨ಕ್ಕೆ ಇಳಿದು, ದ್ವಿತೀಯಕ ವಲಯದ ಕಾಣಿಕೆ ಶೇ. ೧೫.೧ರಿಂದ ಶೇ. ೨೫.೫ಕ್ಕೆ ಏರಿತು. ಆದರೆ ಸಂರಚನಾತ್ಮಕ ಪರಿವರ್ತನೆ ಗಮನಾರ್ಹವೇನೂ ಅಲ್ಲ. ಕೃಷಿ ಕ್ಷೇತ್ರದಲ್ಲಿ ಹಸುರು ಕ್ರಾಂತಿ ಎಲ್ಲ ವಲಯಗಳಿಗೂ ಹಬ್ಬಲಿಲ್ಲ. ಮುಖ್ಯ ಹಣ ಬೆಳೆಗಳಿಗೆ ಹಾಗೂ ಶ್ರೀಮಂತ ರೈತರಿಗೆ ಲಾಭದಾಯಕವಾದ ಕ್ರಮಗಳು ಜಾರಿಗೆ ಬಂದವು. ಆಹಾರ ಧಾನ್ಯದ ಉತ್ಪನ್ನವೇನೋ ಹೆಚ್ಚಿತು. ಆದರೆ ಸಂಗ್ರಹಣೆ, ವಿತರಣೆ, ಬೆಂಬಲ ಬೆಲೆಯ ನಿರ್ಧಾರಣೆ ಮುಂತಾದವು ಕೇವಲ ಪಟ್ಟಭದ್ರ ಹಿತಗಳಿಗೆ ಅನುಗುಣವಾಗಿ ಅವುಗಳ ಒತ್ತಡದಿಂದಾಗಿದ್ದದ್ದರಿಂದ ಕೃಷಿಯ ಹಲವಾರು ವಲಯಗಳಲ್ಲಿ ಜಡತೆ ಹೆಚ್ಚಿತು, ಬಡತನ ವ್ಯಾಪಕವಾಯಿತು, ಅನಾರ್ಥಿಕ ಬೇಸಾಯ ಹೆಚ್ಚಿತು, ಭೂಹೀನ ರೈತರು ಮತ್ತು ದುಡಿಮೆಗಾರರು, ಪ್ರಚ್ಛನ್ನ ನಿರುದ್ಯೋಗಿಗಳು ಹೆಚ್ಚಿದರು. ಭೂಸುಧಾರಣೆ ಒಂದು ನಾಟಕವೆನಿಸಿತು. ಗ್ರಾಮ ಪ್ರದೇಶಗಳಲ್ಲಿ ಪರ್ಯಾಯ ಉದ್ಯೋಗಗಳ ಸೃಷ್ಟಿ ಆಗಲಿಲ್ಲ. ಕೈಗಾರಿಕೆಯಲ್ಲಿ ಸ್ವಾವಲಂಬನೆಯ ನಿಟ್ಟಿನಲ್ಲಿ ಸಾಕಷ್ಟು ಮುನ್ನಡೆ ಸಾಧಿಸಿದರೂ ನಿರಂತರ ಚಾಲನೆ ದೊರಕಲಿಲ್ಲ. ವಿಜ್ಞಾನ ತಂತ್ರಜ್ಞಾನ ಸಂಶೋಧನೆ ಹಾಗೂ ಅಭಿವೃದ್ಧಿಗೆ ಹೆಚ್ಚಿನ ಗಮನ ಸಲ್ಲದೆ ನಮ್ಮ ತಂತ್ರಜ್ಞಾನ ಹಳತಾಯಿತು, ಯಂತ್ರಗಳು ಅಪ್ರಚಲಿತವೆನಿಸಿದವು. ಬೆಳವಣಿಗೆ ಕುಂಠಿತವಾಗಿ ಅದರ ಗರ್ಭದಲ್ಲಿ ಪತನದ ಬೀಜಗಳು ಮೊಳಕೆಯೊಡೆದವು. ಪ್ರತಿಗಾಮಿ ಹಾಗೂ ಸಮಾಜ ವಿರೋಧಿ ಶಕ್ತಿಗಳು ಪ್ರಬಲವಾಗತೊಡಗಿದುವು.

ಬಡತನದ ರೇಖೆಯ ಕೆಳಗಿನ ಜನರ ಶೇಕಡಾ ಪ್ರಮಾಣ ಸುಮಾರು ೫೫ರಿಂದ ೩೦ಕ್ಕೆ ಇಳಿದರೂ, ಉದ್ಯೋಗ ಸೃಷ್ಟಿಯ ನಿಟ್ಟಿನಲ್ಲಿ ಹೆಮ್ಮೆಯಿಂದ ಹೇಳಿಕೊಳ್ಳುವಂಥದೇನೂ ಆಗಲಿಲ್ಲ. ೧೯೭೧-೯೧ರ ಅವಧಿಯಲ್ಲಿ ಉದ್ಯೋಗ ವಾರ್ಷಿಕವಾಗಿ ಶೇ. ೨. ೨ರಂತೆ ಹೆಚ್ಚಿದರೆ ಶ್ರಮಿಕ ಬಲ ವಾರ್ಷಿಕವಾಗಿ ಶೇ. ೨.೫ರಂತೆ ಅಧಿಕವಾಯಿತು. ಪ್ರತಿಯೊಂದು ಪಂಚವಾರ್ಷಿಕ ಯೋಜನೆಯ ಕೊನೆಯಲ್ಲೂ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಲೇ ಬಂತು. ಹಿಂದಿನ ಬಾಕಿಯನ್ನು ತೊಡೆದುಹಾಕಿ, ಹೊಸ ಶ್ರಮಿಕ ಬಲಕ್ಕೂ ಉದ್ಯೋಗ ದೊರಕಿಸಿಕೊಡಬೇಕೆಂದು ಪ್ರತಿಯೊಂದು ಪಂಚವಾರ್ಷಿಕ ಯೋಜನೆಯಲ್ಲೂ ದೃಢ ಸಂಕಲ್ಪವನ್ನು ಘೋಷಿಸಲಾಗುತ್ತಿತ್ತು. ಆದರೆ ಅದು ಘೋಷಣೆಯಾಗಿಯೇ ಉಳಿಯುತ್ತಾ

ಬಂತು. ಆದಂಥ ಬೆಳವಣಿಗೆಯ ಶುಭಫಲಗಳು ಎಲ್ಲ ವರ್ಗಗಳಿಗೂ ಹಾಳತವಾಗಿ ಹಂಚಿಕೆಯಾಗದಿದ್ದದ್ದು ತುಂಬ ಶೋಚನೀಯ. ಪರಿಸ್ಥಿತಿ ತೀರ ಗಂಭೀರವಾಗಲು ಇದು ಒಂದು ಮುಖ್ಯ ಕಾರಣ.

ಕೇಂದ್ರೀಕೃತ ವ್ಯವಸ್ಥೆಯ ಅಡಿಯಲ್ಲಿ ಜಾರಿಗೆ ತರಲಾದ ನಾನಾ ನಿಯಂತ್ರಣಗಳ ನಿರ್ವಹಣೆಯಲ್ಲಿ ಅದಕ್ಷತೆ, ಅನೈತಿಕ ಪ್ರವೃತ್ತಿ, ಸರ್ಕಾರದ ಹಸ್ತಕ್ಷೇಪ, ರಾಜಕೀಯ ಆಸಕ್ತಿಗಳ ಹಾಗೂ ಒತ್ತಡ ಗುಂಪುಗಳ ಕೈವಾಡ – ಈ ನಾನಾ ಕಾರಣಗಳಿಂದಾಗಿ ಯೋಜನೆಯಲ್ಲಿ ನಿರೀಕ್ಷಿಸಿದಂಥ ಸಾಧನೆಯಾಗಲಿಲ್ಲ. ಮಾರುಕಟ್ಟೆಯ ವ್ಯವಸ್ಥೆಯ ಚೌಕಟ್ಟಿನಲ್ಲೇ ಕೇಂದ್ರೀಕೃತ ಹಾಗೂ ನಿಯಂತ್ರಿತ ಅಭಿವೃದ್ಧಿ ಕಾರ್ಯಕ್ರಮ ಒಂದು ಬಗೆಯ ವಿರೋಧಾಭಾಸವೆನಿಸಿತ್ತು. ಸೋವಿಯತ್ ಒಕ್ಕೂಟದಲ್ಲಿ ಒಂದು ಬಗೆಯ ಶೈಥಿಲ್ಯ ಉಂಟಾದರೆ, ಭಾರತದಲ್ಲಿ ಇನ್ನೊಂದು ಬಗೆಯ ಬಿರುಕುಗಳುಂಟಾದುವು. ನಿಷ್ಠೆ, ಶಿಸ್ತು, ಕೌಶಲ, ದಕ್ಷತೆ, ನಿತ್ಯನೂತನತೆ ಮುಂತಾದವುಗಳ ಅಭಾವದಿಂದ ಈ ವ್ಯವಸ್ಥೆ ಅನೇಕ ದುರ್ವ್ಯವಹಾರಗಳಿಗೆ ಎಡೆಗೊಟ್ಟಿತು. ಸೋವಿಯತ್ ವ್ಯವಸ್ಥೆಯ ಕುಸಿತದ ಕಾಲಕ್ಕೇ ಭಾರತದಂಥ ಕೇಂದ್ರೀಕೃತ ಹಾಗೂ ಸಂಮಿಶ್ರ ಅರ್ಥ ವ್ಯವಸ್ಥೆಯಲ್ಲೂ ರೋಗದ ಚಿಹ್ನೆಗಳು ಪ್ರಬಲವಾದುವು. ಸ್ವಾವಲಂಬನೆ ಗಾಳಿಗೆ ಹಾರಿತು. ಆಮದು-ರಫ್ತುಗಳ ಅಂತರ ಬೆಳೆಯಿತು. ಆಂತರಿಕ ದೌರ್ಬಲ್ಯಗಳಿಂದಾಗಿ ಹಾಗೂ ರಾಜಕೀಯ ಅಸ್ಥಿರತೆ ಹಾಗೂ ಸಮಯ ಸಾಧಕತನದ ಪ್ರವೃತ್ತಿಗಳಿಂದಾಗಿ ರೂಪಾಯಿಯ ಮೌಲ್ಯ ಕೊಚ್ಚಿಹೋಗತೊಡಗಿತು. ಚಿನ್ನವನ್ನು ಅಡವಿಟ್ಟು ಅಗತ್ಯ ಪದಾರ್ಥಗಳನ್ನು ಆಮದು ಮಾಡಿಕೊಳ್ಳುವಂಥ ದುಸ್ಥಿತಿ ಬಂತು. 'ನಿಮ್ಮ ನಿಯಂತ್ರಣ ವ್ಯವಸ್ಥೆಯನ್ನು ಬಿಟ್ಟುಕೊಟ್ಟು ಮುಕ್ತ ಮಾರುಕಟ್ಟೆಗೆ ಎಡೆ ನೀಡಿ, ಸರ್ಕಾರಿ ವಲಯದ ಆರ್ಥಿಕ ಪಾಳೆಗಾರಿಕೆಯನ್ನು ತ್ಯಜಿಸಿ, ಖಾಸಗಿಗೆ ಪ್ರಾಶಸ್ತ್ಯ ನೀಡಿ, ಬಂಡವಾಳ ಹರಿವಿಗೆ ಅವಕಾಶವಿರುವಂತೆ ಮಾಡಿ, ಎಲ್ಲ ಕ್ಷೇತ್ರಗಳಲ್ಲೂ ಉದಾರ ನೀತಿಯನ್ನು ಜಾರಿಗೆ ತಂದರೆ ಉಳಿಯುತ್ತೀರಿ, ಆಗ ನಮ್ಮಿಂದ ನಿಮಗೆ ನೆರವು ಲಭ್ಯ' ಎಂಬ ವಿಶ್ವಬ್ಯಾಂಕ್ ಹಾಗೂ ಅಂತರರಾಷ್ಟ್ರೀಯ ಹಣನಿಧಿಯ ತಾಕೀತಿಗೆ ಸರ್ಕಾರ ತಲೆಬಾಗಬೇಕಾಯಿತು. ಉದ್ಯಮಗಳ ಲಾಭಪರತೆ ಮುಖ್ಯ. ಅದೇ ದಕ್ಷತೆಯ ಅಳತೆಗೋಲು. ಮುಕ್ತ ಸ್ಪರ್ಧೆಯಲ್ಲಿ ಗೆಲ್ಲುವುದಕ್ಕೆ ತಕ್ಕಂತೆ ಉದ್ಯಮಗಳ ಗುಣಮಟ್ಟ ಸುಧಾರಿಸುತ್ತದೆ. ಇಡೀ ಅರ್ಥವ್ಯವಸ್ಥೆಯ ಪುನರ್ರಚನೆಯಾಗಬೇಕು – ಎಂಬೆಲ್ಲ ಸೂತ್ರಗಳಿಗೂ ಸರ್ಕಾರ ಬದ್ಧವಾಗಿ ಹೊಸ ಆರ್ಥಿಕ ನೀತಿಯನ್ನು ಸಾರಾಸಗಟಾಗಿ ಜಾರಿಗೆ ತಂದಿತು. ಕಳೆದ ಶತಮಾನದ ಕೊನೆಯ ದಶಕದಲ್ಲಿ ದೇಶ ಈ ನಿಟ್ಟಿನಲ್ಲಿ ಶ್ರಮಿಸತೊಡಗಿತು. ಸ್ಪರ್ಧೆಯ ಪುನರಾಗಮನ, ಕೈಗಾರಿಕಾ ಲೈಸೆನ್ಸ್ ನೀತಿಯ ತ್ಯಾಗ, ಆಮದು-ರಫ್ತುಗಳಲ್ಲಿ ಸ್ಪರ್ಧಾತ್ಮಕ ಲಕ್ಷಣದ ಆವಾಹನೆ, ಸರ್ಕಾರದ ಹಣಕಾಸು ನೀತಿಯನ್ನು ಮರುನೆಲೆಗೊಳಿಸುವ ಕ್ರಮ ಉದ್ಯಮಗಳ ಬೆಳವಣಿಗೆಗೆ ತಡೆ ಒಡ್ಡುವ ಏಕಸ್ವಾಮ್ಯ ಹಾಗೂ ನಿರ್ಬಂಧಕಾರಕ ವ್ಯಾಪಾರ ನೀತಿಗಳ ಅಧಿನಿಯಮದ ಮಾರ್ಪಾಡು, ನೇರ ವಿದೇಶಿ ಬಂಡವಾಳದ ಆಗಮನಕ್ಕೆ ನಡೆನುಡಿಯ ಮರ್ಯಾದೆ, ವಿದೇಶಿ ಬಂಡವಾಳಕ್ಕೆ ಅವಕಾಶ, ಸರ್ಕಾರದ ಹಸ್ತಕ್ಷೇಪದ ಅಂತ್ಯ, ಸಾರ್ವಜನಿಕ ವಲಯದಲ್ಲಿ ಸರ್ಕಾರ ಹೊಂದಿದ್ದ ಬಂಡವಾಳವನ್ನು ಹಿಂಪಡೆದು, ಖಾಸಗಿ ವಲಯದ ಆವಾಹನೆ ಹಾಗೂ ಸರ್ಕಾರಿ ಉದ್ಯಮದ ಖಾಸಗೀಕರಣ, ಸಬ್ಸಿಡಿಗಳ ಪುನರ್ವಿಮರ್ಶೆ, ರೂಪಾಯಿಯ ಮೌಲ್ಯ ಭೇದನ ಹಾಗೂ ಮುಕ್ತ ಚಲನೆ, ಉದ್ಯಮಗಳ ಆಧುನೀಕರಣಕ್ಕೆ ತೊಡಕಾದ ಕಾರ್ಮಿಕ ಬಲದ ನಿವಾರಣೆ, ನವೀಕರಣ ಕ್ರಮ, ಬ್ಯಾಂಕುಗಳ ಹಾಗೂ ಹಣಕಾಸು ವಲಯದ ಸುಧಾರಣೆ – ಇವನ್ನೆಲ್ಲ ಸರ್ಕಾರ ಕಳೆದ ಹನ್ನೊಂದು ವರ್ಷಗಳಲ್ಲಿ ಕ್ರಮವಾಗಿ ಜಾರಿಗೆ ಕೊಡುತ್ತ ಬಂದಿದೆ. ಜಾಗತೀಕರಣದ ಕೂಗು ಪ್ರಬಲವಾಗಿದೆ. ನಮ್ಮ ಅರ್ಥವ್ಯವಸ್ಥೆ ಅಂತರರಾಷ್ಟ್ರೀಯ ಮುಕ್ತ ಮಾರುಕಟ್ಟೆಗೆ ತೆರೆದುಕೊಳ್ಳುವ ಹಾಗೆ ಮಾಡಲಾಗುತ್ತಿದೆ. ಸಮಾನಾವಕಾಶದಿಂದ ಸಾರ್ವತ್ರಿಕ ದಕ್ಷತೆ, ಲಾಭ ಎಂಬುದು ಈಗ ಮಾನ್ಯವಾಗಿರುವ ಸೂತ್ರ. ಇಡೀ ಪ್ರಪಂಚವೇ ಒಂದು ಮಾರುಕಟ್ಟೆ. ಇದರ ವ್ಯಾಪ್ತಿಯಲ್ಲಿ ಎಲ್ಲವೂ ಸಲೀಸು. ಹಣ, ಬಂಡವಾಳ, ದುಡಿಮೆ, ಮಾಹಿತಿ, ಜ್ಞಾನ ಎಲ್ಲವೂ ಲೀಲಾಜಾಲವಾಗಿ ಹರಿದಾಡಲಿ, ಹಳೆಯ ವಸಾಹತುಶಾಹಿಯ ದೃಷ್ಟಿ ಈಗ ಅರ್ಥಹೀನ – ಎಂದು ಹೇಳಲಾಗುತ್ತಿದೆ. ಗಡಿಯಾರದ ಪೆಂಡುಲಮ್ಮು – ಲೋಲಕ – ಒಂದು ತುದಿಯಿಂದ ಇನ್ನೊಂದು ತುದಿಗೆ ಹೋಗಿದೆ. ಸರ್ವಸಮತೆಯ, ಸ್ಪರ್ಧೆಯ, ವಾತಾವರಣ ಮೂಡಬೇಕಾದರೆ ಎಲ್ಲ ದೇಶಗಳ ಅರ್ಥ ವ್ಯವಸ್ಥೆಗಳೂ ಸಮಾನವಾಗಿ ಬೆಳವಣಿಗೆ ಸಾಧಿಸಿರಬೇಕು. ಆಗಲೂ ಲಾಭ ದೃಷ್ಟಿಯನ್ನೇ ಮುಂದಿಟ್ಟುಕೊಂಡ ನಾನಾ ಬಲಗಳ ನಡುವಣ ಸ್ಪರ್ಧೆಯಲ್ಲಿ ಕೆಲವು ಬಲಗಳು ಬಗೆಬಗೆಯ ವಿಧಾನಗಳಿಂದ ತಮ್ಮ ಹಿತವನ್ನು ಮುಂದೆ ಮಾಡುವುದು ಸಾಧ್ಯ. ಮುಕ್ತ ಸ್ಪರ್ಧೆಯ ತಾತ್ತ್ವಿಕ ನಿಲುವು ಕೇವಲ ಆದರ್ಶವಲ್ಲವೆ ? ಕಾರ್ಯರೂಪಕ್ಕೆ ಬರಲು ಸಾಧ್ಯವೇ ? ಎಂಬ ಪ್ರಶ್ನೆ ಪ್ರಧಾನವಾದ ದ್ದಾಗಿದೆ. ಪ್ರಬಲ ದೇಶಗಳು ಈ ಸೂತ್ರಗಳನ್ನು ತಮ್ಮ ಮೂಗಿನ ನೇರಕ್ಕೆ ತಕ್ಕಂತೆ ಅರ್ಥೈಸಿ, ವ್ಯಾಖ್ಯಾನಿಸಿ, ದುರ್ಬಲ ದೇಶಗಳನ್ನು ಬಗ್ಗಿಸುವ ಹುನ್ನಾರ ನಡೆದಿದೆ. ವಿಶ್ವ ವ್ಯಾಪಾರ ಸಂಸ್ಥೆಯಲ್ಲಿ ಮುಂದುವರಿದ ದೇಶಗಳದೇ ಪ್ರಾಬಲ್ಯ. ಇದು ಗಂಭೀರವಾಗಿ ಪರಿಗಣಿಸಬೇಕಾದ ವಿಚಾರ.

ಸರ್ಕಾರ ಆರ್ಥಿಕ ವಲಯದಿಂದ ನಿರ್ಗಮಿಸಿ, ಆರ್ಥಿಕ ಚಟುವಟಿಕೆಗಳನ್ನು ಖಾಸಗಿ ವಲಯಕ್ಕೆ ಬಿಟ್ಟುಕೊಟ್ಟು ಆಡಳಿತ ಹಾಗೂ ಸಮಾಜ ಕಲ್ಯಾಣ ಕಾರ್ಯಕ್ರಮಗಳಲ್ಲಿ ತೊಡಗಿ ಕೊಳ್ಳಬೇಕೆಂಬುದೇನೋ ಸರಿಯೇ ಎಂದಿಟ್ಟುಕೊಂಡರೂ, ದುರ್ಬಲ ವರ್ಗಗಳ ಸಬಲೀಕರಣ ಕಾರ್ಯದಲ್ಲಿ ಸರ್ಕಾರ ಎಷ್ಟರಮಟ್ಟಿಗೆ ತನ್ನನ್ನು ತೊಡಗಿಸಿಕೊಳ್ಳುತ್ತಿದೆ ? ಇದಕ್ಕೆ ಸಂಪನ್ಮೂಲವನ್ನು ಅದು ದೊರಕಿಸಿಕೊಳ್ಳುವುದು ಸಾಧ್ಯವಾಗಿದೆಯೆ ? ಸರ್ಕಾರಿ ವಲಯದ ಉದ್ಯಮಗಳನ್ನು ಬಿಟ್ಟು ಕೊಡುವುದು ಅಷ್ಟು ಸುಲಭವಲ್ಲ. ಬಂಡವಾಳ ವಾಪಸಾತಿ ಬಲು ತೊಡಕಿನದು. ಮನೆತನದ ಬೆಳ್ಳಿ ಚಿನ್ನದ ವಸ್ತುಗಳನ್ನು ಮಾರಲು ಹೋದಾಗ ಆರರದನ್ನು ಮೂರಕ್ಕೆ ಕೇಳುವ ಪ್ರವೃತ್ತಿ ಬೆಳೆಯುತ್ತದೆ. ಹೋದಷ್ಟಕ್ಕೆ ಹೋಗಲೆಂದು ಕೊಟ್ಟರೆ ಇನ್ನಷ್ಟು ಸಂಕಷ್ಟ. ಆ ಹಣವೆಲ್ಲ ಸರ್ಕಾರದ ಕೊರತೆಯನ್ನು ತುಂಬಿಕೊಳ್ಳುವುದಕ್ಕೇ ಹೋಗುವುದು. ಸರ್ಕಾರ ಹಳೆಯ ವ್ಯವಸ್ಥೆಯನ್ನು ಮುಂದುವರಿಸಲಾಗದೆ, ಹೊಸದಕ್ಕೆ ಎಡೆ ಮಾಡಿಕೊಡುವುದೂ ಸಾಧ್ಯವಾಗದೆ ಉಭಯಸಂಕಟದಲ್ಲಿ ಸಿಲುಕಿದೆ. ಈ ನಡುವೆ ನಮ್ಮ ಸಮಾಜವಾದಿ ಗಣರಾಜ್ಯ ಎಂಬ ಸಂವಿಧಾನದ ಘೋಷಣೆಯ ಗತಿಯೇನು ? ನಿರ್ದೇಶಕ ತತ್ತ್ವಗಳನ್ನೇನು ಮಾಡಬೇಕು ?

ಆರ್ಥಿಕ ಸುಧಾರಣೆಯ ಅನಂತರದ ಕಾಲದಲ್ಲಿ ನಮ್ಮ ಆರ್ಥಿಕ ಬೆಳವಣಿಗೆಯ ದರ ಸ್ವಲ್ಪಮಟ್ಟಿಗೆ ಹೆಚ್ಚತೊಡಗಿದರೂ ಮತ್ತೆ ಹಳೆಯ 'ಹಿಂದೂ ಬೆಳವಣಿಗೆ ದರ' ಎಂದು ವರ್ಣಿಸಲಾದ ಶೇ. ೩.೫ರ ಹತ್ತಿರಕ್ಕೆ ಜಾರಿಕೊಳ್ಳುತ್ತಿದೆ. ಚೀನಾ ಶೇ. ೧೦ರಂತೆ, (೧೯೯೦-೯೭), ಕೊರಿಯಾ ಶೇ. ೮.೨ರಂತೆ (೭೫-೮೫), ಥಾಯ್ಲೆಂಡ್ ಶೇ. ೭.೮ರಂತೆ (೮೫-೯೫), ಇಂಡೋನೇಷಿಯಾ ಶೇ. ೫.೯ರಂತೆ (೧೯೮೮-೯೭), ಭಾರತ ಶೇ. ೪. ೨ರಂತೆ (೧೯೯೩-೯೯) ಬೆಳವಣಿಗೆ ಸಾಧಿಸಿವೆ. ಅರ್ಥವ್ಯವಸ್ಥೆಯನ್ನು ಮುಕ್ತ ಕಲಾಪಕ್ಕೆ ಹಾರುತೆರೆದರೆ ಎಲ್ಲವೂ ಸರಿಹೋದೀತು ಎಂಬ ನಂಬಿಕೆ ಸುಳ್ಳಾಗಿದೆ. ಅಧೋರಚನೆ ಜಡವಾಗಿದೆ. ಉತ್ಪಾದಕತೆ ಏರಿಲ್ಲ. ವರಮಾನದ ಏರಿಕೆ ಮೇಲಣ ವರ್ಗಗಳಿಗೆ ಸೀಮಿತವಾಗಿದೆ. ಆಗಿರುವ ಬೆಳವಣಿಗೆಯೂ ಕೆಳಗಿನ ವರ್ಗಕ್ಕೆ ಜಿನುಗಿಲ್ಲ. ಹೀಗಾದೀತೆಂದು ಕನಸು ಕಂಡವರಿಗೆ ಕಠೋರ ಸತ್ಯ ಗೋಚರವಾಗುತ್ತಿದೆ, ಭೋಗವಸ್ತುಗಳ ಹೊಳೆ ಹರಿದಿದೆ. ವಿಸ್ತರಿಸುತ್ತಿರುವ ಮಧ್ಯಮ ವರ್ಗದ ಮಾರುಕಟ್ಟೆಯ ಮೇಲೆ ಉದ್ಯಮಗಳ ಕಣ್ಣು. ಕೆಳಗಿನ ವರ್ಗಗಳ ಕೊಳ್ಳುವ ಶಕ್ತಿ ಕಡಿಮೆಯಾಗಿದೆ. ಸರ್ಕಾರ ಹಂಚುವ ಧಾನ್ಯವನ್ನು ಅಗ್ಗದ ಬೆಲೆಯಲ್ಲೂ ಕೊಳ್ಳುವುದು ಸಾಧ್ಯವಾಗಿಲ್ಲ. ಈಗಂತೂ ಆರ್ಥಿಕ ಹಿಂಜರಿತದ ಚಿಹ್ನೆಗಳು ಪ್ರಬಲವಾಗಿವೆ. ಈ ಬಾರಿ ಶೇ. ೫ರ ಬೆಳವಣಿಗೆ ಸಾಧಿಸಿದರೂ ಅದು ವಿಕ್ರಮವೇ. ೧೯೯೩-೯೭ರಲ್ಲಿ ಉದ್ಯೋಗ ಸೃಷ್ಟಿ ಶೇ. ೧.೧ರ ವಾರ್ಷಿಕ ದರದಲ್ಲಿ ಹೆಚ್ಚಿದರೆ, ೨೦೦೦ದಲ್ಲಿ ಶೇ. ೦.೧೫ಕ್ಕೆ ಕುಸಿದಿದೆ. ವಾರ್ಷಿಕವಾಗಿ ಶೇ. ೨.೫ರ ದರದಲ್ಲಿ ಉದ್ಯೋಗಾರ್ಥಿಗಳ ಸಂಖ್ಯೆ ಬೆಳೆಯುತ್ತಿದೆ. ವರ್ಷಕ್ಕೆ ೬.೭೨ ಲಕ್ಷ ಜನ ಉದ್ಯೋಗಕ್ಕಾಗಿ ಕೈ ಚಾಚಿದರೆ, ಕೇವಲ ಹದಿನೇಳು ಸಾವಿರ ಮಂದಿಗೆ ಸಿಗುತ್ತಿದೆ. ಉಳಿದವರು ಹಳೆಯ ನಿರುದ್ಯೋಗಿಗಳ ಪಡೆಗೆ ಸೇರ್ಪಡೆ. ಸುಮಾರು ಮೂವತ್ತು ಕೋಟಿ ಜನ ಬಡತನದ ರೇಖೆಯ ಕೆಳಗಿದ್ದಾರೆ. ಇದು ಹೆಚ್ಚು ಕಡಿಮೆ ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಇದ್ದ ಅದರ ಜನಸಂಖ್ಯೆಗೆ ಸಮ. ಸರ್ಕಾರ ಈ ವಿಚಾರದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲಾರದಾಗಿದೆ: ದೇಶದಲ್ಲಿ ಉದ್ಯಮಗಳ ಉತ್ಪಾದಕತೆಯನ್ನು (ಪ್ರೊಡಕ್ಟಿವಿಟಿ) ಹೆಚ್ಚಿಸುವುದೇ ಈ ಸಮಸ್ಯೆಯ ಪರಿಹಾರಕ್ಕೆ ಸರಿಯಾದ ಉಪಾಯ ಎಂದು ತಜ್ಞರ ಸಮಿತಿಯೊಂದು ಈಚೆಗೆ ಅಭಿಪ್ರಾಯಪಟ್ಟಿದೆ. ಇದು ಹೇಗೆ ಸಾಧ್ಯ ? ಎಲ್ಲ ನಿಯಂತ್ರಣಗಳನ್ನೂ ಒಮ್ಮೆಗೇ ತೆಗೆದುಹಾಕಿಬಿಡಿ. ಸರ್ಕಾರವೂ ರಾಜಕಾರಣಿಗಳೂ ತಮ್ಮ ಮುಷ್ಟಿಯಲ್ಲಿ ಹಿಡಿದಿರುವ ಅಧಿಕಾರಗಳನ್ನೂ ಸವಲತ್ತುಗಳನ್ನೂ ಬಿಟ್ಟುಕೊಡಲಿ ಎನ್ನುವುದು ಅದರ ಸಲಹೆ. ಇದಕ್ಕೆ ವ್ಯವಸ್ಥೆ ಸಿದ್ಧವಿಲ್ಲ. ಹೀಗೆ ಮಾಡಿದ ಮಾತ್ರಕ್ಕೆ ಎಲ್ಲ ಸಲೀಸು ಎಂಬುದು ಯಥಾರ್ಥದೂರ, ಸಮಸ್ಯೆಯ ಸರಳೀಕರಣ. ನಿರ್ವಾತ ವಲಯಕ್ಕೆ ನುಗ್ಗುವ ಗಾಳಿಯ ರಭಸ ಎಲ್ಲವನ್ನೂ ಕೊಚ್ಚಿಹಾಕಿ ಬಿಡುತ್ತದೆ. ಇದು ಅನಾಹುತಕ್ಕೆ ಹಾದಿ. **ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ತನ್ನ ವಿಶಿಷ್ಟ ಸಮಸ್ಯೆಗಳನ್ನು ಸರ್ಕಾರ ಸಮರ್ಥವಾಗಿ ಮಂಡಿಸಿ, ಭಾರತದಂಥ ಅಭಿವೃದ್ಧಿಶೀಲ ದೇಶದ ಅಭಿವೃದ್ಧಿಯ ಹೆಜ್ಜೆಗಳು ದೃಢವಾಗಿರುವಂತೆ ಭರವಸೆ ದೊರಕಿಸಿಕೊಡುವ ಕ್ರಮಗಳಿಗಷ್ಟೇ ಒಪ್ಪಿಗೆ ನೀಡುತ್ತ, ಜಾಗತಿಕ ಮಾರುಕಟ್ಟೆಯ ವಿಕಾಸಕ್ಕೆ ಮೊದಲು ಎಲ್ಲ ದೇಶಗಳ ಅರ್ಥವ್ಯವಸ್ಥೆಗಳ ಸಮಾನ ಬೆಳವಣಿಗೆಯ ಸಾಧನೆ ಅಗತ್ಯವೆಂಬುದಕ್ಕೆ ಮಾನ್ಯತೆ ದೊರಕಿಸಿಕೊಂಡು ಈ ನಿಟ್ಟಿನಲ್ಲಿ ಸುಯೋಜಿತ ಕ್ರಮಗಳನ್ನು ಜಾರಿಗೆ ತರುವ ವಾತಾವರಣವನ್ನು ಮೂಡಿಸಬೇಕು.** ಇದು ಸಾಧ್ಯವಾದೀತೆ ? ಸಾವಿರ ವರಹದ ಪ್ರಶ್ನೆಯಿದು.

**ಪ್ರೊ॥ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್**
ನಂ. ೪೧, ೬ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು - ೫೭೦ ೦೦೯

# ಜಾಗತೀಕರಣದ ಜಾರುಬಂಡೆ

**ಪ್ರೊ॥ ಬರಗೂರು ರಾಮಚಂದ್ರಪ್ಪ**

> ಜಾಗತೀಕರಣವು ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ವಲಯದಲ್ಲಿ ಉಂಟುಮಾಡುತ್ತಿರುವ ಪರಿಣಾಮ ಮತ್ತು ಒಡ್ಡುತ್ತಿರುವ ಸವಾಲುಗಳು ನಕಾರಾತ್ಮಕ ನೆಲೆಯನ್ನು ಪಡೆದಿವೆ. ನೆಲಮೂಲ ಚಿಂತನೆಗಳಿಗೆ ಧಕ್ಕೆ ತರುವಷ್ಟು ಪ್ರಬಲವಾಗಿವೆ. ವಿಜ್ಞಾನ-ತಂತ್ರಜ್ಞಾನಗಳನ್ನು ಒಳಗೊಂಡಂತೆ ಜ್ಞಾನದ ದಿಕ್ಕನ್ನು ನಿಯಂತ್ರಿಸುವಷ್ಟು ಬಲಾಢ್ಯವಾಗಿರುವ ಜಾಗತೀಕರಣಕ್ಕೆ ತಕ್ಕ ಉತ್ತರ ಕೊಡುವ ಪ್ರಾಣಶಕ್ತಿ ನಮ್ಮ ಸಮಾಜದ ಸಂವೇದನಾಶೀಲ ವಲಯಗಳಿಗಿದೆ. ಅದು ಕ್ರೋಡೀಕೃತಗೊಳ್ಳುವ ಪ್ರಕ್ರಿಯೆಗಳೂ ಪ್ರಾರಂಭವಾಗಿವೆ. ಸರ್ವರೋಗ ಸಂಜೀವಿನಿಯೆಂಬಂತೆ ಬಿಂಬಿತವಾಗುತ್ತಿರುವ ಜಾಗತೀಕರಣದ ಹುನ್ನಾರಗಳನ್ನು ತಾತ್ವಿಕವಾಗಿ ಮತ್ತು ತಾರ್ಕಿಕವಾಗಿ ಎದುರಿಸುವ ನಿರಂತರ ಕ್ರಿಯೆಯಲ್ಲಿ ತೊಡಗಿಸಿಕೊಳ್ಳುತ್ತ ಹೋಗುವುದು ಇಂದಿನ ಅಗತ್ಯವಾಗಿದೆ.

ಇಪ್ಪತ್ತನೆಯ ಶತಮಾನದ ಕೊನೆಯ ದಶಕವು ನಮ್ಮ ದೇಶಕ್ಕೆ ದುರಂತದ ದಿಡ್ಡಿ ಬಾಗಿಲು ತೆಗೆದ ಕಾಲಘಟ್ಟ. ಇದರರ್ಥ ಈ ಕೊನೆಯ ದಶಕದವರೆಗೆ ನಮ್ಮ ದೇಶವು ಸಕಲ ಸಮೃದ್ಧಿ – ಅಭಿವೃದ್ಧಿಗಳ ಅನುಭವ ಪಡೆಯಿತೆಂದು ಖಂಡಿತ ಅಲ್ಲ. ಏನಿಲ್ಲವೆಂದರೂ ಇಪ್ಪತ್ತನೆಯ ಶತಮಾನದ ಮೊದಲ ಒಂಬತ್ತು ದಶಕಗಳಲ್ಲಿ ಹೊಸ ಚರ್ಚೆ, ಚಿಂತನೆ ಮತ್ತು ಚಲನಶೀಲತೆಗಳು ತಮ್ಮದೇ ಆದ ಕೊಡುಗೆ ನೀಡಿವೆ. ಹೊಸ ವಾಗ್ವಾದಗಳನ್ನು ಹುಟ್ಟುಹಾಕಿವೆ; ನೆಲಮುಟ್ಟುವ ಮನೋಧರ್ಮವನ್ನು ಬೆಳೆಸಿವೆ. ಸ್ವಾತಂತ್ರ್ಯದ ಸಂಭ್ರಮ ಮತ್ತು ಸಂಕಟಗಳೆರಡನ್ನೂ ಏಕಕಾಲಕ್ಕೆ ಅನುಭವಿಸುವ ಅಸಾಧಾರಣ ಅವಕಾಶವು ಈ ಕಾಲಘಟ್ಟದಲ್ಲಿ ಲಭ್ಯವಾಗಿದೆ. ಪ್ರಜಾಪ್ರಭುತ್ವದ ಏರಿಳಿತಗಳಲ್ಲಿ ನಮ್ಮ ನೆಲ ಹದಗೊಳ್ಳುತ್ತ ಬಂದಿದೆ. ನೀರು-ನೆಲಗಳನ್ನು ಎಲ್ಲರ ನೆಲೆಯಾಗಿಸುವ ಪ್ರಯತ್ನಗಳು ನಡೆದಿವೆ. ಹೀಗೆ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಕೊರತೆಗಳ ನಡುವೆಯೂ ಮುನ್ನಡೆಯ ಮನೋಭೂಮಿಕೆ ಸಿದ್ಧವಾಗಿದ್ದು ಇಪ್ಪತ್ತನೆಯ ಶತಮಾನದ ಒಂದು ಮುಖ್ಯ ಕೊಡುಗೆಯೆಂದೇ ಹೇಳಬೇಕು. ಶೈಕ್ಷಣಿಕವಾಗಿ ಅಕ್ಷರನ್ಯಾಯ, ಸಾಮಾಜಿಕವಾಗಿ ಸಾಮಾಜಿಕ ನ್ಯಾಯ, ಆರ್ಥಿಕವಾಗಿ ಭೂಸುಧಾರಣೆ ಮತ್ತು ಬ್ಯಾಂಕ್ ರಾಷ್ಟ್ರೀಕರಣದಂತಹ ದಿಟ್ಟ ಕ್ರಮಗಳು ಸಾಧ್ಯವಾದದ್ದು ಇಪ್ಪತ್ತನೆಯ ಶತಮಾನದಲ್ಲಿ ಎಂಬುದನ್ನು ಗಮನಿಸಬೇಕು. ಸಾಂಸ್ಕೃತಿಕವಾಗಿಯೂ ಇದು ಸಾರ್ಥಕ ಕಾಲಘಟ್ಟ. ಹೊಸ ಚಿಂತನೆ ಹಾಗೂ ಸ್ಥಿತ್ಯಂತರಗಳಿಂದ ಕೂಡಿದ ಸಾಂಸ್ಕೃತಿಕ ಲೋಕ ಅನನ್ಯತೆ ಹಾಗೂ ವಿಸ್ಮಯಗಳನ್ನು ಮೂಡಿಸಿದ ಮಹತ್ವದ ಬೆಳವಣಿಗೆಗಳು ಅಸಾಧಾರಣವಾಗಿವೆ. ದೇಶಭಾಷೆಗಳಲ್ಲಿ ಮೂಡಿದ ಆತ್ಮವಿಶ್ವಾಸ ಮತ್ತು ಅಭಿವ್ಯಕ್ತಿ ವಿನ್ಯಾಸಗಳೂ ಒಟ್ಟಾರೆ ಅಪೂರ್ವವಾಗಿವೆ; ಹೊಸ ಸಂವೇದನೆಯ ನೆಲೆಗಳು ಅನಾವರಣಗೊಂಡು ಅಜ್ಞಾತ ಲೋಕಗಳು ಆಕಾರ ಪಡೆಯುತ್ತ ಬಂದಿವೆ.

ಆದರೆ, ಪ್ರಾರಂಭದಲ್ಲಿ ಹೇಳಿದಂತೆ ಇದೇ ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ ಎರಡು ನೆಲೆಗಳು ತಂತಮ್ಮ ಅತಿರೇಕಗಳ ಮೂಲಕ ದೇಶಕ್ಕೆ ದುರಂತದ ದಿಡ್ಡಿ ಬಾಗಿಲು ತೆರೆದವು. ಆ ಎರಡು ನೆಲೆಗಳು – ೧. ಕೋಮುವಾದದ ಕರಾಳತೆ, ೨. ಜಾಗತೀಕರಣದ ಆಕ್ರಮಣಶೀಲತೆ.

ನಮ್ಮ ದೇಶಕ್ಕೆ ಕೋಮುವಾದ ಹೊಸದೇನಲ್ಲ. ಧಾರ್ಮಿಕ ಮೂಲಭೂತವಾದದ ಕರಾಳರೂಪವಾಗಿ ಹೊರಹೊಮ್ಮಿದ ಕೋಮುವಾದವು ಮಂದಿರ-ಮಸೀದಿಗಳ ಘರ್ಷಣೆಯಲ್ಲಿ ಲಕ್ಷ್ಮಣರೇಖೆಯನ್ನು ದಾಟಿ ರಾಮನಾಮ ಸ್ಮರಣೆಯ ಮೂಲಕ ಶ್ರೀರಾಮನನ್ನೇ ಆತಂಕಕಾರಿಯಾಗಿಸಿತು. ಮಸೀದಿಯ ಧ್ವಂಸವು ನಮ್ಮ ದೇಶದ ಕರಾಳ ಅಧ್ಯಾಯವಾಯಿತು. ಶಾಂತಿ, ಸೌಹಾರ್ದಗಳೇ ನಮ್ಮ ದೇಶದ ಮುಖ್ಯ ಮೌಲ್ಯಗಳೆಂಬ ಪ್ರತಿಪಾದನೆಯೇ ಪ್ರಶ್ನಾರ್ಹವಾಯಿತು. ಹಿಂದೂ ಕೋಮುವಾದದ ಫಲವಾಗಿ ನಮ್ಮ ದೇಶದ ಆದ್ಯತೆಗಳೇ ಬದಲಾಗತೊಡಗಿದವು: ಸಾಮಾಜಿಕ ನ್ಯಾಯ, ಆರ್ಥಿಕ ಅಭಿವೃದ್ಧಿ, ಸಮಾನತೆ ಮುಂತಾದ ಪರಿಭಾಷೆಯು ಪರಕೀಯವಾಗುತ್ತ ಹಿಂದೂ ಪುನರುತ್ಥಾನವೇ ರಾಷ್ಟ್ರೀಯತೆಯೆಂದೂ ಮಂದಿರ ನಿರ್ಮಾಣವು ಇಡೀ ರಾಷ್ಟ್ರದ ಸ್ವಾಭಿಮಾನ ಹಾಗೂ ಪ್ರತಿಷ್ಠೆಯ ಪ್ರಶ್ನೆಯೆಂದೂ ಪರಿಗಣಿಸಲಾಯಿತು. ಬಹುಭಾಷೆ, ಬಹುಧರ್ಮ, ಬಹುಸಂಸ್ಕೃತಿಗಳ ದೇಶವಾದ ಇಂಡಿಯಾವನ್ನು ಏಕಧರ್ಮದ ರಾಷ್ಟ್ರವನ್ನಾಗಿಸುವ ಹುನ್ನಾರ ಪ್ರಬಲವಾಗಿ, ಜಾತ್ಯಾತೀತ ಕಲ್ಪನೆಯು ವ್ಯಂಗ್ಯದ ವಸ್ತುವಾಯಿತು. ಹಿಂದೂ ಮೂಲಭೂತವಾದವಷ್ಟೇ ಅಲ್ಲ, ಮುಸ್ಲಿಮರಲ್ಲಿರುವ ಮೂಲಭೂತವಾದಿಗಳೂ 'ಜಾಗೃತ'ರಾಗಿ ತಮ್ಮ ಕೊಡುಗೆಯನ್ನು ನೀಡತೊಡಗಿದರು. ಅಲ್ಪಸಂಖ್ಯಾತರ ಆತಂಕಗಳನ್ನು ಬೇರೊಂದು ನೆಲೆಯಿಂದಲೇ ಅರ್ಥಮಾಡಿಕೊಳ್ಳಬೇಕೆಂಬ ಬದ್ಧತೆಯನ್ನಿಟ್ಟುಕೊಂಡು, ಎಲ್ಲ ಧರ್ಮೀಯರ ಮೂಲಭೂತವಾದವನ್ನು ವಿರೋಧಿಸಬೇಕಾದ್ದು ಅನಿವಾರ್ಯ. ಹೀಗಾಗಿ ಎಲ್ಲ ಹಿಂದೂಗಳೂ ಎಲ್ಲ ಮುಸ್ಲಿಮರೂ ಸಾರಾಸಗಟಾಗಿ ಮೂಲಭೂತವಾದಿಗಳಲ್ಲ ಎಂಬ ಚರ್ಚೆಗಳಿಗೆ ಒತ್ತಾಸೆ ಒದಗಿತು. ಯಾವುದೇ ಧರ್ಮದ ಮೂಲ ಧಾರ್ಮಿಕ ಆಶಯಗಳಿಗೂ ಅನಂತರ ಆಯಾ ಧರ್ಮ ಹಾಗೂ ಧಾರ್ಮಿಕತೆಗಳನ್ನು 'ಅಪಹರಣ' ಮಾಡಿದ ವಕ್ತಾರರ ಅಪೇಕ್ಷೆಗಳಿಗೂ ಸಾಕಷ್ಟು ಅಂತರವಿದೆ. ಈ ದೃಷ್ಟಿಯಿಂದ ಆರೆಸ್ಸೆಸ್-ಭಜರಂಗದಳಗಳು ಮತ್ತು ಅಸಂಖ್ಯಾತ ಅಮಾಯಕ ಹಿಂದೂ ನಾಮಾಂಕಿತ ಸಾಮಾನ್ಯರು ಬೇರೆಯೇ ಆಗಿರುತ್ತಾರೆ. ಅಂತೆಯೇ ಕುರಾನ್ ಮತ್ತು ಲಾಡೆನ್ ಬೇರೆಯಾಗಿರುತ್ತಾರೆ. ಅದೇನೇ ಇರಲಿ ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿ ತನ್ನ ಕಬಂಧ ಬಾಹುಗಳನ್ನು ಚಾಚುತ್ತ ಬೀದಿಗೆ ಬಂದ ಕೋಮುವಾದ ಇಂದು ವಿವಿಧ ಬಣ್ಣಗಳಲ್ಲಿ ಬೆಚ್ಚಿಬೀಳಿಸುತ್ತಿದೆ. ಕೆಲವರಲ್ಲಿ 'ಭಯೋತ್ಪಾದಕ ಬಾಯಿ'ಯಾಗಿ ಮತ್ತೆ ಕೆಲವರಲ್ಲಿ 'ಭಯೋತ್ಪಾದಕ ಬಂದೂಕ'ವಾಗಿ ಕಾಣಿಸಿಕೊಳ್ಳುತ್ತಿದೆ.

ಧಾರ್ಮಿಕ ಭಯೋತ್ಪಾದಕತೆ ಒಂದು ಕಡೆಯಾದರೆ, ಜಾಗತೀಕರಣದ ಜಾರುಬಂಡೆಯಲ್ಲಿ ಬಂದ ಆರ್ಥಿಕ ಭಯೋತ್ಪಾದಕತೆ ಇನ್ನೊಂದು ಕಡೆ. ನಮ್ಮ ದೇಶವು ಒಪ್ಪಿಕೊಂಡಿದ್ದ ಮಿಶ್ರ ಆರ್ಥಿಕ ಪದ್ಧತಿಯನ್ನು ಬುಡಮೇಲು ಮಾಡಿ, ಖಾಸಗೀಕರಣವೊಂದೇ ಮೋಕ್ಷಾರ್ಥಸಾಧನವೆಂದು ಪ್ರಚುರಪಡಿಸುವ ಜಾಗತೀಕರಣ ಪ್ರಕ್ರಿಯೆಯು ಪ್ರಾರಂಭವಾದದ್ದು ಕಳೆದ ಶತಮಾನದ ಕೊನೆಯ ದಶಕದ ಆರಂಭದಲ್ಲಿ ಎಂಬುದನ್ನಿಲ್ಲಿ ಗಮನಿಸಬೇಕು. ಯಾಕೆಂದರೆ ಕೋಮುವಾದದ ಕರಾಳತೆ ಮತ್ತು ಜಾಗತೀಕರಣದ ಆಕ್ರಮಣಶೀಲತೆಗಳು ಸರಿಸುಮಾರು ಒಂದೇ ಕಾಲಘಟ್ಟದಲ್ಲಿ ಪ್ರಬಲವಾಗಿವೆ. ಮಿಶ್ರ ಅರ್ಥಿಕ ಪದ್ಧತಿಯಲ್ಲಿ ಯಾವುದೇ ಖಾಸಗಿ ಮೂಲದ ಸ್ವದೇಶಿ ಅಥವಾ ವಿದೇಶಿ ಬಂಡವಾಳವು ಸ್ವಾಮ್ಯ ಸ್ಥಾಪಿಸುವ ಪ್ರಮಾಣದಲ್ಲಿ ಇರುವುದಿಲ್ಲ. ಕಾರ್ಖಾನೆಯೊಂದಕ್ಕೆ ಬಂಡವಾಳ ತೊಡಗಿಸಿದರೆ ನಮ್ಮ ಸರ್ಕಾರದ ಬಂಡವಾಳವು ಶೇ. ೫೧ಕ್ಕಿಂತ ಹೆಚ್ಚು ಇರುವುದು ಮತ್ತು ಆ ಮೂಲಕ ನಿಯಂತ್ರಣವನ್ನು ಸಾಧಿಸುವುದು ನೀತಿಯಾಗಿತ್ತು. ಜಾಗತೀಕರಣವು ಈ ನೀತಿಯನ್ನು ನುಚ್ಚುನೂರು ಮಾಡಿತು. ಇದು ದೇಶದ ದೊಡ್ಡ ಆರ್ಥಿಕ ದುರಂತ.

'ಜಾಗತೀಕರಣ' ಎನ್ನುವುದು ಇಡೀ ಜಗತ್ತಿನ ಗುಣಲಕ್ಷಣಗಳನ್ನು ಪಡೆದಿದೆಯೆ ಎಂದು ನೋಡಿದರೆ ನಕಾರಾತ್ಮಕ ಉತ್ತರ ದೊರಕುತ್ತದೆ. ಇದು ಅಮೆರಿಕ ಪ್ರಾಯೋಜಿತ ಆರ್ಥಿಕ ಪದ್ಧತಿ. ಸೋವಿಯತ್ ಯೂನಿಯನ್ ಪತನಗೊಂಡ – ಅಥವಾ ಪತನಗೊಳಿಸಿದ – ನಂತರ, ಇಡೀ ಜಗತ್ತಿನಲ್ಲಿ ಅಮೆರಿಕವು ಏಕೈಕ ಪ್ರಬಲ ದೇಶವಾಗಿ ತನ್ನ ನೆಲೆಯನ್ನು ಭದ್ರಪಡಿಸಿಕೊಂಡಿತು. ಅಭಿವೃದ್ಧಿಶೀಲ ರಾಷ್ಟ್ರಗಳ ಕಣ್ಣಿಗೆ ಅಮೆರಿಕವೇ ಜಗತ್ತಾಗಿ ಕಾಣಿಸತೊಡಗಿತು. ಆದ್ದರಿಂದ ಅಮೆರಿಕಾ ಪ್ರಾಯೋಜಿತ ಆರ್ಥಿಕ ಅಂಶಗಳು 'ಜಾಗತೀಕರಣ'ವೆಂಬ ಉದ್ಘೋಷದೊಂದಿಗೆ ಊಳಿಡುತ್ತ ಇಂಡಿಯಾದೊಳಗೆ ದಾಳಿಯಿಡತೊಡಗಿದಾಗ, ನಮ್ಮ ದೇಶದ ಧುರೀಣರು, ಅದನ್ನು ದಾಳಿಯೆಂದು ಭಾವಿಸದೆ ದಾನಶೂರರ ಆಗಮನವೆಂದು ನಂಬುತ್ತ ಹಾಗೂ ನಂಬಿಸುತ್ತ ವಂದಿಮಾಗಧರ ವೇಷ ಧರಿಸಿದರು. ಉಳಿದ ಅಭಿವೃದ್ಧಿಶೀಲ ದೇಶಗಳು ಇದಕ್ಕಿಂತ ಭಿನ್ನವಾಗಲಿಲ್ಲವಾದ್ದರಿಂದ 'ಅಮೆರಿಕೀಕರಣ'ವೇ 'ಜಾಗತೀಕರಣ'ವೆಂದು ಪ್ರಸಿದ್ಧವಾಯಿತು. ಆರ್ಥಿಕ ಶಕ್ತಿಯ ಪ್ರಬಲ ವಕ್ತಾರರು ಹೇಳಿದ್ದು ವೇದವಾಕ್ಯವಾಗಿ 'ಆರ್ಥಿಕ ಸುಧಾರಣೆ'ಯೆಂಬ ಜಡ ಪರಿಭಾಷೆಯೇ ಹೊಸ ಪರಿಭಾಷೆಯಾಗುವ ವಿಪರ್ಯಾಸ ತಲೆದೋರಿತು. ಈ 'ಆರ್ಥಿಕ ಸುಧಾರಣೆ'ಯ ಪರಿಕಲ್ಪನೆಯು ಇಲ್ಲೀವರೆಗೆ ನಮ್ಮ ದೇಶವು ನಂಬಿದ್ದ ಆದ್ಯತೆಗಳಿಗೆ ಧಕ್ಕೆ ತಂದದ್ದಷ್ಟೇ ಅಲ್ಲ, ಸರ್ಕಾರದ ನೀತಿ ನಿರೂಪಣೆಯನ್ನೂ ನಿಯಂತ್ರಿಸತೊಡಗಿತು.

ನಮ್ಮ ದೇಶವು ಆರ್ಥಿಕ ಸಂಕಷ್ಟದಲ್ಲಿರುವುದರಿಂದ 'ಜಾಗತೀಕರಣ'ಕ್ಕೆ ಒಗ್ಗಿಕೊಳ್ಳುವುದು ಅನಿವಾರ್ಯವೆಂಬ ಅಭಿಪ್ರಾಯವನ್ನು ಅಂದಿನ ಕಾಂಗ್ರೆಸ್ ಆಡಳಿತಗಾರರಿಂದ ಆರಂಭಿಸಿ ಇಂದಿನ ಬಿ.ಜೆ.ಪಿ. ಆಡಳಿತಗಾರರವರೆಗೆ ಬಾಯಿಪಾಠ ಒಪ್ಪಿಸತೊಡಗಿದರು. ಹೀಗಾಗಿ ಅಮೆರಿಕೀಕರಣವೇ ಜಾಗತೀಕರಣವೆಂದು ನಂಬಿಸಲ್ಪಟ್ಟಿತು.

ಕೈಗಾರಿಕೀಕರಣ ಹಾಗೂ ಜಾಗತೀಕರಣಗಳು ಪ್ರತ್ಯೇಕ ಪರಿಕಲ್ಪನೆಗಳು. ಎರಡೂ ಒಂದೇ ಎಂಬುದಾಗಿ ಅಥವಾ ಕೈಗಾರಿಕೀಕರಣದ ವಿಸ್ತೃತಭಾಗವೇ ಜಾಗತೀಕರಣ ಎಂಬುದಾಗಿ ಪ್ರತಿಪಾದಿಸುವುದುಂಟು. ಕೆಲವು ಚರ್ಚೆಗಳಲ್ಲಿ ಇಂಥ ಪ್ರತಿಪಾದನೆಯ ಅಂಶಗಳು ಇಣುಕುತ್ತಿರುವುದನ್ನು ನಾನು ಕಂಡಿದ್ದೇನೆ. ನಿಜ; ಕೈಗಾರಿಕೀಕರಣ ಮತ್ತು ಜಾಗತೀಕರಣ – ಎರಡೂ ನೆಲೆಗಳಿಗೆ ಬಂಡವಾಳ ತೊಡಗಿಸುವಿಕೆಯು ಒಂದು ಮುಖ್ಯ ಕ್ರಿಯೆ. ಆದರೆ ಪರಿಣಾಮದಲ್ಲಿ ಸಾಕಷ್ಟು ಅಂತರವಿರುವುದನ್ನು ಕಾಣಬಹುದು.

ಕೈಗಾರಿಕೀಕರಣವು ಕೆಲವು ಸಕಾರಾತ್ಮಕವಾದ ಬೆಳವಣಿಗೆಗಳಿಗೆ ಕಾರಣವಾಯಿತು. ಅವುಗಳನ್ನು ಹೀಗೆ ವಿವರಿಸಬಹುದು:

೧. ನಮ್ಮ ದೇಶದ ಉತ್ಪಾದನಾ ವಿಧಾನವು ಮೂಲತಃ ಕುಲಕಸುಬುಗಳಿಂದ ಕೂಡಿದ್ದನ್ನು ಇಲ್ಲಿ ಗಮನಿಸಬಹುದು. ನಾನು ಗುಡಿಕೈಗಾರಿಕೆ ಬೇರೆ, ಕುಲಕಸುಬು ಬೇರೆ ಎಂದು ಭಾವಿಸುತ್ತೇನೆ. ಕುಲಕಸುಬು, ಗುಡಿಕೈಗಾರಿಕೆಯ ಒಂದು ಭಾಗವಾಗಬಹುದು. ಆದರೆ ಗುಡಿಕೈಗಾರಿಕೆಗಳು ಕುಲ ಮೂಲ ಕಸುಬಿನ ಸ್ವರೂಪವನ್ನು ಉಳಿಸಿಕೊಳ್ಳಬೇಕಾಗಿಲ್ಲ. ಅಂದರೆ ಆಯಾಕುಲಕ್ಕೆ ಆಯಾ ಕಸುಬು ನಿಶ್ಚಿತ ಎಂಬ ಅಂಶ ಗುಡಿಕೈಗಾರಿಕೆಗಳಲ್ಲಿ ಇಲ್ಲಿ. ಗ್ರಾಮೀಣ ಮೂಲ ಸಂಪನ್ಮೂಲವನ್ನು ಆಧರಿಸಿ, ಕಸುಬಿಗೆ ಮೂಲವಾದ ಕುಲದ ಕಟ್ಟನ್ನು ಮೀರಿ ಗುಡಿ ಕೈಗಾರಿಕೆಯು ಬೆಳೆಯಬಹುದು. ಕೈಗಾರಿಕೀಕರಣದಿಂದ ಗುಡಿಕೈಗಾರಿಕೆಯ ಕಲ್ಪನೆಗೆ ಸ್ವಲ್ಪ ಹಿನ್ನಡೆಯಾಗಬಹುದಾದರೂ ಕೈಗಾರಿಕೀಕರಣವು ಕುಲಮೂಲ ಕಸುಬಿನ ಕಲ್ಪನೆಯನ್ನು ದೊಡ್ಡ ಪ್ರಮಾಣದಲ್ಲಿ ಉಲ್ಲಂಘಿಸಿದ್ದು ನಮ್ಮ ದೇಶದ ಮಟ್ಟಿಗೆ ಮುಖ್ಯ ಬೆಳವಣಿಗೆ. ಕಸುಬಿನ ಮೂಲಕ ಕುಲದ ಕಟ್ಟನ್ನು ಗಟ್ಟಿಗೊಳಿಸುವ ಕ್ರಿಯೆಗೆ ಕೈಗಾರಿಕೀಕರಣದಿಂದ ಪೆಟ್ಟುಬಿದ್ದಿತು. ಎಲ್ಲ ಕುಲದವರೂ ಒಂದು ನಿರ್ದಿಷ್ಟ ಉತ್ಪಾದನಾ ವಿಧಾನದಲ್ಲಿ ಭಾಗವಹಿಸುವಂತಾಯಿತು.

೨. ಕೈಗಾರಿಕೀಕರಣದ ಫಲವಾಗಿ 'ಸಾಮೂಹಿಕ ಉತ್ಪಾದನಾ ವಿಧಾನ' ಜಾರಿಗೆ ಬಂತು. ಸಾವಿರಾರು ಜನರು ಒಂದೇ ಸೂರಿನಡಿ ಕೆಲಸ ಮಾಡಲು ಅವಕಾಶ ಒದಗಿದ್ದರ ಪರಿಣಾಮವಾಗಿ ಉದ್ಯೋಗದ ಅವಕಾಶಗಳು ಹೆಚ್ಚಾದವು. ಗ್ರಾಮೀಣ ವಿದ್ಯಾವಂತರಿಗೂ ಕೈಗಾರಿಕೆಗಳಲ್ಲಿ ಉದ್ಯೋಗ ಲಭ್ಯವಾಯಿತು. ನಗರ ಮತ್ತು ಗ್ರಾಮೀಣ ಜನರು ಒಟ್ಟಿಗೇ ಕೆಲಸ ಮಾಡುವುದರ ಮೂಲಕ 'ಮಧ್ಯಮ ವರ್ಗ'ವು ನಿರ್ದಿಷ್ಟರೂಪದಲ್ಲಿ ಬೆಳೆಯತೊಡಗಿತು.

೩. ಕೈಗಾರಿಕೀಕರಣದಿಂದ ನಮ್ಮ ದೇಶದ ಜಾತಿವ್ಯವಸ್ಥೆ ಸಾಕಷ್ಟು ಸಡಿಲಗೊಳ್ಳುವಂತಾಗಿದೆ. ಸಾಮೂಹಿಕ ಉತ್ಪಾದನೆಯ ತಾಣಗಳಾದ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಸಂದರ್ಭದಲ್ಲಾದರೂ ಅಸ್ಪೃಶ್ಯತೆಯನ್ನು ಆಚರಿಸಲು ಸಾಧ್ಯವಾಗದಂತಹ ಸನ್ನಿವೇಶ ನಿರ್ಮಾಣವಾಗಿದೆ. ಕೆಲಸ ಮಾಡುವ ಸಂದರ್ಭದಲ್ಲಿ ಪರಸ್ಪರ ಮುಟ್ಟುವುದೇ ಇಲ್ಲವೆಂದು ಹಟ ಮಾಡಲಾಗದು. ರೈಲು, ಬಸ್ಸುಗಳಲ್ಲಿ ಪ್ರಯಾಣಿಸುವಾಗ ಜಾತಿಯನ್ನು ಕೇಳಿ ಪಕ್ಕದಲ್ಲಿ ಕೂತುಕೊಳ್ಳುವ ಬಗ್ಗೆ ನಿರ್ಧರಿಸಲಾಗದು. ಹೀಗೆ ಸಹಜ 'ಸ್ಪರ್ಶನ್ಯಾಯ'ವೊಂದು ಲಭ್ಯವಾಗುವಂತಾಗಿದೆ.

೪. ಕೈಗಾರಿಕೀಕರಣವು ಸಾಂಸ್ಕೃತಿಕ ಸ್ಥಿತ್ಯಂತರಗಳಿಗೂ ಕಾರಣವಾಗಿದೆ. ಶ್ರಮಜೀವಿಗಳ ಮಹತ್ವವನ್ನು ಸಾಂಸ್ಕೃತಿಕ ಲೋಕವು ಕಡೆಗಣಿಸಬಾರದೆಂಬ ಚಿಂತನೆಗೆ ಕಾರಣವಾದದ್ದು ಕೈಗಾರಿಕೀಕರಣ. ದುಡಿಯುವ ಜನರ ದನಿಯಾಗಿ ಸಾಹಿತ್ಯ ರೂಪುಗೊಳ್ಳಲು ಒತ್ತಾಸೆಯಾದ ಅನೇಕ ಅಂಶಗಳು ಕೈಗಾರಿಕೀಕರಣದಲ್ಲಿ ಅಂತರ್ಗತವಾಗಿದ್ದವು. ಕೈಗಾರಿಕೀಕರಣದ ಸಂದರ್ಭದಲ್ಲಿ ಅನ್ಯಸಂಸ್ಕೃತಿಗಳ ಪ್ರಭಾವ ಗಾಢವಾಯಿತಾದರೂ ಅದಕ್ಕೆ ಕೈಗಾರಿಕೀಕರಣವೊಂದೇ ಕಾರಣವಲ್ಲ. ಅಲ್ಲದೆ, ಆಗ ದೇಶೀಯತೆಯನ್ನು ಬಿಟ್ಟುಕೊಡದ ಆಧುನಿಕ ವಿನ್ಯಾಸಗಳು ರೂಪುಗೊಳ್ಳತೊಡಗಿದವೇ ಹೊರತು ಅನ್ಯದೇಶೀಯತೆಗೆ ಶರಣಾಗಲಿಲ್ಲ. ಅದೊಂದು ಸಂಸ್ಕೃತಿ ಸಂಕರದ ಕಾಲ ಎಂದರೆ ಸರಿಯಾದೀತು.

೫. ಕೈಗಾರಿಕೀಕರಣವು ಮೊದಲೇ ಪ್ರಸ್ತಾಪಿಸಿದ ಮಿಶ್ರ ಅರ್ಥಿಕಪದ್ಧತಿಗೆ ವಿರುದ್ಧವಾಗಿರಲಿಲ್ಲ. ಈ ನೆಲದ ಕಾನೂನಿಗೆ ಬದ್ಧವಾಗಿಯೇ ಸಂವಿಧಾನಾತ್ಮಕ ಸಾರ್ವಭೌಮತ್ವದ ಚೌಕಟ್ಟಿನಲ್ಲೇ ಕೈಗಾರಿಕೀಕರಣ ಪ್ರಕ್ರಿಯೆ ನಡೆಯುತ್ತ ಬಂದಿತು.

ಆದರೆ ಜಾಗತೀಕರಣವು ನಮ್ಮ ದೇಶದ ಸಂವಿಧಾನಾತ್ಮಕ ಸಾರ್ವಭೌಮತ್ವಕ್ಕೆ ಧಕ್ಕೆ ತರುತ್ತದೆ. ಯಾಕೆಂದರೆ ಅದು ನಮ್ಮ ದೇಶವು ಬಹುಕಾಲದಿಂದ ಒಪ್ಪಿದ್ದ ಮಿಶ್ರ ಆರ್ಥಿಕ ಪದ್ಧತಿಯನ್ನು ಉಲ್ಲಂಘಿಸಿರುವುದಷ್ಟೇ ಅಲ್ಲ, ಆರ್ಥಿಕ ನೀತಿ ನಿರೂಪಣೆಯನ್ನು ತಾನೇ ಮಾಡುತ್ತಿದೆ. ಯಾರಿಗೆ ಸಬ್ಸಿಡಿ ಕೊಡಬೇಕು ಅಥವಾ ಕೊಡಬಾರದು ಎಂಬ ಸಣ್ಣ ಅಂಶದಿಂದ ಹಿಡಿದು ಸಾಲದ ಷರತ್ತುಗಳನ್ನು ವಿಶ್ವಬ್ಯಾಂಕ್ ಹಾಕುತ್ತದೆ. ನಮ್ಮ ಸಂವಿಧಾನಕ್ಕೆ ಶ್ರೀಮತಿ ಇಂದಿರಾ ಗಾಂಧಿಯವರ ಆಡಳಿತಾವಧಿಯಲ್ಲಿ ಸೇರಿದ ಸಮಾಜವಾದಿ ಪರಿಕಲ್ಪನೆಗೆ ಜಾಗತೀಕರಣದಿಂದ ಬೆಲೆಯೇ ಇಲ್ಲದಂತಾಗಿದೆ; ನಮ್ಮ ದೇಶದಲ್ಲಿ ತಳ ಊರುವ ವಿದೇಶಿ ಕಂಪನಿಗಳಿಗೆ ಸಂವಿಧಾನ ಒಪ್ಪಿರುವ ಮೀಸಲಾತಿ ನೀತಿ ಅನ್ವಯವಾಗುವುದಿಲ್ಲ. ಜಾಗತೀಕರಣವೆನ್ನುವುದು ಖಾಸಗೀಕರಣವಾಗಿದ್ದು ಸರ್ಕಾರಗಳೂ ಖಾಸಗೀಕರಣಗೊಳ್ಳುತ್ತಿವೆ. ಸರ್ಕಾರಗಳು ನಮ್ಮ ಸಂವಿಧಾನದತ್ತ ಹಕ್ಕು ಬಾಧ್ಯತೆಗಳ ಬಗ್ಗೆ ಮಾತನಾಡುವ ಬದಲು ವಿದೇಶಿ ಬಂಡವಾಳಗಾರರ ಭಾಷೆಯಲ್ಲಿ ಮಾತನಾಡತೊಡಗಿವೆ. ಅನಿವಾರ್ಯವೆಂಬಂತೆ ಜಾಗತೀಕರಣವನ್ನು ಒಪ್ಪುತ್ತ, ನಾಡಿನ ಕೆಲವು ಮೂಲತತ್ವಗಳನ್ನು ಉಳಿಸಿಕೊಳ್ಳಲು ಹೆಣಗಾಡುತ್ತ ವಿಚಿತ್ರ ಸಂಕಟವನ್ನು ಅನುಭವಿಸುವ ಸರ್ಕಾರಗಳೂ ಕಾಣಿಸುತ್ತಿವೆ. ಕೀಳರಿಮೆಯಿಂದ ಕುಗ್ಗುತ್ತ, ವಿದೇಶಿ ಬಂಡವಾಳಕ್ಕೆ ಬಗ್ಗುತ್ತ ಆಡಳಿತ ನಡೆಸಬೇಕಾದ ಸನ್ನಿವೇಶ ನಿರ್ಮಾಣವಾಗಿರುವುದು ಪ್ರಜಾಸತ್ತಾತ್ಮಕ ಸಮಾಜದ ವಿಷಾದ ಪರ್ವ ಎನ್ನಬಹುದು. ಸ್ವಂತ ಸಂವಿಧಾನ, ಸ್ವಂತ ಸರ್ಕಾರ, ಸ್ವಂತ ನೀತಿಗಳುಳ್ಳ ಒಂದು ದೇಶವು ತನ್ನ ಸಂವಿಧಾನಾತ್ಮಕ ನೀತಿ ಹಾಗೂ ನಿರ್ದೇಶಕ ತತ್ವಗಳನ್ನು ಮೂಲೆಗೆ ತಳ್ಳುವ ಸ್ಥಿತಿ ಶೋಚನೀಯವಷ್ಟೇ ಅಲ್ಲ, ಪ್ರಜಾಪ್ರಭುತ್ವ ವಿರೋಧಿಯಾದುದು.

ಜಾಗತೀಕರಣವು ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ವಲಯದಲ್ಲಿ ಉಂಟುಮಾಡುತ್ತಿರುವ ಪರಿಣಾಮ ಮತ್ತು ಒಡ್ಡುತ್ತಿರುವ ಸವಾಲುಗಳು ನಕಾರಾತ್ಮಕ ನೆಲೆಯನ್ನು ಪಡೆದಿವೆ. ನೆಲಮೂಲ ಚಿಂತನೆಗಳಿಗೆ ಧಕ್ಕೆ ತರುವಷ್ಟು ಪ್ರಬಲವಾಗಿವೆ. ವಿಜ್ಞಾನ-ತಂತ್ರಜ್ಞಾನಗಳನ್ನು ಒಳಗೊಂಡಂತೆ ಜ್ಞಾನದ ದಿಕ್ಕನ್ನು ನಿಯಂತ್ರಿಸುವಷ್ಟು ಬಲಾಢ್ಯವಾಗಿರುವ ಜಾಗತೀಕರಣಕ್ಕೆ ತಕ್ಕ ಉತ್ತರ ಕೊಡುವ ಪ್ರಾಣಶಕ್ತಿ ನಮ್ಮ ಸಮಾಜದ ಸಂವೇದನಾಶೀಲ ವಲಯಗಳಿಗಿದೆ. ಅದು ಕ್ರೋಡೀಕೃತಗೊಳ್ಳುವ ಪ್ರಕ್ರಿಯೆಗಳೂ ಪ್ರಾರಂಭವಾಗಿವೆ. ಸರ್ವರೋಗ ಸಂಜೀವಿನಿಯೆಂಬಂತೆ ಬಿಂಬಿತವಾಗುತ್ತಿರುವ ಜಾಗತೀಕರಣದ ಹುನ್ನಾರಗಳನ್ನು ತಾತ್ವಿಕವಾಗಿ ಮತ್ತು ತಾರ್ಕಿಕವಾಗಿ ಎದುರಿಸುವ ನಿರಂತರ ಕ್ರಿಯೆಯಲ್ಲಿ ತೊಡಗಿಸಿಕೊಳ್ಳುತ್ತ ಹೋಗುವುದು ಇಂದಿನ ಅಗತ್ಯವಾಗಿದೆ. ನಮ್ಮ ಸಂವಿಧಾನಾತ್ಮಕ, ಸ್ವತಂತ್ರ ಸಮಾಜಕ್ಕೆ ಧಕ್ಕೆಯಾಗದ ಯಾವುದೇ ಜನಪರ ವಿಚಾರಗಳನ್ನು ಒಳಗೊಳ್ಳುತ್ತ ಉತ್ತರ ಕೊಡಬೇಕಾಗಿದೆ. ಜಾಗತೀಕರಣದ ಇತಿಮಿತಿಗಳನ್ನು ಸಾದರ ಪಡಿಸುವ ಮೂಲಕ ಪರ್ಯಾಯ ಚಿಂತನೆಗೆ ಹಚ್ಚಬೇಕಾಗಿದೆ. ಇದು ಸೈದ್ಧಾಂತಿಕ ಶಿಸ್ತು, ಸಾಂಸ್ಕೃತಿಕ ಸಂವೇದನೆ ಮತ್ತು ಸಾಮಾಜಿಕ ಕಾಳಜಿಯಿಂದ ಆಗಬೇಕಾದ ಕ್ರಿಯೆ.

**ಪ್ರೊ॥ ಬರಗೂರು ರಾಮಚಂದ್ರಪ್ಪ**
ನಂ. ೧೧, ೧೪ನೇ 'ಬಿ' ಕ್ರಾಸ್, ಜೆ. ಪಿ. ನಗರ ೨ನೇ ಹಂತ, ಬೆಂಗಳೂರು - ೫೬೦ ೦೭೮



# ಔಷಧಿಗೆ ಸಂಬಂಧಪಟ್ಟಂತೆ ದೋಹಾದಲ್ಲಿ ಆದದ್ದೇನು ?

**ಕೆ. ಎಸ್. ಪಾರ್ಥಸಾರಥಿ**

ಒಂದು ಔಷಧಿಯನ್ನು ಕಂಡುಹಿಡಿಯುವಾಗ ಮೊದಲ ಕ್ರಮ, ಇದರಲ್ಲಿ ಸೇರಿಸಬೇಕಾದ ವಿವಿಧ ವಸ್ತುಗಳ, ರಾಸಾಯನಿಕಗಳ ಮತ್ತು ಅವುಗಳ ಪ್ರಮಾಣವನ್ನು ನಿರ್ಧರಿಸುವ ಹಂತ. ಇದು ಬಹುಕಾಲದ ಸಂಶೋಧನೆ ಮತ್ತು ಹಣದ ವ್ಯಯದಿಂದ ಬುದ್ಧಿವಂತ ವಿಜ್ಞಾನಿ ಸಾಧಿಸುತ್ತಾನೆ. ಹಿಂದೆ ವಿಜ್ಞಾನಿಗಳು ಈ ಕೆಲಸವನ್ನು ಮಾನವಸೇವೆಯೆಂಬ ನಿಟ್ಟಿನಲ್ಲಿ, ತಮ್ಮ ಸ್ವಂತ ಆರೋಗ್ಯವೇ ಹಾಳಾಗುವುದನ್ನೂ ಲೆಕ್ಕಿಸದೆ ನಿರ್ವಹಿಸುತ್ತಿದ್ದರು. ಮೊನ್ನೆ ಮೊನ್ನೆಯೂ ಒಬ್ಬ ವಿಜ್ಞಾನಿ ಆಸ್ಟ್ರಿಯಾದಲ್ಲಿ ಆಂಥ್ರಾಕ್ಸ್‌ಗೆ ಸಂಬಂಧಪಟ್ಟ ಪರೀಕ್ಷಾ ವಿಧಾನವನ್ನು ತನ್ನ ಮೇಲೇ ಪ್ರಯೋಗಿಸಿಕೊಂಡು ಕಂಡುಹಿಡಿದಿದ್ದಾನೆ. ವ್ಯತ್ಯಾಸವೆಂದರೆ ಇಂದಿನ ವಿಶ್ವವಾಣಿಜ್ಯ ಈ ಸಾಧನೆಯನ್ನು ವೈಯಕ್ತಿಕ ಅಥವಾ ಕಂಪೆನಿಗಳ ಸ್ವಂತ ಸಾಧನೆ, ಇದು ಒಂದು ಆಸ್ತಿ, ಇದಕ್ಕೆ ಪೇಟೆಂಟ್ ಹಕ್ಕು ನೀಡಿ ಸರ್ವಸ್ವಾಮ್ಯ ಪಡೆದು ಅಪಾರ ಲಾಭ ಗಳಿಸುವುದು ನ್ಯಾಯವೆನ್ನುತ್ತದೆ. ಹಿಂದುಳಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ರೋಗರುಜಿನಗಳ, ಸಾಂಕ್ರಾಮಿಕಗಳ ಹಾವಳಿ ಅತೀವ ದಾರುಣವಾದುದು. ಇದನ್ನು ತಡೆಯುವುದು ವಿಶ್ವದ ಎಲ್ಲರ ಹಿತಾಸಕ್ತಿಗೂ ಸಂಬಂಧಪಟ್ಟ ವಿಷಯ. ಕಾರಣ ಈ ರೋಗಗಳು ಮುಂದುವರಿದ ರಾಷ್ಟ್ರಗಳಿಗೂ ಹರಡುತ್ತವೆ. ಅಂಥ ಔಷಧಿಗಳು ಸುಲಭ ದರದಲ್ಲಿ ಎಲ್ಲರಿಗೂ ದಕ್ಕಬೇಕು. ಭಾರತ, ಆಫ್ರಿಕಾ, ಏಡ್ಸ್ ರೋಗಬ ಹರಡುವಿಕೆಯಲ್ಲಿ ಚಿಂತಾಜನಕ ಸ್ಥಿತಿಯಲ್ಲಿವೆ. ಈಗಷ್ಟೇ ಲಭ್ಯವಾಗುತ್ತಿರುವ ಔಷಧಿಗಳು ಇವರ ಕೈಗೆ ನಿಲುಕಲಾರದಷ್ಟು ದುಬಾರಿ. ಸಾಧಾರಣ ಕಾಯಿಲೆಗಳನ್ನೂ ಈ ದೇಶಗಳಲ್ಲಿ ವಾಸಿ ಮಾಡಬೇಕು ತಾನೆ, ಅವುಗಳ ಔಷಧಿಗಳೂ ದುಬಾರಿಯಾದರೆ ಇದೂ ಸಾಧ್ಯವಿಲ್ಲ. ಲಾಭದೃಷ್ಟಿಯ ವಾಣಿಜ್ಯಕ್ಕೂ, ಸಾಮಾಜಿಕ ಪ್ರಜ್ಞೆ ಮತ್ತು ಕರ್ತವ್ಯಕ್ಕೂ ಇಲ್ಲಿ ಘರ್ಷಣೆ ಉಂಟಾಗಿದೆ.

ಭಾರತದಂಥ ರಾಷ್ಟ್ರಗಳು ಔಷಧೀಯ ಪೇಟೆಂಟ್‌ಗಳ ಬಗ್ಗೆ ಇಲ್ಲಿಯವರೆಗೆ ತಳೆದ ಧೋರಣೆಯನ್ನು ಸಂಗ್ರಹವಾಗಿ ಹೀಗೆ ಹೇಳಬಹುದು: ಒಂದು ವಸ್ತುವನ್ನು ಉತ್ಪಾದಿಸುವಲ್ಲಿ ಅವುಗಳ ಸಂಯೋಜನೆಯ ವಿಷಯ ವಿಜ್ಞಾನಿಯದು. ಅದು ಸಾರ್ವಜನಿಕ ಆಸ್ತಿ, ವೈಯಕ್ತಿಕವಲ್ಲ. ತಂತ್ರಜ್ಞ ಇವುಗಳನ್ನು ಹಲವಾರು ವಿವಿಧ ಪರಿಷ್ಕರಣ ಮಾರ್ಗದಿಂದ ತಯಾರಿಸಬಹುದು. ಈ ಸಂಸ್ಕರಣದ ತಾಂತ್ರಿಕ ವಿಧಾನ ಅಂತಿಮ ವಸ್ತುವಿನ ಬೆಲೆಯನ್ನು ನಿರ್ಧರಿಸುತ್ತದೆ. ಅತಿ ಸುಲಭದ ವಿಧಾನ ಅಗತ್ಯ. ಈ ವಿಧಾನಕ್ಕೆ ಪೇಟೆಂಟ್ ಹಕ್ಕು ನೀಡುವುದು ಉಚಿತ. ಭಾರತದಲ್ಲಿ ಔಷಧಿಯ ಕ್ಷೇತ್ರದಲ್ಲಿ ಈ ಧೋರಣೆಯಿಂದ ಸಾಧಿಸಿರುವ ಪ್ರಗತಿ ಬಹಳ ಮೆಚ್ಚುಗೆ ಪಡೆದದ್ದು; ಪ್ಯಾರಸಿಟಾಮಲ್ ಮೂಲ ಔಷಧಿಯನ್ನು ಹತ್ತಾರು ವಾಣಿಜ್ಯ ಹೆಸರಿನಿಂದ ಮಾರುವಂತೆ. ವಿಶ್ವವಾಣಿಜ್ಯ ಒಪ್ಪಂದ ೨೦೦೪-೨೦೦೫ರ ವೇಳೆಗೆ ಕಾರ್ಯಕ್ರಮಕ್ಕೆ ಬಂದ ಮೇಲೆ ಇದು ಸಾಧ್ಯವಾಗುವುದಿಲ್ಲ. ಆಗ ಭಾರತದಲ್ಲಿ ತಯಾರಾಗುವ ಬಹುಭಾಗ ಔಷಧಿಗಳ ತಯಾರಿ ಸಾಧ್ಯವಾಗುವುದಿಲ್ಲ ಅಥವಾ ಅವುಗಳ ಬೆಲೆ ಅತ್ಯಂತ ದುಬಾರಿಯಾಗುತ್ತದೆ. ನಮ್ಮ ಔಷಧಿ ಉದ್ಯಮವೇ ಹಾಳಾಗಬಹುದು. ಕಾರಣ ವಿಶ್ವವಾಣಿಜ್ಯ ಮೂಲ ಸಂಶೋಧನೆಗೆ ಮಾತ್ರ ಪೇಟೆಂಟ್ ಹಕ್ಕು ಎನ್ನುತ್ತದೆ. ಈ ಪೇಟೆಂಟ್ ೨೦ ವರ್ಷಗಳ ಅವಧಿಯದು.

ಇತ್ತೀಚೆಗೆ ಆಂಥ್ರಾಕ್ಸ್ ಔಷಧಿಗೆ ಅಮೆರಿಕದಲ್ಲಿ ವಿಪರೀತ ಬೇಡಿಕೆ ಬಂದಿದೆಯಷ್ಟೆ. ▪ ಔಷಧಿಯ ಪೇಟೆಂಟ್ ಹಕ್ಕು ಜರ್ಮನಿಯ ಕಂಪೆನಿಯದು. ನಮ್ಮ ದೇಶದಲ್ಲೂ ಈ ಔಷಧಿಯನ್ನು ವಿಭಿನ್ನ ಸಂಯೋಜನಾ ಮಾರ್ಗಗಳಲ್ಲಿ ತಯಾರಿಸುತ್ತೇವೆ. ಜರ್ಮನಿಯ ಬೆಲೆಗೂ, ನಮ್ಮ ಔಷಧಿಯ ಬೆಲೆಗೂ ಅಜಗಜಾಂತರ ವ್ಯತ್ಯಾಸ. ಈ ಸಮಸ್ಯೆಯ ನಿಜವಾದ ಸ್ವರೂಪಕ್ಕೆ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ತಮಗೇ ಆಪತ್ತು ಒದಗಿದಾಗ ಕಣ್ಣುಬಿಟ್ಟಿವೆ. ಕೆಲವೇ ತಿಂಗಳುಗಳ ಹಿಂದೆ ದಕ್ಷಿಣ ಆಫ್ರಿಕಾದಲ್ಲಿ ಏಡ್ಸ್ ಬಗ್ಗೆ ನಡೆದ ವಿಶ್ವ ಸಮ್ಮೇಳನದಲ್ಲಿ ಔಷಧಿಯ ಬೆಲೆಯ ಬಗ್ಗೆ ಹಿಂದುಳಿದವರ ಅರ್ಹ ಕೋರಿಕೆಗೆ ಬೆಲೆ ನೀಡಿರಲಿಲ್ಲ ಈ ಜನ ಎಂಬುದನ್ನು ಜ್ಞಾಪಿಸಿಕೊಳ್ಳಬಹುದು.

ಪೇಟೆಂಟ್ ಬಗ್ಗೆ ಇನ್ನೊಂದು ವಿಷಯ. ಇದು ಬಂಡವಾಳಶಾಹಿ ಮಾರ್ಗದಲ್ಲಿ ಹುಟ್ಟಿಬಂದ ಒಂದು ದುಷ್ಟ ಪದ್ಧತಿ. ಈ ಹಕ್ಕು ತಮ್ಮ ವಶದಲ್ಲಿರುವ ಒಂದೇ ಕಾರಣಕ್ಕಾಗಿ ಬಹುಪಾಲು ಖಾಸಗಿ ಕಂಪೆನಿಗಳು, ಉತ್ಪಾದನೆಯ ವೆಚ್ಚಕ್ಕಾಗಲೀ, ಬೇಡಿಕೆಯ ಪ್ರಮಾಣಕ್ಕಾಗಲೀ, ಕಾಯಿಲೆಯ ಸಾರ್ವಜನಿಕ ಸಂತ್ರಸ್ತ ಪರಿಸ್ಥಿತಿಗಾಗಲೀ ಸಂಬಂಧವಿಲ್ಲದಷ್ಟು ಬೆಲೆ ನಿಗದಿ ಮಾಡುತ್ತಾರೆ. ಹಲವು ಹತ್ತು ವರ್ಷಗಳ ಪೇಟೆಂಟ್ ಹಕ್ಕು ಇರುವುದರಿಂದ ಆ ಅವಧಿಯಲ್ಲಿ, ಈ ವಸ್ತುವಿಗೆ ಸಂಬಂಧಪಟ್ಟಂತೆ ಈ ಕಂಪೆನಿ ಏಕಸ್ವಾಮ್ಯ ಪಡೆದಿರುತ್ತದೆ. ಇದು ಮುಕ್ತ ವ್ಯಾಪಾರ, ಮುಕ್ತ ಸ್ಪರ್ಧೆಯ, ವಾಣಿಜ್ಯವೇ ಸರ್ವವೂ ಆದ, ಪ್ರಜಾಪ್ರಭುತ್ವದ ವಿಡಂಬನೆ ; ಏಕಸ್ವಾಮ್ಯವನ್ನು ವಿರೋಧಿಸುವೆವು ಎನ್ನುವ ಉದಾರವಾದಿಗಳೆಂದೆನಿಸಿಕೊಳ್ಳುವ ಅರ್ಥಶಾಸ್ತ್ರಜ್ಞರ ವಿಪರ್ಯಾಸ.

ಪೇಟೆಂಟ್ ಹಕ್ಕಿಗೆ ಒಂದು ಹಂತದಲ್ಲಿ ಅರ್ಥವಿರಬಹುದೇನೋ. ಈ ವಸ್ತುವನ್ನು ಅಥವಾ ಇತ್ತೀಚೆಗೆ ಬೆಳೆದಿರುವ ಮಾಹಿತಿ ತಂತ್ರಜ್ಞಾನದ ಸರಕುಗಳನ್ನು ಅನೇಕ ವೇಳೆ ಕೊಳ್ಳುವವ ತಾನು ಉತ್ಪಾದಿಸಲಿರುವ ಘಟಕದಲ್ಲಿ, ಮರು ಬಂಡವಾಳವಾಗಿ ಉಪಯೋಗಿಸುತ್ತಾನೆ. ಈ ವಸ್ತುವನ್ನು ಉಪಯೋಗಿಸಿಕೊಂಡು, ಮತ್ತೊಬ್ಬ ಉದ್ದಿಮೆದಾರ ಹಲವಾರು ಪಟ್ಟು ಲಾಭ ಗಳಿಸುತ್ತಾನೆ. ಆ ಸಂದರ್ಭದಲ್ಲಿ ಮೂಲ ಸಂಶೋಧನೆಯನ್ನು ಆಸ್ತಿ ಎಂದೂ, ಆಸ್ತಿಯ ಹಕ್ಕೆಂದೂ ಪರಿಗಣಿಸಬಹುದೇನೋ; ಆದರೆ ಔಷಧಿಯ ವಿಷಯದಲ್ಲಿ ಈ ವಾದ ಎಷ್ಟಕ್ಕೂ ಸಲ್ಲುವುದಿಲ್ಲ. ರೋಗಿಗೆ ರೋಗ ವಾಸಿಯಾದದ್ದೇ ಲಾಭ ಎಂದರೆ, ತಾಯಿ ಮಗುವಿಗೆ ನೀಡುವ ಹಾಲಿಗೂ, ಒಂದು ಕುಟುಂಬದ ಪ್ರತಿ ಸದಸ್ಯರ ಸಂಸಾರ ನಡೆಸುವ ದಿನನಿತ್ಯದ ಕೆಲಸಗಳಿಗೆ ಇಂತಿಷ್ಟು ಡಾಲರ್ ಎಂದು ಬೆಲೆ ನಿಗದಿ ಮಾಡುವುದೂ ಮುಂತಾದ ಅಸಂಗತ ತಲೆದೋರುತ್ತದೆ. ಇಲ್ಲಿರುವ ಪ್ರಶ್ನೆ ಮನುಷ್ಯ ಮಾನವನಾಗಿ ಒಂದು ಕುಟುಂಬವೇ, ಎಂಬುದು.

ಒಂದು ವಸ್ತು ಮತ್ತೊಂದು ವಸ್ತುವಿಗೆ ಉತ್ಪಾದಕ ವಸ್ತುವಾಗುವ ಸಂದರ್ಭದಲ್ಲಿ ವಸ್ತುವನ್ನು ಕಂಡುಹಿಡಿದವನಿಗೆ ಒಂದಿಷ್ಟು ಹಕ್ಕು, ಹಣದ ಪರಿಹಾರ ಕೊಡುವುದು ಅಗತ್ಯ. ಇದರಿಂದ ಪ್ರೇರಿತರಾಗಿ ವಿಜ್ಞಾನಿಗಳೂ, ತಂತ್ರಜ್ಞರೂ, ಸಮಾಜದ ಅಗತ್ಯ ಪೂರೈಸುವ ಕೆಲಸದಲ್ಲಿ ತೊಡಗುತ್ತಾರೆನ್ನಬಹುದು. ಆದರೆ ಬಂಡವಾಳ ವ್ಯವಸ್ಥೆಯಲ್ಲಿ ಇದೂ ಸಮರ್ಪಕವಾಗಿಲ್ಲ. ತಂತ್ರಜ್ಞರೂ, ವಿಜ್ಞಾನಿಗಳೂ ಬಂಡವಾಳದ ಬೃಹತ್ ಘಟಕಗಳ ಸೆರೆಯಾಳಾಗುತ್ತಾರೆ. ಆಕಸ್ಮಾತ್ ಪರಿಹಾರ ಪಡೆದರೂ ಅದು ಬಹಳ ಅಲ್ಪಪ್ರಮಾಣದ್ದಾಗಿರುತ್ತದೆ. ಬಹುಪಾಲನ್ನು ಏಕಸ್ವಾಮ್ಯದ ಬಹುರಾಷ್ಟ್ರೀಯಗಳೇ ಕಬಳಿಸಿಬಿಡುತ್ತವೆ. ವಿಶ್ವವಾಣಿಜ್ಯದ ಜಾರಿಯಲ್ಲಿರುವ ಚರ್ಚೆಯಲ್ಲಿ ಈ ಬಹುರಾಷ್ಟ್ರೀಯಗಳ ಖರಾಮತ್ತು ದಿನೇ ದಿನೇ ಆಕ್ರಮಣಕಾರಕವೂ, ನಿರ್ಣಾಯಕವೂ ಆಗುತ್ತಿರುವುದು ಸ್ಪಷ್ಟವಾಗುತ್ತಿದೆ. ಸ್ವಲ್ಪ ಹಿಂದೆ, ನಮ್ಮ ಈ ಧೋರಣೆಯನ್ನು ಕಮ್ಯುನಿಸ್ಟರ ವಾದವೆಂದೂ, ಪ್ರಜಾಪ್ರಭುತ್ವದ ಪ್ರತಿಪಾದಕರು ವಿರೋಧಿಸಬೇಕೆಂದೂ ಚರ್ಚೆಗೆ ತಾತ್ವಿಕ ಬಣ್ಣ ನೀಡಬಹುದಿತ್ತು. ಈಗ ಲಾಭೈಕ ದೃಷ್ಟಿಯ ವಿಶ್ವವಾಣಿಜ್ಯಕ್ಕೆ ತಮ್ಮ ಮರ್ಯಾದೆ ಮುಚ್ಚಿಕೊಳ್ಳಲು ಈ ಅಂಜೂರದ ಎಲೆಯೂ ಸಿಗುವಂತಿಲ್ಲ. ಅಂತೆಯೇ ದೋಹಾದಲ್ಲಿ ನಡೆದ ಚರ್ಚೆಯಲ್ಲಿ ಔಷಧಿಗೆ ಸಂಬಂಧಪಟ್ಟ ವಿಷಯದಲ್ಲಿ ಅವರು ಒಂದು ಹೆಜ್ಜೆ ಹಿಂದೆ ಸರಿದಿದ್ದಾರೆ. ಇದು ತಾತ್ಕಾಲಿಕ ಯುದ್ಧತಂತ್ರದ ಹಿಮ್ಮೆಟ್ಟುವಿಕೆಯೋ, ಶಾಶ್ವತವಾದುದೋ ಕಾದು ನೋಡಬೇಕು.

ವರ್ತಮಾನ ಪತ್ರಿಕೆಗಳಲ್ಲಿ ಇದರ ಬಗ್ಗೆ ವಿವರಗಳು ಬಂದಿಲ್ಲ. ಇಷ್ಟು ಮಾತ್ರ ತಿಳಿದುಬಂದಿದೆ: ಸರ್ಕಾರಗಳು ಆರೋಗ್ಯದ ತುರ್ತುಪರಿಸ್ಥಿತಿಯಲ್ಲಿ ಪೇಟೆಂಟ್ ಹಕ್ಕುಗಳನ್ನು ಮಾನ್ಯತೆ ಮಾಡದೆ, ಅಗತ್ಯವಿದ್ದ ಔಷಧಗಳನ್ನು ತಯಾರು ಮಾಡಿಕೊಳ್ಳಬಹುದು. ಏಡ್ಸ್, ಕ್ಷಯರೋಗ ಮುಂತಾದ ವಿಸ್ತಾರ ಹರಿವಿನ ಕಾಯಿಲೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಈ ತೀರ್ಮಾನವೆಂದು ಹೇಳಲಾಗಿದೆ. ಆದರೆ ಸಾಮಾಜಿಕ ತುರ್ತು ಪರಿಸ್ಥಿತಿ, ಹಠಾತ್ತನೆ ಬರುವ ಪರಿಸ್ಥಿತಿ. ಆಗ ಮಾತ್ರ ಹಠಾತ್ತನೆ ಔಷಧಿಗಳನ್ನು ಬೃಹತ್‌ಪ್ರಮಾಣದಲ್ಲಿ ತಯಾರಿಸಹೊರಡುವುದು ಹೇಗೆ ಸಾಧ್ಯ ? ಮನೆಗೆ ಬೆಂಕಿ ಬಿದ್ದಾಗ ಬಾವಿ ತೋಡಿದಂತೆ ! ಆರೋಗ್ಯದ ವಿಷಯದಲ್ಲಿ

ಪ್ರತಿಯೊಬ್ಬ ರೋಗಿಗೂ, ಅವನನ್ನು ಆರೈಕೆ ಮಾಡುವವರಿಗೂ, ಅದು ತುರ್ತುಪರಿಸ್ಥಿತಿಯಷ್ಟೆ? ವ್ಯಾಪಕವಾಗಿ ಹರಡಿ, ಸಾರ್ವಜನಿಕ ಪಿಡುಗಾಗುವ ರೋಗಗಳ ವಿಷಯದಲ್ಲಿ ಮಾತ್ರ ಆಸಕ್ತಿ ವಹಿಸುವ ಪಶ್ಚಿಮದವರು, ಇದು ತಮ್ಮ ದೇಶವನ್ನು ಪ್ರವೇಶಿಸದಿರಲಿ ಎಂಬ ಸ್ವಾರ್ಥಬುದ್ಧಿಯಿಂದ ಇದನ್ನು ಒಪ್ಪುತ್ತಿರುವರೇ ವಿನಃ ಅದರಲ್ಲಿ ಯಾವ ಧಾರಾಳ ಧರ್ಮ ಬುದ್ಧಿಯಿಂದೇನೂ ಅಲ್ಲವೆನ್ನಬಹುದು. ಒಂದು ಕಾಯಿಲೆಗೆ ಹಲವು ಮದ್ದುಗಳನ್ನು ಕಂಡುಹಿಡಿಯಬಹುದು. ಒಂದೊಂದನ್ನು ಹಲವಾರು ಉತ್ಪಾದನಾ ವಿಧಾನದಲ್ಲಿ ತಯಾರಿಸಬಹುದು. ಔಷಧಿ ಕಂಡುಹಿಡಿಯುವ ಪ್ರಕ್ರಿಯೆಯಲ್ಲಿ ಸಹಸ್ರಾರು ರೋಗಿಗಳು ತಮ್ಮ ರೋಗಾನುಭವದ ಮಾಹಿತಿಯನ್ನು ನೀಡಿರುತ್ತಾರೆ. ಹತ್ತಾರು ವಿಜ್ಞಾನಿಗಳು, ತಂತ್ರಜ್ಞರು, ಹಲಹಂತದಲ್ಲಿ ಹಲವಾರು ವರ್ಷ ದುಡಿದಿರುತ್ತಾರೆ. ಹಿಂದಿನ ಹೆಜ್ಜೆಗಳಿಲ್ಲದಿದ್ದರೆ, ಈ ಕ್ಷೇತ್ರದಲ್ಲಂತೂ ಅಂತಿಮ ಹೆಜ್ಜೆ ಸಾಧ್ಯವಿಲ್ಲ. ಒಂದು ಕನಿಷ್ಠ ಮಿತಿಯಲ್ಲಿ ಬಿಟ್ಟು, ಈ ಸಂಶೋಧನೆಯ ಪ್ರತಿಫಲ ಸಾರ್ವಜನಿಕವಾದುದು, ಯಾರೊಬ್ಬರ ಏಕಸ್ವಾಮ್ಯವೂ ಅಲ್ಲ. ಆದ್ದರಿಂದ ವಿಶ್ವವಾಣಿಜ್ಯದ ದೋಹಾದ ಈ ರೀತಿಗೆ ಯಾವ ಅರ್ಥವೂ ಇಲ್ಲ. ಇದು ಕಾರ್ಯಸಾಧ್ಯವಾದುದೂ ಅಲ್ಲ.

ದಕ್ಷಿಣ ಆಫ್ರಿಕದಲ್ಲಿ ಅಲ್ಲಿಯ ಅಧ್ಯಕ್ಷರು ಏಡ್ಸ್ ಸಮಾವೇಶದಲ್ಲಿ ಒಂದು ಸ್ತರದಲ್ಲಿ, ಆರೋಗ್ಯ ವಿಷಯ ಬಂದಾಗ ತಾನು ಯಾವ ವಿಶ್ವವ್ಯಾಪಿ ಅಂಕೆಗೂ ಮಣಿಯುವುದಿಲ್ಲ ಎಂದದ್ದು ಅರ್ಥವತ್ತಾದದ್ದು. ದೋಹಾದ ಪಾಶ್ಚಿಮಾತ್ಯ ಸಂಧಾನಕಾರರು ಇತರ ಅನೇಕ ಬಹುಮುಖ್ಯ ಲಾಭದಾಯಕ ವಿಷಯಗಳ ಬಗ್ಗೆ ಒಪ್ಪಿಗೆಯನ್ನು ಪಡೆಯುವಲ್ಲಿ ಜಾಣ್ಮೆಯ ಕ್ರಮವಾಗಿ, ತಾತ್ಕಾಲಿಕವೋ ಎಂಬಂತೆ, ಈ ರಿಯಾಯಿತಿಗೆ ಒಪ್ಪಿರುವರೆಂದು ತೋರುತ್ತದೆ. ಮುಂದೆ ಈ ಒಪ್ಪಿಗೆಯನ್ನು ಕಾರ್ಯರೂಪಕ್ಕೆ ತರುವ ವಿಷಯ ಚರ್ಚಿಸುವಾಗ ಹೆಚ್ಚು ಹೆಚ್ಚು ತೊಡಕುಗಳು ಸಂಭವಿಸುವುದು ಖಂಡಿತ. ಅಂತಿಮವಾಗಿ ಔಷಧಿಗಳ ವಿಷಯ ತೀರ್ಮಾನವಾಗಿದೆ ಎಂದು ಹೇಳುವಂತಿಲ್ಲ.

ಕೊನೆಯದಾಗಿ ಒಂದು ತಾತ್ವಿಕ ಪ್ರಶ್ನೆ: ಲಾಭಕ್ಕಾಗಿ ಪೇಟೆಂಟ್ ಹಕ್ಕು ಮುಕ್ತ ವ್ಯಾಪಾರ ತತ್ವಕ್ಕೆ ವಿರೋಧವಾಗಿ, ಏಕಸ್ವಾಮ್ಯವಾಗಿ ರೂಪತಾಳಿದರೂ ಪರವಾಗಿಲ್ಲವೆಂಬುದಾದರೆ, ಸಾಮಾಜಿಕ ಒಳಿತಿಗಾಗಿ ಕೆಲವು ಕ್ಷೇತ್ರಗಳಲ್ಲಿ ಸಾರ್ವಜನಿಕ ಏಕಸ್ವಾಮ್ಯಕ್ಕೆ ಏಕೆ ವಿರೋಧಿಸಬೇಕು? ಉದಾಹರಣೆಗೆ ಕುಡಿಯುವ ನೀರಿನ ಪೂರೈಕೆ, ರಾಷ್ಟ್ರೀಯ ಹೆದ್ದಾರಿಗಳು, ಸಾರ್ವಜನಿಕ ವಿದ್ಯಾಭ್ಯಾಸ, ಔಷಧಿ ಮತ್ತು ಆರೋಗ್ಯ ಇತ್ಯಾದಿ. ಇವುಗಳ ಸಾರ್ವಜನಿಕ ನಿರ್ವಹಣೆಯಲ್ಲಿ ಅಸಮರ್ಪಕತೆ ಕಂಡುಬಂದಿದೆ. ಅದನ್ನು ಸರಿಪಡಿಸಬೇಕು. ಸರಿಪಡಿಸಲು ಸಾಧ್ಯ. ಆದರೆ ಅಸಮರ್ಪಕತೆಯನ್ನೇ ನೆಪವಾಗಿಸಿ, ಸಾರ್ವಜನಿಕ ಏಕಸ್ವಾಮ್ಯ ತಪ್ಪಿಸಿ ಇವುಗಳನ್ನು ಖಾಸಗೀ ಏಕಸ್ವಾಮ್ಯವಾಗಿಸುವುದು ಉದಾರ ಅರ್ಥಶಾಸ್ತ್ರಜ್ಞರ, ಅವರ ರಾಜಕೀಯದ ತಾತ್ವಿಕ ದಿವಾಳಿತನವಾಗುತ್ತದೆಯಷ್ಟೆ.

ಔಷಧಿಗಳು ಕಾಯಿಲೆ ಬರದಿರುವಂತೆ ತಡೆಗಟ್ಟಲೂ, ಬಂದ ಕಾಯಿಲೆಯನ್ನು ಗುಣಪಡಿಸಿಕೊಳ್ಳಲೂ ಬೇಕು. ಬೇಕಾದ ಔಷಧಿ ಪಡೆಯುವುದು ಮಾನವೀಯ ಹಕ್ಕು ಎಂದು ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಒಪ್ಪಂದಗಳಲ್ಲಿ ಸ್ವೀಕಾರವಾಗಿದೆ. ಈ ಹಕ್ಕನ್ನು ಅನುಭೋಗಿಸಲು ಅಡೆತಡೆಗಳು ತಲೆದೋರುವುದು ಬಡವರಿಗೆ ಅದರ ಬೆಲೆ ದುಬಾರಿಯಾದಾಗ, ದುಬಾರಿ ಪೇಟೆಂಟ್ ಹಕ್ಕಿನಿಂದ. ಮಾನವೀಯ ಹಕ್ಕು ಮತ್ತು ವಾಣಿಜ್ಯ ಒಪ್ಪಂದಗಳ ನಡುವೆ ಘರ್ಷಣೆ ಬಂದರೆ, ಮೊದಲನೆಯದೇ ಎತ್ತಿ ಹಿಡಿಯಬೇಕಾದುದು. ಬ್ರೆಸಿಲ್ ಮತ್ತು ದಕ್ಷಿಣ ಆಫ್ರಿಕಾಗಳು ತಮ್ಮ ಪೇಟೆಂಟ್ ಕಾಯಿದೆಯನ್ನು ಇದರನ್ವಯ ರೂಪಿಸಿಕೊಂಡಿವೆ. ನಮ್ಮ ಸರ್ಕಾರ ಈ ನಿಟ್ಟಿನಲ್ಲಿ ಏನೇನೂ ಮಾಡದೆ ವಿಶ್ವ ವಾಣಿಜ್ಯ ಸಂಸ್ಥೆಯಲ್ಲಿ ಮಾತ್ರ ಬೊಬ್ಬೆ ಹಾಕುವುದರಲ್ಲಿ ಅರ್ಥವಿಲ್ಲ. ದೋಹದಲ್ಲಿ ಈ ಬಗ್ಗೆ ರಿಯಾಯಿತಿ ಪಡೆದೆವೆಂದು ನಮ್ಮ ಸಂಧಾನಕಾರರು ಹೇಳಿಕೊಳ್ಳುತ್ತಿರುವುದು ಸರಿಯಲ್ಲ. ಅವರು ೧೯೯೯ರ ಪೇಟೆಂಟ್ ಕಾನೂನಿನಲ್ಲಿ ಈಗ ರಿಯಾಯಿತಿ ಎಂದು ಹೇಳಿಕೊಳ್ಳುವ ಅಂಶಗಳನ್ನು ಬ್ರೆಸಿಲ್‌ನಂತೆ, ದಕ್ಷಿಣ ಆಫ್ರಿಕಾದಂತೆ ಆಗಲೇ ಸೇರಿಸಬಹುದಿತ್ತು. ೧೯೯೯ರ ಈ ಬಗ್ಗೆಯ ಕಾಯಿದೆ (ಪರಿಷ್ಕರಿಸಿದ್ದ) ಭೌದ್ಧಿಕ ಆಸ್ತಿಗಳಿಗೆ ಸಂಬಂಧಪಟ್ಟ ವಿಶ್ವವಾಣಿಜ್ಯ ಸಂಸ್ಥೆಯ ತೀರ್ಮಾನಗಳ ಅನ್ವಯ, ತಾನು ಕಾಯ್ದುಕೊಳ್ಳಬಹುದಿತ್ತು. ಸ್ವಂತ ಹಿತಾಸಕ್ತಿಗಳನ್ನು ಅನವಶ್ಯ ಬಿಟ್ಟುಕೊಡುವ ರೀತಿಯಲ್ಲಿ ನಡೆದಿದೆ. ಇದನ್ನು ಸರಿಪಡಿಸಬೇಕು. ಈ ಬಗ್ಗೆ ದೋಹಾದಲ್ಲಿ ಏನೋ ಗೆದ್ದುಬಂದೆವೆಂಬುದು ಸುಳ್ಳು.

**ಕೆ. ಎಸ್. ಪಾರ್ಥಸಾರಥಿ**
ಸಿ-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್, ೧ನೇ ಹಂತ
ಜೆ.ಪಿ. ನಗರ, ಬೆಂಗಳೂರು-೭೮

# ಜಾಗತೀಕರಣ ಮತ್ತು ಸಂಸ್ಕೃತಿ

ಡಾ|| ರಂಗಾರೆಡ್ಡಿ ಕೋಡಿರಾಂಪುರ

**ಮ್ಯಾ**ಕ್ಸಿಂ ಗಾರ್ಕಿ ಒಂದು ಕಡೆ ಕಾಲ್ಪನಿಕ ಸಂದರ್ಶನವನ್ನೇರ್ಪಡಿಸಿ ಒಬ್ಬ ಬಂಡವಾಳಿಗನ ಬಾಯಿಂದ ಕಲೆಯ ಬಗ್ಗೆ ಮಾತನಾಡಿಸುತ್ತಾನೆ. ಆತನಿಗೆ 'What do you think of Art' ಎಂಬ ಪ್ರಶ್ನೆ ಕೇಳಿದರೆ ಆ ಬಂಡವಾಳಿಗ "I don't think of Art, simply I will buy it' ಎನ್ನುತ್ತಾನೆ. ಅಂದರೆ ಬಂಡವಾಳಶಾಹಿಗೆ ಕಲೆಯಾಗಲೀ, ಸಂಸ್ಕೃತಿಯಾಗಲೀ ಲಕ್ಸುರಿಯಾಗಿ ಪ್ರದರ್ಶನಕ್ಕಿಡುವ ಮತ್ತು ಪ್ರತಿಷ್ಠೆ ಹೆಚ್ಚಿಸಿಕೊಳ್ಳುವ ವಸ್ತುವಾಗಿರುತ್ತದೆಯೇ ಹೊರತು ಅನುಭವಗ್ರಾಹ್ಯ ವಸ್ತುವಾಗಿರುವುದಿಲ್ಲ, ಭಾವನಾತ್ಮಕ ಸಂವೇದನೆಗಳನ್ನು ಒಳಗೊಂಡಿರುವುದಿಲ್ಲ. ಕೇವಲ ಮಾರಾಟದ ಸರುಕಾಗಿಬಿಡುತ್ತದೆ.

ಇಂಥ ಸರಕು ಸಂಸ್ಕೃತಿ ಜಾಗತೀಕರಣದ ಕಾಲಘಟ್ಟದಲ್ಲಿ ಜಗತ್ತನ್ನೇ ಒಂದು ಹಳ್ಳಿಯನ್ನಾಗಿಸಿ ವಿಶ್ವವನ್ನೇ ಒಂದು ಏಕರೂಪದ ಮಾರುಕಟ್ಟೆಯನ್ನಾಗಿಸಿದೆ. ಜಗತ್ತಿನಾದ್ಯಂತ ಒಂದೇ ಮಾದರಿಯ ವಸ್ತುಗಳು ಚಲಾವಣೆಗೆ ಬಂದಂತೆ ನೆಲದ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ಭಿನ್ನಮಾದರಿಯ ವಸ್ತುಗಳು ಮೂಲೆಗುಂಪಾಗುತ್ತವೆ. ಸರಕು ಸಂಸ್ಕೃತಿಯು ನೆಲದ ಸಂಸ್ಕೃತಿಯ ಜೊತೆ ಪೈಪೋಟಿಗಿಳಿಯುತ್ತದೆ. ಬಹುಮುಖತೆಯುಳ್ಳ ನೆಲದ ಸಂಸ್ಕೃತಿ ಅದನ್ನು ಎದುರಿಸಲಾರದೆ ತಾನೇ ಹಿಂದಕ್ಕೆ ಸರಿಯುತ್ತದೆ.

ಆರ್ಥಿಕ ಉದಾರೀಕರಣ, ಗ್ಯಾಟ್, ಡಂಕಲ್ ಪ್ರಸ್ತಾವನೆಗಳಿಂದ ಜಾಗತೀಕರಣ ಪ್ರಕ್ರಿಯೆ ಆರಂಭವಾಗಿದೆ. ಅತ್ಯಾಧುನಿಕ ತಂತ್ರಜ್ಞಾನದಿಂದ ಆರ್ಥಿಕವಾಗಿ ಬಲಾಢ್ಯವಾದ ರಾಷ್ಟ್ರಗಳು ತೀರ ಹಿಂದುಳಿದ ದೇಶಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಹೊಸ ಹುನ್ನಾರಗಳನ್ನು ರೂಪಿಸುತ್ತಿವೆ. ರಾಜಕೀಯವಾಗಿ ಆಕ್ರಮಣ ಮಾಡಿ ಸೋತ ರಾಷ್ಟ್ರದಲ್ಲಿ ಪ್ರಭುತ್ವ ಸ್ಥಾಪಿಸುವ ಹಳೆಯ ನೇರ ಪದ್ಧತಿ ಹೋಗಿ ಆರ್ಥಿಕತೆಯ ಮೇಲೆ ನಿಯಂತ್ರಣ ಸಾಧಿಸುವುದರ ಮೂಲಕ ಹಿಡಿತ ಬಲಪಡಿಸುವ ಪದ್ಧತಿಗಳು ಹೊಸದಾಗಿ ಬಂದಿವೆ. ಇದನ್ನು ನವವಸಾಹತುಶಾಹಿ ಎನ್ನಲಾಗುತ್ತಿದೆ.

ಈ ನವವಸಾಹತುಶಾಹಿ ರಾಜಕೀಯರಂಗದಲ್ಲಿ ವಿಶ್ವಸಂಸ್ಥೆಯ ಮೂಲಕ, ಹಣಕಾಸು ವಲಯದಲ್ಲಿ ಐಎಂಎಫ್-ವಿಶ್ವಬ್ಯಾಂಕ್‌ಗಳ ಮೂಲಕ, ಕ್ರೀಡಾರಂಗದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಟೂರ್ನಮೆಂಟ್‌ಗಳ ಮೂಲಕ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಫೋರ್ಡ್, ರಾಕ್‌ಫೆಲ್ಲರ್, ನೊಬೆಲ್, ಮ್ಯಾಗಸೆಸೆ ಫೌಂಡೇಷನ್‌ಗಳ ಮೂಲಕ ಹಿಂದುಳಿದ ರಾಷ್ಟ್ರಗಳಲ್ಲಿ ತನ್ನ ನೆಲೆಯನ್ನು ವಿಸ್ತರಿಸುತ್ತಿದೆ.

ಎರಡನೇ ಮಹಾಯುದ್ಧದ ನಂತರ ಅಮೆರಿಕವೂ ಸೇರಿದಂತೆ ಇತರೆ ಶಕ್ತಿರಾಷ್ಟ್ರಗಳ ಆರ್ಥಿಕ ಸ್ಥಿತಿ ದಿವಾಳಿಯಾಗುವತ್ತ ನಡೆದಿತ್ತು. ಆಗ ಕೊಳ್ಳುವವರಿಲ್ಲದೆ ಮಾರುಕಟ್ಟೆ ಉತ್ಪನ್ನಗಳಿಂದ ತುಂಬಿಹೋಗಿತ್ತು. ಕಾರ್ಖಾನೆಗಳು ಮುಚ್ಚಲ್ಪಟ್ಟವು. ಕಾರ್ಮಿಕರು ವಜಾ ಆದರು. ನಿರುದ್ಯೋಗದ ಪಡೆ ಬೆಳೆದು, ಸಾಮಾಜಿಕ ಅಸಮಾಧಾನ ಹೆಚ್ಚಿ ಎಲ್ಲೆಲ್ಲೂ ಕ್ರಾಂತಿಯ ಧ್ವನಿ ಪ್ರಜ್ವಲಿಸತೊಡಗಿದ ಸಂದರ್ಭಗಳನ್ನು ಕಂಡು ಫೋರ್ಡ್ ಮತ್ತು ರಾಕ್‌ಫೆಲ್ಲರ್‌ನಂತಹ ಬಂಡವಾಳಶಾಹಿ ಸಂಸ್ಥೆಗಳು ಫೌಂಡೇಷನ್‌ಗಳನ್ನು ಸ್ಥಾಪಿಸಿ ಸಮಾಜ ಸೇವಾ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವು. ದಾನ ದತ್ತಿಗಳ ಮೂಲಕ ಸಾಮಾಜಿಕ ಆಕ್ರೋಶವನ್ನು ಕುಗ್ಗಿಸುವ ತಂತ್ರಗಳನ್ನು ರೂಪಿಸಿದವು. ಎಲ್ಲೆಲ್ಲಿ ಎಡಪಂಥೀಯ ಚಟುವಟಿಕೆಗಳು ತೀವ್ರವಾಗಬಹುದೆಂದು ಕಂಡುಕೊಂಡವೋ ಅಲ್ಲೆಲ್ಲ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ನಕಲಿ ಪ್ರಗತಿಪರ ಚಟುವಟಿಕೆಗಳನ್ನು ಹಮ್ಮಿಕೊಂಡು ನಿಜವಾದ ಎಡಪಂಥೀಯ ಸಂಘಟನೆಗಳ ಪ್ರಭಾವವನ್ನು ಕುಗ್ಗಿಸುತ್ತಾ ಬಂದವು. ಸಮಾಜದ ಯುವಶಕ್ತಿಯನ್ನು ಸೆಕ್ಸ್ ಮತ್ತು ಹಣದ ಆಮಿಷಗಳ ಮೂಲಕ ದುರ್ಬಲಗೊಳಿಸುತ್ತಾ ಬಂದವು. ಅಕ್ರಮ ಮತ್ತು ಸುಲಭವಾಗಿ ಹಣ ಮಾಡುವ ಮಾರ್ಗಗಳತ್ತ ಯುವಜನರ ಗಮನ ಸೆಳೆದು ದೈಹಿಕ ಶ್ರಮದ ಬಗ್ಗೆ ತಿರಸ್ಕಾರ ಮೂಡಿಸಿದವು. ಸಮಾಜದ ಅತಿದೊಡ್ಡ ಶೋಷಕರು ಸದಾ ಜನರ ಪೋಷಕರೂ ಆಗಿರುತ್ತಾರೆ ಎಂಬ ಭ್ರಮೆ ಹುಟ್ಟಿಸಿದವು. ಆದರೆ ಶೋಷಣೆಯ ಮುಖವನ್ನು ಮಾತ್ರ ಮರೆಮಾಚಿದವು. ಪ್ರಗತಿ ಮತ್ತು ಅಭಿವೃದ್ಧಿಯ ಮಾತನಾಡುತ್ತಲೇ ಪ್ರತಿಗಾಮೀ ವ್ಯವಸ್ಥೆಯನ್ನು ಪೋಷಿಸುವುದು ಇಂಥ ಶೋಷಕ ಸಂಸ್ಥೆಗಳ ತಂತ್ರವಾಗಿರುತ್ತದೆ ಎಂಬುದನ್ನು ಮೂರನೇ ಜಗತ್ತಿನ ರಾಷ್ಟ್ರಗಳು ಅರಿಯದೆ ಹೋದವು. ಇಂಥ ತಂತ್ರಗಾರಿಕೆ ಹಾಗೂ ಭ್ರಮೆ ವರ್ಗಸಮಾಜದ ವೈರುಧ್ಯಗಳಲ್ಲಿ ಒಂದಾಗಿರುತ್ತದೆ.

ಹೀಗೆ ರಾಜಕೀಯ ರಂಗದಲ್ಲಿ, ಹಣಕಾಸು ವಲಯದಲ್ಲಿ, ಕ್ರೀಡೆ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಹಿಡಿತ ಸಾಧಿಸಲು ಹೊರಟಿರುವ ಜಾಗತೀಕರಣಕ್ಕೆ ಅಂತರರಾಷ್ಟ್ರೀಯ ಮಾರುಕಟ್ಟೆ ಮಾತ್ರ ಮುಖ್ಯವಾಗಿರುತ್ತದೆ. ಆಯಾ ದೇಶಗಳ ನೆಲದ ಸಂಸ್ಕೃತಿಯ ವೈವಿಧ್ಯಮಯ ಬದುಕು ಅಲಕ್ಷ್ಯವಾಗಿರುತ್ತದೆ. ಬಂಡವಾಳಶಾಹಿಯ ಹಿತಸಾಧನೆ ಜಾಗತೀಕರಣದ ಪ್ರಮುಖ ಉದ್ದೇಶವಾದುದರಿಂದ ಕುಲಕಸುಬು ಹಾಗೂ ಕುಶಲಕಲೆಗಳನ್ನು ಉದ್ಯಮೀಕರಣಗೊಳಿಸಿಬಿಡುತ್ತದೆ. ಮೂರನೇ ಜಗತ್ತಿನ ರಾಷ್ಟ್ರಗಳ ಮನುಷ್ಯನೇ ಸರಕಾಗಿಬಿಡುವುದರಿಂದ ಅವನ ಸೃಜನಾತ್ಮಕ ಚಟುವಟಿಕೆಗಳೆಲ್ಲ ಸರಕು ಸಂಸ್ಕೃತಿಯಾಗಿ ಪರಿವರ್ತನೆಯಾಗುತ್ತಿರುತ್ತವೆ.

ಉದ್ದಿಮೆಗಳನ್ನು ಸ್ಥಾಪಿಸಿದ ಮೇಲೆ ಅದನ್ನು ಮಾರಾಟ ಮಾಡುವ ಜಾಲವನ್ನು ರೂಪಿಸಬೇಕಾಗುತ್ತದೆ. ಈ ಮಾರಾಟ ಮಾಡುವ, ಅದಕ್ಕಾಗಿ ತಂತ್ರ ರೂಪಿಸುವ, ಕೆಲಸವನ್ನು ಗ್ಯಾಟ್ ಡಂಕೆಲ್‌ಗಳು ಕೈಗೆತ್ತಿಕೊಳ್ಳುತ್ತವೆ. ಸಾಧ್ಯವಿರುವ ಎಲ್ಲಾ ಸಮೂಹ ಮಾಧ್ಯಮಗಳನ್ನು ಇದಕ್ಕಾಗಿ ಬಳಸಿಕೊಳ್ಳುತ್ತವೆ. ಪತ್ರಿಕೆಗಳು, ಚಲನಚಿತ್ರಗಳು, ದೂರದರ್ಶನಗಳು, ಸಮೂಹ ಕಲೆಗಳು ಇಂಥ ವ್ಯಾಪಾರೀ ಕಾರ್ಯನೀತಿಗಾಗಿ ದುಡಿಯುತ್ತವೆ. ಈ ಕಾರ್ಯನೀತಿಗಳ ಚಾಲಕ ಶಕ್ತಿಯೆಂದರೆ ಉದ್ದಿಮೆ ಮತ್ತು ಲಾಭ ಎಂದು ಎ. ಕುಕಾರ್ಕಿನ್ ಅಭಿಪ್ರಾಯಪಡುತ್ತಾನೆ.

ವ್ಯಾಪಾರ ಮತ್ತು ಲಾಭವನ್ನೇ ಮುಖ್ಯ ಉದ್ದೇಶವಾಗಿಟ್ಟುಕೊಂಡ ಜಾಗತೀಕರಣ ಜಾನಪದದ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಜಾನಪದ ಎಂಬುದು ಸಂಸ್ಕೃತಿಯ ಉತ್ಪನ್ನ , ಹಾಗೆಯೇ ಸಂಸ್ಕೃತಿ ಎಂಬುದು ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಯಿಂದ ಮೂಡಿ ಬಂದ ಉತ್ಪನ್ನ. ಪ್ರಾಚೀನ ಮಾನವ ತನ್ನ ಆಹಾರ ಸಂಪಾದನೆಗೆ ಬಳಸಿದ ಕಲ್ಲು , ಕೋಲು, ಗುಹೆಗಳೇ ಸಂಸ್ಕೃತಿಯ ಪ್ರಾಥಮಿಕ ಪರಿಕರಗಳೆಂಬುದು ನಮಗೆ ಗೊತ್ತಿದೆ. ಅಲ್ಲಿಂದ ಅವು ವಿಕಾಸವಾಗಿ ಲೋಹಬಳಕೆ ಮತ್ತು ಬೆಂಕಿ ಬಂದ ಮೇಲೆ ಆಯುಧಗಳಾಗಿ ನಂತರ ಕೃಷಿ ಉಪಕರಣಗಳಾಗಿ ಸಂಸ್ಕೃತಿಯನ್ನು ರೂಪಿಸಿವೆ. ಆದ್ದರಿಂದ ಸಂಸ್ಕೃತಿಯಾಗಲೀ, ಅದರ ಉಪ ಉತ್ಪನ್ನವಾದ ಜಾನಪದವಾಗಲೀ ಆರ್ಥಿಕ ಚಟುವಟಿಕೆಯ ಭಾಗವಾಗಿಯೇ ಬೆಳವಣಿಗೆ ಹೊಂದಿವೆ. ಅಂದರೆ ಮನುಷ್ಯ ನಿಸರ್ಗದ ಜೊತೆ ಜೀವನ ನಿರ್ವಹಣೆಗಾಗಿ ನಡೆಸಿದ ಹೋರಾಟ ಮತ್ತು ಹೊಂದಾಣಿಕೆಯಲ್ಲಿ ಸಂಸ್ಕೃತಿ ರೂಪುಗೊಳ್ಳುತ್ತದೆ. ಇಲ್ಲಿ ಶ್ರಮ ಮುಖ್ಯ. ದುಡಿಮೆ ಹೆಚ್ಚಿದಷ್ಟು ಅದು ಸಂಸ್ಕೃತಿಯ, ಜ್ಞಾನದ ವಿಕಾಸಕ್ಕೆ ದಾರಿಮಾಡಿಕೊಡುತ್ತದೆ. ಅದಕ್ಕಾಗಿಯೇ ವೈಟ್ ಎಂಬ ಸಂಸ್ಕೃತಿ ಚಿಂತಕ 'ಮನುಷ್ಯನ ಶ್ರಮ ಎಷ್ಟೆಷ್ಟು ಬಳಕೆಯಾಗುತ್ತದೋ ಅಷ್ಟಷ್ಟು ಸಂಸ್ಕೃತಿ ವಿಕಾಸವಾಗುತ್ತದೆ' ಎಂದು ಹೇಳಿದ್ದಾನೆ.

ಸಂಸ್ಕೃತಿ ಎಂದಾಗ ಅದರಲ್ಲಿ ಜ್ಞಾನ-ವಿಜ್ಞಾನ-ನಂಬಿಕೆ-ಆಚರಣೆ ಎಲ್ಲವೂ ಇದೆ, ಎಂದು ಟೈಲರ್ ವ್ಯಾಖ್ಯಾನಿಸಿದ್ದಾನೆ. ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಕೃತಿಯ ಭಾಗವಲ್ಲ ಎಂಬ ಒಡೆದು ನೋಡುವ ಛಿದ್ರ ಮನೋಭಾವವನ್ನು ಇಂದಿನ ತಂತ್ರಜ್ಞಾನದ ವಿದ್ಯಾಭ್ಯಾಸ ಮನದಟ್ಟು ಮಾಡುತ್ತಿದೆ. ಇಂಜಿನಿಯರಿಂಗ್ ಹಾಗೂ ಇನ್ನಿತರ ವಿಜ್ಞಾನ ವಿಷಯಗಳಲ್ಲಿ ಪರಿಣತರಾಗುವವರು ಭಾಷೆ, ಸಾಹಿತ್ಯ , ಸಂಸ್ಕೃತಿ, ಕಲೆಗಳ ಬಗ್ಗೆ ಸಂಬಂಧವಿಲ್ಲದಂತೆ ವರ್ತಿಸುವುದು ನಮ್ಮ ಕಣ್ಣು ಮುಂದೆಯೇ ಇದೆ. ಇವರೆಲ್ಲರ ದೃಷ್ಟಿ ಒಂದೇ: ಇಂಜಿನಿಯರಾಗುವುದು, ಅನಂತರ ಅಮೆರಿಕದ ಯಾವುದೋ ಬಹುರಾಷ್ಟ್ರೀಯ ಕಂಪನಿಯಲ್ಲಿ ಉದ್ಯೋಗ ದೊರಕಿಸಿಕೊಳ್ಳುವುದು. ಬಹುರಾಷ್ಟ್ರೀಯ ಕಂಪನಿಗಳೂ ಇಂಥ ಮನೋಭಾವವನ್ನೇ ಇನ್ನೂ ಹೆಚ್ಚು ಮಾಡಿ ಬುದ್ಧಿವಂತಿಕೆಯನ್ನು, ಅರ್ಥಾತ್ ತಂತ್ರಜ್ಞಾನವನ್ನು, ಹಣದ ಆಕರ್ಷಣೆ ಒಡ್ಡಿ ತಮ್ಮ ಕಂಪನಿಗಳಿಗೆ ಸ್ಥಳಾಂತರಿಸುತ್ತವೆ. ಪ್ರತಿಭಾ ಪಲಾಯನವೂ ಜಾಗತೀಕರಣದ ಒಂದು ಫಲ.

ಹೀಗಾದಾಗ ದೇಶೀಯ ತಂತ್ರಜ್ಞಾನ ಹಿಂದೆ ಬಿದ್ದು ವಿದೇಶೀಯ ತಂತ್ರಜ್ಞಾನಕ್ಕೆ ವಿಧಿಯಿಲ್ಲದೆ ಜೋತುಬೀಳುವ ಪರಿಸ್ಥಿತಿ ಅನಿವಾರ್ಯವಾಗಿ ಸೃಷ್ಟಿಗೊಳ್ಳುತ್ತದೆ. ಭಾರತದಲ್ಲಿ ಕುಶಲಕರ್ಮಿಯೊಬ್ಬ ತನ್ನ ಕೌಶಲ್ಯವನ್ನು ಉತ್ಪಾದನೆಯಲ್ಲಿ ಮಾತ್ರ ಪ್ರಕಟಿಸಬಲ್ಲ. ಉತ್ಪಾದನೆಯ ಹೊರತಾಗಿ ಅದನ್ನು ಜ್ಞಾನ ಅಥವಾ ಸಿದ್ಧಾಂತವಾಗಿ ಪರಿವರ್ತಿಸಲು ಅವನಿಂದ ಆಗುತ್ತಿಲ್ಲ. ಉದಾಹರಣೆಗೆ ಎತ್ತಿನ ಬಂಡಿಯನ್ನು ನೋಡೋಣ. ಚಕ್ರ, ಅರೆ, ಮೂಕಿ, ಪಟ್ಟಿ, ಗುಂಬ, ಡೋಣಿ, ನೊಗ, ಗುಜ್ಜು ಮುಂತಾದುವನ್ನು ಮಾಡುವವನು

ಒಬ್ಬ. ಅಂದರೆ ಬಡಗಿ. ಈತ ಗಾಡಿಯನ್ನು ತಯಾರಿಸುವಲ್ಲಿ ತನ್ನ ತಂತ್ರಜ್ಞತೆಯನ್ನು ಪ್ರಕಟಿಸಬಲ್ಲ. ಈ ಬಡಗಿಯಿಂದ ಇದನ್ನು ಕಲಿಯುವ ಇನ್ನೊಬ್ಬ ಕಲಿಕಾರ್ಥಿ ಗಾಡಿಯ ತಯಾರಿಕೆಯಲ್ಲಿ ಪ್ರಾಯೋಗಿಕವಾಗಿ ಭಾಗವಹಿಸಿಯೇ ಕಲಿಯಬೇಕು. ಆದರೆ ಗುರು ಬಡಗಿಗೆ ಇದನ್ನು ಒಂದು ಜ್ಞಾನ ಶಿಸ್ತನ್ನಾಗಿ ಪರಿವರ್ತಿಸಿ ತನ್ನ ಶಿಷ್ಯನಿಗೆ ಹೇಳಿಕೊಡಲು ಬರುತ್ತಿಲ್ಲ. ಆದರೆ ವಸ್ತುವನ್ನು ಸೃಷ್ಟಿಸುವ ಕೌಶಲ್ಯವಿದೆ. ಪರಂಪರೆಯಿಂದ ಇಂಥ ವೃತ್ತಿ ಕಲೆಗಳನ್ನು ಪರಸ್ಪರ ಕಲಿಸುತ್ತ ಬರಲಾಗಿದೆಯೇ ವಿನಾ ಥಿಯರಿಯಾಗಿ ಹೇಳಿಕೊಡುತ್ತ ಬಂದಿಲ್ಲ. ಭಾರತದಂಥ ಅಭಿವೃದ್ಧಿಶೀಲ ದೇಶಗಳ ಈ ನ್ಯೂನತೆಯನ್ನು ತಮ್ಮ ಲಾಭವಾಗಿ ಪರಿವರ್ತಿಸಲು ಬಹುರಾಷ್ಟ್ರೀಯ ಕಂಪನಿಗಳು ಮುಂದಾಗಿ ದೇಶೀಯ ತಂತ್ರಜ್ಞಾನ ಮತ್ತು ವಸ್ತುಗಳ ಬಗ್ಗೆ ಅನಾದರ ಉಂಟಾಗುವಂತೆ ಮಾಡಿದವು. ಸನ್ನಿವೇಶ, ಸಂದರ್ಭ, ಪರಿಸರಗಳಿಗೆ ಹೊಂದಿಕೆಯಾಗಲಿ ಅಥವಾ ಆಗದಿರಲಿ ವಿದೇಶಿ ವಸ್ತುಗಳನ್ನು ಬಳಸಲು ಪ್ರಚೋದಿಸುವಂಥ ವಾತಾವರಣ ನಿರ್ಮಿಸಿದವು. ನೆಲದ ಸಂಸ್ಕೃತಿಯ ದೇಶೀಯ ತಂತ್ರಜ್ಞಾನದ ಪರಿಕರಗಳು ಹಾಗೂ ತಯಾರಾದ ವಸ್ತುಗಳು ಆಯಾಪ್ರದೇಶದ ಸಾಧ್ಯತೆ ಮತ್ತು ಅವಶ್ಯಕತೆಗಳನ್ನು ಅವಲಂಬಿಸಿಕೊಂಡು ರೂಪುಗೊಂಡಿರುತ್ತವೆ. ಹೀಗಾಗಿ ದೇಶೀಯ ತಂತ್ರಜ್ಞಾನದಲ್ಲಿ ಬಹುಮುಖತೆ ಮತ್ತು ವಿವಿಧ ಮಾದರಿಗಳು ಎದ್ದುಕಾಣುತ್ತವೆ.

ಬಹುರಾಷ್ಟ್ರೀಯ ಕಂಪನಿಗಳಿಂದ ತಯಾರಾದ ಟ್ರ್ಯಾಕ್ಟರನ್ನು ಎತ್ತಿನ ಬಂಡಿಗೆ ವಿರುದ್ಧವಾಗಿ ನೋಡೋಣ. ಇದರ ತಂತ್ರಜ್ಞಾನದ ವಿನ್ಯಾಸವನ್ನು ಕೊಡುವವನು ಒಬ್ಬ. ಕಾರ್ಖಾನೆಯಲ್ಲಿ ಇದರ ಬಿಡಿಭಾಗಗಳನ್ನು ತಯಾರಿಸುವವನು ಇನ್ನೊಬ್ಬ. ಅನಂತರ ಅವುಗಳನ್ನು ಜೋಡಿಸುವವನು ಮತ್ತೊಬ್ಬ. ಮೂರು ಹಂತಗಳಲ್ಲಿ ಟ್ರ್ಯಾಕ್ಟರ್ ಸಿದ್ಧವಾಗುತ್ತದೆ. ವಿನ್ಯಾಸಕಾರನಿಗೆ ಕಾರ್ಖಾನೆ ಕೆಲಸದ ಪರಿಣತಿಯಿರುವುದಿಲ್ಲ. ಜೋಡಿಸುವವನಿಗೆ ಬಿಡಿ ಭಾಗಗಳ ತಯಾರಿಕೆ ಗೊತ್ತಿರುವುದಿಲ್ಲ. ಹೀಗಾಗಿ ಸಮಗ್ರ ಟ್ರ್ಯಾಕ್ಟರಿನ ಕುಶಲಕರ್ಮಿ(ತಂತ್ರಜ್ಞ)ಯಾರು ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಇವು ಮಾರುಕಟ್ಟೆಗೆ ಬಂದನಂತರ ಖರ್ಚಾಗದಿದ್ದರೆ ಹೂಡಿದ ಬಂಡವಾಳಕ್ಕೆ ನಷ್ಟ ಉಂಟಾಗಿ ಪರಿತಪಿಸುವಂತಾಗುತ್ತದೆ. ಆಗ ಹಿಂದುಳಿದ ದೇಶಗಳ ಜನತೆಯ ಮೇಲೆ ನಾನಾ ರೀತಿಯ ಆಕರ್ಷಣೆ ಒಡ್ಡಿ ಇಂಥವುಗಳನ್ನು ಮಾರಾಟ ಮಾಡಬೇಕಾಗುತ್ತದೆ. ಆ ಸಮಯದಲ್ಲಿ ಅಲ್ಲಿನ ಸಾಂಸ್ಕೃತಿಕ ಪರಿಕರಗಳನ್ನು ಬಳಸಿಕೊಂಡು ಜಾಹೀರಾತಿನ ಮೂಲಕ ಒಂದು ಜನಪದ ಮನಸ್ಸನ್ನು ಕೆಡಿಸುವ ಕೆಲಸ ಆರಂಭವಾಗುತ್ತದೆ.

ಜಾಹೀರಾತು ಜಾಗತೀಕರಣದ ಅತಿಮುಖ್ಯ ಭಾಗ. ಒಂದು ವಸ್ತುವಿನ ತಯಾರಿಕೆಗೆ ಎಷ್ಟು ಬಂಡವಾಳ ಹೂಡಬಹುದೋ ಅಷ್ಟೇ ಬಂಡವಾಳವನ್ನು ಜಾಹೀರಾತಿನ ಮೇಲೆ ತೊಡಗಿಸುತ್ತಾರೆ. ಈ 'ಜಾಹೀರಾತು ಸಂಸ್ಕೃತಿ'ಯನ್ನು ಸ್ಥಿರೀಕರಿಸುವುದಕ್ಕಾಗಿಯೇ ಕ್ರಿಕೆಟ್, ಫುಟ್‌ಬಾಲ್, ಟೆನಿಸ್ ಟೂರ್ನಿಗಳನ್ನು ನಡೆಸುವುದು, ಸೌಂದರ್ಯ ಸ್ಪರ್ಧೆ ಏರ್ಪಡಿಸುವುದು, ಸಾಂಸ್ಕೃತಿಕ ಮತ್ತು ಧಾರ್ಮಿಕ ಮೇಳಗಳನ್ನು ನಡೆಸುವುದು. ಈ ಜಾಹೀರಾತಿನ ಮೋಡಿಗೆ ಒಳಗಾಗಿ ಗಾಡಿಯ ಬದಲು ಟ್ರ್ಯಾಕ್ಟರ್, ಮಡಿಕೆಗಳ ಬದಲು ಸ್ಟೀಲ್-ಪ್ಲಾಸ್ಟಿಕ್ ಬಂದು ಗೃಹಕೈಗಾರಿಕೆಗಳು ನಶಿಸುವಂತಾಗಿದೆ. ಭಾರತದಂಥ ದೇಶದಲ್ಲಿ ಗೃಹ ಕೈಗಾರಿಕೆಗಳು ಕೇವಲ ಮಾರಾಟದ ಸರಕಲ್ಲ. ಅದರ ಹಿಂದೆ ದುಡಿಮೆಯಿದೆ; ದುಡಿಮೆಯಿಂದ ರೂಪುಗೊಂಡ ಸಂಸ್ಕೃತಿಯಿದೆ. ಆ ವಸ್ತುವು ಸಂಸ್ಕೃತಿಯ ಭಾಗವಾಗಿರುವುದರಿಂದ ಅದಕ್ಕೊಂದು ಆಚರಣೆಯಿದೆ. ಕಡಿಮೆ ಮೂಲವಸ್ತು, ಹೆಚ್ಚು ದೈಹಿಕ ಶ್ರಮ, ಸೀಮಿತ ಮಾರುಕಟ್ಟೆಯಿರುವುದರಿಂದ ಬಂಡವಾಳ ಹೂಡಿಕೆ ಕಡಿಮೆ. ವಸ್ತು ಸ್ಥಳೀಯ ಮೂಲದಿಂದ ತಯಾರಾಗಿರುವುದರಿಂದ ಒಡೆಯುವುದು, ಹಾಳಾಗುವುದು ಸಹಜವಾಗಿರುತ್ತದೆ. ಆದ್ದರಿಂದ ಆ ವಸ್ತುವಿಗೆ ಪುನಃ ಬೇಡಿಕೆಯಿರುತ್ತದೆ. ಆಗ ಕುಶಲಕರ್ಮಿಗೆ ನಿರಂತರ ಉದ್ಯೋಗ ದೊರಕುತ್ತದೆ. ಉದಾಹರಣೆಗೆ ಕುಂಬಾರನ ಮಡಕೆ. ಇದು ಒಡೆದು ಹಾಳಾಗುವುದರಿಂದ ಕಾಲಕಾಲಕ್ಕೆ ಬೇಡಿಕೆಯಿರುತ್ತದೆ. ಮಡಕೆ ಮಣ್ಣಿನಿಂದ ತಯಾರಾಗಿ ಮತ್ತೆ ಮಣ್ಣಲ್ಲೇ ಬೆರೆಯುವುದರಿಂದ ಪುನಃ ಮಡಕೆ ಮಾಡಲು ಮಣ್ಣಿನ ರೂಪದಲ್ಲೇ ಸಿಗುವುದರಿಂದ ಮೂಲವಸ್ತು ಬರಿದಾಗುವುದಿಲ್ಲ. ಸೃಷ್ಟಿಯಾದ ಹೊಸ ಮಡಕೆಗೆ ಮದುವೆ ಸಂದರ್ಭದಲ್ಲಿ ಆಚರಣೆಯಿದೆ. ಪ್ರತಿ ಶುಭ ಸಮಾರಂಭಗಳಲ್ಲಿ ಪೂರ್ಣಕುಂಭ ಸ್ವಾಗತಕ್ಕೆ ವಿಶೇಷ ಅರ್ಥವಿದೆ. ಇಂಥ ಆಚರಣೆ ಇಲ್ಲದ ನಿರ್ದಿಷ್ಟ ಮಾದರಿಯ ಸ್ಟೈನ್‌ಲೆಸ್ ಸ್ಟೀಲ್ ಅಥವಾ ಪ್ಲಾಸ್ಟಿಕ್ ಪಾತ್ರೆಗಳು ಬೇಗ ಹಾಳಾಗುವುದಿಲ್ಲ. ಒಂದು ವೇಳೆ ಹಾಳಾದರೆ ಮಣ್ಣಿನಲ್ಲಿ ಬೆರೆತು ಹೋಗುವುದಿಲ್ಲ. ಇಂಥ ವಸ್ತುಗಳ ತಯಾರಿಕೆಗೆ ಹೆಚ್ಚು ಬಂಡವಾಳ ಹೂಡಿಕೆ, ಕಡಿಮೆ ಶ್ರಮ, ವಿಶಾಲ ಮಾರುಕಟ್ಟೆ ಇದ್ದು ಹೆಚ್ಚು ದಿನ ಬಾಳಿಕೆ ಬರುವುದರಿಂದ ಬೇಡಿಕೆ ಕಡಿಮೆಯಾಗುತ್ತದೆ. ಉತ್ಪತ್ತಿ ಮಾತ್ರ ದಿನೇ ದಿನೇ ಏರುತ್ತಿರುತ್ತದೆ. ಆಗ ಇಂಥ ವಸ್ತುಗಳನ್ನು ಮಾರುಕಟ್ಟೆಗಳಲ್ಲಿ ಕೊಳ್ಳುವಂತೆ ಮಾಡಲು ಗ್ರಾಹಕರಿಗೆ ನಾನಾ ರೀತಿ ಆಮಿಷ ಒಡ್ಡಲಾಗುತ್ತದೆ. ಈ ಕಾರ್ಖಾನೆ ವಸ್ತುಗಳು ಗೃಹಕೈಗಾರಿಕೆಗಳಿಂದ ಬಂದ ವಸ್ತುಗಳ ಜೊತೆ ಪೈಪೋಟಿಗಿಳಿಯುವುದರಿಂದ ದೇಶೀಯ ಉದ್ದಿಮೆಗಳು ನಶಿಸುತ್ತವೆ. ಈ ಉದ್ದಿಮೆಗಳ ಜೊತೆ ಬೆಳೆದುಬಂದ ಸಂಸ್ಕೃತಿ ಜೊತೆಯಲ್ಲೇ ನಶಿಸುತ್ತದೆ. ಈ ಉದ್ದಿಮೆ, ಉತ್ಪನ್ನಗಳ ಜೊತೆ ಬೆಳೆದುಬಂದ ಜನಪದ ಕತೆ, ಗೀತೆ, ಗಾದೆ, ಒಗಟು, ಆಚರಣೆ ಮುಂತಾದವು ದೈಹಿಕ ಶ್ರಮದ ಹಿನ್ನೆಲೆಯಲ್ಲಿ ರೂಪುಗೊಂಡಿರುತ್ತವೆ. ಶ್ರಮವಿಲ್ಲದ ಪರಿಸರದಲ್ಲಿ ಇಂದಿನ ಬದುಕು ರೂಪುಗೊಳ್ಳುತ್ತಿರುವುದರಿಂದ ಸಂಸ್ಕೃತಿಯ ಸೃಜನಶೀಲ ಚಟುವಟಿಕೆಗಳು ಸ್ಥಗಿತಗೊಳ್ಳುತ್ತವೆ.

ಹಾಳಾಗದ ಕಾರ್ಖಾನೆ ಉತ್ಪನ್ನಗಳು, ಶ್ರಮವಿಲ್ಲದಂತೆ ಕೆಲಸ ನಿರ್ವಹಿಸುವ ಯಂತ್ರಗಳು, ಮೂರ್‍ನಾಲ್ಕು ಮಂದಿ ಗುಂಪುಗೂಡಿ ಮಾಡುವ ಉದ್ಯೋಗವನ್ನು ಒಂದು ಯಂತ್ರ ಮಾಡುವ ಅನುಕೂಲಗಳು ಬಂದು 'ವಿರಾಮ ಸಂಸ್ಕೃತಿ' 'ಶ್ರಮ ಸಂಸ್ಕೃತಿ'ಯ ಬದಲಿಗೆ ತಲೆ ಎತ್ತಿದೆ. ಇದರಿಂದ ಜನರು ನಿರುದ್ಯೋಗಿಗಳಾಗಿದ್ದಾರೆ. ಕಪಿಲೆ ಎಂಬ ಗ್ರಾಮ ಮೂಲದ ನೀರೆತ್ತುವ ದೇಶೀ ವ್ಯವಸ್ಥೆಗೆ ಬದಲು ವಿದ್ಯುತ್ ಪಂಪು-ಮೋಟಾರುಗಳು ಬಂದು ಕಪಿಲೆ ಇಲ್ಲದಂತಾಗಿರುವುದರಿಂದ ಮೂರು ಮಂದಿಗೆ ನಿರುದ್ಯೋಗ ಉಂಟಾಗಿದೆ. ಇದರಿಂದ ಕಪಿಲೆ ಹೊಡೆಯುವಾಗ ಸೃಷ್ಟಿಯಾಗುತ್ತಿದ್ದ ಹಾಡುಗಳು ಇಲ್ಲದಂತಾಗುತ್ತವೆ. ಹಾಗೆಯೇ ಫ್ಲೋರ್‌ಮಿಲ್ ಬಂದಿರುವುದರಿಂದ ಬೀಸುವ ಕಲ್ಲಿನ ಗೀತೆಗಳು ಸೃಷ್ಟಿಯಾಗುತ್ತಿಲ್ಲ. ಯಂತ್ರನಾಗರಿಕತೆ ಮತ್ತು ವಿದೇಶೀ ತಂತ್ರಜ್ಞಾನದಿಂದ ನಶಿಸುತ್ತಿರುವ ಶ್ರಮಮೂಲ ಸಂಸ್ಕೃತಿ ಜೊತೆಯಲ್ಲಿಯೇ ಜನಪದ ಸೃಷ್ಟಿಕ್ರಿಯೆಯ ಪ್ರಕಾರಗಳು ಇಲ್ಲದಂತಾಗುತ್ತವೆ. ಜಾಗತೀಕರಣದ ಇಂಥ ಪ್ರಕ್ರಿಯೆಗಳನ್ನು ಅರ್ಥಮಾಡಿಕೊಳ್ಳದೆ ಜಾನಪದವನ್ನಾಗಲೀ, ಸಂಸ್ಕೃತಿಯನ್ನಾಗಲೀ ಉಳಿಸಲು ಕರೆ ಕೊಡುವುದು ಅರ್ಥಹೀನವಾಗುತ್ತದೆ.

ಇದರ ಜೊತೆಯಲ್ಲಿ ಗಮನಿಸಬಹುದಾದ ಇನ್ನೊಂದು ಅಂಶವೆಂದರೆ ಕುಶಲಕರ್ಮಿಗಳ ಸಮಾಜದಲ್ಲಿ ಇರುವ ಪರಸ್ಪರ ಸಹಕಾರತತ್ವ. ಇಲ್ಲಿನ ಮಾನವೀಯ ಸಂಬಂಧಗಳು ವರ್ಗ-ವರ್ಣ ವೈರುಧ್ಯಗಳಿದ್ದರೂ ಅವೆಲ್ಲವನ್ನೂ ಮೀರಿ ಗಾಢವಾಗಿರುತ್ತವೆ. ಮಡಕೆ ಮಾಡುವ ಕುಶಲಕರ್ಮಿಗೆ ಕೃಷಿಕ ಕಾಳು ಕೊಡುತ್ತಾನೆ. ಕೃಷಿಕನಿಗೆ ಬಡಗಿ ಕೃಷಿ ಉಪಕರಣ ತಯಾರಿಸಿಕೊಡುತ್ತಾನೆ. ಬಡಗಿಗೆ ಮಡಿವಾಳ ಬಟ್ಟೆ ಶುಚಿ ಮಾಡಿಕೊಡುತ್ತಾನೆ. ಒಬ್ಬ ಕೃಷಿಕನನ್ನು ಕೇಂದ್ರ ಮಾಡಿಕೊಂಡು ಎಲ್ಲ ಬಗೆಯ ಕುಶಲ ಕರ್ಮಿಗಳು ತಮ್ಮ ತಮ್ಮ ಗೃಹ ಕೈಗಾರಿಕೆಗಳ ಉತ್ಪನ್ನಗಳನ್ನು ಆತನಿಗೆ ನೀಡಿ ಬದಲಿಯಾಗಿ ಆತನಿಂದ ಕೃಷಿ ಉತ್ಪನ್ನಗಳನ್ನು ಪಡೆಯುತ್ತಾರೆ. ಆದಿವಾಸಿ ಸಮಾಜಗಳ ಬಾರ್ಟರ್ ಸಿಸ್ಟಂ ಇಲ್ಲಿ ಕಂಡುಬರುತ್ತದೆ. ಹಣ ದೇಶಿ ಉದ್ದಿಮೆಗಳ ಗ್ರಾಮ ಸಮಾಜಗಳಲ್ಲಿ ಪ್ರಮುಖ ಪಾತ್ರ ವಹಿಸುವುದಿಲ್ಲ. ವರ್ಷಕ್ಕೊಮ್ಮೆ ಹಬ್ಬ ಜಾತ್ರೆಗಳನ್ನು ಏರ್ಪಡಿಸಿಕೊಂಡು ಇಂಥ ಮಾನವೀಯ ಹಾಗೂ ಸಹಕಾರ ಸಂಬಂಧಗಳನ್ನು ಇನ್ನಷ್ಟು ಗಟ್ಟಿಗೊಳಿಸುತ್ತಾ ಹೋಗುತ್ತಾರೆ. ಇಂಡಿಯಾದಂಥ ದೇಶಗಳಲ್ಲಿ ಮಾತ್ರ ಕುಶಲಕಲೆಗಳು ಕುಲಕಸುಬುಗಳಾಗಿ ಅದರಿಂದ ಜಾತಿವ್ಯವಸ್ಥೆ ಬೆಳೆದು ಸ್ವಲ್ಪ ತೊಂದರೆಗಳಾಗಿವೆ. ಊಳಿಗಮಾನ್ಯ ಪದ್ಧತಿ ಇಂಥ ಸಮಾಜಗಳಲ್ಲಿ ನೆಲೆಯೂರಿದೆ. ಆದರೆ ಜಾತಿಗಳೇ ಇಲ್ಲದ ದೇಶಗಳಲ್ಲಿ ಈ ಬಾರ್ಟರ್ ಸಿಸ್ಟಂ ಹಾನಿಕರವೇನೂ ಆಗಿಲ್ಲ. ಅಲ್ಲಿ ಎಲ್ಲರೂ ಸಮಾನರು, ಎಲ್ಲರ ಉತ್ಪನ್ನಗಳು ಎಲ್ಲರಿಗೂ ಬೇಕು. ಆದ್ದರಿಂದ ಪರಸ್ಪರ ಕೊಡು-ಕೊಳ್ಳುವಿಕೆ ಸಾಮಾಜಿಕ ಆರೋಗ್ಯವನ್ನು ಕಾಪಾಡಿಕೊಂಡು ಬಂದಿವೆ. ಯಾವಾಗ ಕುಶಲವಸ್ತುಗಳ ಮಾರುಕಟ್ಟೆಗೆ ಹಣ ಪ್ರವೇಶಿಸಿತೋ ಆಗ ಮಾನವೀಯ ಸಂಬಂಧಗಳು ಕ್ಷೀಣಿಸಿ ಅದರ ಅಂಗವಾದ ಸಂಸ್ಕೃತಿ ಕಾಣೆಯಾಗತೊಡಗಿತು. ಸಂಸ್ಕೃತಿಯನ್ನು ಉಳಿಸಬೇಕೆಂಬ ನಿಜವಾದ ಕಳಕಳಿ ನಮ್ಮಂಥ ದೇಶಗಳಿಗೆ ಇರುವುದೇ ಆದರೆ ಗೃಹ ಕೈಗಾರಿಕೆ, ಹಾಗೂ ಕೃಷಿ ಕೈಗಾರಿಕೆ, ದೇಶೀ ಉದ್ದಿಮೆಗಳನ್ನು ಬದಲಾದ ಸನ್ನಿವೇಶಗಳಿಗನುಗುಣವಾಗಿ ನವೀಕರಿಸಿಕೊಂಡು ಬಹುರಾಷ್ಟ್ರೀಯ ಕಂಪನಿಗಳಿಗೆ ಎದುರು ನಿಲ್ಲಿಸಬೇಕಾಗಿದೆ. ದೇಶೀಯ ಚಿಂತನೆ ಹಾಗೂ ತಂತ್ರಜ್ಞಾನವನ್ನು ವ್ಯಾಪಕವಾಗಿ ಬಳಕೆ ಮಾಡಿಕೊಳ್ಳಬೇಕಾಗಿದೆ. ಜಾಗತೀಕರಣದ ಪ್ರಭಾವ ಆಮಿಷಗಳಿಗೆ ಬಲಿಯಾಗಿ ಎರಡೂ ಕೈಗಳಿಂದ ಅದನ್ನು ಅಪ್ಪಿಕೊಂಡು ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಮಾತನ್ನಾಡುವುದು ರಾಜಕೀಯ ಮೋಸಗಾರಿಕೆಯಾಗುತ್ತದೆ.

---

**ಡಾ॥ ರಂಗಾರೆಡ್ಡಿ ಕೋಡಿರಾಂಪುರ**
ಸಿ. ೯೪೬, 'ಇರುವಂತೆ', ಎ. ಎ. ಪುರಂ
ಗೌರಿಬಿದನೂರು - ೫೬೧ ೨೦೮

ಮೌಲ್ಯಗಳ ಸಂಘರ್ಷ

# ಯುದ್ಧ ಮತ್ತು ಶಾಂತಿಯಲ್ಲಿ ವಿಜ್ಞಾನ

ಡಾ|| ಎಸ್. ಚಟರ್ಜಿ

**ನಾ**ನು ಈ ಲೇಖನವನ್ನು ಸಿದ್ಧಪಡಿಸುತ್ತಿರುವಾಗ ನಮ್ಮ ನೆರೆ ರಾಷ್ಟ್ರದಲ್ಲಿ ಯುದ್ಧ ಆರಂಭವಾಗಿದೆ. ದೂರದರ್ಶನವು ಮಿಸ್ಸೈಲ್‌ಗಳು ತಮ್ಮ ಗುರಿಗಳನ್ನು ನಾಶಗೊಳಿಸುತ್ತಿರುವ ದೃಶ್ಯಗಳನ್ನು ತೋರಿಸುತ್ತಿದೆ. ಇದು ಗಲ್ಫ್ ಹಾಗೂ ಕೊಸೋವೋ ಯುದ್ಧ ದೃಶ್ಯಗಳ ಪುನರಾವರ್ತನೆಯಾಗಿದೆ. ಇದು ವಿಜ್ಞಾನ ಮಾನವನಿಗೆ ನೀಡಿದ ಅಪರಿಮಿತ ಶಕ್ತಿ ಹಾಗೂ ಖಚಿತವಾದ ಕೊಡುಗೆ. ಆದರೆ ನನ್ನ ಮನಸ್ಸಿಗೆ ಇನ್ನೊಂದು ವಿಚಾರ ಹೊಳೆಯುತ್ತಿದೆ. ಅಫ್ಘಾನಿಸ್ತಾನದ ಮಹಿಳೆಯರು ಹಾಗೂ ಮಕ್ಕಳು ಮನೆಗಳನ್ನು ಕಳೆದುಕೊಳ್ಳುತ್ತಿರುವ, ಅವರ ಮನೆಗಳು ಉರುಳಿ ಮಣ್ಣು ಕಲ್ಲಿನ ಗುಪ್ಪೆಗಳಾಗುತ್ತಿರುವ ದೃಶ್ಯಗಳನ್ನೂ ನಾವು ನೋಡುತ್ತಿದ್ದೇವೆ. ಇವುಗಳಲ್ಲಿ ನೀವು ಈ ಜನರ ಪರವೋ ಅಥವಾ ಯುದ್ಧಕೋರರ ಪರವೋ ಎಂಬ ಪ್ರಶ್ನೆಗಳು ಬರುತ್ತವೆ. ನನ್ನ ಮನಸಾಕ್ಷಿಯಂತೂ ಈ ಯುದ್ಧಗಳಲ್ಲಿ ನೊಂದ ಅಮಾಯಕರ ಪರವಾಗಿದೆ.

ಇದು ಕೆಲವು ವರ್ಷಗಳ ಹಿಂದಿನ ನನ್ನ ಅನುಭವವೊಂದನ್ನು ಈಗ ನೆನಪಿಗೆ ತರುತ್ತಿದೆ. ಭೌತಶಾಸ್ತ್ರದ ಪ್ರತಿಭಾವಂತ ವಿದ್ಯಾರ್ಥಿಯೊಬ್ಬನನ್ನು ನಾನು ಭೇಟಿಯಾಗಿದ್ದೆ. ಸ್ಪಿನ್ ಗ್ಲಾಸ್‌ನ ಸಂಖ್ಯಾಭೌತಶಾಸ್ತ್ರದ ಮೇಲೆ ಆತ ಕೆಲಸ ಮಾಡುತ್ತಿದ್ದ. ನಾನು ತಿಳಿಯಲಿಚ್ಛಿಸಿದ್ದೂ ಇದನ್ನೇ. ಇದು ಸಂಚಾರಿ ವ್ಯಾಪಾರಗಾರನ ಸಮಸ್ಯೆಗೆ ಹತ್ತಿರವಾದದ್ದು ಎಂದು ಆತ ಹೇಳಿದ. ಇದು ಆಗ ತುಂಬಾ ಚರ್ಚೆಗೆ ಒಳಗಾದ ವಿಷಯವಾಗಿತ್ತು. ಆದರೆ ಅದರ ಬಗ್ಗೆ ನನಗೆ ಗೊತ್ತಿರಲಿಲ್ಲ. ಆತ ಅದರ ಬಗ್ಗೆ ವಿವರಣೆ ನೀಡಿದ ನಂತರ ಅದು ತುಂಬಾ ಆಸಕ್ತಿದಾಯಕ ಹಾಗೂ ಸವಾಲಿರುವ ವಿಷಯ ಎಂದೆನಿಸಿತು. ಸಮಸ್ಯೆ ಇಷ್ಟೆ : ಒಬ್ಬ ಮಾರಾಟದ ಪ್ರತಿನಿಧಿ (Salesman) ಒಂದೇ ಸರಳ ರೇಖೆಯಲ್ಲಿಲ್ಲದ n ಸಂಖ್ಯೆಯ ಊರುಗಳಿಗೆ ತಿರುಗಾಡ ಬೇಕಾಗಿದೆ ಎಂದುಕೊಳ್ಳಿ. ಈ ಎಲ್ಲಾ ಊರುಗಳಿಗೂ ಭೇಟಿ ನೀಡಬಹುದಾದ ಅತ್ಯಂತ ಸಮೀಪದ ದಾರಿಯೊಂದನ್ನು ಆತ ಹುಡುಕಬೇಕಾಗುತ್ತದೆ. ಈ ವಿವರಣೆ ಕೇಳಿದ ನಂತರ ಇದು ಸಂಕೀರ್ಣತೆಯಿಂದ ಕೂಡಿದ್ದು ಎಂದು ನನಗನಿಸಿತು.

ಈಗ n = ೨ ಅಂದುಕೊಳ್ಳಿ. ಆಗ ಮಾರಾಟದ ಪ್ರತಿನಿಧಿ ಬೆಂಗಳೂರು ಮತ್ತು ತುಮಕೂರಿನಂತಹ ಎರಡು ಊರುಗಳಿಗೆ ಹೋಗಬೇಕಾಗಿದೆ ಎಂದಂತಾಯಿತು. ಇಲ್ಲಿ ಪ್ರಯಾಣಿಸಲು ಸಮೀಪವಿರುವ ಒಂದೇ ರಸ್ತೆ ಹುಡುಕಿದರೆ ಸಾಕು. ಒಂದು ವೇಳೆ n = ೩ ಆದಾಗ ಓಡಾಡಬೇಕಾದ ಊರುಗಳು ಮೂರು (ಬೆಂಗಳೂರು - B, ಮೈಸೂರು - M, ತುಮಕೂರು-T). ಆಗ ಆ ಮೂರೂ ಊರುಗಳನ್ನು ಸಂಪರ್ಕಿಸಲು ಸಾಧ್ಯವಿರುವ ರಸ್ತೆಗಳು ಎಷ್ಟು ? ಉತ್ತರ, ಆರು ದಾರಿಗಳು. ಮೊದಲನೆಯದು BMT. ಎರಡನೆಯದು MBT. ಮೂರನೆಯದು TMB. ನಾಲ್ಕನೆಯದು TBM. ಐದನೆಯದು MTB ಮತ್ತು ಆರನೆಯದು BTM. ಈಗ n = ೪ ಎಂದುಕೊಳ್ಳೋಣ. ಆಗ ಸಾಧ್ಯತೆಯುಳ್ಳ ಮಾರ್ಗಗಳು ೨೪. N = ೭ ಆದಾಗ ಸಾಧ್ಯತೆಯಿರುವ ಮಾರ್ಗಗಳು ೫೦೪೦.

ಈಗ ನಾವು ಪ್ರೌಢಶಾಲೆಯ ಗಣಿತವನ್ನು ನೆನಪಿಸಿಕೊಳ್ಳೋಣ. N=n != ೧x೨x೩x೪...xn. n(ನಗರಗಳ ಸಂಖ್ಯೆ) ಬದಲಾದಹಾಗೆಲ್ಲಾ N(ಮಾರ್ಗಗಳು) ಯಾವ ರೀತಿಯಲ್ಲಿ ಬದಲಾಗುತ್ತವೆ ಎಂಬುದನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದಾಗಿದೆ.

| ನಗರಗಳ ಸಂಖ್ಯೆ - n | ೧ | ೨ | ೩ | ೪ | ೫ | ೬ | ೭ | ೮ | ೯ |
|---|---|---|---|---|---|---|---|---|---|
| ಮಾರ್ಗಗಳ ಸಂಖ್ಯೆ - N | ೧ | ೨ | ೬ | ೨೪ | ೧೨೦ | ೭೨೦ | ೫೦೪೦ | ೪೦೩೨೦ | ೩೬೨೮೮೦ |

ಮೇಲಿನ ಕೋಷ್ಟಕದಿಂದ, ನಾನು ಏಳು ಊರುಗಳನ್ನು ಸಂದರ್ಶಿಸಬೇಕಾದರೆ ಎಲ್ಲಾ ೫೦೪೦ ಮಾರ್ಗಗಳ ದೂರವನ್ನು ಹೋಲಿಕೆ ಮಾಡಿ ನೋಡದೇ ಅತ್ಯಂತ ಸಮೀಪದ ದಾರಿ ಯನ್ನು ಕಂಡುಕೊಳ್ಳಲು ಸಾಧ್ಯವಿಲ್ಲ. ಆದರೆ ಇದು ಮೂರ್ಖತನದ ಕೆಲಸ ಎಂದ ನನ್ನ ಗೆಳೆಯ. ಈ ಪಟ್ಟಣಗಳನ್ನು ಸೇರಿಸುವ ರಸ್ತೆಗಳ ಕೆಲವು ವಿನ್ಯಾಸಗಳು ನಿಮಗೆ ತಿಳಿದಿದ್ದರೆ ಈ ಕೆಲಸ ಇನ್ನೂ ಸುಲಭವಾಗಬಲ್ಲದು. ಉದಾಹರಣೆಗೆ, ಏಳು ಪಟ್ಟಣಗಳ ಪೈಕಿ ನಾಲ್ಕು ಪಟ್ಟಣಗಳ ಒಂದು ಗುಂಪು ಹಾಗೂ ಮೂರು ಪಟ್ಟಣಗಳ ಇನ್ನೊಂದು ಗುಂಪು ಮಾಡಿ ಕೊಂಡು ಅವುಗಳ ನಡುವಿನ ಅತ್ಯಂತ ಸಮೀಪದ ದಾರಿಗೆ ಪ್ರಯತ್ನಿಸಬಹುದು. ಅವರು ಪ್ರಯತ್ನಿಸುತ್ತಿರುವ ಬಗೆ ನನಗೆ ಇಷ್ಟವಾಯಿತು. ಇಂತಹ ಸಮಸ್ಯೆಗಳ ಮೇಲೆ ಯಾರು ಕೆಲಸ ಮಾಡುತ್ತಿದ್ದಾರೆಂದು ನಾನು ಕೇಳಿದೆ.

ನಿಮಗೆ ಗೊತ್ತಿಲ್ಲವೇ? ಐ. ಬಿ. ಎಂ. ನವರು ಮಿಲಿಯನ್‌ಗಟ್ಟಲೆ ಡಾಲರ್ ನೀಡಿ ಸ್ಕಾಟ್ ಕರ್ಕ್‌ಪಟ್ರಿಕ್‌ರನ್ನು ಈ ಸಮಸ್ಯೆಯ ಮೇಲೆ ಕೆಲಸ ಮಾಡಲು ಆಹ್ವಾನಿಸಿದ್ದಾರೆ, ಎಂದು ಅವರು ತಿಳಿಸಿದರು. ಇದರಿಂದ ಅವರಿಗೇನು ಲಾಭ ಎಂದು ನಾನು ಕೇಳಿದಾಗ ಉತ್ತರ ಬಹಳ ಸರಳವೆಂದು ಅವರು ನುಡಿದರು. ಆಧುನಿಕ ಕಂಪ್ಯೂಟರ್‌ಗಳಲ್ಲಿ ಬಹಳಷ್ಟು ಭಾಗಗಳಿರುವುದರಿಂದ ಅವುಗಳು ಕೆಲಸ ಮಾಡುವುದು ತುಂಬಾ ನಿಧಾನವಾಗುತ್ತದೆ. ಏಕೆಂದರೆ ಎಲೆಕ್ಟ್ರಾನ್ ಈ ಎಲ್ಲಾ ಭಾಗಗಳ ಮೂಲಕ ಹಾಯ್ದು ಹೋಗಬೇಕಾಗುತ್ತದೆ. ಈ ಭಾಗಗಳು ನಗರಗಳನ್ನು ಸುತ್ತುವ ಸಂಚಾರಿ ವ್ಯಾಪಾರಿಯದ್ದಂತೆ. ಆದ್ದರಿಂದ ಎಲೆಕ್ಟ್ರಾನ್‌ಗಳು ಕಡಿಮೆ ದೂರ ಚಲಿಸುವಂತೆ ಭಾಗಗಳನ್ನು ಜೋಡಿಸಿದಲ್ಲಿ ಕಂಪ್ಯೂಟರಿನ ವೇಗವನ್ನು ಹೆಚ್ಚಿಸಬಹುದು. ಸಮಸ್ಯೆಯಿರುವುದು ಸಾವಿರಾರು ಬಿಡಿ ಭಾಗಗಳನ್ನು ಹೊಂದಿರುವ ಕಂಪ್ಯೂಟರ್‌ನಲ್ಲಿ ಈ ರೀತಿಯ ಕಡಿಮೆ ದೂರದ ಮಾರ್ಗವನ್ನು ಹುಡುಕುವುದರಲ್ಲಿ.

ಅವನಿಗೆ ಒಳ್ಳೆಯದಾಗಲಿ ಎಂದು ಹಾರೈಸಿದ ನಂತರ ನನ್ನ ಮನಸ್ಸು ಚಿಂತಿಸಿತು. ಜ್ಞಾನ ಯಾವ ರೀತಿ ನಮ್ಮಂತಹ ಬಡ ದೇಶಕ್ಕೆ ಸಹಾಯವಾದೀತು ಎಂಬ ಬಗ್ಗೆ ನಾನು ಯೋಚಿಸಿದೆ. ತಕ್ಷಣ ನನಗೆ ನೆನಪಾದದ್ದು, ಡಿ. ಡಿ. ಕೋಸಾಂಬಿಯವರು ಹಿಂದಿನ ಸಾಂಪ್ರದಾಯಿಕ ವ್ಯಾಪಾರ ಮಾರ್ಗಗಳ ಜ್ಞಾನದ ಸಹಾಯದಿಂದ ನಮ್ಮ ದೇಶದ ರಸ್ತೆಗಳು ಹೇಗಿರಬೇಕೆಂದು ಯೋಜನಾ ಆಯೋಗಕ್ಕೆ ಸಲಹೆ ಮಾಡಿದ್ದರೆಂದು. ನನ್ನ ಗೆಳೆಯನ ಲೆಕ್ಕಾಚಾರದಂತೆ ನಮ್ಮ ದೇಶದ ರಸ್ತೆಗಳು ಹೇಗೆ ಗರಿಷ್ಠ ಹಳ್ಳಿಗಳನ್ನು ಸಂಪರ್ಕಿಸಬಹುದು ಹಾಗೂ ನೀರಾವರಿ ಕಾಲುವೆಗಳನ್ನು ಯಾವ ರೀತಿಯಲ್ಲಿ ತೋಡಿದರೆ ಅವು ಕಡಿಮೆ ದೂರದಲ್ಲಿ ಅತಿ ಹೆಚ್ಚು ಭೂಮಿಗೆ ನೀರನ್ನು ಒದಗಿಸಬಲ್ಲವು ಎಂಬ ಬಗ್ಗೆ ನಾನು ಯೋಚಿಸುತ್ತೇನೆ. ಇದು ಸಂಪನ್ಮೂಲಗಳು ಪೋಲಾಗುವು ದನ್ನು ತಪ್ಪಿಸುತ್ತದೆ, ಮಾತ್ರವಲ್ಲ, ಹೆಚ್ಚು ಜನರಿಗೆ ಉಪಯೋಗವಾಗಲಿದೆ. ಜನರು ತಮಗೆ ಬೇಕಾದ ಅಗತ್ಯತೆಗಳನ್ನು ಸುಲಭವಾಗಿ ಪಡೆಯಲು ಸಾಧ್ಯವಾಗುತ್ತದೆ.

ಆದರೆ ಮತ್ತೊಂದು ವಿಷಯ ನನಗೆ ಹೊಳೆಯುತ್ತದೆ. ತನ್ನನ್ನು ವಿರೋಧಿಸುವ ರಾಷ್ಟ್ರಗಳ ಮೇಲೆ ಬಾಂಬು ಹಾಕಿ ತನ್ನ ವಿಮಾನಗಳನ್ನು ಸುರಕ್ಷಿತವಾಗಿ ಹಾಗೂ ಕಡಿಮೆ ಉರುವಲಿನಿಂದ ನಡೆಸಲು ಅಮೆರಿಕಾದವರು ಇದನ್ನು ಉಪಯೋಗಿಸಿಕೊಳ್ಳಬಹುದು. ತಕ್ಷಣ ನನಗೆ ತಿಳಿಯಿತು. ಈ ಜ್ಞಾನ ಎಲ್ಲರಿಗೂ ಲಭ್ಯವಾಗುವಂಥದಲ್ಲ. ಇದು ವ್ಯಾಪಾರದ ಗುಟ್ಟು ಎಂದೂ ಕೂಡ ನನಗೆ ತಿಳಿದಿದೆ. ಇದನ್ನು ನಮ್ಮ ರಸ್ತೆ ಹಾಗೂ ಕಾಲುವೆಗಳ ನಿರ್ಮಾಣದಲ್ಲಿ ಉಪಯೋಗಿಸಲು ಸಾಧ್ಯವಿಲ್ಲ. ಹಾಗೇನಾದರೂ ಉಪಯೋಗಿಸಬೇಕಾದಲ್ಲಿ ಪೇಟೆಂಟ್ ಪಡೆಯಬೇಕು. ಇಲ್ಲವೆಂದರೆ ನಮ್ಮ ಮೇಲೆ ಹೇರುವ ರಾಚನಿಕ ಹೊಂದಾಣಿಕೆ (Structural Readjustment) ಯನ್ನು ಒಪ್ಪಿಕೊಳ್ಳಬೇಕು.

ನಾನು ಸಿನಿಕನಂತೆ ಯೋಚಿಸುವುದಿಲ್ಲ. ನನ್ನ ಗೆಳೆಯನೊಂದಿಗಿನ ಈ ಸಂವಾದ ಎಂಬತ್ತರ ದಶಕದ ಮಧ್ಯದಲ್ಲಿ ನಡೆದದ್ದು ಮತ್ತು ಬೈರೂತ್, ನಿಕರಾಗುವ, ಎಲ್ ಸಾಲ್ವಡಾರ್, ಗ್ವಾಟೆಮಾಲಾ ಅಥವಾ ಗ್ರೆನೆಡಾದ ಯುದ್ಧಗಳನ್ನು ಹೇಗೆ ಗೆಲ್ಲಲಾಯ್ತು ಎಂಬ ಬಗ್ಗೆ ನಾವು ಸುದ್ದಿ ಮಾಧ್ಯಮಗಳಿಂದ ಸಂಗ್ರಹಿಸಿದ್ದೇವೆ. ಪ್ರಜಾಪ್ರಭುತ್ವವಾದಿಗಳೆನ್ನುವವರು ಕಳೆದ ದಶಕಗಳಲ್ಲಿ 'ಮುಸ್ಲಿಮ್ ಭ್ರಾತೃತ್ವ'ದ ಮೂಲಕ ಹೇಗೆ ಅಫ್ಘಾನಿಸ್ತಾನದ ಬಾಬ್ರಕ್ ಕರ್ಮಾಲ್ ಮತ್ತು ಡಾ|| ನಜೀಬುಲ್ಲಾ ಸರ್ಕಾರಗಳನ್ನು ಚಿತ್ರಹಿಂಸೆಗೆ ಗುರಿ ಮಾಡಿದರು ಎಂಬುದನ್ನು ನಾವು ಕೇಳಿದ್ದೇವೆ. ನನ್ನ ಸ್ನೇಹಿತನೊಂದಿಗಿನ ಸಂವಾದದಿಂದ ನನಗೆ ವಿಜ್ಞಾನದ ಜ್ಞಾನ ಎಷ್ಟರಮಟ್ಟಿಗೆ ಯುದ್ಧ ಮಾಡುವುದಕ್ಕೆ ಮತ್ತು ಪ್ರಜಾಪ್ರಭುತ್ವ ಹಾಗೂ ನಾಗರಿಕತೆ ಬೆಳವಣಿಗೆಗೆ ಬಳಕೆಯಾಗಿದೆ ಎಂದು ತಿಳಿಯಿತು.

ಭೌತಶಾಸ್ತ್ರ ಹಾಗೂ ರಸಾಯನ ಶಾಸ್ತ್ರದ ವಿಷಯದಲ್ಲಿ ಬಹಳ ಸುಲಭ. ಯುದ್ಧಗಳಲ್ಲಿ ಇವುಗಳನ್ನು ನೇರವಾಗಿ ಬಳಸಲಾಗುತ್ತಿದೆ. ನನ್ನಲ್ಲಿ ಭೀತಿಯುಂಟುಮಾಡಿದ ವಿಷಯವೆಂದರೆ

ಮಿಲಿಟರಿಗಾಗಿ ಎಷ್ಟು ಗಣಿತವನ್ನು ಬಳಸಲಾಗುತ್ತದೆ ಎನ್ನುವುದು. ಅಮೇರಿಕಾದಲ್ಲಿ ಗಣಿತ ಮತ್ತು ಕಂಪ್ಯೂಟರ್ ಕ್ಷೇತ್ರಕ್ಕೆ ಶೇ. ೬೦ರಷ್ಟು ನೆರವನ್ನು ಮಿಲಿಟರಿಯಿಂದ ನೀಡಲಾಗುತ್ತಿದೆ. ಭಾರತದಲ್ಲಿಯೂ ರಕ್ಷಣಾ ಇಲಾಖೆಯಲ್ಲಿ ಹೆಚ್ಚು ಗಣಿತ ಹಾಗೂ ಕಂಪ್ಯೂಟರ್ ತಜ್ಞರು ತುಂಬಿಕೊಂಡಿದ್ದಾರೆ. ಅವರು ಅಲ್ಲಿ ಏನು ಮಾಡುತ್ತಾರೆಂದು ತಿಳಿಯಲು ನಾನು ಪ್ರಯತ್ನಿಸಿದೆ. ಇವರ ಪರಿಣತಿಯನ್ನು ಕೆಲವು ಪ್ರಮುಖ ಕ್ಷೇತ್ರಗಳಗೆ ಬಳಸಿಕೊಳ್ಳಲಾಗುತ್ತದೆಂದು ತಿಳಿಯಿತು. ಅವುಗಳೆಂದರೆ ಕ್ಷಿಪಣಿಗಳನ್ನು ಗುರಿಯತ್ತ ಮುಟ್ಟುವಂತೆ ಮಾಡುವುದು, ಅವುಗಳು ಚಲಿಸುವ ಮಾರ್ಗದ ಬಗ್ಗೆ ಲೆಕ್ಕಾಚಾರ ಮಾಡುವುದು; ಈ ಸಂದರ್ಭದಲ್ಲಿ ಗಾಳಿಯ ವೇಗೋತ್ಕರ್ಷ, ಗಾಳಿಯ ಪ್ರತಿರೋಧ, ಭೂಮಿಯ ತಿರುಗುವಿಕೆ, ಗುರುತ್ವಾಕರ್ಷ ಮತ್ತು curvature ಗಳನ್ನು ಕಂಡುಹಿಡಿಯುವುದು.

ನಂತರ ಸಿದ್ಧಾಂತಕ್ಕೆ ಸಂಬಂಧಿಸಿದ ಪ್ರಶ್ನೆಗಳು ಉದ್ಭವಿಸುತ್ತವೆ. ಇದು ಕಾರ್ಯತಂತ್ರ ಮತ್ತು ತಂತ್ರಗಾರಿಕೆಗೆ ಸಂಬಂಧಿಸಿದ್ದು. ಇದನ್ನು ಅರ್ಥಶಾಸ್ತ್ರದಿಂದ ತೆಗೆದುಕೊಳ್ಳಲಾಗಿದ್ದು ಇವನ್ನು 'ಆಟದ ಸಿದ್ಧಾಂತ' ಎನ್ನುತ್ತಾರೆ. ಎರಡು ಗುಂಪುಗಳ ನಡುವೆ ನಡೆಯುವ ವ್ಯಾಪಾರ ಸ್ಪರ್ಧೆಯನ್ನು ಆಟ ಎನ್ನುತ್ತಾರೆ. ಇಲ್ಲಿ ಒಬ್ಬರು ಇನ್ನೊಬ್ಬರಿಂದ ಗಳಿಸಲು ಪ್ರಯತ್ನಿಸುತ್ತಾರೆ. ಮಿಲಿಟರಿ ಕಾರ್ಯತಂತ್ರ ರೂಪಿಸುವವರೂ ಕೂಡ ಯುದ್ಧವನ್ನು ಒಂದು ಆಟವೆಂದೇ ಅರ್ಥಮಾಡಿಕೊಳ್ಳುತ್ತಾರೆ. ಇಲ್ಲಿ ವೈರಿಯನ್ನು ನಾಶ ಮಾಡುವುದೊಂದೇ ಗುರಿಯಾಗಿರುತ್ತದೆ. ಆದ್ದರಿಂದ ವ್ಯಾಪಾರದ ಹಾಗೂ ಮಿಲಿಟರಿ ಪೈಪೋಟಿಯಲ್ಲಿ ಗಣಿತ ಮುಖ್ಯ ಪಾತ್ರ ವಹಿಸುತ್ತದೆ. ಈ ರೀತಿಯ ಮಾದರಿಯನ್ನು ಮೊದಲು ಕಂಡುಹಿಡಿದವನು ಬ್ರಿಟಿಷ್ ಮೋಟಾರು ಇಂಜಿನಿಯರ್ ಮತ್ತು ಗಣಿತಜ್ಞ- ವಿಲಿಯಮ್ ಲಾಂಚೆಸ್ಟರ್. ವಿಮಾನಗಳ ಪ್ರವೇಶದ ನಂತರ ಯುದ್ಧ ಕ್ಷೇತ್ರದಲ್ಲಿ ಗುಣಾತ್ಮಕ ಬದಲಾವಣೆಯಾಗಿರುವುದನ್ನು ಆತ ಗುರ್ತಿಸಿದ. ಹಿಂದಿನ ಕಾಲದಲ್ಲಿ ಒಂದು ಆಯುಧ ಮತ್ತೊಂದು ಆಯುಧವನ್ನು ಎದುರಿಸುತ್ತಿತ್ತು. ಉದಾಹರಣೆಗೆ, ಕತ್ತಿಗೆ ಎದುರಾಗಿ ಗುರಾಣಿಯನ್ನು ರಕ್ಷಣೆಗಾಗಿ ಬಳಸಲಾಗುತಿತ್ತು. ಬಂದೂಕದ ಗುಂಡನ್ನು ಗುಂಡಿನಿಂದ ಎದುರಿಸಲಾಗುತ್ತಿತ್ತು. ಇಲ್ಲಿ ಒಬ್ಬರು ಮಾತ್ರ ಸಾವಿಗೀಡಾಗುವ ಸಾಧ್ಯತೆಯಿತ್ತು. ಇದಕ್ಕೆ ಕಾರಣವೆಂದರೆ ಒಂದು ಗುಂಡಿನಿಂದ ಒಬ್ಬರನ್ನು ಮಾತ್ರ ಕೊಲ್ಲಲು ಸಾಧ್ಯವಿತ್ತು. ಹಾಗೆಯೇ ಕತ್ತಿ ಬೀಸುವುದರಿಂದ ಒಬ್ಬರನ್ನು ಮಾತ್ರ ಕೊಲ್ಲಲು ಸಾಧ್ಯ. ಆದರೆ ನವೀನ ಅಸ್ತ್ರಗಳ ಕಾಲದಲ್ಲಿ ರಕ್ಷಣೆಯೆನ್ನುವುದು ನೇರವಾಗಿರುವುದಿಲ್ಲ. ಅಂದರೆ ವೈರಿಯು ತನ್ನ ಗುರಿಯನ್ನು ಮುಟ್ಟುವುದರೊಳಗೆ ಆತನನ್ನೇ ಮುಗಿಸಿಬಿಡಬಹುದು. ಲಾಂಚೆಸ್ಟರ್ ಹಾಕಿದ ಪ್ರಶ್ನೆಯೆಂದರೆ ಗಾತ್ರದಲ್ಲಿ ಚಿಕ್ಕದಿರುವ ಸೈನ್ಯ ಆಧುನಿಕ ಅಸ್ತ್ರಗಳ ಮೂಲಕ ದೊಡ್ಡ ಸೈನ್ಯದ ವಿರುದ್ಧ ಹೋರಾಡಬಹುದೇ ? ಆತನ ವಿಶ್ಲೇಷಣೆಯ ಪ್ರಕಾರ ಇದು ಸಾಧ್ಯವಿದೆ. ಇದೇ ನೂತನ ಯುದ್ಧ ಮಾದರಿಗಳಾಗಿದ್ದು ಇದನ್ನು ಪುಸ್ತಕಗಳಲ್ಲಿ ನಾವು ಕಾಣಬಹುದಾಗಿದೆ. ಇದಕ್ಕೆ ಉದಾಹರಣೆಯೆಂದರೆ ವಿಯೆಟ್ನಾಂನ ಪುಟ್ಟ ಸೈನ್ಯ ಗೆರಿಲ್ಲಾ ತಂತ್ರದ ಮೂಲಕ ತನಗಿಂತ ಆರು ಪಟ್ಟು ದೊಡ್ಡದಾದ ಸೈನ್ಯವನ್ನು ಸೋಲಿಸಿದ್ದು. ತನಗಿಂತ ಹತ್ತು ಪಟ್ಟು ದೊಡ್ಡ ಸೈನ್ಯಕ್ಕೆ ಸರಿಯಾದ ಪೆಟ್ಟು ನೀಡುವಂತಹ ಪರಿಣಾಮಕಾರಿ ಸಾಮರ್ಥ್ಯವನ್ನು ವಿಯೆಟ್ನಾಂ ಸೈನ್ಯ ಹೊಂದಿದ್ದನ್ನು ನಾವು ಕಾಣಬಹುದು. ಇದು ಪ್ಯಾರಿಸ್ ಶಾಂತಿ ಮಾತುಕತೆಗೆ ದಾರಿ ಮಾಡಿಕೊಟ್ಟಿತು. ಆದರೆ ಇದಕ್ಕಾಗಿ ವಿಯೆಟ್ನಾಂ ವೈರಿಯ ನಿರ್ನಾಮ ಅಥವಾ ಸೋಲು ಎರಡನ್ನೂ ಎದುರಿಸ ಬೇಕಾಯ್ತು. ವಿಯೆಟ್ನಾಂ ಯಾವಾಗಲೂ ಶಾಂತಿಯ ಮಾತುಕತೆಗಾಗಿ ಒತ್ತಾಯಿಸುತ್ತಿತ್ತು. ಆದರೆ ಇದಕ್ಕೆ ಉತ್ತರವಾಗಿ ಬಾಂಬಿನ ಸುರಿಮಳೆಯನ್ನೆದುರಿಸ ಬೇಕಾಯ್ತು. 'ಏಜೆಂಟ್ ಆರೆಂಜ್' ಎಂಬ ರಾಸಾಯನಿಕವನ್ನು ಅಮೆರಿಕಾ ವಿಯೆಟ್ನಾಂ ನೆಲದ ಮೇಲೆ ಸುರಿಯಿತು. ನೆಲವೆಲ್ಲಾ ಕೃಷಿಗೆ ಯೋಗ್ಯವಿಲ್ಲವಾಯಿತು.

ಮೇಲಿನ ಯುದ್ಧ ಮಾದರಿಗಳಲ್ಲದೇ ನವೀನ ಯುದ್ಧ ಕ್ಷೇತ್ರ ಅನೇಕ ವೈಜ್ಞಾನಿಕ ಶಿಸ್ತನ್ನು ಅಳವಡಿಸಿಕೊಂಡಿದೆ. ಅವುಗಳೆಂದರೆ ಕಾರ್ಯಾಚರಣೆ ಸಂಶೋಧನೆ ಮಾದರಿಯನ್ನು ಗುರ್ತಿಸುವುದು, ಅಪಾಯದ ವಿಶ್ಲೇಷಣೆ, ಕೋಡ್ ಮಾಡುವುದು, ಸಮಸ್ಯೆಗಳನ್ನು ಹುಡುಕುವುದು ಇತ್ಯಾದಿ. ಇವೆಲ್ಲವುಗಳಿಗೂ ಗಣಿತದಲ್ಲಿ ಪ್ರಾವೀಣ್ಯತೆ ಹೊಂದಿರಲೇಬೇಕು.

ಕಾರ್ಯಾಚರಣೆಯ ಎರಡು ಬೇರೆ ಬೇರೆ ವಸ್ತುಗಳನ್ನು ಒಟ್ಟಾಗಿಸಲು ಕಾರ್ಯಾಚರಣೆ ಸಂಶೋಧನೆಯನ್ನು, ರಾಡಾರ್ ತೆರೆಯ ಮೇಲೆ ಮಿಸ್ಸೈಲ್ ಚಿತ್ರ ಪಡೆಯಲು ಮಾದರಿ ಗುರ್ತಿಸುವಿಕೆಯನ್ನು ಉಪಯೋಗಿಸಲಾಗುತ್ತದೆ. ಅಪಾಯದ ವಿಶ್ಲೇಷಣೆಯಿಂದ ವೈರಿಯ ಆಕ್ರಮಣದಿಂದ ಉಂಟಾಗುವ ಹಾನಿಯ ಪ್ರಮಾಣವನ್ನು ಲೆಕ್ಕ ಹಾಕಬಹುದು. ಇದರಲ್ಲಿ ಪ್ರಾಣಹಾನಿ, ಕಾರ್ಖಾನೆಗಳು, ಅಣೆಕಟ್ಟೆಗಳು, ಸಾರಿಗೆ ಹಾಗೂ ಸಂಪರ್ಕ ವ್ಯವಸ್ಥೆ ಸೇರುತ್ತವೆ. ಯುದ್ಧ ಸಂದರ್ಭದಲ್ಲಿ ವೈರಿಗೆ ಗೊತ್ತಾಗದಂತೆ ಸಂದೇಶ ರವಾನಿಸಲು ಕೋಡಿಂಗ್ ಬಳಸುತ್ತಾರೆ. ಇದರಲ್ಲಿ ಶತ್ರುವಿನ ಕೋಡಿಂಗ್ ಅನ್ನು ಬಹಿರಂಗಪಡಿಸಲೂ ಪ್ರಯತ್ನ

ನಡೆಯುತ್ತದೆ. ಇಲ್ಲಿ ಭಾಷಾ ಪರಿಣತಿಯೂ ಬೇಕಾಗುತ್ತದೆ.

ಈ ಎಲ್ಲಾ ಪರಿಣತಿಗಳು ಮನುಷ್ಯನ ಒಳಿತಿಗಾಗಿ ಏನು ಮಾಡಿವೆಯೆಂದು ನನಗೆ ಅಚ್ಚರಿಯಾಗುತ್ತದೆ. ಅದರಲ್ಲಿಯೂ ಆಫ್ಘಾನಿಸ್ತಾನದ ಜನತೆಗೆ ಇವು ಏನು ಮಾಡಿವೆ? ಕಳೆದ ಮೂರು ವರ್ಷಗಳಿಂದ ಭೀಕರ ಬರಗಾಲ ಎದುರಿಸುತ್ತಿರುವ ಆ ದೇಶವನ್ನು ಈಗ ನಡೆಯುತ್ತಿರುವ ಯುದ್ಧ ತತ್ತರಿಸುವಂತೆ ಮಾಡಿದೆ. ಜನರಿಂದ ತಿರಸ್ಕರಿಸಲ್ಪಟ್ಟ ಸರ್ಕಾರದ ಆಕ್ರಮಣಕ್ಕೆ ತುತ್ತಾದ ಆ ಜನರಿಗೆ ಮಾನವೀಯ ನೆರವುಗಳಾದ ಆಹಾರ, ಬಟ್ಟೆ, ಔಷಧಿ, ಕುಡಿಯಲು ನೀರು, ವ್ಯವಸಾಯದಲ್ಲಿ ಉನ್ನತ ವಿಧಾನ ಇವುಗಳ ಅಗತ್ಯವಿತ್ತು. ಈ ದೇಶ ೧೬,೦೦೦ ಕಿ. ಮೀ. ರಸ್ತೆಯನ್ನು ಮಾತ್ರ ಹೊಂದಿದ್ದು ರೈಲ್ವೆಯನ್ನು ಹೊಂದಿರುವುದಿಲ್ಲ. ಮತ್ತೊಂದು ಉತ್ತಮವಾದ ಪ್ರದೇಶಕ್ಕೆ ಪ್ರಯಾಣಿಸುವುದೂ ಆಫ್ಘನ್ ಜನರಿಗೆ ತುಂಬಾ ಪ್ರಯಾಸಕರ. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಆಫ್ಘನ್ ಜನತೆ ಒಂದು ಸರ್ಕಾರವನ್ನು ಬೆಂಬಲಿಸಿದರು. ಆ ಸರ್ಕಾರ ಜನರಿಗೆ ಅಗತ್ಯವಾದ ಆಸ್ಪತ್ರೆ, ಶಾಲೆಗಳು, ತರಬೇತಿ ಪಡೆದ ವೈದ್ಯರು, ಇಂಜಿನಿಯರ್‌ಗಳು ಮತ್ತು ಮಹಿಳೆಯರಿಗೆ ದುಡಿಯಲು ಅವಕಾಶ ಒದಗಿಸಿತು. ಆದರೆ ಪ್ರಪಂಚದಲ್ಲೇ ವಿಜ್ಞಾನದಲ್ಲಿ ಮುಂದುವರಿದ ಅಮೆರಿಕಾ ಪ್ರಗತಿ ವಿರೋಧಿ ಹಾಗೂ ಕಂದಾಚಾರ ಆಚರಿಸುವ ಶಕ್ತಿಗಳನ್ನು ಬೆಂಬಲಿಸಿ ನಾಗರಿಕ ಸರ್ಕಾರವನ್ನು ಉರುಳಿಸಿತು.

ಆಫ್ಘಾನಿಸ್ತಾನದಲ್ಲಿ ನೈಸರ್ಗಿಕ ಸಂಪನ್ಮೂಲಗಳ ಕೊರತೆಯಿದ್ದು ಅದರಿಂದ ಜನ ಬಡವರಾಗಿದ್ದಾರೆಂದು ಕೆಲವರು ಭಾವಿಸಿರಬಹುದು. ಇದು ನಿಜವಲ್ಲ . ಆ ದೇಶ ಕಬ್ಬಿಣದ ಅದಿರು ಹಾಗೂ ನೈಸರ್ಗಿಕ ಅನಿಲವನ್ನು ಯಥೇಚ್ಛವಾಗಿ ಹೊಂದಿದೆ. ಆಫ್ಘಾನಿಸ್ತಾನ ಎಷ್ಟೇ ಹಿಂದುಳಿದಿದ್ದರೂ ಈ ನೈಸರ್ಗಿಕ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಕೈಗಾರಿಕೆಗಳನ್ನು ಆರಂಭಿಸಬಹುದು. ಪಾಶ್ಚಿಮಾತ್ಯರು ಪ್ರಸ್ತುತ ನೀಡುತ್ತಿರುವ ಮಾನವೀಯ ನೆರವುಗಳಿಗಿಂತ ಆಫ್ಘಾನಿಸ್ತಾನಕ್ಕೆ ಕೈಗಾರಿಕೆಗಳನ್ನು ಆರಂಭಿಸುವುದು ಮುಖ್ಯವಾಗಿದೆ. ಕಮ್ಯುನಿಸ್ಟರು ಅಧಿಕಾರದಲ್ಲಿದ್ದಾಗ ಈ ದೃಷ್ಟಿ ಹೊಂದಿದ್ದರು. ಆದರೆ ವಿಜ್ಞಾನದಲ್ಲೇ ದೈತ್ಯ ಶಕ್ತಿಯೆಂದು ಕರೆದುಕೊಳ್ಳುವ ಅಮೆರಿಕಾ ಪ್ರಪಂಚದ ಯಾವುದೇ ದೇಶದಲ್ಲಿಯೂ ವಿಜ್ಞಾನ ಬೆಳೆಯಲು ಬಿಡಲಿಲ್ಲ.

ದುರದೃಷ್ಟವಶಾತ್ ಈ ದೈತ್ಯ ಶಕ್ತಿಯೆಂದು ಕರೆದುಕೊಳ್ಳುವ ದೇಶ ಕೈಗಾರಿಕಾ ಬಂಡವಾಳ, ವಿಜ್ಞಾನಿಗಳು ಹಾಗೂ ವಿಜ್ಞಾನದ ಜ್ಞಾನವನ್ನು ಯಥೇಚ್ಛವಾಗಿ ಹೊಂದಿದೆ ಮತ್ತು ಈ ಮೂರೂ ಕೂಡ ರಾಜಕೀಯ ಇಚ್ಛಾಶಕ್ತಿಯ ಅಡಿಯಾಳಾಗಿವೆ. ಈಗ ಒಂದು ಕ್ಷಣ ಯೋಚಿಸೋಣ, ವಿಜ್ಞಾನ ಏನು ಮಾಡಬಲ್ಲದೆಂದು? ಇಪ್ಪತ್ತನೇ ಶತಮಾನದ ವೈಜ್ಞಾನಿಕ ಕ್ರಾಂತಿ ನಮ್ಮನ್ನು ಪ್ರಕೃತಿಯ ಆಳಕ್ಕಿಳಿದು ನೋಡುವಂತೆ ಮಾಡಿದೆ. ನಾವು ಒಂದು ಪರಮಾಣುವಿನ ಒಳಹೊಕ್ಕು ನೋಡಬಹುದಾಗಿದೆ ಮತ್ತು ಅದರಲ್ಲಿರುವ ಅಗಾಧ ಶಕ್ತಿಯನ್ನು ಪಡೆಯಬಲ್ಲವರಾಗಿದ್ದೇವೆ. ರಾಸಾಯನಿಕ ವಸ್ತುಗಳ ಬಗೆಗಿನ ನಮ್ಮ ತಿಳುವಳಿಕೆ ಮನುಷ್ಯನಿಗೆ ಅಗತ್ಯವಾದ ಔಷಧಿ ತಯಾರಿಸಲು ಹಾಗೂ ಕಂಪ್ಯೂಟರ್ ಚಿಪ್‌ಗಳಿಗೆ ಬೇಕಾದ ಹೊಸ ವಸ್ತುಗಳನ್ನು ಉತ್ಪಾದಿಸಲು ನಮಗೆ ನೆರವಾಗಿದೆ. ವಿಜ್ಞಾನದಿಂದ ಜೀವನದ ಅನೇಕ ರಹಸ್ಯಗಳನ್ನು ಬಯಲು ಮಾಡಿದ್ದು, ಇಂದು ಜಿನೋಮ್ ನಕ್ಷೆ ತಯಾರಿಸುವ ಹಂತಕ್ಕೆ ಮುಟ್ಟಿದ್ದೇವೆ. ಇದು ಜನರನ್ನು ಅನೇಕ ಕಾಯಿಲೆಗಳ ಅಪಾಯದಿಂದ ರಕ್ಷಿಸಲು ಹಾಗೂ ಜಾತಿ ಜನಾಂಗಗಳ ಬಗ್ಗೆ ಇದ್ದ ತಪ್ಪು ತಿಳುವಳಿಕೆಯನ್ನು ತಿರಸ್ಕರಿಸಲು ಸಹಾಯ ಮಾಡಿದೆ.

ಜೀನ್‌ಗಳ ಬಗೆಗಿನ ತಿಳುವಳಿಕೆ ಪರಿಣಾಮಕಾರಿ ಔಷಧಗಳು ಮತ್ತು ಬೀಜಗಳ ಉತ್ಪಾದನೆಗೆ ಸಹಕಾರಿಯಾಗಿದೆ. ಸಂಪರ್ಕ ಮಾಧ್ಯಮದಲ್ಲಾದ ಕ್ರಾಂತಿಯಿಂದ ಕ್ಷಣಮಾತ್ರದಲ್ಲಿ ಪ್ರಪಂಚದ ಯಾವುದೇ ಮೂಲೆಗೆ ಸುದ್ದಿ ರವಾನಿಸಬಹುದಾಗಿದೆ. ಈಗಿನ ರಿಮೋಟ್ ಸೆನ್ಸಿಂಗ್ ತಂತ್ರಜ್ಞಾನದಿಂದ ನೈಸರ್ಗಿಕ ಸಂಪನ್ಮೂಲಗಳನ್ನು ಗುರ್ತಿಸಬಹುದಾಗಿದೆ. ಶಕ್ತಿಯುತ ದೂರದರ್ಶಕಗಳು ಗೆಲಾಕ್ಸಿಗಳ ಚಲನೆ ಮತ್ತು ಈ ವಿಶ್ವದ ಇತಿಹಾಸ, ಇದರ ಆರಂಭ ಕೊನೆಗಳ ಬಗ್ಗೆ ತಿಳಿಸುತ್ತವೆ.

ಇವೆಲ್ಲವೂ ಮಾನವನ ಮನಸ್ಸನ್ನು ಚಿಂತನೆಗೆ ಒಳಪಡಿಸಿದ್ದು , ಮನುಷ್ಯ ತನ್ನ ಅಸ್ತಿತ್ವವನ್ನು ಮತ್ತಷ್ಟು ಉತ್ತಮವಾಗಿ ಅರ್ಥಮಾಡಿಕೊಳ್ಳಲು ಸಹಾಯ ಮಾಡಿವೆ. ಇಪ್ಪತ್ತನೇ ಶತಮಾನದ ಈ ಜ್ಞಾನದ ಪ್ರವಾಹ ಒಂದು ಮುಖದ್ದಾಗದೇ ಅನೇಕ ವಿಧಗಳಲ್ಲಿ ವಿಸ್ತೀರ್ಣಗೊಂಡಿದೆ. ಆದ್ದರಿಂದ ಹೊಸ ಹೊಸ ವಿಷಯಗಳು ಆರಂಭಗೊಳ್ಳುವುದನ್ನು ಮತ್ತು ಅವು ಒಂದರ ಮೇಲೊಂದು ಅವಲಂಬಿತವಾಗಿರುವುದನ್ನು ನಾವು ಕಾಣುತ್ತೇವೆ.

ಈ ಎಲ್ಲ ಬೆಳವಣಿಗೆಗಳು ಭೂಮಿಯನ್ನು ಬದುಕಲು ಯೋಗ್ಯವಾದ ಸ್ಥಳವನ್ನಾಗಿ ಮಾಡಬಲ್ಲವು. ನವವಿಜ್ಞಾನವು ಪ್ರಪಂಚದಿಂದ ಹಸಿವು, ರೋಗರುಜಿನಗಳನ್ನು ಹೊಡೆದೋಡಿಸಲು ಶಕ್ತವಾಗಿದೆ. ಸಂಪನ್ಮೂಲಗಳ ಸರಿಯಾದ ಬಳಕೆಯಿಂದ, ಇರುವ ವ್ಯವಸಾಯದ ತಂತ್ರಜ್ಞಾನವನ್ನೇ ಬಳಸಿಕೊಂಡು ಈಗ ಇರುವ ಜನಸಂಖ್ಯೆಯ ಮೂರರಷ್ಟು ಜನರಿಗೆ ಆಹಾರ ಒದಗಿಸಬಹುದು. ಆದರೆ ವಾಸ್ತವವೇ ಬೇರೆಯಾಗಿದೆ. ಸಮಸ್ಯೆಯಿರುವುದು ಆಹಾರ ಉತ್ಪಾದನೆಯಲ್ಲಲ್ಲ, ಬಡವ ಅದನ್ನು ಕೊಳ್ಳುವ ಶಕ್ತಿ ಹೊಂದಿರುವನೇ ಎಂಬುದರ ಮೇಲೆ ಪರಿಣಾಮ ಅವಲಂಬಿಸಿದೆ.

ಇದರೊಂದಿಗೆ ನಾವು ವ್ಯಾಪಾರದ ಯುದ್ಧ ಹಾಗೂ ಮಿಲಿಟರಿ ಯುದ್ಧವನ್ನು ನೋಡುತ್ತೇವೆ. ಇವೆರಡು ಅನೇಕ ದಶಲಕ್ಷ ಜನರನ್ನು ಕೊಂದಿವೆ. ಮಿಲಿಟರಿ ಯುದ್ಧ ಮದ್ದುಗುಂಡು ಹಾಗೂ ಬಾಂಬುಗಳ ಮೂಲಕ ಜನರನ್ನು ಕೊಂದರೆ ವ್ಯಾಪಾರ ಕ್ಷೇತ್ರದ ಯುದ್ಧ ಜನರನ್ನು ಬರಗಾಲಕ್ಕೆ ತಳ್ಳಿ ಕೊಲ್ಲುತ್ತದೆ. ಇವೆರಡರ ಪರಿಣಾಮವಾಗಿ ನಾವು ಇಂದಿನ ಪರಿಸ್ಥಿತಿಗೆ ತಲುಪಿದ್ದೇವೆ.

ಈ ಹಿಂದೆ ಯಾವಾಗಲೂ ಮನುಷ್ಯ ಇಷ್ಟೊಂದು ಪ್ರಮಾಣದಲ್ಲಿ ವಿಜ್ಞಾನ ಹಾಗೂ ವಿಜ್ಞಾನಿಗಳನ್ನು ಬಳಕೆ ಮಾಡಿರಲಿಲ್ಲ. ಈ ರೀತಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಜನರನ್ನು ವಿಜ್ಞಾನದಿಂದ ದೂರವಿರಿಸಿರಲಿಲ್ಲ ಮತ್ತು ಪ್ರಪಂಚದಲ್ಲಿ ಶೋಷಣೆ ಈ ಮಟ್ಟಕ್ಕೇರಿರಲಿಲ್ಲ.

ಪ್ರಶ್ನೆಯಿರುವುದು : ಇದನ್ನು ಬದಲಿಸುವುದು ಹೇಗೆ? ಇದಕ್ಕೆ ಸುಲಭವಾದ ಪರಿಹಾರವಿಲ್ಲ. ಇದು ವಿಜ್ಞಾನಿಗಳಿಂದ ಮಾತ್ರ ಸಾಧ್ಯವಿಲ್ಲ ಅಥವಾ ವಿಜ್ಞಾನಿಗಳನ್ನು ಹೊರತುಪಡಿಸಿದರೂ ಸಾಧ್ಯವಿಲ್ಲ. ಇಂದು ವಿಜ್ಞಾನ ಒಂದು ಹಣ ಗಳಿಸುವ ವೃತ್ತಿಯಾಗಿದೆ. ಇದರಿಂದ ಒಬ್ಬ ವಿಜ್ಞಾನಿಯ ಸ್ವಾತಂತ್ರ್ಯದ ಮಿತಿಯನ್ನು ನಾವು ಅರ್ಥ ಮಾಡಿಕೊಳ್ಳಬಹುದಾಗಿದೆ. ಈ ಸ್ವಾತಂತ್ರ್ಯ ಸಂಚಾರಿ ವ್ಯಾಪಾರಗಾರನ ದೂರವನ್ನು ಕಡಿಮೆ ಮಾಡುವುದಕ್ಕಲ್ಲ. ಈ ಸಂಚಾರಿ ವ್ಯಾಪಾರಿ, ಬಾಂಬುಗಳ ದಳವನ್ನು ನಡೆಸುತ್ತಾನೋ ಅಥವಾ ಬರಪೀಡಿತ ನೆಲಕ್ಕೆ ನೀರುಣಿಸಲು ತನ್ನ ಸ್ವಾತಂತ್ರ್ಯ ಬಳಸುತ್ತಾನೋ ಎಂಬುದು ಪ್ರಶ್ನೆಯಾಗುತ್ತದೆ. ಜನರನ್ನು ಸಾಮಾಜಿಕವಾಗಿ ಹಾಗೂ ಹಸಿವು ಮತ್ತು ವಿನಾಶದಿಂದ ಮೇಲಕ್ಕೆತ್ತುವುದು ವಿಜ್ಞಾನದ ಕಾರ್ಯಕರ್ತರ ಕೆಲಸವಾಗಬೇಕು.

**ಡಾ|| ಎಸ್. ಚಟರ್ಜಿ**
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಆಸ್ಟ್ರೋ - ಫಿಸಿಕ್ಸ್, ಬೆಂಗಳೂರು-೩೪

**ಕನ್ನಡಕ್ಕೆ : ಈ. ಬಸವರಾಜು**
ಕಾರ್ಯದರ್ಶಿ, ಭಾರತ ಜ್ಞಾನ ವಿಜ್ಞಾನ ಸಮಿತಿ, ಬೆಂಗಳೂರು

## ಕಡಲೊಳಗದ್ದಿ

ದಡಕ್ಕೆ ಕುಳಿತು
ನೋಡಿದಾಗೆಲ್ಲಾ ನಿನ್ನದೆ
ನೆನಪು ಕಡಲಿನುದ್ದಕ್ಕೂ
ಕಾಣುವ ನೀಲಕ್ಕೆ ನಿನ್ನದೆ
ಒನಪು ಯಾಕೆ ಬಂದೆ
ಚಂದ್ರಮ
ಮೊನ್ನೆ ಮೊನ್ನೆ ಬಟ್ಟಲ
ಬೆಳದಿಂಗಳನ್ನೆಲ್ಲ ಹನಿ
ಹನಿಯಾಗಿ ಸಾಗರಕ್ಕೆ
ಸೋರಿ ಕತ್ತಲೆ
ಚೆಲ್ಲಾಟ ನಿನಗಾಗಿ
ಕೈಚಾಚಿ ಸಿಕ್ಕಿದಿಷ್ಟು
ತುಟಿ, ಕೆನ್ನೆ, ಬೆನ್ನು
ಎದೆ ತೊಡೆ ಸಂದಿಗಳ
ಕಡಲೊಳಗದ್ದಿದಂತೆ
ಅಷ್ಟನೇ ಕೂಡಿಸಿ ನೀನು
ಸಂಪೂರ್ಣ ಸಿಕ್ಕಂತೆ ಸುಖಿಸಿ
ಮಳಲ ಮನೆಗಳ ಕಟ್ಟಿ
ಕಾದದ್ದೇ ಬಂತು
ಕದ ತಟ್ಟುವ ಕ್ಷಣಕ್ಕೆ
ಇರುವುದೆಲ್ಲವ ಕೊಟ್ಟು
ಕೂತದ್ದು ಕಡಲಾವರಿಸಿ
ಅಲೆಗಳ ತುಂಬಾ ತೇಲಿ
ಬಂದ ಚುಕ್ಕೆಗಳು
ಸಾರಿದವು ನಿನ್ನಿರುವ
ಬರವ ಚಂದ್ರಮ
ಅದೆಷ್ಟು ಬಂಡೆಗಳು
ಒಡಲೊಳಗೆ ಹಾಲು
ಮೃದು ಕಡಲು
ತೆರೆಗಳ ತೇರಿನಲಿ ಹೊತ್ತು
ಸಾಗುವ ಅಮಲು



**ಕವಿತಾ ರೈ, ಬಿ. ಆರ್.**
ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ,
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ

# ಭಯೋತ್ಪಾದನೆ ಹತ್ತಿಕ್ಕುವುದು ಮಾನವ ಹಕ್ಕುಗಳ ಉಲ್ಲಂಘನೆಯಲ್ಲ...

**– ಲೆಫ್ಟಿನೆಂಟ್ ಜನರಲ್ ನರಹರಿ**



**ಹೊಸತು** : ದೇಶದ ರಕ್ಷಣಾ ಚಿಂತನೆಯ ವಿವಿಧ ಆಯಾಮಗಳ ಬಗ್ಗೆ ಒಂದಿಷ್ಟು ತಿಳಿಸಿ. ಇದು ಸಾಧಾರಣ ಜನತೆಗೆ ಸಂಬಂಧಪಟ್ಟ ಅವರೂ ಯೋಚಿಸಬೇಕಾದ ವಿಷಯವೇ ಅಥವಾ ಕೇವಲ ತಜ್ಞರ, ಸೇನೆಯ ಗೋಪ್ಯ ವಿಷಯವೇ ?

**ಎನ್. ಎಸ್. ನರಹರಿ** : ಇವು ಹಲವು ಬಗೆಯವು. ಹಲವು ಸ್ತರದವು. ದೇಶದ ರಕ್ಷಣೆಗೆ ಆತಂಕ ಹೊರಗಿನಿಂದ ಬರಬಹುದು. ಆಂತರಿಕವಾಗಿಯೇ ಉದ್ಭವಿಸಬಹುದು. ಹೊರಗಿನವು ಕೆಲವು: ನಮಗೆ ಅತ್ಯಗತ್ಯವಿರುವ ಸರಕುಗಳಿಗಾಗಿ ಪರಾವಲಂಬನೆ. ಉದಾಹರಣೆಗೆ ಪೆಟ್ರೋಲ್, ಶಸ್ತ್ರಾಸ್ತ್ರಗಳು. ನಮ್ಮ ಸುತ್ತಮುತ್ತಲಿನ ರಾಷ್ಟ್ರಗಳಲ್ಲಿ ಅಸ್ಥಿರತೆ. ಅದರಿಂದ ಆಕರ್ಷಿತರಾದ ಪ್ರಬಲ ರಾಷ್ಟ್ರಗಳು, ಅದರಲ್ಲೂ ನಮ್ಮ ವೈರಿಗಳು, ಆ ರಾಷ್ಟ್ರಗಳ ಆಂತರಿಕ ವ್ಯವಹಾರದಲ್ಲಿ ವಿವಿಧ ರೂಪದ ಹಸ್ತಕ್ಷೇಪ ಮಾಡುವುದರಿಂದ ನಮ್ಮ ರಕ್ಷಣಾ ವಿಷಯಗಳಿಗೆ ಸಂಬಂಧಪಟ್ಟಂತೆ ಆಪತ್ತು ಒದಗಿಬರಬಹುದು. ಭೂ ಪ್ರದೇಶದ ಸ್ವಾಮ್ಯಕ್ಕಾಗಿ ಉದ್ಭವವಾಗಬಹುದಾದ ಗಡಿನಾಡಿನ ವಿವಾದಗಳು, ಎರಡೂ ರಾಷ್ಟ್ರಗಳ ನಡುವಿನ ನದಿ ನೀರಿನ ವಿವಾದಗಳು ಇತ್ಯಾದಿ.

ಹೆಚ್ಚುತ್ತಿರುವ ಜನಸಂಖ್ಯೆಯ ಆಂತರಿಕ ಚಲನೆಯ, ವಲಸೆಯ, ಬುಡಕಟ್ಟು ಮತ್ತಿತರ ಉಪಾಂತ ರಾಷ್ಟ್ರೀಯತಾ ಭಾವನೆಗಳಿಂದ ಹೊಮ್ಮುವ ಅತೃಪ್ತಿ, ಮತೀಯ ಕಲಹಗಳು ಮುಂತಾದುವು ತೀವ್ರವಾದಾಗ, ಸಹಬಾಳ್ವೆ ಕಷ್ಟವಾಗಿ, ಸಹನೆಯ ಮಿತಿ ಮೀರಿದಾಗ, ರಾಷ್ಟ್ರದ ಐಕ್ಯತೆಗೆ, ಪರಿಣಾಮವಾಗಿ, ರಕ್ಷಣೆಗೆ ಅಪಾಯ ಆತಂಕಗಳು ಆಂತರಿಕವಾಗಿ ಉಂಟಾಗಬಹುದು. ಬಡವ ಬಲ್ಲಿದರ ನಡುವಣ ವ್ಯತ್ಯಾಸಗಳು ತೀವ್ರವಾದಾಗ ಪರಸ್ಪರ ಅತೃಪ್ತಿ, ಸಂದೇಹಗಳು, ವಿವಿಧ ರೀತಿಯ ಪ್ರಾದೇಶಿಕ ರಾಜಕೀಯ ಆಕಾಂಕ್ಷೆಗಳು ಉದ್ಭವಿಸಿ ದೇಶದ ರಕ್ಷಣೆಗೆ ಆತಂಕಕಾರಿ ಪರಿಸ್ಥಿತಿ ಉಂಟಾಗಬಹುದು. ಇಂಥ ಸಂದರ್ಭಗಳನ್ನು ಹೊರಗಿನ ಅಹಿತಕರ ಶಕ್ತಿಗಳು ದುರುಪಯೋಗಪಡಿಸಿಕೊಂಡು ಹಸ್ತಕ್ಷೇಪಕ್ಕೆ ಮುಂದಾಗುತ್ತವೆ. ಅಶಕ್ತ ಅರ್ಥವ್ಯವಸ್ಥೆ ರಕ್ಷಣೆಗೆ ಆತಂಕವಾಗಬಹುದು. ಆದ್ದರಿಂದ ರಾಷ್ಟ್ರದ ರಕ್ಷಣೆಯ ಪ್ರಶ್ನೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಆಯಾಮಗಳನ್ನು ಹೊಂದಿಕೊಂಡಿರುತ್ತದೆ. ಅದು ಕೇವಲ ವಿದೇಶಾಂಗ ನೀತಿಗೋ, ಆಸುಪಾಸಿನ ರಾಷ್ಟ್ರಗಳೊಡನೆ ಸಂಬಂಧಕ್ಕೋ, ರಕ್ಷಣಾ ಪಡೆಯ ಸಾಮರ್ಥ್ಯ ಸಿದ್ಧತೆಗೋ ಮಾತ್ರ ಸೀಮಿತವಲ್ಲ. ರಕ್ಷಣೆ ರಾಷ್ಟ್ರದ ವಿದೇಶಾಂಗ ನೀತಿಯಂತೆಯೇ, ಆರ್ಥಿಕ ನೀತಿಯ ಅಂಶವೂ ಹೌದು. ಪ್ರಜಾಪ್ರಭುತ್ವದಲ್ಲಿ ರಾಷ್ಟ್ರದ ರಕ್ಷಣೆ ಸಾರ್ವಜನಿಕರು ಸಕ್ರಿಯ ಆಸಕ್ತಿ ವಹಿಸಬೇಕಾದ, ಗೌಪ್ಯವೇನಲ್ಲದ ಮಹತ್ವದ ವಿಷಯ. 'ಹೊಸತು'ವಿನ ಈ ಸಂವಾದಕ್ಕೂ ಇದೇ ಅರ್ಥವೆನಿಸುತ್ತದೆ.

**ಹೊ** : ಈ ವಿಸ್ತಾರವಾದ ಹರವಿನಲ್ಲಿ ರಾಷ್ಟ್ರದ ರಕ್ಷಣೆಗೆ ಇಂದು ಇರುವ ಕೆಲವು ಮುಖ್ಯ ಆತಂಕಗಳನ್ನು ಗುರುತಿಸಬಹುದೇ ?

**ಎನ್. ಎಸ್. ನ** : ಎಲ್ಲಕ್ಕಿಂತ ಮೊದಲು ಯಾರಾದರೂ ಗಮನಿಸುವ ವಿಷಯ ಭಾರತ-ಪಾಕಿಸ್ತಾನದ ನಡುವಿನ ವಿಷಮ ಸಂಬಂಧ. ಈ ಸಮಸ್ಯೆಗೆ ಎರಡು ಆಯಾಮಗಳಿವೆ. ಒಂದು ಪಾಕಿಸ್ತಾನದ ಸೃಷ್ಟಿಗೆ ಸಮರ್ಥನೆ ಇತ್ತ ಮೂಲಭೂತ ಮುಸ್ಲಿಂ ಮತಾಂಧತಾವಾದ, ''ಎರಡು ರಾಷ್ಟ್ರ'' ವಾದ. ಈ ಆಧಾರದ ಮೇಲೆ ದೇಶ ವಿಭಜನೆಯಾದರೂ, ಪಾಕಿಸ್ತಾನಕ್ಕಿಂತ ಭಾರತದಲ್ಲಿ ಹೆಚ್ಚಿನ ಸಂಖ್ಯೆಯ ಮುಸ್ಲಿಂ ಬಾಂಧವರು ಉಳಿದಿದ್ದಾರೆ. ಆದರೂ ಪಾಕಿಸ್ತಾನವು ಭಾರತದಲ್ಲಿ ಉಳಿದಿರುವ ಮುಸ್ಲಿಮರನ್ನೂ ಸೇರಿಸಿ, ವಿಶ್ವದ ಎಲ್ಲ ಮುಸ್ಲಿಮರಿಗೂ ತಾನು ಮುಂದಾಳೋ ಎಂಬ ಭ್ರಾಂತಿಯಿಂದ ವರ್ತಿಸುತ್ತಿದೆ. ಇದರಿಂದ ಉದ್ಭವಿಸಿರುವ ಸಮಸ್ಯೆಗಳು ಎಲ್ಲರಿಗೂ ಪರಿಚಿತ.

ಇನ್ನೊಂದು ಸಮಸ್ಯೆ : ತನ್ನ ರಾಜಕೀಯ ತಪ್ಪುಗಳಿಂದಾಗಿ, ಪಾಕಿಸ್ತಾನ ಬಾಂಗ್ಲಾ ದೇಶವನ್ನು ಕಳೆದುಕೊಂಡದ್ದರಿಂದ ಉಂಟಾದ ಪರಿಸ್ಥಿತಿ. ಇದಕ್ಕೆ ಭಾರತವೇ ಕಾರಣವೆಂದು ಪಾಕಿಸ್ತಾನ ಭಾವಿಸುತ್ತದೆ. ಅದೇ ನಿಟ್ಟಿನಲ್ಲಿ ಪ್ರಚಾರ ಮಾಡುತ್ತದೆ. ಮುಂದುವರಿದು, ಭಾರತ ಪಾಕಿಸ್ತಾನವನ್ನು ಛಿದ್ರ ಛಿದ್ರವಾಗಿಸುವ ಪ್ರಯತ್ನ ಮಾಡುತ್ತಿದೆ ಎಂದು ವಾದಿಸುತ್ತದೆ. ಈ ಮನೋಭಾವನೆಯಿಂದ ಪಾಕಿಸ್ತಾನ ಮಾನಸಿಕ ಆತಂಕವನ್ನು ಅನುಭವಿಸುತ್ತದೆ ಹಾಗೂ ಬಾಂಗ್ಲಾ ಪ್ರಕರಣಕ್ಕಾಗಿ, ಭಾರತದ ಮೇಲೆ ಜಿದ್ದು ತೀರಿಸಿಕೊಳ್ಳುವ ತವಕಕ್ಕೆ ಒಳಗಾಗಿದೆ. ಅದರ ಚೀನಾದೊಡನೆಯ ನೀತಿ, ಪರಮಾಣು ಶಸ್ತ್ರಾಸ್ತ್ರಗಳನ್ನು ವೃದ್ಧಿಸಿಕೊಳ್ಳುವ ಹವಣು, ಇವಕ್ಕೆಲ್ಲಾ ಇದೇ ಹಿನ್ನೆಲೆ. ಇದೂ ನಮಗೆ ಆತಂಕ ಮೂಡಿಸುವ ಅಂಶ.

ಈ ಎರಡಕ್ಕೂ ನೇರವಾಗಿ ಸಂಬಂಧಿಸದ ಇನ್ನೊಂದು ಸಮಸ್ಯೆ ಕಾಶ್ಮೀರದ್ದು. ಕಾಶ್ಮೀರ ತನ್ನ ಭವಿಷ್ಯವನ್ನು ಇನ್ನೂ ನಿರ್ಧರಿಸದಿದ್ದ ಸಂದರ್ಭದಲ್ಲಿ ೧೯೪೭ರಲ್ಲಿ ಪಾಕಿಸ್ತಾನ ಅದನ್ನು ಬಲಾತ್ಕಾರದಿಂದ ಕಬಳಿಸಲು ಪ್ರಯತ್ನಿಸಿತು. ಭಾರತ ಇದನ್ನು ವಿರೋಧಿಸಿ ಕಾಶ್ಮೀರದ ಕೋರಿಕೆಯ ಮೇರೆಗೆ ಮಧ್ಯಪ್ರವೇಶ ಮಾಡಬೇಕಾಯಿತು. ಭಾರತದ ರಕ್ಷಣಾಪಡೆ ಪಾಕಿಸ್ತಾನದ ಸೇನೆಯನ್ನು ಹಿಮ್ಮೆಟ್ಟಿಸಿತು. ಹಿಂದೆ ಸರಿಯುತ್ತಿದ್ದ ಪಾಕಿಸ್ತಾನಿ ಪಡೆಗಳನ್ನು ಸಂಪೂರ್ಣವಾಗಿ ಹೊರಗೆಡವಿ, ಇನ್ನೇನು ಕಾಶ್ಮೀರವನ್ನು ಸಂಪೂರ್ಣವಾಗಿ ಮುಕ್ತಗೊಳಿಸುವ ಪರಿಸ್ಥಿತಿಯಲ್ಲಿ ಭಾರತವೇ ವಿಶ್ವಸಂಸ್ಥೆಯ ಮುಂದೆ ದೂರಿಟ್ಟದ್ದರಿಂದ ವಿಶ್ವಸಂಸ್ಥೆಯು ಮಧ್ಯಪ್ರವೇಶ ಮಾಡಬೇಕಾಗಿ ಬಂದು ವಿಷಯ ಅಲ್ಲಿಗೇ ನಿಂತಿತು. ಆಕಾಲಿಕ ಯುದ್ಧ ಸ್ತಂಭನದಿಂದ ಅಲ್ಲಿ ಹಾವೂ ಸಾಯಲಿಲ್ಲ ಕೋಲೂ ಮುರಿಯಲಿಲ್ಲವೆಂಬ ಇಕ್ಕಟ್ಟಿನ ಪರಿಸ್ಥಿತಿ ಉಂಟಾಗಿ ಅದು ಈಗಲೂ ಮುಂದುವರಿಯುತ್ತಿದೆ. ಇಲ್ಲಿ

ಉದ್ಭವಿಸಿರುವ ರಕ್ಷಣಾ ಸಮಸ್ಯೆ ರಕ್ಷಣಾ ದಳಕ್ಕೆ ಮೀರಿದ ವಿಷಯವಾಗಿರುವುದು ಒಂದು ದುರಂತ. ಬಿಡಿಸಲಾರದ ಈ ಕಗ್ಗಂಟು ಭಾರತದ ರಕ್ಷಣೆಗೂ, ಐಕಮತ್ಯಕ್ಕೂ ಒಂದು ಸವಾಲಾಗಿ ಉಳಿದುಬಿಟ್ಟಿದೆ.

**ಹೊ :** ಕಾಶ್ಮೀರ ಸಮಸ್ಯೆ ಭಾರತದ ಐಕಮತ್ಯಕ್ಕೆ ಸವಾಲೆಂದು ಇತ್ತೀಚೆಗೆ ಎನ್‌ಡಿಎ ಸರ್ಕಾರ ಪದೇಪದೇ ಹೇಳಲಾರಂಭಿಸಿದೆ. ಈ ಹಿಂದೆ ಈ ಒತ್ತು ಇರಲಿಲ್ಲ. ಇದು ಸರಿಯೇ ? ಸರಿಯೆಂದರೆ ಈ ಸಮಸ್ಯೆಯ ಪರಿಹಾರಕ್ಕೆ ಇರಬಹುದಾದ ಎಲ್ಲ ಸಾಧ್ಯತೆಗಳಿಗೂ ಬಾಗಿಲು ಮುಚ್ಚಿದಂತಾಗುವುದಿಲ್ಲವೇ ?

**ಎನ್. ಎಸ್. ನ :** ಐಕಮತ್ಯಕ್ಕೆ ಸವಾಲೆಂದಾಗ ನಾನು ಗಮನಿಸುವುದು ಈ ಸಮಸ್ಯೆಯನ್ನು ಬಳಸಿಕೊಂಡು ಮತಾಂಧರು, ಅವರು ಯಾವ ಮತದವರೇ ಇರಲಿ, ದೇಶದಲ್ಲಿ ಆಂತರಿಕವಾಗಿ ಕೋಮು ಸಮಸ್ಯೆಯನ್ನು ಬೆಳೆಸುತ್ತಿರುವ ಸಂದರ್ಭ. ಯಾರೇ ಒಪ್ಪಲಿ ಬಿಡಲಿ ವಾಸ್ತವದಲ್ಲಿ ಇದು ಭಾರತ ಪಾಕಿಸ್ತಾನದ ನಡುವಣ ಸಮಸ್ಯೆ. ಇಂದು ಇದರ ಉಗಮದ ಬಗ್ಗೆ ಚರ್ಚಿಸಿ ಪ್ರಯೋಜನವಿಲ್ಲ. ಇದರ ಪರಿಹಾರ ತುರ್ತಾಗಿ ಆಗಬೇಕಾಗಿದೆ. ಇದಕ್ಕೆ ಪಾಕಿಸ್ತಾನದೊಡನೆ ಚರ್ಚೆ ಅನಿವಾರ್ಯ. ಮಾತನಾಡುವುದು ಎಂದರೆ, ಪಾಕಿಸ್ತಾನಕ್ಕೂ ಈ ಸಮಸ್ಯೆಯಲ್ಲಿರುವ ಸ್ವಹಿತಾಸಕ್ತಿಯನ್ನು ಗುರುತಿಸಿದಾಗ ಮಾತ್ರ ಸಾಧ್ಯ. ಇದು ರಾಷ್ಟ್ರದ ಐಕ್ಯತೆಗೆ ಸವಾಲೆಂದರೆ, ರಾಷ್ಟ್ರದ ಐಕ್ಯತೆಯನ್ನು ನಂಬಿ ರಕ್ಷಿಸಿಕೊಳ್ಳುವುದರಲ್ಲಿ ಅದು ನಿರ್ಣಾಯಕವೇನೂ ಅಲ್ಲ, ನಮ್ಮ ಐಕ್ಯತೆಯ ಬಗ್ಗೆ ನಮ್ಮ ಆತ್ಮವಿಶ್ವಾಸ ಈ ಸಮಸ್ಯೆಗೂ ಮೀರಿದ್ದು. ಕಾಶ್ಮೀರದ ಸಮಸ್ಯೆ ಹಿಂದೂ ಮುಸ್ಲಿಂ ಸಮಸ್ಯೆ ಅಲ್ಲ. ಚಾರಿತ್ರಿಕವಾಗಿ ಪೂಂಚ್ ಪ್ರದೇಶದ ಮುಸ್ಲಿಂ ಪ್ರದೇಶ ಕಾಶ್ಮೀರದೊಡನೆ ವಿಲೀನವಾದದ್ದು ಇತ್ತೀಚೆಗೆ, ಕಳೆದ ಶತಮಾನದ ಮೂವತ್ತರ ದಶಕದಲ್ಲಷ್ಟೆ. ಆದ್ದರಿಂದ ಯಾವುದೇ ರಾಜಕೀಯ ಪಕ್ಷ ತನ್ನ ತಾತ್ವಿಕವಾದ ಸೀಮಿತ ದೃಷ್ಟಿಕೋನಕ್ಕೆ ಈ ಸಮಸ್ಯೆಯನ್ನು ಬಳಸಿಕೊಳ್ಳುವುದು ರಾಷ್ಟ್ರದ ಐಕ್ಯತೆಗೆ ಅಪಾಯ ಉಂಟುಮಾಡಬಹುದೇ ವಿನಃ ನೇರವಾಗಿ ಕಾಶ್ಮೀರದ ಸಮಸ್ಯೆಯಾಗಲಿ ಅದರ ಪರಿಹಾರದ ಸಾಧ್ಯತೆಗಳಾಗಲೀ ಅಲ್ಲ. ರಾಷ್ಟ್ರದ ರಕ್ಷಣಾ ದೃಷ್ಟಿಯಿಂದ ಈ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದು ಅಗತ್ಯ. ಪರಿಹಾರ ರಾಜಕೀಯ ರೂಪದ್ದು. ಕೊಡು ಕೊಳ್ಳುವಂಥದ್ದು. ಇದು ಮಾತುಕತೆಯ ರಾಜಕೀಯ ಮುತ್ಸದ್ದಿತನದಿಂದ ಮಾತ್ರ ಸಾಧ್ಯ.

**ಹೊ :** ಸಿಮ್ಲಾ ಒಪ್ಪಂದದಲ್ಲಿ ತಾತ್ಕಾಲಿಕ ನಿಯಂತ್ರಣ ರೇಖೆಯನ್ನು ಗಡಿಯೆಂದು ಗುರುತಿಸಿ, ಸಮಸ್ಯೆಯ ಪರಿಹಾರದ ನೆರಳು ಕಂಡುಬರುತ್ತದೆ ಎನ್ನುತ್ತಾರೆ. ಹಾಗೊಮ್ಮೆ ತೀರ್ಮಾನಿಸುವುದೇ ಆದರೆ ಇದು ಕಾಶ್ಮೀರದ ವಿಭಜನೆಯೇ ಆಗುತ್ತದೆ. ಈ ವಿಭಜನೆಯನ್ನೂ ಕೋಮು ಆಧಾರಿತ ವಿಭಜನೆಯೆಂದು ಬಣ್ಣಿಸಿ ದುರುಪಯೋಗ ಪಡಿಸಿಕೊಂಡರೆ ? ಅರ್ಥಾತ್ ಆಂತರಿಕ ಮುಸ್ಲಿಂ ಮತಾಂಧ ಶಕ್ತಿಗಳು, ಇನ್ನು ಕೆಲವೆಡೆ ಸಣ್ಣಪುಟ್ಟ ಬುಡಕಟ್ಟಿನ ಉಪಾಂಗ ರಾಷ್ಟ್ರೀಯತಾ ಶಕ್ತಿಗಳು, ಹೊಸಹೊಸ ವಿಭಜನೆಯ ಚಳುವಳಿಗೆ ಸಜ್ಜಾದರೆ ?

**ಎನ್. ಎಸ್. ನ :** ಅಂಥ ಪ್ರವೃತ್ತಿಗಳು ಈಗಲೂ ಅಲ್ಲಲ್ಲೇ ಕಾಣಬರುತ್ತಿವೆ. ಹಿಂದೆ ಇದ್ದ ಅಂಥ ಕೆಲವು

*ಲೆಫ್ಟಿನೆಂಟ್ ಜನರಲ್ ಎನ್. ಎಸ್. ನರಹರಿಯವರು ಕರ್ನಾಟಕದ ನುಗ್ಗೆಹಳ್ಳಿಯವರು. ಮೈಸೂರು ವಿಶ್ವವಿದ್ಯಾಲಯದ ಅಂದಿನ ಬೆಂಗಳೂರಿನ 'ವಿಶ್ವವಿದ್ಯಾಲಯ ಎಂಜಿನಿಯರಿಂಗ್' ಕಾಲೇಜಿನ ಪದವೀಧರರು. ಭಾರತದ ಭೂಸೈನ್ಯದಲ್ಲಿ ೧೯೫೫ರಿಂದ ೧೯೮೦ರವರೆಗೆ ನಿಷ್ಣಾತ ಸೇವೆ ಸಲ್ಲಿಸಿ, ಅತ್ಯುಚ್ಚ ಶ್ಲಾಘನೆಗೆ ಪಾತ್ರರಾದ ಒಬ್ಬ ಮಹಾನ್ ಸೇನಾನಿ. ರಾಷ್ಟ್ರದ ರಕ್ಷಣೆಗೆ "ಪರಮ ವಿಶಿಷ್ಟ ಸೇವೆ"ಯನ್ನು ಸಲ್ಲಿಸಿರುವ ಇವರು ನಿವೃತ್ತಿಗೆ ಮುಂಚೆ ಸೇನೆಯ ಸುಪ್ರಸಿದ್ಧ ಕಾಲೇಜ್ ಆಫ್ ಕೊಂಬ್ಯಾಟ್‌ನ ನೇತೃತ್ವ ವಹಿಸಿದ್ದರು. ಇಂದೂ ರಾಷ್ಟ್ರದ ಅನೇಕ ರಕ್ಷಣಾ ಪತ್ರಿಕೆಗಳ ಸಲಹಾಕಾರರಾಗಿ, ಅಂಕಣಕಾರರಾಗಿ ಪ್ರಸಿದ್ಧರಾಗಿದ್ದಾರೆ. ಯುನೈಟೆಡ್ ಸರ್ವಿಸಸ್ ಇನ್‌ಸ್ಟಿಟ್ಯೂಟ್‌ನ ಗೌರವ ವೇತನ ಪಡೆದು ಈಶಾನ್ಯ ಭಾರತದ ಬುಡಕಟ್ಟುಗಳ ಸಂಬಂಧದ ಸಾಮಾಜಿಕ - ರಾಜಕೀಯ ಬಿಕ್ಕಟ್ಟು , ತುಡಿತಗಳ ಕುರಿತು ಮಹತ್ವದ ಸಂಶೋಧಿತ ಪ್ರಬಂಧವನ್ನು ಪ್ರಕಟಿಸಿದ್ದಾರೆ. ಈ ಕುರಿತು ಇವರು ಅಧಿಕಾರವಾಣಿಯಿಂದ ನುಡಿಯಬಲ್ಲವರಾಗಿದ್ದು , ಇವರ ವಿದ್ವತ್‌ಪೂರ್ಣ ಇತಿಹಾಸ ಜ್ಞಾನ ಗೌರವಾರ್ಹವಾಗಿದೆ. ಚಾರಣಪ್ರಿಯರೂ, ಸಾಹಸಿಗರೂ ಆದ ಇವರು ತಮ್ಮ ಊರಿನ ಪುರಾತನ ದೇವಾಲಯದ ಪುನರುಜ್ಜೀವನವೇ ಆಗಲಿ, ಬೆಂಗಳೂರಿನ ಅಲಸೂರಿನ ಕೆರೆಯ, ಅದರ ಸುತ್ತಮುತ್ತಲಿನ ಪರಿಸರದ ಶುದ್ಧೀಕರಣದ ವಿಷಯವೇ ಆಗಲಿ, ಅಂಥ ಹಲವಾರು ಸಾಮಾಜಿಕ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಕಳಕಳಿ ಉಳ್ಳವರು. ಎಪ್ಪತ್ತರ ಹರೆಯದ ಈ ದಂಡನಾಯಕರನ್ನು 'ಹೊಸತು' ಸಂಧಿಸಿ, ನಮ್ಮ ಪ್ರಚಲಿತ ರಕ್ಷಣಾ ವ್ಯವಸ್ಥೆಯ ಪರಿಸ್ಥಿತಿ ಮತ್ತು ಕಾಳಜಿಗಳ ಬಗೆಗೆ ಸಂವಾದ ನಡೆಸಿತು. ಸಂವಾದ ನಡೆಸಿದವರು ಪತ್ರಿಕೆಯ ಸಂಪಾದಕ ಡಾ|| ಜಿ. ರಾಮಕೃಷ್ಣ ಹಾಗೂ ಸಂಪಾದಕ ಮಂಡಲಿಯ ಕೆ. ಎಸ್. ಪಾರ್ಥಸಾರಥಿ, ಎಸ್. ಸುರೇಂದ್ರ ಮತ್ತು ಕೆ. ಪಿ. ಸ್ವಾಮಿ.*

ಪ್ರವೃತ್ತಿಗಳು ರಾಜಕೀಯ ಆಯಾಮವನ್ನು ಪಡೆದಂತೆ, ಐಕ್ಯ ಭಾರತದೊಡನೆ ಇರುವ ಪ್ರಯೋಜನಗಳನ್ನು ಗುರುತಿಸಿದಂತೆ ಕೊನೆಗೊಂಡಿವೆ. ಅಂಥ ಪ್ರವೃತ್ತಿಗಳು ಬೆಳೆದು ಪ್ರಕಟಗೊಳ್ಳುವುದು ರಾಜಕೀಯದ ಮತ್ತು ಆಡಳಿತದ ವೈಫಲ್ಯಗಳಾಗಿದ್ದು, ಸರಿಪಡಿಸಲು ಸಾಧ್ಯವಾದಂಥವು. ಈಶಾನ್ಯ ಭಾರತದ ಬುಡಕಟ್ಟುಗಳ ಸಮಸ್ಯೆ ಇಂಥದು. ಒಂದು ಕಾಲಕ್ಕೆ ತಮಿಳು ರಾಷ್ಟ್ರೀಯತೆ ಶ್ರೀಲಂಕ, ಮಲೇಷಿಯಾ, ಸಿಂಗಪೂರ ಎಲ್ಲವನ್ನು ಸಮನ್ವಯಿಸಿ ಚರ್ಚಿಸಲಾಗುತ್ತಿತ್ತು. ಈಗ ಅದು ಇಲ್ಲವಾಗಿರುವುದು ರಾಜಕೀಯ ಪ್ರಬುದ್ಧತೆಯ ಪ್ರಜಾಪ್ರಭುತ್ವದ ಸಫಲತೆಯ ಗುರುತು. ಈ ಪ್ರವೃತ್ತಿಗಳು ನೇರವಾಗಿ ಕಾಶ್ಮೀರದ ಸಮಸ್ಯೆಯ ಪ್ರತಿಕ್ರಿಯೆಗಳಲ್ಲ. ಆದ್ದರಿಂದ ಆ ಸಮಸ್ಯೆಯ ಪರಿಹಾರದಿಂದ ಇವುಗಳ ಮೇಲೆ ನೇರವಾದ ಯಾವ ಪ್ರಬಲ ಪರಿಣಾಮವೂ ಆಗದು ಎಂದು ಎನಿಸುತ್ತದೆ. "ಭಾರತದ ರಾಷ್ಟ್ರೀಯತೆ" ಎಂಬ ಪರಿಕಲ್ಪನೆ ಸಾಧನೆಯ ಹಾದಿಯಲ್ಲಿರುವ ಕಲ್ಪನೆ ಎಂದು ನೆನಪಿಸಿಕೊಳ್ಳಬಹುದು.

**ಹೊ :** ಕಾಶ್ಮೀರದ ವಿಭಜನೆ ಪಾಕಿಸ್ತಾನ-ಭಾರತ ದೇಶಗಳಿಗೆ ಸಂಬಂಧಪಟ್ಟ ವಿಷಯವಲ್ಲ; ಅದು ಕಾಶ್ಮೀರದ ಜನತೆ ನಿರ್ಧರಿಸಬೇಕಾದ್ದು, ಅವರು ಒಪ್ಪಬೇಕಾದದ್ದು ಎಂಬ ವಾದವಿದೆ. ಅವರು ತಮ್ಮ ಅಭಿಮತ ತಿಳಿಸುವ ಹಕ್ಕು, ಅದನ್ನು ಕೇಳುವ ಕರ್ತವ್ಯ ಇದಕ್ಕೆಲ್ಲಾ ಅರ್ಥವಿಲ್ಲವೇ ? ಹಾಗೆ ಅವರ ಅಭಿಮತ ಕೇಳಿದರೆ ಕಾಶ್ಮೀರ ಪಾಕಿಸ್ತಾನದೊಡನೆ ಸೇರುವ ಬಯಕೆ ವ್ಯಕ್ತಪಡಿಸಬಹುದೆಂಬ ಭಯವೇ ?

**ಎನ್. ಎಸ್. ನ :** ಈ ಭಯದ ಛಾಯೆ ಸ್ವಲ್ಪ ಇದ್ದಿರಬಹುದು ಹಿಂದೆ. ಆದರೆ ಇಂದು ಈ ಭಯಕ್ಕೆ ಕಾರಣವಿಲ್ಲ. ಆದರೆ ಹೊಸ ಅಭಿಮತ ಕೇಳಲು ಸಮಯ ಮೀರಿದೆ. ಕಾಶ್ಮೀರ ವಿಭಜಿತ ಸ್ಥಿತಿಯಲ್ಲಿ ಐವತ್ತು ವರ್ಷದಿಂದ ಇದ್ದೇ ಇದೆ. ಮುಕ್ತವಾಗಿ ಅಭಿಪ್ರಾಯ ವ್ಯಕ್ತಪಡಿಸುವ ಐಕ್ಯಗೊಂಡ ಕಾಶ್ಮೀರದ ಚಿತ್ರ ಸಾಧ್ಯವಾಗದಷ್ಟು ಸಮಯ, ಪರಿಸ್ಥಿತಿ, ವ್ಯತ್ಯಾಸವಾಗಿದೆ. ಆದರೆ ಒಂದು ವಿಷಯ ಗಮನಿಸಬೇಕು. ನಮ್ಮ ಭಾಗದ ಕಾಶ್ಮೀರವಂತೂ ತನ್ನ ಅಭಿಮತವನ್ನು ರಾಜ್ಯಾಂಗದ ೩೭೦-ಎ ವಿಧಿಯ ಸ್ವರೂಪದಲ್ಲಿ ಸ್ಪಷ್ಟಪಡಿಸಿದೆ. ಇದರ ಬಹುಮುಖ್ಯ ಅಂಶವೆಂದರೆ ಈ ಭಾಗದ ಕಾಶ್ಮೀರದ ಸ್ವರೂಪವನ್ನು ಅವಿಭಾಜ್ಯ, ಧರ್ಮನಿರಪೇಕ್ಷ , ಸ್ವಾಯತ್ತ ಪ್ರದೇಶವಾಗಿ ಉಳಿಸುವುದು. ಈ ಸ್ವಾಯತ್ತತೆಯನ್ನು ಭಾರತ ಸರ್ಕಾರ ಸರಿಯಾಗಿ ಪರಿಪಾಲಿಸದೇ ಅಥವಾ ಪರಿಪಾಲಿಸಿಲ್ಲವೆಂಬ ಭಾವನೆಗೆ ಒತ್ತುಕೊಡುವ ರೀತಿಯಲ್ಲಿ ವರ್ತಿಸಿ, ಇಂದಿನ ಅನೇಕ ಸಮಸ್ಯೆಗಳು ಉಂಟಾಗಿವೆ ಎಂದೆನಿಸುತ್ತದೆ. ಇಂದು ಕಾಶ್ಮೀರದ ಆಂತರಿಕವಾದ ಪ್ರಕ್ಷುಬ್ಧ ಪರಿಸ್ಥಿತಿಗೆ ಪ್ರಥಮತಃ ಈ ಅಂಶವೇ ಕಾರಣ. ಹೀಗೆ ಸ್ವಾಯತ್ತತೆಯ ನಿಯಮಗಳನ್ನು ಗೌರವಿಸಿ ಪಾಲಿಸದೇ ಉದಿಸುವ ಅತೃಪ್ತಿ ಪಾಕಿಸ್ತಾನದ ಭಯೋತ್ಪಾದಕ ಹಸ್ತಕ್ಷೇಪಕ್ಕೆ ಆಹ್ವಾನವಾಗುತ್ತದೆ. ಆಗಿಯೂ ಇದೆ.

**ಹೊ :** ಉದಾಹರಣೆಗೆ ? ಸ್ವಾಯತ್ತತೆಯನ್ನು ಪರಿಪಾಲಿಸಿಲ್ಲವೆಂದರೆ ಏನದರರ್ಥ ?

**ಎನ್. ಎಸ್. ನ :** ಇದನ್ನು ಕಾನೂನು ಪಂಡಿತರು ಬಲ್ಲರು. ಉದಾಹರಣೆಗೆ, ಭಾರತ ಸರ್ಕಾರದ ಯಾವ ಶಾಸನವೇ ಆಗಲೀ, ಕಾನೂನೇ ಆಗಲೀ ಕಾಶ್ಮೀರದ

ಸರ್ಕಾರ ಮತ್ತು ಅವರ ಶಾಸನ ಸಭೆ ಒಪ್ಪಿಕೊಂಡರೆ ಮಾತ್ರ ಕಾಶ್ಮೀರಕ್ಕೆ ಅನ್ವಯವಾಗಬೇಕು ಎಂಬುದೊಂದು. ಇದನ್ನು ಕಟ್ಟುನಿಟ್ಟಾಗಿ ಪಾಲಿಸಿದಂತಿಲ್ಲ. ಒಲ್ಲದ ಶಾಸನಗಳನ್ನು ಅವರ ಮೇಲೆ ಹೇರಿದರೆ ಅತೃಪ್ತಿಗೆ ಅವಕಾಶವಿತ್ತಂತಾಗುತ್ತದೆ. ಇಂಥದು ಇನ್ನೂ ಹಲವಾರು ಇವೆ. ಸಾಲದ್ದಕ್ಕೆ ಈ ವಿಶೇಷ ನಿಬಂಧನೆಯನ್ನು ತೆಗೆದುಹಾಕಬೇಕೆಂದು ಕೆಲವರು ವಾದಿಸಿ, ಕಾಶ್ಮೀರಿ ಜನತೆಯನ್ನು ಗಾಬರಿಪಡಿಸಿದ್ದಾರೆ.

**ಹೊ :** ಇದನ್ನು ಸರಿಪಡಿಸಿದರೆ ಎಲ್ಲ ಸರಿ ಹೋಗಬಹುದೇ ?

**ಎನ್. ಎಸ್. ನ :** ಸರಿಪಡಿಸಿ, ಕಾಶ್ಮೀರಿ ಜನತೆಯ ಸ್ವಾಯತ್ತತೆಯ ಬಯಕೆಯನ್ನು ಮನ್ನಿಸಬೇಕು. ಅದಷ್ಟೆ ಸಾಲದು. ಅಲ್ಲಿಯ ಆರ್ಥಿಕ ಬೆಳವಣಿಗೆಗೆ ಸಂಪೂರ್ಣ ಒತ್ತುಕೊಡುವುದರಲ್ಲಿ ಯಾವ ವಿಳಂಬವೂ ಸಲ್ಲದು. ಅವಕಾಶ ಸಿಕ್ಕರೆ ಕಾಶ್ಮೀರವು ಪಾಕಿಸ್ತಾನಕ್ಕೆ ಸೇರುವುದೆಂಬ ಸಂದೇಹ ಸರಿಯಲ್ಲ. ಹಾಗೆಂದರೆ, ಸ್ವಯಂ ನಿರ್ಧಾರದ ಪರೀಕ್ಷೆ ಎಂಬ ಮಾರ್ಗಕ್ಕೆ ಒಪ್ಪಬೇಕೆಂದಲ್ಲ, ಅದರ ಅಗತ್ಯವಿಲ್ಲ. ಅವರ ನಿರ್ಧಾರ ರಾಜ್ಯಾಂಗ ೩೭೦ ವಿಧಿಯಲ್ಲಿ ಇಂಗಿತವಾಗಿದೆ. ಆರ್ಥಿಕ ಪ್ರಗತಿ, ಶಾಂತಿ ಸ್ಥಾಪನೆ, ಸ್ವಾಯತ್ತತೆ, ಕಾಶ್ಮೀರದ ಜನತೆಯ ಕೆಲವು ಸ್ತರದಲ್ಲಿ ಹುದುಗಿರಬಹುದಾದ ಭಾರತ ವಿರೋಧೀ ಭಾವನೆಯ ಸೆಲೆಯನ್ನು ಕಾಲಾನುಕ್ರಮದಲ್ಲಿ ಬತ್ತಿಸಬಲ್ಲವು. ಹುದುಗಿದ ಈ ಭಾವನೆ ನನ್ನ ಗಮನಕ್ಕೆ ಆಗಾಗ್ಗೆ ಬಂದಿರುವುದೂ ಉಂಟು.

**ಹೊ :** ಈ ಬೆಳವಣಿಗೆಯಾಗಬೇಕಾದರೆ ಮೊದಲಿಗೆ ಪಾಕಿಸ್ತಾನದೊಡನೆ ಒಪ್ಪಂದ ಪರಿಹಾರವಾಗಬೇಕು......?

**ಎನ್. ಎಸ್. ನ :** ಬೇಕಿಲ್ಲ, ಅದಕ್ಕೆ ಕಾಯಬೇಕಿಲ್ಲ. ನಾವು ಈಗಾಗಲೇ ಹೀಗೆ ನಡೆದುಕೊಳ್ಳದೆ ಇದ್ದದ್ದೇ ಸಮಸ್ಯೆಯ ಉದ್ಭವಕ್ಕೆ, ಉಲ್ಬಣಕ್ಕೆ ಕಾರಣ. ಪಾಕಿಸ್ತಾನ ಎಷ್ಟು ಕಾಲ ಬೇಕಾದರೂ ಇದೊಂದು ಸಮಸ್ಯೆಯೆಂದು ಬೊಬ್ಬೆ ಇಡುತ್ತಿರಲಿ. ನಮ್ಮ ಭಾಗದ ಕಾಶ್ಮೀರದಲ್ಲಿ ಈ ಆಡಳಿತ ನೆಲೆಯನ್ನು ರಚನಾತ್ಮಕವಾಗಿ, ತ್ವರಿತವಾಗಿ ಕಾರ್ಯಗತಗೊಳಿಸಲು ಯಾರ ಅಪ್ಪಣೆಯೂ ಬೇಕಿಲ್ಲ, ಯಾರ ಅಡ್ಡಿಗೂ ಬೆದರಬೇಕಾಗಿಲ್ಲ. ಕಾಶ್ಮೀರದ ಉಗ್ರವಾದೀ ಅಲ್ಪಸಂಖ್ಯಾತರು ಇದನ್ನು ವಿರೋಧಿಸಲು ಆಗುವುದಿಲ್ಲ. ಈ ಕ್ರಮ ಆ ಉಗ್ರವಾದಿಗಳ ತಾತ್ವಿಕ ನೆಲೆಯನ್ನೇ ನಷ್ಟಗೊಳಿಸಬಲ್ಲದು. ಆಗ ಗಡಿಯಾಚೆಗಿನ ಭಯೋತ್ಪಾದಕರನ್ನು ಹಿಮ್ಮೆಟ್ಟಿಸುವುದು ರಕ್ಷಣಾ ಬಲಕ್ಕೆ ಸುಲಭವಾಗುತ್ತದೆ. ಕಾಶ್ಮೀರಿಗಳಿಗೆ ಭಾರತದೊಡನೆ ಇರುವುದು ಪ್ರಯೋಜನಕರವೆಂಬ ಅರಿವಾಗುತ್ತದೆ.

**ಹೊ:** ಕಾಶ್ಮೀರದ ಜನತೆಗೆ ಸ್ವತಂತ್ರ ರಾಷ್ಟ್ರದ ಹಂಬಲವಿದೆಯೇ ?

**ಎನ್. ಎಸ್. ನ :** ಈಗಾಗಲೇ ಜರುಗಿರುವ ಐತಿಹಾಸಿಕ ಘಟನೆಗಳಿಂದಾಗಿಯೂ, ಅದರ ಭೌಗೋಳಿಕ ಪರಿಸ್ಥಿತಿಯಿಂದಾಗಿಯೂ ಇದು ಬಯಸಿದರೂ ಸಾಧ್ಯವಾಗದು. ಮೂಲದಲ್ಲಿ ಕಾಶ್ಮೀರದ ಜನತೆ ಧರ್ಮ ನಿರಪೇಕ್ಷ ಸಮಾಜದವರಾಗಿದ್ದು ಅವರಿಗೆ ಭಾರತೀಯರಿಗಿಂತ ಉತ್ತಮ ಮಿತ್ರರು ಸಿಗುವುದಿಲ್ಲ. ಭಾರತ ತನ್ನ ಧರ್ಮನಿರಪೇಕ್ಷ ಸ್ವರೂಪವನ್ನು ಉಳಿಸಿಕೊಂಡಿರುವವರೆಗೆ, ಹೀಗೆ ಹೇಳುವುದು ಸರಿ.

**ಹೊ :** ರಾಷ್ಟ್ರದ ರಕ್ಷಣೆಯ ಪರಿಸ್ಥಿತಿಗೆ ಇರುವ, ಬರಬಹುದಾದ ಇನ್ನಿತರ ಪ್ರಮುಖ ಆತಂಕಗಳನ್ನು ಗುರುತಿಸಬಹುದೇ ?

**ಎನ್. ಎಸ್. ನ :** ಮೊದಲಿಗೆ, ಚೀನಾ – ಭಾರತ ಸಂಬಂಧವೆಂದು ಹೇಳಬಹುದಿತ್ತು. ಚೀನಾವನ್ನು ನಮ್ಮ ಎದುರಾಳಿ ಎಂದಂತೂ ಗುರುತಿಸಬಹುದು. ಎರಡೂ ದೇಶಗಳೂ ಇತ್ತೀಚೆಗೆ ರಚನಾತ್ಮಕವಾಗಿ ಪರಸ್ಪರ ಹಿತಾಸಕ್ತಿಗಳನ್ನು ಗುರುತಿಸಿ, ಸಂಬಂಧ ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ಇದು ಸ್ವಾಗತಾರ್ಹ. ಚೀನದೊಡನೆ ಗಡಿ ವಿವಾದ ಪರಿಹರಿಸಲು ಸಾಧ್ಯವಾದುದು. ಇನ್ನಿತರ ವಿಷಯಗಳಲ್ಲಿ ನಾವು ಅವರೊಡನೆ ಪೈಪೋಟಿಗೆ ಇಳಿಯಬೇಕಾಗಿಲ್ಲ. ಬಹುಶಃ ಪಾಕಿಸ್ತಾನವನ್ನು ನಾವು ಅಸ್ಥಿರಗೊಳಿಸಿ ಹೋಳಾಗಿಸಬಹುದೆಂದು ಭಯಗೊಂಡಿರುವ ಪಾಕಿಸ್ತಾನಿ ಸರಕಾರಕ್ಕೆ ಚೀನಾ ಆಶ್ವಾಸನೆ ನೀಡುವ ರೀತಿಯಲ್ಲಿ ಅದರೊಡನೆ ಸಂಬಂಧವಿಟ್ಟುಕೊಂಡಿರಬಹುದು. ಇದರಿಂದ ನಾವೇನೂ ಚಿಂತಿಸಬೇಕಾಗಿಲ್ಲ.

ಮುಂದುವರೆದು, ರಷ್ಯದ ಕಮ್ಯುನಿಸ್ಟ್ ಸರ್ಕಾರದ ಪತನಾನಂತರ ಅಂತರರಾಷ್ಟ್ರೀಯವಾಗಿ ಬೆಳೆಯುತ್ತಿರುವ ಅಮೆರಿಕದ ಏಕಸ್ವಾಮ್ಯ ಪ್ರವೃತ್ತಿ ಮತ್ತೊಂದು ಆತಂಕವೆನಿಸಬಹುದು. ವಾಣಿಜ್ಯ ಕ್ಷೇತ್ರದಲ್ಲಿ ಉದ್ಭವಿಸಿರುವ ಪ್ರಕ್ಷುಬ್ಧ ಪರಿಸ್ಥಿತಿ, ವಿಶ್ವವಾಣಿಜ್ಯ ಸಂಸ್ಥೆಯ ಅಸೀಮ ಅಧಿಕಾರ, ಈ ಬೆಳವಣಿಗೆಗಳನ್ನು ಗಂಭೀರವಾಗಿ ಒಟ್ಟಾರೆ ಕಣ್ಣಲ್ಲಿ ಕಣ್ಣಿಟ್ಟು ಪರಿಶೀಲಿಸುತ್ತಿರಬೇಕು. ಭಾರತ ಅಭಿವೃದ್ಧಿಶೀಲ ಮತ್ತು ಹಿಂದುಳಿದ ರಾಷ್ಟ್ರಗಳೊಡನೆ ಸಹಕರಿಸಿ, ಮುಂದುವರಿದ ರಾಷ್ಟ್ರಗಳ ಬಣಕ್ಕೆ ಪರ್ಯಾಯವಾಗಿ ಒಂದಿಷ್ಟು ಮುಂದಾಳುತನ ನೀಡುವುದು ಮುಖ್ಯವಾಗಬಹುದು. ಇದರಿಂದ ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಒಂದಿಷ್ಟು

ಸಮತೋಲನ ತರಲು ಸಾಧ್ಯವಾಗಬಹುದು.

ಇಸ್ಲಾಂ ಮತಧರ್ಮದ ಕೆಲವು ಮೂಲಭೂತ ವಾದಿಗಳ ವಿಶ್ವವ್ಯಾಪಿ ಮಹತ್ವಾಕಾಂಕ್ಷೆ ಇನ್ನೊಂದು ಆತಂಕಕಾರಿ ಹಾಗೂ ಗಂಭೀರ ಸಮಸ್ಯೆ. ತಾಲಿಬಾನ್ ಬೆಳವಣಿಗೆ ಇದರ ಒಂದು ಹೊರಮುಖ. ಇದರ ವಿರುದ್ಧದ ಹೋರಾಟ, ಅದರ ಪರಿಣಾಮವಾಗಿ ನಮ್ಮ ಗಡಿನಾಡಿನಲ್ಲೇ ಉದ್ಭವಿಸಿರುವ ಪ್ರಬಲ ರಾಷ್ಟ್ರಗಳ ಹಸ್ತಕ್ಷೇಪ, ಬೆಳೆಯುತ್ತಿರುವ ಅವರ ಪ್ರಾಬಲ್ಯ, ಬರಲಿರುವ ಹೊಸಹೊಸ ಮಿಲಿಟರಿ ನೆಲೆಗಳು, ಇವೂ ಪ್ರಮುಖ ಆತಂಕಗಳು. ಆಂತರಿಕವಾಗಿ ಭಾರತ ತನ್ನ ಧರ್ಮ ನಿರಪೇಕ್ಷ ಪ್ರಜಾಪ್ರಭುತ್ವವನ್ನು ಕಟ್ಟುನಿಟ್ಟಾಗಿ ಪರಿಪಾಲಿಸುವತನಕ ಇಂಥ ಬೆಳವಣಿಗೆಯ ಬಗ್ಗೆ ವಿಚಲಿತರಾಗಬೇಕಾಗಿಲ್ಲ. ಸದಾ ಎಚ್ಚರದಿಂದಿರುವುದಂತೂ ಅಗತ್ಯ. ನಮ್ಮ ನೆರೆರಾಷ್ಟ್ರಗಳಾದ ನೇಪಾಳ, ಭೂತಾನ, ಬಾಂಗ್ಲಾದೇಶ, ಬರ್ಮಾ ಮತ್ತು ಶ್ರೀಲಂಕಾ ಎಂದೂ ನಮಗೆ ಸಾಟಿಯಾದ ಪ್ರತಿಸ್ಪರ್ಧಿಗಳಲ್ಲ. ಇವೆಲ್ಲಕ್ಕಿಂತ ಹಿರಿದಾದ ಭಾರತ ಈ ರಾಷ್ಟ್ರಗಳ ಜೊತೆ ವ್ಯಾವಹಾರಿಕವಾಗಿ 'ಹಿರಿಯಣ್ಣ'ನೆಂಬಂತೆ ವರ್ತಿಸದಿರುವುದು, ಅವರ ಸೂಕ್ಷ್ಮಭಾವನೆಗಳಿಗೆ ಮನ್ನಣೆ ನೀಡುವುದು ಮುಖ್ಯ. ಆ ದೇಶಗಳ ಸ್ವಂತಹಿತಾಸಕ್ತಿಯ ಸಾಧನೆಗೆ ಅನುಕೂಲವಾಗುವಂತೆ ನಡೆದುಕೊಳ್ಳುವುದು ಅಗತ್ಯ. ಹಾಗೆ ನಡೆದುಕೊಳ್ಳದೆ ಹೋದರೆ ಅವು ಭಾರತದ ವಿರೋಧಿ ಬಲಿಷ್ಠ ರಾಷ್ಟ್ರಗಳ ಕೈಗೊಂಬೆಗಳಾಗಿ ನಮಗೆ ಆತಂಕ ಉಂಟುಮಾಡಬಲ್ಲವು. ಇವಿಷ್ಟು ಹೊರಗಿನ ಕೆಲವು ಆತಂಕಗಳು ಎನ್ನಬಹುದು.

ಆಂತರಿಕವಾಗಿಯೂ ಪ್ರಾದೇಶಿಕವಾದ ಹಲವಾರು ಆತಂಕಗಳಿವೆ. ಇವುಗಳಲ್ಲಿ ಆರ್ಥಿಕ ಅಸಮತೋಲನ ಬಹಳ ಮುಖ್ಯ ಎನಿಸುತ್ತದೆ. ಸಂಪತ್ತಿನ, ಸಂಪನ್ಮೂಲಗಳ ಅಸಮ ವಿತರಣೆ ಇನ್ನೊಂದು. ಭಾರತದ ರಾಷ್ಟ್ರೀಯತೆಯ ಒಳಗಡೆ ಹಲವಾರು ಉಪರಾಷ್ಟ್ರೀಯ ಮನೋಭಾವಗಳನ್ನು ಉಳ್ಳ ಜಾತಿ, ಮತ, ಬುಡಕಟ್ಟು, ಭಾಷೆ, ಸಂಸ್ಕೃತಿಗಳ ವಿಭಿನ್ನತೆಯಿದೆ. ಇವುಗಳು ಪರಸ್ಪರ ಸಹಬಾಳ್ವೆ ನಡೆಸಲು ಅವುಗಳಿಗೆ ಒಂದಿಷ್ಟು ರಾಜ್ಯಮಟ್ಟದ, ಪ್ರಾಂತ್ಯಮಟ್ಟದ, ಸ್ವಾಯತ್ತತೆ ಅಗತ್ಯವಾಗುತ್ತದೆ. ಇದೇ ಸರ್ಕಾರಿಯ ಸಮಿತಿಯ ಮುಂದಿರುವ ವಿಷಯ. ಈ ಭಿನ್ನತೆಯಲ್ಲಿ ಐಕ್ಯತೆಯನ್ನು ಸಾಧಿಸಬೇಕಾದರೆ, ಐಕ್ಯತೆಯಲ್ಲಿ ಪ್ರತಿಯೊಂದು ಭಿನ್ನತೆಗೂ ಪ್ರಯೋಜನ ಕಾಣಿಸಬೇಕು. ಇನ್ನೊಂದು ಸ್ವಾರಸ್ಯವೆಂದರೆ ಕಾಶ್ಮೀರದ ಸ್ವಾಯತ್ತತೆಯ ಬಯಕೆಗೂ ಇದೇ ಸೆಲೆ ಇರುವುದು. ಈ ಮಾರ್ಗದಲ್ಲಿ ವಿಭಿನ್ನತೆಯನ್ನು ನಿಭಾಯಿಸಿ, ನಿರ್ವಹಿಸದಿದ್ದರೆ ವಿಚ್ಛಿದ್ರಕಾರಕ ಒಲವುಗಳು ಹೆಚ್ಚಿಕೊಂಡು ಆತಂಕಕಾರಿ ಪರಿಸ್ಥಿತಿ ಉಂಟಾಗುವ ಸಂಭವಗಳಿರುತ್ತವೆ. ರಾಜಕೀಯ ಶಕ್ತಿಗಳು ಇದನ್ನು ಸಮರ್ಥವಾಗಿ ನಿರ್ವಹಿಸುವ ಜಾಣ್ಮೆ ತೋರಬಲ್ಲುವೆ ಎಂಬುದೇ ನಮ್ಮ ಮುಂದಿರುವ ಪ್ರಶ್ನೆ. ವಿಭಿನ್ನತೆಯನ್ನು ಪುರಸ್ಕರಿಸದೆ, ಎಲ್ಲ ಸಂದರ್ಭಗಳಲ್ಲೂ ಅದನ್ನು ತೊಡೆದುಹಾಕುವುದು ಐಕ್ಯತೆ ಎಂದು ತಿಳಿಯುವುದು ಅಕ್ಷಮ್ಯ.

**ಹೊ** : ತೆಹಲ್ಕಾ ಪ್ರಕರಣವನ್ನು ಗಮನಿಸಿದರೆ, ಶಸ್ತ್ರಾಸ್ತ್ರ ಕೊಳ್ಳುವುದರಲ್ಲಿ ಲಂಚದ ಪಾತ್ರ ಮಿತಿಮೀರುತ್ತಿರುವಂತಿದೆ. ಇದರಿಂದಾಗಿ ಖರೀದಿಸಿರುವ ಶಸ್ತ್ರಾಸ್ತ್ರಗಳ ಗುಣಮಟ್ಟವನ್ನು ತಟ್ಟದೆಯೇ ಎಂದು ಗಾಬರಿಯಾಗಿದೆ. ತೆಹಲ್ಕಾ ಪ್ರಕರಣವನ್ನು ಧಿಕ್ಕರಿಸಿ, ಅಧಿಕಾರಕ್ಕೆ ಮರಳಿಬಂದಿರುವ ರಕ್ಷಣಾ ಮಂತ್ರಿಗಳು, ಶಸ್ತ್ರಾಸ್ತ್ರ ಕೊಳ್ಳಲು ಮತ್ತೆ ಏಜೆಂಟರುಗಳನ್ನು, ಮಧ್ಯವರ್ತಿಗಳನ್ನು, ಉಪಯೋಗಿಸುವ ನೀತಿಯನ್ನು ಮಂಡಿಸಿದ್ದಾರೆ. ಬಹುಶಃ ಲಂಚದ ಆರೋಪಗಳು ಇನ್ನು ಮೇಲೆ ತಮ್ಮನ್ನು ತಟ್ಟದಿರಲಿ ಎಂಬ ಸೋಗಲಾಡಿತನವೋ ಏನೋ ? ಇದರ ಬಗ್ಗೆ ಸ್ವಲ್ಪ ಬೆಳಕು ಚೆಲ್ಲುವಿರಾ ?

**ಎಸ್. ಎಸ್. ನ** : ಶಸ್ತ್ರಾಸ್ತ್ರವೇ ಏಕೆ, ಸರ್ಕಾರ ಏನನ್ನೇ ಕೊಂಡರೂ, ಲಂಚದ ಆಪಾದನೆ ಹೊಸದೇನಲ್ಲ. ಆದರೆ ರಕ್ಷಣಾ ಖಾತೆಯ ಕೊಳ್ಳುವಿಕೆ ಬಹು ಹಿರಿಯ ಮೊತ್ತದ್ದು ಎಂಬುದು ಈ ಸಂದೇಹಕ್ಕೆ ಪುಷ್ಟಿ ಕೊಡುತ್ತದೆ. ಒಂದಿಷ್ಟು ಲಂಚ ಪ್ರಕರಣಗಳು ನಿಜವೂ ಇರಬಹುದು. ಆದರೆ ನನ್ನ ಅನುಭವದಿಂದ ಇಷ್ಟು ಹೇಳಬಹುದು: ಖರೀದಿಸಿದ ಅಸ್ತ್ರಗಳ ಗುಣಮಟ್ಟದ ವಿಷಯದಲ್ಲಿ ಅನೈತಿಕ ರಾಜಿ ಮಾಡಿಕೊಳ್ಳುವ ಪ್ರವೃತ್ತಿಯಾಗಲೀ, ಸಾಧ್ಯತೆಯಾಗಲೀ ರಕ್ಷಣಾ ಇಲಾಖೆಯಲ್ಲಿಲ್ಲ. ಬೋಫರ್ಸ್ ಬಂದೂಕು ಒಂದು ಉತ್ತಮ ಶಸ್ತ್ರ. ಹಲವಾರು ಹಂತಗಳಲ್ಲಿ ಸೂಕ್ಷ್ಮವಾಗಿ ಚರ್ಚೆಗೆ ಒಳಗಾಗಿ, ಅಂತಿಮವಾಗಿ ಉಪಯೋಗಿಸುವವರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕೇಳಿ, ಕೊಳ್ಳುವ ನಿರ್ಧಾರವನ್ನು ತೆಗೆದುಕೊಳ್ಳಲಾಗುತ್ತಿದೆ. ಬಹುಶಃ ಒಂದಿಷ್ಟು ಪಾರದರ್ಶಕ ವಿಧಾನ ಹೆಚ್ಚಬಹುದೇನೋ.

ಏಜೆಂಟರುಗಳ ವ್ಯವಸ್ಥೆ ನೇರವಾಗಿ ಕೊಳ್ಳುವುದಕ್ಕಿಂತ ಉತ್ತಮವಾದುದು. ಇತ್ತೀಚೆಗೆ ರಷ್ಯ ಸರ್ಕಾರವೂ ಕೇಂದ್ರೀಕೃತ ಏಜೆನ್ಸಿ ಮೂಲಕ ಬರುವಂತೆ ನಮಗೆ ಹೇಳಿತು. ಏಜೆಂಟರುಗಳು ತಾಂತ್ರಿಕವಾಗಿ ಸಮರ್ಥರಿರುತ್ತಾರೆ. ಅವರಲ್ಲಿ ಬಹುಮಂದಿ ಶಸ್ತ್ರಾಸ್ತ್ರಗಳ ಗುಣಮಟ್ಟವನ್ನೂ ತಿಳಿದವರು. ಅಲ್ಲದೆ, ಇತ್ತೀಚಿನ ಬೆಳವಣಿಗೆ ಅವರಿಗೆ ತಿಳಿದಿರುತ್ತದೆ. ಅನೇಕ ಬಾರಿ ನೇರವಾಗಿ ಕೊಳ್ಳುವ ಬೆಲೆಗಿಂತ ಸುಲಭ ದರದಲ್ಲಿ, ತ್ವರಿತಗತಿಯಲ್ಲಿ ಏಜೆಂಟರ ಮೂಲಕ ಅಸ್ತ್ರಗಳನ್ನು ಕೊಳ್ಳಲು ಸಾಧ್ಯವಾಗುತ್ತದೆ.



> ಒಂದು ಮಹಾನ್ ಗ್ರಂಥ ಒಂದು ಮಹಾನ್ ಮೇಳವಾದ್ಯ ಕೃತಿಯಂತೆ. ಅದನ್ನು ನಿಜವಾಗಿಯೂ ಆನಂದಿಸಿ ಮೆಚ್ಚಲು ಹಲವಾರು ಬಾರಿ ಕೇಳಬೇಕು. ಹಾಗೆಯೇ ಅಂಥ ಗ್ರಂಥವನ್ನು ಪುನಃ ಪುನಃ ಓದಬೇಕು.
>
> *-ಶೋಪೆನ್‌ಹಾವರ್*

**ಹೊಸತು** : ಭಾರತದ ಸೈನಿಕರು ಕಾಶ್ಮೀರದಲ್ಲೋ, ಈಶಾನ್ಯದ ಗಡಿಯಲ್ಲೋ ಅಲ್ಲಿಯ ನಾಗರಿಕರೊಡನೆ ಆಗಾಗ್ಗೆ ಅಮಾನವೀಯವಾಗಿ ವರ್ತಿಸಿದ್ದಾರೆಂಬ ಆಪಾದನೆ ಪದೇ ಪದೇ ಕೇಳಿಬರುತ್ತಿದೆ. ಇದು ಎಷ್ಟು ನಿಜ ? ಏಕೆ ಹಾಗೆ ಆಗುತ್ತದೆ ? ಸೈನಿಕ ಸಂಹಿತೆ ಈ ಬಗ್ಗೆ ಏನು ಹೇಳುತ್ತದೆ ? ಅಂಥ ವರ್ತನೆಯನ್ನು ಶಿಕ್ಷಿಸುವ ವ್ಯವಸ್ಥೆ ಇದೆಯೇ ? ಕಾಶ್ಮೀರದಲ್ಲೋ, ಈಶಾನ್ಯ ಪ್ರದೇಶದಲ್ಲೋ ಒಂದು ಸಂಪೂರ್ಣ ಗ್ರಾಮ ಅಥವಾ ಒಂದು ಸಂಪೂರ್ಣ ಪ್ರದೇಶದ ಎಲ್ಲ ಜನರೂ ಭಯೋತ್ಪಾದಕರೆನಿಸಿಕೊಂಡ ಪ್ರಸಂಗಗಳುಂಟೆ ? ಅಂಥ ಸಂದರ್ಭದಲ್ಲಿ ಇಡೀ ಗ್ರಾಮಸ್ಥರನ್ನು ದಾರುಣವಾಗಿ ಸದೆ ಬಡಿಯುತ್ತಾರಂತಲ್ಲ ?

**ಎಸ್. ಎಸ್. ನ** : ಪ್ರಥಮತಃ, ಭಯೋತ್ಪಾದಕನು ಮಾನವೀಯ ಹಕ್ಕು ಬಾಧ್ಯತೆಗಳನ್ನು ಉಲ್ಲಂಘಿಸುತ್ತಾನೆ. ಅವನನ್ನು ಸದೆಬಡಿದು ಅಡಗಿಸುವುದು ರಕ್ಷಣಾ ಪಡೆಯ ಕರ್ತವ್ಯ. ಈ ಪ್ರತಿರಕ್ಷಣಾ ಕ್ರಮವನ್ನು ಅದೇ ತರಹದ ಮಾನವೀಯ ಹಕ್ಕು ಬಾಧ್ಯತೆಗಳ ಉಲ್ಲಂಘನೆಯೆಂದು ಬಣ್ಣಿಸುವುದು ಖಂಡಿತ ಸರಿಯಲ್ಲ. ಹೀಗೆ ಹೇಳುವವರು ಹೊರಗಿನವರು ಎಂಬುದನ್ನು ಗಮನಿಸಬೇಕು. ಒಂದು ಊರಿನಲ್ಲಿ ಸೈನಿಕ ಗಸ್ತು ತಿರುಗುತ್ತಿರುತ್ತಾನೆ. ಎಲ್ಲಿಂದಲೋ ಬಂದ ಗುಂಡು ಅವನನ್ನು ಕೊಲ್ಲುತ್ತದೆ. ಅದನ್ನು ವಿಚಾರಿಸಲು ಬಂದ ಮಗದೊಬ್ಬ ಸೈನಿಕನನ್ನೂ ಆ ಅದೃಶ್ಯ ಬಂದೂಕುಧಾರಿ ಮತ್ತೊಮ್ಮೆ ಕೊಲ್ಲುತ್ತಾನೆ. ಇಂತಹ ಸಂದರ್ಭದಲ್ಲಿ ಮಾರುಗುಂಡು ಹಾರಿಸುವುದು ಸೈನಿಕನ ಪ್ರವೃತ್ತಿ. ಭಯೋತ್ಪಾದಕ ಅವಿತುಕೊಂಡಿರುವ ನೆಲೆ ಹೇಗಿರುತ್ತದೆಂದರೆ ಮಾರುಗುಂಡು ಜನರ ನಡುವೆ ಹಾಯ್ದು ಯಾವನೋ ಅಮಾಯಕನನ್ನು ಬಲಿ ತೆಗೆದುಕೊಳ್ಳುತ್ತದೆ. ಇದು ಪ್ರಾಸಂಗಿಕ ಕ್ಲಿಷ್ಟತೆಯಿಂದ ಆದದ್ದು. ಇದು ನನ್ನ ವೈಯಕ್ತಿಕ ಅನುಭವದ ಮಾತುಗಳು. ಹಾಗೆಯೇ ಎಲ್ಲಿಂದ ಗುಂಡು ಬಂತೆಂದು ತಿಳಿಯದೆ ಹೋದರೆ ಇಡೀ ಊರಿಗೆ ಚಕ್ಕಬಂದಿ ಹಾಕಿ ಮನೆ ಮನೆಯಲ್ಲೂ ಎಲ್ಲರನ್ನೂ ಶೋಧಿಸಬೇಕಾಗುತ್ತದೆ. ಈ ಕ್ರಮಕ್ಕೆ ಒಳಗಾದ ಜನ ಅದನ್ನು ಇಷ್ಟಪಡುವುದಿಲ್ಲ.

ಅವರಿಗೆ ಅದರಿಂದ ಅನಾನುಕೂಲವಾಗುತ್ತದೆ. ಹಿಂಸೆಯಾಗುತ್ತದೆ. ಅವರು ಅನೇಕ ಬಾರಿ ಅನೇಕ ರೀತಿಯಲ್ಲಿ ಪ್ರತಿಭಟಿಸುತ್ತಾರೆ ಕೂಡ. ಆದರೆ ಈ ಎರಡು ಸಂದರ್ಭಗಳೂ ಅನಿವಾರ್ಯ. ಅಂಥ ಸಂದರ್ಭಗಳನ್ನು ನಮ್ಮ ವಿರುದ್ಧ ಶಕ್ತಿಗಳು, ಅಂತರರಾಷ್ಟ್ರೀಯ ಸುದ್ದಿ ಮಾಧ್ಯಮಗಳು, ಬಣ್ಣ ಕಟ್ಟಿ ಬಣ್ಣಿಸುತ್ತವೆ. ಈ ಕಾರ್ಯಾಚರಣೆಯಲ್ಲಿ ತೊಡಗಿಸಿಕೊಳ್ಳುವ ರಕ್ಷಣಾ ದಳದವರು, ತಮ್ಮ ಕ್ರಮವನ್ನು, ಅದಕ್ಕೆ ಒಳಗಾಗುವವರ ಸೂಕ್ಷ್ಮ ಭಾವನೆಗಳಿಗೆ ಗೌರವವಿತ್ತು, ಅತಿ ಕಡಿಮೆ ಹಿಂಸೆ ಬಳಸಿ, ಸಾಧ್ಯವಾದರೆ ಬಳಸದೆಯೇ, ನಿರ್ವಹಿಸುವ ಜಾಣ್ಮೆ ತೋರಬೇಕು. ಅದಕ್ಕಾಗಿ ಅವರಿಗೆ ತಕ್ಕ ತರಬೇತಿಯ ಅಗತ್ಯವೂ ಇದೆ.

ಅನ್ಯಾಯ ನಡೆದೇ ಇಲ್ಲವೆಂದಲ್ಲ. ಆದರೆ ಅವುಗಳ ವಿಚಾರಣೆಯೂ, ತ್ವರಿತವಾದ ತೀರ್ಮಾನಗಳೂ, ಶಿಕ್ಷೆಗಳೂ ಆಗುತ್ತಲೇ ಇರುತ್ತವೆ. ಅನೇಕ ವೇಳೆ ಸ್ಥಳದಲ್ಲೇ, ವಿಚಾರಣೆಗೆ ಕಾಯದೆಯೇ, ನಾನೇ ಶಿಕ್ಷಿಸಿರುವುದುಂಟು. ಇದು ನೇರವಾಗಿ ಹೋರಾಡುವ ಕ್ಷೇತ್ರಗಳಲ್ಲಿ ಆಗೊಮ್ಮೆ ಈಗೊಮ್ಮೆ ನಡೆಯುವಂಥವು. ಆದರೆ ನೀತಿ ನಿರೂಪಣೆಯ ಹಂತದಲ್ಲಿ, ಸೈನಿಕ ಸಂಹಿತೆಯಲ್ಲಿ, ಮಾನವೀಯ ಹಕ್ಕುಗಳನ್ನು ಗೌರವಿಸುವುದು ಯೋಧನ ಬಾಧ್ಯತೆ. ಅಂತರರಾಷ್ಟ್ರೀಯವಾಗಿ ಭಾರತದ ಸೈನಿಕನ ವರ್ತನೆಗೆ ಗೌರವವಿರುವುದು ಈ ಕಾರಣದಿಂದಲೆ. ಶಾಂತಿದೂತರೆಂಬ ನಮ್ಮ ಸೈನಿಕರ ಗರ್ವಕ್ಕೆ ಹಲವರು ಕರುಬುತ್ತಾರೆ. ನಮ್ಮ ಸೈನಿಕರೂ ಹೆಚ್ಚು ಎಚ್ಚರ ವಹಿಸಬೇಕಾಗುತ್ತದೆ.

**ಹೊಸತು** : ಇನ್ನು ಪರಮಾಣು ಬಾಂಬಿನ ವಿಷಯ. ನಮಗೆ ಇದರ ಅಗತ್ಯವಿತ್ತೆ? ವೃಥಾ ಬಾಂಬಿನ ಪರೀಕ್ಷೆ ಮಾಡಿ ನಮ್ಮ ಸರ್ಕಾರ, ಮಲಗಿದ್ದ ಕುಂಭಕರ್ಣನನ್ನು ಎಚ್ಚರಿಸಿದಂತೆ ಆಯಿತೇ? ಪಾಕಿಸ್ತಾನವೂ ಬಾಂಬು ತಯಾರಿಸಿದ್ದರಿಂದ ನಮ್ಮ ರಕ್ಷಣೆಗೆ ಆತಂಕ ಹತ್ತುಪಟ್ಟು ಹೆಚ್ಚಾದಂತಾಗಲಿಲ್ಲವೇ? ಇದೊಂದು ಅಪಾಯಕಾರಿ ಬೆಳವಣಿಗೆಯೆಂದು ಹೇಳುತ್ತಾರಲ್ಲ? ಇದು ಒಂದು ಎಚ್ಚರಿಕೆಯ, ತಡೆಹಿಡಿಯುವ, ಹಿಮ್ಮೆಟ್ಟಿಸುವ ಅಸ್ತ್ರವೆಂಬುದು ಇಂದು ಎಷ್ಟರಮಟ್ಟಿಗೆ ಸರಿ? ಪಾಕಿಸ್ತಾನ ಇದರ ಬಳಕೆಯ ಬಗೆಗೆ ಅವಿವೇಕದಿಂದ ನಡೆಯ ಬಲ್ಲದಲ್ಲವೇ? ಅಥವಾ ನಾವೇ ಹಾಗೆ ಮಾಡಿದರೆ?

**ಎನ್. ಎಸ್. ನ** : ಅವಿವೇಕ ಪಾಕಿಸ್ತಾನದವರ ಗುತ್ತಿಗೆಯಲ್ಲ! ನಾವೂ ಹಾಗೆ ಮಾಡಬಹುದೆಂದು ಅವರೂ ಅನ್ನುತ್ತಾರಲ್ಲವೇ? ಅದು ಹಾಗಿರಲಿ, ಪರಮಾಣು ಬಾಂಬು ನಾವು ಪಡೆಯಬೇಕೇ ಬೇಡವೇ ಎಂಬುದು ಬರೇ ಭಾರತ ಪಾಕಿಸ್ತಾನದ ದೃಷ್ಟಿಕೋನಕ್ಕೆ ಸೀಮಿತವಲ್ಲ. ಈ ನಿಟ್ಟಿನ ನಮ್ಮ ಪ್ರಯತ್ನ ಪಾಕಿಸ್ತಾನ ಬಾಂಬು ಪಡೆಯಲು ಪ್ರಯತ್ನಿಸಿದ್ದಕ್ಕೂ ಮುಂಚಿನದು. ನಮ್ಮ ಪ್ರತಿದ್ವಂದ್ವಿಯಾದ ಚೀನಾ ಅಣ್ವಸ್ತ್ರಗಳನ್ನು ಪಡೆದ ಬೃಹತ್ ಶಕ್ತಿ. ಅವರ ಅಣ್ವಸ್ತ್ರ ನೆಲೆಗಳು ಟಿಬೆಟ್‌ನಲ್ಲೂ ಸಿಂಕಿಯಾಂಗ್‌ನಲ್ಲೂ ಸ್ಥಾಪಿತವಾಗಿವೆ. ಅವರ ಕ್ಷಿಪಣಿಗಳು ಬಹುದೂರ ಸಾಗಬಲ್ಲವು. ಅಮೆರಿಕದ ಅಣ್ವಸ್ತ್ರ ಹೊತ್ತ ಹಡಗುಗಳೂ, ಸಬ್‌ಮೆರಿನ್‌ಗಳೂ ನಮ್ಮ ದಕ್ಷಿಣದ ಹಿಂದೂಮಹಾಸಾಗರದಲ್ಲಿ ಸತತ ಓಡಾಡುತ್ತಿವೆ. ಡೀಗೋ ಗಾರ್ಸಿಯ ಅತಿ ಸಮೀಪದಲ್ಲಿದೆ. ಇಂತಹ ಸನ್ನಿವೇಶದಲ್ಲಿ ನಾವು ಅಣ್ವಸ್ತ್ರ ಪಡೆದಿರುವುದು ಕೇವಲ ಆತ್ಮರಕ್ಷಣೆಯ



ಈ ಗೂಂಡಾಗಿರಿ, ಚಮಚಾಗಿರಿ, ದಾದಾಗಿರಿ...ಗಳೆಲ್ಲ ಯಾವ ಪರ್ವತ ಶ್ರೇಣಿಯ ಗಿರಿಗಳು ?.... ಡ್ಯಾಡೀ.....

ಅಗತ್ಯ. ನಾವು ಈ ಪ್ರತಿಯೊಂದು ರಾಷ್ಟ್ರಗಳೊಡನೆಯೂ "ನಾವು ಪ್ರಥಮವಾಗಿ ಅಣ್ವಸ್ತ್ರ ಪ್ರಯೋಗಿಸುವುದಿಲ್ಲ" ಎಂಬ ಒಪ್ಪಂದ ಮಾಡಿಕೊಳ್ಳುವುದು ಸೂಕ್ತ. ಅಣ್ವಸ್ತ್ರ ಶತ್ರುಗಳನ್ನು ಹಿಮ್ಮೆಟ್ಟಿಸುವ ಬೆದರಿಕೆಯ ಪಾತ್ರವನ್ನು ಇನ್ನೂ ಕಳೆದುಕೊಂಡಿಲ್ಲ. ಅಣ್ವಸ್ತ್ರ ಒಂದು ರಾಜಕೀಯ ಅಸ್ತ್ರ, ಸೇನೆಯ ಸಹಜ ಶಸ್ತ್ರವಲ್ಲ. ಅವರು ಅದರ ಬಳಕೆಯನ್ನು ನಿರ್ಧರಿಸುವುದಿಲ್ಲ.

**ಹೊಸತು** : ಬರಲಿರುವ ರಕ್ಷಣಾ ಆತಂಕಗಳ ಪೈಕಿ ಯಾವುದು ನಿಮ್ಮ ತುರ್ತು ಕಳಕಳಿಗೆ ಬರುವಂಥದು?

**ಎನ್. ಎಸ್. ನ** : ಆಂತರಿಕ ಪರಿಸ್ಥಿತಿ! ಅದರಲ್ಲೂ ಈಶಾನ್ಯದ ಬುಡಕಟ್ಟಿನ ಜನಾಂಗಗಳ ನಡುವಿನ ಸಶಸ್ತ್ರ ಹೋರಾಟ. ಇವು ಸ್ವತಂತ್ರ ಹೋರಾಟದ ಸ್ವರೂಪವನ್ನು ಪಡೆಯುವ ಸಾಧ್ಯತೆಯಿದೆ. ಹಾಗಾದಾಗ ಹೊರಗಿನವರು ಹಸ್ತಕ್ಷೇಪ ಮಾಡಬಹುದು. ವಿಶಾಲ ಗೋರ್ಖಾಲ್ಯಾಂಡ್‌ನ ಮಹತ್ವಾಕಾಂಕ್ಷೆ ಮತ್ತು ಮುಸ್ಲಿಂ ದೇಶವನ್ನು ಕಟ್ಟುವ ತವಕ ಉತ್ತರ ಬಂಗಾಳದಲ್ಲೇನಾದರೂ ತಲೆದೋರಿ, ಅದೇ ಕಾಲದಲ್ಲಿ ಈಶಾನ್ಯ ಪ್ರದೇಶದಲ್ಲಿ ಸ್ವತಂತ್ರ ಹೋರಾಟದಂಥ ಭಯೋತ್ಪಾದನೆ ಶುರುವಾದರೆ ಮತ್ತು ಈಶಾನ್ಯ ದಿಕ್ಕನ್ನು ಉಳಿದ ಭಾರತಕ್ಕೆ ಬೆಸೆಯುವ ಸಿಲುಗುರಿಯ ಇಕ್ಕಟ್ಟಿನ ಹಾದಿ ಕಡಿದುಹೋದರೆ ಉಂಟಾಗುವ ರಕ್ಷಣಾ ಸಮಸ್ಯೆ ಬಹಳ ಗಂಭೀರವಾದುದು. ರಾಜಕೀಯವಾಗಿ, ಆಡಳಿತಾತ್ಮಕವಾಗಿ ಇಲ್ಲಿಯೂ ಸಕಾಲದಲ್ಲಿ ಅಲ್ಲಿಯ ರಾಜ್ಯಗಳ ಜನರನ್ನು ಒಲಿಸಿಕೊಳ್ಳುವ ಪ್ರಯತ್ನ ಅತ್ಯಗತ್ಯ. ಮೊದಲಿಗೆ, ಈಗಿರುವ ಪ್ರದೇಶ ವಿಂಗಡನೆಯನ್ನು ಮತ್ತೆ ಮತ್ತೆ ಕೆದಕಬಾರದು. ಉದಾಹರಣೆಗೆ, ಮಣಿಪುರದಲ್ಲಿ ಇತ್ತೀಚೆಗೆ ನಡೆದ ವಿಶಾಲ ನಾಗಾಪ್ರದೇಶಗಳ ಒಂದು ರೀತಿಯ ಪರೋಕ್ಷ ಮನ್ನಣೆ ಪ್ರಯತ್ನ ತಿಳಿಗೇಡಿತನದ್ದು. ಬುಡಕಟ್ಟುಗಳ ಜನಾಂಗೀಯ, ಉಪರಾಷ್ಟ್ರೀಯ ಮನೋಧರ್ಮಕ್ಕೆ ಒಂದಷ್ಟು ಸ್ವಾಯತ್ತತೆ ಮತ್ತು ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಮದ್ದಾಗಬಲ್ಲದು. ಇದು ಕೇವಲ ಸೇನೆಯು ತೊಡಗುವ ಮರ್ದನದಿಂದ ಆಗುವ ವಿಷಯವಲ್ಲ. ಅಂಥ ಕ್ರಮ ಸಮಸ್ಯೆಯನ್ನು ಮತ್ತಷ್ಟು ಹೆಚ್ಚಿಸಬಹುದು. ಸರ್ಕಾರಕ್ಕೆ ಈ ನಿಟ್ಟಿನಲ್ಲಿ ಅಗತ್ಯವಿದ್ದಷ್ಟು ಕಳಕಳಿ ಕಂಡುಬರುತ್ತಿಲ್ಲ.

ಆಗ್ನೇಯ ಏಷ್ಯ ಪ್ರದೇಶದಲ್ಲಿ ಭಾರತ ತನ್ನ ಪ್ರಭಾವ ಬೆಳೆಸಿಕೊಳ್ಳಲು ಸಾಕಷ್ಟು ಪ್ರಯತ್ನ ನಡೆಸದಿರುವುದು ಸರಿಯಲ್ಲ. ಶಾಂತ ಮಹಾಸಾಗರದ ಆಗುಹೋಗುಗಳಲ್ಲಿ ಭಾರತಕ್ಕೆ ನೇರ ಹಿತಾಸಕ್ತಿ ಇದೆ. ಸರ್ಕಾರ ಇದಕ್ಕೂ ತನಗೂ ಸಂಬಂಧವಿಲ್ಲ ಎಂದು ವರ್ತಿಸಕೂಡದು. ಇಲ್ಲಿಯ ರಾಷ್ಟ್ರಗಳೊಡನೆ ಹೆಚ್ಚಿನ ಮಟ್ಟದ ಸ್ನೇಹ ಸಂಬಂಧ, ವಾಣಿಜ್ಯ ಸಂಬಂಧ ಅಗತ್ಯವಾಗಿ ಬೆಳೆಯಬೇಕಾಗಿದೆ. ಭಾರತ ಅತಿ ದೊಡ್ಡ ದೇಶ. ಅದಕ್ಕೆ ವಿಶ್ವದ ಶಾಂತಿ ಪಾಲನೆಯ ಕೆಲಸದಲ್ಲಿ ಮಹತ್ವದ ಪಾತ್ರವಿದೆ. ಇದನ್ನು ನಿಭಾಯಿಸುವುದು ಅದರ ಕರ್ತವ್ಯವೂ ಹೌದು.

**ಹೊ** : ನಮ್ಮ ಗಡಿಯ ಅಂತರಿಕ್ಷವನ್ನು ಅಪ್ಪಣೆಯಿಲ್ಲದೆ, ಸೂಚನೆಯಿಲ್ಲದೆ, ಹೊಕ್ಕ ವಿಮಾನವನ್ನು ಒಂದು ಕಾವಲು ಪಡೆಯ ಯೋಧನಾಗಿ ಹೊಡೆದುಹಾಕಲು ನೀವು ಯಾರ ಆಜ್ಞೆಗಾಗಿಯಾದರೂ ಕಾಯುತ್ತೀರಾ?

**ಎನ್. ಎಸ್. ನ** : ಅಂಥ ಸಂದರ್ಭಗಳನ್ನು ಹೇಗೆ ನಿರ್ವಹಿಸಬೇಕೆಂಬ ನಿರ್ದೇಶನಗಳು ಸ್ಪಷ್ಟವಾಗಿವೆ. ಅಂಥ ಎಲ್ಲ ಅಕ್ರಮ ಪ್ರವೇಶದ ನೌಕೆಗಳನ್ನೂ ಎಲ್ಲ ಕಾಲದಲ್ಲೂ ಹೊಡೆದುಹಾಕದೇ ಇರಬಹುದು. ಆದರೆ ಪ್ರಾರಂಭದ ತನಿಖೆ ತುರ್ತಿನಲ್ಲಿ ನಡೆಯುವಂಥದು. ಅದು ಸಮರ್ಪಕವಾಗದೇ ಇದ್ದಾಗ, ನಮ್ಮದೇ ನೌಕೆಗಳು ಮೇಲೆ ಹಾರಿ, ಅತಿಕ್ರಮಿಸಿದ ನೌಕೆಯನ್ನು ಬಲವಂತವಾಗಿ ಕೆಳಗಿಳಿಸಬಹುದು. ಚೆನ್ನೈನಲ್ಲಿ ಇತ್ತೀಚೆಗೆ ಜರುಗಿದ ಅಮೆರಿಕದ ಹೆಲಿಕಾಪ್ಟರ್‌ನ ಅತಿಕ್ರಮ ಪ್ರವೇಶದ ಸಂದರ್ಭದಲ್ಲಿ ಸಂಬಂಧಪಟ್ಟವರು ನಿಗದಿಗೊಳಿಸಲ್ಪಟ್ಟ ಸಂಹಿತೆಯ ನಿರ್ದೇಶನಗಳನ್ನು ಪಾಲಿಸಿದಂತೆ ತೋರುವುದಿಲ್ಲ. ಹಾಗಿಲ್ಲದಿದ್ದರೆ, ಅತಿಕ್ರಮಿಸಿದವರಿಗೆ ರಾಜಕೀಯವಾಗಿ ರಕ್ಷಣೆ ಕೊಡುವ ದೌರ್ಬಲ್ಯವೂ ಕಾರಣವಾಗಿರಬಹುದು.

**ಹೊ** : ಕೊನೆಯದಾಗಿ, ಪಾಕಿಸ್ತಾನವನ್ನು ಆತ್ಮೀಯ ಸ್ನೇಹಿತನೆಂದು ಅದರೊಡನೆ ಶಾಶ್ವತ ಮಿಲಿಟರಿ ಸಂಯೋಜನೆಯನ್ನು ಮಾಡಿಕೊಳ್ಳುತ್ತಲೇ, ನಮ್ಮೊಡನೆಯೂ ರಕ್ಷಣಾ ಕ್ಷೇತ್ರದಲ್ಲಿನ ಸಹಕಾರದ ಬಗ್ಗೆ ಚರ್ಚಿಸುತ್ತಿದೆ ಅಮೆರಿಕ. ಇದು ಸಾಧಾರಣ ಜನತೆಗೆ ಅರ್ಥವಾಗದ ವಿಷಯ. ರಷ್ಯದೊಡನೆಯ ಸ್ನೇಹ ಸಂಬಂಧಗಳಿಗೆ ಇದು ಹೇಗೆ ಹೊಂದಿಕೆಯಾದೀತು? ಒಬ್ಬ ಸೇನಾನಿಯಾಗಿ ನಿಮ್ಮ ಪ್ರತಿಕ್ರಿಯೆ ಏನು?

**ಎನ್. ಎಸ್. ನ** : ಪ್ರತಿಯೊಂದು ರಾಷ್ಟ್ರವೂ ಇಂಥ ಕ್ರಮಗಳನ್ನು ತನ್ನ ಸ್ವಂತ ಹಿತಾಸಕ್ತಿಯನ್ನು ಸಾಧಿಸಲೆಂದೇ ಕೈಗೊಳ್ಳುತ್ತದೆ. ಅಮೆರಿಕ ಒಂದು ಪ್ರಬಲ ರಾಷ್ಟ್ರ. ಇದರೊಡನೆ ನಮ್ಮ ಸ್ವಂತ ಹಿತಾಸಕ್ತಿ ಸಾಧನೆಯಾಗುವಂತೆ ಸಂಬಂಧ ಬೆಳೆಸುವುದು ನಮ್ಮ ರಾಜಕೀಯ ದಾಯಭಾರದ ಆತ್ಮವಿಶ್ವಾಸ ಮತ್ತು ಜಾಣ್ಮೆಯ ವಿಷಯ. ಅದು ಹಾಗಿದೆ ಎಂದು ತಿಳಿದಿದ್ದೇನೆ. ಸಂಬಂಧಪಟ್ಟ ರಾಷ್ಟ್ರ ಅಮೆರಿಕ ಎಂಬ ಕಾರಣಕ್ಕಾಗಿ ಈ ಕ್ರಮವನ್ನು ಟೀಕಿಸಬೇಕಾಗಿಲ್ಲ ಎಂದು ನನ್ನ ಅನಿಸಿಕೆ. ಇಂಥ ವಿಷಯಗಳಲ್ಲಿ, ನಮ್ಮ ಚಿಂತನೆಯಲ್ಲಿ ಯಾವ ವಿಕಲ್ಪವೂ ಇಲ್ಲದ, ನಮ್ಮ ಹಿತಾಸಕ್ತಿಯನ್ನು ಮಾತ್ರ ಪರಿಗಣಿಸುವ ವಾಸ್ತವತೆ ಇಂದು ಅಗತ್ಯವಾಗಿದೆ. ■

ಲೇಖನ ಸಿದ್ಧಪಡಿಸಿದವರು : ಕೆ. ಎಸ್. ಪಾರ್ಥಸಾರಥಿ

# ಬಯಲ ಅನಾಹತ ಗಾನ

**ಕಂಪನ ಒಂದು**

ಇಳಿ ಹೊತ್ತು
ಬಯಲು ಬಾಗುತಲಿತ್ತು...

ಬೇವು-ಬೆಳವಲ, ಹುಣಸಿ
ಮರದ ತಳದಲಿ ಅಳಿಲು
ಬಯಲ ಬೆನ್ನಿಗೆ ಬಣ್ಣ ಬರೆವಂತೆ
ಬಾಲವನ್ನಲ್ಲಾಡಿಸುತ ಮೆಲ್ಲುತಲಿತ್ತು
ರಗುತದ್ಹುಣಸೆಯ ಬೀಜ....

ಬಯಲ ಬಿತ್ತಿದ ಚತುರನಲಿ
ಬಕುತಿ ಇತ್ತದಕೆ
ಬೀಜದೊಳಗಿನ ಜೀವಕಳೆಗೆ
ಬೇಡಿತ್ತು ಮುಕುತಿ
ಪಾದ ಊರಿ ಪಾಪ ಕಳೆವ
ಆ ಅಳಿಲಿಗದೇನು ಆಪತ್ತು ಬಂತೋ...

ಯುದ್ಧ ವಿಮಾನದ ಹಾಗೆ
ಮಾಯದ ಹದ್ದೆರಗಿ
ಪಾದ ಪಂಜರದಲಿ
ಆಡುವ ಅಳಿಲನು ಹಿಡಿದು
ಮುಗಿಲ ಹೆಗಲೇರಿತು

ನೆತ್ತರದ ಹನಿವೂಡಿತು
ಬಯಲ ಬಿಲ್ವಪತ್ರಿ ಕುಡಿಗೆ...

**ಕಂಪನ ಎರಡು**

ಆ ಅಳಿಲ ಮುಗಿಲ ಹಾದಿಯ ಕಂಡು
ಬಾಗಿಲಿಗೆ ಬರೆದ ಗಿಣಿಯಂತೆ
ಮಾತನಾಡುವ ಹುಡುಗ
ಮರದ ಮರೆಯಲಿ ಧ್ಯಾಸವಿಟ್ಟು
ಮರಳ ಧಗೆಯಾಗಿದ್ದ...

ಹವ್ವನೆ ಹೌಹಾರಿ...!
ಎದೆಗಣ್ಣ ಎವೆಯಲಿ
ಅವನ ಗುಂಗಿನೆಳೆ ಹಿಡಿದು ಕೇಳಿದೆ

'ಯಾಕೆ ಬಾಳಾ.....
ಕಬ್ಬಕ್ಕಿ ಕುಕ್ಕಿ ಮೇಯ್ದ
ಮೆದೆ ಹಾಗಿರುವಿ ?'

'ಹೇಳು.... ಬೇಕಾದುದೇನು ನಿನಗೆ
ಕುಟ್ಟಿ ಹದ ಮಾಡಿದ ಹುಣಸಿ ಚಿಗಳಿ ?
ನಟ್ಟಡವಿಯಲಿ ಬೆಳೆದ ನಕ್ರಿ ಹಣ್ಣಿನ ಹೋಳು ?'

ಮಾತನು ಮಿಜಿ ಮಿಜಿ ಮಿದ್ದಿ
ನೆದರನು ನೀಲದಲಿ ಅದ್ದಿ
'ನನಗೆ ಕತೆ ಬೇಕು...' ಅಂದ

'ಅದಕ್ಯಾಕೆ ಚಿಂತೆ
ಹೋರಿ ಹೈದರ
ಎಮಕಿನ ಇಣಿ ಮುರಿದು
ಮನೆ ದೀಪಕೆ
ಮ್ಯಾಣ ಮಾಡಿದ ಮಾಟದ ಕತೆ ಹೇಳಲೆ ?'

ಕತೆ ಹೇಳುವ ಸುತಿ ತಿಳಿದು
ನೆಲದಡಿಯ ಜಲದಂತೆ ಮಾತಾಡಿದ
'ರಗುತ ಹುಣಸೀ ಮರದಡಿ
ಇನ್ನೂ ಅಳಿಲಾಗಿ ಅಲೆದಾಡುವ
ಆ ಜಕಣಿ ಬಾಲೆಯರ ಕತೆ ಹೇಳು.....'

ಈ ಹುಚ್ಚು ಹುಡುಗನಿಗೆ
ಆ ಶಿವನ ಶಾಪದ ಕತೆ
ದೀಪದ ಹುಳವಾಗಿ ಕಾಡಿದುದೇ ಅಚ್ಚರಿ

'ಹಿಂದೊಮ್ಮೆ ಹೇಳಿದ ಕತೆಯ
ಮುಂದುವರೆಸುವುದು ಬೇಡ ಬಾಳಾ
ಹೊಸ ಕತೆಗೆ ಹೊಳವು ನೀಡಲೆ ?'

ಹುಡುಗ ಚಂಡಿ ಹಿಡಿದ....



**ಕಂಪನ ಮೂರು**

ಕರಿಗಣ್ಣು ಆಗಿತ್ತು ಹೊತ್ತು...

ಬಟ್ಟ ಬಯಲಿಂದ
ಅವನ ಧ್ಯಾಸದ ದವರಿನ ತುದಿ ಹಿಡಿದು
ಕರೆತಂದೆ ಮನೆ ಜಗಲಿ ಒಳಗೆ

ಕರಿ ಕಂಬಳಿ ಗದ್ದುಗೆ ಹಾಕಿ
ಮರಿ ನೆಣದ ದೀವಿಗೆ ಹಚ್ಚಿ
ಕತ್ತೆಯ ಗವಿ... ಗಣೆ ಎತ್ತಿ
ತುತ್ತಿನ ತಿದಿ ಬೆಂಕಿ ಉಸಿರ ನೀಡತೊಡಗಿದೆ

ಜಡೆಗಟ್ಟಿದ ನಾದ ಹನಿವೊಡೆದು
ಗಣೆ ಗವಿಯಿಂದ
ಆ ಹುಡುಗನ ಮಿದು ನೆತ್ತಿಯೊಳಗೆ ಇಂಗಿ
ಹುತ್ತ ಹೊಂದಾವರೆಯಲಿ ಉದಕಗೊಂಡು
ಸಂಚಾರಗೊಂಡಿತು ಜಂಗಮನ ಹಾಗೆ
ನಾಡ ಸೀಮೆಯಿಂದ ಆ ಕಾಡ ಸೀಮೆಗೆ...

ಎದೆ ತೆರೆದು ಕತೆ ಕೇಳಲು
ಕುಳಿತ ಹುಡುಗನಿಗೆ
ಒಮ್ಮಲೆ ದಿಕ್ಕು ದಿಗಿಲಾಗಿ
ಉಕ್ಕಿದವು ರಾಗ...
ನಾದ ನಡೆವೊಳಗೆ...

ಆ ನಾದ ಚೋದ್ಯವ ಹಿಡಿದು
ಚಿಮುಕಿಸಿದವು ಚಕೋರ ಪಕ್ಷಿಗಳು
ಹುಣಸಿ ಮರದಡಿ ಬೀಜ ಹೆಕ್ಕುತಲಿದ್ದ
ಜೋಡ ಅಳಿಲಿನ ಮೈಗೆ...

ಆ ಅಳಿಲಿನ ಕಾಯ ಕಳಚಿಟ್ಟು ಆಚೆ
ರೂಪುಗೊಂಡವು 'ಹಂಸೆ'....
ಬಯಲ ಭಾವದ 'ಬೀಜ' ಆಗಿ
ಜೋಡಿ ಜಕಣೆಯರ
ಪರಕಾಯವ ಹೊಕ್ಕವು.

ನೋಡ ನೋಡುತ
ಆ ಮಡಿಲ ಬೀಜಾತ್ಮವು ಮೊಳೆತು
ಬಸಿರು ಬಹುರೂಪಾಗಿ
ಮಳೆಬಿಲ್ಲ ಕುಡಿವ
ಬಯಕೆ ಬನದುಗುರ ಚಿಗುರಿಗೆ
ಸುತ್ತೆಲ್ಲ ಸುಳಿದಾಡಿ
ಚಕ್ಕಂದವಾಡಿದವು
ಜಕ್ಕವಕ್ಕಿ-ಜೊನ್ನವಕ್ಕಿಯ ಹಿಂಡು
ಕಣ್ಬಿಟ್ಟವು ಎಳೆನೀಲ
ತೂಗಿ ತುಯ್ದವು ಕಾಡು
ಗಾಳಿ ಸೇರಿದ ಬಿಳಿ ಹಳದಿ ಎಳೆಗಂದಿ ಹಾಗೆ

ಮರದ ಮರೆಯಲಿ
ಅಡಕಗೊಂಡಿದ್ದ ಚೆನ್ನವಿಲು
ಬನದ ದಿಗಿರಿಗೆ
ಬೆಕ್ಕಸ ಬೆರಗಾಗಿ ನಿಂದು
ಲಯ ನೀಡಿದವು ಎಳೆವಾರಕೆ

ಆ ನವಿಲು
ಚಂದ್ರಿಕದ ನೂಲಲಿ
ಚೊಗಚಿ ಹೂಗೊನೆ ನೆಯ್ದು
ದಟ್ಟಿ ಉಡುಗೆಯ ಉಡಿಸಿ
ಬೆಟ್ಟವೇರಿದವು ಕುಣದು

ನಡಬ್ಯಾನಿ... ತೊಡೆಬ್ಯಾನಿ...
ಆಹಾ.... ನಿಬ್ಬೆರಗು ತುಂಬಿದ ನಿಂಬೆ ಬಾಲೆಯರಿಗೆ

ಯೋಗ ನಿದ್ರೆಯ ವಿಧಿ
ಉರಿ ನಾಲಿಗೆ ಚಾಚಿದೆ
ದಾಟಬೇಕೀಗವರು ಕೆಂಡ ಕೊಂಡ...

ಗಣೆ ನಾದ ಜಲ ಸ್ಪರ್ಶಕೆ
ಹುಣಸಿ ನೆತ್ತರ ಪಿಂಡ
ಬಿದ್ದವು ಬೆನ್ನ ಹುರಿ ಹರಿದು
ಬನದ ಎಡ ಬಲ ಬದಿಗೆ

ನೆಣ ದೀಪ ಬಾಗಿಣವು
ಇರುಳ ಕುಡಿಯುವ ಕೂಸು
ನಳನಳಿಸು ಗಿಡ-ಮರಕೆ ಎಳೆ ನಗೆಯ ನೀಡಿದವು

ಶಿವನ ಪಾದವ ಮರೆತು
ಗಂಧದ ಹುಡಿ ಆಡಿ
ಗಣೆ ನಾದ ಕೂಡಿ
ಹಿಡಿ ಬೆಂಕಿ ಹಡೆದ
ಆ ಜಕಣೆಯರ ಆತ್ಮದಲಿ
ಈಗ ಬುಚುಗುಡುವ ಹುಳ....



ನಿಟ್ಟುಸಿರ ಗಾಳಿಯ ಸುಟ್ಟ ವಾಸನೆ ಹೀರಿ
ಶಿವಽ.... ಶಿವಽಽ.....
ಮಾಯವಾದರು ಕಾಗೆಬಂಜೆಯರು
ಆತಂಕದಾಕಾಶದ ಆವರಣದೊಳಗೆ....

**ಕಂಪನ ನಾಲ್ಕು**

ಕತೆ ಕೇಳುತಲಿದ್ದ
ಕುದಿಗಣ್ಣ ಹುಡುಗ
ನಾದದೊಳಗದೊಂದು ರಾಗವಾಗಿ
ಅನ್ನಮಯ ಕಾಯ ಬಿಟ್ಟು
ಆನಂದಮಯ ಕಾಯವ ತೊಟ್ಟು
ಬಯಲ ಆತ್ಮವೂ ಆಗಿ ಜಿನುಗುತಿದ್ದ....

**ಶಂಕರ ಕಟಗಿ**
ಬುದ್ಧ ನಿವಾಸ, ಎಲ್ ಐ ಜಿ ೭೧
ಹುಡ್ಕೋ ಕಾಲನಿ
ಜಲನಗರ, ವಿಜಾಪುರ-೫೮೬ ೧೦೧

# ಪ್ರೊ|| ಆರ್. ಎಲ್. ನರಸಿಂಹಯ್ಯ - ಕೆಲವು ನೆನಪುಗಳು

**ಕ**ಳೆದ ಕೆಲವು ದಶಕಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳು ಜನಜೀವನದ ಎಲ್ಲಾ ಕ್ಷೇತ್ರಗಳನ್ನೂ ಹಿಂದೆ ಕಂಡು ಕೇಳರಿಯದಿದ್ದ ಭಾರೀ ಪ್ರಮಾಣದಲ್ಲಿ ಪ್ರವೇಶ ಮಾಡಿವೆ. ಭಾರತ ಸರ್ಕಾರದಲ್ಲಿ ಈಗ ವಿಜ್ಞಾನ ಮತ್ತು ತಂತ್ರಜ್ಞಾನ, ಪರಮಾಣು ಶಕ್ತಿ, ವ್ಯೋಮ, ಸಾಗರಾಭಿವೃದ್ಧಿ, ಇಲೆಕ್ಟ್ರಾನಿಕ್ಸ್, ಪರಿಸರ - ಇವೇ ಮೊದಲಾದ, ನೇರವಾಗಿ ವಿಜ್ಞಾನಕ್ಕೆ ಸಂಬಂಧಿಸಿದ, ಹತ್ತಿಪ್ಪತ್ತು ಸಚಿವಾಲಯಗಳಿವೆ. ಮುಂಜಾನೆ ಯಾವ ದಿನಪತ್ರಿಕೆಯನ್ನು ತೆರೆದು ನೋಡಿದರೂ ಓಜೋನ್ ರಂಧ್ರ, ಜಾಗತಿಕ ತಪನ (global warming) ಅಧಿವಾಹಕಗಳು (superconductors), ಜೆನೆಟಿಕ್ ಎಂಜಿನಿಯರಿಂಗ್, ಡಿ.ಎನ್.ಎ. ಬೆರಳಚ್ಚು, ಮುಂತಾದ ಪದಗಳನ್ನು ಹಿಂದು ಮುಂದು ನೋಡದೆ ಬಳಸಿರುವ ವಾರ್ತೆಗಳೂ, ಲೇಖನಗಳೂ ಕಂಡುಬರುತ್ತವೆ. ಪ್ರಜೆಗಳು ಈ ವಾರ್ತೆಗಳ ಅರ್ಥವನ್ನು ಗ್ರಹಿಸಿ, ವಿವಿಧ ಸಚಿವಾಲಯಗಳ ಕಾರ್ಯನೀತಿಯ ಬಗ್ಗೆ ಚರ್ಚಿಸಿ, ಜನಾಭಿಪ್ರಾಯವನ್ನು ರೂಪಿಸದೆ ಹೋದರೆ, ಪ್ರಜಾಪ್ರಭುತ್ವ ಎಂಬುದು ಕೇವಲ ಅಣಕವಾಗುತ್ತದೆ. ಪ್ರಜೆಗಳು ಒಬ್ಬೊಬ್ಬರೂ ವಿಜ್ಞಾನವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಬೇಕೆಂದೇನಲ್ಲ. ಮೇಲೆ ಹೇಳಿದ ಅವರ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಲು ಎಷ್ಟು ಬೇಕೋ ಅಷ್ಟು ವೈಜ್ಞಾನಿಕ ತಿಳಿವಳಿಕೆ ಅವರಿಗಿರಬೇಕು. ಅದೇ ''ವೈಜ್ಞಾನಿಕ ಸಾಕ್ಷರತೆ''. ನಮ್ಮ ಜನರಲ್ಲಿ ವೈಜ್ಞಾನಿಕ ಸಾಕ್ಷರತೆಯನ್ನು ಹರಡಬಲ್ಲ ಒಂದು ಉತ್ತಮ ಸಾಧನ, **ಜನಪ್ರಿಯ ವಿಜ್ಞಾನ** (popular science) ಎಂಬ ಸಾಹಿತ್ಯ ಪ್ರಕಾರ. ಇಲ್ಲಿ 'ಜನಪ್ರಿಯ' ಎಂಬುದರ ಅರ್ಥ 'ಜನರಿಗೆ ಪ್ರಿಯವಾದ' ಎಂಬುದಲ್ಲ ; 'ಜನರಿಗೆ ಎಟುಕುವ', 'ಜನರಿಗೆ ಅರ್ಥವಾಗುವ' ಎಂಬುದು.

ಅರ್ಧ ಶತಮಾನಕ್ಕೂ ಹಿಂದೆಯೇ ವೈಜ್ಞಾನಿಕ ಸಾಕ್ಷರತೆಯ ಅಗತ್ಯವನ್ನು ಮನಗಂಡು, ಆಧುನಿಕ ಕನ್ನಡ ಸಾಹಿತ್ಯದಲ್ಲಿ 'ಜನಪ್ರಿಯ ವಿಜ್ಞಾನ'ವೂ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆಯಲು ಶ್ರಮಿಸಿದ, ಆ ಪ್ರಕಾರದ ಆದ್ಯ ಪ್ರವರ್ತಕರಲ್ಲಿ ಪ್ರೊ|| ಆರ್. ಎಲ್. ನರಸಿಂಹಯ್ಯನವರ ಹೆಸರು ಬಹು ದೊಡ್ಡದು. ಈ ವರ್ಷ (೨೦೦೨) ಅವರ ಜನ್ಮ ಶತಾಬ್ಧಿ.

ರೊದ್ದಂ ಲಕ್ಷ್ಮೀನರಸಿಂಹಯ್ಯನವರು ಹುಟ್ಟಿದ್ದು ೧೯೦೨ರ ಡಿಸೆಂಬರ್ ೨೮ರಂದು ಚಿತ್ರದುರ್ಗ ಜಿಲ್ಲೆಯ ಹಿರಿಯೂರಿನಲ್ಲಿ. ಅವರ ತಂದೆ ರಾಯಪ್ಪನವರು ಅಲ್ಲಿ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಿದ್ದರು. ನರಸಿಂಹಯ್ಯನವರು ತುಮಕೂರಿನ ಸರ್ಕಾರಿ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡಿ ೧೯೧೯ರಲ್ಲಿ ಆಗಿನ ಮೆಟ್ರಿಕ್ಯುಲೇಷನ್ ಪರೀಕ್ಷೆ ಮುಗಿಸಿದರು. ಮರುವರ್ಷ ಬೆಂಗಳೂರಿನ ಕೊಲೀಜಿಯೇಟ್ ಹೈಸ್ಕೂಲ್‌ನಲ್ಲಿ ಯೂನಿವರ್ಸಿಟಿ ಎಂಟ್ರೆನ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗವನ್ನು ಮುಂದುವರಿಸಿ ೧೯೨೩ರಲ್ಲಿ ಭೌತವಿಜ್ಞಾನದ ಬಿ.ಎಸ್‌ಸಿ. ಡಿಗ್ರಿ ಪಡೆದರು. ಬೆಂಗಳೂರಿನಲ್ಲಿ ಆ ನಾಲ್ಕು ವರ್ಷ ಅವರ ಸಹಪಾಠಿಯಾಗಿದ್ದು ಅನಂತರ ಅವರ ನಿಕಟ ಸ್ನೇಹಿತರಾಗಿ ಮುಂದುವರಿದ ನಿಟ್ಟೂರು ಶ್ರೀನಿವಾಸರಾಯರು ಗೆಳೆತನದ ಸವಿ ನೆನಪುಗಳನ್ನೂ ನರಸಿಂಹಯ್ಯನವರ ಉದಾತ್ತ ಗುಣಗಳನ್ನೂ ಒಂದೆಡೆ ಸ್ಮರಿಸಿದ್ದಾರೆ.

ಬಿ.ಎಸ್‌ಸಿ. ಡಿಗ್ರಿ ಮುಗಿಸಿದ ನಂತರ ಕೆಲಕಾಲ ಪ್ರೌಢಶಾಲೆಗಳಲ್ಲಿ ಉಪಾಧ್ಯಾಯ ರಾಗಿದ್ದು ೧೯೨೭ರಲ್ಲಿ ಎಂ.ಎಸ್‌ಸಿ. ಡಿಗ್ರಿಗಾಗಿ ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗವನ್ನು ಮುಂದುವರಿಸಿದರು. ಅಲ್ಲಿ ಜಗದ್ವಿಖ್ಯಾತ ವಿಜ್ಞಾನಿ ಮೇಘನಾದ್ ಸಹಾ ಅವರ ವಿದ್ಯಾರ್ಥಿಯಾಗುವ ಸುಯೋಗ ಅವರಿಗೆ ಲಭಿಸಿತು. ಅಲ್ಲಿಂದ ಹಿಂದಿರುಗಿದ ಮೇಲೆ ಕೆಲವು ತಿಂಗಳ ಕಾಲ ತಿಪಟೂರು, ತುಮಕೂರುಗಳಲ್ಲಿ ಪ್ರೌಢಶಾಲಾ ಉಪಾಧ್ಯಾಯ ರಾಗಿದ್ದು ೧೯೨೯ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಭೌತವಿಜ್ಞಾನದ ಅಧ್ಯಾಪಕರಾದರು. ೧೯೫೮ರಲ್ಲಿ ನಿವೃತ್ತರಾಗುವವರೆಗೂ ಅಲ್ಲಿಯೇ ಉಳಿದರು.

## ಪ್ರೊ|| ಜೆ. ಆರ್. ಲಕ್ಷ್ಮಣರಾವ್

ನಾನು ಡಿಗ್ರಿ ತರಗತಿಗಳಲ್ಲಿ ವ್ಯಾಸಂಗ ಮಾಡಿದುದು ಸೆಂಟ್ರಲ್ ಕಾಲೇಜಿನಲ್ಲಿಯೇ ಆದರೂ ಅವರ ವಿದ್ಯಾರ್ಥಿಯಾಗುವ ಸುಯೋಗ ನನಗೆ ದೊರೆಯಲಿಲ್ಲ. ನಾನು ಅವರಿಂದ ಆಕರ್ಷಿತನಾಗಿ ಹತ್ತಿರದವನಾದುದು ಅವರ ಕನ್ನಡ ಬರೆವಣಿಗೆಯಿಂದ. ವಾಸ್ತವವಾಗಿ ಜನಪ್ರಿಯ ವಿಜ್ಞಾನ ಸಾಹಿತ್ಯದಲ್ಲಿ ನನಗೆ ಅಭಿರುಚಿ ಹುಟ್ಟಿಸಿದವರು ಇಂಟರ್ ಮೀಡಿಯೆಟ್ ತರಗತಿಯಲ್ಲಿ ನನಗೆ ಕನ್ನಡ ಪಾಠ ಹೇಳುತ್ತಿದ್ದ ಕೆ.ವಿ.ಪುಟ್ಟಪ್ಪನವರು. ರಾಘವಾಂಕನ ಹರಿಶ್ಚಂದ್ರ ಕಾವ್ಯದ ಪಾಠ ಹೇಳುತ್ತಿದ್ದ ಅವರು, ಒಮ್ಮೆ ತರಗತಿಯಲ್ಲಿ ''ನೀವೆಲ್ಲ ವಿಜ್ಞಾನದ ವಿದ್ಯಾರ್ಥಿಗಳು, ನಿಮ್ಮ ಓದು ಪಠ್ಯಕ್ರಮಕ್ಕೆ ಸೀಮಿತವಾಗಬಾರದು. ವಿಜ್ಞಾನದ ಇತರ ಶಾಖೆಗಳ ಸ್ಥೂಲ ಪರಿಚಯವನ್ನೂ ನೀವು ಮಾಡಿಕೊಳ್ಳಬೇಕು. ಅದಕ್ಕಾಗಿ ಸಾಮಾನ್ಯ ಓದುಗರಿಗಾಗಿಯೇ ಬರೆದ ವಿಜ್ಞಾನ ಪುಸ್ತಕಗಳನ್ನು ಓದಬೇಕು. ಮುಖ್ಯವಾಗಿ ವಿಜ್ಞಾನ ವಿಧಾನದ ಪರಿಚಯ ಮಾಡಿಕೊಂಡು ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕು'' ಎಂದು ಹಿತವಚನ ಹೇಳಿ ಅವರು ಆಗ ಓದುತ್ತಿದ್ದ ಜೇಮ್ಸ್ ಜೀನ್ಸ್‌ರವರ *Mysterious Universe* ಎಂಬ ಪೆಲಿಕನ್ ಪುಸ್ತಕವನ್ನು ತೋರಿಸಿದರು. ಅವರ ಮಾತುಗಳು ನನ್ನ ಮೇಲೆ ಅದೇಕೋ ಗಾಢ ಪ್ರಭಾವ ಬೀರಿದವು. ಅದೇ ಪೆಲಿಕನ್ ಗ್ರಂಥಮಾಲೆಯಲ್ಲಿ ಆಗ ಲಭ್ಯವಿದ್ದ ಜೆ.ಬಿ.ಎಸ್. ಹಾಲ್ಡೇನ್, ಜೂಲಿಯನ್ ಹಕ್ಸ್‌ಲೀ ಮುಂತಾದವರ ನಾಲ್ಕಾರು ಪುಸ್ತಕಗಳನ್ನು ಕೊಂಡು ಓದಿದೆ. ಇಂಥ ಪುಸ್ತಕಗಳು ಕನ್ನಡದಲ್ಲಿದ್ದರೆ ಇಂಗ್ಲಿಷ್ ಬಾರದ, ಆದರೆ ಕುತೂಹಲ ಮತ್ತು ಚುರುಕು ಬುದ್ಧಿಗೆ ಬಡತನವಿಲ್ಲದ ನಮ್ಮ ಜನರನೇಕರಿಗೆ ಆ ಪುಸ್ತಕಗಳನ್ನು ಕೊಡಬಹುದಲ್ಲಾ ಎಂಬ ಯೋಚನೆ ಬಂದಿತು.

ನಾನು ಇಂಟರ್‌ಮೀಡಿಯೆಟ್ ಮುಗಿಸಿ ೧೯೪೭ರಲ್ಲಿ ಸೆಂಟ್ರಲ್ ಕಾಲೇಜ್ ಪ್ರವೇಶಿಸಿದಾಗ, ಆ ಕಾಲೇಜಿನ ಭೌತ ವಿಜ್ಞಾನ ವಿಭಾಗದಲ್ಲಿರುವ ಆರ್. ಎಲ್. ನರಸಿಂಹಯ್ಯ ಎಂಬುವರು ಹಿಂದೆ ತುಮಕೂರು ಪ್ರೌಢಶಾಲೆಯ *School Folk* ಎಂಬ ಪತ್ರಿಕೆಯಲ್ಲಿ ವಿಜ್ಞಾನ ಲೇಖನಗಳನ್ನು ಕನ್ನಡದಲ್ಲಿ ಬರೆದಿದ್ದರೆಂದೂ ಈಗಲೂ **ಪ್ರಬುದ್ಧ ಕರ್ನಾಟಕ** ತ್ರೈಮಾಸಿಕದಲ್ಲಿ ಅಂಥ ಲೇಖನಗಳನ್ನು ಬರೆಯುತ್ತಿರುವರೆಂದೂ ಕೇಳಿದೆ. ಅವರಿವರಲ್ಲಿ ವಿಚಾರಿಸಿ ನರಸಿಂಹಯ್ಯನವರನ್ನು ನೋಡಿದ್ದೂ ಆಯಿತು. ಪರಿಚಯ ಮಾಡಿಕೊಳ್ಳಲು ಆಸೆಯಿತ್ತಾದರೂ ಮುಖಹೇಡಿತನ ಅಡ್ಡಬಂದಿತು.

ನಾನು ಎಂ.ಎಸ್‌ಸಿ. ಮುಗಿಸಿ ಅದೇ ಕಾಲೇಜಿನಲ್ಲಿ ಅಧ್ಯಾಪಕನಾದ ಮೇಲೆ ಅವರ ಪರಿಚಯ ತಕ್ಕಮಟ್ಟಿಗೆ ಆಯಿತು. ನಾಲ್ಕೈದು ವರ್ಷಗಳ ತರುವಾಯ ಅವರ ಸಮೀಪವರ್ತಿ ಯಾಗುವ ಒಂದು ಅವಕಾಶ ದೊರೆಯಿತು. ೧೯೬೨ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯ ದವರು ಏರ್ಪಡಿಸಿದ್ದ ಒಂದು ಸ್ಪರ್ಧೆಗೆಂದು ನಾನು **ಪರಮಾಣು ಚರಿತ್ರೆ** ಎಂಬ ಪುಸ್ತಕವನ್ನು ಬರೆದು ಹಸ್ತಪ್ರತಿಯನ್ನು ಕಳುಹಿಸಿದೆ. ಅದು ಬಹುಮಾನಕ್ಕೆ ಆಯ್ಕೆಯಾದುದರಿಂದ ಉತ್ತೇಜನಗೊಂಡು ಪುಸ್ತಕವನ್ನು ಅಚ್ಚುಹಾಕಿಸಿದೆ. ವಿಮರ್ಶೆಗೆಂದು ಪುಸ್ತಕದ ಪ್ರತಿಗಳನ್ನು ವಿವಿಧ ಪತ್ರಿಕೆಗಳಿಗೆ ಒಯ್ದು ಕೊಟ್ಟೆ. ವಿಜ್ಞಾನದ ಪುಸ್ತಕಗಳನ್ನು ವಿಮರ್ಶೆ ಮಾಡಲು ಪುಸ್ತಕ ಗಳನ್ನು ಯಾರಿಗೆ ಕಳುಹಿಸಬೇಕೆಂಬುದೇ ಸಂಪಾದಕರುಗಳಿಗೆ ಒಂದು ಸಮಸ್ಯೆಯಾಗಿದ್ದ ಕಾಲ ಅದು. ಅವರು ಆ ಕೆಲಸವನ್ನು ನನಗೇ ವಹಿಸಿದರು. ವಿಮರ್ಶೆ ಮಾಡಬಲ್ಲವರನ್ನು ಹುಡುಕಿಕೊಂಡು ಹೋಗಿ ಒಂದೊಂದು ಪತ್ರಿಕೆಯ ಪರವಾಗಿ ಒಬ್ಬೊಬ್ಬರಿಗೆ ಪುಸ್ತಕದ ಪ್ರತಿಗಳನ್ನು ಕೊಟ್ಟೆ. **ತಾಯಿನಾಡು** ಪತ್ರಿಕೆಗೆ ವಿಮರ್ಶೆ ಬರೆದುಕೊಡಬೇಕೆಂದು ನರಸಿಂಹಯ್ಯನವರನ್ನು ಕೇಳಿಕೊಂಡೆ. ಎಂಟು ಹತ್ತು ದಿನಗಳಲ್ಲಿ ವಿಮರ್ಶೆ ಬರೆದು ಕೊಡುವುದಾಗಿ ಹೇಳಿದವರು ಒಂದು ವಾರದೊಳಗೇ ಬರೆದು, ತಾವೇ ಪತ್ರಿಕೆಯ ಕಾರ್ಯಾಲಯಕ್ಕೆ ಕೊಟ್ಟು ಬಂದರು. ಅದರಿಂದ ನನಗೆ ಆಶ್ಚರ್ಯವೇನೂ ಆಗಲಿಲ್ಲ. ಏಕೆಂದರೆ ಅವರ ಕಾಲನಿಷ್ಠೆಯ ಬಗ್ಗೆ ಸಾಕಷ್ಟು ಕೇಳಿದ್ದೆ. ನನಗೆ ಆನಂದ ಆಶ್ಚರ್ಯಗಳೆರಡೂ ಆದದ್ದು ಬೇರೊಂದು ಕಾರಣಕ್ಕೆ. ಮರುದಿನ ಬೆಳಿಗ್ಗೆ ಅವರು ಕಾಲೇಜಿಗೆ ಬಂದವರೇ ನೇರವಾಗಿ ನನ್ನಲ್ಲಿಗೆ ಬಂದು ನನ್ನ ಬರವಣಿಗೆಯ ಬಗ್ಗೆ ಪ್ರೋತ್ಸಾಹದಾಯಕವಾದ ಮಾತುಗಳನ್ನಾಡಿ, ''ನೀವು ಬಳಸಿರುವ ಪಾರಿಭಾಷಿಕ ಶಬ್ದಗಳನ್ನು ಕುರಿತು ಟೀಕೆ ಮಾಡಿದ್ದೇನೆ. ಆದರೆ ಅದರಿಂದ ನೀವು ಖಿನ್ನರಾಗಬೇಕಾದುದಿಲ್ಲ. ಏಕೆಂದರೆ, ಅದು ವಿವಾದಾಸ್ಪದವಾದ ವಿಷಯ. ಆ ವಿಷಯದಲ್ಲಿ ನಿಮ್ಮ ನಿಲುವೇ ಸರಿ ಇದ್ದು ನನ್ನದೇ ತಪ್ಪಿರಬಹುದು. ಆದರೆ ಒಂದು ಕೋರಿಕೆ: ನನ್ನ ಅಭಿಪ್ರಾಯಗಳನ್ನು ಮುಕ್ತ ಮನಸ್ಸಿನಿಂದ ಪರೀಕ್ಷಿಸಿ ನಿಮ್ಮ ತೀರ್ಮಾನಕ್ಕೆ ನೀವು ಬನ್ನಿ'' ಎಂದರು. ಅವರು ವಯಸ್ಸಿನಲ್ಲಿ ನನಗಿಂತ ಹದಿನೆಂಟಿಪ್ಪತ್ತು ವರ್ಷಗಳಷ್ಟು ಹಿರಿಯರು ಮಾತ್ರವಲ್ಲ, ವಿದ್ಯೆ ಮತ್ತು ಅನುಭವಗಳಲ್ಲೂ ನನಗಿಂತ ತುಂಬ ದೊಡ್ಡವರು. ಅಂಥವರು ತಾವೇ ನನ್ನನ್ನು ಹುಡುಕಿಕೊಂಡು ಬಂದು ದಲ್ಲದೆ, ಅಯತ್ನವಾಗಿ ಸಹಜವಾದ ವಿನಯವಂತಿಕೆಯಿಂದ ಮಾತನಾಡಿ ನಾನು ತಲೆ ಬಾಗುವಂತೆ ಮಾಡಿದರು. ಅಂದು ಅವರ ವಿಷಯದಲ್ಲಿ ಮೂಡಿದ ಗೌರವ ಅನಂತರ ಎಂದೂ ಯಾವ ಕಾರಣಕ್ಕೂ ಕಡಿಮೆಯಾಗದೆ, ಕ್ರಮೇಣ ವರ್ಧಿಸುತ್ತಲೇ ಹೋಯಿತು.



ಪಾರಿಭಾಷಿಕ ಶಬ್ದಗಳ ವಿಷಯದಲ್ಲಿ ಅವರ ನಿಲುವು ಏನೆಂಬುದನ್ನು ಅವರ **ನಕ್ಷತ್ರ ದರ್ಶನ** ಪುಸ್ತಕದ 'ಮೊದಲ ಮಾತು'ವಿನಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ : ''ನಮ್ಮಲ್ಲಿ ಬಳಕೆಗೆ ಬಂದಿರುವ..... ರೈಲು, ಟೆಲಿಫೋನ್ ಇತ್ಯಾದಿಗಳ ಸ್ಥಾನದಲ್ಲಿ ಸ್ವಭಾಷೆಯ ಹೊಸ ಶಬ್ದಗಳನ್ನು ಸೃಷ್ಟಿಸುವುದು ಉಚಿತವಲ್ಲ ಎಂಬುದು ಒಪ್ಪತಕ್ಕ ಮಾತೇ. ಹಾಗೆಯೇ ಈಗ ಸಾಂಕೇತಿಕವಾಗಿರುವ ಅಂತರರಾಷ್ಟ್ರೀಯ ಪರಿಭಾಷಾ ಶಬ್ದಗಳನ್ನು – ಉದಾ: ಎಲೆಕ್ಟ್ರಾನ್, ಕ್ಲೈಸ್ಟ್ರಾನ್, ಈನಿಯಾಕ್ ಇತ್ಯಾದಿಗಳನ್ನು ಭಾಷಾಂತರಿಸುವುದೂ ಅನುಚಿತವಾದೀತು. ಆದರೆ ಅರ್ಥಗರ್ಭಿತವಾದ ಇಂಗ್ಲಿಷ್ ಪರಿಭಾಷಿಕ ಶಬ್ದಗಳನ್ನು ನಾವು ಹಾಗೆಯೇ ಉಳಿಸಿಕೊಳ್ಳುವುದಕ್ಕಿಂತ ನಮ್ಮ ಭಾಷೆಗೆ ಹೊಂದುವಂತೆ ಪರಿವರ್ತಿಸುವುದು ಅವಶ್ಯವೆಂದು ತೋರುತ್ತದೆ. ಯಂತ್ರ, ಸಾಧನಗಳ ಹೆಸರುಗಳನ್ನು ಒಂದು ವೇಳೆ ಪರಭಾಷೆಯ ಹೆಸರುಗಳಿಂದಲೇ ಕರೆದರೂ ತತ್ವ, ನಿಯಮ, ಪರಿಣಾಮ ಇತ್ಯಾದಿಗಳಿಗೆ ಸಂಬಂಧಿಸಿದ ಪದಗಳನ್ನು ಸ್ವಭಾಷೆಗೆ ತಿರುಗಿಸಿಕೊಳ್ಳುವುದು ನಮ್ಮ ಜನಗಳ ವಿದ್ಯಾಭಿವೃದ್ಧಿ, ಭಾಷಾಸಂಪತ್ತಿ ಮತ್ತು ಸಂಸ್ಕೃತಿಗಳ ದೃಷ್ಟಿಯಿಂದ ಅನಿವಾರ್ಯವೆಂದು ತೋರುತ್ತದೆ.'' ನಾನು ನನ್ನ ಪುಸ್ತಕದಲ್ಲಿ ಎಲೆಕ್ಟ್ರಾನ್, ಪ್ರೋಟಾನ್, ನ್ಯೂಟ್ರಾನ್ ಇತ್ಯಾದಿಗಳಿಗೂ ಸಮಾನ ಶಬ್ದಗಳನ್ನು ಸೃಷ್ಟಿಸಿ ಬಳಸಿದ್ದುದು ಅವರ ಟೀಕೆಗೆ ಗುರಿಯಾಗಿತ್ತು. ಈಗ ನಾನು ಮಾತ್ರವಲ್ಲ, ಕನ್ನಡ ವಿಜ್ಞಾನ ಲೇಖಕರೆಲ್ಲರೂ ನರಸಿಂಹಯ್ಯನವರು ನೀಡಿರುವ ಸೂತ್ರವನ್ನೇ ಅನುಸರಿಸುತ್ತಿರುವರೆಂಬುದನ್ನೂ ಅವರಲ್ಲಿ ಬಹುಮಂದಿಗೆ ಪಾರಿಭಾಷಿಕ ಪದಗಳ ಆಕರವಾಗಿರುವ ಕರಾವಿಪ **ಇಂಗ್ಲಿಷ್-ಕನ್ನಡ ವಿಜ್ಞಾನ ಶಬ್ದಕೋಶ**ದ ಮಾರ್ಗದರ್ಶೀ ಸೂತ್ರಗಳು ಹೆಚ್ಚು ಕಡಿಮೆ ನರಸಿಂಹಯ್ಯನವರ ಸೂತ್ರಗಳೇ ಎಂಬುದನ್ನೂ ಒತ್ತಿ ಹೇಳಬೇಕು.

ಒಮ್ಮೆ ವಿಶ್ವವಿದ್ಯಾನಿಲಯದ ಯಾವುದೋ ಕೆಲಸಕ್ಕಾಗಿ ಮೈಸೂರಿಗೆ ಬಂದಿದ್ದ ನಾನು ಬೆಂಗಳೂರಿಗೆ ಹಿಂತಿರುಗುವಾಗ, ಅದೇ ರೀತಿ ಮೈಸೂರಿಗೆ ಬಂದಿದ್ದು ಹಿಂತಿರುಗುತ್ತಿದ್ದ ನರಸಿಂಹಯ್ಯನವರೊಂದಿಗೆ ರೈಲಿನಲ್ಲಿ ಪ್ರಯಾಣ ಮಾಡಿದೆ. ದಾರಿಯಲ್ಲಿ ಹರಟೆ. ಬೌದ್ಧಿಕವಾಗಿ ಲಾಭದಾಯಕವಲ್ಲದ ಕಾಡುಹರಟೆ ನರಸಿಂಹಯ್ಯನವರೊಡನೆ ಸಾಧ್ಯವೇ ಇರಲಿಲ್ಲ. ಪುಷ್ಟಿಕರವಾದ ಆಹಾರಕ್ಕೆ ರುಚಿಕೊಡಲು ಉಪ್ಪಿನಕಾಯಿ ಸೇರಿಸುವಂತೆ ಗಂಭೀರ ವಿಷಯಗಳ ಭಾರವನ್ನು ತಗ್ಗಿಸಲು ಅವರು ಹಾಸ್ಯವನ್ನು ಸೇರಿಸುತ್ತಿದ್ದರು, ಅಷ್ಟೆ.

ಮಾತು ಹೇಗೋ ಪ್ರಾರಂಭವಾಗಿ ವಸ್ತು ಪ್ರಪಂಚದ ಮೂಲಕಣಗಳ ವಿಷಯಕ್ಕೆ ಬಂದಿತು. ಪರಮಾಣುವಿನ ಘಟಕಗಳೆಂದು ಗುರುತಿಸಲಾಗಿದ್ದ ಪ್ರೋಟಾನ್, ನ್ಯೂಟ್ರಾನ್, ಇಲೆಕ್ಟ್ರಾನ್‌ಗಳಲ್ಲದೆ ಇಲೆಕ್ಟ್ರಾನ್‌ಗಿಂತ ಹೆಚ್ಚು, ಪ್ರೋಟಾನ್ ನ್ಯೂಟ್ರಾನ್‌ಗಳಿಗಿಂತ ಕಡಿಮೆ ತೂಕ ಉಳ್ಳ ಬಗೆಬಗೆಯ ಮೀಸಾನ್‌ಗಳು (ಪೈ ಮೀಸಾನ್, ಮ್ಯು ಮೀಸಾನ್ ಇತ್ಯಾದಿ) ಪತ್ತೆಯಾಗುತ್ತಿದ್ದ ಕಾಲ ಅದು. ಆ ವಿಷಯವಾಗಿ ಮಾತನಾಡುತ್ತ ನರಸಿಂಹಯ್ಯನವರು, ''ನೋಡಿ, ಈಗ ಮೀಸಾನ್‌ಗಳೆಂಬ ಈ ಮಧ್ಯವರ್ತಿ ತೂಕದ ಕಣಗಳು ಪತ್ತೆಯಾಗುತ್ತಿವೆಯಷ್ಟೆ. ಪ್ರೋಟಾನು, ನ್ಯೂಟ್ರಾನುಗಳಿಗಿಂತ ಹೆಚ್ಚು ತೂಕವುಳ್ಳ ಒಂದು ಮೂಲ ಕಣವನ್ನು ಗುರುತಿಸಿದ ವರದಿ ಏನಾದರೂ ಬಂದರೆ ನನಗೆ ಆಶ್ಚರ್ಯವಿಲ್ಲ. ಇಷ್ಟರಲ್ಲಿ ಅಂಥ ಒಂದು ವರದಿ ಬರುತ್ತದೆಂಬುದೇ ನನ್ನ ನಂಬಿಕೆ'' ಎಂದರು. ನನಗೆ ಪರಮಾಶ್ಚರ್ಯವಾಯಿತು. ಏಕೆಂದರೆ, ಕೇವಲ ಎರಡು ದಿನಗಳ ಹಿಂದೆ, ನನ್ನ ಕೈಗೆ ಬಂದಿದ್ದ ಹೊಸ *Penguin Science News* (ಒಂದು ಅನಿಯತಕಾಲಿಕ ಪತ್ರಿಕೆ)ನಲ್ಲಿ ಅಂಥದೊಂದು ವರದಿ ಬಂದಿದ್ದುದನ್ನು ನಾನು ಓದಿದ್ದೆ.

ಅಂಥ ಕಣ ಪತ್ತೆಯಾಗುವುದೆಂದು ನರಸಿಂಹಯ್ಯನವರು ನಿರೀಕ್ಷಿಸಿದ್ದರೆಂಬುದು ಅಂದಿನ ತಿಳಿವಳಿಕೆಯ ಹಿನ್ನೆಲೆಯಲ್ಲಿ ಆಶ್ಚರ್ಯಕರವಾಗಿ ಕಾಣಿಸುತ್ತಿತ್ತು. ಏಕೆಂದರೆ, ಆಗ ಎಲ್ಲರೂ ತಿಳಿದಿದ್ದ ಪ್ರಕಾರ, ಕನಿಷ್ಠತೂಕದ ಪರಮಾಣು ಹೈಡ್ರೋಜನ್. ಅದರಲ್ಲಿರುವುದು ಒಂದು ಪ್ರೋಟಾನ್ ಮತ್ತು ಒಂದು ಇಲೆಕ್ಟ್ರಾನ್. ಆ ಪರಮಾಣುವಿನ ತೂಕವೆಲ್ಲ ಅದರಲ್ಲಿರುವ ಪ್ರೋಟಾನಿನಿಂದ ಬಂದದ್ದೇ. ಏಕೆಂದರೆ, ಇಲೆಕ್ಟ್ರಾನ್ ಬಹು ಹಗುರ - ಪ್ರೋಟಾನಿನ ೧೮೪೦ರಲ್ಲೊಂದು ಭಾಗದಷ್ಟು. ಹೈಡ್ರೋಜನ್ ಉಳಿದು, ಇತರ ದೊಡ್ಡ ದೊಡ್ಡ ಪರಮಾಣುಗಳಲ್ಲಿ ಕಾಣಸಿಗುವ ನ್ಯೂಟ್ರಾನಿನ ತೂಕ ಹೆಚ್ಚು ಕಡಮೆ ಪ್ರೋಟಾನಿನಷ್ಟೇ. ಹೀಗಿರುವಾಗ ಪ್ರೋಟಾನ್ ನ್ಯೂಟ್ರಾನ್‌ಗಳಿಗಿಂತ ತೂಕವಿರುವ ಒಂದು ಕಣ **ಮೂಲಕಣ**ವಾಗಿರುವುದು ಹೇಗೆ ಸಾಧ್ಯ ? ಏನೊಂದನ್ನೂ ಅರಿಯದವರು ಅಂಥ ನಿರಾಧಾರವಾದ ಊಹೆ ಮಾಡಬಹುದು. ನರಸಿಂಹಯ್ಯನವರು ಮಾಡಿದ್ದುದು ಹಾಗಲ್ಲ, ಅವರದು ಪ್ರಾಜ್ಞ ಊಹೆ (informed speculation) - ವಿಷಯದ ವ್ಯಾಪಕವಾದ ತಿಳಿವಿನಿಂದ, ನಿಸರ್ಗ ವ್ಯಾಪಾರಗಳ ನಾಡಿಯ ನಿಕಟ ಪರಿಚಯದಿಂದ ಮಾಡಿದಂಥದು.

ಅವರ ನಿರೀಕ್ಷೆ ಆಗಲೇ ಫಲಿಸಿದೆ ಎಂದು ನಾನು ಹೇಳಿದಾಗ ಆ ವರದಿಯನ್ನು ನೋಡಲು ತವಕಪಟ್ಟರು. ಮರುದಿನ ನಾನು ಕಾಲೇಜಿಗೆ ಬರುವುದಕ್ಕೆ ಮುಂಚೆ ಅವರು ಬಂದು ನನ್ನ ಕೊಠಡಿಯಲ್ಲಿ ಕುಳಿತಿದ್ದರು. ಪತ್ರಿಕೆಯನ್ನು ಕೊಂಡೊಯ್ದು ಓದಿ ಹಿಂದಿರುಗಿಸಿದರು. ಅಂದಿನಿಂದ ನಾವು ಪರಸ್ಪರ ಪುಸ್ತಕಗಳನ್ನು ಎರವಲು ಪಡೆಯುವ ಅಭ್ಯಾಸವನ್ನು ಬೆಳೆಸಿಕೊಂಡೆವು.

ನಾನು ಬೆಂಗಳೂರು ಬಿಟ್ಟು ಮೈಸೂರಿಗೆ ಬಂದು ಯುವರಾಜಾ ಕಾಲೇಜಿನಲ್ಲಿ ಅಧ್ಯಾಪಕನಾದ ಹೊಸದರಲ್ಲಿ ನರಸಿಂಹಯ್ಯನವರು ಒಮ್ಮೆ ಮೈಸೂರಿಗೆ ಬಂದರು. ಅವರು ತಮ್ಮ ಬಂಧು ಒಬ್ಬರ ಮನೆಯಲ್ಲಿ ತಂಗಿದ್ದ ವಿಷಯ ತಿಳಿದು ನಾನೂ ನನ್ನ ಇಬ್ಬರು ಸ್ನೇಹಿತರೂ ಅವರನ್ನು ಕಾಣಲು ಹೋದೆವು. ಕುಶಲ ಪ್ರಶ್ನೆಗಳಾದ ಕೂಡಲೇ ಅವರು ''ಲಕ್ಷ್ಮಣರಾಯರೇ, ನೀವು **ಪ್ರಬುದ್ಧ ಕರ್ನಾಟಕ** ಸಂಪಾದಕ ಮಂಡಲಿಯ ಸದಸ್ಯರಲ್ಲವೇ ?'' ಎಂದು ಕೇಳಿದರು. ಹೌದು ಎಂದೆ. ಆಗ ಅವರು, ''ನೀವು ಸಂಪಾದಕ ಮಂಡಲಿಯ ಸದಸ್ಯರಾಗಿದ್ದೂ ..... ಲೇಖನ ಅದರಲ್ಲಿ ಪ್ರಕಟವಾಗಿದೆಯಲ್ಲ, ಅದು ಹೇಗಾಯಿತು ? ಈ ವಿಷಯದಲ್ಲಿ ನಾನು ನಿಮ್ಮನ್ನು ಕ್ಷಮಿಸಲು ಸಿದ್ಧನಾಗಿಲ್ಲ'' ಎಂದು ಕಡ್ಡಿ ತುಂಡು ಮಾಡಿದಂತೆ ಹೇಳಿದರು. ವಾಸ್ತವವಾಗಿ ಸಂಪಾದಕ ಮಂಡಲಿಯು ವರ್ಷದಲ್ಲಿ ಒಂದು ಸಲವೋ ಎರಡು ಸಲವೋ ಸಭೆ ಸೇರಿ ಮುಂದಿನ ನಿರ್ದಿಷ್ಟ ಅವಧಿಯ ಕಾರ್ಯಕ್ರಮವನ್ನು ನಿರ್ಧರಿಸಿ ಸಂಪಾದಕರುಗಳಿಗೆ ಸೂಕ್ತ ಸಲಹೆಗಳನ್ನು ನೀಡುತ್ತಿತ್ತು, ಅಷ್ಟೆ. ಪ್ರಕಟಣೆ ಕೋರಿ ಬಂದ ಲೇಖನಗಳು ಸಂಪಾದಕ ಮಂಡಲಿಯವರ ಗಮನಕ್ಕೆ ಬರುತ್ತಲೇ ಇರಲಿಲ್ಲ. ಈ ವಿಷಯವನ್ನು ನರಸಿಂಹಯ್ಯನವರಿಗೆ ತಿಳಿಸಿದೆ. ಆದರೆ ಸಂಪಾದಕ ಮಂಡಲಿಯಲ್ಲಿ ವಿಜ್ಞಾನವನ್ನು ಪ್ರತಿನಿಧಿಸುವವನು ನಾನೊಬ್ಬನೇ ಆಗಿದ್ದುದರಿಂದ ಆಗ ಆಗಿಹೋಗಿದ್ದ ಪ್ರಮಾದದ ನೈತಿಕ ಜವಾಬ್ದಾರಿ ನನ್ನದು ಎಂಬುದನ್ನು ಒಪ್ಪಿಕೊಂಡೆ. ಇನ್ನು ಮುಂದೆ ವಿಜ್ಞಾನಕ್ಕೆ ಸಂಬಂಧಿಸಿದ ಯಾವ ಲೇಖನವೂ ನನ್ನ ಅನುಮತಿ ಪಡೆಯದೆ ಪ್ರಕಟಣೆಗೆ ಹೋಗಕೂಡದು ಎಂಬ ಒಂದು ನಿರ್ಣಯವನ್ನು ಮುಂದಿನ ಸಂಪಾದಕ ಮಂಡಲಿ ಸಭೆಯಲ್ಲಿ ಮಾಡಿಸಿ, ಆ ವಿಷಯವನ್ನು ನರಸಿಂಹಯ್ಯನವರಿಗೆ ಬರೆದು ತಿಳಿಸಿದೆ.

ಅವರ ಯೋಗ್ಯತೆಗೆ ತಕ್ಕ ಪುರಸ್ಕಾರ ವಿಶ್ವವಿದ್ಯಾನಿಲಯದಿಂದ ಅವರಿಗೆ ದೊರೆಯದಿದ್ದುದು ವಿಷಾದನೀಯ. ೧೯೨೯ರಲ್ಲಿ ಅವರು ಅಧ್ಯಾಪಕರಾಗಿ ಸೆಂಟ್ರಲ್ ಕಾಲೇಜಿಗೆ ಕಾಲಿಟ್ಟ ಮೂರು ನಾಲ್ಕು ವರ್ಷಗಳಲ್ಲಿಯೇ ಇಲೆಕ್ಟ್ರಾನಿಕ್ಸ್ ಕ್ಷೇತ್ರದಲ್ಲಿ ಅವರಿಗಿದ್ದ ಅಪಾರ

ಪರಿಣತಿಯನ್ನು ಸಂಬಂಧಪಟ್ಟವರು ಗುರುತಿಸಿದರು. ಆದರಿಂದ ಧೈರ್ಯ ತಳೆದು, ಅದುವರೆಗೆ ಭೌತವಿಜ್ಞಾನದ ಎಂ.ಎಸ್‌ಸಿ.ಯಲ್ಲಿ ವಿಶೇಷ ಅಧ್ಯಯನ ವಿಷಯವಾಗಿ ಎಕ್ಸ್‌ರೇ ಮತ್ತು ಸ್ಪೆಕ್ಟ್ರೊಸ್ಕೊಪಿಗೆ ಮಾತ್ರ ಅವಕಾಶ ಕೊಡುತ್ತಿದ್ದವರು ಇಲೆಕ್ಟ್ರಾನಿಕ್ಸ್ ಅನ್ನು ಮೂರನೆಯ ವಿಶೇಷ ಅಧ್ಯಯನ ವಿಷಯವಾಗಿ ಸೇರಿಸಿದರು. ಅವರನ್ನು ಸೆಂಟ್ರಲ್ ಕಾಲೇಜಿನಿಂದ ವರ್ಗ ಮಾಡಿದರೆ ಎಲೆಕ್ಟ್ರಾನಿಕ್ಸ್ ಎಂ.ಎಸ್‌ಸಿ. ತರಗತಿಯನ್ನು ಮುಚ್ಚಬೇಕಾಗುವ ಪರಿಸ್ಥಿತಿ. ಆದ್ದರಿಂದ ಅವರು ಬೇರೆಲ್ಲಿಗೂ ವರ್ಗವಾಗದೆ ೧೯೫೮ರಲ್ಲಿ ನಿವೃತ್ತರಾಗುವವರೆಗೂ ಅಲ್ಲಿಯೇ ಉಳಿದರು. ಆದರೆ ಶೋಚನೀಯ ವಿಷಯ: ಲೆಕ್ಚರರ್ ಆಗಿ ಕೆಲಸಕ್ಕೆ ಸೇರಿದವರು ಲೆಕ್ಚರರ್ ಆಗಿಯೇ ನಿವೃತ್ತರಾದರು. ಅವರ ಸೇವಾವಧಿಯಲ್ಲಿ ಬಡ್ತಿ ಎಂದರೇನೆಂಬುದೇ ಅವರ ಅನುಭವಕ್ಕೆ ಬರಲಿಲ್ಲ. ವಿಶ್ವವಿದ್ಯಾನಿಲಯದಿಂದ ನಿವೃತ್ತರಾದ ಮೇಲೆ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ, ರಾಷ್ಟ್ರೀಯ ಮಾನಸಿಕ ಆರೋಗ್ಯ ಸಂಸ್ಥೆಯಲ್ಲಿ, ಆಚಾರ್ಯ ಪಾಠ ಶಾಲೆ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು.

ಅವರ ಸಾಮರ್ಥ್ಯದ ಬಗ್ಗೆ ವಿಶ್ವವಿದ್ಯಾನಿಲಯ ತೋರಿದ ಅವಜ್ಞೆಯೇ ಕಾರಣವೋ ಏನೋ, ಅವರ ಸಾಮರ್ಥ್ಯ, ದಕ್ಷತೆಗಳನ್ನು ಪ್ರಶ್ನಿಸುವಂತೆ ಕಾಣುವ ಮಾತು ಅಥವಾ ವರ್ತನೆಗಳಿಗೆ ಅವರು ತೀವ್ರ ಪ್ರತಿಕ್ರಿಯೆ ತೋರಿಸುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು ಪರಿಷ್ಕರಣಕಾರ್ಯಕ್ಕಾಗಿ ನೇಮಕಗೊಂಡಿದ್ದ ಸಲಹಾ ಮಂಡಲಿಯಲ್ಲಿ ಶಿವರಾಮ ಕಾರಂತರೂ ಇದ್ದರು, ನರಸಿಂಹಯ್ಯನವರೂ ಇದ್ದರು. ಸಂಪಾದಕನಾಗಿ ನಾನೂ ಆ ಸಲಹಾ ಮಂಡಲಿಯ ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ಕಾರಂತರು ಒಮ್ಮೆ ಒಂದು ಸಲಹೆ ನೀಡಿದರು : ವಿವಿಧ ವಿಜ್ಞಾನ ಶಾಖೆಗಳ ವ್ಯಾಪ್ತಿಯಲ್ಲಿ ಬರುವ ಪಾರಿಭಾಷಿಕ ಶಬ್ದಗಳನ್ನೆಲ್ಲಾ ಆಯ್ದು ಸಂಬಂಧಪಟ್ಟ ವಿಜ್ಞಾನ ಶಾಖೆಗಳ ತಜ್ಞರಿಗೆ ಕಳುಹಿಸಿ ಅವರ ಸಲಹೆಗಳನ್ನು ಪಡೆಯುವುದು ಒಳ್ಳೆಯದು ಎಂದರು. ಅದು ಕಾರ್ಯ ಸಾಧ್ಯವಲ್ಲವೆಂದೂ ಸಂಪಾದಕರಿಗೆ ತೀವ್ರ ಸಂದೇಹ ಬಂದಾಗ ಅಗತ್ಯವೆನಿಸಿದರೆ ಮಾತ್ರ ತಜ್ಞರ ಸಲಹೆ ಪಡೆಯಬಹುದೆಂದೂ ಹೇಳಿದಾಗ ಕಾರಂತರು ಒಪ್ಪಿಕೊಂಡರು. ಅಂದು ಸಂಜೆ ನರಸಿಂಹಯ್ಯನವರು ನನ್ನೊಡನೆ ಮಾತನಾಡುತ್ತಾ ''ಲಕ್ಷ್ಮಣರಾಯರೇ, ಕಾರಂತರು ಈ ಬೆಳಿಗ್ಗೆ ಸಭೆಯಲ್ಲಿ ಹೇಳಿದುದೇನು ? ಅವರಿಗೆ ನನ್ನ, ನಿಮ್ಮ ಸಾಮರ್ಥ್ಯದಲ್ಲಿ ವಿಶ್ವಾಸವಿದ್ದಂತೆ ಕಾಣಿಸುವುದಿಲ್ಲ ಅಲ್ಲವೇ ?'' ಎಂದರು. ಕಾರಂತರು ಲೋಕಾಭಿರಾಮವಾಗಿ ಹೇಳಿದ ಮಾತು ಅದು, ಅದರ ಇಂಗಿತವನ್ನು ಅಷ್ಟು ದೂರ ಎಳೆಯಬೇಕಾದುದಿಲ್ಲ ಎಂಬ ನನ್ನ ಅಭಿಪ್ರಾಯವನ್ನು ನರಸಿಂಹಯ್ಯನವರಿಗೆ ತಿಳಿಸಿದೆ. ಅವರು "I hope you are right and I mistook" ಎಂದರು. ಇದಾದ ಕೆಲವೇ ತಿಂಗಳುಗಳಲ್ಲಿ, ನರಸಿಂಹಯ್ಯನವರು ೧೯೬೯ರ ಮೇ ೧೧ರಂದು ಕಾಲವಾದರು. ಕಾರಂತರು ಜೂನ್ ತಿಂಗಳಲ್ಲಿ ನಿಘಂಟು ಸಲಹಾ ಮಂಡಲಿಯ ಸಭೆಗೆ ಬಂದಿದ್ದಾಗ ಸಹಜವಾಗಿಯೇ ನನ್ನೊಡನೆ ಮಾತನಾಡುವಾಗ ನರಸಿಂಹಯ್ಯನವರನ್ನು ನೆನೆದರು. ನರಸಿಂಹಯ್ಯನವರು ಕಾರಂತರ ಮಾತುಗಳಿಗೆ ಅಪಾರ್ಥ ಕಲ್ಪಿಸಿದ್ದರೆಂಬ ನನ್ನ ಅಭಿಪ್ರಾಯವನ್ನು ದೃಢಪಡಿಸಿಕೊಳ್ಳುವುದಕ್ಕೇನೋ ಎಂಬಂತೆ ನಾನು ಥಟಕ್ಕನೆ, ''ನರಸಿಂಹಯ್ಯನವರ ನೆನಪಿಗಾಗಿ ವಿಜ್ಞಾನ ಕರ್ನಾಟಕದ ವಿಶೇಷ ಸಂಚಿಕೆಯನ್ನು ಹೊರತರಲು ಯೋಚಿಸಿದ್ದೇನೆ, ನೀವು ಅವರ ಬಗ್ಗೆ ಕೆಲವು ಮಾತುಗಳನ್ನು ಬರೆದುಕೊಡುವಿರಾ ?'' ಎಂದು ಕೇಳಿದೆ. ಕಾರಂತರು ಸಂತೋಷದಿಂದ ಒಪ್ಪಿಕೊಂಡು ಮುದ್ದಾದ ಲೇಖನವನ್ನು ಬರೆದುಕೊಟ್ಟರು.

ನಿಘಂಟು ಸಲಹಾ ಮಂಡಲಿಯ ಸಭೆಗಳಿಗಾಗಿ ನರಸಿಂಹಯ್ಯನವರು ಮೈಸೂರಿಗೆ ಬಂದಾಗ ಸಾಮಾನ್ಯವಾಗಿ ಪು.ತಿ.ನ. ಅವರ ಮನೆಯಲ್ಲಿ ಇಳಿದುಕೊಳ್ಳುತ್ತಿದ್ದರು. ಒಂದು ಸಲ ಪು.ತಿ.ನ. ಅವರ ಮನೆಯಲ್ಲಿ ಬಹಳ ಜನ ಅತಿಥಿಗಳಿದ್ದುದು ನನಗೆ ಗೊತ್ತಿದ್ದುದರಿಂದ ಆ ಬಾರಿ ನಮ್ಮ ಮನೆಯಲ್ಲಿ ಉಳಿಯುವಂತೆ ನಾನು ನರಸಿಂಹಯ್ಯನವರನ್ನು ಕೇಳಿಕೊಂಡೆ. ರಾತ್ರಿ ಊಟವಾದ ಮೇಲೆ ನಾವು ಸರಸ ಸಂಭಾಷಣೆಯಲ್ಲಿ ತೊಡಗಿದ್ದಾಗ ಅವರು ''ಈ ಸಲದ ಪ್ರಬುದ್ಧ ಕರ್ನಾಟಕದಲ್ಲಿ 'ತಪ್ಪು ಭಾವನೆ-ಗ್ರಹಣಗಳು' ಎಂಬ ನನ್ನ ಲೇಖನ ಇದೆಯಲ್ಲಾ ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?'' ಎಂದು ಕೇಳಿದರು. ಆಕಾಶವಾಣಿಯ ಗ್ರಾಮಸ್ಥರ ಕಾರ್ಯ ಕ್ರಮಕ್ಕಾಗಿ ತಯಾರಿಸಿದ್ದ ಒಂದು ಸಂಭಾಷಣೆ ಅದು. ಗ್ರಹಣಕಾಲದಲ್ಲಿ ಸಂಪ್ರದಾಯಸ್ಥರು ಆಚರಿಸುವ ಜಪ, ಅರ್ಘ್ಯ, ತರ್ಪಣಗಳ ಪ್ರಸ್ತಾಪ ಅದರಲ್ಲಿ ಬಂದಾಗ ಅವರು ಆ ಆಚರಣೆಗಳನ್ನು ಸಮರ್ಥಿಸಿಯೂ ಇರಲಿಲ್ಲ, ಅವೆಲ್ಲ ಕುರುಡು ನಂಬಿಕೆಗಳೆಂದು ಸ್ಪಷ್ಟವಾಗಿ ಹೇಳಿಯೂ ಇರಲಿಲ್ಲ. ಒಂದು ರೀತಿಯಲ್ಲಿ ತೇಲಿಸಿ ಮಾತನಾಡಿದ್ದರು. ಅವರು ಹಾಗೆ ಮಾಡಿದುದು ನನಗೆ ಒಪ್ಪಿಗೆಯಾಗಲಿಲ್ಲವೆಂದು ನೇರವಾಗಿ ಹೇಳಲಾರದೆ ನಾನೂ ತೇಲಿಸಿ ಮಾತನಾಡತೊಡಗಿದೆ. ಅವರು ನಸುನಕ್ಕು, ''ನಿಮ್ಮ ಅಭಿಪ್ರಾಯ ನನಗೆ ಗೊತ್ತು ಅದಕ್ಕೇ ನಾನು ಕೇಳಿದ್ದು, ಸಂಕೋಚ ಬೇಡ, ನೇರವಾಗಿ ಹೇಳಿ. ಆ ರೀತಿ ಕುರುಡು ನಂಬಿಕೆಗಳಿಗೆ ರಿಯಾಯಿತಿ ತೋರಿಸಿರುವುದಕ್ಕೆ ನನ್ನ ಮಕ್ಕಳು ಆಗಲೇ ನನ್ನನ್ನು ತರಾಟೆಗೆ ತೆಗೆದುಕೊಂಡಾಗಿದೆ'' ಎಂದರು. ಅವರ ಮಕ್ಕಳ ವಿಷಯದಲ್ಲಿ ನನಗೆ ಅಸೂಯೆಯೂ ಅವರ ಪ್ರಾಮಾಣಿಕತೆಯ ವಿಷಯದಲ್ಲಿ ಪೂಜ್ಯಭಾವವೂ ಉಂಟಾಯಿತು.

ಪ್ರಬುದ್ಧ ಕರ್ನಾಟಕದ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಹೊರತಂದ ಚಿನ್ನದ ಸಂಚಿಕೆಯ ವಿಜ್ಞಾನ ಸಂಪುಟವನ್ನು ಸಂಪಾದಿಸುವ ಜವಾಬ್ದಾರಿ ನನ್ನ ಮೇಲೆ ಬಿತ್ತು. ಅದಕ್ಕಾಗಿ ವಿಸ್ತೃತ ಯೋಜನೆ ತಯಾರಿಸಿದ್ದಾಯಿತು. ಯೋಜಿಸಿದ್ದ ೫೭ ಲೇಖನಗಳಲ್ಲಿ ಸೇಕಡ ೭೫-೮೦ ಭಾಗ ಲೇಖನಗಳು ನನ್ನ ಕೈಸೇರಿದುವು. ಆದರೆ ಪೀಠಿಕಾ ರೂಪದ ''ವಿಜ್ಞಾನದ ಉದಯ, ಬೆಳವಣಿಗೆ, ವಿಜ್ಞಾನ ಮಾರ್ಗ'' ಎಂಬ ಮೊದಲ ಲೇಖನ ಬರಲಿಲ್ಲ. ಅದಕ್ಕಾಗಿ ೨೪ ಪುಟಗಳಷ್ಟನ್ನು ಬಿಟ್ಟು ೨೫ನೆಯ ಪುಟದಿಂದ ಅಚ್ಚುಮಾಡ ತೊಡಗಿದೆವು. ೧೬೦೦ ಪುಟಗಳ ಸಂಪುಟದ ಮುದ್ರಣ ಕಾರ್ಯ ಮುಗಿಯುತ್ತ ಬಂದರೂ ಮೊದಲ ಲೇಖನ ಬರಲಿಲ್ಲ. ಬರುವ ಆಸೆಯೂ ನಂದಿತು. ನಾನೇ ಬರೆಯೋಣ ಎಂದುಕೊಂಡೆ. ಸ್ವಲ್ಪವೂ ಬಿಡುವಿರಲಿಲ್ಲ.

ಪೀಠಿಕಾರೂಪದ ಲೇಖನ ಉತ್ಕೃಷ್ಟವಾಗಿರಬೇಕು, ಎರಡು ವಾರಗಳಲ್ಲಿ ತಯಾರಾಗಬೇಕು, ೨೪ ಪುಟಗಳಿಗಿಂತ ಕಡಿಮೆಯೂ ಇರಬಾರದು ದೀರ್ಘವಾಗಿಯೂ ಇರಬಾರದು – ಈ ಇಂದ್ರಜಾಲ ನರಸಿಂಹಯ್ಯನವರಿಂದ ಮಾತ್ರ ಸಾಧ್ಯ ಎಂದು ತೀರ್ಮಾನಿಸಿ ಅವರ ಮೊರೆ ಹೊಕ್ಕೆ. ''ಈ ಸಂಪುಟಕ್ಕೆ ನಾನಾಗಲೇ ಎರಡು ಲೇಖನ ಕೊಟ್ಟಿದ್ದೇನೆ. ಒಬ್ಬರದೇ ಮೂರು ಲೇಖನಗಳಿರುವುದು ಸರಿಯಲ್ಲ'' ಎಂದುಬಿಟ್ಟರು. ನಾನು ನನ್ನ ಕರುಣಾಜನಕ ಸ್ಥಿತಿಯನ್ನು ವಿವರಿಸಿ ಅಂಗಲಾಚಿದೆ. ಅವರಿಗೆ ಮರುಕ ಹುಟ್ಟಿತು. ಅಭಯಹಸ್ತ ನೀಡಿದರು. ಆದರೆ, ಒಂದು ಷರತ್ತು ಹಾಕಿದರು: ''ಶೀರ್ಷಿಕೆಯ ವ್ಯಾಪ್ತಿ ವಿಸ್ತಾರವಾದುದು. ಏನು ಬರೆಯಬೇಕೆಂದು ಯೋಚಿಸುವುದರಲ್ಲಿಯೇ ಅರ್ಧ ಸಮಯ ಕಳೆದುಹೋಗುತ್ತದೆ. ನೀವು ಹೇಗಿದ್ದರೂ ಅದರ ಬಗ್ಗೆ ಯೋಚಿಸಿರುವಿರಿ. ಒಂದು ಪುಟದಷ್ಟು ಗೋಷ್ವಾರೆ ತಯಾರಿಸಿ ಕೊಡಿ. ಅದಕ್ಕೆ ರಕ್ತ, ಮಾಂಸ ತುಂಬಿಸಿಕೊಡುತ್ತೇನೆ'' ಎಂದರು. ಅವರು ಮನಸ್ಸು ಬದಲಾಯಿಸಿ ಬಿಟ್ಟಾರು ಎಂಬ ಆತಂಕದಿಂದ ಕೂಡಲೇ ಕುಳಿತು ಒಂದೆರಡು ಗಂಟೆಗಳಲ್ಲಿ ಗೋಷ್ವಾರೆ ತಯಾರಿಸಿ ಅವರಲ್ಲಿಗೆ ತೆಗೆದುಕೊಂಡು ಹೋದೆ. ನನ್ನ ಅವಸ್ಥೆಯನ್ನು ನೋಡಿ ನಕ್ಕರು.

ಎರಡು ವಾರಗಳಲ್ಲಿ ಅಚ್ಚುಕಟ್ಟಾದ ಲೇಖನ ಟಪಾಲಿನಲ್ಲಿ ಬಂತು. ಪ್ರೆಸ್ಸಿನಲ್ಲಿ ಮೊಳೆ ಜೋಡಿಸಿ ಕರಡಚ್ಚು ತಯಾರಿಸಿದಾಗ ಅದು ೨೬-೨೭ ಪುಟಗಳಷ್ಟಾಯಿತು. ಯಾವುದಾದರೂ ಅಮುಖ್ಯ ಭಾಗಗಳಿದ್ದರೆ ತೆಗೆದುಹಾಕಿ ೨೪ ಪುಟಗಳಿಗೆ ಇಳಿಸಿಕೊಡಿ ಎಂದು ಅವರಿಗೆ ಕಳಿಸಿದೆ. ''ನನ್ನ ಮಗುವಿನ ಕೊಲೆಯನ್ನು ನನ್ನ ಕೈಯಿಂದ ಮಾಡಿಸಬೇಡಿ, ನೀವೇ ಮಾಡಿ'' ಎಂದರು. ಇಷ್ಟೆಲ್ಲ ಆದ ತರುವಾಯ ಅದು ಒಂದು ಅತ್ಯುತ್ಕೃಷ್ಟ ಲೇಖನವಾಗಿ ರೂಪುಗೊಂಡಿತು. ನಾನು ಹಾಕಿಕೊಟ್ಟ ಗೋಷ್ವಾರೆಯನ್ನು ಎಲ್ಲಿಯೂ ಮೀರಿಲ್ಲ. ಆದರೆ ನಾನು ಒದಗಿಸಿದ ಚೌಕಟ್ಟಿನಲ್ಲಿ ಅಂಥ ಸುಂದರ ಕೃತಿಯನ್ನು ಕೂಡಿಸಲು ನನ್ನಿಂದ ಸಾಧ್ಯವಾಗುತ್ತಿರಲಿಲ್ಲ. ಅವರು ಮಾಡಿದುದು ನಿಜಕ್ಕೂ ಇಂದ್ರಜಾಲ.

ಹೀಗೆಯೇ ಬರೆಯುತ್ತ ಹೋದರೆ ಅವರ ಉದಾತ್ತ ಗುಣಗಳನ್ನು ಎತ್ತಿ ತೋರಿಸುವ ಅನೇಕ ಘಟನೆಗಳು ನೆನಪಿಗೆ ಬರುತ್ತವೆ. ಅವರದು ಅನುಕರಣೀಯ ಜೀವನ. ತೀಕ್ಷ್ಣ ಬುದ್ಧಿಶಕ್ತಿ, ಆಳವಾದ ಪಾಂಡಿತ್ಯ, ಸಿದ್ಧ ಲೇಖನ ಕಲೆ, ಉತ್ತಮ ಕಲಾಭಿಜ್ಞತೆ, ವೈಯಕ್ತಿಕ ಜೀವನದಲ್ಲಿ ಚಾರಿತ್ರ್ಯ ಮತ್ತು ಪ್ರಾಮಾಣಿಕತೆ, ವ್ಯವಹಾರದಲ್ಲಿ ವಿನಯಶೀಲತೆ ಮತ್ತು ಸ್ನೇಹಪರತೆ – ಇವೆಲ್ಲವನ್ನೂ ಒಬ್ಬ ವ್ಯಕ್ತಿಯಲ್ಲಿ ಕಾಣುವುದು ದುರ್ಲಭ. ಸಹಜವಾಗಿಯೇ ಅವರನ್ನು ಕುರಿತು ಬರೆಯುತ್ತ ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರು ''ಅಂಥವರ ಸಹವಾಸ ದೊರಕುವುದು ಒಂದು ಸುಕೃತದ ಫಲ, ಎಲ್ಲಿ ಸಿಕ್ಕುತ್ತಾರೆ ಅಂಥ ವ್ಯಕ್ತಿಗಳು ?'' ಎಂದಿದ್ದಾರೆ. ನನಗೆ ಅಂಥವರೊಬ್ಬರು ಸಿಕ್ಕಿದ್ದುದು ಮಾತ್ರವಲ್ಲ, ನನ್ನಲ್ಲಿ ಅವರು ತುಂಬ ವಿಶ್ವಾಸವನ್ನಿಟ್ಟಿದ್ದರು. ಅದು ನನ್ನ ಸೌಭಾಗ್ಯ ಎಂಬುದು ನನ್ನ ಭಾವನೆ.

**ಪ್ರೊ॥ ಜಿ. ಆರ್. ಲಕ್ಷ್ಮಣರಾವ್**
'ಮೈತ್ರಿ', ೧೨ನೇ ಮೇನ್, ಸರಸ್ವತಿಪುರಂ, ಮೈಸೂರು-೫೭೦ ೦೦೯

## ಅಂತರರಾಷ್ಟ್ರೀಯ ನೋಟ

# ಪರಿಹಾರ ಕಾಣದೆ ಉಲ್ಬಣಿಸಿರುವ ಸಮಸ್ಯೆಗಳು



*ಗಾಜ಼ಾದಲ್ಲಿ ಪ್ಯಾಲಿಸ್ಟೈನ್ ರಕ್ಷಣಾ ಕೇಂದ್ರಕ್ಕೆ ಇಸ್ರೇಲಿನ ಬಾಂಬ್*

**ಅ**ಮೆರಿಕದಲ್ಲಿ ಆರ್ಥಿಕ ಕುಸಿತ, ಭಯೋತ್ಪಾದಕರಿಂದ ಮೊದಲಬಾರಿಗೆ ಅಮೆರಿಕದ ಮೇಲೆ ಧಾಳಿ, ಭಯೋತ್ಪಾದಕತೆಯ ವಿರುದ್ಧ ಅಮೆರಿಕದ ಸಮರ, ಬಿಗಡಾಯಿಸಿರುವ ಪ್ಯಾಲಸ್ಟೈನ್ ಸಮಸ್ಯೆ, ವಿಫಲಗೊಂಡ ಭಾರತ-ಪಾಕ್ ಶೃಂಗ ಸಭೆ, ಭಾರತದ ಪಾರ್ಲಿಮೆಂಟ್ ಮೇಲೆ ಭಯೋತ್ಪಾದಕರ ದಾಳಿಯ ಹಿನ್ನೆಲೆಯಲ್ಲಿ ಉದ್ರಿಕ್ತಗೊಂಡಿರುವ ಭಾರತ-ಪಾಕ್ ಸಂಬಂಧ, ಕ್ವಾತಾರ್‌ನ ದೋಹದಲ್ಲಿ ಜರುಗಿದ ವಿಶ್ವ ವಾಣಿಜ್ಯ ಸಂಸ್ಥೆಯ ಸಭೆ, ಇವು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿನ ಪ್ರಮುಖ ಘಟನೆಗಳು. ಮೂರನೇ ಸಹಸ್ರಮಾನದ ಮೊದಲ ವರ್ಷ ಆರಂಭವಾದ್ದು ಹಿಂದಿನ ಸಮಸ್ಯೆಗಳ ಭಾರ ಹೊತ್ತುಕೊಂಡೇ. ಆದರೂ ಅವನ್ನು ಬಗೆಹರಿಸುವತ್ತ ಹೊಸ ಪ್ರಯತ್ನವೇನೂ ಕಾಣದೆ ಹೋಯಿತು, ಬದಲು ಹಳೆಯ ತಂತ್ರಗಳಿಗೇ ಅಂಟಿಕೊಂಡಿದ್ದು ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ.

ಚುನಾವಣಾ ವಿವಾದಗಳ ಸುಳಿಯಲ್ಲೇ ಅಧಿಕಾರ ವಹಿಸಿಕೊಂಡ ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಆದ್ಯತೆ ನೀಡಿದ್ದು ರಾಷ್ಟ್ರೀಯ ಕ್ಷಿಪಣಿ ರಕ್ಷಣಾ ವ್ಯವಸ್ಥೆಯನ್ನು ನಿಯುಕ್ತಿಗೊಳಿಸುವ ನಿರ್ಧಾರಕ್ಕೆ. ಈ ವ್ಯವಸ್ಥೆ ಇಲ್ಲಿಯವರೆಗೆ ಮಾಡಿಕೊಂಡಿರುವ ಎಲ್ಲ ಅಂತರರಾಷ್ಟ್ರೀಯ ಶಸ್ತ್ರಾಸ್ತ್ರ ನಿಯಂತ್ರಣ ಒಪ್ಪಂದಗಳನ್ನೂ, ಕೌಲುಗಳನ್ನೂ ಗಾಳಿಗೆ ತೂರುತ್ತದೆ. ಅದರಿಂದಾಗಿ ಅಮೆರಿಕದಲ್ಲೇ ಈ ವಿಚಾರದಲ್ಲಿ ವಿವಾದಗಳಿವೆ, ಅಮೆರಿಕದ ಮಿತ್ರ ರಾಷ್ಟ್ರಗಳೂ ಅದಕ್ಕೆ ಉತ್ಸಾಹದಿಂದ ಬೆಂಬಲವಿತ್ತಿಲ್ಲ. ಇದು ಹೊಸಬಗೆಯ ಶಸ್ತ್ರಾಸ್ತ್ರ ಪೈಪೋಟಿಗೆ ನಾಂದಿ ಎಂಬುದರಲ್ಲಿ ಸಂದೇಹವಿಲ್ಲ. ಚೀಣಾ ಮತ್ತು ರಷ್ಯಾಗಳು ಹಾಗೂ ಇತರ ದೇಶಗಳು ಅಮೆರಿಕದ ಕ್ಷಿಪಣಿ ರಕ್ಷಣಾ ಯೋಜನೆಯನ್ನು ವಿರೋಧಿಸಿವೆ. ಭಾಜಪ ಸರಕಾರ ಮಾತ್ರ ಹಿಂದು ಮುಂದೆ ನೋಡದೆ ಅಮೆರಿಕದ ಯಜಮಾನರನ್ನು ಸುಪ್ರೀತರಾಗಿಸಲು ಯೋಜನೆಗೆ ಬೆಂಬಲ ನೀಡಿದ್ದು ನಾಚಿಕೆಗೇಡು. ನ್ಯೂಯಾರ್ಕ್‌ನ ಮೇಲೆ ಭಯೋತ್ಪಾದಕರು ನಡೆಸಿದ ದಾಳಿಯ ನಂತರ ಬುಷ್ ಸರಕಾರ ಕ್ಷಿಪಣಿ ರಕ್ಷಣಾ ಯೋಜನೆಯನ್ನು ತೀವ್ರಗತಿಯಲ್ಲಿ ಜಾರಿಗೆ ತರಲು ಹೊರಟಿದೆ. ಈಗಾಗಲೇ ಅದು ಮೂವತ್ತು ವರ್ಷಗಳ ಹಿಂದೆ ಸೋವಿಯತ್ ರಷ್ಯಾದೊಂದಿಗೆ ಮಾಡಿಕೊಂಡಿದ್ದ ಖಂಡಾಂತರ ಕ್ಷಿಪಣಿ ನಿಯಂತ್ರಣಾ ಒಪ್ಪಂದವನ್ನು ರದ್ದುಗೊಳಿಸಿದೆ.

ವರ್ಷದ ಪ್ರಾರಂಭದಲ್ಲೇ ಕಾಣಿಸಿಕೊಂಡ ಅಮೆರಿಕದ ಆರ್ಥಿಕ ಹಿಂಜರಿತ ಮೊದಲಿಗೆ ಮಾಹಿತಿ ತಂತ್ರಜ್ಞಾನ ವಲಯಕ್ಕೆ ಸೀಮಿತವಾಗಿದ್ದುದು ಈಗ ಆರ್ಥಿಕ ಕ್ಷೇತ್ರದ ಎಲ್ಲ ವಲಯಗಳನ್ನು ಆವರಿಸಿದೆ. ನಿರುದ್ಯೋಗಿಗಳ ಸಂಖ್ಯೆ ಹಿಂದಿನ ಎಲ್ಲ ವರ್ಷಗಳಿಗಿಂತ ಅಧಿಕಗೊಂಡು ಶೇ. ೬ನ್ನು ಮೀರಿದೆ. (ಇದು ಅಧಿಕೃತವಾಗಿ ದಾಖಲಾಗಿರುವಂತಹ ಸಂಖ್ಯೆ ಅಷ್ಟೆ. ಕಂಟ್ರಾಕ್ಟ್ ಹಾಗೂ ಇತರ ಸಣ್ಣ ಪುಟ್ಟ ಖಾಸಗೀ ಕ್ಷೇತ್ರದ ನಿರುದ್ಯೋಗಿಗಳು ಇದರಲ್ಲಿ ಸೇರಿಲ್ಲ). ಅನೇಕ ವಿಷಯಗಳಲ್ಲಿ ಆರ್ಥಿಕ ಕ್ಷೇತ್ರದಲ್ಲಾಗಿರುವ ಅಲ್ಲೋಲ ಕಲ್ಲೋಲ ಕಳೆದ ಶತಮಾನದ ಆದಿಯಲ್ಲಿ ಸಂಭವಿಸಿದ ಆರ್ಥಿಕ ಕುಸಿತವನ್ನೇ ನೆನಪಿಗೆ ತರುತ್ತಿದೆ. ಇಪ್ಪತ್ತು ವರ್ಷಗಳ ಹಿಂದೆ ೧೯೮೦ರಲ್ಲಿ ಅಮೆರಿಕದ ಆರ್ಥಿಕ ಕ್ಷೇತ್ರದಲ್ಲಿ ತೀವ್ರವಾದ ಬಿಕ್ಕಟ್ಟು ಉಂಟಾಗಿತ್ತು. ಆದರೆ ಅದು ಒಂದೆರಡು ವರ್ಷಗಳಲ್ಲೇ ಚೇತರಿಸಿಕೊಂಡಿತಲ್ಲದೆ, ಮುಖ್ಯವಾಗಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ತೀವ್ರ ಮುನ್ನಡೆ ಸಾಧಿಸಿತು. ಆದರೆ ಈ ಬಾರಿ, ೨೦೦೧ರಲ್ಲಿ ತಲೆದೋರಿರುವ ಆರ್ಥಿಕ ಕುಸಿತ ಸದ್ಯದಲ್ಲಿ ಚೇತರಿಸಿಕೊಳ್ಳುವ ಸೂಚನೆ ಏನಿಲ್ಲ. ಸದ್ಯಕ್ಕೆ ನೆಲ ಕಚ್ಚಿರುವ ಮಾಹಿತಿ ತಂತ್ರಜ್ಞಾನ ಕ್ಷೇತ್ರ ಹಿಂದಿನ ವೈಭವಕ್ಕೆ ಮರಳುವುದು ಕೂಡ ಅಸಾಧ್ಯ. ಮೊದಲ ಆರು ತಿಂಗಳಲ್ಲಿ ಆರ್ಥಿಕದ ಚೇತರಿಕೆಯ ಆಶಾಭಾವನೆ ಇರಿಸಿಕೊಂಡಿದ್ದ ಅಮೆರಿಕದ ಆರ್ಥಿಕ ತಜ್ಞರು ಈಗ ದೇಶ ಆರ್ಥಿಕ ಕುಸಿತ ಎದುರಿಸುತ್ತಿದೆ ಎಂಬುದನ್ನು ಒಪ್ಪಬೇಕಾಯಿತು.

ಕಳೆದ ಸೆಪ್ಟೆಂಬರ್ ೧೧ರಂದು ನ್ಯೂಯಾರ್ಕಿನ ಮೇಲೆ, ಪೆಂಟಗನ್‌ನ ಮೇಲೆ ನಡೆದ ಭಯೋತ್ಪಾದಕ ದಾಳಿ ಅಮೆರಿಕದ ಆರ್ಥಿಕಕ್ಕೆ ಇನ್ನಷ್ಟು ಭಾರಿ ಹೊಡೆತ ನೀಡಿತು. ಅಮೆರಿಕದ ಇತಿಹಾಸದಲ್ಲೇ ಮೊದಲ ಬಾರಿಗೆ ದೇಶದ ಸ್ಟಾಕ್ ಎಕ್ಸ್‌ಚೇಂಜ್‌ಗಳು, ವಿಮಾನ ಯಾನ ಒಂದು ವಾರ ಕಾಲ ಸ್ತಬ್ಧಗೊಂಡಿತು. ಸ್ಟಾಕ್ ಮಾರ್ಕೆಟ್ ಕುಸಿದು ಬಿದ್ದದ್ದು ಇನ್ನೂ ಚೇತರಿಸಿಕೊಂಡಿಲ್ಲ. ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಜೊತೆಗೆ, ದೇಶದ ಸರಕು ಉತ್ಪಾದನಾ ಉದ್ಯಮಗಳು, ಆಟೋಮೊಬೈಲ್ ಉದ್ಯಮ, ಪ್ರವಾಸೋದ್ಯಮ, ವೈಮಾನಿಕ ಸಂಸ್ಥೆಗಳು ಹಾಗೂ ಇತರ ಕ್ಷೇತ್ರಗಳು ತೀವ್ರವಾಗಿ ಬಾಧಿತವಾಗಿವೆ.

ಅಮೆರಿಕದ ಆರ್ಥಿಕ ಕುಸಿತದ ಪರಿಣಾಮದ ಬಿಸಿ ಯೂರೋಪಿನ ದೇಶಗಳಿಗೆ ಹಾಗೂ ಇತರ ಎಲ್ಲ ದೇಶಗಳಿಗೆ ತಟ್ಟಿದೆ. ಯೂರೋಪಿನಲ್ಲಿ ಪ್ರವಾಸೋದ್ಯಮಕ್ಕೆ ಭಾರೀ ಹೊಡೆತ ಬಿದ್ದಿದ್ದು ಸ್ವಿಸ್‌ಏರ್, ಸಬೀನ, ಏರ್‌ವೇಸ್‌ನಂಥ ಸಂಸ್ಥೆಗಳು ದಿವಾಳಿಯಾಗಿರುವುದಲ್ಲದೆ, ಹೊಟೇಲ್ ಉದ್ಯಮವೂ ನೆಲ ಕಚ್ಚಿದೆ. ಅಮೆರಿಕನ್ ಪ್ರವಾಸಿಗಳು ಬಾರದೇ ಹೋಗಿರುವುದೇ ಕಾರಣ.

**ಸೀಯಾರ್ಕೆ**

ಅಮೆರಿಕನ್ನರು ವಿಮಾನದಲ್ಲಿ ಪ್ರಯಾಣಿಸಲು ಭೀತರಾಗಿರುವುದರಿಂದ ಅಮೆರಿಕದ ವೈಮಾನಿಕ ಸಂಸ್ಥೆಗಳೂ ತೀವ್ರವಾದ ಬಿಕ್ಕಟ್ಟಿನಲ್ಲಿವೆ. ಪ್ರಮುಖ ವೈಮಾನಿಕ ಸಂಸ್ಥೆಗಳು ವಿಮಾನ ಹಾರಾಟದ ಪ್ರಮಾಣವನ್ನು ಇಳಿಸಿರುವುದರಿಂದ ಈ ಉದ್ಯಮ ಕ್ಷೇತ್ರದ ಲಕ್ಷಾಂತರ ಮಂದಿ ನಿರುದ್ಯೋಗಿಗಳಾಗಿದ್ದಾರೆ.

ಅಮೆರಿಕದ ಆರ್ಥಿಕ ಕುಸಿತ, ಭಯೋತ್ಪಾದಕರಿಂದ ದಾಳಿಯ ಹಿನ್ನಲೆಯಲ್ಲೇ ಕ್ವಾತಾರ್‌ನ ರಾಜಧಾನಿ ದೋಹದಲ್ಲಿ ವಿಶ್ವ ವಾಣಿಜ್ಯ ಸಂಸ್ಥೆಯ ಸಭೆ ನಡೆಯಿತಾದರೂ, ಅಭಿವೃದ್ಧಿಶೀಲ ದೇಶಗಳ ಮಟ್ಟಿಗೆ ನಿರೀಕ್ಷಿತ ರಿಯಾಯಿತಿಗಳೇನೂ ಗಿಟ್ಟಲಿಲ್ಲ. ಭಾರತ ಹಾಗೂ ಇತರ ಅಭಿವೃದ್ಧಿ ಶೀಲ ರಾಷ್ಟ್ರಗಳು ಮುಕ್ತಮಾರುಕಟ್ಟೆಯಲ್ಲಿ ಸಮಾನತೆಗಾಗಿ, ರಫ್ತು ವ್ಯಾಪಾರದಲ್ಲಿ ಮುಖ್ಯವಾಗಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಪರಂಪರಾಗತವಾದ ಟೆಕ್ಸ್‌ಟೈಲ್ ಮತ್ತು ಕೃಷಿ ಉತ್ಪನ್ನಗಳ ರಫ್ತಿನಲ್ಲಿ ಉದಾರೀಕರಣವನ್ನು ಕಾರ್ಯಗತಮಾಡುವಂತೆ ಮಾಡುವುದಕ್ಕಾಗಿ ನಡೆಸಿದ ಪ್ರಯತ್ನ ಫಲಕಾರಿಯಾಗದೇ ಹೋಯಿತು. ತೋರಿಕೆಗೆ ಅಭಿವೃದ್ಧಿಶೀಲ ರಾಷ್ಟ್ರಗಳು ಈ ಬಾರಿ ಕೆಲ ರಿಯಾಯಿತಿಗಳನ್ನು ಪಡೆದುಕೊಳ್ಳಲು ಸಫಲವಾದುವು ಎಂಬ ಪ್ರಚಾರವಿದ್ದರೂ, ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳ ಮಟ್ಟಿಗೆ ಅವು ಯಾವ ರಿಯಾಯಿತಿ ನೀಡಲೂ ಮುಂದೆ ಬಾರದೆಹೋದುವು. ಜಾಗತೀಕರಣದ ಹೆಸರಿನಲ್ಲಿ ವಿಶ್ವ ವಾಣಿಜ್ಯ ಸಂಸ್ಥೆಯ ಮೂಲಕ ಅಮೆರಿಕ ಹಾಗೂ ಅದರ ಮಿತ್ರ ರಾಷ್ಟ್ರಗಳು ಅಭಿವೃದ್ಧಿಶೀಲ ದೇಶಗಳನ್ನು ಆರ್ಥಿಕ ದಾಸ್ಯಕ್ಕೆ ದೂಡುವ ಪ್ರಯತ್ನವನ್ನು ಮುಂದುವರಿಸುವುದರಲ್ಲಿ ಸಫಲಗೊಂಡಿವೆ. ವಿಕಾಸಶೀಲ ದೇಶಗಳು ಎಚ್ಚೆತ್ತುಕೊಳ್ಳದೆ ಹೋದಲ್ಲಿ, ಪ್ರಬಲರಾಷ್ಟ್ರಗಳ ಕುತಂತ್ರವನ್ನೂ ಒಟ್ಟಾಗಿ ಎದುರಿಸದೆ ಇದ್ದಲ್ಲಿ ಅನಾಹುತ ಕಟ್ಟಿಟ್ಟ ಬುತ್ತಿ.

ಕಳೆದ ಸೆಪ್ಟೆಂಬರ್ ೧೧ರಂದು ಅಮೆರಿಕದ ಆರ್ಥಿಕ ಕೇಂದ್ರ ನ್ಯೂಯಾರ್ಕ್ ನಗರದ ವಿಶ್ವ ವಾಣಿಜ್ಯ ಕೇಂದ್ರವೆಂಬ ಅತಿ ಎತ್ತರದ ಕಟ್ಟಡ ಹಾಗೂ ಪ್ರಪಂಚದಲ್ಲಿ ಪ್ರಭುತ್ವ ಪ್ರೇರಿತ ಭಯೋತ್ಪಾದನೆ ಕೃತ್ಯಗಳಿಗೆ ಆಧಾರ ಸ್ತಂಭವಾಗಿರುವ ಅಮೆರಿಕದ ರಕ್ಷಣಾ ವ್ಯವಸ್ಥೆಯ ಕೇಂದ್ರ ಪೆಂಟಗನ್ ಮೇಲೆ ಭಯೋತ್ಪಾದಕರು ನಡೆಸಿದ ದಾಳಿ ಹಾಗೂ ಆನಂತರ ಅಮೆರಿಕ ನಡೆಸಿರುವ ಭಯೋತ್ಪಾದನೆಯ ವಿರುದ್ಧ ಸಮರ ಕುರಿತು ಸಾಕಷ್ಟು ಚರ್ಚೆ ನಡೆದಿದೆ, ನಡೆಯುತ್ತಿದೆ. ಪ್ರಪಂಚದ ಏಕೈಕ ಬಲಿಷ್ಠ ರಾಷ್ಟ್ರವಾದ ಅಮೆರಿಕದ ಅಹಮಿಗೆ ಘಾಸಿಯಾಗಿದೆ ಈ ಧಾಳಿಯಿಂದ ಎನ್ನುವುದು ಸಾರ್ವತ್ರಿಕ ಅಭಿಮತ. ಅಮೆರಿಕ ಎರಡನೇ ಮಹಾಯುದ್ಧದ ನಂತರ ಕಳೆದ ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಸ್ವಯಂಘೋಷಿತ ಅಮೆರಿಕದ ಹಿತಾಸಕ್ತಿಗಳ ರಕ್ಷಣೆಗಾಗಿ

ನಡೆಸುತ್ತ ಬಂದಿರುವ ದೌರ್ಜನ್ಯಗಳು, ಸೇನಾ ಕಾರ್ಯಾಚರಣೆಗಳು, ಭಯೋತ್ಪಾದಕ ದಾಳಿಗಳಿಗೆ ಪ್ರತಿಭಟನೆಯ ಪ್ರತಿಕ್ರಿಯೆಯೇ ಸೆಪ್ಟೆಂಬರ್ ೧೧ರ ದಾಳಿ ಎಂದರೆ ಉತ್ಪ್ರೇಕ್ಷೆಯೇನಲ್ಲ. ಅಮೆರಿಕಾಗೆ ತಾನೇ ಬಿತ್ತಿದ ಬೆಳೆ ತಿರುಗೇಟಾಯಿತು. ಇಡೀ ಜಗತ್ತನ್ನೇ ಭೀತಿಗೊಳಿಸಲು ಎರಡನೇ ಮಹಾಯುದ್ಧದ ಕೊನೆಯ ದಿನಗಳಲ್ಲಿ ಜಪಾನು ಶರಣಾಗತವಾಗುವುದರಲ್ಲಿದ್ದಾಗ ಹಿರೋಷಿಮಾ ನಾಗಾಸಾಕಿಗಳ ಮೇಲೆ ಪರಮಾಣು ಬಾಂಬು ಹಾಕಿ ಅಮಾಯಕ ಜನರ ಕಗ್ಗೊಲೆ ನಡೆಸಿದ್ದು ಭಯೋತ್ಪಾದನೆಯ ಕೃತ್ಯವಲ್ಲದೆ ಮತ್ತೇನು? ಅನಂತರ ವಿಯೆಟ್ನಾಮ್, ಕೊರಿಯ, ಇರಾಕ್, ಬೋಸ್ನಿಯಾ, ಕೊಸಾವೊ ಇತ್ಯಾದಿ ಕಡೆಗಳಲ್ಲಿ ಅಮೆರಿಕ ನಡೆಸಿದ ಧಾಳಿಗಳು ಅದೇ ಭಯೋತ್ಪಾದನೆಯ ಲೆಖ್ಖಕ್ಕೆ ಸೇರುತ್ತವೆ. ಈಗ ಅಫ್ಘಾನಿಸ್ತಾನದ ಮೇಲೆ ನಡೆಸಿದ ಉಗ್ರ ಬಾಂಬು ದಾಳಿಯೂ ಅಷ್ಟೆ, ಅದೇ ಖಾತೆಗೆ ಸೇರಿದ್ದು.

ಜಗತ್ತಿನಲ್ಲೇ ಅತ್ಯಂತ ಪ್ರಬಲವಾದ ಪ್ರಚಾರ ಮಾಧ್ಯಮವನ್ನು ಹೊಂದಿರುವ ಅಮೆರಿಕ ಸೆಪ್ಟೆಂಬರ್ ೧೧ರ ನಂತರ ಜಗತ್ತೇ ಬದಲಾಗಿದೆ ಎಂದು ಗುಲ್ಲೆಬ್ಬಿಸಿದೆ. ಇಷ್ಟು ವರ್ಷಗಳಲ್ಲಿ ಇತರ ದೇಶಗಳಲ್ಲಿ ಜರುಗಿದ ಭಯೋತ್ಪಾದಕರ ಧಾಳಿ ಅಮೆರಿಕದ ಮಟ್ಟಿಗೆ ಗಣನೆಗೆ ತೆಗೆದುಕೊಳ್ಳುವಂಥವಲ್ಲ. ಅಮೆರಿಕದ ವಾದಸರಣಿಯನ್ನು ಒಪ್ಪಿ ತಲೆದೂಗುವ ರಾಷ್ಟ್ರನಾಯಕರುಗಳಿರುವಾಗ, ಅದು ನಡೆಸಿರುವ ದೌರ್ಜನ್ಯವನ್ನು ಪ್ರತಿಭಟಿಸುವವರಿಲ್ಲದಾಗ, ಅವರು ನಡೆಸಿದ್ದೇ ದರ್ಬಾರಾಗುತ್ತದೆ. ಈಗ ನಡೆದಿರುವುದೂ ಹಾಗೆಯೇ. ಭಯೋತ್ಪಾದಕರ ಮೇಲೆ ತಾನು ಆರಂಭಿಸಿರುವ ಸಮರಕ್ಕೆ, ಅಫ್ಘಾನಿಸ್ತಾನದ ಮೇಲೆ ದಾಳಿಗೆ ಬೆಂಬಲ ನೀಡುವವರೆ ಮಿತ್ರರು, ಉಳಿದವರು ಶತ್ರುಗಳು ಎಂದು ಘೋಷಿಸುವ ಉದ್ಧಟತನ ಅಮೆರಿಕಾಗೆ ಬಂದದ್ದೂ ಹಾಗೆಯೆ. ಅಫ್ಘಾನಿಸ್ತಾನದ ಆಕ್ರಮಣ ಮುಗಿದಿದೆ. ಅಮೆರಿಕ ತನ್ನ ಸೇನೆಗಳನ್ನು ಅಲ್ಲಿ ಇಳಿಸಿದೆ. ತನ್ನ ಮರ್ಜಿ ಅನುಸರಿಸುವಂಥ ಸರಕಾರವನ್ನು ಅಮೆರಿಕ ಆಫ್ಘನ್ ಜನರ ಮೇಲೆ ಹೊರಿಸಿದೆ. ಇನ್ನು ಅಲ್‌ಕಾಯ್ದ ನಾಯಕ ಒಸಾಮಾ ಬಿನ್ ಲಾಡೆನ್ ಕತೆ ಮುಗಿದರೆ ಭಯೋತ್ಪಾದಕತೆಯ ವಿರುದ್ಧ ಯುದ್ಧ ಅಮೆರಿಕದ ಮಟ್ಟಿಗೆ ಒಂದು ಹಂತ ಮುಗಿದಂತೆ. ಭಯೋತ್ಪಾದಕತೆಗೆ ಮೂಲವಾಗಿರುವ ಸಮಸ್ಯೆಗಳನ್ನು ಬಗೆಹರಿಸುವುದು ಅದಕ್ಕೆ ಬೇಕಿಲ್ಲ. ಅಮೆರಿಕಾಗೆ ತನಗಾಗದಿರುವ, ಅದರ ಮರ್ಜಿ ಅನುಸರಿಸದೆ ವಿರೋಧಿಸುವ ಧೈರ್ಯ ತೋರುವ ದೇಶಗಳನ್ನು ಬಗ್ಗುಬಡಿಯುವುದರಲ್ಲಿ ಮಾತ್ರ ಆಸಕ್ತಿ. ಹಾಗಾಗಿ ಅದು ಇದೇ ಭಯೋತ್ಪಾದನೆ ನೆಪ ಮುಂದುವರಿಸಿಕೊಂಡು ಇರಾಕ್, ಲಿಬಿಯಾ, ಕ್ಯೂಬಾ ಮೊದಲಾದ ದೇಶಗಳ ಕಾಲು ಕೆರೆದು ಧಾಳಿ ಎಸಗಲು ಎಣಿಕೆ ಹಾಕದಿರದು.

ಭಯೋತ್ಪಾದಕ ಕೃತ್ಯಗಳಿಗೆ ಮೂಲ ಕಾರಣ, ಬಗೆಹರಿಯದೆ ನೆನೆಗುದಿಗೆ ಬಿದ್ದಿರುವ ಜನತೆಯ ಸಮಸ್ಯೆಗಳತ್ತ ಜಗತ್ತಿನ ಗಮನ ಸೆಳೆಯುವುದು. ಅದು ಒಂದು ಪ್ರದೇಶದ ಜನತೆಯ ಸ್ವಾತಂತ್ರ್ಯ ಸ್ವಾಯತ್ತತೆಯ ಪ್ರಶ್ನೆ ಇರಬಹುದು ಅಥವಾ ಬೇರಾವುದೇ ಇರಬಹುದು. ಸಮಸ್ಯೆ ಬಗೆಹರಿಸುವುದರತ್ತ ಗಮನ ನೀಡದೆ, ಅದನ್ನು ಹಾಗೆಯೇ ದಮನಗೊಳಿಸುವ ಪ್ರಯತ್ನದ ವಿರುದ್ಧ ಪ್ರತಿಭಟನಾರ್ಥವಾಗಿ ಅಭಿವ್ಯಕ್ತಿಯಾಗುವ ಕೃತ್ಯವೇ ಆಡಳಿತಗಾರರ ದೃಷ್ಟಿಯಲ್ಲಿ ಭಯೋತ್ಪಾದನೆ ಹಣೆಪಟ್ಟಿ ಪಡೆಯುತ್ತದೆ. ಇದಕ್ಕೆ ನಿದರ್ಶನಗಳು ನಮ್ಮ ಕಣ್ಣು ಮುಂದೆಯೇ ಇವೆ, ಇಲ್ಲಿ ಪಟ್ಟಿಮಾಡುವುದು ಅನಗತ್ಯ.

ಅಂಥವುಗಳಲ್ಲಿ ಅಂತರರಾಷ್ಟ್ರೀಯವಾಗಿ ಗಮನ ಸೆಳೆಯುತ್ತಿರುವುದು ಪ್ಯಾಲೆಸ್ಟೈನ್ ಸಮಸ್ಯೆ. ತೈಲ ಸಮೃದ್ಧವಾಗಿರುವ ಮಧ್ಯ ಪ್ರಾಚ್ಯದಲ್ಲಿ ಎರಡು ಯುದ್ಧಗಳಿಗೆ ಎಡೆಮಾಡಿಕೊಟ್ಟ ಸಮಸ್ಯೆ. ಐವತ್ತಕ್ಕೂ ಹೆಚ್ಚು ವರ್ಷಗಳಿಂದ ಜ್ವಲಂತವಾಗಿರುವ ಈ ಸಮಸ್ಯೆ ಪರಿಹಾರ ಕಾಣದಿರುವುದಕ್ಕೆ ಮುಖ್ಯಕಾರಣ ಇಸ್ರೇಲಿನ ಹಟಮಾರಿತನ ಹಾಗೂ ಅದರ ಪೋಷಕ ಅಮೆರಿಕ. ಮಧ್ಯ ಪ್ರಾಚ್ಯದ ತೈಲ ಸಂಪತ್ತಿನ ಮೇಲೆ ತನ್ನ ಹಿಡಿತ ಇರಿಸಿಕೊಳ್ಳುವ ಅಮೆರಿಕದ ಹಿತಾಸಕ್ತಿಯೇ ಈ ಪ್ರದೇಶದ ಎಲ್ಲ ಅನಾಹುತಗಳಿಗೂ ಮೂಲ ಕಾರಣ. ಎರಡನೇ ಮಹಾಯುದ್ಧದ ನಂತರ ಮಧ್ಯಪ್ರಾಚ್ಯದಲ್ಲಿ ಸಾಮ್ರಾಜ್ಯಶಾಹಿ ಶಕ್ತಿಗಳು, ಮುಖ್ಯವಾಗಿ ಬ್ರಿಟನ್ ಮತ್ತು ಅಮೆರಿಕ, ಯೆಹೂದ್ಯರ ನಾಡಾಗಿ ಇಸ್ರೇಲನ್ನು ಮಾತ್ರ ಸೃಷ್ಟಿಸಿ, ಪ್ಯಾಲಸ್ಟೈನ್ ಜನತೆಯನ್ನು ನಡುನೀರಿನಲ್ಲಿ ಕೈಬಿಟ್ಟದ್ದು ಈಗ ಇತಿಹಾಸ. ವಿಶ್ವಸಂಸ್ಥೆಯ ಟ್ರಸ್ಟಿಷಿಪ್‌ನಲ್ಲಿ ಬ್ರಿಟನ್ನಿನ ಸುಪರ್ದಿನಲ್ಲಿದ್ದ ಹಿಂದಿನ ಪ್ಯಾಲಸ್ಟೈನ್ ಪ್ರದೇಶದಲ್ಲಿ ಇಸ್ರೇಲ್ ರಾಜ್ಯವನ್ನು ನಿರ್ಮಿಸಿದಾಗಲೇ ಪ್ಯಾಲಸ್ಟೈನ್ ರಾಜ್ಯವನ್ನೂ ನಿರ್ಮಿಸಿದ್ದರೆ ಸಮಸ್ಯೆಯೇ ಇರುತ್ತಿರಲಿಲ್ಲ. ಆದರೆ ಅಮೆರಿಕ ಬ್ರಿಟನ್‌ಗಳಿಗೆ ಅದು ಬೇಕಿರಲಿಲ್ಲ. ಅರಬ್ ರಾಷ್ಟ್ರಗಳನ್ನು ಹತೋಟಿಯಲ್ಲಿರಿಸಿಕೊಳ್ಳಲು ಸಾಮ್ರಾಜ್ಯಶಾಹಿಗಳಿಗೆ ಒಂದು ನೆಲೆ ಅಗತ್ಯವಿತ್ತು. ಇಸ್ರೇಲ್ ಆ ಅಗತ್ಯವನ್ನು ಪೂರೈಸಿತು. ಈ ಪ್ರದೇಶದಲ್ಲಿ ಇಸ್ರೇಲಿನ ಅಸ್ತಿತ್ವಕ್ಕೆ ಅಮೆರಿಕದ ಬೆಂಬಲವೇ ಆಧಾರ. ಪ್ಯಾಲಸ್ಟೈನ್ ಜನತೆ ತಮ್ಮ ತಾಯ್ನಾಡಿನ ಸ್ಥಾಪನೆ ಸಲುವಾಗಿ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನೇತೃತ್ವದಲ್ಲಿ ನಿರಂತರವಾಗಿ ಹೋರಾಟ ನಡೆಸುತ್ತ ಬಂದಿದ್ದಾರೆ. ಅರಬ್ ರಾಷ್ಟ್ರಗಳು ಒಂದುಗೂಡಿ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಗೆ , ಅದರ ನಾಯಕ ಯಾಸರ್ ಅರಾಫತ್‌ಗೆ ಪೂರ್ಣ

# ಭೂಮಿಗೌರಿ

ನಾಂದಿ... ಆದಿಯಲಿ ನೆನೆಯುವೆನು ಪಂಚಭೂತದ ಭವವ
ಸ್ವಾದದನುಭವ ಸುಗ್ಗಿಯವಳ
ಕಾದ ಕಾದಲನೊಡನೆ ಕಾವೇರಿ, ದಡ ಬಿಡಿಸಿ,
ಹುದುಗಿದರ್ಥದ ಹಳಕೆ ಮಣಸುವವಳ.

*   *   *

ಆದಿ ಮಣ್ಣನೊಡಲಲ್ಲಿ ತಿರುಗುತಿದೆ ಕಾಲಚಕ್ರ, ತಿಗರಿ.
ಕಡಲ ನೀಲ ಮಡಿಯುಟ್ಟು, ಹಸಿರ ಸಿರಿ ಮೆರೆವ ಭೂಮಿಗೌರಿ.

ಸಂಜೆ ಕ್ಯಾಂವಿ,* ಕತ್ತಲೆಯ ಕಪ್ಪು, ಬಾನ-ಪೇವಡಿ* ಯ ನುಣುಪುಲೇಪ
ಐದು ಫಲಗಳುಡಿಯಲ್ಲಿ, ಮುಗಿಲ ಮುಚ್ಚಳಿಕೆ, ಜೋಡು ದೀಪ
ಬಿಳಿ ಮೋಡದರಳೆ ಎಳೆ ಹೆಂಜೆ, ಹೊಂಬಿಸಿಲ ತೊಡೆದ ಗೆಜ್ಜೆವಸ್ತ್ರ.
ದಟ್ಟ ಕಾಡುಗಳೇ ಕರಿಕೆ-ಪತ್ರಿ, ತಾರೆ ಮುತ್ತುಗಳ ಕೊರಳಸೂತ್ರ.

ಶ್ರಾವಣದ ಜಡಿಮಳೆಗೆ ಸಿಕ್ಕಬೀಜ ಫಲಿಸುವುದು ತಾನೇ ಮಾಗಿ
ರಾಸಲೀಲೆಯಲಿ ಕರೆಯುವುದು ಕೊಳಲು, ರಸತುಂಬಿ ಕೊಳಲು ಬಾಗಿ
ಮೈಯ ಮಣ್ಣನಲಿ ಹುಟ್ಟಿದವರು ಹುಡುಕುವರು ತಾಯ ಮೊಗವ
ಎದೆಹಾಲು ಚಿಮ್ಮಿ, ಎತ್ತರದ ರಾಜಮುಖ ತೊಯ್ಯುವಂಥ ಜಗವ.

ಮತ್ತೆ ಮತ್ತೆ ಎದುರಾಗಿ ಭಾಗ್ಯ, ಕರೆಯುವುವು ಕರೆಯಲೆಂದು
'ಬಾಜಾರು ಬಿಟ್ಟು ಬದಲ್ದಾದೀ' ಹಿಡಿದವರೂ, ಕೂಡಿದರು ಅಲ್ಲೇ ಬಂದು.
ಕಣ್ಣು ತೆರೆದು ನೋಡುವುದರೊಳಗೆ ಬದಲಾಗಿ ಬಿಡುವ ವಿಶ್ವ
ಕಳೆದುಕೊಂಡುದನು ಮರಳಿ ಪಡೆದು ಮರಳುವುದು ಮರುಳು-ಜೀವ.

ತನ್ನ ಕಾಲೋದ್ಭವ ಸುಪುಷ್ಪಗಳ ಕೈಯಿಂದ ಪೂಜೆಗೊಂಡು
ಭಾವ, ಚಿತ್ತ, ಕುಡಿ ಚಿವುಟಿ, ಸಮಯದಾರತಿಯ ನಿಳಿಸಿದಂದು



'ಬೆತ್ತಕ್ಕೆ ಹೊಳೆವ ಪುತ್ಥಳಿಯ ಗೊಂಬೆ' ತಾನಾಗಿ ಸೂಲಗಿತ್ತಿ
ತಾನೇ ಹಡೆದುದನು ತಾನೇ ತೂಗುವದು ತಾಯಿಗೊಂದು ತೃಪ್ತಿ

ದಿವಸೀ, ಮಂಗಳೆ, ಜೇಷ್ಠಾಗೌರಿಯರ ಪಂಚಮಿಗೆ ಭೂಮಿ ತವರು
ಮಣ್ಣೆತ್ತು, ನಾಗ, ಗುಳ್ಳವ್ವ, ಗಣಪತಿಯ, ಹಸಿರು ಮಾಸದವರು.
ಚೈತ್ರ-ಗೌರಿ, ಸಂಪ್ರೀತೆ, ಮುಕ್ತೆ, ಕೋದಂಡದವಗೆ ನಿಷ್ಠೆ
ಕೊಳಲನುಡಿಸಿ ಕರೆವವನ ರಾಣಿ, ಶ್ರಾವಣದ ಸಂಪ್ರತೀಷ್ಠೆ

ಪಿತೃ-ಪಿತಾಮಹರ ನೆನೆಯದೇನೆ ಮುಂದೆಲ್ಲಿ ಬೇರೆ ಘಟ್ಟ ?
ಸೀಮೋಲ್ಲಂಘನದ ವಿಜಯ, 'ಬನ್ನಿ' ಎಂದಷ್ಟೆ ಬಿಡುವಪಟ್ಟ.
ನಿರಭ್ರ, ನೀಲ ಕಾರ್ತೀಕದಾಗಸಕೆ ವಸಂತದೊಂದದೃಷ್ಟ
ಧ್ವಜಾರೋಹಣವು ಭೂಮಿತುಂಬ, ಅವರವರಿಗವರ ರಾಷ್ಟ್ರ.

*   *   *

ಭರತವಾಕ್ಯ

ಮಂಗಳಂ ಜಯವೆನ್ನಿ, ಮಂಗಳಂ ಶುಭವೆನ್ನಿ
ಜಗದಂಗಳದಿ ಕಂಗಳ ಮುತ್ತು ಪವಣಿಸುವಳಿಗೆ
ರಂಗಿನಾಟಕೆ ಜೀವ-ಗಂಗಾಳಗಳ ತುಂಬ
ಕೆಂಪು ಕಲಿಸುವ ಶೃಂಗಾರ ರತಿಗೆ.

'ಕ್ಯಾಂವಿ', 'ಪೇವಡಿ' : ಇವು ನಿಸರ್ಗದಲ್ಲೇ ದೊರೆಯುವ ಮಣ್ಣುಗಳು. ಶ್ರಾವಣ ಮಾಸದಲ್ಲಿ 'ಗಡಿಗೆ-ಗೌರಿ'ಯ ಮೇಲೆ ಚಿತ್ತಾರ ಬಿಡಿಸಲು ಬಳಸುತ್ತಾರೆ.

**ಆನಂದ ಝುಂಜರವಾಡ**
ಆನಂದನಗರ, ಮುಧೋಳ

ಬೆಂಬಲ ನೀಡುತ್ತಿದ್ದ ಕಾಲವೊಂದಿತ್ತು. ಅಮೆರಿಕ ನಡೆಸಿದ ಷಡ್ಯಂತ್ರದಿಂದ ಅರಬ್ ರಾಷ್ಟ್ರಗಳ ಐಕ್ಯತೆ ಮುರಿದಿದೆಯಲ್ಲದೆ, ಅರಬ್ ಆಡಳಿತಗಳು ನಿಷ್ಕ್ರಿಯಗೊಂಡಿವೆ. ಸುದೀರ್ಘ ಹೋರಾಟ ಹಾಗೂ ಅಂತರರಾಷ್ಟ್ರೀಯ ಒತ್ತಾಯದಿಂದಾಗಿ ಇಸ್ರೇಲ್ ಪ್ಯಾಲಸ್ಟೈನ್ ಅರಬ್ಬರಿಗೆ ಕೆಲವು ರಿಯಾಯಿತಿಗಳನ್ನು ನೀಡಬೇಕಾಗಿ ಬಂದಿತು. ಮುಖ್ಯವಾಗಿ ಪ್ಯಾಲಸ್ಟೈನ್ ಸ್ವತಂತ್ರನಾಡಿನ ಸ್ಥಾಪನೆಗೆ ಪೂರ್ವಭಾವಿಯಾಗಿ ಪ್ಯಾಲಸ್ಟೈನ್‌ನ ಇಸ್ರೇಲಿ ಆಕ್ರಮಿತ ಪ್ರದೇಶದಲ್ಲಿ ಸ್ವಯಮಾಡಳಿತೆಯ ಸ್ಥಾಪನೆ. ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನೇತೃತ್ವದಲ್ಲಿ ಸ್ವಯಮಾಡಳಿತೆ ಸ್ಥಾಪನೆಗೊಂಡರೂ ಇಸ್ರೇಲ್ ಮಾತ್ರ ಒಪ್ಪಂದದ ಅಂಶಗಳನ್ನು ಪೂರ್ಣವಾಗಿ ಕಾರ್ಯಗತ ಮಾಡದೇ ಹೋದ್ದರಿಂದ ಈ ಪ್ರದೇಶದಲ್ಲಿ ನಿರಂತರವಾಗಿ ಘರ್ಷಣೆಗಳು ಜರುಗುತ್ತಲೇ ಇವೆ.

ಇಸ್ರೇಲ್ ಒಪ್ಪಂದವನ್ನು ಉಲ್ಲಂಘಿಸಿ ತನ್ನ ವಿಸ್ತರಣಾ ಕಾರ್ಯವನ್ನು ಮುಂದುವರಿಸುತ್ತಿರುವುದನ್ನು ವಿರೋಧಿಸುವವರನ್ನು ಭಯೋತ್ಪಾದಕರು ಎಂದು ಕರೆದು ದಬ್ಬಾಳಿಕೆ ನಡೆಸುತ್ತಿರುವುದರಿಂದ ಪರಿಸ್ಥಿತಿ ತೀವ್ರಗೊಂಡಿದೆ. ಅನಿವಾರ್ಯವಾಗಿ ಪ್ಯಾಲಸ್ಟೈನ್ ಅರಬ್ ಜನತೆಯ ತಾಯ್ನಾಡಿನ ಸ್ಥಾಪನೆಗೆ ಬೆಂಬಲ ಹೆಚ್ಚುತ್ತಿರುವ, ಇಸ್ರೇಲ್ ಒಪ್ಪಂದಗಳನ್ನು ಪಾಲಿಸಬೇಕೆಂಬ ಒತ್ತಾಯ ಬರುತ್ತಿರುವ, ಹಿನ್ನೆಲೆಯಲ್ಲಿ ಇಸ್ರೇಲ್ ಭಯೋತ್ಪಾದನೆಯನ್ನು ಹತ್ತಿಕ್ಕುವ ಹೆಸರಿನಲ್ಲಿ ಪ್ಯಾಲಸ್ಟೈನ್ ಪ್ರದೇಶದ ಮೇಲೆ ಆಕ್ರಮಣ ನಡೆಸಿದೆ. ಪ್ಯಾಲಸ್ಟೈನ್ ಪ್ರದೇಶದಲ್ಲಿ ಸ್ಥಾಪನೆಗೊಂಡಿರುವ ಯಾಸರ್ ಅರಾಫತ್ ಸರಕಾರ ಭಯೋತ್ಪಾದಕರ ಮೇಲೆ ಕ್ರಮ ತೆಗೆದುಕೊಳ್ಳುವುದರಲ್ಲಿ ವಿಫಲಗೊಂಡಿದೆ, ಅದರಿಂದ ತಾನೇ ಕ್ರಮ ಕೈಗೊಳ್ಳುತ್ತಿದೆ ಎನ್ನುವುದು ಇಸ್ರೇಲಿನ ವಾದ. ಅರಾಫತ್‌ರನ್ನೇ ಭಯೋತ್ಪಾದಕ ಎಂದು ಕರೆದಿರುವ ಇಸ್ರೇಲ್, ಅವರ ಕಚೇರಿಯ ಮೇಲೂ ಧಾಳಿ ನಡೆಸಿದೆಯಲ್ಲದೆ, ಕೊಲ್ಲುವುದಕ್ಕೂ ಹಂಚಿಕೆ ಹೂಡಿದೆ. ಪ್ಯಾಲಸ್ಟೈನಿಯನ್ನರ ಆಡಳಿತದಲ್ಲಿರುವ ಪ್ರದೇಶಗಳಿಗೆ ಇಸ್ರೇಲಿ ಟ್ಯಾಂಕುಗಳು ಗೂಳಿಯಂತೆ ಬೇಕೆಂದ ಕಡೆಗೆ ನುಗ್ಗುತ್ತಿವೆ, ಇಸ್ರೇಲಿನ ಸೈನಿಕರು ಅಮಾಯಕ ಪ್ಯಾಲಸ್ಟೈನ್ ಜನರನ್ನು ಪಶುಗಳಂತೆ ಗುಂಡಿಕ್ಕಿ ಕೊಲ್ಲುತ್ತಿದ್ದಾರೆ. ಭಯೋತ್ಪಾದಕರ ವಿರುದ್ಧ ಸಮರದ ಹೆಸರಿನಲ್ಲಿ ಪ್ಯಾಲಸ್ಟೈನ್ ಜನರನ್ನು ದಬ್ಬಾಳಿಕೆಯಿಂದ ಭಯಗೊಳಿಸಿ ದಮನ ಮಾಡುವುದೇ ಇಸ್ರೇಲಿ ಆಡಳಿತಗಾರರ ಗುರಿ ಎಂದು ತೋರುತ್ತಿದೆ. ಇಸ್ರೇಲಿ ಆಡಳಿತಗಾರರ ಈ ಅಟ್ಟಹಾಸಕ್ಕೆ ಇದಿರಾಗಿ ಅರಬ್ ದೇಶಗಳ ನಾಯಕರು ಸೊಲ್ಲೆತ್ತದಿರುವುದು ಶೋಚನೀಯ. ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಪ್ಯಾಲಸ್ಟೈನ್ ರಾಜ್ಯದ ಸ್ಥಾಪನೆಗೆ ಇತ್ತೀಚೆಗೆ ನೀಡಿದ ಬೆಂಬಲ ಬಾಯಿಮಾತಿನಲ್ಲಷ್ಟೇ ಹೊರತು ಬೇರೇನಲ್ಲ ಎಂಬುದು ಸ್ಪಷ್ಟ. ಏಕೆಂದರೆ ಈವರೆಗೆ ಪ್ಯಾಲಸ್ಟೈನ್ ಪ್ರದೇಶದಲ್ಲಿ ಇಸ್ರೇಲ್ ನಡೆಸಿರುವ ದಾಂಧಲೆಗೆ ಈ ಇಬ್ಬರು ನಾಯಕರೂ ಈವರೆಗೆ ಚಕಾರವೆತ್ತಿಲ್ಲ. ಹಾಗಾಗಿ ಪರಿಸ್ಥಿತಿ ಈಗ ಮತ್ತೆ ಹಿಂದಿನ ಗತಿಗೇ ಬರುತ್ತಿದೆ. ಅರಬ್ ದೇಶಗಳನ್ನು ನಿಷ್ಕ್ರಿಯಗೊಳಿಸುವುದರಲ್ಲಿ ಸಫಲಗೊಂಡಿರುವ ಅಮೆರಿಕಾಗೆ ಪ್ಯಾಲಸ್ಟೈನ್ ಸಮಸ್ಯೆ ಬಗೆಹರಿಸುವುದು ಬೇಕಿಲ್ಲ. ಅದರಿಂದಲೇ ಇಸ್ರೇಲಿನ ಅಕ್ರಮಗಳಿಗೆ ಮೌನ ಸಮ್ಮತಿ ನೀಡಿದೆ. ಅಮೆರಿಕದ ಕೈಗೊಂಬೆಗಳಂತಾಗಿರುವ ತಮ್ಮ ನಾಯಕರ ನಿಷ್ಕ್ರಿಯತೆಯಿಂದ ಬೇಸತ್ತಿರುವ ಅರಬ್ ಜಗತ್ತಿನ ಜನತೆ ತಮ್ಮ ಅತೃಪ್ತಿಯನ್ನು ವ್ಯಕ್ತಗೊಳಿಸಲು ಅನ್ಯವಿಧಾನಗಳನ್ನು ಅನುಸರಿಸುತ್ತಿರುವುದನ್ನು ಕಾಣಬಹುದು. ಅಮೆರಿಕದ ಮೇಲೆ ಭಯೋತ್ಪಾದಕರು ನಡೆಸಿದ ಧಾಳಿಯಲ್ಲಿ ಭಾಗವಹಿಸಿದ್ದವರೆಲ್ಲ ಈ ಪ್ರದೇಶದಿಂದಲೇ ಬಂದವರೆಂಬುದನ್ನು ಮರೆಯುವಂತಿಲ್ಲ. ಪ್ಯಾಲಸ್ಟೈನ್ ಜನತೆಯ ನ್ಯಾಯವಾದ ಬೇಡಿಕೆಯಾದ ಪ್ಯಾಲಸ್ಟೈನ್ ರಾಜ್ಯ ಸ್ಥಾಪನೆಯಾಗುವವರೆಗೆ ಪರಿಸ್ಥಿತಿ ಸುಧಾರಿಸದು. ಇದನ್ನು ಇಸ್ರೇಲಿ ನಾಯಕರು, ಅಮೆರಿಕದ ಆಡಳಿತಗಾರರು, ಎಷ್ಟು ಬೇಗ ಮಾನ್ಯ ಮಾಡಿದರೆ ಅಷ್ಟು ಒಳ್ಳೆಯದು.

ಇನ್ನು ನಮ್ಮ ದೇಶಕ್ಕೆ ಸಂಬಂಧಪಟ್ಟಂತೆ ಕಾಶ್ಮೀರದ ಪರಿಸ್ಥಿತಿ ಮತ್ತಷ್ಟು ಹದಗೆಡುತ್ತಿದೆ. ಪ್ರತಿದಿನ ಪತ್ರಿಕೆಗಳಲ್ಲಿ ಮಾಧ್ಯಮಗಳಲ್ಲಿ ಭಯೋತ್ಪಾದಕ ಧಾಳಿಯಿಂದಾಗಿ ಅಮಾಯಕ ಜನರು ಸಾವಿಗೀಡಾಗುತ್ತಿರುವುದು ವರದಿಯಾಗುತ್ತಲೇ ಇದೆ. ಪಾರ್ಲಿಮೆಂಟ್ ಭವನದ ಮೇಲೆ ದಾಳಿ ಮಾಡಲು ಪ್ರಯತ್ನಿಸಿದ ಭಯೋತ್ಪಾದಕರ ಕೃತ್ಯಕ್ಕೂ ಕಾಶ್ಮೀರದ ಉಗ್ರಗಾಮಿಗಳಿಗೂ ಸಂಬಂಧವಿದೆಯೆಂಬುದು ಖಚಿತಗೊಂಡಿದೆ. ಕಾಶ್ಮೀರದ ಸಮಸ್ಯೆ ಇತ್ಯರ್ಥವಾಗುವವರೆಗೆ ಪರಿಸ್ಥಿತಿ ಸುಧಾರಿಸದು ಎನ್ನುವುದು ನಿರ್ವಿವಾದ. ಭಾರತ ಮತ್ತು ಪಾಕಿಸ್ತಾನಗಳ ನಾಯಕರು ಸದ್ಭಾವನೆಯ ಮುತ್ಸದ್ದಿತನದಿಂದ ನೇರವಾಗಿ ಮಾತುಕತೆ ನಡೆಸಿ ಒಂದು ಇತ್ಯರ್ಥಕ್ಕೆ ಬಂದರೆ ಮಾತ್ರ ಕಾಶ್ಮೀರ ಸಮಸ್ಯೆಗೆ ಪರಿಹಾರ ಸಾಧ್ಯ. ಆದರೆ ಎರಡೂ ದೇಶಗಳಲ್ಲಿ ಅಂಥ ವಾತಾವರಣ ಸೃಷ್ಟಿಯಾಗಿಲ್ಲ. ಆಗ್ರಾದಲ್ಲಿ ನಡೆದ ಭಾರತ ಪಾಕೀಸ್ತಾನ ಶೃಂಗಸಭೆ ವಿಫಲಗೊಂಡುದು ವಿಷಾದನೀಯ. ಸಮರ್ಪಕವಾದ ಪೂರ್ವ ಸಿದ್ಧತೆಯ ಕೊರತೆಯೇ ಅದಕ್ಕೆ ಕಾರಣ. ಪರಿಸ್ಥಿತಿ ಕೈಮೀರಿ ಹೋಗುವುದಕ್ಕೆ ಮುನ್ನ ಎರಡೂ ದೇಶಗಳ ವರಿಷ್ಠರು ನೇರವಾದ ಮಾತುಕತೆಗಳಲ್ಲಿ ತೊಡಗುವುದೊಂದೇ ಸಮಸ್ಯೆಯ ಪರಿಹಾರಕ್ಕಿರುವ ಮಾರ್ಗ. ಅದಕ್ಕೆ ಪೂರಕವಾದ ವಾತಾವರಣ ಕಲ್ಪಿಸಲು ಎರಡೂ ರಾಷ್ಟ್ರಗಳು ಪ್ರಯತ್ನಿಸಬೇಕಾಗಿದೆ. ಮಾನವೀಯ ದೃಷ್ಟಿಯಿಂದ, ಅಮಾಯಕ ಕಾಶ್ಮೀರ ಜನತೆಯ ರಕ್ಷಣೆಯ ದೃಷ್ಟಿಯಿಂದ, ಇದು ಅತ್ಯಗತ್ಯ ಹಾಗೂ ಜರೂರಾಗಿ ಆಗಬೇಕಾದ್ದು. ಇಂದು ಉದ್ಭವಿಸಿರುವ ಸೂಕ್ಷ್ಮ ಪರಿಸ್ಥಿತಿಯಲ್ಲಿ ಭಾವುಕತೆಯಿಂದ ವರ್ತಿಸಿ ರಣಕಹಳೆ ಊದಿ, ಯುದ್ಧಕ್ಕೆ ಕೈಹಾಕುವುದು ಮೂರ್ಖತನವಾಗುತ್ತದೆ. ಭಯೋತ್ಪಾದಕರ ಕೃತ್ಯಗಳನ್ನು ತಡೆಯಲು ಬಿಗಿ ಕ್ರಮ ತೆಗೆದುಕೊಳ್ಳುವುದರ ಜೊತೆಗೆ, ಪಾಕೀಸ್ತಾನದ ಆಡಳಿತೆಯ ಮೇಲೆ ಒತ್ತಡ ತರಲು ಎಲ್ಲ ಮಾರ್ಗಗಳನ್ನೂ ಅನುಸರಿಸುವುದು ವಿವೇಕ ಮಾರ್ಗ. ■

# ಹೂವಿನಿಂದ ನಾರಿಗೆ ಸ್ವರ್ಗ

ಎಂ. ವಿ. ಕೃಷ್ಣಸ್ವಾಮಿ

**ಹೂ**ವಿನಿಂದ ನಾರಿಗೆ ಸ್ವರ್ಗ! ಈ ಗಾದೆ ಯಾರಿಗೆ ತಾನೆ ಗೊತ್ತಿಲ್ಲ?

ನನ್ನ ಜೀವನದಲ್ಲಿ ಆದ ಆ ಗಾದೆಯ ಅನುಭವವನ್ನು ಕುರಿತೇ, ಈ ಲೇಖನ.

ನನ್ನ ೧೦ನೆಯ ವಯಸ್ಸಿನಲ್ಲೇ - ಅಂದರೆ ೧೯೩೩ರಲ್ಲೇ - ಸರ್. ಎಂ. ವಿಶ್ವೇಶ್ವರಯ್ಯನವರ ಪ್ರತಿಭೆ, ದಕ್ಷತೆ, ಶುಚಿಯ ಜೀವನದ ಬಗ್ಗೆ ಕೇಳಿದ್ದೆ. ಆಗ ಮೈಸೂರಿನಲ್ಲಿ ಇನ್ನೂ ಮಹಾರಾಜರ ಕಾಲ. ದಿವಾನ್ ಪದವಿ ಅತ್ಯಂತ ಉನ್ನತ ಹುದ್ದೆ. ಆತ ಸರ್ವಾಧಿಕಾರಿ. ನಾನು ಹುಟ್ಟುವ ವೇಳೆಗೆ ಎಂ. ವಿ. ಅವರು ಆ ಹುದ್ದೆಯನ್ನು ಅಲಂಕರಿಸಿ ನಿವೃತ್ತರಾಗಿದ್ದರು. ಆದರೂ ಅವರ ಹೆಸರು, ಹಿರಿಮೆ ಹಚ್ಚಹಸಿರಾಗಿಯೇ ಉಳಿದಿದ್ದವು.

ಇಂದಿನ ಕೃಷ್ಣರಾಜಸಾಗರ - ಬೃಂದಾವನ - ಆಗ ಕನ್ನಂಬಾಡಿ ಕಟ್ಟೆಯೆಂದೇ ಪ್ರಸಿದ್ಧವಾಗಿತ್ತು. ನಾನು ನನ್ನ ೧೦ನೆಯ ವಯಸ್ಸಿನಲ್ಲೇ ಅಲ್ಲಿಗೆ ಮೊದಲ ಬಾರಿ ಹೋದಾಗ ಎಲ್ಲರ ಬಾಯಲ್ಲೂ ಎಂ. ವಿ. ಅವರ ಗುಣಗಾನ ಪ್ರಶಂಸೆಗಳನ್ನೇ ಕೇಳಿದ್ದೆ. ಕೆಲವೊಂದು ಕಟ್ಟುಕತೆಗಳನ್ನೂ ಕೂಡ. ಬ್ರಿಟಿಷರು ಅವರ ಮೆದುಳನ್ನು Insure ಮಾಡಿಸಿದ್ದರಂತೆ. ಎಂ. ವಿ. ಅವರು ಸ್ವರ್ಗಸ್ಥರಾದನಂತರ ಆ ಮೆದುಳಿನ ಒಳಗುಟ್ಟನ್ನು ಪರೀಕ್ಷೆ ಮಾಡುವುದಕ್ಕೆ ! ನನ್ನ ವಯಸ್ಸಿಗನುಗುಣವಾಗಿ ಈ ವಿಷಯಗಳನ್ನೆಲ್ಲಾ ಕೇಳಿ ಹೆಮ್ಮೆ ಪಟ್ಟಿದ್ದೆ. ಸಮಯ ಸಂದರ್ಭ ಸಿಕ್ಕಿದಾಗಲೆಲ್ಲಾ ಕತೆಗಳನ್ನು ಇನ್ನೂ ವಿಸ್ತರಿಸಿ ಹಂಚಿ ಹರಡುತ್ತಿದ್ದೆ !

೧೯೫೩ - ೫೫ರಲ್ಲಿ ಮಡಕೇರಿಗೆ ಹೋಗುವ ರಸ್ತೆಯಲ್ಲಿ, ಮೈಸೂರಿನ ಹತ್ತಿರವೇ ಇದ್ದ ಇಲವಾಲ ಬಂಗಲೆಯಲ್ಲಿ ಯುನೆಸ್ಕೋ ಅಂತರರಾಷ್ಟ್ರೀಯ ಶಿಕ್ಷಣ ಶಿಬಿರ ಒಂದರಲ್ಲಿ ಸಹಾಯಕ ನಿರ್ದೇಶಕನಾಗಿದ್ದೆ. ಆಂಗ್ಲೇಯ ಜಾನ್ ಬವರ್ಸ್ ನಿರ್ದೇಶಕರಾಗಿದ್ದರು. ಶಿಬಿರದ ವಾರ್ಷಿಕೋತ್ಸವ ಸಮಾರಂಭಕ್ಕೆ ಚಕ್ರವರ್ತಿ ರಾಜಗೋಪಾಲಚಾರಿ (ರಾಜಾಜಿ), ಸರ್. ಎಂ. ವಿ, ಸರ್. ಸಿ. ವಿ. ರಾಮನ್ ಇವರಲ್ಲೊಬ್ಬರನ್ನು ಕರೆಸಿಕೊಳ್ಳುವುದು ಎಂದು ನಿಶ್ಚಯಿಸಲಾಗಿತ್ತು. ರಾಜಾಜಿಯವರು ತಮ್ಮ ನಿಯಮ ಹಾಗೂ ಸಾಮಾನ್ಯ ಪದ್ಧತಿಯಂತೆ ಪೋಸ್ಟ್‌ಕಾರ್ಡಿನಲ್ಲಿ ಸ್ವಹಸ್ತದಿಂದಲೇ ಬರೆದು ವಿನಯ ಪೂರ್ವಕವಾಗಿ ತಮಗೆ ಬರಲು ಸಾಧ್ಯವಿಲ್ಲವೆಂದು ಬರೆದಿದ್ದರು. ಸರಿ, ಇನ್ನಿಬ್ಬರನ್ನು ಸಂಪರ್ಕಿಸುವ ಜವಾಬ್ದಾರಿ ನನ್ನದಾಯಿತು.

ಪೂರ್ವನಿಶ್ಚಿತ ನಿರ್ದಿಷ್ಟ ಸಮಯವಲ್ಲದೆ, ಸರ್. ಎಂ. ವಿ. ಅವರು ಯಾರನ್ನೂ ಯಾವಾಗಲೂ ನೋಡುವುದಿಲ್ಲ ಎಂಬ ಪ್ರತೀತಿ ಬಲವಾಗಿತ್ತು. ಬೆಂಗಳೂರಿಗೆ ಬಂದು ಅವರನ್ನು ನೋಡುವ ಸಮಯವನ್ನು ಗೊತ್ತುಮಾಡಿಕೊಳ್ಳುವುದಕ್ಕೆ ಅವರ ಮನೆಗೆ ಹೋದೆ. ಈಗ ವಿಶ್ವೇಶ್ವರಯ್ಯ ಟವರ್ಸ್ ಇರುವ ಜಾಗದಲ್ಲೇ ವಿಶಾಲವಾದ ಕಾಂಪೋಂಡಿನಲ್ಲಿ ಅವರ ಚಿಕ್ಕ ಚೊಕ್ಕ ಬಂಗಲೆ ಇತ್ತು. ಸಂಜೆಯ ಸಮಯ ಐದಿರಬಹುದು. ಮನೆಯ ಮುಂದೆ ತಡೆದು ನಿಲ್ಲಿಸುವ, ಪ್ರಶ್ನಿಸುವ ಯಾವ ಸೆಂಟ್ರಿ, ಗಾರ್ಡ್ ಅಥವಾ ದ್ವಾರಪಾಲಕರಾಗಲಿ, ಇರಲಿಲ್ಲ. ಅನುಮಾನಿಸುತ್ತಲೇ ಒಳಗೆ ಹೋದೆ. ಬಂಗಲೆಯ ಮುಂಭಾಗದಲ್ಲೇ ಇದ್ದ ಕೆಲವು ರೂಮುಗಳೊಂದರಲ್ಲಿ ಅವರ ಕಾರ್ಯದರ್ಶಿಯವರಿದ್ದರು. ಅವರ ಹೆಸರು ಷಡಗೋಪಾಚಾರ್. ೬೦ ವಯಸ್ಸಿನ ಹಿರಿಯರು. ಅವರು ತಮ್ಮ ಕೆಲಸಕ್ಕೆ ಸೈಕಲ್ಲಿನಲ್ಲೇ ಬಂದು ಹೋಗುತ್ತಿದ್ದರು. ಇನ್ನೇನು ಹೊರಡುವ ಸಿದ್ಧತೆಯಲ್ಲಿದ್ದರು. ನಾನು ಬಂದ ಕಾರಣವನ್ನು ಹೇಳಿದಾಗ, ಸಾವಧಾನವಾಗಿ ಅತಿ ವಿನಯದಿಂದ, ತಾಳಿ ಅವರು ಆಫೀಸಿನಲ್ಲಿದ್ದಾರೆ. ನಾನು ಕೇಳಿ ಬಂದು ಹೇಳುತ್ತೇನೆ ಎಂದರು. ಕೆಲವೇ ಕ್ಷಣಗಳಲ್ಲಿ ಹಿಂತಿರುಗಿದವರು - ಬನ್ನಿ, ಅವರು ಈಗಲೇ ತಮ್ಮನ್ನು ನೋಡುತ್ತಾರಂತೆ ಎಂದರು. ನನಗೆ ಆಶ್ಚರ್ಯವಲ್ಲ, ದಿಗ್ಭ್ರಮೆಯಾಯಿತು. ಜನ ಹೇಳುವುದೇನು? ನಿಜ ಸ್ಥಿತಿ ಏನು? ಎಂದು.

ಉಡುಗೆ, ತೊಡಿಗೆಯಲ್ಲೂ ತಮ್ಮದೇ ಆದ ವಿಶಿಷ್ಟ ಶೈಲಿ, ರೀತಿ, ಶಿಸ್ತು, ನಿಯಮಗಳನಿಟ್ಟಿದ್ದ ಎಂ. ವಿ. ಅವರು, ಸೂಟು ಬೂಟು, ವೇಸ್ಟ್‌ಕೋಟ್, ಟೈ, ಭರ್ಜರಿ ಮೈಸೂರು ಜರಿಪೇಟ ಧರಿಸಿ ಕುಳಿತಿದ್ದರು. ನಾನು ಆಫೀಸ್ ರೂಂ ಪ್ರವೇಶಿಸುತ್ತಿದ್ದಂತೆಯೇ ಕುರ್ಚಿಯಿಂದ ಎದ್ದು ನಿಂತು ನಮಸ್ಕರಿಸಿ ಬನ್ನಿ ಕುಳಿತುಕೊಳ್ಳಿ ಎಂದವರು ನಾನು ಕುಳಿತ ಮೇಲೆಯೇ, ತಾವೂ ಕುಳಿತರು ! ಆಗ ಸರ್. ಎಂ. ವಿ. ಅವರಿಗೆ ೯೩ -೯೪ ವಯಸ್ಸು !

ಈಗ ನಾನು ವಾರಕ್ಕೆ ಮೂರು ದಿವಸ Office attend ಮಾಡ್ತೀನಿ. ಊಟದ ಸಮಯ ಬಿಟ್ಟು ೧೦ ರಿಂದ ೫ರವರೆಗೆ. ಈ ಹೊತ್ತು ವಿಶೇಷ ಕೆಲಸ ಅಥವಾ Visitors ಯಾರೂ ಇಲ್ಲವಾಗಿದ್ದರಿಂದ ನಿಮ್ಮನ್ನು ನೋಡಲು ಅನುಕೂಲವಾಯಿತು, ಎಂದರು. (ನಮ್ಮ ಸಂಭಾಷಣೆ ನಡೆದದ್ದು ಇಂಗ್ಲಿಷ್‌ನಲ್ಲೇ).



ನಾನು ಬಂದ ಕೆಲಸವನ್ನು ಅವರಿಗೆ ಸಂಕ್ಷಿಪ್ತವಾಗಿ ಬೇಗ ತಿಳಿಸಿದೆ. ಅದಕ್ಕವರು ಕೇವಲ ಭಾಷಣ ಮಾಡುವುದಕ್ಕೆ ಇಲ್ಲಿಂದ ಮೈಸೂರಿಗೆ ಬಂದು ಹೋಗಿ ಎನ್ನುತ್ತೀರಾ? ಈ ನನ್ನ ವಯಸ್ಸಿನಲ್ಲಿ? ಅಷ್ಟೇ ಮಾತುಗಳಲ್ಲಿ, ಅದು ಕಷ್ಟ, ಸಾಧ್ಯವಿಲ್ಲ, ಎಂದು ಅವರು ಕೊಟ್ಟ ಸೂಚನೆಯನ್ನು ನಾನು ಮನಗೊಂಡು ನನ್ನನ್ನು ನೋಡಿದ್ದಕ್ಕಾಗಿ ಅವರಿಗೆ ಹೃದಯ ತುಂಬಿ, ವಂದಿಸಿ ಹೊರಡಲು ಎದ್ದೆ. ಆದರೆ ಅವರು ನನ್ನನ್ನು ತಡೆದು, ಕುಳಿತುಕೊಳ್ಳಿ ಎಂದು ಸಂಜ್ಞೆಮಾಡಿ ಮುಂದೆ ಅರ್ಧ ಮುಕ್ಕಾಲು ಘಂಟೆಯಷ್ಟು, ನನ್ನ ವಿಷಯ, ನಾನು ಮಾಡುತ್ತಿರುವ ಕೆಲಸ ಎಲ್ಲವನ್ನೂ ಕೂಲಂಕಷವಾಗಿ ಪ್ರಶ್ನಿಸಿ, ಸಾವಧಾನವಾಗಿ, ತಾಳ್ಮೆಯಿಂದ ಕಿವಿಗೊಟ್ಟು ಗ್ರಹಿಸಿದರು. ಆ ಕಾಲಕ್ಕೇ ಟೆಲಿವಿಷನ್ ಭವಿಷ್ಯವೇನು? ಎಂದೂ ಪ್ರಶ್ನಿಸಿದ್ದರು. ಅದು ನನಗೆ ಕೇವಲ ಸಂದರ್ಶನವಲ್ಲ, ಪರೀಕ್ಷೆಯೇ ಆಯಿತು ! ಪುನಃ ಅವರ ಆಫೀಸಿನಿಂದ ಹೊರ ಬೀಳುವಾಗಲೂ ಕುರ್ಚಿಯಿಂದ ಎದ್ದುನಿಂತು ಕೈಮುಗಿದು ಬೀಳ್ಕೊಟ್ಟರು ! ಹೊರಗೆ ಬಂದು ಅವರ ಸೆಕ್ರೆಟರಿಯವರಿಗೆ ವಂದಿಸಿ, ಮನೆಯ ಕಡೆ ಹೊರಟಾಗ ದಾರಿಯುದ್ದಕ್ಕೂ ತುಂಬಿದ ಕೊಡ ತುಳುಕುವುದಿಲ್ಲ ಎಂಬ ಗಾದೆ ನನ್ನ ಮನಸ್ಸಿನಲ್ಲಿ ಪಲ್ಲವಿಯಂತೆ ಪ್ರತಿಧ್ವನಿಸುತ್ತಿತ್ತು.

ಪುನಃ ಸರ್. ಎಂ. ವಿ. ಅವರ ದರ್ಶನವಾಗಿದ್ದು ೧೯೫೮-೫೯ರ ಅವಧಿಯಲ್ಲಿ. ಆಗ ನಾನು ಭಾರತ ಸರ್ಕಾರದ Film Divisionನಲ್ಲಿ ಕೆಲಸದಲ್ಲಿದ್ದೆ. ನಿರ್ದೇಶಕನಾಗಿ. ಎಂ. ವಿ. ಅವರ ಜೀವನ ಚರಿತ್ರೆಯ ಸಾಕ್ಷ್ಯ ಚಿತ್ರ ತಯಾರಿಸುವ ಕೆಲಸ ನನ್ನ ಪಾಲಿಗೆ ಬಂದಿತ್ತು. ಚಿತ್ರವನ್ನು ಮಾಡಲು, ಅವರ ಒಪ್ಪಿಗೆ, ಅನುಮತಿಯನ್ನು ಪಡೆಯಲು ಬೆಂಗಳೂರಿಗೆ ಬಂದು, ಅವರನ್ನು ಕಾಣಲು ಹೋದೆ. ಹಿಂದೆ ನೋಡಿದ್ದ ಅದೇ ಬಂಗಲೆಯಲ್ಲೇ ವಾಸವಾಗಿದ್ದರು. ಎಂದಿನಂತೆಯೇ ಅವರ ತಮ್ಮನ ಮಗ ಎಂ. ಆರ್. ಕೃಷ್ಣಮೂರ್ತಿಯವರು, ಅವರ ಕುಟುಂಬ ಎಂ. ವಿ. ಅವರನ್ನು ನೋಡಿಕೊಳ್ಳುತ್ತಿದ್ದರು. ಅತ್ಯಂತ ಆದರದಿಂದ ಅವರ ಶುಶ್ರೂಷೆ ಮಾಡುತ್ತಿದ್ದರು. ಎಂ. ವಿ. ಅವರಿಗೆ ೯೮ ವರ್ಷ. ಆರೋಗ್ಯ ಬಹಳ ಕುಂದಿ ಕ್ಷೀಣಿಸಿತ್ತು. ಬಹಳ ಮರೆವು. ಒಂದೆರಡು ನಿಮಿಷಗಳು ಮಾತನಾಡಿದರೆ ೫-೧೦ ನಿಮಿಷಗಳು ಪ್ರತಿಮೆಯಂತೆ ಮಾತೇ ಇಲ್ಲದೆ ತಟಸ್ಥರಾಗುತ್ತಿದ್ದರು. ಆದರೂ ನೆನಪು ಮರುಕಳಿಸಿ ಎಲ್ಲಿ ಮಾತನ್ನು ನಿಲ್ಲಿಸಿದ್ದರೋ ಅಲ್ಲಿಂದ ತಡವರಿಸುತ್ತಾ ಮಾತನ್ನು ಮುಂದುವರಿಸುವರು. ಇಂತಹ ಪರಿಸ್ಥಿತಿಯಲ್ಲಿ ಅವರಿಗೆ ಶ್ರಮ ಕೊಡುವುದು ನನಗೇ ಬಹಳ ಮುಜುಗರ ತಂದಿತ್ತು. ಆದರೂ, ನಿರ್ವಾಹವಿಲ್ಲದೆ, ನನ್ನ ಭೇಟಿಯ ಕಾರಣವನ್ನು ತಿಳಿಸಿದೆ. ಅವರು ಸಾಕ್ಷ್ಯ ಚಿತ್ರದ ಬಗ್ಗೆ ಕಿಂಚಿತ್ತೂ ಆಸಕ್ತಿ ತೋರಿಸಲಿಲ್ಲ. ಅದು ದುರ್ಲಭವೆಂದೇ ನನಗನಿಸಿತು. ಆದರೆ, ಹೇಗಾದರೂ ಸಾಕ್ಷ್ಯ ಚಿತ್ರವನ್ನು ಮಾಡಿಮುಗಿಸಲೇಬೇಕೆಂಬ ಮಹದಾಶಯ ನನ್ನಲ್ಲಿ. ಪಂಡಿತ ನೆಹರೂ ಅವರ ಹೆಸರನ್ನು ಉಪಯೋಗಿಸಿಕೊಂಡು, ಇದು ಅವರದೇ ನೆಚ್ಚಿನ ಯೋಜನೆ ಎಂದು ಹೇಳಿ ಅವರ ಮನಸ್ಸೊಪ್ಪಿಸಬಹುದು ಎಂದು ಬುದ್ಧಿವಂತಿಕೆ ಮಾಡಿ. ಅವರಿಗೆ ಹಾಗೆ ಹೇಳಿದೆ.

ಅವರು ಕೊಟ್ಟ ಉತ್ತರ ನನ್ನನ್ನು ಕಕ್ಕಾಬಿಕ್ಕಿಯಾಗಿ ಮಾಡಿತು. ಏಕೆ, ಅವರಿಗೆ ಮಾಡಲು ಸಾಕಷ್ಟು ಬೇರೆ ಕೆಲಸ ಇಲ್ಲವೇ ? ಎಂದರು. ಅವರು ಹೇಳಿದ ರೀತಿಯಲ್ಲಿ ಚೂರೂ ತಾತ್ಸಾರವಿರಲಿಲ್ಲ. ನೆಹರೂ ಪ್ರಧಾನಿಗಳು, ಅವರು ದೇಶದ ಹಿತಕ್ಕಾಗಿ ಮಾಡಬೇಕಾದ ತುರ್ತು ವಿಷಯಗಳು ಪರ್ವತದಷ್ಟೇ ಇರಬೇಕು. ಅಂತಹುದರಲ್ಲಿ ನನ್ನ ಸಾಕ್ಷ್ಯ ಚಿತ್ರದ ಅವಸರವೇನು ? ಕಳಕಳಿ ಏಕೆ ? ಎಂಬ ಅರ್ಥ ಅವರ ಮಾತಿನಲ್ಲಿ ತುಂಬಿತ್ತು. ಮುಂದೆ ಮರೆವಿನ ೫ - ೬ ನಿಮಿಷಗಳು. ನನಗೆ ಕ್ಷಣ ಒಂದು ಯುಗವಾಯ್ತು. ಸ್ಮೃತಿ ಮರುಕಳಿಸಿ, ಅವರು ಇನ್ನೇನು ನೀವು ಹೋಗಬಹುದು ಎಂದು ಸೂಚಿಸುವ ಕೈಮುಗಿಯುವ ಪ್ರತಿಕ್ರಿಯೆ ಮಾಡುತ್ತಿದ್ದಂತೆಯೇ, ಏಕೋ, ಏನೋ, ನಾನು 'ಸಾರ್, ಈಗಾಗಲೇ ಬಾಲಗಂಗಾಧರ ತಿಲಕ್, ಮಹರ್ಷಿ ಕರ್ವೆ ಇಂಥಹ ಮಹನೀಯರ ಚಿತ್ರಗಳ ತಯಾರಿಕೆ ಸಾಗಿದೆ. ಆದುದರಿಂದ ತಾವೂ' - ನನ್ನ ಮಾತುಗಳನ್ನು ಮುಗಿಸುವ ಮುನ್ನವೇ - ಅವರು 'ಕರ್ವೆಯವರು ನನ್ನ ಆಪ್ತಸ್ನೇಹಿತರು. ಅವರ ಚಿತ್ರವಿದೆಯೇ? ನಾನು ನೋಡಲು ಸಾಧ್ಯವೇ ?' ಎಂದರು. ಅಗತ್ಯವಾಗಿ ಎಂದು ನಾನು ಹೇಳುತ್ತಿದ್ದಂತೆ - ಕೃಷ್ಣಮೂರ್ತಿಯವರು, ಅವರ ಹಿಂದೆ ನಿಂತಿದ್ದು ರಭಸವಾಗಿ ಬೇಡ, ಬೇಡ ಎನ್ನುವಂತೆ ಕೈ ಅಳ್ಳಾಡಿಸುತ್ತಿದ್ದರು. ನಾನು ಮುಂದುವರಿದು - ಇಲ್ಲೇ , ಮನೆಯಲ್ಲೇ, ನಾಳೆಯೇ ಪ್ರದರ್ಶನವನ್ನು ಏರ್ಪಡಿಸುತ್ತೇನೆ - ಅಂದೆ. ಎಂ. ವಿ. ಅವರು ಸಂತೋಷ ಎಂದರು. ನಾನು ಹೊರಟಾಗ ಕೃಷ್ಣಮೂರ್ತಿಯವರು ಬಂದು ಮೇಲುಸಿರು ಬಿಡುತ್ತಾ - ಏನು ಮಾಡಿಬಿಟ್ರೇಪ್ಪಾ? ಅವರಿಗೆ ಮೂರು ನಿಮಿಷ ಕುಳಿತುಕೊಳ್ಳುವುದೂ ಸಹಿಸಲಾರದ ಶ್ರಮ. ಆದರೆ ಅವರು ಒಪ್ಪಿಕೊಂಡ ಮೇಲೆ, ಕಾರ್ಯಕ್ರಮ ನಡೆಯಲೇಬೇಕು - ಎಂದು ಬಹಳ ಮನ ನೊಂದು ಮಾತಾಡಿದರು. ನಾನು ಅವರಿಗೆ ಸಮಾಧಾನ ಹೇಳಿ ಎಂ. ವಿ. ಅವರಿಗೆ ಶ್ರಮವೆಂದು ತಿಳಿದೊಡನೆಯೇ Projector off ಮಾಡಿ, ಚಿತ್ರ ಮುಗಿಯಿತು ಎಂದು ಹೇಳುತ್ತೇನೆ - ಎಂದೆ. ಕೃಷ್ಣ ಮೂರ್ತಿಯವರು ನಿಟ್ಟುಸಿರು ಬಿಡುತ್ತಾ - ಅವರ ವಿಷಯ ನಿಮಗೆ ಗೊತ್ತಿಲ್ಲ - ಹೋಗಿಬನ್ನಿ ಎಂದು ಕೈ ಮುಗಿದರು.

ಮಾರನೆಯ ದಿನ, ಸುಮಾರು ೨೨ ನಿಮಿಷಗಳ ಚಿತ್ರವನ್ನು ಕುರ್ಚಿಯಲ್ಲಿ ಕುಳಿತು, ಅಲುಗಾಡದೆ, ತದೇಕಮಗ್ನರಾಗಿ ನೋಡಿ ಸಂತೋಷಪಟ್ಟರು. ಸಾಕ್ಷ್ಯಚಿತ್ರಕ್ಕೆ ಒಪ್ಪಿಗೆಯನ್ನು ಕೊಟ್ಟರು, ಮಕ್ಕಳ ಬರವಣಿಗೆಯಂತೆ ತಮ್ಮ ಸಹಿಯನ್ನು ಹಾಕಿ. ಮನಸ್ಸಿನಲ್ಲೇ, ಅವರಿಗೆ, ಪರಮಾತ್ಮನಿಗೆ ಧನ್ಯೋಸ್ಮಿ ಎಂದು ವಂದಿಸಿದೆ.

ಚಿತ್ರೀಕರಣ ಸಮಯದಲ್ಲೂ ಅವರು, ಕೃಷ್ಣಮೂರ್ತಿ - ಕುಟುಂಬದವರು ಸಂಪೂರ್ಣ ಸಹಕಾರವಿತ್ತರು. ಭಾರತರತ್ನ ಸರ್. ಎಂ. ವಿ. ಅವರ ಜನ್ಮ ಶತಮಾನೋತ್ಸವದ ದಿನ ಭಾರತದ ಎಲ್ಲೆಡೆಯಲ್ಲೂ , ಆ ಚಿತ್ರ ಪ್ರದರ್ಶಿತವಾಯಿತು. ಇಂದಿಗೂ, ಆಗಾಗ, ಅಲ್ಲಲ್ಲಿ ಚಿತ್ರ ಪ್ರದರ್ಶಿತವಾಗುತ್ತಲೇ ಇದೆ. ಎಂ. ವಿ. ಅವರ ಅಮರ ನೆನಪನ್ನು ಬೆಳಗುತ್ತಲೇ ಇದೆ.

* * *

೩೦ರ ದಶಕದ ಆರಂಭದಲ್ಲೇ, ಭೌತಶಾಸ್ತ್ರದ ನೊಬೆಲ್ ಪ್ರಶಸ್ತಿಯನ್ನು ಪಡೆದ ಹೆಗ್ಗಳಿಕೆ, ಸಿ. ವಿ. ರಾಮನ್ ಅವರದು. ೧೯೪೦ರಲ್ಲೇ, ಮೈಸೂರು



ಮಹಾರಾಜಾ ಕಾಲೇಜಿನಲ್ಲಿ, ಅವರ ಭಾಷಣದ ವೈಖರಿಯನ್ನು ಸವಿದಿದ್ದೆ. ಯಾವ ವಿಷಯವೇ ಆಗಲಿ, ಆದರಲ್ಲೂ ವೈಜ್ಞಾನಿಕ ವಿಷಯಗಳು, ತಮ್ಮ ಸ್ವಂತ ಸಂಶೋಧನೆಗೆ ಸಂಬಂಧಿಸಿದ ವಿಷಯಗಳನ್ನು, ತಿಳಿಯಾದ, ಸ್ವಾರಸ್ಯವಾದ ಶೈಲಿಯಲ್ಲಿ, ಸಾಮಾನ್ಯ ಜನರಿಗೂ ಮನದಟ್ಟಾಗುವ, ಮನಮುಟ್ಟುವ ರೀತಿಯಲ್ಲಿ ಭಾಷಣ ಮಾಡುವುದರಲ್ಲಿ ಪ್ರಖ್ಯಾತರೆನಿಸಿದ್ದರು.

ಸರ್. ಎಂ. ವಿ. ಅವರನ್ನು ಮೊದಲಬಾರಿ, ೧೯೫೪ರಲ್ಲಿ, ನೋಡಿದ ಮಾರನೆಯ ದಿನವೇ ಸರ್. ಸಿ. ವಿ. ರಾಮನ್ ಅವರನ್ನು ಕಾಣಲು ಹೋಗಿದ್ದೆ. ಕಾರಣವನ್ನು ಈಗಾಗಲೇ ತಿಳಿಸಿದ್ದೇನೆ.

Raman Institute ಇದ್ದದ್ದು, ಆಗ ನಿರ್ಜನ ಪ್ರದೇಶವೇ ಆಗಿತ್ತು. Palace Orchards. ಅರಮನೆಯ ಹಣ್ಣು ತೋಟದಿಂದ ಆಚೆ. ಈಗ ಅಲ್ಲಿರುವ ಸದಾಶಿವನಗರ ಇನ್ನೂ ಹುಟ್ಟಿಕೊಂಡಿರಲಿಲ್ಲ. ವಾಹನ ಸಂಚಾರ, ಜನ ಸಂಚಾರವೂ ಕೂಡ ಅತಿವಿರಳ. ಆಗಾಗ್ಗೆ ಎಲ್ಲೋ ಒಂದು ಸೈಕಲ್ಲೋ, ಜಟಕಾಗಾಡಿಯೋ, ಕಾರೋ ಕಾಣಸಿಕೊಂಡರೆ ಜಾಸ್ತಿ. Sankey ಕೆರೆಯ ಇಕ್ಕಟ್ಟಾದ ರಸ್ತೆಯಲ್ಲಿ ಸೂರ್ಯಾಸ್ತಮವಾದ ಮೇಲೆ ಹೋಗುವುದಕ್ಕೆ ಹೆದರಿಕೆ ಆಗುತ್ತಿತ್ತು. ಆಗಿನ ಭಯ ಭೀತಿಗೆ ಕಾರಣ ದೆವ್ವ, ಪಿಶಾಚಿಗಳು; ಕಳ್ಳಕಾಕರಲ್ಲ.

ಸುಮಾರು ೪ ಘಂಟೆ ಸಮಯ ನಾನು ಒಂದು ಲೊಡಕಲ್ ಸೈಕಲ್ ಮೇಲೆ Instituteಗೆ ಹೋಗಿದ್ದೆ. ಗೇಟು ವಿಶಾಲವಾಗಿ ತೆಗೆದಿತ್ತು. ಕಾವಲುಗಾರರು ಯಾರೂ ಇರಲಿಲ್ಲ. ಆದರೆ ಪಕ್ಕದಲ್ಲೇ ಕಾಂಪೌಂಡ್ ಒಳಗೆ ೮-೯ ಅಡಿ ಎತ್ತರದಲ್ಲಿ, ಸುಮಾರು ೧೫ ಅಡಿ ಉದ್ದ ೩ ಅಡಿ ಅಗಲದ ಬೋರ್ಡ್ ಮೇಲೆ ಇಂಗ್ಲಿಷ್‌ನಲ್ಲಿ ಒಂದು ಎಚ್ಚರಿಕೆಯ ನೋಟೀಸ್ ಇತ್ತು. ಅದರ ಅರ್ಥ ಹೀಗಿತ್ತು : ಇದೊಂದು ಸಂಶೋಧನಾ ಸಂಸ್ಥೆ. ವಸ್ತು ಸಂಗ್ರಹಾಲಯ ವಲ್ಲ. ವಿಜ್ಞಾನಿಗಳು ಕೆಲಸದಲ್ಲಿ ತೊಡಗಿದ್ದಾರೆ. ದಯವಿಟ್ಟು Disturb ಮಾಡಬೇಡಿ. - ಹುಷಾರ್ ಎಂದು ಸೇರಿಸಿರಲಿಲ್ಲ, ಅಷ್ಟೆ!

ಸೈಕಲ್ಲನ್ನು ಗೇಟ್ ಹತ್ತಿರವೇ ಬಿಟ್ಟು, ಮೆಲ್ಲ ಮೆಲ್ಲನೆ ಒಳಗೆ ಹೋದೆ. ಯಾರು ಯಾವಾಗ ನನ್ನನ್ನು ತಡೆಯುತ್ತಾರೋ, ಅಥವಾ ಅಟ್ಟುತ್ತಾರೋ ಎನ್ನುವ ಭೀತಿ. ಬಿಲ್ಡಿಂಗ್ ಸೇರುವ ದೂರ ಐದು ನಿಮಿಷದ್ದಾದರೂ, ನನಗದು ಐವತ್ತು ನಿಮಿಷವೆನಿಸಿತು. ಎಲ್ಲೂ, ಯಾರೂ ಇಲ್ಲ. ಬಿಲ್ಡಿಂಗ್ ಸೇರಿದಾಗ ಒಬ್ಬ ಯುವಕ ಆತುರ ಆತುರವಾಗಿ ಎಲ್ಲೋ ಧಾವಿಸುತ್ತಿದ್ದ. ಆತನನ್ನು ತಡೆದು ಸರ್. ಸಿ. ವಿ. ರಾಮನ್ ಅವರನ್ನು ನೋಡಬೇಕು ಎಂದು ನಾನು ಪ್ರವರ ಆರಂಭಿಸು ತ್ತಿದ್ದಂತೆಯೇ, ಆತ casual ಆಗಿ go there upstairs - turn left - second door on the right ಎಂದು ಹೇಳುತ್ತಲೇ ಸರ ಸರನೇ ಧಾವಿಸಿದ. (ಆ ಮಹಡಿ ಮೇಲೆ ಹೋಗು - ಎಡಕ್ಕೆ ತಿರುಗು - ಬಲಗಡೆ ಎರಡನೇ ಬಾಗಿಲು - ಆತ ಹೇಳಿದ್ದು).

ನಾನು ಮೆಲ್ಲ ಮೆಲ್ಲನೆಯೇ ಹುಷಾರಾಗಿ ಸಾಗಿ, ಸಂಪೂರ್ಣವಾಗಿ ನಿರ್ಜನವಾಗಿ ಕಂಡುಬಂದಿದ್ದ ಆ buildingನಲ್ಲಿ, ಆ ಬಲಗಡೆ ಎರಡನೇ ಬಾಗಿಲು ಸೇರಿದೆ. ತೆರೆದ ಬಾಗಿಲು ಒಳಗೆ table ಒಂದರ ಹಿಂದೆ, ತಿರುಗು ಕುರ್ಚಿಯಲ್ಲಿ ಕುಳಿತು ರಾಮನ್ ಅವರು ಏನೋ ಓದುವುದರಲ್ಲಿ ತಲ್ಲೀನರಾಗಿದ್ದರು. ಬಾಗಿಲಲ್ಲಿ ನಿಂತ ನನ್ನ ನೆರಳು ಬಿದ್ದೊಡನೆಯೇ ಕತ್ತೆತ್ತಿ ಒಂದು ಮಾತೂ ಆಡದೆ ಕೇವಲ ಸಂಜ್ಞೆಯಿಂದಲೇ ತಲೆ ಆಡಿಸಿ ಬಾ ಕುಳಿತುಕೋ, ಏನು ವಿಷಯ ? ಎಂದು ಪ್ರಶ್ನಾರ್ಥಕವಾಗಿ ನನ್ನನ್ನು ನೋಡಿದರು. ಆಗಿನ ನನ್ನ ಮನೋಭಾವನೆಗಳನ್ನು ನೀವೇ ಊಹಿಸಿಕೊಳ್ಳಬೇಕು

ಒಳಗೆ ಹೋಗಿ ಕುಳಿತು, ನಾನು ವಾರ್ಷಿಕೋತ್ಸವ, ಆಹ್ವಾನ ಎಂದು ಶುರು ಮಾಡಿದ ತಕ್ಷಣವೇ - No, No, No, No, No, No ಎನ್ನುತ್ತಾ ರೊಯ್ಯನೆ ಕುರ್ಚಿಯನ್ನು ತಿರುಗಿಸಿ, ನನಗೆ ಬೆನ್ನು ಮಾಡಿ ಕುಳಿತರು ! ಕಂಗೆಟ್ಟು ಕಂಗಾಲಾದ ನನ್ನ ಅವಸ್ಥೆ ಹೇಳತೀರದು. ಏನೂ ತೋಚದೆ ಬೆಪ್ಪು ಬೆರಗಾಗಿದ್ದ ನನಗೆ ಮರುಕ್ಷಣವೇ ಅವರು ಕುರ್ಚಿ ತಿರುಗಿಸಿದ್ದು ಸ್ವಲ್ಪ ನಿಸೂರೆನಿಸಿತು. ಆದರೆ ಅವರು "UNESCO! FUNDAMENTAL EDUCATION"– Young man, do you know the reason for the fall of the Mughal Empire? ಎಂದು ಪುನಃ ಕುರ್ಚಿಯನ್ನು ತಿರುಗಿಸಿ ಕುಳಿತರು. ಮರುಕ್ಷಣವೇ ತಿರುಗಿ – Dalliance, young man. Invitations ? How can I be on top of the world in my subject, if I waste my time for such dalliance ? There are a lot of ministers, these days - go and ask one of them ಎಂದು ಹುಚ್ಚು ಹೊಳೆಯಂತೆ ಆರ್ಭಟಿಸಿದರು. ಪುನಃ No, No ಎಂದು ಕುರ್ಚಿ ತಿರುಗಿಸಿದರು. ಮರು ಮಾತಿಲ್ಲದೆ, ನಾನು ಅವರಿಗೆ ಯಂತ್ರದಂತೆ ನಮಸ್ಕರಿಸಿ ಹೊರಟೆ. ಹೊರಗೆ ಬಂದು, ಅಲ್ಲಿಂದ ಓಡುವ ಮುನ್ನ ತಿರುಗಿ ಕೋಣೆಯ ಕಡೆ ದೃಷ್ಟಿ ಹಾಯಿಸಿದಾಗ, ಏನೂ ಆಗದಿದ್ದಂತೆ ಅವರು ಆಗಲೇ ತಮ್ಮ ಓದಿನಲ್ಲಿ ಮಗ್ನರಾಗಿದ್ದರು !

೧೯೫೮ - ೫೯ ರಲ್ಲಿ ಸರ್. ಎಂ. ವಿ. ಅವರ ಚಿತ್ರವನ್ನು ಮಾಡುವ ಸಮಯದಲ್ಲೇ, ಮೈಸೂರು ರಾಜ್ಯದ ಡಾಕ್ಯುಮೆಂಟರಿ ಒಂದನ್ನು ತಯಾರಿಸಿ, ನಿರ್ದೇಶಿಸುವ ಕೆಲಸವೂ ನನ್ನ ಪಾಲಿಗೆ ಬಂದಿತ್ತು. ಆಗ ಪುನಃ ರಾಮನ್ ಅವರನ್ನು ಭೇಟಿಯಾಗುವ ಆವಶ್ಯಕತೆಯೂ ಬಂತು. ಹಳೆಯ ಭೇಟಿಯ ನೆನಪು ಮಾಸಿರಲಿಲ್ಲ. ಆದರೂ, ಅವರನ್ನು ಪುನಃ

ಕಾಣಲು ಮೊಂಡು ಧೈರ್ಯ ಮಾಡಿ ಹೋದೆ. ಬೆಳಗ್ಗೆ ೮ ಘಂಟೆಗೇ. Institute ಆವರಣದಲ್ಲಿ ಬಹಳ ಜನ ಓಡಾಡುತ್ತಿದ್ದರು. ರಾಮನ್ ಅವರು ವೆರಾಂಡದಲ್ಲಿಯೇ ಇದ್ದರು. ಕೆಲವರು ಹಾರ ತುರಾಯಿಗಳೊಡನೆ. ಕಾರಣವೇನು ಎಂದು ತಿಳಿಯುವ ಪ್ರಯತ್ನವನ್ನೂ ಮಾಡಲಿಲ್ಲ. ನೇರ ರಾಮನ್ ಅವರನ್ನು ಸಮೀಪಿಸಿ ನಮಸ್ಕರಿಸಿದೆ. ಅವರೂ ನಕ್ಕರು. ನಾನು ಮೈಸೂರು ರಾಜ್ಯದ Documentary ಮಾಡುತ್ತಿದ್ದೀನಿ. ಅದಕ್ಕೆ ನಿಮ್ಮ ಮತ್ತು Instituteನ ಕೆಲವು ಚಿತ್ರಗಳನ್ನು ತೆಗೆದುಕೊಳ್ಳಬೇಕು ಎಂದೆ. ಅವರು I am not a Mysorean ಅಂದರು. That's exactly the reason why I want to include you in the film, ನಾನಂದೆ. ಒಂದು ಕ್ಷಣ ನನ್ನನ್ನು ದಿಟ್ಟಿಸಿ, ಈಗಲೇ ಚಿತ್ರೀಕರಣ ಮಾಡಿಕೊಳ್ಳುತ್ತೀಯಾ? ಎಂದರು. ಇಲ್ಲ ಅದಕ್ಕೆ ಹಲವಾರು ಪೂರ್ವಸಿದ್ಧತೆಗಳಾಗಬೇಕು. ದಯವಿಟ್ಟು ನಾಳೆ ಬೆಳಗ್ಗೆ ಸಮಯ ಕೊಡಬೇಕು, ಎಂದೆ. ಎಷ್ಟು ಅಂದರು. ನನಗೆ ಬೇಕಾಗಿದ್ದು ಅರ್ಧಘಂಟೆಯಷ್ಟಾದರೂ, ಅವರ ಸ್ವಭಾವವನ್ನು ಈಗ ಸ್ವಲ್ಪ ಅರಿತಿದ್ದೆನಾದುದರಿಂದ - ೧ - ೧½ ಘಂಟೆಗಳ ಕಾಲ ಎಂದೆ. ಪುನಃ ನನ್ನನ್ನು ದಿಟ್ಟಿಸಿ ನೋಡಿ - ಅಷ್ಟೆ - ಅದಕ್ಕಿಂತ ನಾನು ಒಂದು ಕ್ಷಣವೂ ಹೆಚ್ಚು ಕೊಡುವುದಿಲ್ಲ. ನಾಳೆ ೯ ಘಂಟೆಗೆ ನೀನು ಬರಬಹುದು, ಎಂದು ಬಂದಿದ್ದ ಬೇರೆಯವರ ಕಡೆ ಹೊರಟುಹೋದರು.

ನಾನು ಮನೆಗೆ ಹಿಂತಿರುಗಿ, paper ನೋಡಿದಾಗ ಹಾರ, ತುರಾಯಿಗಳ ಅರ್ಥ ಮನವರಿಕೆಯಾಯಿತು. ಅಂದು ರಾಮನ್ ಅವರ birthday ! ನಾನು ಅದರ ಪ್ರಸ್ತಾಪ ಏನೂ ಮಾಡದೆ ನೇರವಾಗಿ ನನ್ನ ಕೆಲಸದ ವಿಷಯ ಮಾತಾಡಿದ್ದು ಅವರಿಗೆ ಮೆಚ್ಚುಗೆಯಾಗಿ ಸಲೀಸಾಗಿ ಚಿತ್ರೀಕರಣಕ್ಕೆ ಒಪ್ಪಿಕೊಂಡಿರಬೇಕು. ಇದು ನನ್ನ ಹಿನ್ನೋಟದ ಊಹೆ.

ಮಾರನೆಯ ದಿನ ಚಿತ್ರೀಕರಣ ೯ ರಿಂದ ೧-೩೦ ಘಂಟೆಯವರೆಗೆ ಸಾಗಿತು ! ನಾನು, unitನವರಿಗೆಲ್ಲಾ ರಾಮನ್ ಅವರು ಎಷ್ಟು ಮಹಾನ್ ವ್ಯಕ್ತಿ, ಅವರ ಸ್ವಭಾವವನ್ನು ತಿಳಿಸಿ, ಚಾಚೂ ಸದ್ದು ಗದ್ದಲವಿಲ್ಲದೆ, ಸರಸರನೆ ಕೆಲಸ ಮುಗಿಸಬೇಕೆಂದು ಕೇಳಿಕೊಂಡಿದ್ದೆ. ಹಾಗೆಯೇ ಎಲ್ಲರೂ ನಡೆದುಕೊಂಡರು. ನಮ್ಮ ಕೆಲಸದ ರೀತಿ, ಧೋರಣೆ, ಶ್ರಮ ಎಲ್ಲವನ್ನೂ ಸೂಕ್ಷ್ಮವಾಗಿ ಗ್ರಹಿಸಿದ ರಾಮನ್ - ಏನಾದರೂ ಕರ್ಮಯೋಗಿ - ತಾಳ್ಮೆಯಿಂದ, ನಮಗೆ ತುಂಬು ಬೆಂಬಲವಿತ್ತು ಪ್ರೋತ್ಸಾಹಿಸಿದರು. ಅವರ shotಗಳನ್ನು ತೆಗೆದು ಕೊಳ್ಳುತ್ತಿದ್ದಾಗ, ಕ್ಯಾಮರಾ unitಗಳ ಪರಿವೆಯೇ ಇಲ್ಲದೆ ತಾವು ಮಾಡುವ ಕೆಲಸದಲ್ಲಿ ಮುಳುಗಿರುತ್ತಿದ್ದರು. Shot ನಂತರ ನನಗೆ ಅದರ ಪೂರ್ಣ ವಿವರ ನೀಡುತ್ತಿದ್ದರು. ಅಂದಿನ ಕೊನೆಯ shot ಅವರು ಗಾಂಧಿ ಜಯಂತಿಯ ದಿನ ಪ್ರತಿ ವರ್ಷವೂ ಮಾಡುತ್ತಿದ್ದ ಸ್ಮಾರಕ ಭಾಷಣ - ತಮ್ಮ Instituteನಲ್ಲಿಯೇ. ಅದರ ಪುನಾರಾವರ್ತನೆಯನ್ನು ನಮ್ಮ ಚಿತ್ರಕ್ಕಾಗಿ ಮಾಡಲು ಒಪ್ಪಿಕೊಂಡರು. ಆಗ ನನ್ನನ್ನು ಕರೆದು, shot ready ಆಗುವುದಕ್ಕೆ ಇನ್ನೂ ಸ್ವಲ್ಪ ಸಮಯ ಆಗುತ್ತದೆ ಅಲ್ಲವೇ? ಎಂದರು. ನಾನು, ಇಲ್ಲಾ ಸಾರ್, ಬೇಗ ಮುಗಿಸಿಬಿಡುತ್ತೇವೆ ಎಂದು ಗಾಬರಿಯಾಗಿಯೇ ಹೇಳಿದೆ. ಆತುರ ಏನೂ ಬೇಡ, ನೀನು ನನ್ನ ಜತೆ ಸ್ವಲ್ಪ ಬಾ ಎಂದು ಅವರು ಹೂದೋಟಕ್ಕೆ ಕರೆದುಕೊಂಡು ಹೋದರು. ಭರ್ಜರಿ ಗುಲಾಬಿ ತೋಟ! ಆ ಹೂವುಗಳ ಸೊಬಗು, ಬಣ್ಣ ವೈವಿಧ್ಯತೆ, ಇತ್ಯಾದಿಗಳ ವಿಷಯ ನಿರರ್ಗಳವಾಗಿ ವ್ಯಾಖ್ಯಾನಿಸುತ್ತಾ ಹೋದರು. ಮಧ್ಯೆ ನನ್ನ ಕಡೆ ತಿರುಗಿ, ಈಗ ನಾನು ಮಾಡಲಿರುವ ಭಾಷಣ, ಕಣ್ಣು, ದೃಷ್ಟಿ, ಬಣ್ಣಗಳ ವಿಷಯವಾಗಿಯೇ ಎಂದರು. ಆ ಹೊತ್ತಿಗೆ ತೋಟದ ಹಿಂದಿನ ಕಾಂಪೌಂಡ್ ಸೇರಿದ್ದೆವು. ಅವರು, ಅಲ್ಲಿಂದ Palace Orchards ಕಡೆ ಕೈತೋರಿಸಿ, ಇನ್ನು ಕೆಲವೇ ದಿನಗಳಲ್ಲಿ ಅಲ್ಲೊಂದು ಭಾರಿ ತಮಾಷೆ ನಡೆಯುತ್ತದೆ. ನನಗೆ ಅರ್ಥವಾಗಲಿಲ್ಲ. ಮುಂದುವರಿಸಿ ಕಟುವಾಗಿ, ನಿಮ್ಮ ನೆಹರೂ ಕಾಂಗ್ರೆಸ್ ತಮಾಷೆ ಎಂದರು - ಸದಾಶಿವರಾವ್ ನೆನಪಿನ ಅಧಿವೇಶನ! ತಕ್ಷಣ, ಏನೋ ಜ್ಞಾಪಕವಾದಂತೆ - ಸರಿ, ಸರಿ, ನಡೆ. ಬಾ, ಬೇಗ - ನಿನ್ನ shot ಮುಗಿಸು. ನಾನು lunchಗೆ late ಆದರೆ Lady Raman ನನ್ನ ತರಾಟೆಗೆ ತೆಗೆದುಕೋತಾರೆ ಎಂದು ಕೀಟಲೆಯ ನಗು ನಕ್ಕರು.

ಭಾಷಣದ ನಮ್ಮ silent shot ೧೦-೧೨ ಸೆಕೆಂಡುಗಳಲ್ಲೇ ಮುಗಿಯಿತು. ಹಾಲ್‌ನಲ್ಲಿ ಇದ್ದವರು unit ಮಾತ್ರ. ಆದರೂ ಕಿಕ್ಕಿರಿದ ಸಭೆಯನ್ನು ಉದ್ದೇಶಿಸಿ ಮಾತನಾಡುವಂತೆ, ಸುಮಾರು ೧೦ ನಿಮಿಷಗಳು ಭಾಷಣ ಮಾಡಿದರು. ನಾವೆಲ್ಲಾ ನಿಮಿರಿದ ಕಿವಿಗಳಿಂದ ಆ ಸೊಗಸಾದ ಮಾತುಗಳನ್ನು ಆನಂದಿಸುತ್ತಿದ್ದೆವು. ಭಾಷಣ ತಟ್ಟನೆ ನಿಂತಿತು. ಯಾವುದೋ ಪ್ರಪಂಚದಲ್ಲಿದ್ದ ನಮ್ಮನ್ನು - ಏನಪ್ಪಾ - ಇನ್ನೂ ಮುಗಿಯಲಿಲ್ಲವೇ ನಿಮ್ಮ shooting ? ರಾಮನ್‌ರವರ ಗರ್ಜನೆ ಎಚ್ಚರಿಸಿತು. ಮುಗಿಯಿತು ಸಾರ್ ಎಂದೊಡನೆಯೇ ನಾನು ಹೇಳುತ್ತಿದ್ದ ವಂದನೆಯ ಮಾತನ್ನು ಲೆಕ್ಕಿಸದೆ, ರಾಮನ್ ಅವರು, ಭರ ಭರನೆ ಮನೆಯ ಕಡೆ ಓಡಿದರು, lunchಗೆ !

ಮೈಸೂರು ಚಿತ್ರದಲ್ಲಿ, ಈ ಚಿತ್ರೀಕರಣದ ಕೆಲವು ಅಮರ ತುಣುಕುಗಳಿವೆ.

* * *

ಡಿ. ವಿ. ಗುಂಡಪ್ಪ - ಸನ್ಯಾಸ್ಯ ಡಿ. ವಿ. ಜಿ. !

ಅವರ ನಿಕಟ ಪರಿಚಯವಾದದ್ದು ನನಗೆ ೧೯೪೭ - ೪೮ರಲ್ಲಿ. ಮೈಸೂರು ಇಂಟರ್ಮೀಡಿಯೇಟ್ ಕಾಲೇಜಿನ ಅಸೋಸಿಯೇಷನ್ನಿನ, ಅಧ್ಯಾಪಕ ವರ್ಗದ ಕಾರ್ಯದರ್ಶಿ



ಯಾಗಿದ್ದೆ. ವಾರ್ಷಿಕ ಸಮಾರೋಪ ಸಮಾರಂಭಕ್ಕೆ ಅವರನ್ನು ಅಧ್ಯಕ್ಷರು ಹಾಗೂ ಮುಖ್ಯ ಅತಿಥಿಯಾಗಿ ಆಹ್ವಾನಿಸಿದ್ದೆವು.

ಅದಕ್ಕೂ ಬಹಳ ಮುಂಚೆಯೇ, ಅವರ ಉಮರನ ಒಸಗೆ, ಅಂತಃಪುರ ಗೀತೆಗಳನ್ನೋದಿದ್ದೆ. - ''ವನಸುಮದೊಲೆನ್ನ ಜೀವನವು ವಿಕಸಿಸುವಂತೆ'' ಪ್ರಾರ್ಥನೆಯಂತೂ ಅತ್ಯಂತ ಜನಪ್ರಿಯವಾಗಿತ್ತು. ಆ ಕಾಲಕ್ಕೆ ಈ ಪ್ರಾರ್ಥನೆಯಿಂದ ಆರಂಭವಾಗದ ಸಭೆ, ಸಮಾರಂಭಗಳೇ ವಿರಳವೆನ್ನಬಹುದು.

ಡಿ. ವಿ. ಜಿ. ಬಹಳ ಖಡಾ ಖಂಡಿತವಾದಿ. ಎಲ್ಲ ಕ್ಷೇತ್ರಗಳಲ್ಲೂ, ಎಲ್ಲ ಕೆಲಸ ಕಾರ್ಯಗಳಲ್ಲೂ ಶಿಸ್ತು ಅವರಿಗೆ ಬಹಳ ಮುಖ್ಯ. ಅದಿಲ್ಲದ ಕಡೆ ಅವರು ಸುಳಿಯುತ್ತಲೂ ಇರಲಿಲ್ಲ.

೧೯೫೧ರಲ್ಲಿ ನಾನು ಇಂಗ್ಲೆಂಡ್, ಫ್ರಾನ್ಸ್ ದೇಶಗಳಲ್ಲಿ, ನನ್ನ ಚಲನಚಿತ್ರ ವ್ಯಾಸಂಗವನ್ನು ಮುಗಿಸಿಕೊಂಡು ಬಂದಿದ್ದಾಗ, ಅವರು ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ಸಿನೆಮಾ ಬಗ್ಗೆ ನನ್ನ ಭಾಷಣವನ್ನು ಏರ್ಪಡಿಸಿದ್ದರು. ಭಾಷಣ ಸುಮಾರು ೨೦-೩೦ ಜನ ಕೂರುವ ಕೊಠಡಿಯಲ್ಲಿ . ಅಲ್ಲಿ ನೆರೆದಿದ್ದ ಆ ಜನರಲ್ಲಿ ಬಹುಮಂದಿ, ಎಲ್ಲ ವಿಧದಲ್ಲಿಯೂ ನನಗಿಂತ ಹಿರಿಯರೇ. ಎ. ಎನ್. ಮೂರ್ತಿರಾಯರು, ನಿಟ್ಟೂರು ಶ್ರೀನಿವಾಸರಾಯರು ಇತ್ಯಾದಿ. ಎಲ್ಲರೂ ನೆಲದ ಮೇಲೆ ಕುಳಿತಿದ್ದರು. ಎರಡು ಕುರ್ಚಿಗಳು - ಗುಂಡಪ್ಪನವರಿಗೆ, ನನಗೆ. ಇದು ನನಗಂತೂ ಬಹಳ ಸಂಕೋಚ ಉಂಟುಮಾಡಿತು. ಗುಂಡಪ್ಪನವರಿಗೆ ಇದನ್ನು ತಿಳಿಸಿದಾಗ, ಅದು ಸಭಾಮರ್ಯಾದೆಯೆಂದು ಸಮಾಧಾನ ಮಾಡಿದರು.

ಬರೆದ ಭಾಷಣವನ್ನು ಓದುವುದಕ್ಕಾಗಿ ಎಲ್ಲರ ಕ್ಷಮೆ, ತಾಳ್ಮೆಯನ್ನು ಕೋರಿ, ಭಾಷಣವನ್ನು ಮುಗಿಸಿದೆ. ಕೊನೆಯಲ್ಲಿ, ಡಿ. ವಿ. ಜಿ. ಅವರು, ಭಾಷಣ ಓದಿದ್ದಕ್ಕೆ ಕ್ಷಮೆಯನ್ನು ಕೇಳಿದಿರಿ. ಅದು ಸರ್ವಥಾ ಅನಗತ್ಯ. ನೀವು ಹಾಗೆ ಮಾಡಿ ನಿಜವಾಗಿಯೂ ಸಭೆಗೆ ಮರ್ಯಾದೆ ಗೌರವವನ್ನು ಮಾಡಿದಿರಿ. ಮುಂದೆಯೂ, ಯಾವಾಗಲೂ, ಈ ಶ್ರೇಯಸ್ಕರವಾದ ಅಭ್ಯಾಸವನ್ನೇ ಇಟ್ಟುಕೊಳ್ಳಿ ಎಂದು ಹರಸಿದರು.

ಮುಂದೆ ೧೯೭೦ರಲ್ಲಿ, ಕರ್ನಾಟಕ ಸರ್ಕಾರ, ಕೆಲವು ಮಹನೀಯರ ಜೀವನದ ಸಾಕ್ಷ್ಯ ಚಿತ್ರ ಮಾಡಲು ಯೋಜನೆಯೊಂದನ್ನು ಹಾಕಿಕೊಂಡಿತ್ತು. ಅದರಲ್ಲಿ ಡಿ. ವಿ. ಜಿ. ಅವರೂ ಒಬ್ಬರು. ಆದರೆ ಡಿ. ವಿ. ಜಿ. ಯವರು ಇದಕ್ಕೆ ಸಮ್ಮತಿಸಲಿಲ್ಲ. ಅವರು ಖಡಾ ಖಂಡಿತ ಮಾತಿನವರು ಎಂದು ಈಗಾಗಲೇ ತಿಳಿಸಿದ್ದೇನೆ.

ಒಂದು ದಿನ ಆಕಸ್ಮಾತ್ತಾಗಿ, ಅಂದಿನ ವಾರ್ತಾ ಮತ್ತು ಪ್ರಸಾರ ಇಲಾಖೆಯ ನಿರ್ದೇಶಕರೂ, ಮಹಾರಾಜಾ ಕಾಲೇಜಿನಲ್ಲಿ ನನ್ನ ಕಿರಿಯ ಸಮಕಾಲೀನರೂ, ಸ್ನೇಹಿತರೂ ಆಗಿದ್ದ ಮರಿಪುಟ್ಟಣ್ಣನವರು, ಡಿ. ವಿ. ಜಿ.ಯವರನ್ನು ಒಪ್ಪಿಸಲು ನೀವು ಪ್ರಯತ್ನಮಾಡಿ, ಅಂದರು. ಅವರು ಒಂದು ಸಲ ಇಲ್ಲ ಎಂದ ಮೇಲೆ ಪ್ರಕರಣ ಅಲ್ಲಿಗೆ ಮುಗಿಯಿತು ಎಂದೆ. ಇಲ್ಲ, ನೀವು ಬನ್ನಿ ಎಂದು ಬಲವಂತವಾಗಿಯೇ ನನ್ನನ್ನು ಅವರ ಮನೆಗೆ ಕರೆದು ಕೊಂಡು ಹೋದರು.

ನಮ್ಮನ್ನು ಕಂಡೊಡನೆಯೇ - ಬರಬೇಕು, ಬರಬೇಕು

ಮರಿಪುಟ್ಟಣ್ಣನವರು - ಕೃಷ್ಣಸ್ವಾಮಿ ಐಯ್ಯಂಗಾರ್ರು!? (ಡಿ. ವಿ. ಜಿ. ಒಬ್ಬರೇ ನನ್ನನ್ನು ಯಾವಾಗಲೂ ಹೀಗೆ ಸಂಬೋಧಿಸುತ್ತಿದ್ದುದು. ಅದಕ್ಕೂ ಕಾರಣವಿತ್ತು. ಆದರೆ ಅದು ಈಗ ಅಪ್ರಸ್ತುತ). ಇವರನ್ನು ಯಾಕೆ ಕರ್ಕೊಂಡು ಬಂದ್ರಿ? ನಾನು ಸಾಧ್ಯವಿಲ್ಲ ಎಂದು ಆಗಲೇ ಹೇಳಿದ್ದೆನಲ್ಲಾ ಎಂದರು. ಮೌನ. ಮರಿಪುಟ್ಟಣ್ಣ, ನಾನು ಒಬ್ಬರನ್ನೊಬ್ಬರು ನೋಡಿಕೊಂಡೆವು. ಮರಿಪುಟ್ಟಣ್ಣ - ಏನಪ್ಪಾ ಹೀಗಂದು ಬಿಟ್ಟರು ಎನ್ನುವ ಅರ್ಥದಲ್ಲಿ, ನಾನು ನಿಮಗೆ ಮುಂಚೆಯೇ ಹೇಳಿದ್ನಲ್ಲಪ್ಪಾ ಎನ್ನುವ ಅರ್ಥದಲ್ಲಿ ನಾನು. ಮೌನ... ನಿಧಾನವಾಗಿ - ನಾನು ಸಾರ್ - ದಯವಿಟ್ಟು ಅವಕಾಶ ಕೊಟ್ಟರೆ - ಒಂದೆರಡು ಮಾತು - ನಾನು ಹೇಳಬಯಸುತ್ತೇನೆ, ಎಂದೆ. ಅವರು ನನ್ನನ್ನೇ - ಇಂಗ್ಲಿಷ್‌ನಲ್ಲಿ ಹೇಳುವಂತೆ - with a quizzical look (ಪ್ರಶ್ನಿಸುವ, ಅನುಮಾನಿಸುವ ದೃಷ್ಟಿ) - ಏನದು ? ಅಂದರು. ತಾವೇ ಜ್ಞಾಪಕ ಚಿತ್ರ ಶಾಲೆ ಎಂಬ ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದೀರಿ. ಈಗ, ಜ್ಞಾಪಕ ಚಲನ ಚಿತ್ರ ಸರಣಿ, ಬೇಡ ಎನ್ನುತ್ತಿದ್ದೀರಿ - ಇದು ನ್ಯಾಯವೇ? ಡಿ. ವಿ. ಜಿ. ಅವರು ತಟಕ್ಕನೆ ಮೈ ಮನಸ್ಸುಗಳು ಚುಚ್ಚಿ ಎಬ್ಬಿಸಿದಂತಾಗಿ - ನೋಡಿದ್ರಾ ನೋಡಿದ್ರಾ - ಅದಕ್ಕೇ ಇವರನ್ನು ಯಾಕೆ ಕರೆದುಕೊಂಡು ಬಂದಿರಿ ಅಂತ ಕೇಳಿದ್ದು. ಒಂದು ಕ್ಷಣ ಮೌನವಾಗಿ - ಈಗ ನಾನು ಏನು ಮಾಡಬೇಕು ಅಂತೀರಾ ? ಮರಿಪುಟ್ಟಣ್ಣನವರು ಬೇಗನೆ, ಎಲ್ಲಾ ಕೃಷ್ಣಸ್ವಾಮಿಯವರು ಬಂದು ಹೇಳ್ತಾರೆ, ಸಾರ್, ಬಹಳ ವಂದನೆಗಳು ಎಂದು ನಮಸ್ಕರಿಸಿ, ನನ್ನ ಕೈಹಿಡಿದು ಹೊರ ಹೊರಟರು. ಅವರ ಖುಷಿ ಅವರು ನನ್ನ ಕೈಹಿಸುಕುತ್ತಿದ್ದ ರೀತಿಯಲ್ಲಿ ನನಗೆ ತಿಳಿಯಿತು. ಖುಷಿ ನನಗಾಗಲಿಲ್ಲ ಎಂದಲ್ಲ!

ಚಿತ್ರೀಕರಣ ಸಮರ್ಪಕವಾಗಿ ಮುಗಿದು, ಚಿತ್ರ ಯಶಸ್ವಿಯಾಗಿ ಗುಂಡಪ್ಪನವರಿರುವಾಗಲೇ ಪ್ರದರ್ಶಿತವಾಯಿತು.

ಡಾ. ಡಿ. ವಿ. ಜಿ. ಯವರು ಬಹಳ ಒಳ್ಳೆಯ ಹಾಸ್ಯ ಪ್ರಿಯರು. ನನಗೆ ಮದುವೆಯಾಗಿದೆಯೇ, ಮಕ್ಕಳೆಷ್ಟು ಎಂದು ಕುಶಲೋಪರಿ ಸಾಂಪ್ರತ ಕೇಳಿ, ಇನ್ನೆಲ್ಲಾದರೂ ದುರ್ಬೀನು ಹಾಕಿದ್ದೀರ ? ಹೀಗೆ ಚೇಷ್ಟೆಯ ನಗುವಿನಿಂದ ಕೇಳಿ, ನಾನು ಜೋರಾಗಿ ನಕ್ಕಾಗ - ಏನೂ ಇಲ್ಲ - ನನಗೆ ಡಾ. ಗುಂಡಣ್ಣನವರು ಎಂಬುವರು ಬಹಳ ಆಪ್ತರು - ಹಿತೈಷಿಗಳು. ನನ್ನ ಚಿಕ್ಕಂದಿನಲ್ಲಿ, ಒಂದು ದಿನ ಯೋಚಿಸುತ್ತಾ ಬಳೇಪೇಟೆಯಲ್ಲಿ foot path ಮೇಲೆ ನಿಂತಿದ್ದೆ. ಎಲ್ಲಿಂದಲೋ ಅವರು ಬಂದು, ನನ್ನ ಹಿಂದೆ ನಿಂತು, ಬೆನ್ನಿನ ಮೇಲೆ ಕೈಯೂರಿ ಏನೋ, ಎಲ್ಲಿ ದುರ್ಬೀನು ಹಾಕಿದ್ದೀಯ ಎಂದು ಚಕಿತಗೊಳಿಸಿ - ಜೋರಾಗಿ ನಕ್ಕರು. ಆ ಜ್ಞಾಪಕ ದಿಂದಲೇ ನಾನು ನಿಮ್ಮನ್ನು ಕೇಳಿದ್ದು ಎಂದು ಗಹಗಹಿಸಿ ನಕ್ಕರು ! ಸರ್. ಎಂ. ವಿ., ಸರ್. ಸಿ. ವಿ. ಅವರಂತೆಯೇ, ಅವರಷ್ಟೇ ಕರ್ತವ್ಯ ನಿಷ್ಠರು, ಡಾ. ಡಿ. ವಿ. ಜಿ.

ನಾನು ಚಿತ್ರೀಕರಣ ಶುರುಮಾಡಿದಾಗ, ಅವರಿಗೆ, ಸಾರ್, ಲೈಟುಗಳು, ಕೇಬಲ್ಲುಗಳು ನಮ್ಮೆಲ್ಲರ ಗಡಿಬಿಡಿಯಿಂದ ತಮಗೆ ಬಹಳ ತೊಂದರೆ ಪ್ರಯಾಸವಾಗುತ್ತದೆ. ದಯವಿಟ್ಟು ಕ್ಷಮಿಸಬೇಕು. ಇದೆಲ್ಲಾ ಅನಿವಾರ್ಯ ಎಂದೆ. ಏನೂ ಹೇಳಲಿಲ್ಲ. ಸುಮ್ಮಗಿದ್ದರು.

> **ನಗಾಲಿಗಾಡು**
> ಅ. ರಾ. ಮಿತ್ರ
>
> ಕಾರ್ಮಿಕ ಕಲ್ಯಾಣದಧಿಕಾರಿ ಮನೆಯ ಮುಂದೆ
> ಅಂದು ಗುಲ್ಲೋ ಗುಲ್ಲು ಜನಸಂದಣಿ ಕೇಕೆ
> ಮನೆಗೆಲಸದವಳರ್ಧ ದಿನದ ರಜೆ ಕೇಳಿದ್ದಕ್ಕೆ
> ಮನೆಯವರೆಲ್ಲ ಸೇರಿ ಬಡಿದದ್ದೇಕೆ ?

ಮಾರನೇ ದಿವಸವೂ ಅದೇ ಪೀಠಿಕೆಯ ಪ್ರವರ ಹೇಳಿದೆ. ತಕ್ಷಣ, ಅವರು ಗಂಭೀರವಾಗಿ, ಸ್ವಲ್ಪ ಕೋಪಗೊಂಡೇ - ಕೃಷ್ಣಸ್ವಾಮಿಯವರೇ, ನೆನ್ನೆಯೇ ಇದನ್ನು ನನಗೆ ಹೇಳಿದಿರಿ. ನಾನು ಈ ಕೆಲಸಕ್ಕೆ ಒಪ್ಪಿಕೊಂಡಿದ್ದೇನೆ. ನೀವು ನಿಮ್ಮ ಕೆಲಸ ಮಾಡುತ್ತಿದ್ದೀರಿ. ಇನ್ನೊಂದು ಸಲ ಕ್ಷಮೆಗಿಮೆಯ ಮಾತೆತ್ತಿದರೆ, ಈ ಕೆಲಸವನ್ನು ನಿಲ್ಲಿಸಿಬಿಡುತ್ತೇನೆ ಎಂದು ಗುಡುಗಿದರು !

ಚಿತ್ರವನ್ನು ನೋಡಿದವರಿಗೆ ಕೊನೆಯ ದೃಶ್ಯ ಜ್ಞಾಪಕವಿರಬಹುದು. ಬೆಂಗಳೂರು ಬಸವನಗುಡಿ ಬ್ಯೂಗಲ್ ರಾಕ್ಸ್ ಬಳಿ ಅಶ್ವತ್ಥ ವೃಕ್ಷದ ಕೆಳಗೆ ಅವರು ಪ್ರಶಾಂತಚಿತ್ತರಾಗಿ ಕುಳಿತಿರುವುದು. ಆಶೀರ್ವಚನಗಳನ್ನು ಹೇಳುತ್ತಿರುವುದು. ಸ್ಥೂಲ - ಬಹಳ ಸ್ಥೂಲಕಾಯರಾದ ಅವರಿಗೆ ಅದೂ ೮೨ನೆಯ ವರ್ಷದಲ್ಲಿ ಎಷ್ಟು ಪ್ರಯಾಸ ತಂದಿರಬೇಕು ನನಗೆ ಗೊತ್ತಿತ್ತು. ನನ್ನೆದೆ ಪ್ರತಿಕ್ಷಣವೂ ನಡುಗಿ, ಗುಡುಗುತ್ತಿತ್ತು ಡವ ಡವನೆ. ಏನಾದರೂ ಆದರೆ ಹೇಗಪ್ಪಾ ಪರಮಾತ್ಮಾ ಎಂದು.

ನಿರ್ವಿಘ್ನವಾಗಿ ಎಲ್ಲ ಸಂಪನ್ನವಾಯಿತು. ಅವರು ಹೇಳುತ್ತಿದ್ದ

ಓಂ ಶಾಂತಿಃ ಶಾಂತಿಃ ಶಾಂತಿಃ ಯೊಡನೆ.

* * *

ಈ ಲೇಖನದ ಕೊನೆಯ ಕುಸುಮ-

ವೀಣಾ ದೊರೆಸ್ವಾಮಿ ಐಯ್ಯಂಗಾರ್ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ನನ್ನ ಸಮಕಾಲೀನರು,



ವಯಸ್ಸಿನಲ್ಲಿ ನನಗಿಂತ ಎರಡು ವರ್ಷ ಹಿರಿಯರು. ಆ ದಿನಗಳಲ್ಲಿ ಪರಿಚಯಸ್ಥರಾಗಿದ್ದರು, ಅಷ್ಟೇ. ಕ್ರಮೇಣ ನಮ್ಮ ಸ್ನೇಹ ಬೆಳೆಯಿತು, ಬಲಿಯಿತು. ಎಂ. ವಿ. ಅವರ ಚಿತ್ರಕ್ಕೆ ವೀಣಾವಾದನದ ಸಹಾಯ ಒದಗಿಸಿದ್ದರು. ಡಿ. ವಿ. ಜಿ. ಅವರ ಚಿತ್ರಕ್ಕೆ ಐಯ್ಯಂಗಾರ್ಯರದೇ ಸಂಗೀತ ನಿರ್ದೇಶನ. ಇದಕ್ಕೂ ಮುನ್ನ ನನ್ನ ''ಸುಬ್ಬಾಶಾಸ್ತ್ರಿ'' ಚಿತ್ರಕ್ಕೆ ಮನಸ್ಸಿಲ್ಲದ ಮನಸ್ಸಿನಿಂದ ಸಂಗೀತ ನಿರ್ದೇಶನಕ್ಕೆ ಒಪ್ಪಿಕೊಂಡಿದ್ದರು. ವಾಸುದೇವಾಚಾರ್ ಅವರ ಮೊಮ್ಮಗ ಎಸ್. ಕೃಷ್ಣಮೂರ್ತಿ ಯವರನ್ನು ಸಹನಿರ್ದೇಶಕರಾಗಿ ಮಾಡಿಕೊಂಡಿದ್ದರು. ಆ ಸಮಯದಲ್ಲೇ ಅವರ ನಿಕಟ ಸ್ನೇಹ, ಆತ್ಮೀಯ ಸಹವಾಸ ಚಿಗುರಿದ್ದು.

''ಸುಬ್ಬಾಶಾಸ್ತ್ರಿ'' ಹಿನ್ನೆಲೆ ಹಾಗೂ ಹಾಡುಗಳ ಸಂಗೀತದ ರೆಕಾರ್ಡಿಂಗ್ ಸಂದರ್ಭದಲ್ಲಿ ಮದ್ರಾಸಿನಲ್ಲಿ, ನಾನಿದ್ದ ಹೋಟಲಿನಲ್ಲಿ ಅವರಿಗೆ ಪ್ರತ್ಯೇಕ ರೂಂ ಏರ್ಪಡಿಸಿದ್ದರೂ, ಅಯ್ಯೋ, ಬೇಡ ಸ್ವಾಮಿ, ನಿಮ್ಮ ರೂಂನಲ್ಲಿಯೇ ನೆಲದ ಮೇಲೆ ಒಂದು ಹಾಸಿಗೆ ಸಾಕು ಎಂದು ಪಟ್ಟುಹಿಡಿದರು. ಬೆಳಗಿನಝಾವ ೫ ಘಂಟೆ ಹೊತ್ತಿಗೆ ವೀಣೆ ಅಭ್ಯಾಸ ಮಾಡುತ್ತಿದ್ದರು. ಅದರಿಂದ ನಾನು ಎಚ್ಚರಗೊಂಡಾಗ - ತಮಗೆ ತೊಂದರೆ ಏನೋ? ಪಾಪ, ಅನ್ನುವರು. ನಾನು ಎಂಥ ಮಾತು ಸ್ವಾಮಿ, ಇದು ನನ್ನ ಪೂರ್ವ ಜನ್ಮದ ಸುಕೃತ ಎಂದಾಗ ಹ ಹ ಹ ಎಂದು ಜೋರಾಗಿ ನಗುವರು. ಆ ನಗು ತಾನೆ ಎಷ್ಟು ಸೊಗಸಾಗಿರುತ್ತಿತ್ತು, ನಿಸ್ಪೃಹವಾಗಿರುತ್ತಿತ್ತು !

ಅವರಿಂದ ಚೌಡಯ್ಯ ಹಾಗೂ ಅನೇಕ ಇತರ ಸಂಗೀತ ಮಹಾವಿದ್ವಾಂಸರ ಕತೆಗಳನ್ನು ಕೇಳುವುದು ರಸದೌತಣವಾಗಿತ್ತು. ಹಾಸ್ಯ ಲಹರಿಯಾಗಿತ್ತು.

''ಸುಬ್ಬಾಶಾಸ್ತ್ರಿ'' ವಿಷಯ ಹೇಳಿದಾಗ, ನಾನು ಯಾವಾಗಲೂ ಆಭಾರಿಯಾಗಿ ಸ್ಮರಿಸಿಕೊಳ್ಳುವುದು ಆ ಚಿತ್ರದಲ್ಲಿ ಪಾಲುಗೊಂಡ ಕೆಲವು ಮಹನೀಯರನ್ನು - ಎ. ಎನ್. ಮೂರ್ತಿರಾವ್, ಪು. ತಿ. ನರಸಿಂಹಾಚಾರ್, ದೊರೆಸ್ವಾಮಿ ಐಯ್ಯಂಗಾರ್, ಕೃಷ್ಣಮೂರ್ತಿ, ಬಾಲಮುರಳಿ ಕೃಷ್ಣ, ಶ್ರೀರಂಗಂ ಗೋಪಾಲರತ್ನಮ್, Flute ರಮಣಿ, ಅಡ್ಯಾರ್ ಲಕ್ಷ್ಮಣ್ ಇತ್ಯಾದಿ. ಕೇವಲ ಹೆಸರುಗಳನ್ನು ಉದುರಿಸುತ್ತಿದ್ದೇನೆಂದು ಭಾವಿಸಬಾರದು. ಎಂಥ ಪ್ರಾತಃಸ್ಮರಣೀಯರು, ಎಲ್ಲರೂ. ಇವರೆಲ್ಲರ ಸಹಕಾರ ಸಹಯೋಗವನ್ನು ಪಡೆದದ್ದು - ನಾನೇ ಅಪೇಕ್ಷಿಸಿ - ಈಗ ಮೂರೂವರೆ ದಶಕಗಳ ಹಿಂದೆ.

೧೯೬೭ರಲ್ಲಿ Film Division ನಡೆಸುತ್ತಿದ್ದ ಚಿತ್ರೋತ್ಸವ ಒಂದಕ್ಕೆ ಮುಂಬೈಗೆ ಹೋಗಿದ್ದೆ. ಆಗ ಅಲ್ಲಿ Chief Producer, D. Gautaman ಎಂಬುವರು. ಅವರು, ಏನು ಸಾರ್ ತಾವು Film Divisionನಿಂದ ದೂರವಾಗಿದ್ದೀರಿ ಎಂದರು. ನಾನು ನಕ್ಕು, ಹಾಗಲ್ಲ, Film Division ನನ್ನಿಂದ ದೂರವಾಗಿದೆ, ಎಂದೆ.

ಗೌತಮನ್‌ರವರು ಹೇಳಿದ ಮಾತಿಗೆ ಹಿನ್ನೆಲೆ - ಕೆಲವು ತಾತ್ವಿಕ ಭಿನ್ನಾಭಿಪ್ರಾಯಗಳ ಕಾರಣ, ೩೫ ವರ್ಷಗಳ ಹಿಂದೆ ಆ ಸಂಸ್ಥೆಯ ಕೆಲಸಕ್ಕೆ ರಾಜೀನಾಮೆ ಕೊಟ್ಟ ನಾನು ಅವರಿಂದ ಏನೂ ಯಾಚಿಸಿರಲಿಲ್ಲ, ಅವರೂ ನನ್ನ ವಿಷಯ ಯೋಚಿಸಿರಲಿಲ್ಲ. ಆಗ ನಾನಿದ್ದದ್ದು ಉನ್ನತ ಹುದ್ದೆಯಲ್ಲಿ. ಕೆಲವೇ ವರ್ಷಗಳಲ್ಲಿ ಆ ಸಂಸ್ಥೆಯ Chief Producer ಆಗುವ ಅವಕಾಶವಿತ್ತು.

"ಇಲ್ಲಾ ಸಾರ್ ತಾವು ನಮಗೆ ದಯವಿಟ್ಟು ಒಂದು ಚಿತ್ರ ಮಾಡಲೇಬೇಕು. ಒಂದು proposal ಕೊಡಿ. ನೀವು ನನ್ನನ್ನು ಮರೆತಿರಬಹುದು. ೧೯೬೧ರಲ್ಲಿ ನಾನು Poona Film Instituteನಲ್ಲಿ ವಿದ್ಯಾರ್ಥಿಯಾಗಿದ್ದೆ. ತಮ್ಮ ವಿದ್ಯಾರ್ಥಿಯಾಗಿದ್ದೆ. ಆ ದಿನಗಳನ್ನು ಮರೆಯುವಂತಿಲ್ಲ", ಎಂದು ಬಹಳ ವಿಶ್ವಾಸ, ಅಭಿಮಾನದಿಂದ ಹೇಳಿದರು. ಆಗಲಿ, ಎಂದು ಬೆಂಗಳೂರಿಗೆ ಹಿಂತಿರುಗಿದಾಗ, ಯೋಚಿಸಿ, ದೊರೆಸ್ವಾಮಿ ಐಯ್ಯಂಗಾರ್ ಅವರ ಒಪ್ಪಿಗೆ ಪಡೆದು, ಅವರ ಜೀವನ ಸಾಕ್ಷ್ಯಚಿತ್ರ ಮಾಡುವ ಯೋಜನೆ ಕಳುಹಿಸಿಕೊಟ್ಟೆ. ವರ್ಷವಾದರೂ, Flim Divisionನಿಂದ ಜವಾಬೇ ಬರಲಿಲ್ಲ. ಗೌತಮನ್ ಅವರು ನಿವೃತ್ತರಾದ ವಿಷಯವೂ ತಿಳಿಯಿತು. ಐಯ್ಯಂಗಾರ್ಯರಿಗೆ ವೃಥಾ ತೊಂದರೆ ಕೊಟ್ಟದ್ದಕ್ಕೆ ಕ್ಷಮೆ ಕೇಳಿದೆ. ಅಯ್ಯೋ ಬಿಡಿ, ನಿಮ್ಮದೇನು ತಪ್ಪು ಅಂದುಬಿಟ್ಟರು.

೧೯೯೭ರ ಕೊನೆಯಲ್ಲಿ - ಒಂದು ವರ್ಷ ಕೆಲವು ತಿಂಗಳುಗಳು ಕಳೆದನಂತರ ಒಂದು ದಿನ Film Division ನಿಂದ ಒಂದು ಪತ್ರ ಬಂತು. ನಿಮ್ಮ ಯೋಜನೆಯನ್ನು ಈ ವರ್ಷದ ಪ್ರೋಗ್ರಾಂನಲ್ಲಿ ಸೇರಿಸಿಕೊಂಡಿದ್ದೇವೆ. ತಕ್ಷಣ, ಬಡ್ಜೆಟ್, ಚಿತ್ರಕತೆ ಇತ್ಯಾದಿ ವಿವರಗಳನ್ನು ಕಳುಹಿಸಿ ಎಂದು. ಆದರೆ ಚಿತ್ರವನ್ನು ಖಚಿತವಾಗಿ ಮಾಡುವ ನಿಶ್ಚಯಕ್ಕೆ ಇನ್ನೂ ಆರು ತಿಂಗಳಾಯ್ತು. ಐಯ್ಯಂಗಾರ್‌ರಿಗೆ ಈ ವಿಷಯ ತಿಳಿಸಲು ಅವರ ಮನೆಗೆ ಹೋದಾಗ ಅವರು health check upಗೆ Nursing Homeಗೆ ಹೋಗಿದ್ದಾರೆ ಎಂದು ತಿಳಿಯಬಂತು. ಮಾರನೆಯ ದಿನ ಅವರನ್ನು ನೋಡಿದಾಗ ಅವರ ಆರೋಗ್ಯ ಸ್ಥಿತಿ ಬಹಳ ಕ್ಷೀಣಿಸಿತ್ತು. ನಾನು ಅವರಿಗೆ ಮೊದಲು ಆರೋಗ್ಯ ಸುಧಾರಿಸಿಕೊಳ್ಳಿ. ಆಮೇಲೆ ನಿಧಾನವಾಗಿ ಚಿತ್ರವನ್ನು ಮಾಡೋಣ. ನೀವು ಹೇಗೆ ಅಂದರೆ ಹಾಗೆ. ನಿಮಗೆ ನನ್ನ ಸಂಪೂರ್ಣ ಸಹಕಾರವಿದೆ ಎಂದು ಅವರು ಉತ್ತರಿಸಿದರು. ೪ - [illegible] ದಿನಗಳ ನಂತರ ಸುಮಾರು ೧೨ ಘಂಟೆ ಸಮಯ ಅವರ ಕಿರಿಯ ಮಗ ಬಂದು ಐಯ್ಯಂಗಾರ್ ಈಗ ಕೊಂಚ ಹೊತ್ತಿನಲ್ಲಿ ತೀರಿಕೊಂಡರು ಎಂದರು!

ನನಗೆ ಸಿಡಿಲೆರಗಿದಂತಾಯ್ತು. ಈ ಹೊತ್ತಿಗೆ ನನ್ನ ಆರೋಗ್ಯವೂ ಕೆಟ್ಟಿತ್ತು. ಆದರೂ ಎಲ್ಲ ಕಹಿ, ಕಷ್ಟಗಳನ್ನೂ ನುಂಗಿಕೊಂಡು ಚಿತ್ರವನ್ನು ೧೯೯೯ರಲ್ಲಿ ಮುಗಿಸಿದೆ.

ಈ ಕೆಲಸದಲ್ಲಿ ನನ್ನೊಡನೆ ಸಹಕರಿಸಿದವರನೇಕರು. ಆದರೆ, ಬೆನ್ನೆಲುಬಾಗಿ ನಿಂತವರು – ಕಾಲೇಜ್ ದಿನಗಳಿಂದಲೂ ಐಯ್ಯಂಗಾರ್ಯರಿಗೆ, ನನಗೆ ಆಪ್ತ ಮಿತ್ರರಾದ ಎಚ್. ವೈ. ಶಾರದಾಪ್ರಸಾದ್, ಶಿಷ್ಯ ಮತ್ತು ಮಗ ಡಿ. ಬಾಲಕೃಷ್ಣ ಹಾಗೂ ಅವರ ಕುಟುಂಬದವರೆಲ್ಲರೂ. ಚಿತ್ರದ ಕೊನೆಯಲ್ಲಿ ಬರುವ ಶ್ಲೋಕ

ವೀಣಾವಾದನ ತತ್ವಜ್ಞ ಶ್ರುತಿಜಾತಿವಿಶಾರದಃ।
ತಾಳಜ್ಞ ಪ್ರಯಾಸೇನ ಮೋಕ್ಷಮಾರ್ಗಂ ಸ ಗಚ್ಛತಿ॥

ಇದರ ಅರ್ಥವನ್ನು ವಿವರಿಸಬೇಕಾಗಿಲ್ಲ. ಹಾಗೇ, ಗಾದೆಯ ನನ್ನ ಅನುಭವವನ್ನು ವಿಷದೀಕರಿಸಬೇಕಾಗಿಲ್ಲ.

ಎಂ. ಎ. ಕೃಷ್ಣಸ್ವಾಮಿ
ಕುಸುಮ ಭವನ್, ೨೨೪, ೪ನೇ ಮುಖ್ಯ ರಸ್ತೆ, ಮಲ್ಲೇಶ್ವರಂ,
ಬೆಂಗಳೂರು - ೫೬೦ ೦೦೩

# ಕದ ತೆರೆಯಬಾರದೆ ಯಾರಾದರೂ !



ಪುಟ್ಟ ಮಗು ಅಳುತ್ತಿದೆ
ಮುದ್ದಿಸುವವರಿಲ್ಲದ
ಹೂ ತುಟಿಗಳೆರಡನ್ನೂ ಕಮಾನಾಗಿಸಿ
ಬಟ್ಟಲುಗಣ್ಣಿಂದ ಬರಗಾಲ ಧಾರೆ
ದುಃಖವುಕ್ಕಿದ ತುಂಬುಗೆನ್ನೆ
ಕಾಲದ ಕುರುಡು ಕಣ್ಣೆವೆಗಳ ಮೇಲೆ
ಬಡಿದೇ ಬಡಿವ ಮುದ್ದು ಕೈಗಳ ಕರುಳ ಲೀಲೆ
ಕದ ತೆರೆಯಬಾರದೆ ಯಾರಾದರೂ !

ಮುನಿಸಿಗೆ ಬಿಗಿದಿದ್ದ ಮುಖ ಮೆದುವಾಗಿದೆ
ಮಗು ಹೃದಯ ಕಣ್ಣಿಗೆ ಬಂದಿದೆ
ಮುಚ್ಚಿರುವ ಬಾಗಿಲೊಂದೇ ಮುಂದಿನ ದಾರಿಯೆಂಬ
ಮುಗ್ಧ ಹಠವನ್ನೂ ದೈನ್ಯತೆ ತಿಂದು ಹಾಕುತ್ತಿದೆ
ಅಕಾಲ ಕಾಲವಶವಾದ ವಿಧವೆಯ
ಅನಾಥ ಕೂಸಂತೆ
ಪುಟ್ಟ ಮಗು ಅಳುತ್ತಿದೆ
ತನ್ನ ಪಾಡಿಗೆ ತಾನೆಂಬಂತೆ
ನಡೆಯುತ್ತಲೇ ಇದೆ ಸಂತೆ
ನೀರಾಲಿಗಳ ಪಾತಾಳದಿಂದ ಅಕ್ಷಯ
ನಂಬಿಕೆಯ ಬುಗ್ಗೆ ಬತ್ತುವ ಮುನ್ನ
ತೋಳು ಚಾಚಿದ ತಬ್ಬಲಿಯ
ಎತ್ತಾಡಿದ ತೋಳುಗಳು ಆ ಅಳುವನ್ನಿಡೀ ತಬ್ಬಬಾರದೆ
ಒಳಗಿನವರು
ಕದ ತೆರೆಯಬಾರದೆ ಯಾರಾದರೂ !

ಇಂಗಿ ಹೋದ ಚುಕ್ಕಿಗಳ
ಮಾಸಲು ಬಾನಿನ
ನೀಲಿ ಬೆಳದಿಂಗಳ ತುಂಡು ಲಂಗದ

ಪುಟ್ಟ ಮಗು ಬೋರೆಂದು ಅಳುತ್ತಿದೆ
ಭೂಮಿಯೇ ಬಾಗಿಲು ತೆರೆದು ಸಂತೈಸಬಾರದೆ ?
ಲೋಹದ ಚಿಲಕಕ್ಕೆ ಕಿವಿಗಳಿಲ್ಲವೆಂಬ ಸತ್ಯ
ಗೊತ್ತಿಲ್ಲದ ಕಂದ
ಬಿಕ್ಕಿ ಬಿಕ್ಕಿ ಆಕ್ರಂದಿಸುತ್ತಲೇ ಇದೆ
ಮರದ ಬಾಗಿಲೂ ತೇವವಾಗಿ ಮಮ್ಮಲ ಮರುಗುವಂತೆ
ಸಾವೇ ಧಿಗ್ಗನೆದ್ದು ಬದುಕಿ ಬರುವಂತೆ
ಕೊನೆಯೇ ಇಲ್ಲದ ಈ ಅಳುವಿನ ಮೇಳಕ್ಕೆ
ಸುತ್ತಲೂ ಇರುವುದಾದರೂ
ಎಷ್ಟು ಬಾಗಿಲುಗಳು ? ಎಷ್ಟೊಂದು ಚಿಲಕಗಳು ?
ಕದ ತೆರೆಯಬಹುದಾದರೂ ತೆರೆವವರು ಯಾರು ?

೨

ಕದ ತೆರೆದ ಮನದ ಹೊಸಿಲು ದಾಟಿ
ತೊದಲು ಹೆಜ್ಜೆಗಳ ಮಗು
ಬೀದಿಗೆ ಬಿದ್ದು ಕಾಣೆಯಾಗಿದೆ
ಮಾಯಾ ನಗರದ ಗಾಜು ಥಳುಕಿನ ಅಳುಕಿಲ್ಲದೆ ಹೊಕ್ಕಿದೆ
ಹೊರಬಿದ್ದ ಮಗು ಮತ್ತೆ ಒಳಗೆ ಬಾರದೆ
ತೆರೆದಿದ್ದರೂ ಬಾಗಿಲು ಶಾಶ್ವತ ಮುಚ್ಚಿಕೊಂಡಂತಿದೆ

ತೆರೆದಾರಾದರೂ ಯಾರು
ಎಂದೂ ಮುಚ್ಚಿಲ್ಲದ ಕದದ ಚಿಲಕ
ಒಡೆದಾರಾದರೂ ಯಾರು
ಒಗಟಿನ ಸತ್ಯದ ಈ ಒಗಟ ?

ಲಕ್ಷ್ಮೀಪತಿ ಕೋಲಾರ
'ಸಂಚಿಕೆ' ಕಾರ್ಯಾಲಯ, ಪ್ರಧಾನ ಅಂಚೆ ಕಚೇರಿ ಹತ್ತಿರ
ಕೋಲಾರ-೫೬೩೧೦೧

ಕಳೆದ ಶತಮಾನದ ಅರವತ್ತರ ದಶಕದ ಕೊನೆಗೆ, ಮುಂಬಯಿಯಲ್ಲಿ ದಾಕ್ಷಿಣಾತ್ಯರ ಮೇಲೆ 'ಶಿವಸೇನೆ'ಯ ಅನಾಗರಿಕವೆನ್ನಬಹುದಾದ ಚಟುವಟಿಕೆಗಳು ತೀಕ್ಷ್ಣವಾಗಿದ್ದಾಗ, ನಾನು 'ಟೈಮ್ಸ್' ಪತ್ರಿಕೆಯ ಸುದ್ದಿ ವಿಭಾಗದ ಪ್ರಮುಖರೊಡನೆ 'ನೀವು ಶಿವಸೇನೆಯ ಅನ್ಯಾಯದ್ದೆಂದು ತೋರುವ ಚಟುವಟಿಕೆಗಳಿಗೆ ಪತ್ರಿಕೆಗಳ ಮೂಲಕ ಕೊಡುವ ಪ್ರಚಾರ ಅದರ ಮಹತ್ವವನ್ನು ಹೆಚ್ಚಿಸುವ ಕೆಟ್ಟ ಪರಿಣಾಮವನ್ನೆ ಮಾಡುವುದಿಲ್ಲವೆ?' ಎಂದು ಕೇಳಿದ್ದೆ. ಅದಕ್ಕೆ ಅವರು ಕೊಟ್ಟ ಉತ್ತರ 'ಯಾವ ರೀತಿಯ ಸುದ್ದಿಯನ್ನೂ ಪತ್ರಿಕೆ ಕಡೆಗಣಿಸುವುದು ಪತ್ರಿಕಾ ಧರ್ಮವಾಗುವುದಿಲ್ಲ' ಎಂದು. ಒಂದು ಪ್ರಜಾಸತ್ತಾತ್ಮಕ ರಾಜ್ಯ ವ್ಯವಸ್ಥೆಯಲ್ಲಿ ಆಡಳಿತೆಯ ಕಾರ್ಯನಿರ್ವಹಣೆಯ ಲೋಪ ದೋಷಗಳನ್ನು ಪ್ರಜೆಗಳ ಗಮನಕ್ಕೆ ತರುವುದರಲ್ಲಿ, ಅನ್ಯಾಯದ ಪ್ರಕರಣಗಳನ್ನು ಬಯಲಿಗೆಳೆಯುವುದರಲ್ಲಿ, ಪ್ರಜೆಗಳ ನೋವನ್ನು ಆಡಳಿತೆಯ ಗಮನಕ್ಕೆ ತರುವುದರಲ್ಲಿ ಪತ್ರಿಕೆಗಳ ಪಾತ್ರ ಮಹತ್ವದ್ದು ಎಂಬುದು ನಿರ್ವಿವಾದವಾದ ಮಾತು.

# ಮಾಧ್ಯಮ ಸಂಸ್ಕೃತಿ

ತಮ್ಮ ವಿಕೃತ ಉದ್ದೇಶಗಳಿಗಾಗಿ 'ಸುದ್ದಿ' ಗಳನ್ನು ಸೃಷ್ಟಿಸುವ ಅಥವಾ ತಿರುಚುವ ಸನ್ನಿವೇಶಗಳು ಮಾಧ್ಯಮ ಸಂಸ್ಕೃತಿಯಲ್ಲಿ ಕಾಣಸಿಗುತ್ತವೆ. ಇದಕ್ಕೆ ದೇಶೀಯ - ವಿದೇಶೀಯ ಪತ್ರಿಕಾ ಮಾಧ್ಯಮಗಳು ಎಂಬ ಭೇದವಿಲ್ಲ. ಸುದ್ದಿಯ ಹಿಂದೆ ತುಸುವಾದರೂ ಸಾಮಾಜಿಕ ಚಿಂತನೆಯಿರಬೇಕು ಎಂಬ ಆದರ್ಶ ಪತ್ರಿಕೆಗಳಿಗೆ ಅನಗತ್ಯವಾಗಿದೆ. ತಮ್ಮ ಪ್ರಸಾರ ಹೆಚ್ಚಿಸಿಕೊಳ್ಳುವ ಒಂದೇ ಉದ್ದೇಶದಿಂದ ಅವು ಕೆಲವೊಮ್ಮೆ ಅದರಿಂದಾಗುವ ದೀರ್ಘಕಾಲಿಕ ಹಾನಿಯನ್ನು ಗಮನಿಸುವುದಿಲ್ಲ.

■

ವ್ಯಾಸರಾಯ ಬಲ್ಲಾಳ

ಹಾಗೆಯೇ ಜನತೆ ಹಾಗೂ ಆಡಳಿತೆಯ ಸಂಬಂಧ ಪಾರದರ್ಶಕ ರೀತಿಯಲ್ಲಿ ಬೆಳೆದು ಒಂದು ಜನಪರವೆನಿಸುವ ಸಾಂಸ್ಕೃತಿಕ ಪರಿಸರವನ್ನು ನಿರ್ಮಿಸಲು ಪತ್ರಿಕೆಗಳು ಸಹಾಯ ಮಾಡಬಹುದು. ಆದರೆ ಕಾರ್ಯಕಾರಣ ಜಿಜ್ಞಾಸೆಯಿರದೆ, 'ಸುದ್ದಿ'ಯ ಪರಿಣಾಮಗಳ ಕಾಣ್ಕೆಯಿರದೆ, ಪತ್ರಿಕಾ ಧರ್ಮಕ್ಕೆ 'ಸುದ್ದಿ'ಯನ್ನು ಅರಸುವುದೊಂದೆ ಕರ್ತವ್ಯ ಎನ್ನುವ ದೃಷ್ಟಿಯನ್ನು ತಳೆದಾಗ, ಮುಂದೆ ಆಗಬಹುದಾದ ಪರಿಣಾಮಗಳೇನು ಎಂದು ಯೋಚಿಸಿಕೊಂಡಿದ್ದರೆ ಮಾತ್ರ ಯಾವ ಸುದ್ದಿಗಾದರೂ ಕೊಡಬೇಕಾದ ಮಹತ್ವ ಎಷ್ಟು, ಪತ್ರಿಕೆಗಳಲ್ಲಿ ಅಂತಹ ಸುದ್ದಿಗಳಿಗೆ ಸಿಗಬೇಕಾದ ಸ್ಥಾನ ಎಲ್ಲಿ ಎಂದು ನಿರ್ಧರಿಸುವ ತಿಳಿವಳಿಕೆ ತಂದುಕೊಳ್ಳಲು ಸಾಧ್ಯವಾಗುತ್ತದೆ. ಮುಂಬಯಿಯ ಶಿವಸೇನೆಯ ರ್ಗರ್ಕರ ಚಟುವಟಿಕೆಗಳಿಗೆ ಮೊದಲು, ಮುಂಬಯಿಯಲ್ಲಿ 'ಬಂದ್' ಹರತಾಳಗಳು ಆಗುತ್ತಿರಲಿಲ್ಲವೆಂದಲ್ಲ. ಆದರೆ ಬಸ್ಸುಗಳಿಗೆ ಕಾರುಗಳಿಗೆ ಕಲ್ಲು ಹೊಡೆದು ಗ್ಲಾಸು ಒಡೆಯುವುದು, ಬಲವಂತದಿಂದ ಅಂಗಡಿ ಮುಂಗಟ್ಟುಗಳನ್ನು ಮುಚ್ಚಿಸುವುದು, ಒಲ್ಲದವರ ಮೇಲೆ ಹಲ್ಲೆ ನಡೆಸುವುದು, ಇಂಥವೆಲ್ಲ ತೀರ ಅಪರೂಪವಾಗಿದ್ದವು. ಅಂಚೆ ಕಛೇರಿಗಳು, ಬ್ಯಾಂಕುಗಳು, ಸರಕಾರಿ ಕಛೇರಿಗಳೆಲ್ಲ ತೆರೆದಿರುತ್ತಿದ್ದವು. ಯಾವಾಗ ಈ ಬಂದ್ ಹರತಾಳಗಳೂ ಹಿಂಸೆಗೆ ಪ್ರಚೋದನೆ ಕೊಡುವುದು ಸಾಮಾನ್ಯ ಎಂಬ ತಿಳಿವಳಿಕೆ ಮೂಡಿತೋ ಅದರ ನಂತರ 'ಬಂದ್'ನ ಸುದ್ದಿ ತಿಳಿದೇ ಎಲ್ಲ ವ್ಯವಹಾರ ನಿಲ್ಲಿಸಿ ಅಂಥ ದಿನಗಳಲ್ಲಿ ಬಾಗಿಲು ಮುಚ್ಚಿಕೊಳ್ಳುವಂತಾಯಿತು. ಶಿವಸೇನೆ ತನ್ನ ಕಾರ್ಯ ವಿಧಾನಗಳಿಗಿಂತಲೂ ಹೆಚ್ಚು, ಪ್ರಚಾರ ಮಾಧ್ಯಮಗಳು ಅದಕ್ಕೆ ಕೊಟ್ಟ ಮಹತ್ವದಿಂದ ಒಂದು ರಾಜಕೀಯ ಶಕ್ತಿಯಾಗಿ ಬೆಳೆದು ಮುಂದೆ ಏನಾಯಿತೆಂಬುದು ಈಗ ಇತಿಹಾಸ. 'ಸುದ್ದಿ'ಗಳಿಗೆ ಪತ್ರಿಕೆಗಳು ಕೊಟ್ಟ ಸ್ಥಾನ ಪ್ರಾಮಾಣಿಕ ಪತ್ರಿಕಾ ಧರ್ಮವೆನಿಸಿರಬಹುದು. ಆದರೆ ಪ್ರಚಾರದಿಂದಲೇ ಮಹತ್ವ ಪಡೆಯುವ ವಿಧ್ವಂಸಕ ನೀತಿ ನಮ್ಮ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರವನ್ನು ಹಾಳುಗೆಡವಲು ಕಾರಣವಾದೀತು ಎಂದು ತಿಳಿಯುವುದು ವಿಶಿಷ್ಟ ಕಾಣ್ಕೆಯಿರುವ ಪತ್ರಿಕೆಗಳಲ್ಲಿ ಮಾತ್ರ.

ಇನ್ನೊಂದು ನೆನಪಿಗೆ ಬರುವ ಉದಾಹರಣೆ, ನಮ್ಮ ಪಂಜಾಬದ ಪ್ರತ್ಯೇಕ ಸ್ವತಂತ್ರ ರಾಜ್ಯದ ಬೇಡಿಕೆ - ಖಾಲಿಸ್ತಾನ. ಈ ಬೇಡಿಕೆ ಬರುವುದಕ್ಕೆ ಸ್ವಲ್ಪ ಸಮಯದ ಮೊದಲು ಪಂಜಾಬ ರಾಜ್ಯದಲ್ಲಿ ರಾಜ್ಯದ ಪೊಲೀಸರ ಮುಷ್ಕರದ ಒಂದು ಸುದ್ದಿ ಒಳಪುಟಗಳಲ್ಲಿ ಸಣ್ಣ ಅಕ್ಷರಗಳಲ್ಲಿ ಪ್ರಕಟವಾಗಿತ್ತು. ಎಲ್ಲ ಮುಷ್ಕರಗಳಂತೆ ಇದು ಒಂದು ಮುಷ್ಕರ ಎಂಬ ಸಾಮಾನ್ಯ ತಿಳಿವಳಿಕೆ ಓದುಗರಲ್ಲಿ ಬರುವಂತೆ ಪ್ರಕಟವಾದ ಸುದ್ದಿ. ಮುಷ್ಕರ ಪೊಲೀಸರ ಸಾಮಾನ್ಯ ಬೇಡಿಕೆಗಳಿಗಾಗಿ ಆಗಿದ್ದರೂ, ಖಾಲಿಸ್ತಾನ ಪ್ರಶ್ನೆ ಉಗ್ರ ಸಮಸ್ಯೆಯಾದಾಗ ಈ ಸಮಸ್ಯೆ ಪೊಲೀಸು ದಳವನ್ನು ಭಾವನಾತ್ಮಕವಾಗಿ ಕಾಡಬಹುದು ಎಂಬ ಕಾಣ್ಕೆ ಇಟ್ಟಾಗ, ಮುಷ್ಕರದ ಸುದ್ದಿಗೆ ಮಹತ್ವದ ಪ್ರಚಾರ ಸಿಗಬೇಕಿತ್ತು ಎಂದು ಆಡಳಿತೆಗೂ ಪತ್ರಿಕೆಗಳಿಗೂ ತಿಳಿಯಬೇಕಿತ್ತು. ಚಳವಳ ಉಗ್ರ ರೂಪ ತಾಳಿ ಹತ್ಯೆಯಾಗುತ್ತಲೇ ಬಂದು ಅಮಾಯಕರ ಸಂಖ್ಯೆ ಹೆಚ್ಚುತ್ತಲೇ ಹೋದಾಗ, ನ್ಯಾಯ ಪಾಲನೆ ಮಾಡಬೇಕಾದ ಪೊಲೀಸರ ಕರ್ತವ್ಯ ನಿಷ್ಠೆಗೆ ಆಧಾರವಾಗಬೇಕಾದ ಅವರ ಜೀವನ ಶೈಲಿಯ ಬಗ್ಗೆ, ಅದರ ಸುಧಾರಣೆಗೆ ಏನಾದರೂ ಪ್ರಯತ್ನಗಳು ನಡೆದಿವೆಯೇ ಎಂಬ ವಿಚಾರ ಪತ್ರಿಕೆಗಳಲ್ಲಿ ಏನೂ ಇಲ್ಲ. ಪೊಲೀಸರ ಮುಷ್ಕರ ಅಂತಹ ಮಹತ್ವದ ಸುದ್ದಿಯೇನಲ್ಲ; ಆದರೆ 'ಹತ್ಯೆ' ಸುದ್ದಿಯಾಗುತ್ತದೆ, ಓದುಗರ ಭಾವನೆಗಳನ್ನು ತಟ್ಟುತ್ತದೆ, ಪರ ವಿರೋಧ ವಿಚಾರಗಳ ಗುಂಪುಗಳನ್ನು ಸೃಷ್ಟಿಸುತ್ತದೆ. ಸಾಮಾನ್ಯ ಜೀವನವನ್ನು ಕದಡುತ್ತದೆ. ಹತ್ಯೆಗಳು ಹೆಚ್ಚಿದಂತೆ ಈ 'ಸುದ್ದಿ'ಗಳ ಪ್ರಚಾರ ಹೆಚ್ಚಾಗಿ ಸಮಸ್ಯೆ ಪೆಡಂಭೂತವಾಗಿ ಸಾಮಾಜಿಕ ಹಾಗೂ ರಾಜಕೀಯ ಜೀವನಕ್ಕೆ ಸವಾಲುಗಳನ್ನು ಎಸೆಯುತ್ತದೆ. ಇಂತಹ ಕೊಲೆಗಳು ಹೆಚ್ಚಾಗುತ್ತ ಹೋದಂತೆಲ್ಲ 'ಸುದ್ದಿ'ಗಳನ್ನು ವಿಕ್ರಯ ಮಾಡುವ ಪತ್ರಿಕೆಗಳು ಇಂತಹ ಪ್ರಕರಣಗಳಿಗೆ ಪರಿಹಾರ ರಾಜಕೀಯ ನೆಲೆಯಲ್ಲಿ ಮಾತ್ರ ಎಂಬ ನಂಬಿಕೆ ಬೆಳೆದು ಪಂಜಾಬ ಕಾಶ್ಮೀರಗಳಲ್ಲಾದಂತೆ ಕೊಲೆಯ ಸುದ್ದಿಗಳು ಸಂಖ್ಯೆಯ ಮಟ್ಟಕ್ಕೆ ಇಳಿಯುತ್ತವೆ. ಪತ್ರಿಕೆಗಳ ಓದುಗರಿಗೂ ಆ ಮೂಲಕ ಜನಸಾಮಾನ್ಯರಿಗೂ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುತ್ತದೆ. ಖಾಲಿಸ್ತಾನಕ್ಕಾಗಿಯೇ ಅಮಾಯಕರ ಹತ್ಯೆ ಎಂಬುದೇ ಪತ್ರಿಕೆಗಳ ಮೂಲಕ ಸಾರಿದ ಸತ್ಯವಾಗಿ ಪ್ರತ್ಯೇಕತೆಯ ವಿಷದ ಬೀಜವನ್ನು ಬಿತ್ತಿದ ಸಂಸ್ಥೆಗಳು

ಖ್ಯಾತಿಯನ್ನೋ ಕುಖ್ಯಾತಿಯನ್ನೋ ಗಳಿಸಿ ತಮ್ಮ ಕೃತಿಗಳಿಗೆ ದೊರಕಿದ ಪ್ರಚಾರದಿಂದಾಗಿ ಅನಾಯಾಸವಾಗಿ ಮಹತ್ವವನ್ನು ಪಡೆಯುತ್ತವೆ. ಪಂಜಾಬದಲ್ಲಿ ಖಾಲಿಸ್ತಾನ ಚಳವಳಕ್ಕೆ ಸಂಬಂಧಿಸಿದ ಹತ್ಯೆಗಳೆಂದು ಹೇಳಲಾದ ಎಲ್ಲ ಹತ್ಯೆಗಳಿಗೆ ಈ ಚಳವಳದ ಆದರ್ಶವೇ ಕಾರಣವೇ ? ಅವುಗಳಲ್ಲಿ ಇತರ ಕಾರಣಗಳಿಗಾಗಿ ಸೇರಿಕೊಂಡ ಕೊಲೆಗಳೆಷ್ಟು, ಈ ಚಳವಳದ ಕಾರಣದಿಂದ ವೈಯಕ್ತಿಕ ಸೇಡು ತೀರಿಸಿಕೊಳ್ಳಲು ಆದ ಕೊಲೆಗಳೆಷ್ಟು, ಚಳವಳಕ್ಕೆ ಏನೂ ಸಂಬಂಧವಿರದ ಕೊಲೆಗಳೆಷ್ಟು ಎಂದು ತಿಳಿಯಲು ಸಾಧ್ಯವಾಗುವುದಿಲ್ಲ. ಈ ಸಮಸ್ಯೆಗೆ ಹೊಂದಿಸಿದ ಹತ್ಯೆಗಳ ಅತಿ ಪ್ರಚಾರದಿಂದಾಗಿ ಖಾಲಿಸ್ತಾನದ ಆದರ್ಶಕ್ಕೆ ಅಪ್ರತ್ಯಕ್ಷವಾಗಿ ಪತ್ರಿಕೆಗಳೇ ನೆರವು ನೀಡಿದಂತಾಗುವುದಿಲ್ಲವೇ ಎಂಬುದು ಉತ್ತರಿಸಲಾಗದ ಪ್ರಶ್ನೆ. ನಮ್ಮ ಪತ್ರಿಕೆಗಳು 'ಸುದ್ದಿ'ಗಳ ಪೂರ್ವಾಪರ ವಿಷಯಗಳತ್ತ ಗಮನ ಹರಿಸುವುದಿಲ್ಲ. ಇದು ನಮ್ಮ ಮಾಧ್ಯಮ ಸಂಸ್ಕೃತಿ.

ನಮ್ಮ ರಾಜ್ಯದಲ್ಲಿ ಬರ, ಬೆಳೆ ಹಾನಿಗಳಿಂದಾಗಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಸುದ್ದಿಗಳು ಪ್ರಕಟವಾಗುತ್ತಲೇ ಇವೆ. ಇವೆಲ್ಲ ಸುದ್ದಿಗಳ ಹಿಂದೆ ಮತ್ತು ಮುಂದೆ ಏನು ಎಂಬ ಪ್ರಶ್ನೆ ನನ್ನನ್ನು ಕಾಡಿದೆ. ಆತ್ಮಹತ್ಯೆ ಯಾವ ವ್ಯಕ್ತಿಗೂ ಸುಲಭದ ನಿರ್ಧಾರವೇನಲ್ಲ. ತನಗೆ ಬದುಕಲು ಬೇರೆ ದಾರಿಯೇ ಇಲ್ಲ, ತನ್ನ ಜೀವ ತೆಗೆದುಕೊಳ್ಳುವುದೇ ಸಮಸ್ಯೆಗೆ ಪರಿಹಾರ ಎನ್ನುವಾಗ ಮಡದಿ ಮಕ್ಕಳು ಮುಂದೆ ಅಪಾಯಕ್ಕೆ ಗುರಿಯಾಗಬಹುದು ಎಂಬ ವಿಚಾರವೂ ಮನಸ್ಸಿನಿಂದ ಮರೆಯಾಗುವುದು. ಆದರೆ ಬ್ಯಾಂಕಿನಿಂದ ಪಡೆದ ಸಾಲ ಹಿಂದಿರುಗಿಸಲು ಸಾಧ್ಯವಾಗುವುದಿಲ್ಲ ಎಂಬ ತಿಳಿವಳಿಕೆಯೇ ಈ ದುಸ್ಸಾಹಸಕ್ಕೆ ಕಾರಣವೆಂದಾಗ ಹಲವಾರು ಪ್ರಶ್ನೆಗಳು ಏಳುವುದು ಸಹಜ. ಕೃಷಿಗೆ ವಿಮೆ ಇಳಿಸುವ ಸೌಕರ್ಯ ಇರಲಿಲ್ಲವೆ? ಪಂಚಾಯತ್ ವ್ಯವಸ್ಥೆಯಲ್ಲಿ ಸಮಾಧಾನ ಹೇಳಬಹುದಾದ ತಜ್ಞರ ಸಲಹೆ ಪಡೆಯುವುದು ಸಾಧ್ಯವಿರಲಿಲ್ಲವೆ? ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸಾಲ ಪಡೆಯಲು ಆಧಾರವಾಗಿ ಕೊಟ್ಟುದೇನನ್ನು? ಬೇರೇನಾದರೂ ಕೌಟುಂಬಿಕ ಕಾರಣಗಳಿದ್ದುವೆ ? ಇತರ ಸಾಲ ಮಾಡಿದ ಎಲ್ಲ ರೈತರು ಬೆಳೆ ನಾಶದ ಸಮಸ್ಯೆಯನ್ನು ಆತ್ಮಹತ್ಯೆಯ ಮೂಲಕವೇ ಪರಿಹರಿಸಿಕೊಂಡಿದ್ದಾರೆಯೆ? ಅಥವಾ, ತನ್ನ ಕುಟುಂಬದ ಎಲ್ಲ ಸಮಸ್ಯೆಗಳಿಗೆ, ಸಿಗಬಹುದೆಂದು ತಿಳಿದ ಪರಿಹಾರಧನದ ದೃಷ್ಟಿಯಿಂದ ಆತ್ಮಹತ್ಯೆಯೆ? ಎಂಬೆಲ್ಲ ಪ್ರಶ್ನೆಗಳು ಪತ್ರಿಕೆಗಳ ಸುದ್ದಿಯಿಂದಷ್ಟೆ ತಿಳಿಯುವುದಿಲ್ಲ. ಘಟನೆಗಳಿಗೆ ಕಾರಣ ಶೋಧಿಸುವುದು ಪತ್ರಿಕಾಧರ್ಮವೆನಿಸುವುದಿಲ್ಲ. ಆತ್ಮಹತ್ಯೆಯ ಸುದ್ದಿ ಮಾತ್ರ ಮುಖ್ಯವಾಗುತ್ತದೆ. ಇದೂ ನಮ್ಮ ಮಾಧ್ಯಮ ಸಂಸ್ಕೃತಿ.

ನಾನು ಕನ್ನಡ ದೈನಿಕವೊಂದರ ಸಂಪಾದಕರೊಡನೆ ಒಂದು ಪ್ರಶ್ನೆ ಕೇಳಿದ್ದೆ. ಈ ಆತ್ಮಹತ್ಯೆಯ ಪ್ರಕರಣಗಳ ಒಂದು ಸಮರ್ಪಕವೆನಿಸುವ ಅಧ್ಯಯನ ನಡೆಸುವುದು ಪತ್ರಿಕೆಗಳ ಹೊಣೆಗಾರಿಕೆಯಲ್ಲವೆ? ಎಂದು. ಅದಕ್ಕೆ ಉತ್ತರವಾಗಿ ಅವರು ಹೇಳಿದ್ದು 'ನನಗೂ ಆ ವಿಚಾರ ಇದೆ' ಎಂದಷ್ಟೆ. ಹೀಗಿದ್ದು ಸಾಮಾನ್ಯ ಜನರಿಗೆ ರೈತರ ಆತ್ಮಹತ್ಯೆಗಳ ಸುದ್ದಿಯಷ್ಟೇ ನಿಜವೆನಿಸಿ ಕೃಷಿಗಾಗಿ ಸಾಲ ಪಡೆದು ಹಿಂದಿರುಗಿಸಲಾಗದೆ ಸಾಂಕ್ರಾಮಿಕ ರೋಗದಂತೆ ಆತ್ಮಹತ್ಯೆಯ ಪ್ರಕರಣಗಳು ಹೆಚ್ಚುತ್ತಿವೆ ಎಂಬುದೇ ಸತ್ಯವಾಗುತ್ತದೆ. ಪತ್ರಿಕೆಗಳ ಓದುಗರೂ ಎಲ್ಲ ಸುದ್ದಿಗಳನ್ನು ವಿಶ್ಲೇಷಿಸುವ ವೈಚಾರಿಕ ಚಿಂತನೆಯನ್ನು ಬೆಳೆಸಿಕೊಳ್ಳಬೇಕಾದುದೂ ಮಾಧ್ಯಮ ಸಂಸ್ಕೃತಿಯ ಒಂದು ಮುಖವಾಗುತ್ತದೆ.

ಸುದ್ದಿಯ ಹಿಂದೆ ತುಸುವಾದರೂ ಸಾಮಾಜಿಕ ಚಿಂತನೆಯಿರಬೇಕು ಎನ್ನುವ ಆದರ್ಶ ಪತ್ರಿಕೆಗಳಿಗೆ ಅನಗತ್ಯ. ಅವರಿಗೆ ಸುದ್ದಿಯೇ ಆದರ್ಶ ಎನ್ನುವಾಗ ಅವರ ಗಮನ ಪ್ರಸಾರ ಸಂಖ್ಯೆಯ ಮೇಲೂ ಇರುತ್ತದೆ, ಜಾಹೀರಾತುಗಳ ಆದಾಯದ ಮೇಲೂ ಇರುತ್ತದೆ. ಪತ್ರಿಕೆಯಲ್ಲಿ ಸುದ್ದಿಗಳಿಗೆ ಸ್ಥಾನ ಕಾಣಿಸುವುದರಲ್ಲೂ ಪತ್ರಿಕೆಯ ಗಮನ ಎಷ್ಟು ಮಂದಿ ಓದುಗರ ಅಥವಾ ಓದುಗ ಬಳಗದ ಉದ್ರೇಕಕ್ಕೆ, ಕೋಪಕ್ಕೆ, ಕಚಗುಳಿಗೆ, ಭಯಕ್ಕೆ, ಆನಂದಕ್ಕೆ ಸುದ್ದಿ ಕಾರಣವಾಗಬಹುದು ಎಂದೇ. ಇದು ಉದ್ದೇಶಪೂರ್ವಕವಾಗಿಯೇ ಇರಬೇಕಾಗಿಲ್ಲ. ಸಾಮಾಜಿಕ ಹಿತಕ್ಕೆ ಪೂರಕವಾಗಿದೆಯೇ ಇಲ್ಲವೇ ಎಂಬುದು ಅವರಿಗೆ ಮುಖ್ಯವಲ್ಲ. ಹಿಂದೆ ಶಿವಸೇನೆಯ ಉದಾಹರಣೆ ಕೊಟ್ಟಂತೆ 'ಸುದ್ದಿ'ಯ ಪರಿಣಾಮಗಳ ಬಗೆಗೆ ಎಚ್ಚರಿಕೆ ವಹಿಸಬೇಕೆಂದು ಅವರಿಗೆ ತೋರುವುದೂ ಇಲ್ಲ. ಇತ್ತೀಚೆಗಿನ ಒಂದು ಉದಾಹರಣೆ ಇಂದು ಎಲ್ಲರ ಬಾಯಿಯಲ್ಲಿರುವ ಒಸಾಮಾ ಬಿನ್ ಲಾಡೆನ್ ಅವರದು.

ಸೆಪ್ಟಂಬರ್ ೧೧ರಂದು ಅಮೆರಿಕದ ನ್ಯೂಯಾರ್ಕ್ ನಗರದಲ್ಲಿ ಮಾಡಲಾದ ವಿಧ್ವಂಸಕ ಕೃತ್ಯಗಳು ನಡೆದ ಕೆಲವು ದಿನಗಳಾದ ಮೇಲೆ ದಿಲ್ಲಿಯ ಜಮಾ ಮಸೀದಿಯ ಶಾಹಿ ಇಮಾಮ್ ಅವರು ತಾಲಿಬಾನ್ ಮತ್ತು ಒಸಾಮಾ ಬಿನ್ ಲಾಡೆನ್ ಈ ಕೃತ್ಯಗಳಿಗೆ ಕಾರಣರಲ್ಲ, ತನ್ನ ಸಹಾನುಭೂತಿಯೆಲ್ಲ ಅವರ ಕಡೆಗೆ ಎಂದು ತನ್ನ ಚಿಂತನೆಯನ್ನು ಪತ್ರಿಕಾಕರ್ತರೊಡನೆ ಹಂಚಿಕೊಂಡರು. ಅವರು ಈ ವಾದವನ್ನು ಇನ್ನೂ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಭಾರತದ ಮುಸ್ಲಿಮರ ನಾಯಕ ತಾನು, ಮುಸ್ಲಿಮರೇ ಬಹು ಸಂಖ್ಯೆಯಲ್ಲಿರುವ ವಿಶ್ವದ ಎರಡನೆಯ ರಾಷ್ಟ್ರವಾದ ಭಾರತದಲ್ಲಿ ತಮ್ಮ ಅಭಿಪ್ರಾಯವೇ ಮುಸ್ಲಿಮರ ಪ್ರಾತಿನಿಧಿಕ ಅಭಿಪ್ರಾಯವೆಂಬ ಅಹಂಕಾರದ ವರ್ಚಸ್ಸು ಇದರಲ್ಲಿರಬಹುದು. ಹಿಂದೂ ಮುಸ್ಲಿಂ ಬಾಂಧವ್ಯವನ್ನು ಕದಡುವ ಸನ್ನಿವೇಶಗಳನ್ನೇ ಹೆಚ್ಚಾಗಿ ಇಂದು ನಾವು ಕಾಣುತ್ತಿರುವುದರಿಂದ ಇದು ತುಸು ಉದ್ರೇಕಕ್ಕೆ ಕಾರಣವಾದ ಹೇಳಿಕೆ. ಪತ್ರಿಕೆಗಳಿಗೆ ಈ ವಿಚಾರ ಮುಖ್ಯವಲ್ಲ. 'ಸುದ್ದಿ' ಜನರನ್ನು ಕೆರಳಿಸಬಹುದಾದುದರಿಂದ ಅದಕ್ಕೆ ಪ್ರಮುಖ ಸ್ಥಳ ಮುಖಪುಟದಲ್ಲಿ. ಅದೇ ಸಂದರ್ಭದಲ್ಲಿ ಅಮೆರಿಕದ ವಿಧ್ವಂಸಕ ಕೃತ್ಯಗಳು ಇಸ್ಲಾಂ ಧರ್ಮಕ್ಕೆ ಅಪಚಾರವೆನಿಸುವಂಥವು, ಅಮಾನವೀಯ ಎಂದು ಹಲವು ಮುಸ್ಲಿಂ ಸಂಸ್ಥೆಗಳು ಕೊಟ್ಟ ಹೇಳಿಕೆಗಳು ಉದ್ರೇಕಕಾರಿಯಲ್ಲವಾದ ಕಾರಣ ಅವುಗಳ ಸ್ಥಾನ ಒಳಪುಟಗಳಲ್ಲಿ, ಸಣ್ಣ ಅಕ್ಷರಗಳಲ್ಲಿ. ತಿಳಿವಳಿಕೆಯುಳ್ಳ ಓದುಗರನ್ನು ಗೊಂದಲದಲ್ಲಿ ಕೆಡವಲು ಪತ್ರಿಕೆಗಳ ಪರೋಕ್ಷ ಸಹಾಯ. ಮುಂದೆ ಶಾಹಿ ಇಮಾಮ್ ಅವರು ತನ್ನ ಅಭಿಪ್ರಾಯವನ್ನೇ ಮುಂದುವರಿಸಿದ ಇನ್ನೊಂದು ಸಂದರ್ಭದಲ್ಲಿ ಆ ಹೇಳಿಕೆಯನ್ನು ಖಂಡಿಸಿ ಶಾಹಿ ಇಮಾಮ್ ಅವರನ್ನು ಕಂದಹಾರಕ್ಕೆ ಕಳಿಸಿ ಎಂದು ಸುಪ್ರಸಿದ್ಧ ಸಿನೆಮಾ ನಟಿ ಹಾಗೂ ರಾಜ್ಯಸಭಾ ಸದಸ್ಯೆ ಅವರ ಹೇಳಿಕೆಗೆ ಮುಖಪುಟದ ಮಹತ್ವ. ಕಾರಣ ಅವರ ಹೇಳಿಕೆಯಲ್ಲ. ಶಬನಾ ಆಜ್ಮಿಯವರು ಸುಪ್ರಸಿದ್ಧ ಚಿತ್ರ ನಟಿ ಹಾಗೂ ರಾಜ್ಯಸಭಾ ಸದಸ್ಯೆ ಹಾಗೂ ಸಾಮಾಜಿಕ ಕೆಲಸಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿರುವವರು ಎಂದೇ. ಇದೂ ನಮ್ಮ ಮಾಧ್ಯಮ ಸಂಸ್ಕೃತಿ. ಎಂದರೆ ಒಂದು 'ಸುದ್ದಿ'ಯ ಮಹತ್ವ ಆ ಸುದ್ದಿಯ ಮೂಲದ ವ್ಯಕ್ತಿಯನ್ನು ಅವಲಂಬಿಸಿದೆ, ಸುದ್ದಿಯ ಹಿಂದಿನ ಅಭಿಪ್ರಾಯವನ್ನಲ್ಲ. ಅದು ಯಾರನ್ನಾದರೂ ಉದ್ರೇಕಿಸುವ, ಭಾವನೆಗಳನ್ನು ತಟ್ಟುವ, ಸುದ್ದಿಯಾದರೆ ಅದಕ್ಕೆ ವಿಶೇಷ ಮಹತ್ವ - ಅದರ ಪರಿಣಾಮ ಸಾರ್ವಜನಿಕ ಜೀವನದ ಮೇಲೆ ಯಾವ ರೀತಿಯಾದೀತೆಂಬುದು ಪತ್ರಿಕೆಗಳಿಗೆ ಮುಖ್ಯವಲ್ಲ.

ಇನ್ನು ತಮ್ಮ ವಿಕೃತ ಉದ್ದೇಶಗಳಿಗಾಗಿ 'ಸುದ್ದಿ'ಗಳನ್ನು ಸೃಷ್ಟಿಸುವ ಅಥವಾ ತಿರುಚುವ ಸನ್ನಿವೇಶಗಳು ಮಾಧ್ಯಮ ಸಂಸ್ಕೃತಿಯಲ್ಲಿ ಕಾಣಸಿಗುತ್ತವೆ. ಇದಕ್ಕೆ ದೇಶೀಯ - ವಿದೇಶೀಯ ಪತ್ರಿಕಾ ಮಾಧ್ಯಮಗಳು ಎಂಬ ಭೇದವಿಲ್ಲ. ಉದಾಹರಣೆಗೆ ಇಂದು ಸಾರ್ವತ್ರಿಕವಾಗಿ ಸುದ್ದಿಯಲ್ಲಿರುವ ಒಸಾಮಾ ಬಿನ್ ಲಾಡೆನ್ ಅವರನ್ನೇ ಬಳಸೋಣ. ಕಳೆದ ಅಕ್ಟೋಬರ್ ೧೪ರಂದು ಸುಪ್ರಸಿದ್ಧ ರಾಯಿಟರ್ ಸುದ್ದಿ ಸಂಸ್ಥೆ ಪ್ರಕಟಿಸಿದ ಒಂದು ಸುದ್ದಿ ಒಸಮಾ ಬಿನ್ ಲಾಡೆನ್ ಅವರ ೧೮ ವರ್ಷದ ಪುತ್ರ ತನ್ನ ತಂದೆ ಆಫಘಾನ್ ಪರ್ವತಗಳ ಒಂದು ಗುಹೆಯಲ್ಲಿ ತನ್ನ ಮುನ್ನೂರು ಮಂದಿ ಕಮಾಂಡೋಗಳ ಜತೆಗೆ ಅಡಗಿರುವುದಾಗಿಯೂ ಅವರು ತನ್ನ ಜತೆಗೆ ೬೦ ಟ್ರಕ್ಕುಗಳಲ್ಲಿ ಸೆಟಿಲ್ಯಾಟ್ ಉಪಕರಣಗಳನ್ನು ಸೆಪ್ಟೆಂಬರ್ ೧೧ರಂದೇ ಒಯ್ದಿರುವುದಾಗಿಯೂ ಬ್ರಿಟನ್‌ನ 'ಸಂಡೇ ಮಿರರ್' ಪೇಶಾವರದಲ್ಲಿ ತನಗೆ ಸಂದರ್ಶನ ಕೊಟ್ಟುದಾಗಿಯೂ, ತಂದೆ ತಾಲಿಬಾನ್‌ಗೆ ವಿರುದ್ಧವಾಗಿ ಉತ್ತರದಲ್ಲಿರುವ ಸೈನ್ಯದ ಮೇಲೆ ಜಯ ಗಳಿಸುವ ಯೋಜನೆ ಹಾಕುತ್ತಿರುವುದಾಗಿಯೂ ಹೇಳಿದರೆಂದು ವರದಿಯಾಗಿತ್ತು. ಆದರೆ ಮೂರು ದಿನಗಳು ಕಳೆದ ಮೇಲೆ ಮತ್ತೊಂದು ವಿದೇಶೀಯ ಸುದ್ದಿ ಸಂಸ್ಥೆ 'ಎಸೋಸಿಯೇಟೆಡ್ ಪ್ರೆಸ್', 'ಸಂಡೇ ಮಿರರ್' ಪತ್ರಿಕೆ ಪ್ರಕಟಿಸಿದ ಸಂದರ್ಶನ ನಡೆದೇ ಇಲ್ಲವೆಂದೂ, ಬಿನ್ ಲಾಡೆನ್ ಅವರ ಮಗನೇ ಸೌದಿ ಅರೇಬಿಯಾದ ಜೆಡ್ಡಾದಲ್ಲಿ ಒಂದು ಪತ್ರಿಕೆಗೆ ಕೊಟ್ಟ ಹೇಳಿಕೆಯಲ್ಲಿ ತನ್ನ ವಯಸ್ಸು ೧೮ ಅಲ್ಲ ೨೪ ಎಂದೂ, ತಾನು ಪಾಕಿಸ್ತಾನದಲ್ಲಿ ಇದ್ದುದ್ದು ೧೨ ವರ್ಷಗಳ ಹಿಂದೆ - 'ಸಂಡೇ ಮಿರರ್' ಪತ್ರಿಕೆ ಸಂದರ್ಶನ ನಡೆದದ್ದು ಪೇಶಾವರದಲ್ಲೆಂದು ತಿಳಿಸಿತ್ತು - ತಾನು ತಂದೆಯೊಡನೆ ಮಾತನಾಡಿದ್ದು ದೂರವಾಣಿಯ ಮೂಲಕ ಆರು ವರ್ಷಗಳ ಹಿಂದೆ ಎಂದು ಹೇಳಿಕೆ ನೀಡಿದ್ದರು. ಮಗ ಹೇಳಿದ ಎನ್ನಲಾದ ಮೊದಲನೆಯ ಸುದ್ದಿ ಉದ್ವೇಗ ಉದ್ರೇಕಗಳಿಗೆ ಕಾರಣವಾಗಬಹುದಾದಂಥದು ಮುಖಪುಟಗಳಿಗೆ. ಎರಡನೆಯ ನಿರಾಕರಣೆ ಒಳಪುಟಗಳಿಗೆ. ಹಿಂದಿನ ತಪ್ಪು ಮರೆಮಾಚಲು! ಇದು ಮಾಧ್ಯಮ ಸ್ವಾತಂತ್ರ್ಯ.

ಇಂದು ಮಾಧ್ಯಮ ಜಗತ್ತು ಅತ್ಯಂತ ವಿಸ್ತಾರವಾಗಿದೆ. ಟಿ. ವಿ. ವಿಶ್ವವ್ಯಾಪಿಯಾಗಿದೆ. ಆಕಾಶದ ಗಾಳಿಗೆ ಸುಂಕವಿಲ್ಲ ಎಂದು ಕೋರ್ಟು ತೀರ್ಪು ಕೊಟ್ಟ ಮೇಲೆ ಇಡಿಯ ವಿಶ್ವವೇ ಒಂದು ಹಳ್ಳಿಯಂತಾಗಿದೆ. ಡಿಜಿಟಲ್ ತಂತ್ರಜ್ಞಾನ, ಸೆಟಿಲೈಟ್ ಜಾಲಗಳು ಮನರಂಜನೆಯ ಜತೆಗೆ ಮನಸ್ಸನ್ನು ಕೆಣಕುವ, ಅಭಿರುಚಿಯನ್ನು ತಿದ್ದುವ ದೃಶ್ಯಗಳನ್ನೂ ತೋರಿಸುತ್ತಿವೆ. ಟಿ. ವಿ. ಮಾಧ್ಯಮ ಮನುಷ್ಯನ ಅಭಿರುಚಿ, ಸಂಸ್ಕಾರಗಳನ್ನು ತನಗೆ ಬೇಕಾದಂತೆ ತನ್ನದೇ ಆದ ರೀತಿಯಲ್ಲಿ ತಿದ್ದುವ ಕೆಲಸವನ್ನು ಮಾಡುತ್ತಿದೆ. ಪತ್ರಿಕೆಗಳಲ್ಲಿ ಓದಿ ತಿಳಿಯಬಹುದಾದುದನ್ನು ದೃಶ್ಯಮಾಧ್ಯಮದ ಮೂಲಕ ನೋಡಿ ಜನ ತಮ್ಮ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬಹುದು. ಪತ್ರಿಕೆಗಳಿಗಿಂತ ಈ ಮಾಧ್ಯಮದಲ್ಲಿ ಪ್ರಸಾರ ಸಾಮರ್ಥ್ಯ ಹೆಚ್ಚು. ದೃಶ್ಯಮಾಧ್ಯಮಗಳು ಭಾವನೆಗಳನ್ನು ತಟ್ಟುವ ಮಾದರಿಯಲ್ಲಿ

ಪತ್ರಿಕೆಗಳು ತಟ್ಟುವುದಿಲ್ಲ. ಪತ್ರಿಕೆಗಳನ್ನು ಓದುವವರು ಕೂಡ ದೇಶದ ಅಥವಾ ರಾಜ್ಯದ ಸಾಕ್ಷರತೆಯ ಪ್ರಮಾಣದಲ್ಲೇ, ಕೇರಳವನ್ನುಳಿದು, ಇತರ ರಾಜ್ಯಗಳಲ್ಲಿ ಇಲ್ಲ. ಆದರೆ ಟಿ. ವಿ. ನಿರಕ್ಷರ ಕುಕ್ಷಿಗಳಿಗೂ ಮನರಂಜನೆಯ ಸಾಧನ. ವೈಜ್ಞಾನಿಕ ತಿಳಿವಳಿಕೆ ಹರಡುವಲ್ಲಿ, ನಿಸರ್ಗದ ವಿಸ್ಮಯಗಳನ್ನು ಪರಿಚಯಿಸುವಲ್ಲಿ, ಟಿ. ವಿ. ಒಳ್ಳೆಯ ಕೆಲಸವನ್ನು ಮಾಡಲು ಸಾಧ್ಯ. ರಾಜಸ್ತಾನದಲ್ಲಿ ಬರ ಬಂದಾಗ ನೀರಿಗಾಗಿ ಬಡಪಾಯಿ ಮಹಿಳೆ ಹಗ್ಗ ಹಿಡಿದು ಆಳವಾದ ಬಾವಿಯಲ್ಲಿ ದೊರಕುವ ತುಸು ನೀರನ್ನು ಪಡೆಯಲೆಂದು ಬಾವಿಗಿಳಿದ ದೃಶ್ಯ, ಒರಿಸ್ಸಾದಲ್ಲಿ ಆಹಾರವಿರದೆ ಮಾವಿನ ತೊಗಟೆ ತಿಂದು ಸಾವಿನ ದಾರಿ ನೋಡುವ ಬಡಪಾಯಿಗಳ ದೃಶ್ಯ, ನೈಸರ್ಗಿಕ ಅನಾಹುತಗಳಿಂದಾಗುವ ದಾರುಣ ನೋವಿನ ದೃಶ್ಯಗಳು, ಇವೆಲ್ಲ ಸತ್ಯದ ಸ್ಪಷ್ಟ ಚಿತ್ರ ಕೊಡುವಂಥವು. ಆದರೆ ಪತ್ರಿಕೆಗಳಂತೆಯೇ ಟಿ. ವಿ. ಮಾಧ್ಯಮ ಕೂಡ ಜಾಲದ ಅಥವಾ ಟಿ.ವಿ. ಜಾಲವನ್ನು ಹೊಂದಿರುವ ರಾಷ್ಟ್ರದ ಉದ್ದೇಶಗಳಿಗನುಗುಣವಾಗಿ ತಮ್ಮ ಸ್ವಾರ್ಥಕ್ಕಾಗಿ ವೀಕ್ಷಕರ ಭಾವನೆಗಳನ್ನು ತಮಗೆ ಬೇಕೆನಿಸುವ ದೃಷ್ಟಿಯಲ್ಲಿ ಹಾಗೂ ಪರ, ವಿರೋಧ ಭಾವನೆಗಳನ್ನು ಹೆಚ್ಚಿಸಲು ಕಾರಣವಾಗುವುದೂ ಇದೆ. ತಮಗೆ ಬೇಕಾದಂತೆ ಸುದ್ದಿಗಳನ್ನು ತಿರುಚಲೂ ಟಿ.ವಿ. ಸಹಾಯ ಮಾಡುವುದು ಸಾಧ್ಯ. ಮೊನ್ನೆ ಮೊನ್ನೆ ನಡೆದ ಜಯಲಲಿತಾ - ಕರುಣಾನಿಧಿಯವರ ಜಗಳದ ದೃಶ್ಯಗಳು ದೃಶ್ಯಮಾಧ್ಯಮದ ದುರುಪಯೋಗಕ್ಕೆ ಒಂದು ಉದಾಹರಣೆ. ಅಂತಾರಾಷ್ಟ್ರೀಯ ನೆಲೆಯಲ್ಲೂ ಅಮೆರಿಕ ಬಿನ್ ಲಾಡೆನ್ ಸಮರದಲ್ಲಿ ಪ್ಯಾಲಿಸ್ಟೇನ್ ನಾಗರಿಕರೂ ಅಮೆರಿಕವನ್ನು ವಿರೋಧಿಸುತ್ತಾರೆ ಎಂದು ಹಿಂದಿನ ಯಾವುದೋ ಒಂದು ಪ್ರಸಂಗದ ದೃಶ್ಯವನ್ನು ಈಗ ನಡೆದಂತೆ ತೋರಿಸಿರುವುದು ತಪ್ಪು ಕಲ್ಪನೆ ವೀಕ್ಷಕರಲ್ಲಿ ಬರುವಂತೆ ಮಾಡುವ ಯತ್ನ. ಅಮೆರಿಕದ ಅಟ್ಲಾಂಟಾದಲ್ಲಿರುವ ಸಿ. ಎನ್. ಎನ್. ಜಾಲ ಪಾಕಿಸ್ತಾನ ಈಗ ಅಮೆರಿಕದ ಸಮರ ಮಿತ್ರನಾಗಿರುವುದರಿಂದ ಭಾರತದ ವಸ್ತುಸ್ಥಿತಿಯನ್ನು ತಿರುಚುವುದರಲ್ಲಿ, ಮರೆಸುವುದರಲ್ಲಿ ತೋರಿಸುತ್ತಲೇ ಬಂದಿರುವ ಚಾಣಾಕ್ಷತೆಯೂ ಒಂದು ನಿದರ್ಶನ.

ಪ್ರಜಾಸತ್ತೆಯನ್ನು ಅದರ ನಿಜವಾದ ಅರ್ಥದಲ್ಲಿ ಮತದಾನ ಪದ್ಧತಿಯ ಮೂಲಕ ಯಶಸ್ವಿಯಾಗಿ ಮುಂದುವರಿಯಲು ಸಾಧ್ಯವಾಗಿಸುವುದು ಶಿಕ್ಷಣದ ಸಂಸ್ಕಾರವಿರುವ ಜನತೆ. ಇವರಿಗೆ ಸಾಮಾಜಿಕ ನಾಯಕತ್ವವನ್ನು ಒದಗಿಸಬೇಕಾದವರು ಶಿಕ್ಷಣದ ಸಂಸ್ಕಾರ ಪಡೆದ ಮಾಧ್ಯಮ ವರ್ಗದವರು. ಇವರಿಗೆ ರಾಜ್ಯ-ದೇಶಗಳ ಆಗುಹೋಗುಗಳ ತಿಳಿವಳಿಕೆ ಬರಬೇಕಾದ್ದು ಮಾಧ್ಯಮಗಳ ಮೂಲಕ, ಅದರಲ್ಲೂ ಪತ್ರಿಕೆಗಳ ಮೂಲಕ. ಮಾಧ್ಯಮ ಪ್ರಪಂಚದ ವಿಕೃತ ದೃಷ್ಟಿಕೋನಗಳೇನೇ ಇರಲಿ ಅವುಗಳ ಸಂಬಂಧವನ್ನು ಜನತೆ ಇರಿಸಿಕೊಳ್ಳುವುದು ಒಂದು ರೀತಿಯ ಜಾಗೃತಿಯನ್ನು ತೋರಿಸುತ್ತದೆ. ಕರ್ನಾಟಕ ಮಾತ್ರ ಈ ದೃಷ್ಟಿಯಲ್ಲಿ ದಕ್ಷಿಣದ ಇತರ ರಾಜ್ಯಗಳಿಗಿಂತ, ಮಹಾರಾಷ್ಟ್ರವೂ ಸೇರಿದಂತೆ, ತುಂಬ ಹಿಂದುಳಿದ ರಾಜ್ಯವಾಗಿದೆ. ನಮ್ಮ ಜನಸಂಖ್ಯೆಯ ಪ್ರಮಾಣ ಪ್ರತಿಶತ ೫೬ರಿಂದ ಈ ಸಲದ ಖಾನೇಶುಮಾರಿಯಲ್ಲಿ ೬೭ಕ್ಕೆ ಏರಿದೆಯಾದರೂ ಸಾಕ್ಷರತೆಯ ಪ್ರಮಾಣದಲ್ಲಿ ಪತ್ರಿಕೆಗಳ ಪ್ರಸಾರ ಸಂಖ್ಯೆಯೂ ಏರಿದೆ ಎನ್ನಲು ಅನುಮಾನಿಸಬೇಕಾಗುತ್ತದೆ. ಯಾಕೆಂದರೆ ಕರ್ನಾಟಕದ ಯಾವ ಪತ್ರಿಕೆಯೂ ದೇಶದ ೧೪ ಪ್ರಮುಖ ಪತ್ರಿಕೆಗಳ ಸಾಲಿನಲ್ಲಿಲ್ಲ. ನೆರೆಯ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಕೇರಳಗಳು ಇಂತಹ ಪತ್ರಿಕೆಗಳನ್ನು ಪಡೆದಿವೆ.

ಮಾಧ್ಯಮ ಪ್ರಪಂಚದ ಹುಳುಕುಗಳೇನೇ ಇರಲಿ ಲೋಕಸತ್ತೆಯನ್ನು ಪಾರದರ್ಶಕ ರೀತಿಯಲ್ಲಿ ಆಡಳಿತೆ ನಡೆಸುವಂತೆ ಮಾಡಲು ಪತ್ರಿಕಾ ಮಾಧ್ಯಮ ಒಂದು ಪ್ರಬಲ ಅಸ್ತ್ರ. ಮಾಧ್ಯಮ ಸಂಸ್ಕೃತಿಯ ಹುಳುಕುಗಳನ್ನೂ ಅರ್ಥಮಾಡಿಕೊಂಡು ಸಾಮಾಜಿಕ ನಾಯಕತ್ವವನ್ನು ಜನತೆಗೆ ಒದಗಿಸುವುದೂ ಶಿಕ್ಷಣದ ಸಂಸ್ಕಾರ, ವೈಚಾರಿಕ ದೃಷ್ಟಿಕೋನವಿರುವ ಮಧ್ಯಮ ವರ್ಗ. ಇಂತಹ ನಾಯಕತ್ವಕ್ಕೆ ಸಾಮಾಜಿಕ ಸಮಸ್ಯೆಗಳನ್ನು ವಿಶ್ಲೇಷಿಸಲು ಸಹಾಯ ಮಾಡುವುದೂ ಪತ್ರಿಕೆಗಳೇ. ಎಲ್ಲ ವಿಚಾರಗಳ ನಡುವೆಯೂ ಪತ್ರಿಕೆಗಳಿಗೂ ಮಧ್ಯಮ ವರ್ಗದಿಂದ ಬರಬೇಕಾದ ಸಾಮಾಜಿಕ ನಾಯಕತ್ವಕ್ಕೂ ಮುರಿಯಲಾಗದ ನಂಟು. ಲೋಕಸತ್ತೆಯಲ್ಲಿ ನಾವು ಮಾಧ್ಯಮ ಕ್ಷೇತ್ರದ ನೆರವನ್ನು ಬಿಟ್ಟಿರಲಾಗುವುದಿಲ್ಲ. ಹಾಗೆಯೇ ಮಾಧ್ಯಮ ಸಂಸ್ಕೃತಿಯ ಎಲ್ಲ ಮುಖಗಳನ್ನೂ ಅರ್ಥಮಾಡಿಕೊಳ್ಳಬೇಕಾದ ಸಾಮಾಜಿಕ ನಾಯಕತ್ವವನ್ನೂ ಬಿಟ್ಟಿರಲಾಗುವುದಿಲ್ಲ.

ವ್ಯಾಸರಾಯ ಬಲ್ಲಾಳ
ನಂ. ೧೦೬೪, 'ಉತ್ತರಾಯಣ'
ಕುಮಾರಸ್ವಾಮಿ ಲೇಔಟ್, ೧ನೇ ಘಟ್ಟ
ಬಿ. ಡಿ. ಎ. ಪಾರ್ಕ್ ಹತ್ತಿರ, ಬೆಂಗಳೂರು - ೭೮




ಪಿಟೀಲು ವಾದಕಿ ಪ್ರೀತಿಯ ಕತೆ ನಿಮಗೆ ಗೊತ್ತೇ ?

ಮೊಟ್ಟ ಮೊದಲನೆಯದಾಗಿ ಈಕೆ ಪಿಟೀಲು ವಾದನದಲ್ಲಿ ತನಗೂ ಸಂಗೀತ ಕಲಾನಿಧಿ ಪರೂರು ಎಂ. ಎಸ್. ಗೋಪಾಲಕೃಷ್ಣನ್ ಅವರಿಗೂ ಏನೇನೂ ವ್ಯತ್ಯಾಸವಿಲ್ಲ ಎಂದು ದೃಢವಾಗಿ ನಂಬಿಕೊಂಡಿದ್ದಾಳೆ. ಪಿಟೀಲನ್ನು ಭಕ್ತಿಯಿಂದ ಭುಜಕ್ಕೆ ಒರಗಿಸಿಕೊಳ್ಳುವ ರೀತಿ, ಕಮಾನು ಹಿಡಿಯುವ ಶೈಲಿ, ಆಗಾಗ ಮೃದಂಗದವರತ್ತ ಮೃದುವಾಗಿ ತಿರುಗಿ ಸಮ್ಮತಿ ಸೂಚಕ ಮಂದಹಾಸಗಳನ್ನು ಬೀರುವುದು, ತಾರ ಸಂಚಾರಗಳ ಉತ್ಕಂಠಿತ ಸ್ಪಂದನಗಳಲ್ಲಿ ಅರೆಗಣ್ಣು ತೇಲಿಸುವುದು.... ಎಲ್ಲ, ನೂರಕ್ಕೆ ನೂರು, ಪರೂರರಂತೆಯೇ !

ಪ್ರೀತಿಯ ಖ್ಯಾತಿ ಇಲ್ಲಿಗೆ ಮುಗಿಯುವುದಿಲ್ಲ. ಮನಸ್ಸು ಮಾಡಿದರೆ ತನ್ನ ರಭಸದ ನುಡಿಸಾಣಿಕೆಯಲ್ಲಿ ಈಕೆ ಸುರುಟಿ ರಾಗವನ್ನು ಮುರುಟಿಸಬಲ್ಲಳು. ಕೀರವಾಣಿಯನ್ನು ಕಿರುಗುಟ್ಟಿಸಬಲ್ಲಳು. ನಳಿನ ಕಾಂತಿಯನ್ನು ಅಳಿಸಬಲ್ಲಳು. ಇದು ಕಡಿಮೆ ಸಾಧನೆಯಲ್ಲ. ಈಕೆಯ ಅಪ್ರತಿಮ ಪ್ರತಿಭೆಯನ್ನು ಕಂಡು, ಯೆಹುದಿ ಮೆನುಹಿನ್ ಕೂಡ ಬೆನ್ನು ತಟ್ಟಿ, ''ಸ್ವರ ಭೀಕರ ಭೀಷಣ'', ''ವಿವಿಧ ವಾದ್ಯ ವಿಧ್ವಂಸಕಿ,'' ''ಸಂಗೀತ ಸೌಖ್ಯ ಸಂಹಾರಿಣಿ'' ಮುಂತಾದ ಪ್ರಚಂಡ ಪ್ರಕಾಂಡ ಬಿರುದುಗಳನ್ನು ಪ್ರದಾನ ಮಾಡಿದ ಸಂಗತಿ ಪೇಪರುಗಳಲ್ಲಿ ಹೆಡ್‌ಲೈನ್‌ಗಳಲ್ಲೇ ಬಂದಿತ್ತಂತಲ್ಲ ?

ಈಕೆಯ ಮನೆಯವರೇನೋ ಈ ದೈತ್ಯ ಪ್ರತಿಭೆಯನ್ನು ಸುಮ್ಮನೆ ಸಹಿಸಿಕೊಂಡಿದ್ದಾರೆ. ಯಾಕೆಂದರೆ ತಮ್ಮ ತಮ್ಮ ಕಿವಿಗಳನ್ನು ಬಂದೋಬಸ್ತು ಮಾಡಿಕೊಳ್ಳುವ ಕಲೆ ಅವರಿಗೆ ಕರಗತವಾಗಿದೆ. ಆದರೆ ಅಕ್ಕಪಕ್ಕದವರ ಗತಿ ? ಬಂದೆ ಬಂದೆ: ಆ ವಿಷಯಕ್ಕೇ ಬಂದೆ. ಪ್ರೀತಿಯ ಪಕ್ಕದ ಮನೆ ತಾತ ಒಂದು ದಿನ ಅವಳಲ್ಲಿಗೆ ಬಂದರು. ಗುರುತರ ಗೌರವ ಭಾವದಿಂದ ಅವಳ ಕಡೆಯೇ ನೋಡುತ್ತಾ ''ಭಾಳಾ ಚೆನ್ನಾಗಿ ಪಿಟೀಲು ನುಡಿಸ್ತೀ ಕಣೇ ತಾಯೀ...'' ಅಂದರು. ''ನಿನ್ನ ಕಲೆಯೇ ಕಲೆಯಮ್ಮ.. ಕರ್ಣಾನಂದ !'' ಅಂದರು. ಇವಳು ಎಲ್ಲಿಲ್ಲದ ಲಜ್ಜೆಯನ್ನೂ, ಸಜ್ಜನಿಕೆಯನ್ನೂ ಮುಖದಲ್ಲಿ ಪ್ರದರ್ಶಿಸುತ್ತಾ ವಿದ್ವಾಂಸರು ಮಾಡುವಂತೆ ಪದೇಪದೇ ನಸು ಮಡಿಸಿದ ಬಲಹಸ್ತವನ್ನು ಕುತ್ತಿಗೆಯೆಡೆಗೆ ಕ್ಷಿಪ್ರಗತಿಯಲ್ಲಿ ಕೊಂಡೊಯ್ಯುತ್ತಾ ವಿನಯವನ್ನು ಮೆರೆಯತೊಡಗಿದಳು. ಇವೆಲ್ಲ ಚಹರೆಗಳು ಚೆನ್ನಾಗಿ ಮೂಡಿಬರುತ್ತಾ ಇದೆಯೋ ಇಲ್ಲವೋ ನೋಡಿಕೊಳ್ಳಲು ಮೈಸೂರು ಅರಮನೆ ದ್ವಾರದಲ್ಲಿರುವಂಥ ಬೃಹತ್ ಭೂತಗನ್ನಡಿಗಳು ಎದುರಿಗಿಲ್ಲವಲ್ಲ ಅಂತ ಸಖತ್ ದುಃಖವೂ ಆಯಿತು.

ಇತ್ತ ತಾತ ಇರುವ ತಲೆಯೆಲ್ಲ ಉಪಯೋಗಿಸಿ ಪ್ರೀತಿಯನ್ನು ಕಂಡಾಬಟ್ಟೆ ಹೊಗಳಿದರು. ಕಡೆಗೆ ಉಪಾಯವಾಗಿ ''ಎಲ್ಲಿ ಮಗೂ, ನಿನ್ನ ಪಿಟೀಲು ಸ್ವಲ್ಪ ಈ ಕಡೆ ಕೊಡು... ಒಂದ್ಸಾರಿ ನೋಡಿ ಕೊಟ್ಟುಬಿಡ್ತೀನಿ !'' ಅಂದರು. ಪ್ರೀತಿ ಏಕ್‌ದಂ ಹುಷಾರಾದಳು. ಯಾಕೆಂದರೆ ಹೀಗೆಯೇ ಪಿಟೀಲು ಸಾಲ ಕೇಳಿದ ಇನ್ನೊಂದು ತಾತನ ಕತೆ ಅವಳಿಗೆ ಗೊತ್ತಿತ್ತು. ಆ ಕತೆ ಹೀಗೆ ಬರತ್ತೆ. ಒಂದೂರಲ್ಲಿ ಒಬ್ಬ ಸಂಗೀತದ ವಿದ್ಯಾರ್ಥಿ ಇದ್ದ. ಪಿಟೀಲು ಅವನ ಹೊರಪ್ರಾಣ. ಮೂರು ಹೊತ್ತೂ ಅದನ್ನೇ ಕುಯ್ಯುತ್ತಾ ಸುತ್ತಲಿನ ಜನಜೀವನವನ್ನು ದುರ್ಭರಗೊಳಿಸಿದ್ದ. ಎದುರು ಮನೆ ತಾತ ನೋಡುವಷ್ಟು ನೋಡಿತು, ಸಹಿಸುವಷ್ಟು ಸಹಿಸಿತು. ಕಡೆಗೊಂದು ದಿನ ಅವನ ಹತ್ತಿರ ಬಂದು ''ಒಂದು ದಿನದ ಮಟ್ಟಿಗೆ ನಿನ್ನ ಪಿಟೀಲು ಕೊಟ್ಟಿರಪ್ಪ ಇಟ್ಕೊಂಡಿರ್ತಿನಿ, ಯಾಕೋ ಆಸೆ ಆಗ್ತಾ ಇದೆ'' ಅಂತ ಅವನ ಪಿಟೀಲು ತಗೊಂಡು ಹೋಯ್ತು. ಆದರೆ..... ಒಂದು ದಿನ ಏನು, ನಾಲ್ಕು ದಿನ ಆದರೂ ವಾದ್ಯ ವಾಪಸು ಬರಲಿಲ್ಲ. ಈ ಚಿಗುರು ಕಲಾವಿದ ಹೋಗಿ ''ಎಲ್ಲಿ ತಾತ ನನ್ನ ಪಿಟೀಲು ?'' ಅಂತ ಕೇಳಿದರೆ, ಇಷ್ಟೂ ಮುಲಾಜಿಲ್ಲದ ಆ ತಾತ ''ಇನ್ನೆಲ್ಲಿಯ ಪಿಟ್ಲು? ಮುರಿದು ಒಲೆಗೆಸೆದೆ !'' ಅಂದುಬಿಡಬೇಕೆ ? ಕತೆಯೇನೋ ಇಷ್ಟೇ, ಆದರೆ ಅಂಥ ದಿವ್ಯ ಸಂಗೀತೋಪಕರಣವನ್ನು ನಿಷ್ಕರುಣವಾಗಿ ನಿರ್ನಾಮ ಮಾಡಿದ ತಾತ ಮಾತ್ರ ಖಂಡಿತವಾಗಿ ಒಬ್ಬ ಬ್ರಹ್ಮರಾಕ್ಷಸನಾಗಿ ಹುಟ್ಟಿ ಏಳೇಳು ಜನ್ಮ ಸಮೆಸಿರುತ್ತೆ ಅಂತ ಪ್ರೀತಿ ಸ್ವಂತದ್ದೊಂದು ಉಪಸಂಹಾರ ಮಾಡಿಕೊಂಡು ಸಮಾಧಾನಪಟ್ಟುಕೊಳ್ಳುತ್ತಾಳೆ.

ಈ ಕತೆ ನೆನಪಿದ್ದುದರಿಂದ ಪ್ರೀತಿ ಹುಷಾರಾದಳು. ಒಳಗೆ ಹೋಗಿ ಪಿಟೀಲನ್ನೇನೋ ತಂದಳು. ಆದರೆ ತಾತನ ಕೈಗೆ ಕೊಡಲಿಲ್ಲ. ಸಾಕಷ್ಟು ದೂರ ಹಿಡಿದು ''ತಾತಾ, ಇದೇ ಪಿಟೀಲು; ಇದೇ ಅದರ ಜೀವಾಳವಾದ ನಾಕು ತಂತಿ !'' ಮುಂತಾಗಿ ಸೋದಾಹರಣ ಭಾಷಣ ಮಾಡಿದಳು. ತಾತ ನಿಟ್ಟುಸಿರಿಟ್ಟರು. ಮರುದಿನವೇ ಅವರು ಊರು ಬಿಟ್ಟರು ಅಂತ ಸುದ್ದಿ.

ಎಲ್ಲ ವಿದ್ಯೆಯ ಬಲ್ಲ : ಅರಿವು ಒಂದರೊಳಗಿಲ್ಲ - ಅನ್ನುವ ಗಾದೆ ಮಾತನ್ನು ಕೇಳಿದ್ದೀರಾ ? ಅದರ ಅನ್ವರ್ಥ ರೂಪ ನಮ್ಮ ಈ ಪ್ರೀತಿ. ಪಶು-ಶಿಶು ಸಸ್ಯ-ಪಾದಪ ಮುಂತಾದ ಸಂಘ-ಸಂಸ್ಥೆಗಳಿಗೆ ಸದಸ್ಯೆ. ಆದರೆ ಯಾವ ಮೀಟಿಂಗಿಗೂ ಆಕೆ ಸರಿಯಾಗಿ ಹೋಗೋದೇ ಇಲ್ವಂತೆ ! ಕಾರಣ ಕೇಳಿದರೆ ಒನಪಿನ ವಿನ್ಯಾಸಗಳನ್ನು ಮುಖದ ಕೋನಗಳಲ್ಲಿ ಯಶಸ್ವಿಯಾಗಿ ಸ್ಥಾಪಿಸುತ್ತಾ ''ಅಕಟಾ, ನೀವರಿಯಿರೇ ? ನಾನಂತೂ ಯಾವಾಗಲೂ ಏನನ್ನೂ ಮಾಡದಲೇ – ಬಲು ಬಿಜಿ ಲೇಡಿ ಎಂದು ?'' ಅಂತ ಘನವಾಗಿ ಸೇಳೆ ಮಾಡಿಬಿಡುತ್ತಾಳಂತೆ. ಆದರೂ ಸೋದರಿಯರಿಗೆ ಅವಳಲ್ಲಿ ವಾತ್ಸಲ್ಯ ಕಡಿಮೆಯಾಗಿಲ್ಲವಂತೆ.

ಇಂಥದೊಂದು ಮಹಿಳಾ ಸಮಾಜದಿಂದ ಅವಳಿಗೆ ಒಂದು ಸಾರಿ ಕರೆ ಬಂದಿತು. ''ಪ್ರೀತಿ ಮೇಡಂ, ವಾರ್ಷಿಕೋತ್ಸವದ ಸಂದರ್ಭದಲ್ಲಿ ತಮಗೊಂದು ಬಹುಮಾನ ನೀಡಲಿದ್ದೇವೆ. ವಿವರಗಳನ್ನು ಸಭೆಗೇ

**ಭಾರತೀ ಕಾಸರಗೋಡು**

ತಿಳಿಸ್ತೇವೆ. ತಾವು ದಯವಿಟ್ಟು ಆಗಮಿಸಿ ಬಹುಮಾನ ಸ್ವೀಕರಿಸಬೇಕು'' ಅಂದರು ವ್ಯವಸ್ಥಾಪಕರು. ಪ್ರೀತಿಗೆ ನಿಜವಾಗಿಯೂ ಸಂಕೋಚವಾಯಿತು. ''ಅಯ್ಯೋ, ಅದೆಲ್ಲ ಬ್ಯಾಡಿ. ಎನಗಿಂತ ಕಿರಿಯರಿಲ್ಲ....'' ವಚನ ಹಾಡಿದಳು. ''ಅದೆಲ್ಲ ಆಗೋಲ್ಲ ಮೇಡಂ. ನೀವು ಬರಲೇಬೇಕು. ಈ ಸಮಾಜದ ಋಣದಲ್ಲಿ ತಾವಿದ್ದೀರಿ ಅನ್ನೋದನ್ನ ಮರೀಬೇಡಿ'' ಅಂದರವರು. ಆ ಮಾತು ಸತ್ಯವಷ್ಟೇ ! ಇನ್ನು ಅತಿ ಮಾಡಬಾರದು ಅಂತ ಹೋದಳು. ಹೋಗಿ ನೋಡಿದರೆ ಬಹುಮಾನ ಬಂದಿರುವುದಾದರೂ ಏಕೆ ? ಅವಳ ನೀಳ ಕೇಶರಾಶಿಗೆ !

ಪ್ರೀತಿ ನಿರ್ದಾಕ್ಷಿಣ್ಯವಾಗಿ ಘೋಷಿಸಿಬಿಟ್ಟಳು – ''ನೀಳ ವೇಣಿಯೋ, ಕಾಳ ರಾತ್ರಿ ಸ್ವರೂಪಿಣಿಯೋ : ಇದರಲ್ಲಿ ನನ್ನ ಕೀರ್ತಿ ಏನಿದೆ ಮೊಣ್ಣು ? ಅದೆಲ್ಲ ಹೆತ್ತವರ ಕೊಡುಗೆ, ಮೇಲಾಗಿ ಸ್ತ್ರೀತ್ವವನ್ನು ವೈಭವೀಕರಿಸಿಕೊಳ್ಳುವುದರಲ್ಲಿ ನನಗೆ ತೃಣಮಾತ್ರವೂ ಆಸಕ್ತಿಯಿಲ್ಲ. ನಾವು ಪೋಷಿಸಬೇಕಾದ್ದು, ಗೌರವಿಸಬೇಕಾದ್ದು ಸ್ತ್ರೀ-ಪುರುಷ ಪ್ರಭೇದವಿಲ್ಲದೆ ಒಳಗೊಳಗೇ ಪುಟಿಯುವ ಮಾನವ ಶಕ್ತಿಯನ್ನು : ಬುದ್ಧಿ ಮೂಲದ ಸಾಧನೆಗಳನ್ನು ! ಈ ವಿಷಯದಲ್ಲಿ ನಾನಂತೂ ನನ್ನ ತಾತ ಯಾವಾಗಲೂ ಕೀಟಲೆ ಮಾಡುತ್ತಿದ್ದಂತೆ ಶುದ್ಧ ಪಿಟಿಪಿಟಿ ಭೂಪ(ಳು). ಆದ್ದರಿಂದ ಪ್ರಶಸ್ತಿಗೆ ಅನರ್ಹಳು.

''ಆದರೆ ಪ್ರಶಸ್ತಿಗೆ ನಿಜವಾಗಿಯೂ ಅರ್ಹರಾದ ಮಹಿಳೆಯೊಬ್ಬರು ಇಲ್ಲೇ ಇದ್ದಾರೆ. ಅವರೇ ನಮ್ಮೆಲ್ಲರ ಅಚ್ಚುಮೆಚ್ಚಿನ ಅಲಮೇಲಜ್ಜಿ. ಸ್ವಾವಲಂಬನೆಯ, ಸ್ವಾಭಿಮಾನದ ಪ್ರತೀಕ ಇವರು. ಕಾರಣಾಂತರಗಳಿಂದ ಮಕ್ಕಳಿಂದ ದೂರವಾಗಿದ್ದಾರೆ. ಎಪ್ಪತ್ತರ ಈ ಇಳಿವಯಸ್ಸಿನಲ್ಲಿ ಹಪ್ಪಳ-ಸಂಡಿಗೆ ಕಾಯಕ ನಡೆಸುತ್ತಾ ಕಾಯಿಲೆ ಪತಿಯನ್ನು ಸಲಹುತ್ತಿದ್ದಾರೆ. ಒಬ್ಬ ವಾರಾನ್ನದ ಹುಡುಗನಿಗೆ ಆಶ್ರಯ ಕೊಟ್ಟಿದ್ದಾರೆ. ಅಷ್ಟೇ ಅಲ್ಲ, ಸಂಜೆ ವೇಳೆ ಕೆಲವು ಬಡ ಶಾಲಾ ಮಕ್ಕಳಿಗೆ ಗಣಿತ ಪಾಠ ಹೇಳಿಕೊಡುತ್ತಾರೆ. ಇವರೀಗ ಆದರ್ಶ ಮಹಿಳೆ ! ದಯಮಾಡಿ ಬಹುಮಾನವನ್ನು ಅಲಮೇಲಜ್ಜಿಗೆ ನೀಡಬೇಕಾಗಿ ವಿನಂತಿ.''

ಅಧ್ಯಕ್ಷಿಣಿ ಅದಿತಿದೇವಿಯವರು ಪ್ರೀತಿಯ ಗುಣ ಪ್ರೀತಿಯಲ್ಲಿ ಪ್ರೀತಿಯುಳ್ಳವರು. ಅವಳ ಮಾತನ್ನು ಮನ್ನಿಸಿದರು. ಒಂದು ಮೂಲೆಯಲ್ಲಿ ಕೂತು ವಿಹ್ವಲ ಕಣ್ಣುಗಳಿಂದ ಸಭೆಯ ಕಲಾಪಗಳನ್ನು ಗಮನಿಸುತ್ತಿದ್ದ ಅಲಮೇಲಜ್ಜಿ ತಮ್ಮ ವಾಯಿಲ್ ಸೀರೆ ಸೆರಗು ತುದಿಯಿಂದ ಪದೇಪದೇ ಕಣ್ಣೊರೆಸಿಕೊಳ್ಳುತ್ತಾ ವೇದಿಕೆ ಹತ್ತಿ ಬಂದು ಪ್ರಶಸ್ತಿ ಸ್ವೀಕರಿಸಿದರು.

ಇದೇ ಸಮಾಜದ ಇನ್ನೊಂದು ಮುಖ ಯಾವುದೋ ಕಾರ್ಯಕ್ರಮದ ಅಧ್ಯಕ್ಷತೆಗೆ ಪ್ರೀತಿಯನ್ನು ಆಹ್ವಾನಿಸಿತು. ಇವಳಿಗೆ ಬೇಡ: ಅವರು ಬಿಡರು. ಕಡೆಗವಳು ಸ್ವಸಹಾನುಭೂತಿಯಿಂದ ಲೊಚಗುಡುತ್ತಾ ''ವಿಧಿಯಿಲ್ಲ! ಮಾನವಳಾಗಿ ಹುಟ್ಟಿದ ಮೇಲೆ ಅದೇನೇನು ಉಪನ್ಯಾಸ ಪರಂಪರೆಗಳನ್ನು ಉದ್ಧರಿಸಬೇಕೋ, ಅದಷ್ಟನ್ನೂ ಈಗಲೇ ಮುಗಿಸಿಕೊಂಡುಬಿಡ್ತೀನಿ. ಆದರೆ ಮುಂದಿನ ಜನ್ಮದಲ್ಲಂತೂ, ತುಂಬುರು ಮಹರ್ಷಿಗಳ ತಂಬೂರಿಯಾಣೆ; ವೀಣೆ ಶೇಷಣ್ಣನವರ ತಿಲ್ಲಾನಗಳಾಗಿಯೋ, ಲತಾ ದೀದಿಯ ಹಳೆ ಹಾಡುಗಳಾಗಿಯೋ, ಮುತ್ತುಸ್ವಾಮಿ ದೀಕ್ಷಿತರ ಸಂಸ್ಕೃತ ಲಾಲಿತ್ಯವಾಗಿಯೋ, ಕಡೆಗೆ ಬೆಟ್ಟ ಕಿತ್ತಿಟ್ಟ



ತೆಂಗಿಗೆ ಒಳ್ಳೆಯ ಧಾರಣೆ ಬರಲೀ ಅಂತ ದೇವರಿಗೆ 'ನೀರಾ' ಲಿಂಗ ಸ್ನಾನ ಮಾಡಿಸುತ್ತಿದ್ದೇನೆ !

ವೀರಾಂಜನೇಯನ ಬೆಳ್ಳಿ ಕಿರೀಟವಾಗಿಯೋ ಜನಿಸಿ, ಜನ್ಮವನ್ನು ಪಾವನ ಮಾಡಿಕೊಂಡೇ ಸೈ !'' ಎಂದು ಹನುಮ ಶಪಥ ಮಾಡಿದಳು.

ಇಲ್ಲಿ ಬೆಳ್ಳಿ ಕಿರೀಟದ ಪ್ರಸ್ತಾಪ ಬರುವುದಕ್ಕೆ ಕಾರಣವಿದೆ. ಪ್ರೀತಿಯ ಮನೆಯ ಹತ್ತಿರ ಇರುವ ಹೆದ್ದಾರಿ ಮಾರುತಿಗೆ ಯುಗಾದಿ ಹಬ್ಬದ ಪ್ರಯುಕ್ತ ಭಕ್ತಾದಿಗಳು ಹೊಚ್ಚ ಹೊಸ ಬೆಳ್ಳಿ ಬಟ್ಟೆಗಳನ್ನು ಹೊಲಿಸಿಕೊಟ್ಟಿದ್ದಾರೆ. ಇದರಿಂದ ಅಲಂಕೃತನಾದ ಮಾರುತಿಯ ಜಂಭವೇ ಜಂಭ! ಮಿಂಚಿದ್ದೇ ಮಿಂಚಿದ್ದು! ಆಸಾಮಿಯ ಈ ರಜತವಸ್ತ್ರ ವೈಭವವನ್ನು ಕಂಡು ಪ್ರೀತಿವಲ್ಲಭ ರಾಘವ ದಂಗಾಗಿಬಿಟ್ಟ! ''ಮಹರಾಯ ಯಾವ ಟೇಲರನ ಬಳಿ ಹೊಲಿಸಿಕೊಂಡನೋ ಸ್ವಲ್ಪ ಕೇಳಿಕೋಬೇಕಾಗಿತ್ತು. ತುಂಬಾ ಚೆನ್ನಾಗಿದೆ ಅವನ ಬರ್ಮುಡಾಸ್ ಫಿಟಿಂಗು !'' ಅಂದುಕೊಳ್ಳುತ್ತಿದ್ದ. ಅವನಿಗಂತು ಹನುಮನೆಂದರೆ ಪ್ರಾಣ. ತನ್ನ ಪುಟ್ಟ ಡೈರಿಯಲ್ಲಿ ಸರದ ಸಣ್ಣ ಪದಕದಲ್ಲಿ ಆಂಜನೇಯನ ಚಿತ್ರ ಇಟ್ಟುಕೊಂಡಿದ್ದಾನೆ. ಬೆಂಗಳೂರಿನ ವಿವಿಧಾಂಜನೇಯರು ಸಾಲದೆಂದು ಆಗಾಗ ಮುಳಬಾಗಿಲಿಗೂ ಹೋಗಿ ಮೊಕ್ಕಿ ಬರುವುದುಂಟು. ಆ ದೊಡ್ಡವ (ಮುದ್ದು ಮುಖದ ಬಾಹುಬಲಿ ಮುನಿಯಂತೆ) ಪ್ರೀತಿಗೂ ಪ್ರಿಯನೇ ! ಕತ್ತೆತ್ತಿ ದಿಟ್ಟಿಸಬೇಕಾದ ಆ ಔನ್ನತ್ಯಗಳೆದುರು ನಮ್ಮ ಕುಬ್ಜ ಮಮಕಾರಗಳು ಕೆಲಕಾಲವಾದರೂ ತೊಲಗಿಹೋಗುತ್ತವಲ್ಲ !

ಸದ್ಯ, ಈ ಲೇಖನವನ್ನು ರಾಘವ ಓದದಿದ್ದರೆ ಸಾಕು. ಇಲ್ಲದಿದ್ದರೆ ''ಹೋಗೀ ಹೋಗೀ ಎಲ್ಲಾ ವಿಷಯಾನೂ ಎಲ್ಲರ ಹತ್ತಿರ ವರದಿ ಒಪ್ಪಿಸಿ ಬರ್ತೀಯಾ ?'' ಅಂತ ಪ್ರೀತಿಯ ಕಿವಿ ಹಿಂಡುತಾನೆ. ಅದೇನೂ ಯೋಚನೆಯಿಲ್ಲ, ಪ್ರೀತಿಯೂ ವಾಪಸು ಅವನ ಕಿವಿ ಹಿಂಡಬಹುದು. ಅಂಥ ಸಮಾನತೆ ಅವರಿಬ್ಬರ ನಡುವೆ ಇದ್ದೇ ಇದೆ. ಹರಿಹರ ವಿರಿಂಚಿಗಳೂ ಇದನ್ನು ತಪ್ಪಿಸಲಾರರು. ಅದೂ ಅಲ್ಲದೆ ಮಗಳನ್ನು ಗಂಡನೊಟ್ಟಿಗೆ ಕಳಿಸುವಾಗ ಅವನ ಕೈಮೇಲೆ ಅವಳ ಕೈಯಿಟ್ಟು, ಮಡಿಲ ಅಪ್ಪುಗೆಯಿಂದ ಬಿಡಲಾರದೆ ಬಿಟ್ಟು ನಾನಾ ನಮೂನೆಯ ಅಳುಮುಂಜಿ ಮೂತಿಗಳನ್ನು ಮಾಡುತ್ತಾ, ಪ್ರೀತಿಯ ಅಪ್ಪ ''ಭಾಳಾ ಮುದ್ದು ಮಾಡಿ ಬೆಳೆಸಿಬಿಟ್ಟಿದ್ದೀನಿ ಕಣಪ್ಪಾ....'' ಅಂತ ಕಣ್ವರಂತೆಯೇ ಬಿಕ್ಕಿದಾಗ, ಕಿಟಕಿ ಸರಳು ಹಿಡಿದು ಅಷ್ಟೇ 'ಇಫೆಕ್ಟೀವ್' ಆಗಿ ರೋದಿಸುತ್ತಾ ನಿಂತಿದ್ದ ಇವ, ಇದೇ ರಾಘವ ''ಆ ಕುರಿತು ನೀವು ರವಷ್ಟೂ ಚಿಂತೇನೇ ಇಟ್ಕೋಬ್ಯಾಡಿ ಮಾವಯ್ಯ'' ಅಂತ ಮಾತು ಕೊಟ್ಟಿರಲಿಲ್ಲವೇ ? ''ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು'' ಅನ್ನುವುದು ಆರ್ಷೇಯ ವಾಕ್ಯ. ಇಂಥ ಸುಭಾಷಿತಗಳನ್ನು ಗೌರವಿಸುವವರಲ್ಲಿ ರಾಘವನೂ ಒಬ್ಬ. ತನ್ನ ಮಾವನಿಗೆ ಕೊಟ್ಟ ಮಾತನ್ನು ಚಾಚೂ ತಪ್ಪದೆ ಉಳಿಸಿಕೊಂಡಿದ್ದಾನೆ.

ಇನ್ನು ಸಮಾನತೆಯ ಬಗ್ಗೆ ಹೇಳುವುದಾದರೆ ಈ ಗಂಡ-ಹೆಂಡತಿ ಅದನ್ನು ಎಲ್ಲ ಕ್ಷೇತ್ರಗಳಲ್ಲಿ ಸರಿಸಮವಾಗಿ ಉಳಿಸಿಕೊಂಡಿದ್ದಾರೆ. ಉದಾಹರಣೆಗೆ, ರಾಘವನಿಗೆ ಸುಲಕ್ಷಣಾ ಪಂಡಿತ್ ಎಂಬ ತಂಬಿಟ್ಟು ಮುಖದ ಅಭಿನೇತ್ರಿಯಲ್ಲಿ ಬಹಳ ವಿಶ್ವಾಸ. ಬಹುಶಃ ಆಕೆಯ ಎಲ್ಲ ಚಿತ್ರಗಳನ್ನೂ ನೋಡಿರಬೇಕು. ಒಂದು ಭಾನುವಾರ ಮಧ್ಯಾಹ್ನ ಹೀಗಾಯಿತು. ಸಮೀಚೀನ ಭೋಜನದ ನಂತರ (ಹಾಗಂದರೆ ಈ ತಿಂಗಳ ಗೊಜ್ಜು, ಹಿಂದಿನ ತಿಂಗಳ ಹುಳಿ-ಪಲ್ಯ ಅಂತ ಅರ್ಥ) ಟಿವಿ ಮುಂದೆಯೇ ಚಾಪೆ ಹಾಕಿಕೊಂಡು ರಾಘವ ಗೊರೆಯುತ್ತಿದ್ದ. ಆಗ ಪರದೆಯ ಮೇಲೆ ಸುಲಕ್ಷಣಾ ಬಂದಳು. ''ಈಕೆ ಸುಲಕ್ಷಣಾ ಪಂಡಿತ್ ಇದ್ದಾಗಿದೆ ಅಲ್ವೇ ?'' ಅಂತ ಪ್ರೀತಿ ಇನ್ನೂ ಅನುಮಾನಿಸುತ್ತಿದ್ದಳಪ್ಪ..... ಅಷ್ಟಕ್ಕೇ ಮಹರಾಯನಿಗೆ ದಿಗ್ಗನೆ ಎಚ್ಚರವಾಗಿ ಹೋಯಿತು. ಲುಂಗಿ ಸರಿಮಾಡಿಕೊಂಡು ಧಡಬಡ ಎದ್ದು ಕೂತು ''ಸುಲಕ್ಷಣಾ !.... ಸುಲಕ್ಷಣಾ ಬಂದಳೇ ? (ಆರ್ತನಾದ ಗೈಯ್ಯುತ್ತಾ) ಕನ್ನಡಕಾ.... ಕನ್ನಡಕಾ..... ನನ್ನ ಕನ್ನಡಕ ಎಲ್ಲಿ ಹೋಯ್ತಪ್ಪಾ ದೇವ್ರೇ ? (ಇನ್ನೂ ಕಂಗಾಲಾಗಿ) ಅಯ್ಯೋ, ಕನ್ನಡಕ ಸಿಗೋಷ್ಟರಲ್ಲಿ ಅವಳು ಹೊರಟೇ ಹೋಗ್ತಾಳೋ ಏನೋ ?'' ಎಂದೆಲ್ಲ ವಿಪ್ರಲಾಪ ಮಾಡತೊಡಗಿದ. ಈ ಗಡಿಬಿಡಿಯಲ್ಲಿ ಕಣ್ಣೆದುರಿಗೇ ಇದ್ದ ಕನ್ನಡಕವೂ ಅವನಿಗೆ ಕಾಣದೆ ಹೋಯಿತು. ಪ್ರೀತಿಯೇ ತೆಕ್ಕೊಟ್ಟಳು. ಕೆಲವು ನಿಮಿಷ ಶ್ರದ್ಧೆಯಿಂದ ಕೂತು ಆಕೆಯ ಹಾವ-ಭಾವಗಳನ್ನು ವೀಕ್ಷಿಸಿ ಸಂತುಷ್ಟನಾದ. ಅಲ್ಲೂ ಅದೆಂಥ ಏಕಾಗ್ರತೆ ಅವನಿಗೆ ! ಅವನ ರೀತಿಯನ್ನು ಕಂಡು ಮಕ್ಕಳು ಎದ್ದು ಬಿದ್ದು ನಕ್ಕವು.

ಅವನ ವಿಷಯ ಹಾಗಾಯ್ತಲ್ಲ, ಇತ್ತ ಪ್ರೀತಿಗೆ ಅನಿಲ್ ಕಪೂರ್ ತುಂಬಾ ಇಷ್ಟ. ''ಆತ ಅತ್ತಿಗೆ ಕಾಲಿಗೆ ನಮಸ್ಕಾರ ಮಾಡಿ ಪಾದ ಧೂಳಿಯನ್ನು ಶಿರದಲ್ಲಿ ಧರಿಸಲಿ, ಸ್ನೇಹಿತನ ಮದುವೇಲಿ ಸಿಂಹಾಸನದಲ್ಲಿ ಕೂತು ಸಿತಾರ್ ನುಡಿಸಲಿ ಅಥವಾ ಕಿಂದರಿಜೋಗಿ ಆಗಿ ಮಕ್ಕಳನ್ನು ಹೆಗಲ ಮೇಲೆ ಹೊತ್ತು ಕುಣಿಸಲಿ.... ಎಂಥಾ ಡೀಸೆಂಟ್ ಆ್ಯಕ್ಟಿಂಗ್ !'' ಅಂತೆಲ್ಲ ಮೆಚ್ಚುಗೆಯೇ ಮೆಚ್ಚುಗೆ. 'ಪುಕಾರ್' ಸಿನೆಮಾದಲ್ಲಿ ಆತನನ್ನು ಅಧಿಕಾರದಿಂದ ತೆಗೆದುಹಾಕಿ ಪದಕಗಳನ್ನೆಲ್ಲ ಕಿತ್ತು ಅವಮಾನ ಮಾಡುವ ದೃಶ್ಯ ನೋಡಿದಾಗಲಂತೂ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು ಪ್ರೀತಿ. ಕಡೆಗೆ ರಾಘವನೇ ಅವಳ ಕಣ್ಣೊರೆಸಿ ಕುಡಿಯಲು ತಣ್ಣೀರು ಕೊಟ್ಟು ಸಮಾಧಾನ ಮಾಡಬೇಕಾಯಿತು. ವಾಸ್ತವವಾಗಿ ರಾಘವ ನೀರು

ಮಾತ್ರವಲ್ಲ ಇನ್ನೂ ಏನೆಲ್ಲಾ ತಿಂಡಿ ಪದಾರ್ಥಗಳನ್ನೂ ತಂದುಕೊಟ್ಟ. ಅದನ್ನೆಲ್ಲ ಹೇಳ ಹೊರಟರೆ....ಈಕೆ ಯಾವಾಗ್ಲೂ ತಿಂಡಿ ವಿಷಯಾನೇ ಬರೀತಾಳೆ, ಹೊಟ್ಟೆಬಾಕಿ..... ಅಂತ ನೀವಂದುಕೊಂಡುಬಿಡುತ್ತೀರಿ. ಅದು ನನಗೆ ಇಷ್ಟವಿಲ್ಲ. ಆದ್ದರಿಂದ ರಾಘವ ಪ್ರೀತಿಗೆ ಪಿಸ್ತಾ ಕೇಕು, ವಿಸ್ತಾರವಾದ ಚಾಕೊಲೇಟು, ಆಲೂ ಉಪ್ಪೇರಿ, ಬಾಳೆ ಮುಳಕ, ತರಕಾರಿ ಬನ್ನು, ಕೋಕೋನಟ್ ಬಿಸ್ಕೆಟು, ಲಾಲಿಪೆಪ್ಪರ್‌ಮಿಂಟು, ಸ್ಟ್ರಾಬೆರಿ ಸಾಫ್ಟೀ, ಕಡಲೆಕಾಯಿ ಟಾಫಿ, ಕುಕ್ಕೆ ಭರ್ತಿ ಹಲಸಿನ ತೊಳೆ, ಮಸಾಲೆ ಹಚ್ಚಿದ ಗಿಣಿಮೂತಿ ಮಾವು, ಪೈನಾಪಲ್ ಹೋಳು, ಕಲ್ಲಂಗಡಿ ಚೂರು ಮುಂತಾದ್ದನ್ನೆಲ್ಲ ತಂದುಕೊಟ್ಟ ವಿವರಗಳನ್ನು ನಾನು ಖಂಡಿತವಾಗಿಯೂ ನಮೂದಿಸುವುದಿಲ್ಲ.

ಧಿಕ್ ಈ ವಾಚಾಳಿ ಸ್ವಭಾವಕ್ಕೆ! ಮಾತು ಹ್ಯಾಗೆ ಎಲ್ಲಿಂದ ಎಲ್ಲಿಗೋ ಹೋಗಿಬಿಡತ್ತೆ ನೋಡಿ ! ಹೋಗಲಿ ಬಿಡಿ. ಒಟ್ಟಾರೆ ಹಳಿ ತಪ್ಪದಿದ್ದರೆ ಸರಿ !

ನಮ್ಮ ಹನುಮುವಿನ ಹೊಸ ಬೆಳ್ಳಿ ಬನೀನು ನೋಡಿ ಮುಂದಿನ ಜನ್ಮದಲ್ಲಿ ಆತನ ಕಿರೀಟವಾಗಬೇಕು ಎಂದು ಪ್ರೀತಿ ಪ್ರತಿಜ್ಞೆಗೈದ ವಿಷಯ ಹೇಳಲು ಹೋಗಿ ಇಷ್ಟೆಲ್ಲಾ ಪುರಾಣವಾಯಿತು. ಇರಲಿ ಮುಂದಿನ ಜನ್ಮದ ಮಾತಂತೂ ನಿರ್ಧಾರದಲ್ಲಿ ಮುಗಿಯಿತು. ಈ ಜನ್ಮದ ವಿಷಯಗಳು ವಾಸ್ತವದಲ್ಲೇ ಸವೆಯಬೇಕು ತಾನೇ ? ಸಮಾರಂಭಕ್ಕೆ ಹೋಗಲು ಸಿದ್ಧಳಾಗತೊಡಗಿದಳು ಪ್ರೀತಿ. ಆಶಾ, ಉಷಾ ಓಡೋಡಿ ಬಂದು ''ನಾವು ನಿಂಗೆ ಅಲಂಕಾರ ಮಾಡ್ತೀವಿ ಅಮ್ಮ'' ಅಂತ ಗೋಗರೆದವು. ''ಛೇ, ಛೇ, ಏನಿದು ಕ್ರಮ ವಿಪರ್‍ಯಯ ? ಹೋಗಿ ಹೋಗಿ'' ಗದರಿಬಿಟ್ಟಳು. ಕೂಡಲೇ ಅವೆರಡೂ ಗೋಡೆ ಕಡೆ ತಿರುಗಿ ನಿಂತು ಗೋಳಾಡತೊಡಗಿದವು. ತಾಯಿ ಜೀವ ತವರ ತಾನೇ ? ಕೂಡಲೇ ಕರಗಿತು. ''ಆಯ್ತು, ಇವತ್ತೊಂದು ದಿನ ನೀವು ಹೇಳಿದ ಹಾಗೇ ಕೇಳ್ತೀನಿ ಬನ್ನಿ'' ಅಂದಳು. ಎರಡೂ ಸಂಭ್ರಮದಿಂದ ಒಳಗೋಡಿ ದೊಡ್ಡದೊಂದು ಟ್ಯೂಬನ್ನು ಹೊತ್ತುಕೊಂಡು ಬಂದವು. ಆ ನೋಟ ರಮ್ಯವಾಗಿತ್ತು..... ಕೆ.ಇ.ಬಿ. ಜನ ಲೈಟುಕಂಬ ಹೊತ್ತುಕೊಂಡು ಬಂದ ಹಾಗೆ : ಲಿಲ್ಲಿಪುಟ್‌ಗಳು ಲಟ್ವಣಿಗೆ ಹೊತ್ತು ತಂದಂತೆ !

ಅಂತೂ-ಇಂತೂ ಮುಖದ ವೈಟ್‌ವಾಶ್ ಮುಗಿಯಿತು. ಇನ್ನು ತುಟಿರಂಗು ಪ್ರಕರಣ. ಆಶಾ ಹೋಗಿ ಬಣ್ಣದ ಪೆನ್ಸಿಲ್ ತಂದಳು. ''ಇದೇನು ಕಂದ, ಲಿಪ್‌ಸ್ಟಿಕ್ ಬದಲು ಪೆನ್ಸಿಲ್ ತಂದಿದ್ದೀ ?'' ಮೃದು ಮಧುರ ಮಂದರದಲ್ಲಿ ಪ್ರೀತಿ ಪಲುಕಿದಳು. ''ಅದು ಹಾಗೇ ಅಮ್ಮ... ಮೊದಲು ಪೆನ್ಸಿಲ್‌ನಿಂದ ಲಿಪ್‌ಶೇಪ್ ಬರಕೋಬೇಕು.... ಆಮೇಲೆ ಬಣ್ಣ ತುಂಬಿಸೋದು.....'' ಉಷಾ ವಿವರಿಸಿತು. ''ಓಹೋ ಗೊತ್ತಾಯ್ತು'' ಉದ್ಗರಿಸಿದಳು ಪ್ರೀತಿ, ಆರ್ಕಿಮಿಡೀಸನ ಮಂದಹಾಸವನ್ನು ತುಳುಕಿಸುತ್ತ.... ''ಸ್ಕೂಲಲ್ಲಿ ಕ್ರಾಫ್ಟ್ ಪೀರಿಯಡ್ನಲ್ಲಿ ನಮ್ಗೆ ಕಸೂತಿ ಹೇಳಿಕೊಡ್ತಿದ್ರು... ಅಲ್ಲಿ ಅದೇ ಥರಾ... ಮೊದಲು ಹೂವಿನ ಹೊರಮೈಯನ್ನು ಹೊಲಿತಾ ಇದ್ವಿ.... ಆಮೇಲೆ ಒಳಗೆ ಬಣ್ಣ ಬಣ್ಣದ ದಾರದಿಂದ ತುಂಬಿಸ್ತಾ ಇದ್ವಿ... ಹಾಗೇ ತಾನೇ ?''

ಆಶಾ-ಉಷಾ ಮುಖ ಮುಖ ನೋಡಿಕೊಂಡು ಮುಸಿಮುಸಿ ನಕ್ಕವು. ಆಮೇಲೆ ಬಣ್ಣ ಮೆತ್ತುವ ಕ್ರಿಯೆ ಆರಂಭವಾಯಿತು. ''ಎಲ್ಲಿ, ಆ್ಞ ಮಾಡು ?''....... ''ಸ್ವಲ್ಪ ಬಾಯಿ ಮುಚ್ಚು ?'' (ಈ ಮಾತು ಹೇಳುವಾಗಂತು ಅದೆಂಥ ಅಪ್ರಕಟಿತ ಆನಂದ !) ''ಈ ಕಡೆ ತಿರುಗು ?...... ಆ ಕಡೆ ತಿರುಗು ?....'' ಇವೆಲ್ಲ ನಡೆದು ಕಡೆಗೂ ಪ್ರೀತಿಯ ಮುಖಾಲಂಕಾರ ಪರಿಸಮಾಪ್ತಿಯಾಯಿತು. ಹಿಗ್ಗಿನಿಂದ ಕನ್ನಡಿಯಲ್ಲಿ ಇಣುಕಿದಳು. ಆಹಾ ! ಎಂಥ ಸೊಗಸಾದ ಸಾಮ್ಯವಯ್ಯ ತನಗೂ ಆ ಸುಮುಖಿ ಸುಗ್ರೀವ ಸಖಿಗೂ !

ಆಮೇಲೆ ಮಕ್ಕಳೇ ಆರಿಸಿಕೊಟ್ಟ ಬಿಳಿಯ ಉಡುಪು ಧರಿಸಿ ಸಭೆಗೆ ಹೋಗಿದ್ದಾಯ್ತು. ಅಧ್ಯಕ್ಷ ಪೀಠವೂ ಕುಂದಿಲ್ಲದೆ ಭರ್ತಿಯಾಯ್ತು. ಕರುಣಾಜನಕ ಪ್ರಾರ್ಥನೆ, ಬಹುಬಗೆಯ ಭಾಷಣಗಳು, ಇತ್ಯಾದಿ ಇತ್ಯಾದಿ ಮುಗಿದ ಮೇಲೆ ಅದಕ್ಷ ಅಧ್ಯಕ್ಷ ಭಾಷಣದ ಸರದಿಯೂ ಬಂದಿತು. ಕಾರ್ಯದರ್ಶಿ ಕಂಜದಳಾಯತಾಕ್ಷಿ ಓಡಿ ಬಂದು ಅಧ್ಯಕ್ಷರ ಪರಿಚಯ ಭಾಷಣವನ್ನು ಆರಂಭಿಸಿದರು. ಈ ಕೆಲಸ ತಮಗೆ ಸಿಕ್ಕಿದ್ದಕ್ಕೆ ಅವರಿಗೆ ತುಂಬ ಸಂತೋಷವಾಗಿತ್ತು.

ಪ್ರೀತಿಯ ಪಿಟೀಲು ವಾದನದ 'ವರ್ಣನೆ' ಅಮೋಘ ವಾಗಿಯೇ ನಡೆಯಿತು. ಪ್ರಾಸಂಗಿಕವಾಗಿಯೋ ಎಂಬಂತೆ ಅವಳ ಸೊಟ್ಟ ಕಿವಿ, ಉಬ್ಬು ಹಲ್ಲು, ಉಗ್ಗು ಮಾತುಗಳ ಪ್ರಸ್ತಾಪವೂ ಬಂದಿತು. ಎಲ್ಲವನ್ನೂ ಬಹು ಚೆನ್ನಾಗಿ ನಿರ್ವಹಿಸಿ, ಕಟ್ಟ ಕಡೆಗೆ ''ಇಂಥಿಂಥ ಶ್ರೀಮತಿ ಪ್ರೀತಿ ರಾಘವ ಈಗ ಅಧ್ಯಕ್ಷ ಭಾಷಣವನ್ನು ದಯಪಾಲಿಸಬೇಕಾಗಿ ವಿನಂತಿ'' ಎಂದು ಹೇಳಿ ತಕ್ಷಣ ಹೋಗಿ ಫ್ಯಾನಿನಡಿ ಕುಳಿತು ದಣಿವಾರಿಸಿಕೊಳ್ಳತೊಡಗಿದರು.

ಪ್ರೀತಿ ಮೆಲ್ಲಗೆ ಮೇಲೆದ್ದಳು. ಮನಸ್ಸಿನ ತುಂಬ ಐನ್‌ಸ್ಟೀನರೇ ಸ್ಫೂರ್ತಿ ! ನಿಧಾನವಾಗಿ ಮೈಕಿನ ಹತ್ತಿರ ಹೋಗಿ ನಿಂತು ಬಗಲಲ್ಲಿದ್ದ ಪಿಟೀಲನ್ನು ತೆಗೆದು ಜನರಂಜನಿ ರಾಗಾಲಾಪವನ್ನು ಮೆಲ್ಲಗೆ ನುಡಿಸ ತೊಡಗಿದಳು. ಅವತ್ತು ಅವಳು ವಿದ್ವಾಂಸರ ಅರೆಗಣ್ಣು ಗಳನ್ನು ಮಾಡಲಿಲ್ಲ. ಮಂದಹಾಸಗಳನ್ನು ಬೀರಲಿಲ್ಲ. ತನಗೆ ಮಾತ್ರ ಅನ್ನುವಂತೆ ತನ್ನಷ್ಟಕ್ಕೆ ಮಾತ್ರ ಅನ್ನುವಂತೆ ಬಿಮ್ಮಗೆ ಬಾಗಿ ರಾಗದ ಬಣ್ಣಗಳನ್ನು ತೆಳುವಾಗಿ, ಪ್ರಶಾಂತವಾಗಿ ಮೂಡಿಸತೊಡಗಿದಳು.... ಬಹಳ ಹೊತ್ತು! ಕಡೆಗದು ಮುಗಿಯಿತು. ಪಿಟೀಲನ್ನು ಮತ್ತೆ ಕಂಕುಳಿಗೆ ಸೇರಿಸಿ ಸ್ವಸ್ಥವಾಗಿ ಸ್ವಸ್ಥಾನದಲ್ಲಿ ಬಂದು ಕೂತಳು.

ಕಂಜದಳಾಯತಾಕ್ಷಿ ಮೆಲ್ಲಗೆ ಹತ್ತಿರ ಬಂದು ''ಮಾತು ?'' ಅಂದರು.

''ಆಯ್ತಲ್ಲ ?'' ಅಂದಳು ಪ್ರೀತಿ.


ಭಾರತೀ ಕಾಸರಗೋಡು
೮೩, ೨ನೇ ಮಹಡಿ, ೫ನೇ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್
ವಿಜಯನಗರ, ಬೆಂಗಳೂರು - ೫೬೦ ೦೪೦


## ಜುಂಜಪ್ಪನಿಗೆ

ಪಟ್ಟಣದ ಸೋದರ ಮಾವ ಇಕ್ಕಿದ ನಂಜು
ಕಟ್ಟಿಕೊಂಡಿದೆ ಅಂಗ ಅಂಗದ ವಳಗೂ :
ಕೆಟ್ಟ ನಿದ್ದೆ ಆವರಿಸುತ್ತಿದೆ
ಈಗ ಜುಂಜಪ್ಪನಿಗೆ.

'ಗಂಗೆ ಬಾರೇ
ಗೌರೀ ಬಾರೇ
ತುಂಗಭದ್ರೆ, ತಾಯಿ ಬಾರೇ'
ಅಂತ ದಿನಾಲು ಕರೆದು ಮುದ್ದಾಡುತ್ತಿದ್ದ
ಗೋವುಗಳ ಕಂಡಾಗ
ಮಂಪರುಗಣ್ಣಲ್ಲಿ
ಒಂದೊಂದಕ್ಕೂ ಇಷ್ಟಿಷ್ಟು ಡಾಲರ್ ಎಂದು
ಬೆಲೆಗಟ್ಟಬೇಕೆನ್ನಿಸುತ್ತಿದೆ.

ನೆಲಕ್ಕೂ ಹಿಡಿದು ನಂಜು,
ಕಾಳು ಕಾಳುಗಳಲ್ಲಿ, ಕಾಯಿ ಕಾಯಿಗಳಲ್ಲಿ
ಹಣ್ಣು ಹಣ್ಣುಗಳಲ್ಲಿ, ಹೂವು ಹೂವುಗಳಲ್ಲಿ
ನಂಜು ತುಂಬಿಕೊಂಡಿದೆ.

ಕೆರೆಕುಂಟೆ ನೀರ್ಕುಡಿದು
ಇವನು ಪಿಳ್ಳಂಗೋವಿಯೂದುತ್ತಾ
ಗಗನದ ಮೋಡಗಳಲ್ಲಿ ನೆಟ್ಟ ಕಣ್ಣುಗಳನ್ನು
ದಟ್ಟ ಹಸಿರು ತೋಪುಗಳ ಕಡೆಗೆ ತಿರುಗಿಸಿದಾಗ,
ತೋಪಿಗೆ ತೋಪೇ
ಅಡಗಿದ್ದ ಗೋವುಗಳ ಕೊಳ್ಳಗಂಟೆಗಳಿಂದ
ಮಾರ್ದನಿಸುತ್ತಿದ್ದ ಶಿವ ಹಗಲು
ಈಗ ತೋರುತ್ತಿದೆ ಒಂದು ಮಾಯಾಸಪುನದ ಹಾಗೆ

ದೇವರ ಮಾತು ಅರ್ಥವಾಗುತ್ತಿಲ್ಲ ಕುಲಗುರುವಿಗೆ:
ಅವನಿಂದ ಇನ್ನು ರಕ್ಷಣೆಯಿಲ್ಲ ತುರುಗಾಹಿಗೆ
ಹುಟ್ಟಿನ ಲೆಕ್ಕ, ಸಾವಿನ ಲೆಕ್ಕ,
ಮದುವೆ ಮುಂಜಿಯ ಲೆಕ್ಕ
ಎಲ್ಲೆಲ್ಲೂ ಲೆಕ್ಕ ಲೆಕ್ಕ ಲೆಕ್ಕ ಹಬ್ಬತೊಡಗಿ
ಕೆಟ್ಟ ನಿದ್ದೆಯಲ್ಲೊಂದು
ಸ್ಪಷ್ಟ ಕನಸು;

ಸತ್ತ ಜುಂಜಪ್ಪನನ್ನು ದೇವರಾಗಿಸಿ
ಇದ್ದವನ ಇಲ್ಲವೆಂದೆನಿಸಿ
ಕಂತೆ ಕಂತೆ ಪುರಾಣ ಕಟ್ಟಿ
ಹಾಡುತ್ತಿದ್ದಾರೆ ಗಾಯಕರು
ಕಟ್ಟಿದ ಗಂಟಲುಗಳಲ್ಲಿ
ಪಟ್ಟಣದ ಸೋದರಮಾವ ಇಕ್ಕಿದ ನಂಜು-
ಕೆಟ್ಟ ನಿದ್ದೆ ಜುಂಜಪ್ಪನಿಗೆ.


ಡಾ|| ಎಚ್. ಎಸ್. ಶಿವಪ್ರಕಾಶ್
ಡಿಪಾರ್ಟ್‌ಮೆಂಟ್ ಆಫ್ ಆರ್ಟ್ ಅಂಡ್ ಈಸ್ಥೆಟಿಕ್ಸ್
ಜೆ.ಎನ್.ಯು, ನವದೆಹಲಿ.



ಕುಂ. ವೀರಭದ್ರಪ್ಪ

# ಮೌತೇ ಜೋತಿರ್ಲಿಂಗಪ್ಪಾಜಿ

**ಮೂ**ಲಿ ಮನೆ ಮಾತೇ ಜೋತಿರ್ಲಿಂಗಪ್ಪನವರು ಅಪ್ಪಟ ಸಜ್ಜನರಾಗಿರುವರೆಂಬ ಸಂಗತಿ ಸದರೀ ಗ್ರಾಮದೊಳಗೆ ಕಳೆದ ವಾರದಿಂದ ಚಲಾವಣೆಯಲ್ಲಿದ್ದರೂ ಮೊದಮೊದಲಿಗೆ ಯಾರೂ ನಂಬಲಿಲ್ಲ. ಇದು ಅಷ್ಟು ಸುಲಭವಾಗಿ ನಂಬುವ ವಿಷಯವೂ ಆಗಿರಲಿಲ್ಲ. ದೇವರ ಒಲುಮೆಯಿಂದ ಮೂರು ಆರಾಗಬಹುದು, ಆರು ಮೂರಾಗಬಹುದು.. ಆದರೆ ಲಿಂಗಪ್ಪನವರು ಸಜ್ಜನರಾಗುವುದೆಂದರೇನು ? ಇದನ್ನು ನಂಬಲಿಕ್ಕೆ ತಾವೇನು ಹುಡುಗರೇ ? ಅವರು ತಾವು ಸಜ್ಜನರಾಗಿ ಗ್ರಾಮವನ್ನು ಪ್ರಪಾತಕ್ಕೆ ದೂಡಲಾರರು ಎಂದೇ ಗ್ರಾಮದ ಜನರು ಮೊನ್ನೆ ಮೊನ್ನೆ ತನಕ ನಂಬಿದ್ದರು. ಕ್ರಮೇಣ ತಮ್ಮ ನಂಬಿಕೆ ಬುಡಮೇಲಾಗಿರಬಹುದೆಂಬ ಅನುಮಾನ ಬಾರದಿರಲಿಲ್ಲ. ಇದನ್ನು ಖಾತ್ರಿ ಮಾಡಿಕೊಂಡು ಬರಲೆಂದು ಕೆಲವರು ತಮ್ಮ ತಮ್ಮ ಜೀವವನ್ನು ಅಂಗೈಯಲ್ಲಿಟ್ಟುಕೊಂಡು ಹೌದೋ ಅಲ್ಲವೋ ಎಂಬಂತೆ ಹೆಜ್ಜೆ ಇಡುತ್ತ ಹೋಗಿ ಆ ಹೆಸರಾಂತ ಮನೆ ಅಷ್ಟು ದೂರವಿದೆ ಎನ್ನುವಷ್ಟರಲ್ಲಿ ನಿಂತು, ಕಟ್ಟೆಗೆ ಅಂಡು ಅಂಟಿಸಿ ಶಿಲಾವಿಗ್ರಹದಂತೆ ಕೂತಿದ್ದ ಲಿಂಗಪ್ಪನವರನ್ನು ಪಿಳಿಪಿಳಿ ಕಣ್ಣು ಬಿಡುತ್ತ ನೋಡಿದ್ದರು. ಅವರು ಮಾನವಲೋಕದ ಸಕಲ ಮರ್ಮಗಳನ್ನು ಎದೆಯ ಕುಲುಮೆಯಲ್ಲಿಟ್ಟುಕೊಂಡಿರುವವರಂತೆ ಕೂತಿದ್ದರು. ಇರುವೆಯ ಹೆಜ್ಜೆ ಸಪ್ಪಳವನ್ನೂ ಗ್ರಹಿಸಬಲ್ಲ ಸೂಕ್ಷ್ಮಮತಿಯಾದ ಅವರು ಕುತೂಹಲಿಗಳ ಕಡೆ ದಿವ್ಯ ನಿರ್ಲಕ್ಷ್ಯದಿಂದ ನೋಡುತ್ತಿದ್ದರು. ಒಂದು ಮಾತಿಲ್ಲ, ಒಂದು ಕಥಿ ಇಲ್ಲ. ಅದೇ ತಾನೆ ವಲ್ಮೀಕದೊಡಲಿನಿಂದ ಒಡಮೂಡಿರುವ ಪರಮ ತಾಪಸಿಯಂತೆ ಗೋಚರಿಸುತ್ತಿರುವರು. ಅವರ ಕಣ್ನೋಟದಲ್ಲಿ ತಿಲಗಾತ್ರದಷ್ಟಾದರೂ ವಕ್ರತೆ ಇಲ್ಲ. ಸಾವಿರ ಬಯ್ಗಳಿಗೆ ಸರಿಸಾಟಿಯಾದ ದಾರ್ಷ್ಟ್ಯತೆ ಇಲ್ಲ. ತಮ್ಮ ಫಳಾರದಂಗಡಿಯಂಥ ಶರೀರವನ್ನು ನಿರ್ಭಿಡೆಯಿಂದ ಮೂಸುತ್ತಿರುವ ನಾಯಿಗಳನ್ನು ಗದರಿಸುತ್ತಿಲ್ಲ. ತಮ್ಮ ಹೃಷಿಕೇಶಕ್ಕೆ ಸಮಾನವಾದ ತೊಡೆ ಮೇಲೆ ತಪಸ್ಸನ್ನಾರಂಭಿಸಿರುವ ಬೆಕ್ಕನ್ನು ಹೊಡೆದೋಡಿಸುತ್ತಿಲ್ಲ. ಆಪ್ಯಾಯಮಾನತೆಯಿಂದ ರೂಪುಗೊಂಡಿರುವವರಂತೆ ಕಂಗೊಳಿಸುತ್ತಿರುವರು. ಯಾಕೆ ಹೀಗಾಗಿರುವರು ತಮ್ಮ ಗ್ರಾಮದ ಕಣ್ಮಣಿಗಳಾದ ಲಿಂಗಪ್ಪನವರು ! ಅವರ ವಜ್ರಾಯುಧಕ್ಕೆ ಸರಿಸಮಾನವಾದ ನಾಲಿಗೆಗೇನಾದರೂ ಲಕ್ವಾ ಬಡಿದಿರುವುದೇ ಹೇಗೆ ? ಹಾಗೇನಾದರೂ ಬಡಿದಿದ್ದಲ್ಲಿ ಮುಖದ ಒಂದು ಪಾರ್ಶ್ವ ಒಂದು ಪಕ್ಕ ವಿಕಾರವಾಗಿ ವಾಲಬೇಕಾಗಿತ್ತು. ಹಗಲೆನ್ನದೆ ಇರುಳೆನ್ನದೆ ಸಮಸ್ತ ಊರಿಗೆ ಕೇಳಿಸುವಂತೆ ಅಟಾಟೋಪಿಸಬೇಕಿದ್ದವರು ಯಾಕೆ ಮೌನ ತಪಸ್ವಿಗಳಾಗಿರುವರು ? ಅವರ ಮೌನ ಅಶುಭ ಸೂಚನೆಯಂತಿರುವುದು. ಯಾರಾದರೂ ಬಂದು ಅವರ ಬಾಯಿಯಿಂದ ಬಯ್ಗಳ ಶ್ಲೋಕೋಚ್ಚಾರವಾಗುವಂತೆ ಮಾಡಿ ಪುಣ್ಯ ಕಟ್ಟಿಕೊಳ್ಳಬಾರದೆ ಎಂದವರಿವರು ಮಮ್ಮಲನೆ ಹಲುಬುತ್ತಿರುವಾಗ್ಗೆ ಅವರ ಧರ್ಮಪತ್ನಿಯಾದ ಪಾರವ್ವ ಮನೆಯಿಂದ ಹೊರಗೆ ಬಂದು ಹಣೆಯನ್ನು ಚಚ್ಚಿಕೊಳ್ಳುತ್ತಿರುವ ದೃಶ್ಯವೂ ಅರ್ಥಗರ್ಭಿತವಾಗಿರುವುದು. ''ಹಿಂಗೆ ಸುಮ್ಕೆ ಕೂತು ಹೆಂಡ್ರು ಮಕ್ಳ ಬಾಯಿಗೆ ಮಣ್ಣು ಹಾಕಬೇಕೂಂತ ಮಾಡೀಯಾ ! ಮಾಡ್ಕೊಂಡ ಹೆಣ್ತೀಗೆ ನೀನೀಪಾಟಿ ಗವುರವ ಕೊಟ್ರೆ ನಾನುರ್ಲು ಹಾಕ್ಕೊಂಡು ಸಾಯೋದಷ್ಟೇ ! ಒಂದು ಮಾತು ಬಯ್ಯಿ; ಬಯ್ಸಿಕೊಂತೀನಿ. ಒದಿ, ಒದಿಸ್ಕಂತೀನಿ... ಆದ್ರೆ... ನೀನು...'' ಇನ್ನೂ ಏನೇನೋ ಗೊಣಗಾಟ ಮುಂದುವರಿಸಿದ್ದಳಾ ಸಾಧ್ವಿ. ದಂಪತಿಗಳ ನಡುವೆ ವಾಗ್ವಾದ ನಡೆದಿರಬಹುದೆಂಬುದು ಸುಸ್ಪಷ್ಟ. ಅದೇನೆಂದು ಅರ್ಥವಾಗುತ್ತಿಲ್ಲ.. ಜನ ಬರೋದು, ಅಷ್ಟು ದೂರದಲ್ಲಿ ನಿಂತು ಪಿಳಿಪಿಳಿ ನೋಡೋದು... ತಮ್ಮ ಗ್ರಾಮದ ದುರಾದೃಷ್ಟವನ್ನು ಲೆಕ್ಕಿಸುತ್ತ ಹೋಗುವುದು ಮಾಡುತ್ತಿದ್ದರು.

ಆದರೆ ಪಾರವ್ವನ ಅರಣ್ಯರೋದನ ಮಾತ್ರ ಗ್ರಾಮದ ಕಿವಿಗೆಟಕುತ್ತಿತ್ತು. ಗ್ರಾಮದ ಹೆಂಗಳೆಯರು ನಿನಗಿಂಥ ದುರ್ಗತಿ ಬರಬಾರದಾಗಿತ್ತವ್ವಾ... ತಾಳಿ ಕಟ್ಟಿದ ಗಂಡನ ಬಾಯಿಯಿಂದ ಏನ್ರೀ ತಾನ್ರಿ ಅಂತ ಬಹುವಚನದಿಂದ ಮಾತಾಡಿಸ್ಕೊಂಡಂಥ ಹೆಣ್ಣು ಬದುಕಿದ್ದರೂ ಒಂದೇ, ಸತ್ತರೂ ಒಂದೇ. ಕರುಮಗೇಡಿಯಾದ ನಿಂಗೆ ಮುತ್ತೈದೆ ಸಾವು ಆದಷ್ಟೂ ಲಗೂನ ಬರಲೆವ್ವ.... ಎಂದು ಮುಂತಾಗಿ ತಮ್ಮಷ್ಟಕ್ಕೆ ತಾವೇ ಮಾತಾಡಿಕೊಳ್ಳುತ್ತಿದ್ದರು. ಆದರೆ ಮೂಲೆ ಮನೆಗೆ ಹೋಗಿ ಹೀಗೆ ಆತ್ಮಹತ್ಯೆ ಮಾಡಿಕೊ ಎಂದು ಹೇಳುವ ಧೈರ್ಯ ಮಾತ್ರ ಅವರಾರಿಗೂ ಇರಲಿಲ್ಲ. ಅವರ ಮಾತು ಕೇಳಿ ತಾನಾತ್ಮಹತ್ಯೆ ಮಾಡಿಕೊಂಡು ಮಕ್ಕಳನ್ನು ಅನಾಥರನ್ನಾಗಿ ಮಾಡುವ ಪೈಕಿ ಪಾರವ್ವ ತಾನಾಗಿರಲಿಲ್ಲ. ತನ್ನ ಗಂಡನಲ್ಲಿ ಆವೇಶ ಉಕ್ಕುವಂತೆ ಮಾಡಿ ತೃಪ್ತಿಯಾಗುವವರೆಗೆ ಬಯ್ಯಿಸಿಕೊಂಡು ಪಾವನಳಾಗಬೇಕೂಂತ ಆಕೆಯು ಮಾಡದೆ ಇರುವ ಯತ್ನ ಪ್ರಯತ್ನಗಳು ಒಂದೇ ಎರಡೇ ! ಆಕೆ ತನ್ನ ಎಡಗೈಯಿಂದ ಗಂಡನ ಸ್ವಾಟಿಗೆ ಒಂದು ನೂರು ಬಾರಿಯಾದರೂ ತಿವಿದಿರಬಹುದು. ಏನೋ ತಾನೋ ಅಂತಲೂ, ಬಾಯಾಗೇನು ಕಡುಬಿಟ್ಕೊಂಡಿಯಾ... ನಿನ್ನಾಲ್ಗೇ ಸೇದಿ ಹೋಗೈತಾ ಎಂಬಿವೇ ಕರ್ಣ ಕಠೋರವಾದ ಮಾತುಗಳನ್ನು ಅಂದಿರಬಹುದು, ಆಡಿರಬಹುದು. ಆದರೆ ಲಿಂಗಪ್ಪನವರು ಮಾತ್ರ ಮಂದಸ್ಮಿತರಾಗಿ ಕೂತೇ ಇರುವರು. ಅದಕ್ಕೆ ಪ್ರತಿಯಾಗಿ ಅವರು ದುಸುರಾ ಮಾತಾಡಲಿಲ್ಲ. ಕೈಯನ್ನೆತ್ತಿ ಬಾಯಿ ಮುಚ್ಕಂತೀಯಾ... ಇಲ್ಲ... ನಂದು..... ಎಂದು ಸಂಜ್ಞೆ ಮಾಡಿ ಸುಡಿಯಲಿಲ್ಲ. ಆದರೆ ಅವರು ತಮ್ಮ

ಸತೀಮಣಿಯತ್ತ ಆಪ್ಯಾಯಮಾನವಾಗಿ ನೋಡುತ್ತಿದ್ದರು. ಗ್ರಾಮ ಸುವಿಖ್ಯಾತ ಗೂರಲು ರೋಗಿಯಾಗಿದ್ದ ಅವರು ಗಳಿಗೆ ಗಳಿಗೆಗೊಮ್ಮೆ ಕೊಯ್ ಕೊಯ್ ಅಂತ ಕೆಮ್ಮುತ್ತಿದ್ದರು. ಅವರ ಕೆಮ್ಮು ಕರ್ಕಶವಾಗಿದ್ದಿರದೆ ಕರ್ಣಾನಂದಕರವಾಗಿತ್ತು. ಅದಕ್ಕೆ ಸಕಲ ರಾಗಗಳ ಸ್ಪರ್ಶವಿತ್ತು, ಕೆಮ್ಮುವವರಿಗೆ ಮಾದರಿ ಪಾಠದಂತಿತ್ತು.

ಹಾಗೆ ನೋಡಿದರೆ ಪಾರವ್ವ ಎಲ್ಲ ಹೆಂಗಸರಂತೆ ಗಟ್ಟಿವಾಣಿಯಾಗಿರಲಿಲ್ಲ. ತನ್ನ ಗಂಡನೆದುರು ಎಂದೂ ಬಾಯಿ ಬೊಂಬಾಯಿ ಮಾಡಿ ಮಾತಾಡಿದಾಕೆಯಲ್ಲ. ಮದುವೆಯಾದ ಮುವ್ ಮುವ್ವತ್ತು ವರ್ಷಗಳಿಂದ ಗಂಡನಿಂದ ಬಯ್ಯಿಸಿಕೊಂಡೂ ಬಯ್ಯಿಸಿಕೊಂಡೂ ಆಕೆಯ ಕಿವಿಗಳು ದಡ್ಡು ಬಿದ್ದುಬಿಟ್ಟಿದ್ದವು. ಗಂಡನಿಂದ ಒದೆಸಿಕೊಂಡೂ ಒದೆಸಿಕೊಂಡೂ ಆಕೆಯ ಶರೀರವೆಂಬುದು ಜಡ್ಡುಗಟ್ಟಿಹೋಗಿತ್ತು. ಲಿಂಗಪ್ಪನವರು ತಮ್ಮ ಧರ್ಮಪತ್ನಿಯನ್ನು ಬಯ್ಯಲಿಕ್ಕೆ ಒಂದು ತಾಲೀಮು ಕೋಣೆ ಎಂದು ಭಾವಿಸಿದ್ದುದೇ ಆಕೆಯ ದುಃಖಕ್ಕೆ ಕಾರಣವಾಗಿತ್ತು.

ಪ್ರಪಂಚದ ಸಮಸ್ತ ಬಯ್ಗಳ ಸಾಮ್ರಾಟರಾಗಿದ್ದಂಥ ಲಿಂಗಪ್ಪನವರು ಕಟ್ಟಿಕೊಂಡ ಹೆಂಡತಿಯನ್ನು ಬಯ್ಯದೆ ವಾರದ ಮೇಲಾಯ್ತು ಎಂಬ ಸುದ್ದಿ ದಾವಾನಲ ಹಬ್ಬಿ ಸದರಿ ಗ್ರಾಮವನ್ನು ತಲ್ಲಣಕ್ಕೀಡುಮಾಡಿತು. ಇದೆಂಥ ಕಾಲ ಬಂತಪ್ಪ ಎಂದು ಗ್ರಾಮಕ್ಕೆ ಗ್ರಾಮವೇ ಕೈಕೈ ಹಿಚುಗಿಕೊಂಡಿತು. ರಾಜ್ಯದ ಸಾಂಸ್ಕೃತಿಕ ನಕ್ಷೆಯಲ್ಲಿ ತಮ್ಮ ಗ್ರಾಮಕ್ಕೆ ಒಂದು ಅದ್ಭುತ ಸ್ಥಾನ ಕಲ್ಪಿಸಿದ ಶ್ರೇಯಸ್ಸಿಗೆ ಭಾಜನರಾಗಿರುವ ಲಿಂಗಪ್ಪಾಜಿಯವರು, ತಮ್ಮ ಅವಿರತ ಶ್ರಮದಿಂದ ಗ್ರಾಮದಲ್ಲಿ ವ್ಯಾಪಾರ ಸಾಪಾರ ಸಲೀಸಾಗಿ ನಡೆಯುವಂತೆ ಮಾಡಿದ, ಗ್ರಾಮದ ನಾಕಾರು ಮಂದಿಯ ಕೈಯಲ್ಲಿ ನಾಲ್ಕು ಕಾಸು ಕುಣಿದಾಡುವಂತೆ ಮಾಡಿದ, ಲಿಂಗಪ್ಪಾಜಿ ಅವರು ಬಯ್ಗಳಿಗೆ ತಿಲಾಂಜಲಿ ಕೊಟ್ಟಿರಬಹುದೆ ಎಂಬ ಅನುಮಾನ ಮೂಡಿತು. ಕಣೇ ಕಲ್ಲೆಂದರೆ ಮೂಲಿ ಮನಿ ಲಿಂಗಪ್ಪನವರು, ಮೂಲಿ ಮನಿ ಲಿಂಗಪ್ಪನವರೆಂದರೆ ಕಣೇಕಲ್ಲು.... ಇವೆರಡರ ನಡುವಿನ ಅವಿನಾಭಾವ ಸಂಬಂಧ ಬಹು ದೊಡ್ಡದು. ಒಂದರಿಂದ ಇನ್ನೊಂದನ್ನು ಬೇರ್ಪಡಿಸುವ ಶಕ್ತಿ ಯಾವುದೂ ಇಲ್ಲ. ಸದರಿ ಗ್ರಾಮದವರು ಸುತ್ತಮುತ್ತ ಯಾವುದೇ ಊರಿಗೆ ಹೋದರೂ ತಾವು ಮೂಲಿ ಮನಿ ಲಿಂಗಪ್ಪನವರ ಊರಿನವರು ಎಂದು ಹೇಳುತ್ತಾರೆಯೇ ವಿನಃ ಕಣೇಕಲ್ಲು ಗ್ರಾಮದವರು ಎಂದು ಮಾತ್ರ ಹೇಳಲಾರರು. ಅವರ ಹೆಸರು ಹೇಳಿಕೊಂಡೇ ಪರ ಊರುಗಳಲ್ಲಿ ತಮ್ಮ ಬೇಳೆ ಬೇಯಿಸಿಕೊಂಡು ಬರುವವರಿಗೆ ಸದರಿ ಗ್ರಾಮದಲ್ಲಿ ಬರವಿಲ್ಲ. ಲಿಂಗಪ್ಪನವರನ್ನು ಬೇರ್ಪಡಿಸಿ ನೋಡಿದಲ್ಲಿ ತಮ್ಮ ಊರಲ್ಲಿ ಇರುವುದಾದರೂ ಏನು ! ತಮ್ಮ ಊರಲ್ಲಿ ಏನು ಒಂದು ಕೋಟೆ ಉಂಟಾ ! ಒಂದು ಉಪ್ಪರಿಗೆ ಬುರುಜು ಉಂಟಾ ! ಒಂದು ಸುಂದರವಾದ ದೇವಾಲಯ ಉಂಟಾ ! ನಿರ್ಗತಿಕ ಸ್ಥಿತಿಗೆ ಕನ್ನಡಿ ಹಿಡಿಯುವಂಥ ಊರಿದು ಮೊದಲೇ. ಇಂಥಪ್ಪ ಹಲವು ಬರಗಳನ್ನು, ಕುಂದು ಕೊರತೆಗಳನ್ನು ತಮ್ಮ ಆಚಾರವಿಲ್ಲದ ನಾಲಿಗೆ ಮಾತ್ರದಿಂದ ಹೋಗಲಾಡಿಸಿ ತಮ್ಮ ಗ್ರಾಮಕ್ಕೆ ಸಾಮಾಜಿಕ ಮಹತ್ವ ದಯಪಾಲಿಸಿದ ಲಿಂಗಪ್ಪನವರು ಅಪ್ಪಟ ಸಜ್ಜನರಾಗಿ ಮಾರ್ಪಟ್ಟಿರುವರೆಂಬ ಸಂಗತಿಯನ್ನು ಒಪ್ಪಿಕೊಳ್ಳಲು

## ಕಾಲ



ಕಾಲದ ಓಟಕ್ಕೆ ಅದೆಷ್ಟು ವೇಗ ?
ಇಂದು ತಿಳಿಯಾಗಿದ್ದ ಮೇಘಕ್ಕೆ
ನಾಳೆ ಕಣ್ಣೀರಿನ ಒರತೆ
ನಿನ್ನೆಯಷ್ಟೇ ತೋಳತೆಕ್ಕೆಯಲ್ಲಿ ಬಂಧಿ
ಯಾಗಿದ್ದ ಹಸುಗೂಸಿಗೆ
ಇಂದು ಮನೆತುಂಬಾ ಓಡಾಟ
ಆಟಿಕೆಗಳ ಹುಡುಕಾಟ !
ಆಗ ತಾನೆ ನೋಡಿದ ಮುದುಕಿಗೆ
ಈಗ ಅಂತ್ಯ ಸಂಸ್ಕಾರ;
ಆಗೆಲ್ಲಾ ನೆನಪಾಗುವುದು
ಓಡುತ್ತಾ ಇರುವ ಕಾಲಕ್ಕೆ
ವಿಶ್ರಾಂತಿ ಬೇಕೆನಿಸುವುದಿಲ್ಲವೆ ?

ಸ್ಮಿತಾ ಅಮೃತರಾಜ್
ಅಮೃತ ನಿಲಯ, ಸಂಪಾಜೆ-೫೭೪೨೩೪
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ಗ್ರಾಮದ ಯಾರೊಬ್ಬರೂ. ಸಿದ್ಧರಿರಲಿಲ್ಲ. ಲಿಂಗಪ್ಪನವರು ಸುಸಂಸ್ಕೃತರಾದ ಪಕ್ಷದಲ್ಲಿ ತಮ್ಮ ಗ್ರಾಮದ ವರ್ತಮಾನ ಮತ್ತು ಭವಿತವ್ಯ ತೇಜೋಹೀನವಾದಂತೆಯೇ ಲೆಕ್ಕವೆಂದು ಭಾವಿಸಿದ ಅನೇಕರು ಪರಿಹಾರೋಪಾಯಗಳ ಹುಡುಕಾಟ ದಲ್ಲಿ ತೊಡಗಿದರು. ಬಯ್ಗಳಿಂದ ವಂಚಿತಗೊಂಡ ಗ್ರಾಮದ ಅಧಿಕಾರಿಗಳು: ಶ್ರೀಮಂತರೇ ಮೊದಲಾದ ಸಂತ್ರಸ್ತರನ್ನು ಸಂತೈಸಲು; ಅವರಿಗೆ ಪುನರ್ವಸತಿ ಸೌಲಭ್ಯ ಕಲ್ಪಿಸಲು; ಅದಕ್ಕೊಂದು ಪರ್ಯಾಯ ವ್ಯವಸ್ಥೆ ರೂಪಿಸಲು ಗ್ರಾಮದ ಹಲವರು ಕಂಕಣಬದ್ಧರಾದರು, ಅಲ್ಲದೆ ಈ ದಿಶೆಯಲ್ಲಿ ಪ್ರಯತ್ನ ಗಳನ್ನು ಕೈಗೊಂಡರೂ ಕೂಡ. ಆದರೆ ಸಂತ್ರಸ್ತರು ತಮ್ಮನ್ನು ಬಯ್ದರೆ ಲಿಂಗಪ್ಪನವರೇ ಬಯ್ಯಬೇಕೆಂದು ಪಟ್ಟು ಹಿಡಿದು ಪರ್ಯಾಯ ವ್ಯವಸ್ಥೆಯನ್ನು ಖಡಾಖಂಡಿತವಾಗಿ ನಿರಾಕರಿಸಿದರು.

ಈ ವಸ್ತುಸ್ಥಿತಿಯನ್ನು ಚರ್ಚಿಸಲು ಗ್ರಾಮದ ಹನುಮಂತ ದೇವರ ಗುಡಿ; ಆಲದ ಕಟ್ಟೆ ಚಹದಂಗಡಿಯೇ ಮೊದಲಾದ ಪ್ರಮುಖ ಕೇಂದ್ರಗಳಲ್ಲಿ ಅನೇಕರು ಸೇರಿ ತರ್ಜನ ಭರ್ಜನ ನಡೆಸಿದರು. ಆವರಿಸಿರುವ ಮಂಕು ಹೋಗಲಾಡಿಸುವಂತೆ ಲಿಂಗಪ್ಪನವರಲ್ಲಿ ಕೈಮುಗಿದು ಬೇಡಿಕೊಳ್ಳಬೇಕೆಂದೂ ಇದಕ್ಕೆ ಸಂಬಂಧಿಸಿದಂತೆ ಒಂದು ನಿಯೋಗವನ್ನು ರಚಿಸಬೇಕೆಂದೂ, ನಿಯೋಗದ ಮುಖಂಡತ್ವವನ್ನು ವಹಿಸಿಕೊಳ್ಳುವಂತೆ ಶರಭಣ್ಣನವರನ್ನು ಕೇಳಿಕೊಳ್ಳಬೇಕೆಂದೂ ಸಭೆ ಒಮ್ಮತದಿಂದ ನಿರ್ಧಾರ ಕೈಗೊಂಡಿತು.

ಶರಭಣ್ಣ ಎಂದರೆ ಬೇರೆ ಯಾರೂ ಅಲ್ಲ. ಲಿಂಗೈಕ್ಯ ಸಾಹುಕಾರು ರುದ್ರಗೌಡರ ಏಕಮಾತ್ರ ಪುತ್ರ. ಯಾವ ಶರಭಣ್ಣ ಎಂದರೆ ಯಾವನ ಸೊಂಟದ ಉಡುದಾರದಲ್ಲಿ ನೂರೆಂಟು ತೂತುಬಿಲ್ಲೆಗಳಿದ್ದು: ನಡೆಯುವಾಗ ಘಲ್ ಘಲ್ ಎಂದು ಹಿನ್ನೆಲೆ ಸಂಗೀತ ನುಡಿಸುವವೋ ಅದೇ ಶರಭಣ್ಣ. ಇಂಥಾದ್ದೊಂದು ಗೌರವ ತನಗೆ ಲಭಿಸಬಹುದು ಎಂದು ಮಧ್ಯ ವಯಸ್ಕನೂ; ಕುಳ್ಳನೂ; ಸ್ಥೂಲಕಾಯದವನೂ ಆದ ಶರಭಣ್ಣ ಕನಸು ಮನಸಿನಲ್ಲೂ ಯೋಚಿಸಿರಲಿಲ್ಲ. ಆ ಭಾವಿ ಸರಪಂಚನೂ; ಸಂತಾನ ಹೀನನೂ ಆದ ಆತನು ನಿಯೋಗದ ಮುಖಂಡತ್ವವನ್ನು ವಹಿಸಿಕೊಳ್ಳಲು ತಾನು ಸಮರ್ಥನಲ್ಲ ಎಂದು ನಿರಾಕರಿಸಿದನು. ಕಾರಣ ಲಿಂಗಪ್ಪನವರ ತ್ರಿಶೂಲ ಸ್ವರೂಪಿ ನಾಲಗೆ ಎದುರು ನಿಲ್ಲುವ ಶಕ್ತಿ ತನಗಿರಲಿಲ್ಲ. ಅನುಭವದ ತಾನು ಎಷ್ಟೋ ಬಾರಿ ಲಿಂಗಪ್ಪನವರ ನಾಲಿಗೆಯಾಘಾತದಿಂದ ಕೊಲೆಯಾಗಿ ಮತ್ತೆ ಮತ್ತೆ ಹುಟ್ಟಿ ಬದುಕಿದ್ದನು. ಮತ್ತೊಮ್ಮೆ ನಿರ್ನಾಮವಾಗಬಾರದೆಂದು ನಿರ್ಧರಿಸಿ ಲಿಂಗಪ್ಪನವರ ಕಣ್ಣಿಗೆ ಬೀಳದಂತೆ ಜಾಗ್ರತೆ ವಹಿಸಿದ್ದನು. ಈಗ ದುತ್ತನೆ ಹೊತಾ ಹೋಗಿ ಲಿಂಗಪ್ಪನವರ ಎದುರಿಗೆ ನಿಲ್ಲುವುದೆಂದರೇನು ! ಅವರು ತಮ್ಮ ನಾಲಗೆಯಿಂದಪ್ಪಳಿಸುವುದಿಲ್ಲವೆಂಬುದಕ್ಕೆ ಏನು ಖಾತರಿ ! ಈ ಗುರುತರ ಜವಾಬ್ದಾರಿ ಹೊರಿಸಬೇಡಿರಪ್ಪಾ ಎಂದು ವಿವಿಧಾಲಾಪನೆ ಮಾಡಿ ಕೇಳಿಕೊಂಡನು. ಆಗ ಚಿದಾನಂದಾವಧೂತ ವಿರಚಿತ ದೇವಿಪುರಾಣವನ್ನು ಸೊಗಸಾಗಿ ಪಾರಾಯಣ ಮಾಡುವಾತನೂ; ವಯೋವೃದ್ಧನೂ; ಋಣಶೇಷ ಉಳ್ಳಾತನೂ ಆದಂಥ ಗಟ್ಟಿ ಜಲಂಧರಪ್ಪ ಮುಂದೆ ಬಂದು ''ಇದು ನಮ್ಮೂರ ಘನತೆ ಪ್ರಶ್ನೆ ಆಗಿರುವಂತೆಯೇ ನಿನ್ನ ರಾಜಕೀಯ ಭವಿಷ್ಯದ ಅಳಿವು ಉಳಿವಿನ ಪ್ರಶ್ನೆಯೂ ಆಗಿದೆ ಕಣ್ ಶರಭಣ್ಣಾ... ನೀನು ಹೇಗಾದರೂ ಮಾಡಿ ಲಿಂಗಪ್ಪನವರ ನಾಲಗೆ ಪ್ರಜ್ವಲಿಸುವಂತೆ ಮಾಡು. ಪ್ರತಿಯಾಗಿ ಬೆಳ್ಳಿ ನಾಲಗೆ ಮಾಡಿಸಿಕೊಡುವುದಾಗಿಯೂ ಆಮಿಷ ತೋರಿಸು. ಕೋಪದ ಭರದಲ್ಲಿ ಲಿಂಗಪ್ಪಾಜಿಯವರು ಬಯ್ದ್ರೆ ಬಯ್ಯಿಸ್ಕೋ: ಉಗಿದ್ರೆ ಉಗಿಸ್ಕೋ.... ನಿನ್ನ ಜನ್ಮ ಪಾವನವಾಯಿತೆಂದೇ ತಿಳಿ... ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ಅಂತ ಹಿರಿಯರೇ ಹೇಳಿದ್ದಾರೆ. ನಿನಗೆ ಜನ್ಮ ಕೊಟ್ಟಿರೋ ಈ ಗ್ರಾಮದ ಘನತೆ ಗೌರವ ಕಾಪಾಡು'' ಎಂದು ರಾಗಯುಕ್ತವಾಗಿ ಹೇಳಲು ಶರಭಣ್ಣ ಗತ್ಯಂತರವಿಲ್ಲದೆ ಒಪ್ಪಿಕೊಂಡನು. ಜಲಂಧರಪ್ಪನ ಉದ್ದೇಶ ಶರಭಣ್ಣನನ್ನು ವಾಮಾಗೋಚರವಾಗಿ ಬಯ್ಯಿಸುವುದೇ ಆಗಿತ್ತು. ಕಾರಣ ಲಿಂಗಪ್ಪನವರು ತಮ್ಮ ಆರನೇ ಇಂದ್ರಿಯದ ಮೂಲಕ ಶರಭಣ್ಣನ ಸಾವಿರ ಹುಳುಕುಗಳನ್ನು ಗ್ರಹಿಸದೆ ಇದ್ದಿರಲಾರರು. ಯೇನಕೇನ ಶರಭಣ್ಣ ನಿಯೋಗದ ನೇತೃತ್ವ ವಹಿಸಲು ಒಪ್ಪಿದರೆಂಬ;

ಜಲಂಧರಪ್ಪನ ಸಲಹೆಯನ್ನು ಗೌರವಿಸಿದರೆಂಬ ವಿಷಯ ತಿಳಿದು ಗ್ರಾಮ ನೆಮ್ಮದಿಯಿಂದ ಉಸಿರುಬಿಟ್ಟಿತು.

ಇಂಥದೊಂದು ಮುಖಂಡತ್ವಕ್ಕೆ ಶರಭಣ್ಣನನ್ನು ಆಯ್ಕೆ ಮಾಡಿದ್ದರಲ್ಲಿ; ಇದನ್ನು ಒಪ್ಪಿಕೊಳ್ಳಲು ಆತನು ಮೊದ ಮೊದಲು ಹಿಂದೇಟು ಹಾಕಿದ್ದರಲ್ಲಿ ಕಾರಣಗಳು ಇಲ್ಲದಿಲ್ಲ. ದೇವಾನುದೇವತೆಗಳನ್ನೂ; ಕಿನ್ನರ ಕಿಂಪುರುಷರನ್ನೂ ಬಿಟ್ಟಿರದಿದ್ದ ನಾಸ್ತಿಕ ಮಹಾಶಯರಾದ ಲಿಂಗಪ್ಪನವರು ಬಯ್ಯುವ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದಂಥ ದಿನಗಳಲ್ಲಿ ಶರಭಣ್ಣ ರಾಜಕೀಯ ಕ್ಷೇತ್ರದಲ್ಲಿ ಪ್ರವರ್ಧಮಾನಕ್ಕೆ ಬರಲು ಹವಣಿಸುತ್ತಿದ್ದನು. ತನ್ನ ಹಿತ-ಮಿತ ಶತ್ರುಗಳ ಬಾಯಿ ಮುಚ್ಚಿಸಲು ಅಸಮರ್ಥನಾಗಿದ್ದನು. ಅದಕ್ಕಾಗಿ ಆತನು ಪಿರಂಗಿಯೋಪಾದಿ ನಾಲಿಗೆಯ ಲಿಂಗಪ್ಪನವರನ್ನು ಹಿಂದಿಟ್ಟುಕೊಂಡು ಅಡ್ಡಾಡಿ ಶತ್ರು ಶೇಷದಿಂದ ಮುಕ್ತನಾದನು. ಆನಂತರ ಹೊಳೆ ದಾಟಿದ ಮೇಲೆ ಅಂಬಿಗನ ಮಿಂಡ ಅನ್ನುತ್ತಾರಲ್ಲ.... ಹಾಗೆ ಲಿಂಗಪ್ಪನವರನ್ನು ದೂರ ಇಟ್ಟನು. ಆ ಸಂದರ್ಭದಲ್ಲಿ ಲಿಂಗಪ್ಪನವರು ಗೂರಲು ಉಬ್ಬಸ ರೋಗದಿಂದ ನಾನಾವಸ್ಥೆ ಅನುಭವಿಸುತ್ತಿದ್ದರಷ್ಟೆ. ಆ ಸಂದರ್ಭದಲ್ಲಿ ಜೀವಂತವೂ ಔಷಧಯುಕ್ತವೂ ಆದ ಮೀನನ್ನು ನುಂಗಿಸುವುದರ ಮೂಲಕ ಗೂರಲು ರೋಗವನ್ನು ಇಲಾಜು ಮಾಡುವ ಹೈದರಾಬಾದಿನ ಯುನಾನಿ ವೈದ್ಯ ರೋರ್ವರು ದೂರದ ಬಳ್ಳಾರಿ ನಗರದಲ್ಲಿ ಬಿಡಾರ ಹೂಡಿದ್ದರಷ್ಟೆ. ಅಪ್ಪಟ ಸಸ್ಯಾಹಾರಿಗಳಾದ ಲಿಂಗಪ್ಪಾಜಿಯವರು ತಾವೂ ಬಳ್ಳಾರಿಗೆ ಹೋಗಿ ಜೀವಂತ ಮೀನನ್ನು ನುಂಗಿ ಗೂರಲು ರೋಗ ದಿಂದ ಮುಕ್ತಿ ಹೊಂದಬೇಕೆಂದು ಕ್ರತು ನಿಶ್ಚಯ ಮಾಡಿದರು. ಆ ಕಾಲದಲ್ಲಿ ಬಳ್ಳಾರಿಗೆ ಹೋಗಿ ಬರುವುದೆಂದರೆ ಹುಡುಗಾಟದ ವಿಷಯವಾಗಿರಲಿಲ್ಲ. ಮುಖ್ಯವಾಗಿ ಬಾಧಿಸಿದ್ದು ಹಣಕಾಸಿನ ಅಡಚಣೆ. ತಮ್ಮಿಂದ ಅನೇಕ ರೀತಿಯಲ್ಲಿ ಉಪಕೃತನಾಗಿರುವ ಶರಭಣ್ಣನ ಬಳಿಗೆ ಹೋಗಿ ಕೇವಲ ಒಂದು ನೂರು ರೂಪಾಯಿಗಳನ್ನು ಅಧಿಕಾರವಾಣಿಯಿಂದ ಕೇಳಿದರು. ಪೆಟಾರಿಯಲ್ಲಿ ಪೆಂಡೆ ಪೆಂಡೆ ಹಣವಿದ್ದರೂ ಶರಭಣ್ಣ ತನ್ನ ಬಳಿ ದಮ್ಮಡಿ ಇಲ್ಲವೆಂದು ಹೇಳಿಬಿಟ್ಟ. ಆದರಿಂದ ಕ್ರುದ್ಧರಾದ ಲಿಂಗಪ್ಪಾಜಿಯವರು ಅಂಥೋನು, ಯಿಂಥೋನಂತ ಹತ್ತು ನಿಮಿಷಗಳ ಪರ್ಯಂತರ ವಾಮಾಗೋಚರವಾಗಿ ಬಯ್ದರು. ತದನಂತರ ಗೂರಲು ಉಲ್ಬಣಿಸಲಾಗಿ ಮನೆಗೆ ವಾಪಸಾದರು. ಅವರು ಮನಸ್ಸು ಮಾಡಿದ್ದರೆ ಬೇರೆಯವರ ಕಾರಿನಲ್ಲಿ ಬಳ್ಳಾರಿಗೆ ಹೋಗಿ ಬರಬಹುದಾಗಿತ್ತು. ಆಸೆಬುರುಕರಾಗಿರದಿದ್ದ ಅವರು ಯಾವ ಆಮಿಷಕ್ಕೂ ಬಲಿ ಬೀಳುವವರಾಗಿರಲಿಲ್ಲ. ಗೂರಲು ರೋಗಿಗಳೆಂದರೆ ಜವರಾಯನು ಹೆದರಿ ಯೋಜನ ದೂರ ಓಡುವವನಾಗಿದ್ದುದರಿಂದ ಸಾವು ಕೂಡ ಅವರ ಸಮೀಪ ಸುಳಿದಾಡುತ್ತಿರಲಿಲ್ಲ. ಹೀಗೆ ಮೃತ್ಯುಂಜಯರಾಗಿದ್ದ ಅವರು ನಂಬಿಕೆ ದ್ರೋಹಿ ಶರಭಣ್ಣನನ್ನು ಹುಡುಕಿಕೊಂಡು ಹೋಗಿ ಬಯ್ಗುಳ ವರ್ಷ ಕರೆಯತೊಡಗಿದರು. ಅದರ ಪರಿಣಾಮವಾಗಿ ಶರಭಣ್ಣನು ಲಿಂಗಪ್ಪಾಜಿ ಎಂದರೆ ಬೆದರಿ ಬೆಚ್ಚಿ ಬೀಳಲಾರಂಭಿಸಿದನು. ಲಿಂಗಪ್ಪನವರ ಕಣ್ತಪ್ಪಿಸಿ ಅಡ್ಡಾಡಲಾರಂಭಿಸಿದನು. ತನ್ನ ಗಂಡನ ಯೋಗಕ್ಷೇಮ ಕಾಪಾಡುವುದು ಸತೀಧರ್ಮವೆಂದು ಬಗೆದ ಗೌರಮ್ಮ ಸಮಸ್ತ ಸಂಪತ್ತಿದ್ದ ಜೇರಿಗೆ ಡಬ್ಬವನ್ನೇ ಲಿಂಗಪ್ಪನವರ ಮುಂದಿಟ್ಟು ತನ್ನ ಗಂಡನ ಮಹಾಪರಾಧವನ್ನು ಮನ್ನಿಸುವಂತೆ ಕೇಳಿಕೊಂಡಳು. ಆದರೆ ಅವರು ಅದನ್ನು ಮುಟ್ಟಲೂ ಇಲ್ಲ; ಆಕೆಯ ಗಂಡನನ್ನು ಕ್ಷಮಿಸಲೂ ಇಲ್ಲ. ಇದಿಷ್ಟು ಪೂರ್ವಾಪರ.

ಈಗ ಇದ್ದಕ್ಕಿದ್ದಂತೆ ಶರಭಣ್ಣ ಲಿಂಗಪ್ಪನವರೆದುರು ಕೈಜೋಡಿಸಿ ನಿಲ್ಲುವುದೆಂದರೇನು ? ಊಟ ಬಡಿಸುವಾಗ್ಗೆ ಸತೀಮಣಿ ಗೌರಮ್ಮ ನಿಮ್ಮ ಗ್ರಾಚಾರ ನೆಟ್ಗಿಲ್ಲ.. ಲಿಂಗಪ್ಪನುಸಾಬರಿಗೆ ಹೋಗಬ್ಯಾಡಿ ಎಂದು ಪರಿಪರಿಯಿಂದ ಕೇಳಿಕೊಂಡಳು. ಆದರೆ ಗಂಡ ಬಾಯಿಯಿಂದ ಬಡಿಸಿದ ಬಯ್ಗಳ ಸುಗ್ರಾಸ ಭೋಜನ ಮಾಡಿ ತೆಪ್ಪಗಾದಳು.



ಶರಭಣ್ಣನು ಮಹತ್ವದ ಯುದ್ಧಕ್ಕೆ ಹೊರಟ ಸೇನಾಪತಿಯಂತೆ ಮಾನಸಿಕವಾಗಿಯೂ, ದೈಹಿಕವಾಗಿಯೂ ಸಂಸಿದ್ಧಗೊಂಡನು. ಅದೇ ವೇಳೆಗೆ ಸರಿಯಾಗಿ ಈ ಸಂಗತಿ ಹೇಗೋ ತಿಳಿದು ಪಾರವ್ವ ಅಟವಾಳಿಗೆ ಮನೆಗೆ ಓಡಿಬಂದಳು. ಶರಭಣ್ಣ ದಂಪತಿಗಳು ಆಕೆಯನ್ನು ಆದರದಿಂದ ಬರಮಾಡಿಕೊಂಡರಲ್ಲದೆ ತಿನ್ನಲೊಂದಿಷ್ಟು; ಕುಡಿಯಲೊಂದಿಷ್ಟು ಕೊಟ್ಟು ಸತ್ಕರಿಸಿದರು. ಒಂದು ಕಡೆಯಿಂದ ನೋಡಿದರೆ ಗೌರಮ್ಮಗೆ ಪಾರವ್ವ ದೂರದ ಸಂಬಂಧಿಯಾಗಬೇಕು. ಆದರೂ ಎಷ್ಟೋ ಅಷ್ಟು ಮಾತಾಡಿ ಗೌರಮ್ಮ ಅಡುಗೆ ಮನೆಯ ಕದದ ಮರೆಯಲ್ಲಿ ಗುಟ್ಟಾಗಿ ನಿಲ್ಲಲು ಶರಭಣ್ಣ ಮತ್ತು ಪಾರವ್ವರ ನಡುವೆ ಸಂಭಾಷಣೆ ಆರಂಭವಾಯಿತು.

ಪಾರವ್ವ ತನ್ನ ಗಂಡ ಬಂದು ವಾರವಾದರೂ ತನ್ನನ್ನು ಒಮ್ಮೆ ಕೂಡ ಬಯ್ಯಲಿಲ್ಲವೆಂದೂ; ಅಷ್ಟೇ ಏಕೆ ಯಾರೊಬ್ಬರನ್ನೂ ಬಯ್ಯುತ್ತಿಲ್ಲವೆಂದೂ; ದುರುಗುಟ್ಟಿ ಸಹ ನೋಡುತ್ತಿಲ್ಲವೆಂದೂ ವಿವರಿಸಿದಳು. ನೀನಾದ್ರೂ ಮೇಲೆ ಬಿದ್ದು ಮಾತಾಡಿಸಬೇಕಿತ್ತಮ್ಮಾ ಎಂದಾತ ಕೇಳಿದ್ದಕ್ಕೆ ಆಕೆಯು ತಾನು ಮಾತನ್ನಾಡಿಸಿದ್ದಾಗಿಯೂ; ಅದಕ್ಕಾತ ಪ್ರತ್ಯುತ್ತರವಾಗಿ ಏನ್ರಿ, ಹೋಗ್ರಿ, ಬರ್ರಿ ಎಂದು ಬ್ರಾಹ್ಮಣರ ಥರ ಮಾತನಾಡಿದನೆಂದು ಹೇಳಿ ದುಃಖ ತಡೆಯಲಾಗದೆ ಬಿಕ್ಕಳಿಸತೊಡಗಿದಳು. ಆಕೆಯ ಮಹದೇಚ್ಛೆ ಇದ್ದದ್ದು ತನ್ನ ಗಂಡ ತನ್ನನ್ನು ಹೇಗಾದರೂ ಮಾಡಿ ಬಯ್ಯಬೇಕೆಂಬುದಾಗಿತ್ತು. ಹೆಂಡತಿಯನ್ನು ಬಯ್ಯಲಾರದವನು ಊರವರನ್ನು ಹೇಗೆ ಬಯ್ದಾನು ಎಂಬುದಾಗಿತ್ತು. ಬಯ್ಯುವುದನ್ನು ಬಿಟ್ಟಿದ್ದೆ ಆದಲ್ಲಿ ಆತ, ಹೇಗೆ ಕುಟುಂಬ ನಿರ್ವಹಣೆ ಮಾಡಿಯಾನು ಎಂಬುದಾಗಿತ್ತು. ಆಕೆಯ ಮಾತುಗಳಿಂದ ಶರಭಣ್ಣನ ಹೃದಯ ಕರಗದೆ ಇರಲಿಲ್ಲ. ಆಕೆ ಹೇಳುವುದನ್ನು ನೋಡಿದರೆ, ಊರವರು ಹೇಳುವುದನ್ನು ನೋಡಿದರೆ, ಲಿಂಗಪ್ಪನವರು ತಮ್ಮ ಬಾಯಿಯಿಂದ ಅಣಿ ಮುತ್ತುಗಳನ್ನುದುರಿಸುತ್ತಲೇ ಕೊತ್ಲಚಿಂತಿಗೆ ಹೋದರು. ಅವರು ಬದಲಾಗಿರುವುದು ಅಲ್ಲಿಂದ ಬಂದ ಮೇಲೆಯೇ. ಅಂದರೆ ಆ ಗ್ರಾಮದಲ್ಲಿ ಅಸಾಧಾರಣ ಘಟನೆಯೊಂದು ನಡೆದಿದ್ದಿರಬಹುದು. ಅಲ್ಲಿ ಯಾರೋ ಮಾಯ ಮರಾಠಿ ತಮ್ಮ ಗ್ರಾಮದ ಅನರ್ಘ್ಯ ರತ್ನಕ್ಕೆ ಮಾಯಮಂತ್ರ ಮಾಡಿದ್ದರೂ ಮಾಡಿದ್ದಿರಬಹುದೆಂಬ ಸಂದೇಹ ಕಾಡಿತು. ಕೊತ್ಲಚಿಂತಿ ಮೊದಲೇ ಮೋಡಿಗಾರರ ತವರು.. ಲಿಂಗಪ್ಪಾಜಿಯವರ ಸೊಂಟಕ್ಕಾಗಲೀ ರೆಟ್ಟೆಗಾಗಲೀ ಯಾರಾದರೂ ಕಟ್ಟಿರಬಹುದಾ

ತಂತ್ರ ತಾಯ್ತಗಳೇನಾದರೂ ಇವೆಯೇ ಎಂಬ ಅನುಮಾನ ವ್ಯಕ್ತಪಡಿಸಿದ. ಅಂಥ ಯಾವ ಗುರುತುಗಳಿಲ್ಲವೆಂದು ಪಾರವ್ವ ಹೇಳಿದಳು. ಅಲ್ಲಿಯೇ ಉಪಸ್ಥಿತನಿದ್ದ ಜಲಂಧರಪ್ಪ ಚೀಲದಿಂದ ಒಂದು ಹಿಡಿ ಲೋಬಾನ ಮಂತ್ರಿಸಿಕೊಟ್ಟು ಕೂಡಲೇ ಹೋಗಿ ಹೊಗೆ ಹಾಕುವಂತೆ ಸೂಚಿಸಿದನಲ್ಲದೆ ಮನೆ ದೇವರ ಪಟದೆದುರು ತುಪ್ಪದ ದೀಪ ಹಚ್ಚಿಟ್ಟು ತನ್ನ ಗಂಡಂಗೆ ಬಯ್ಯುವಂಥ ಪ್ರೇರಣೆ ನೀಡಬೇಕೆಂದು ಬೇಡಿಕೊಳ್ಳುವಂತೆಯೂ; ಮಂಡೆ ಕೊಡುವುದಾಗಿ ಹರಕೆ ಹೊತ್ತುಕೊಳ್ಳುವಂತೆಯೂ ಸಲಹೆ ನೀಡಿದನು. ಲಿಂಗಪ್ಪಾಜಿ ಎಂಟು ದಿನಗಳಿಂದ ಬಯ್ದೇ ಇಲ್ಲವೆಂದಾದಲ್ಲಿ ಮನೆಯಲ್ಲಿ ತುಪ್ಪ ಇರುವುದಾದರೂ ಹೇಗೆ ಸಾಧ್ಯ ! ಅದಕ್ಕೆಂದೇ ಗಂಡನ ಆಜ್ಞೆ ಮೇರೆಗೆ ಗೌರಮ್ಮ ಒಂದು ಬಟ್ಟಲು ತುಪ್ಪ ತಂದುಕೊಟ್ಟಳು. ಸಲಹೆಗಳನ್ನು ತಲೆಯೊಳಗೂ, ತುಪ್ಪವನ್ನು ಕೈಯೊಳಗೂ ಧರಿಸಿಕೊಂಡ ಪಾರವ್ವ ಅಲ್ಲಿಂದ ತಮ್ಮ ಮೂಲೆ ಮನೆ ಕಡೆಗೆ ಲಗುಬಗೆಯಿಂದ ಹೆಜ್ಜೆ ಹಾಕಿದಳು.

ಕೊತ್ಲಚಿಂತಿಯಲ್ಲಿ ಏನು ನಡೆಯಿತು ! ಏನು ಬಿಟ್ಟಿತು ! ಎಂಬುದರ ಬಗ್ಗೆ ವಿಷಯ ಸಂಗ್ರಹಿಸಿಕೊಂಡು ಬರಲೆಂದು ತನ್ನ ಎಡಗೈ, ಬಲಗೈ ಬಂಟರಾದ ಅಕಬರು, ಮವುಲಾಲಿಯರನ್ನು ಆ ಹೊಳೆಯಾಚೆಗಿನ ಹಳ್ಳಿ ಕಡೆಗೆ ಗದುಮಿದನು. ಮೂಲೆ ಮನೇರ ಮನೆ ಅಂಗಳದಲ್ಲಿ ತನ್ನ ಶುಶ್ರೂಷೆ ಮಾಡಲಿಕ್ಕೆಂದು ಸಿದ್ದೀರ, ಗುರೀರ ಎಂಬ ಶಿಷ್ಯರನ್ನು ಹಿಂದೆ ಕಟ್ಟಿಕೊಂಡು ಅವಿಧೇಯ ಮಾಂಡಲಿಕನೋರ್ವ ತನ್ನ ಸಾಮ್ರಾಟನನ್ನು ಕಾಣಲಿಕ್ಕೆ ಹೇಗೆ ಹೋಗುವನೋ ಹಾಗೆಯೇ ಪಿತ್ರಾರ್ಜಿತ ಠೇಂಕಾರಾಲಂಕೃತನಾಗಿದ್ದ ಶರಭಣ್ಣನು ಮೂಲೆ ಮನೆ ಇದ್ದ ಈಶಾನ್ಯ ದಿಕ್ಕಿನ ಕಡೆ ಮುಖ ಮಾಡಿದನು. ಅದನ್ನು ಇಡೀ ಓಣಿಗೆ ಓಣಿಯೇ ನಿಂತು ನೋಡಿ ಶುಭ ಹಾರೈಸಿತು.

ಈಗ ಲಿಂಗಪ್ಪನವರ ಪೂರ್ವಾಪರದ ಕಡೆ ಪಕ್ಷಿನೋಟ ಬೀರೋಣ.

ಲಿಂಗಪ್ಪನವರಿಗೆ ಬಯ್ಗಳು ಸ್ವಯಾರ್ಜಿತವಾಗಿದ್ದವೇ ಹೊರತು ಖಂಡಿತ ಪಿತ್ರಾರ್ಜಿತವಾಗಿರಲಿಲ್ಲ. ಲಿಂಗ ಮೆಚ್ಚಿ ಅಹುದಹುದೆನ್ನುವಂತೆ ಅವರ ಪೂರ್ವಿಕರು ಮಾತಾಡುತ್ತಿದ್ದರು. ಮಳೆ ಆಶ್ರಿತ ಏಳೆಂಟು ಕೂರಿಗೆ ಹೊಲ ತಾತ ಮಾಲಿಂಗಪ್ಪನ ಕಾಲದವರೆಗೆ ಇತ್ತು. ಅದು ಅಸಾಧಾರಣ ರೀತಿಯಲ್ಲಿ ಕರಗಿದ್ದು ಲಿಂಗಪ್ಪನವರ ಪಿತಾಶ್ರೀ ಗುರುಲಿಂಗಪ್ಪನ ಕಾಲದಲ್ಲಿ. ಗುರುಲಿಂಗ ತನಗೊಬ್ಬ ಮಗ ಇದ್ದಾನೆಂಬ ಕಾರಣಕ್ಕೆ ಹೊಟ್ಟೆಗೆ ತಂಗಲು ಬಟ್ಟೆ ಕಟ್ಟಿಕೊಂಡು ಕಿಂಗ್ ಜಾರ್ಜನ ಮುಖ ಮುದ್ರೆಯುಳ್ಳ ಬೆಳ್ಳಿ ರೂಪಾಯಿಗಳನ್ನು ಎಣಿಸೀ ಎಣಿಸೀ ಬೇಸರ ನೀಗಿಕೊಳ್ಳುತ್ತಿದ್ದನು. ಅಲ್ಲದೆ ಕುಂಪಣಿ ಸರಕಾರದ ಕಟ್ಟಾ ಅಭಿಮಾನಿಯೂ ಆಗಿದ್ದನು. ಒಂದು ಗುರುವಾರ ಸಂತೆ ಮಾಡಿಕೊಂಡು ಬರಬೇಕಂತ ಹೋಬಳಿ ಕೇಂದ್ರವಾದ ಕೊಟ್ಟೂರಿಗೆ ಹೋದ. ಅಲ್ಲಿ ಅದೇ ದಿನ ಮಹಾತ್ಮ ಗಾಂಧೀಜಿಯವರ ಭಾಷಣದ ಕಾರ್ಯಕ್ರಮವಿತ್ತು. ಆತನ ವಾರಿಗೆಯವನಾದ ಮರಿಬಸಪ್ಪ ಒತ್ತಾಯ ಮಾಡಿದ್ದರಿಂದ ಒಲ್ಲದ ಮನಸ್ಸಿನಿಂದ ಭಾಷಣ ಕೇಳಲಿಕ್ಕೆಂದು ಹೋದನು. ಹೆಜ್ಜೆ ಹೆಜ್ಜೆಗೆ ಕಿಂಗ್ ಜಾರ್ಜ್; ವಿಕ್ಟೋರಿಯಾ ರಾಣಿಯರ ಧೀರೋದಾತ್ತ ನಿಲುವಿನೊಂದಿಗೆ ಗಾಂಧೀಜಿಯವರ ಬಡಕಲು ವ್ಯಕ್ತಿತ್ವವನ್ನು ತುಲನೆ ಮಾಡಿ ನೋಡದೆ ಇರಲಿಲ್ಲ ತಾನು. ಆತ ಮೊದಲೇ ಠಸ್ಸಾ ಪುಸ್ಸಂತ ಇಂಗ್ಲಿಷು ಮಾತಾಡುವವರನ್ನು ಕಂಡು ರೋಮಾಂಚನಗೊಳ್ಳುತ್ತಿದ್ದ. ಕುಂಪಣಿ ಸರಕಾರದ ಪೊಲೀಸರನ್ನು ನಿಜವಾದ ಗಂಡಸರೆಂದೇ ಭಾವಿಸಿದ್ದ. ತನಗಿರೋ ಏಕಮಾತ್ರ ಪುತ್ರನಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿಸಿ ಕುಂಪಣಿ ಸರಕಾರದ ನೌಕರನನ್ನಾಗಿ ಮಾಡಬೇಕೆಂದು ಕ್ರತು ನಿಶ್ಚಯ ಮಾಡಿದ್ದ. ಅಂಥ ಮನಸ್ಥಿತಿಯ ಗುರುಲಿಂಗಪ್ಪನ ಕಣ್ಣಿಗೆ ಸ್ವಾತಂತ್ರ್ಯ ಹೋರಾಟಗಾರರು ಉದ್ಯೋಗವಿಲ್ಲದ ಬಡಗಿಗಳಂತೆ ಗೋಚರಿಸುತ್ತಿದ್ದರು. ಮೈದಾನ ಅಂಥ ಸಹಸ್ರಾರು ಬಡಗಿಗಳಿಂದಲೇ ತುಂಬಿತ್ತು. ಬೋಲೋ ಭಾರತ್ ಮಾತಾಕಿ ಜೈ; ಗಾಂಧಿ ಮಹಾತ್ಮಾಕಿ ಜೈ... ಬ್ರಿಟಿಷರೇ ಭಾರತ ಬಿಟ್ಟು ತೊಲಗಿ, ಇವೇ ಮೊದಲಾದ ಘೋಷಣೆಗಳು ಮಾರ್ಮಲೆಯುತ್ತಿರುವಾಗ ಶಿವಶಿವಾ ಅಂತ ಕಿವಿ ಮುಚ್ಚಿಕೊಳ್ಳುತ್ತಿದ್ದ. ಹೀಗೆ ಸ್ವಲ್ಪ ಹೊತ್ತಾಗುವಷ್ಟರಲ್ಲಿ ಮುಪ್ಪಾನು ಮುದುಕನೂ; ಫಕೀರನಂಥಾತನೂ ಆದ ಗಾಂಧೀಜಿ ನಾಕುಮಂದಿ ಸಹಾಯದಿಂದ ವೇದಿಕೆ ಏರಿದ್ದೂ ತಡವಾಗಲಿಲ್ಲ; ಜಯಘೋಷಗಳ ನಡುವೆ ಸಾಂಪ್ರದಾಯಕವಾಗಿ ನಾಕು ಮಾತಾಡಿದ್ದೂ ತಡವಾಗಲಿಲ್ಲ. ಸ್ವಾತಂತ್ರ್ಯ ನಿಧಿಗೆ ನಾಮುಂದು ತಾಮುಂದು ಅಂತ ಸಾವಿರಾರು ಮಂದಿ ದೇಣಿಗೆ ಅರ್ಪಿಸಿದ್ದೂ ತಡ ಆಗಲಿಲ್ಲ. ಅದರ ಅಗಾಧ

ಪರಿಣಾಮದಿಂದಾಗಿ ಗುರುಲಿಂಗಪ್ಪಗೆ ತನ್ನ ಕುಬ್ಜತೆಯ ಅರಿವಾಯಿತು. ಉಪ್ಪು ಬೆಳ್ಳಗಡ್ಡೆ ಜೊತೆಗೆ ಪಾವಲಿ ಬೆಲೆಯ ಗಾಂಧಿ ಟೊಪ್ಪಿಗೆಯನ್ನೂ ಧರಿಸಿಕೊಂಡೇ ಊರಿಗೆ ವಾಪಸಾದನು.

ಊರಿಗೆ ವಾಪಸಾದ ತಾನು ಕೈಕಟ್ಟಿ ಕೂಡ್ರಲಿಲ್ಲ. ಹೆಂಡತಿ ಒಬ್ಬ ಮಗ ಇದ್ದಾನೆ ಕಣ್ರಿ ಅಂತ ಗಲಗಲಾಂದರೂ ಕೇಳದೆ ಚರಾಸ್ತಿ ಸ್ಥಿರಾಸ್ತಿಯನ್ನೆಲ್ಲಾ ಮಾರಿ ಗಾಂಧೀಜಿ ನೇತೃತ್ವದ ಸ್ವಾತಂತ್ರ್ಯ ಹೋರಾಟದ ನಿಧಿಗೆ ಅರ್ಪಿಸಿಬಿಟ್ಟ. ಒಂದು ಚರಖಾ; ಒಂದು ದಡೇವು ಅರಳೆ ತಂದು ಮನೆಯ ಅಟಿವಾಳಿಗೆಯಲ್ಲಿ ನೂಲುತ್ತ ಕೂತು ಕೆಲವೇ ದಿನಗಳಲ್ಲಿ ಗಾಂಧೀಗುರುಲಿಂಗಪ್ಪನೆಂದೇ ಹೆಸರಾಗಿಬಿಟ್ಟನು.

ಮೊದಮೊದಲಿಗಿದೆಲ್ಲವೂ ಬಲು ಚಂದ ಇತ್ತು. ಮುಂದೊಂದಿನ ನಿಮ್ಮ ದೇಶಾನ ನೀವು ತಗಳ್ರಪಾ ಅಂತ ಭಾರತವನ್ನು ದೇಶಭಕ್ತರ ಕೈಗೆ ಕೊಟ್ಟು ಬ್ರಿಟಿಷರು ಗಂಟುಮೂಟೆ ಕಟ್ಟಿಕೊಂಡು ತಮ್ಮ ದೇಶಕ್ಕೆ ತಾವು ವಾಪಸಾದರು. ಅದಾದ ಮೇಲೆ ಖಳನೊಬ್ಬ ಗಾಂಧೀಜಿ ಎದೆಗೆ ಗುಂಡಿಟ್ಟು ಕೊಲೆ ಮಾಡಿಬಿಟ್ಟ. ಇಂಥ ಘಟನೆಗಳಿಂದ ಗಾಂಧಿಗುರುಲಿಂಗಪ್ಪ ತತ್ತರಿಸಿಹೋದರು. ಈ ದೇಶದಲ್ಲಿ ಮಂದಿ ಬಲು ಸುಮಾರದಾರೆ ಎಂಬ ನಿರ್ಣಯಕ್ಕೆ ಬಂದರು. ತಮ್ಮ ಬಳಿ ಉಳಿದಿರುವ ಆಸ್ತಿ ಅಡವಾದರೂ ಏನು ! ತಮ್ಮ ಮಗ ಲಿಂಗಪ್ಪನನ್ನು ಎದುರಿಗೆ ಕೂಡ್ರಿಸಿಕೊಂಡು ನೆರೆಹೊರೆಯರನ್ನು ನಿನ್ನಂತೆಯೇ ಪ್ರೀತಿಸು, ಮಾತೇ ಜ್ಯೋತಿರ್ಲಿಂಗ, ನುಡಿದರೆ ಮುತ್ತಿನ ಹಾರದಂತಿರಬೇಕು, ಮಾತುಬಲ್ಲವನಿಗೆ ಜಗಳವಿಲ್ಲ, ಮಾತು ಆಡಿದರೆ ಹೋಯಿತು – ಮುತ್ತು ಒಡೆದರೆ ಹೋಯಿತು ಎಂಬಿವೇ ಮೊದಲಾದ ನೀತಿ ವಾಕ್ಯಗಳನ್ನು ಹಲಗೆ ಮೇಲೆ ಬರೆದು ತಿದ್ದಿಸಿಯೇ ತಿದ್ದಿಸಿದರು. ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ರಾಮಾಯಣ, ಸತ್ಯ ಹರಿಶ್ಚಂದ್ರ ಕಥೆಗಳನ್ನು ಓದಿಸಿದರು. ಅನಂತರ 'ಇವೇ ನಿಂಗೆ ನಾನು ಬಿಟ್ಟು ಹೋಗ್ತಿರೋ ಚರಾಸ್ತಿ ಸ್ಥಿರಾಸ್ತಿ ಕಣಪ್ಪಾ... ಮುಂದೆ ಇವೇ ನಿಂಗೆ ಬದುಕೋ ದಾರಿ ತೋರಿಸ್ತಾವೆ' ಎಂದು ಹೇಳಿದರು. ಮೊದಲನೆ ಪಂಚವಾರ್ಷಿಕ ಯೋಜನೆ ಅರ್ಧ ಆಗುವವರೆಗೆ ಬದುಕಿದ್ದ ಅವರು ಇದ್ದಕ್ಕಿದ್ದಂತೆ ಕೂಳು, ನೀರು ಬಿಟ್ಟು ಸಲ್ಲೇಖನ ವ್ರತ ಕೈಕೊಂಡು ಕೆಲದಿನಗಳವರೆಗೆ ಬದುಕಿದ್ದು ಒಂದು ದಿನ ಗಪ್ಪಂತ ಕಣ್ಣು ಮುಚ್ಚಿಕೊಂಡುಬಿಟ್ಟರು.

ಆ ಛಪ್ಪನ್ನಾರು ನೀತಿ ವಾಕ್ಯಗಳನ್ನೆ ಬಂಡವಾಳ ವಾಗಿರಿಸಿಕೊಂಡು ಭಲೆ ಠೀವಿಯಿಂದ ಬದುಕುವ ಪ್ರಯತ್ನ ಮಾಡಿದ ಲಿಂಗಪ್ಪನವರು ತಾವು ದೊಡ್ಡವರಾದ ತಪ್ಪಿಗೆ ಮದುವೆಯಾಗಿಬಿಟ್ಟಿದ್ದರು. ಮದುವೆಯಾದ ತಪ್ಪಿಗೆ ಕೈಯ ಬೆರಳುಗಳಷ್ಟು ಮಕ್ಕಳಾದವು. ಅವುಗಳ ಪೈಕಿ ಬದುಕುಳಿದವು ಎಷ್ಟೋ! ಸತ್ತೋವು ಎಷ್ಟೋ! ದಿನಗಳೆದಂತೆ ಲಿಂಗಪ್ಪನವರು ಸಂಸಾರ ನಿಭಾಯಿಸಲಿಕ್ಕೆ ಪಿತ್ರಾರ್ಜಿತ ನೀತಿ ವಾಕ್ಯಗಳು ಉಪಯೋಗಕ್ಕೆ ಬರಲಾರವು ಎಂಬ ಸತ್ಯವನ್ನು ಮನಗಂಡರು. ಗಾಂಧೀಜಿಯವರ ತ್ರಿವರ್ಣ ಚಿತ್ರದ ಮೇಲೆ ತಮ್ಮ ತಂದೆ ದೇಶಭಕ್ತ ಗಾಂಧೀ ಗುರುಲಿಂಗಪ್ಪನವರ ಕಪ್ಪು ಬಿಳುಪು ಚಿತ್ರವನ್ನು ಚಕಚೋರಲು ಮಲಗಿಸಿ "ನೀವಿಬ್ರು ಸೇರ್ಕೊಂಡು ನನ್ನನ್ನು ಹಾಳುಬಿಟ್ಟಿರಲ್ಲ" ಎಂದು ಗೋಳಾಡುತ್ತ ಹಾಗೆ ನಿದ್ದೆ ಹೋದರು. ಅವರು ಆಗ ಮಾಡಿದ್ದು ಐತಿಹಾಸಿಕ ನಿದ್ದೆ. ಆ ನಿದ್ದೆಯ ಬಗ್ಗೆ ಲಿಂಗಪ್ಪಾಜಿಯವರು ಪತ್ರಕರ್ತರೋರ್ವರಿಗೆ ವಿವರವಾಗಿ ಹೇಳಿದರು. ಅದೇಂದರೆ.... ಆಗ ಮಲಗಿಕೊಂಡರಲ್ಲ. ಮಲಗಿದವರು ಕನಸು ಕಾಣಬೇಕಲ್ಲ. ಅವರ ನಿದ್ದೆಯ ಅಂಥಾದ್ದೊಂದು ಕನಸಿನಲ್ಲಿ ನಿರ್ಗತಿಕ ಮಹಿಳೆಯೊಬ್ಬಳು ಕಾಣಿಸಿಕೊಂಡು ತಾನು ಸರಸ್ವತಿಯ ಮಲತಾಯಿಯ ಮಗಳು ಎಂದು ಪರಿಚಯಿಸಿಕೊಂಡಳು. ಅವರ ನಾಲಗೆ ಮೇಲೆ ಬಯ್ಗಳ ಪ್ರಣವಾಕ್ಷರಗಳನ್ನು ಬರೆದಳು. ನಿನ್ನ ಬಾಯಿ ಬಯ್ಗಳ ಅಕ್ಷಯಪಾತ್ರೆಯಾಗುತ್ತದೆ ಎಂದು ಹರಸಿ ಮಾಯವಾದಳು.

ಲಿಂಗಪ್ಪಾಜಿ ಇಂಥದೊಂದು ಕನಸು ಕಂಡ ಸಂದರ್ಭದಲ್ಲಿ ಸದರಿ ಗ್ರಾಮವು ಬಯ್ಗಳ ವಿಷಯದಲ್ಲಿ ಬರವನ್ನೆದುರಿಸುತ್ತಿತ್ತು. ಕೋಡಿ, ಪ್ಯಾಲಿ, ದಡ್ಡ ಎಂಬಂಥ ಸರಳ ಸುಂದರ ಮತ್ತು ಸವಕಲು ಬಯ್ಗಳನ್ನು ಉಪಯೋಗಿಸಿ ಉಪಯೋಗಿಸಿ ಗ್ರಾಮ ಸುಸ್ತಾಗಿಬಿಟ್ಟಿತ್ತು. ಮರ್ಮಾಂಗಕ್ಕೆ ನಾಟುವಂಥ ಬಯ್ಗಳನ್ನು ಉಪಯೋಗಿಸಲು ಸಕಲರು ಹಿಂದೇಟು ಹಾಕುತ್ತಿದ್ದ ಸಂಕ್ರಮಣ ಕಾಲದಲ್ಲಿಯೇ ಲಿಂಗಪ್ಪಾಜಿಯವರ ಬಾಯೊಳಗೆ ಬಯ್ಗಳ ಅರುಣೋದಯ ಮೂಡಿದ್ದು. ಜೊತೆಗೆ ಘೋರ ಬಡತನದಿಂದಾಗಿ ಶ್ರೀಯುತರು 'ಮಾತಾಡು ಇಲ್ಲವೆ ಮಡಿ' ಎಂಬ ಕಠೋರ ನಿರ್ಧಾರಕ್ಕೆ ಬಂದುಬಿಟ್ಟಿದ್ದರು. ಮುಗಿಲಿಂದ ಎರಡು ಹನಿ ಕಡಕಂಡು ಭೂಮಿಗುರುಳಲು ಹಿಂದೇಟು ಹಾಕಿದ ಪರಿಣಾಮವಾಗಿ ವಿಧಿ ಬಡತನವನ್ನು ಸಾರ್ವತ್ರೀಕರಿಸಿಬಿಟ್ಟಿತ್ತು. ಕರುಣಾಜನಕ ಎಂಬ ಕರುಣಾಜನಕ ಪದ ಜನ್ಮ ತಾಳಿದ್ದು ಅದೇ ಸಂದರ್ಭದಲ್ಲಿಯೇ.

ಅಣಬೆಗಳಂತೆ ಸ್ಟೋರು ಸೊಸೂಟಿಗಳನ್ನು ಹುಟ್ಟು ಹಾಕಿ ಅವುಗಳ ದ್ವಾರ ಅಮೆರಿಕಾದಿಂದ ಆಮದು ಮಾಡಿಕೊಂಡ ಕೆಂಪು ಜೋಳವನ್ನು ಸದರೀ ದೇಶದ ಕಪ್ಪು ಜನರಿಗೆ ಹಂಚುವ ಕಾರ್ಯವನ್ನು ಸರ್ಕಾರ ಕೈಕೊಂಡಿತ್ತಷ್ಟೆ. ಆ ಜೋಳ ಬಯಸಿ ಹೋದ ಲಿಂಗಪ್ಪಾಜಿಯವರನ್ನು ತಡೆದ ಅಧಿಕಾರಿಯು ನೀನು ಮೇಲ್ಜಾತಿಯವನೆಂದೂ, ದೇಶಭಕ್ತರ ಮಗನಾದ ನೀನು ಬಡತನದ ರೇಖೆಗಿಂತ ಕೆಳಗಿರಲು ಸಾಧ್ಯವಿಲ್ಲವೆಂದೂ ಹೇಳಿದನು. ಆಗಲೆ ಲಿಂಗಪ್ಪಾಜಿಯವರು ಪ್ರಪ್ರಥಮವಾಗಿ ತಮ್ಮ ನಾಲಗೆಯನ್ನು ಜಳಪಿಸಿದ್ದು. ಅವರ ನಾಲಗೆ ಎಂಬ ನಾಸಾ ಕೇಂದ್ರದಿಂದ ಉಡಾವಣೆಗೊಂಡ ಬಯ್ಗಳ ಕ್ಷಿಪಣಿಗಳು ಅಸಂಖ್ಯಾತ. ಅಸಂಖ್ಯಾತ ಕರ್ಣಗಳಿಗೆ ಬಯ್ಗಳ ಅಮೃತ ಪಾನವಾಯಿತು. 'ಭಲಾ ಲಿಂಗಪ್ಪಾಜಿ ಭಲಾ' ಎಂದು ಅನೇಕರು ಉದ್ಗರಿಸಿದರು.

ಆದರೆ ಸೊಸೂಟಿ ಅಧಿಕಾರಿಯು ದುಡುದುಡನೆ ಹೊರ ಓಡಿಬಂದು ಲಿಂಗಪ್ಪಾಜಿಯವರ ಬಾಯಿಯ ಮೇಲೆ ಮೂರು ಉಂಗುರಗಳಿಂದ ಲಕಲಕ ಹೊಳೆಯುತ್ತಿದ್ದ ಅಂಗೈ ಇಟ್ಟು ಜೋಪಾನವಾಗಿ ಒಳಗೆ ಕರೆದೊಯ್ದು ಕಾಪಿಗೀಪಿ ಕೊಟ್ಟು ಸತ್ಕರಿಸಿದರಲ್ಲದೆ ಬರೋಬ್ಬರಿ ಎರಡು ಗಿದ್ದುನ ಕೆಂಪು ಜೋಳ ಕೊಟ್ಟು ಬೀಳ್ಕೊಟ್ಟರು. ತಾವೋರ್ವ ಪ್ರತಿಭಾವಂತ ತೆಗಳು ಕಲಾವಿದ ಎಂದು ಮನವರಿಕೆ ಅವರಿಗಾಯಿತು. ಹದಿನೆಂಟು ಅಕ್ಷೋಹಿಣಿ ಸೈನ್ಯಕ್ಕಿಂತಲೂ ಬಲಿಷ್ಠವಾಗಿರುವ ನಾಲಗೆ ತಮ್ಮ ಬಾಯೊಳಗೆ ಇದೆ ಎಂಬ ಭರವಸೆ ಅವರಿಗೆ ಮೂಡಿದ್ದು ಆಗಲೆ. ಯಾವ ನಕ್ಷತ್ರದಲ್ಲಿ ಅವರ ಬಯ್ಗಳ ದಂಡಯಾತ್ರೆ ಆರಂಭಗೊಂಡಿತೋ ! ಅದು ಮುಂದೆ ಮೂರು ದಶಕಗಳ ಕಾಲ ಚೈತ್ರಯಾತ್ರೆಯಂತೆ ಸಾಗಿ ಗ್ರಾಮದ ಮತ್ತು ಜಿಲ್ಲೆಯ ಸಾಂಸ್ಕೃತಿಕ ಸ್ವರೂಪವನ್ನೇ ಬದಲಿಸಿತೆಂದರೆ ಅತಿಶಯೋಕ್ತಿಯಾಗಲಾರದು.

ಪವಾಡ ಎಂದರೂ ಸರಿಯೆ; ಲಿಂಗಪ್ಪಾಜಿಯವರು ಕಣ್ಮುಚ್ಚಿ ಮಲಗಿಕೊಂಡಾಗ ಅವರು ಪ್ರಪಂಚದ ಸಮಸ್ತ ವಿದ್ಯಮಾನಗಳನ್ನೂ ತಮ್ಮ ನಾಲಗೆ ಮೇಲೆ ಇದ್ದ ಅಗೋಚರ ಕಣ್ಣುಗಳಿಂದ ಗಮನಿಸುತ್ತಿದ್ದರು. ನಾಲಿಗೆಯಿಂದ ಕೇಳುತ್ತಿದ್ದರು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವರ ನಾಲಗೆಯು ಡಿಶ್ ಆ್ಯಂಟೆನಾಕ್ಕಿಂತಲೂ ಶಕ್ತಿಯುತವಾಗಿತ್ತು. ಒಂದು ಬುಲ್ಡೋಜರುಗಿಂತಲೂ ಬಲಿಷ್ಠವಾಗಿತ್ತು. ಅವರು ಉಡಾವಣೆ ಮಾಡುತ್ತಿದ್ದ ಒಂದೊಂದು ಬಯ್ಗಳೂ ಅಣ್ವಸ್ತ್ರಕ್ಕಿಂತಲೂ ಮಿಗಿಲಾಗಿದ್ದವು.

ಅವರು ತಮ್ಮ ಆ ಮಹಿಮಾನ್ವಿತ ನಾಲಗೆಯನ್ನು ಕೇವಲ ಸ್ವಹಿತಾಸಕ್ತಿ ರಕ್ಷಿಸಿಕೊಳ್ಳಲು, ಈಡೇರಿಸಿಕೊಳ್ಳಲು ಮಾತ್ರ ಉಪಯೋಗಿಸಿಕೊಳ್ಳುತ್ತಿರಲಿಲ್ಲ. ಪರರ ಹಿತಾಸಕ್ತಿ ಕಾಪಾಡಲೂ ಅದನ್ನು ಮುಡುಪಿಟ್ಟರು. ಆ ನಾಲಗೆಗೆ ಬಲಿಯಾದ ಅಧಿಕಾರಿಗಳು, ಶ್ರೀಮಂತರು ಅಸಂಖ್ಯಾತ. 'ಮಣಿಯುವವರಿಗೆ ಮಣಿಯುವವು ಕಣೇಕಲ್ಲು ಕೋಣಗಳು' ಎಂಬ ಗಾದೆ ಮಾತು ಚಾಲ್ತಿಗೆ ಬಂದದ್ದು ಆ ಸಂದರ್ಭದಲ್ಲಿಯೇ ಎಂಬುದು ಗಮನಾರ್ಹ.

ಕುಟುಂಬದ ಹಿತರಕ್ಷಣಾರ್ಥವಾಗಿ ಹೆಂಡತಿ ಪಾರವ್ವನ ಸಲಹೆಮೇರೆಗೆಯೋ ಗ್ರಾಮದ ತನ್ನ ಹಿತೈಷಿಗಳ ಸಲಹೆಮೇರೆಗೆಯೋ ಲಿಂಗಪ್ಪನವರು ಕ್ರಮೇಣ ಬಯ್ಯುವುದನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡರು. ವೃತ್ತಿಪರ ಬಯ್ಗಳಗಾರರಾದ ಲಿಂಗಪ್ಪಾಜಿ ಬಯ್ಯುವ ಪ್ರಾಕಾರದ ವಿವಿಧ ಆಯಾಮಗಳ ಬಗ್ಗೆ ನಿರಂತರ ಸಂಶೋಧನೆ ನಡೆಸಿದರು. ಬಯ್ಸಿಕೊಳ್ಳುವ ಬಲಿಪಶುವಿನ ಪೂರ್ವಾಪರಗಳ ಕುರಿತು ಅಧ್ಯಯನ ನಡೆಸಿದರು. ಅದಕ್ಕಾಗಿ ಕೆಲವು ಪತ್ತೆದಾರರನ್ನೂ ನೇಮಿಸಿಕೊಂಡರು. ದೇಶವಿದೇಶಗಳಿಂದ ತಂಡೋಪತಂಡವಾಗಿ ಆಗಮಿಸಿದ ಬಯ್ಗಳು ಕನ್ನಡೀಕರಣಗೊಂಡು ಅವರ ಹೃದಯದಲ್ಲಿ ಶಾಶ್ವತ ಸ್ಥಾನ ಗಿಟ್ಟಿಸಿಕೊಂಡವು. ಪ್ರತಿಯೊಂದು ಬಯ್ಗಳ ಪದವನ್ನು ಮಗುವೆಂದು ಭಾವಿಸಿ ಆರೈಕೆ ಮಾಡತೊಡಗಿದರು. ಹೀಗಾಗಿ ಅವರ ಹೃದಯ ಬಯ್ಗಳ ಉದ್ಯಾನವನವಾಯಿತು. ಅವರ ನಾಲಿಗೆ ಎಂಬ ಮೃಗಾಲಯದಲ್ಲಿ ಕ್ರೂರ ಮೃಗಗಳಿಗಿಂತ ಮಿಗಿಲಾದ ವಿವಿಧ ರೀತಿಯ ವಿವಿಧ ಗಾತ್ರದ ಬಯ್ಗಳು ನಾಮುಂದು ತಾಮುಂದು ಘರ್ಜಿಸಲಾರಂಭಿಸಿದವು. ಹೀಗಾಗಿ ಕಡಿಮೆ ಕಾಲಾವಧಿಯಲ್ಲಿ ಅವರು ಬಯ್ಗಳ ವಿಶ್ವಕೋಶವಾದರು, ಬಯ್ಗಳ ಗ್ರಂಥ ಭಂಡಾರವಾದರು. ಅಷ್ಟೇ ಏಕೆ ತಾವೊಂದು ಬಯ್ಗಳ ವಿಶ್ವವಿದ್ಯಾಲಯವೇ ಆದರು. ಬಯ್ದೂ ಬಯ್ದೂ ಕಂಠಶೋಷಣೆ ಮಾಡಿಕೊಂಡ ಫಲವೋ; ಸರಸ್ವತಿಯ ಕುಟಿಲ ತಂತ್ರದಿಂದಾಗಿಯೋ ಲಿಂಗಪ್ಪಾಜಿಯವರ ಶ್ವಾಸಕೋಶಗಳೊಳಗೆ ಗೂರಲು ರೋಗ ತಳವೂರಿತು. ದಶಮಾಪುರದ ನಾಟಿವೈದ್ಯರಾದ ಈರಣ್ಣನವರು ನೀನು ಬಯ್ಯೋದು ಬಿಟ್ಟ ಎಂದರೆ ಗೂರಲು ರೋಗ ವಾಸಿಯಾಗುತ್ತದೆ ಎಂದು ಹೇಳಿದ್ದಕ್ಕೆ

ಇವರು 'ಮಾಡಿಕೊಂಡ ಹೆಂಡತಿಯನ್ನಾದರೂ ಬಿಟ್ಟೇನು ? ಆದರೆ ಬಯ್ಯುವುದನ್ನು ಮಾತ್ರ ಬಿಡಲಾರೆ' ಎಂದು ಹೇಳಿ ಎದ್ದು ಬಂದುಬಿಡಬೇಕೇ ! ಬಯ್ಯುವುದನ್ನು ಬಿಟ್ಟರೆ ಬಯ್ಗಳ ಗತಿ ಏನಾಗಬೇಡ ! ಆರೋಗ್ಯವೆಂಬ ಸ್ವಾರ್ಥದ ಕಾರಣದಿಂದ ಬಯ್ಗಳಿಗೆ ಸೋಡಾ ಚೀಟಿ ಕೊಡುವುದೆಂದರೇನು ?

ಗೂರಲು ರೋಗದಿಂದ ವಿಚಲಿತರಾಗದ ಲಿಂಗಪ್ಪನವರು ವಿವಿಧ ಬಯ್ಗಳ ಪದಗಳ ನಡುವೆ ಕಸಿ ಮಾಡಿ ಹೊಸಹೊಸ ಬಯ್ಗಳನ್ನು ಆವಿಷ್ಕರಿಸಿ ಗ್ರಾಮದ ಆಳುವ ವ್ಯವಸ್ಥೆಯ ಬೆನ್ನಲ್ಲಿ ನಡುಕ ಹುಟ್ಟಿಸಿದರು. ಸತತವಾಗಿ ಎರಡು ಚುಟ್ಟ ಸೇದೋ ಹೊತ್ತಿನವರೆಗೆ ವಾಮಾಗೋಚರವಾಗಿ ಬಯ್ಯತೊಡಗಿದರೆಂದರೆ ಅವರ ಸುತ್ತ ಒಂದು ಪರಿಶೆಯೇ ನೆರೆದುಬಿಡುತ್ತಿತ್ತು, ಶಿಳ್ಳೆ, ಚಪ್ಪಾಳೆಗಳಿಂದ ಅವರನ್ನು ಹುರಿದುಂಬಿಸುತ್ತಿತ್ತು. ಅವರ ಬಾಯಿಯಿಂದ ಪುಂಖಾನುಪುಂಖವಾಗಿ ಉದುರುತ್ತಿದ್ದ ಬಯ್ಗಳೆಂಬ ಅನರ್ಘ್ಯ ರತ್ನಗಳನ್ನು ಆಯ್ದು ತಮ್ಮ ತಮ್ಮ ಕಿವಿಗಳಿಗೆ ತುಂಬಿಕೊಳ್ಳುತ್ತಿದ್ದವರೆಷ್ಟೋ ಮಂದಿ. ಅಪಾರಿ, ಸಿದ್ಧ ಮುಂತಾದವರು ಆ ವಿಶಿಷ್ಟ ಪರಿಶೆಯಲ್ಲಿ ಶೇಂಗಾ, ಚಕ್ಕುಲಿ ಮಾರಿ ಹೆಚ್ಚು ಲಾಭ ಸಂಪಾದಿಸಿಕೊಳ್ಳುತ್ತಿದ್ದರು. ಕಾಪಿ ರೈಟ್ ಆಕ್ಟೆಂಬ ದೊಣ್ಣೆನಾಯಕನ ಲಗಾಮು ಇರದಿದ್ದುದರಿಂದ ಅವರ ಬಯ್ಗಳನ್ನು ನಿರ್ಭಿಡೆಯಿಂದ ಅನುಕರಿಸುವ, ಇನ್ನೊಬ್ಬರ ಮೇಲೆ ಪ್ರಯೋಗಿಸುವ ಕೃತಿ ಚೌರ್ಯವು ಸದರಿ ಗ್ರಾಮದಲ್ಲಿ ಅಷ್ಟೇ ಏಕೆ ಸುತ್ತಮುತ್ತಲಿನ ಗ್ರಾಮಗಳಲ್ಲಿ ಸಾಂಗೋಪಾಂಗವಾಗಿ ನಡೆಯತೊಡಗಿತೆಂಬುದು ಅದು ಬೇರೆ ವಿಷಯ.

ಈ ಪ್ರಕಾರವಾಗಿ ಸದರಿ ಗ್ರಾಮವು ಬಯ್ಗಳ ಕಾಶಿ ಎಂದು ವಿಖ್ಯಾತವಾಯಿತು. ಕಳ್ಳ ಬುಳ್ಳ, ನಾರಾಣಿ, ತಿಪ್ಪರೇ ಮೊದಲಾದ ಗ್ರಾಮದ ತ್ರಿಷಷ್ಠಿ ಪುರಾತನರ ಪಾಲಿಗೆ ಲಿಂಗಪ್ಪನವರು ನಾಡೋಜರಾದರು. ಪಾಳೆ ಪ್ರಕಾರ ಅವರು ತಮ್ಮ ನಾಡೋಜನ ಅಂಗರಕ್ಷಕರೂ ಆದರು. ಹೀಗಾಗಿ ಲಿಂಗಪ್ಪಾಜಿ ಸದರಿ ಗ್ರಾಮದಲ್ಲಿ ಹಾಜಿಮಸ್ತಾನನಿಗಿಂತ ಮಿಗಿಲಾದ ಡಾನ್ ಆಗಿ ಪರಿವರ್ತನೆಗೊಂಡರು.

ಬಯ್ಯಿಸಿಕೊಳ್ಳುವುದೆಂದರೆ ಎಲ್ಲಿವರೆಗೆ ಬಯ್ಯಿಸಿ ಕೊಳ್ಳುವುದು. ಅದಕ್ಕೆಂದೇ ಕೆಲವು ಅಧಿಕಾರಿಗಳು ಶ್ರೀಮಂತರು ಗುಟ್ಟಾಗಿ ಲಿಂಗಪ್ಪಾಜಿಯವರಿಗೆ ಹಫ್ತಾ ಸಲ್ಲಿಸತೊಡಗಿದರು. ಲಿಂಗಪ್ಪಾಜಿಯವರ ಕಾರ್ಯವ್ಯಾಪ್ತಿ ಕ್ರಮೇಣ ಜಿಲ್ಲೆಯಾದ್ಯಂತ ವಿಸ್ತೃತಗೊಂಡಿತು.

ಲಿಂಗಪ್ಪಾಜಿಯವರನ್ನು, ಅವರ ಬಯ್ಗಳ ಬೆಳ್ಳಿ ಮಹೋತ್ಸವವನ್ನು ಗ್ರಾಮದಲ್ಲಿ ಅದ್ದೂರಿಯಾಗಿ ಆಚರಿಸ ಲಾಯಿತು. ಆ ಸಮಾರಂಭಕ್ಕೆ ವಿಶ್ವವಿದ್ಯಾಲಯಗಳಿಂದ ಆಗಮಿಸಿದ್ದ ಜಾನಪದ ವಿದ್ವಾಂಸರು ಅವರನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಅವರ ಪ್ರಯತ್ನದ ಫಲವಾಗಿ ಒಂದು ವಿಶ್ವವಿದ್ಯಾಲಯವು 'ಲಿಂಗಪ್ಪಾಜಿ ಯವರ ಬಯ್ಗಳ ನಿಘಂಟು' ಎಂಬ ಹೆಬ್ಬೊತ್ತಿಗೆಯನ್ನು ಪ್ರಕಟಿಸಿತು. ಆಕಾಶವಾಣಿಯೂ ಅವರ ವಿಶೇಷ ಸಂದರ್ಶನವನ್ನು ಪ್ರಸಾರ ಮಾಡಿತು. ವಾರಕ್ಕೆ ಒಬ್ಬರಾದರೂ ಬಂದು ಲಿಂಗಪ್ಪಾಜಿಯವರನ್ನು ಕಂಡು ತಾಸುಗಟ್ಟಲೆ ಮಾತಾಡಿ ಹೋಗತೊಡಗಿದರು. ಲಿಂಗಪ್ಪಾಜಿ ಯವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ಯಾಕೆ




ನೀಡಬಾರದೆಂಬ ಒಕ್ಕಣಿಕೆವುಳ್ಳ ಸುದೀರ್ಘ ಲೇಖನ ವೊಂದು ಕೆಲವು ದಿನಗಳ ಹಿಂದೆಯಷ್ಟೆ ನಾಡಿನ ಪ್ರಮುಖ ದೈನಿಕದಲ್ಲಿ ಪ್ರಕಟಗೊಂಡಿರುವ ಸಂಗತಿ ಬಹಳ ಜನರಿಗೆ ಪ್ರಾಯಶಃ ತಿಳಿದಿರಲಿಕ್ಕಿಲ್ಲ....

ಶರಭಣ್ಣನ ನಿರ್ದೇಶನದ ಮೇರೆಗೆ ವಿಷಯ ಸಂಗ್ರಹಿಸಿಕೊಂಡು ಬರಲೆಂದು ಕೊತ್ತಲಚಿಂತಿಗೆ ಹೋಗಿದ್ದ ಅಕಬರ ಮೌಲಾಲಿಯವರು ಹೇಳಿದ ವಿಷಯವಂತೂ ಅತ್ಯದ್ಭುತವಾಗಿರುವುದು. ಒಂದು ಸನ್ಮಾನ ಸಮಾರಂಭದಲ್ಲಿ ಪಾಲ್ಗೊಳ್ಳಲಿಕ್ಕೆಂದೇ ಲಿಂಗಪ್ಪಾಜಿ ಕೊತ್ತಲಚಿಂತಿಗೆ ಹೋಗಿದ್ದು. ಅಲ್ಲಿನ ಹವ್ಯಾಸಿ ಬಯ್ಗಳಗಾರರಿಗೂ; ಲಿಂಗಪ್ಪಾಜಿಯವರಿಗೂ ನಡುವೆ ಮಾತಿನ ಚಕಮಕಿ ನಡೆಯಿತು. ಕೊತ್ತಲಚಿಂತಿಯ ಅನಭಿಷಿಕ್ತ ಪಾಳೇಗಾರರಾದ ರಾಜಾ ಪಂಪನ ಗೌಡರನ್ನು ಬಯ್ದರೆ ಐದುನೂರು ರೂಪಾಯಿ ಬಹುಮಾನ ಕೊಡುವುದಾಗಿ ಒಬ್ಬ ಘೋಷಿಸಿಯೇಬಿಟ್ಟ. ಆ ಆಹ್ವಾನವನ್ನು ಲಿಂಗಪ್ಪಾಜಿ ಸ್ವೀಕರಿಸಿಯೇಬಿಟ್ಟರು. ಐದು ಸಹಸ್ರ ಎಕರೆ ಭೂಮಿಗೆ ಒಡೆಯರೂ, ಕನಿಷ್ಠಪಕ್ಷ ಐವತ್ತರವತ್ತು ಖೂನಿ ಮಾಡಿಸಿರುವವರೂ ಆದ ಗೌಡರ ಎದುರಿಗೆ ಚಪ್ಪಲಿ ಮೆಟ್ಟಿಕೊಂಡು ಅಡ್ಡಾಡಲು ದೊಡ್ಡ ದೊಡ್ಡವರೇ ಅಂಜುತ್ತಿರಬೇಕಾದರೆ ಹೋಗಿ ಬಯ್ಯುವುದೆಂದರೇನು ! ಒಪ್ಪಿಕೋಬೇಡಿ ಎಂದು ಯಾರು ಎಷ್ಟು ಹೇಳಿದರೂ ಕೇಳದೆ ಲಿಂಗಪ್ಪನವರು ಸರಸರ ಅಂತ ಸೀದ ಹೋಗಿ ರಾಜಾ ಪಂಪನ ಗೌಡರೆದುರು ನಿಂತರು. ಇದ್ದಕ್ಕಿದ್ದಂತೆ ಅವರನ್ನು ಬಯ್ಯಲು ಶುರುಮಾಡಿದರು. ಅದೂ ಒಳ ಹೊರಗೆ ಜನವೋ ಜನ, ಸತತ ಒಂದು ಗಂಟೆ ಕಾಲ; ಅದೂ ಉಪಯೋಗಿಸಿದ ಶಬ್ದ ಉಪಯೋಗಿಸದೆ ಲಿಂಗಪ್ಪಾಜಿಯವರ ಬಯ್ಗಳಿಂದ ಸಂಪ್ರೀತರಾದ ಜಮೀನ್ದಾರರು ಕುಲುಕುಲು ನಗುತ್ತ ಎದ್ದು ಬಂದು ಅವರನ್ನು ಆಲಂಗಿಸಿಕೊಂಡರು. "ಲಿಂಗಪ್ಪನವರೆ... ಲೋಕ ವಿಖ್ಯಾತ ಬಯ್ಗಳಗಾರರಾದ ನಿಮ್ಮ ಪ್ರತಿಭೆ ಅಮೋಘವಾದುದು. ನಿಮ್ಮಿಂದ ಬಯ್ಯಿಸಿಕೊಳ್ಳಬೇಕೆಂಬ ಮಹದೇಚ್ಛೆ ನಮಗೆ ಬಹಳ ದಿನಗಳಿಂದ ಇತ್ತು. ಈಗ ಅದು ಈಡೇರಿತು" ಎಂದು ಹೃದಯ ತುಂಬಿ ಶ್ಲಾಘಿಸಿದರು. ಅರ್ಧ ಸೇರು ತೂಕದ ಬೆಳ್ಳಿ ಕಡಗವನ್ನು ಬಹುಮಾನ ರೂಪದಲ್ಲಿ ಕೊಟ್ಟಿದ್ದೂ ಅಲ್ಲದೆ ತಾವೇ ಖುದ್ದ ಜೊತೆಯಲ್ಲಿ

ಕೂತಿದ್ದು ಹೋಳಿಗೆ ಊಟವನ್ನು ಮಾಡಿಸಿ ಹೃದಯ ವೈಶಾಲ್ಯತೆಯನ್ನು ಮೆರೆದರು. ಅವರ ಈ ಉದಾರ ವರ್ತನೆಯಿಂದ ಲಿಂಗಪ್ಪನವರು ಪಾತಾಳಕ್ಕಿಳಿದು ಹೋಗಿಬಿಟ್ಟರು. ಪಶ್ಚಾತ್ತಾಪದಿಂದ ತಮ್ಮನ್ನು ತಾವು ಸಾಕಷ್ಟು ನಿಂದಿಸಿಕೊಂಡರು. ಮುಂದೆಂದೂ ತಾವು ಯಾರೊಬ್ಬರನ್ನು ಬಯ್ಯುವುದಿಲ್ಲವೆಂದು ಶಪಥ ಮಾಡಿ ತಮ್ಮೂರಾದ ಕಣೇಕಲ್ಲಿಗೆ ಮರಳಿದರು.

ಅವರ ಈ ನಿರ್ಧಾರದಿಂದ ಅವರ ಹೃದಯದಲ್ಲಿ ಆಶ್ರಯಪಡೆದಿದ್ದಂಥ ಅವರಿವರ ಮೇಲೆ ಹರಿಹಾಯುತ್ತಿದ್ದಂಥ ಬಯ್ಗಳ ಶಬ್ದಗಳು 'ಅಯ್ಯೋ ತಮಗಿನ್ನಾರು ದಿಕ್ಕು' ಎಂದು ದುಃಖಮಾಡಿದವು. ಅವುಗಳು ಎಷ್ಟು ಕಾಡಿದರೂ ಬೇಡಿದರೂ ಲಿಂಗಪ್ಪಾಜಿ ತಮ್ಮ ನಿರ್ಧಾರದಿಂದ ವಿಚಲಿತರಾಗಲಿಲ್ಲ. "ಇನ್ನು ನನ್ನ ಹಾಗೂ ನಿಮ್ಮ ಋಣ ತೀರಿತ್ರಪ್ಪಾ. ಬಂದ ದಾರಿಗೆ ಸುಂಕವಿಲ್ಲವೆಂದು ಭಾವಿಸಿ ಹೊರಟುಹೋಗಿ ದಯವಿಟ್ಟು" ಎಂದು ಕೇಳಿಕೊಂಡರಲ್ಲದೆ ಪ್ರತಿಯೊಂದು ಬಯ್ಗಳನ್ನು ತಮ್ಮ ಹೃದಯದಿಂದ ಹೊರಹಾಕಿದರು. ಬಯ್ಗಳ ಪೈಕಿ ಅತಿ ಕನಿಷ್ಠ ಪದವಾದ 'ಲೇ' ಎಂಬ ಪದವು "ಯಜಮಾನರೇ.... ಕಾಲ ಹೆಂಗೆ ಹೋಗಿ ಹೆಂಗೆ ಬರುವುದೋ, ದಯವಿಟ್ಟು ನನ್ನೊಬ್ಬನಿಗಾದರೂ ನಿಮ್ಮ ಹೃದಯದಲ್ಲಿರಲು ಆಸ್ಪದ ಮಾಡಿಕೊಡ್ರಿ" ಎಂದು ಸರ್ಪಾಸ್ತ್ರದಂತೆ ಪರಿಪರಿಯಿಂದ ಕೇಳಿಕೊಂಡಿತು. ಅದಕ್ಕಿದ್ದು ಲಿಂಗಪ್ಪಾಜಿಯವರು "ಏನು ಬಂದರೂ ಎದುರಿಸಲಿಕ್ಕೆ ನಾನು ತಯಾರಿದ್ದೀನಿ ಕಣಪ್ಪಾ.... ನಿನ್ನ ಅಗತ್ಯವೂ ನನಗಿಲ್ಲ.. ನೀನು ಕೂಡ ಹೊರಟು ಹೋಗಿ ಬಿಡು" ಎಂದು ಬಲವಂತದಿಂದ ಅದನ್ನೂ ಹೊರಗೆ ಕಳಿಸಿಬಿಟ್ಟು ನಿರಮ್ಮಳಾದರು. ಹೀಗಾಗಿಯೇ ಅವರು ತಮ್ಮ ಹೆಂಡತಿ ಎಷ್ಟು ಕೇಳಿಕೊಂಡರೂ ಏನ್ರೀ ಗೀನ್ರಿ ಅಂದರೆ ಹೊರತು ಲೇ ತಾಲೆ ಅಂತ ಮಾತ್ರ ಅನ್ನಲಿಲ್ಲ.

ಶರಭಣ್ಣನೊಂದೇ ಅಲ್ಲ ಗ್ರಾಮದ ಅನೇಕರು ನಿರ್ಧಾರ ಬದಲಿಸುವಂತೆ ವಿನಂತಿಸಿಕೊಂಡರು, ಸತ್ಯಾಗ್ರಹ ವನ್ನೂ ಮಾಡಿದರು. ಆದರೆ ಲಿಂಗಪ್ಪಾಜಿ ತಮ್ಮ ನಿರ್ಧಾರ ದಿಂದ ಹಿಂದೆ ಸರಿಯಲಿಲ್ಲ. ಶೇಷಾಯುಷ್ಯವನ್ನು ಸಾರ್ಥಕ ರೀತಿಯಲ್ಲಿ ಕಳೆಯಬೇಕೆಂದು ನಿರ್ಧರಿಸಿದ ಅವರು ಸದರಿ ಗ್ರಾಮದಲ್ಲಿ ಸಾಲೇಗುಡಿಯೊಂದನ್ನು ಆರಂಭಿಸಿದರು. ಶಿಷ್ಯತ್ವ ಸ್ವೀಕರಿಸಿದ ಮಕ್ಕಳಿಗೆ ಮಾತೇ ಜೋತಿರ್ಲಿಂಗ, ನುಡಿದರೆ ಮುತ್ತಿನಹಾರದಂತಿರಬೇಕು, ಮಾತು ಆಡಿದರೆ.. ಇವೇ ಮೊದಲಾದ ನೀತಿ ವಾಕ್ಯಗಳ ಮಹತ್ವವನ್ನು ಹೇಳಿಕೊಟ್ಟರು. ಅವರ ಸಾಲೆ ಗುಡಿಯಲ್ಲಿ ನುರುಪಡಿ ಯಾದ ಎಷ್ಟೋ ಮಂದಿ ನಾಡಿನ ಅನೇಕ ಕಡೆ ನೌಕರ ರಾಗಿ, ಅಧಿಕಾರಿಗಳಾಗಿ ಸೇವೆ ಸಲ್ಲಿಸುತ್ತಿರುವರು ಈಗಲೂ..

ಅಂಥ ಮಾತೇ ಜೋತಿರ್ಲಿಂಗಪ್ಪಾಜಿಯವರ ಏಳನೇ ಪುಣ್ಯ ತಿಥಿಯನ್ನು ಬರುವ ಮಾಘಮಾಸದಲ್ಲಿ ಕಣೇಕಲ್ಲು ಗ್ರಾಮವು ಬಹು ವಿಜೃಂಭಣೆಯಿಂದ ಆಚರಿಸಲಿದೆ.. ಅದರಲ್ಲಿ ಸಾವಿರಾರು ಮಂದಿ ಶಿಷ್ಯರು, ಅಧಿಕಾರಿಗಳು ಭಾಗವಹಿಸುವ ನಿರೀಕ್ಷೆಯಲ್ಲಿದೆ ಕಣೇಕಲ್ಲು ಗ್ರಾಮವು.

ಕುಂ. ವೀರಭದ್ರಪ್ಪ
'ಅನ್ನಪೂರ್ಣ', ಪೊಲೀಸ್ ಸ್ಟೇಶನ್ ಹತ್ತಿರ
ಕೊಟ್ಟೂರು - ೫೮೩೧೩೪, ಬಳ್ಳಾರಿ ಜಿಲ್ಲೆ



## ಸೆಪ್ಟೆಂಬರ್ 11

# ಬ್ರಿಟನ್ ಪ್ರತಿಕ್ರಿಯೆಯ ಒಂದು ಮಾದರಿ

ಡಾ॰ ಕೆ. ಮರುಳಸಿದ್ದಪ್ಪ

ಸೆಪ್ಟೆಂಬರ್ ೧೧ರಂದು ನ್ಯೂಯಾರ್ಕ್ 'ವಿಶ್ವ ವಾಣಿಜ್ಯ ಕೇಂದ್ರ' ಮತ್ತು ವಾಷಿಂಗ್ಟನ್‌ನ 'ಪೆಂಟಗಾನ್' ಮೇಲೆ ಉಗ್ರಗಾಮಿಗಳು ನಡೆಸಿದ ಧಾಳಿ ಜಗತ್ತನ್ನೇ ತಲ್ಲಣಗೊಳಿಸಿದ ಘಟನೆ. ಮಹಾನ್ ಬಲಿಷ್ಠ ರಾಷ್ಟ್ರವೊಂದರ ಅಧ್ಯಕ್ಷ, ಬೇಟೆಗೆ ಗುರಿಯಾದ ಪ್ರಾಣಿಯಂತೆ ಹನ್ನೆರಡು ಗಂಟೆಗಳ ಕಾಲ ಅಡಗುದಾಣಗಳಲ್ಲಿ ರಹಸ್ಯವಾಗಿ ಅವಿತಿಟ್ಟುಕೊಳ್ಳಬೇಕಾದ ಅನಿವಾರ್ಯತೆಯನ್ನು ಈ ಧಾಳಿ ತಂದಿತು. ಹೊರಬಂದ ಕೂಡಲೇ ಮಹಾಭಾರತದ ಉತ್ತರ ಕುಮಾರನಂತೆ ಬುಷ್ ಮಹಾಶಯ ಅಮೆರಿಕನ್ ಕೌಬಾಯ್ ಸಿನಿಮೀಯ ಶೈಲಿಯಲ್ಲಿ ಬಡಾಯಿ ಕೊಚ್ಚಿಕೊಂಡರಾದರೂ ಹನ್ನೆರಡು ಗಂಟೆ ಜೀವಭಯದಿಂದ ಅವರು ಅವಿತುಕೊಂಡಿದ್ದ ಸುದ್ದಿ ಮಾತ್ರ ಬಟಾ ಬಯಲಾಯಿತು. ಈ ಧಾಳಿ ನಡೆದ ಕೆಲವೇ ಕ್ಷಣಗಳಲ್ಲಿ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೆಯರ್ ಲಂಡನ್ ಹೊರಗೆ ಕಾರ್ಮಿಕ ಸಮ್ಮೇಳನವೊಂದನ್ನು ಉದ್ಘಾಟಿಸಬೇಕಿದ್ದವರು ಕೂಡಲೇ ಬಹಿರಂಗವಾಗಿ ಕಾಣಿಸಿಕೊಂಡು, ದೂರದರ್ಶನದ ಮೂಲಕ ರಾಷ್ಟ್ರವನ್ನುದ್ದೇಶಿಸಿ ಭರವಸೆ ನೀಡಿ ಮಾತನಾಡಿದರು. ಆಯಾ ನಾಯಕರ ಶೈಲಿ ಅವರವರ ದೇಶಗಳ ಪರಂಪರೆಯನ್ನು ತೋರಿಸಿಕೊಡಲು ಸಾಧ್ಯವಿದೆ ಎನ್ನಬಹುದು. ಈ ಶತಮಾನದ ಮೊದಲ ವರ್ಷವೇ ನಡೆದ ಈ ಘಟನೆಯ ನೆರಳು ಎಷ್ಟು ಉದ್ದವಾಗಿ ಮುಂದಿನ ಚರಿತ್ರೆಯಲ್ಲಿ ಚಾಚಿಕೊಳ್ಳುವುದೋ ಹೇಳುವುದು ಕಷ್ಟ. ಇದು ಅನೇಕರನ್ನು ವಿವಿಧ ರೀತಿಯಲ್ಲಿ ಪ್ರತಿಕ್ರಿಯಿಸಲು ಪ್ರಚೋದಿಸಿತು. ಜಗತ್ತಿನ ಶ್ರೀಸಾಮಾನ್ಯರಲ್ಲೊಬ್ಬನಾದ ನನ್ನನ್ನೂ ಈ ಘಟನೆ ತಟ್ಟಿದ ರೀತಿಯಿಂದ ನನಗೇ ಆಶ್ಚರ್ಯ, ನಿರಾಸೆ, ಸಂತೋಷ, ದುಃಖ - ಮುಂತಾದ ಸಂಮಿಶ್ರ ಭಾವನೆಗಳು ಉಂಟಾದವು. ಆಕಸ್ಮಿಕವೆಂಬಂತೆ ನಾನು ಆಗ ಇಂಗ್ಲೆಂಡಿನ ಉಲ್ವರ್‌ಹ್ಯಾಂಪ್ಟನ್ ನಗರದಲ್ಲಿ ಬಂಧುವೊಬ್ಬರ ಮನೆಯಲ್ಲಿದ್ದೆ. ಮೂರು ತಿಂಗಳ ಕಾಲ ಯೂರೋಪ್ ಹಾಗೂ ಇಂಗ್ಲೆಂಡ್ ಪ್ರವಾಸ ಮುಗಿಸಿದ್ದು, ಸೆಪ್ಟೆಂಬರ್ ೧೩ರಂದು ನ್ಯೂಯಾರ್ಕ್‌ಗೆ ಹೋಗಬೇಕಿತ್ತು. ಈ ಅನಿರೀಕ್ಷಿತ ಘಟನೆಯಿಂದ ನನ್ನ ಅಮೆರಿಕಾ ಪ್ರವಾಸ ರದ್ದಾಗಿ ಭಾರತಕ್ಕೆ ಹಿಂದಿರುಗಬೇಕಾಯಿತು.

ಉಗ್ರಗಾಮಿಗಳ ಧಾಳಿ ನಡೆದ ದಿನ ಮಧ್ಯಾಹ್ನ ನಾನು ಊಟ ಮುಗಿಸಿ ವಿಶ್ರಾಂತಿಗೆ ಸಿದ್ಧನಾಗುತ್ತಿದ್ದೆ. ಟೆಲಿಫೋನ್ ಗಂಟೆ ಬಾರಿಸಿತು. ಅಮೆರಿಕೆಯ ನ್ಯೂಯಾರ್ಕ್ ನಗರದ ಮೇಲೆ ಬಾಂಬ್ ಧಾಳಿಯಾಯಿತೆಂದು ಸುದ್ದಿ ಹಬ್ಬಿದೆಯೆಂದು ನನ್ನ ವೈದ್ಯ ಬಂಧು ಆ ಕಡೆಯಿಂದ ಹೇಳುತ್ತಿದ್ದರು. ಕೂಡಲೆ ನಾನು ದೂರದರ್ಶನದಲ್ಲಿ ಬಿ.ಬಿ.ಸಿ. ವಾರ್ತೆ ಕೇಳಲು ಧಾವಿಸಿದೆ. ವಿಶ್ವ ವಾಣಿಜ್ಯ ಕೇಂದ್ರದ ಮೇಲೆ ಪ್ರಯಾಣಕರಿದ್ದ ಎರಡು ವಿಮಾನಗಳು ಢಿಕ್ಕಿ ಹೊಡೆದ ವಾರ್ತೆಯನ್ನು ಸಚಿತ್ರವಾಗಿ ಹೇಳಲಾಗುತ್ತಿತ್ತು. ಸ್ವಲ್ಪ ಹೊತ್ತಿನಲ್ಲೇ ಮತ್ತೊಂದು ವಿಮಾನ ಪೆಂಟಗಾನ್ ಮೇಲೆ ಎರಗಿದ ಸುದ್ದಿಯೂ, ಇನ್ನೊಂದು ವಿಮಾನ ಅಪಘಾತಕ್ಕೊಳಗಾದ ಸುದ್ದಿಯೂ ಬಿತ್ತರಗೊಂಡಿತು. ಅಂದಿನಿಂದ ಸುಮಾರು ಆರೇಳು ದಿನಗಳ ಕಾಲ, ಸ್ವದೇಶಕ್ಕೆ ಹಿಂದಿರುಗುವವರೆಗೆ ಸತತವಾಗಿ ಏಳೆಂಟು ಗಂಟೆಗಳು ಪ್ರತಿದಿನ ಸುದ್ದಿಯನ್ನು ಬಿ.ಬಿ.ಸಿ., ಸಿ.ಎನ್.ಎನ್. ಮೂಲಕ ಕೇಳುವುದು ನನ್ನ ದಿನಚರಿಯಾಗಿಬಿಟ್ಟಿತು. ಇದರ ಜೊತೆಗೆ ಮನೆಗೆ ಬರುತ್ತಿದ್ದ ಸ್ಥಳೀಯ ವೃತ್ತ ಪತ್ರಿಕೆ ಹಾಗೂ ಹೊರಗಿನಿಂದ ಕೊಂಡು ತರುತ್ತಿದ್ದ ವೃತ್ತಪತ್ರಿಕೆಗಳ ಮೂಲಕವೂ ಈ ಸುದ್ದಿ ಹಾಗೂ ಅವನ್ನು ಕುರಿತ ವ್ಯಾಖ್ಯಾನಗಳನ್ನು ಕುತೂಹಲದಿಂದ ಓದುತ್ತಿದ್ದೆ. ಅಮೆರಿಕಾ ಬಿಟ್ಟರೆ ಈ ಧಾಳಿಯನ್ನು ಅತ್ಯಂತ ಗಂಭೀರವಾಗಿ ಪರಿಗಣಿಸಿದ್ದ ದೇಶಗಳಲ್ಲಿ ಬ್ರಿಟನ್ ಮೊದಲನೆಯದಾದುದರಿಂದ ಇಲ್ಲಿನ ಜನತೆ ಹಾಗೂ ಸರ್ಕಾರ ಈ ಸಂದರ್ಭಕ್ಕೆ ಹೇಗೆ ಪ್ರತಿಕ್ರಿಯಿಸುವರೆಂಬುದು ನನಗೆ ತೀವ್ರವಾದ ಆಸಕ್ತಿಯಿದ್ದ ವಿಚಾರವಾಗಿತ್ತು. ಈ ಧಾಳಿ ನಡೆಸಿದವರು ಇಸ್ಲಾಮಿಕ್ ಮೂಲಭೂತವಾದಿಗಳೆಂಬ ವಿಚಾರದಲ್ಲಿ ಬಹುಪಾಲು ಎಲ್ಲರ ಒಮ್ಮತವಿತ್ತು. ಆದರೆ ಇದಕ್ಕೆ ಕಾರಣವನ್ನು ಕುರಿತಂತೆ ಅಭಿಪ್ರಾಯಗಳು ವೈವಿಧ್ಯಮಯವಾಗಿದ್ದವು. ಹಲವಾರು ವರ್ಷಗಳಿಂದ ಪ್ಯಾಲೆಸ್ಟೈನ್, ಇರಾಕ್, ಸುಡಾನ್, ಆಫ್‌ಘಾನಿಸ್ತಾನ ಮುಂತಾದ ಮುಸ್ಲಿಂ ರಾಷ್ಟ್ರಗಳ ಬಗೆಗೆ ಅಮೆರಿಕ ನಡೆಸಿಕೊಂಡು ಬಂದ ದಮನಕಾರಿ ಕೃತ್ಯಗಳಿಗೆ ಇದು ಪ್ರತಿಧಾಳಿಯಾಗಿದೆ ಎಂದು ಹೇಳುವವರ ಸಂಖ್ಯೆ ಗಣನೀಯ ಪ್ರಮಾಣದಲ್ಲಿತ್ತು. ಈ ಸಂದರ್ಭದ ಅನಿವಾರ್ಯತೆಯಿಂದಾಗಿ ಅಮೆರಿಕ ಪಾಕಿಸ್ತಾನದೊಂದಿಗೆ ವಿಶೇಷ ಸಖ್ಯ ಬೆಳೆಸುತ್ತಿರುವುದು ಬ್ರಿಟಿಷ್ ಭಾರತೀಯರಿಗೆ ಆತಂಕದ ವಿಚಾರವಾಗಿದ್ದರೆ, ನಮಗೆ ಪರಿಚಯವಿದ್ದ ಬಂಗ್ಲಾದೇಶದ ವೈದ್ಯೆಯೊಬ್ಬರು ಈ ಬಗೆಗೆ ಮುಜುಗರ ಪಟ್ಟುಕೊಂಡರು.

ಸೆಪ್ಟೆಂಬರ್ ೧೨ರಂದೇ ಬಿ.ಬಿ.ಸಿ.ಯವರು ಈ ಧಾಳಿಯ ಹಿನ್ನೆಲೆ ಹಾಗೂ ಪರಿಣಾಮಗಳನ್ನು ಕುರಿತಂತೆ ಒಂದು ಸಂವಾದ ಕಾರ್ಯಕ್ರಮವನ್ನು ನೇರ ಪ್ರಸಾರ

ಮಾಡಿದರು. ಬಿಳಿಯರು, ಆಫ್ರಿಕನ್ನರು, ಏಷ್ಯನ್ನರು, ಬ್ರಿಟಿಷ್ ಮುಸ್ಲಿಮರು - ಹೀಗೆ ವಿವಿಧ ಮೂಲದ ಬ್ರಿಟಿಷ್ ಪ್ರಜೆಗಳೇ ಇದರಲ್ಲಿ ಭಾಗವಹಿಸಿದ್ದರು. ಅವರಲ್ಲಿ ಅರೆಪಾಲಿಗೂ ಹೆಚ್ಚಿನವರು ಈ ಧಾಳಿಗೆ ಮುಖ್ಯ ಕಾರಣ, ಅಮೆರಿಕೆಯ ವಿದೇಶಾಂಗ ನೀತಿ ಎಂಬುದಾಗಿ ಸ್ಪಷ್ಟವಾಗಿ ಹೇಳಿದರು. ಶಾಂತಿ ಮತ್ತು ಸಂಧಾನಗಳ ಮೂಲಕ ಇರಾಕ್, ಪ್ಯಾಲೆಸ್ಟೈನ್ ಮುಂತಾದ ದೇಶಗಳ ಸಮಸ್ಯೆಯನ್ನು ಶೀಘ್ರವಾಗಿ ಬಗೆಹರಿಸುವ ಮೂಲಕ ಹಾಗೂ ಮೂರನೇ ಜಗತ್ತಿನ ಬಡತನ ಪರಿಹಾರಕ್ಕೆ ತಕ್ಕ ಕ್ರಮಗಳನ್ನು ರೂಪಿಸುವ ಮೂಲಕ ಉಗ್ರಗಾಮಿಗಳ ಬಲವನ್ನು ಕುಂದಿಸಬಹುದೇ ಹೊರತು ಯುದ್ಧದ ಮೂಲಕವಲ್ಲ ಎಂದು ಅವರೆಲ್ಲ ಅಭಿಪ್ರಾಯ ಪಟ್ಟರು. ಕಾರ್ಯಕ್ರಮ ವೀಕ್ಷಿಸಿದ ಸಾವಿರಾರು ಮಂದಿ ಅಭಿಪ್ರಾಯ ಸಮೀಕ್ಷೆಯಲ್ಲಿಯೂ ಭಾಗಿಯಾಗಿದ್ದರು. ಈ ಸಮೀಕ್ಷೆಯ ಪ್ರಕಾರ ಪ್ರತಿಕ್ರಿಯಿಸಿದವರಲ್ಲಿ ನೂರಕ್ಕೆ ಮೂವತ್ತು ಭಾಗ ಜನ ಈ ಪರಿಸ್ಥಿತಿಗೆ ಅಮೆರಿಕವೇ ಕಾರಣವೆಂದು ಸ್ಪಷ್ಟವಾಗಿ ಹೇಳಿದರೆ, ಅರವತ್ತು ಭಾಗ ಮತಾಂಧ ಶಕ್ತಿಗಳನ್ನು, ಉಳಿದವರು ತಟಸ್ಥವಾಗಿಯೂ ಇದ್ದರು. ಆದರೆ ಸಮೀಕ್ಷೆಯಲ್ಲಿ ಭಾಗವಹಿಸಿದ ನೂರಕ್ಕೆ ಅರವತ್ತಕ್ಕೂ ಹೆಚ್ಚಿನವರು ಈ ಸಮಸ್ಯೆಗೆ ಯುದ್ಧ ಸೂಕ್ತ ಪರಿಹಾರವಲ್ಲವೆಂದೇ ಸಾರಿ ಹೇಳಿದರು. ದಿನಪತ್ರಿಕೆಗಳ ಬಹುಪಾಲು ಸಂಪಾದಕೀಯಗಳಲ್ಲಿ ಮತ್ತು ವಾಚಕರ ಪತ್ರಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇದೇ ಬಗೆಯ ಪ್ರತಿಕ್ರಿಯೆ ಕಂಡುಬಂದಿತು.

ಚರ್ಚೆ ಸಂವಾದಗಳು ಎಷ್ಟು ಮುಕ್ತವಾಗಿದ್ದವೆಂದರೆ ಬ್ರಿಟಿಷ್ ಸರ್ಕಾರಕ್ಕೆ ಇದರಿಂದ ಮುಜುಗರವಾಗಿ ಬಿ.ಬಿ.ಸಿ.ಯವರಿಂದ ವಿವರಣೆ ಕೇಳಿತು. ಅಲ್ಲಿನ ಕಾರ್ಯಕ್ರಮ ನಿರ್ವಾಹಕರಿಗೂ ಪ್ರೇಕ್ಷಕ ಪ್ರತಿಕ್ರಿಯೆ ಅನಿರೀಕ್ಷಿತ ಸಂಗತಿಯಾಗಿ ಕಂಡುಬಂದು ಸರ್ಕಾರಕ್ಕೆ ವಿಷಾದ ಸೂಚಿಸಿ, ಆದ ಪ್ರಮಾದವನ್ನು ಮುಂದೆ ಸರಿಪಡಿಸಿ ಕೊಳ್ಳುವುದಾಗಿಯೂ ಭರವಸೆ ನೀಡಿದರು. ಅದೇನಿದ್ದರೂ ಜನಾಭಿಪ್ರಾಯ ಮಾತ್ರ ಸ್ಪಷ್ಟವಾಗಿತ್ತು. ಟೋನಿ ಬ್ಲೇರ್ ಮುಂತಾದ ಯುರೋಪಿಯನ್ ನಾಯಕರು ಮೊದಲಿನಿಂದ, ಅಮೆರಿಕನ್ ನಾಯಕರು ಇತ್ತೀಚೆಗೆ, ಈ ಯುದ್ಧ ಮತಾಂಧ ಶಕ್ತಿಗಳ ವಿರುದ್ಧವೇ ಹೊರತು ಇಸ್ಲಾಂ ಧರ್ಮದ ವಿರುದ್ಧವಲ್ಲ ಎಂಬ ಕಪಟ ನಾಟಕವಾಡಲು ಕಾರಣ, ಅವರ ದೇಶದಲ್ಲೇ ವ್ಯಕ್ತವಾಗಿರುವ ಜನಾಭಿಪ್ರಾಯವೆಂಬುದರಲ್ಲಿ ಸಂದೇಹಕ್ಕೆ ಅವಕಾಶವೇ ಇಲ್ಲ. ಈ ಹಿನ್ನೆಲೆಯಲ್ಲಿ ಸೆಪ್ಟೆಂಬರ್ ಹನ್ನೆರಡರಂದು ಪ್ರಕಟವಾದ ಬ್ರಿಟನ್ನಿನ 'ದಿ ಗಾರ್ಡಿಯನ್' ಪತ್ರಿಕೆಯ 'ವ್ಯಾಖ್ಯಾನ ಮತ್ತು ವಿಶ್ಲೇಷಣೆ' ಎಂಬ ವಿಭಾಗದ ಆರು ಚಿಕ್ಕ ಲೇಖನಗಳ ಸಾರ ಸಂಗ್ರಹವನ್ನು ಪರಿಶೀಲಿಸ ಬಹುದಾಗಿದೆ. ಈ ಜನಾಭಿಪ್ರಾಯದ ಒಂದು ಸ್ಪಷ್ಟ ಮಾದರಿ ಅಲ್ಲಿ ನಮಗೆ ದೊರಕುತ್ತದೆ.

ಮಾರ್ಟಿನ್ ವುಲ್‌ಕಾಟ್ ಎಂಬ ಲೇಖಕ ಈ ಪ್ರಕರಣವನ್ನು ಜಾಗತೀಕರಣ ಪ್ರಕ್ರಿಯೆಯ ಹಿನ್ನೆಲೆಯಿಂದ ನೋಡುತ್ತಾನೆ. ಜಾಗತೀಕರಣದ ನೇರ ಫಲವಿದೆಂಬುದು ಅವನ ಸ್ಪಷ್ಟ ಅಭಿಪ್ರಾಯ. ಬದಲಾದ ಸಂದರ್ಭದಲ್ಲಿ ಅಸಮಾನತೆ ಹಾಗೂ ಅವ್ಯವಸ್ಥೆಗೆ ಕಾರಣವನ್ನು ನಿರ್ದಿಷ್ಟ ದೇಶಗಳ ಚೌಕಟ್ಟಿನಲ್ಲಿ ನೋಡದೆ ಜಾಗತಿಕ ನೆಲೆಯಲ್ಲಿ ಕಾಣಬೇಕಾಗಿರುವುದರಿಂದ ಸಹಜವಾಗಿಯೇ ಅತಿ ಶ್ರೀಮಂತ ರಾಷ್ಟ್ರವಾದ ಅಮೆರಿಕೆಯ ಬಗೆಗೆ ಅನ್ಯಾಯಕ್ಕೊಳಗಾದ ರಾಷ್ಟ್ರಗಳಿಗೆ ಸಿಟ್ಟಿದೆ ಎಂಬುದು ಅವನ ವಾದವಾಗಿದೆ. ಹಿಂದಿನ ಎಲ್ಲ ಭಯೋತ್ಪಾದಕ ಧಾಳಿಗಳಿಗಿಂತ ಇದು ತೀವ್ರತರವಾಗಿರುವುದಲ್ಲದೆ ಅತ್ಯಂತ ಪರಿಣತ ರೀತಿಯಲ್ಲಿ ಶಿಸ್ತು ಮತ್ತು ಕಟ್ಟೆಚ್ಚರದಿಂದ ನಿರ್ವಹಿಸಲಾಗಿದೆ. ಮುಂದುವರಿದ ದೇಶಗಳ ಗೂಢಚರ್ಯೆಯ ವಿಫಲತೆ ಹಾಗೂ ದುರ್ಬಲ ರಕ್ಷಣಾ ಮುನ್ನೆಚ್ಚರಿಕೆಯನ್ನು ಇದು ಬಯಲಿಗೆಳೆದಿದೆ. ಮುಂದಿನ ದಿನಗಳಲ್ಲಿ ಉಗ್ರವಾದಿಗಳಿಂದ ರಾಸಾಯನಿಕ ಹಾಗೂ ಜೈವಿಕ ಅಸ್ತ್ರಗಳು ಅಥವಾ ನ್ಯೂಕ್ಲಿಯರ್ ಅಸ್ತ್ರಗಳ ಬಳಕೆಯ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಮಾರ್ಟಿನ್ ಎತ್ತಿಕೊಂಡಿರುವ ಮತ್ತೊಂದು ಪ್ರಶ್ನೆ ಎಂದರೆ ಆಫ್‌ಘಾನಿಸ್ತಾನದಂತಹ ದೇಶವನ್ನು ಒಸಾಮಾ ಬಿನ್ ಲಾಡೆನ್ ಬಳಸಿಕೊಳ್ಳಲು ತಕ್ಕ ಪರಿಸರವನ್ನು ಕಲ್ಪಿಸಿದವರು ಯಾರು ? ಎಂಬುದಾಗಿದೆ. ಈಗ ಅಮೆರಿಕ, ತಾಲಿಬಾನ್ ಬಗೆಗೆ ಉಗ್ರ ಕೋಪದಿಂದ ದಂಡಿಸಲು ಹೊರಟಿದೆ. ಈ ಕೋಪಕ್ಕೆ ಕಾರಣವಿದೆಯಾದರೂ ತಾಲಿಬಾನ್ ಹುಟ್ಟಿಗೆ ಕಾರಣರಾರು ! ಎಂಬ ಪ್ರಶ್ನೆಗೆ ಅಮೆರಿಕ ಮತ್ತು ಪಾಕಿಸ್ತಾನಗಳು ಉತ್ತರಿಸಬೇಕಾಗುತ್ತದೆ. ಒಡೆದು ಆಳುವ ಅಮೆರಿಕದ ವಿದೇಶ ನೀತಿಯೇ ಅವರ ವಿನಾಶಕ್ಕೆ ಕಾರಣವಾಗಬಹುದೆಂದು ಆತ ತನ್ನ ಲೇಖನದಲ್ಲಿ ಪ್ರತಿಪಾದಿಸಿದ್ದಾನೆ.

ಫೈಸಲ್ ಬೊದಿ ಎಂಬ ಮತ್ತೊಬ್ಬ ಲೇಖಕ, ಅಮೆರಿಕದ ಪ್ರತಿಷ್ಠೆಯ ಎರಡು ಮುಖ್ಯ ಕೇಂದ್ರಗಳ ಮೇಲೆ ಧಾಳಿ ಮಾಡಿದವರಾರು ? ಏಕೆ ಧಾಳಿ ಮಾಡಿದರು ? ಮತ್ತು ಈ ಕ್ರಿಯೆಯ ಹಿಂದಿರುವ ಸಾಂಕೇತಿಕ ಅರ್ಥವೇನು ? ಎಂಬುದನ್ನು ವಿವರಿಸಿದ್ದಾನೆ. ಯಾರು ಎಂಬ ವಿಚಾರದಲ್ಲಿ ಆತನಿಗೆ ಸಂದೇಹವಿಲ್ಲ; ಇಂತಹ ಸೂಕ್ಷ್ಮರೀತಿಯ ತಾಂತ್ರಿಕ ಪರಿಣತಿ, ಒಂದು ನಂಬಿಕೆಗಾಗಿ ಜೀವ ಕೊಡಬಲ್ಲ ಕಾರ್ಯಕರ್ತರು ಮತ್ತು ಬೇಕಾದ ಸಮೃದ್ಧ ಹಣ, ಲಾಡೆನ್‌ಗಲ್ಲದೆ ಬೇರೆ ಯಾರಿಗೂ ಇರಲು ಸಾಧ್ಯವಿಲ್ಲ. ಅಮೆರಿಕವೇ ಮತ್ತೆ ಮತ್ತೆ ಇಸ್ಲಾಮಿಕ್ ಮೂಲಭೂತವಾದಿಗಳ ಧಾಳಿಗೆ ಏಕೆ ಗುರಿ ? ಎಂಬ ಪ್ರಶ್ನೆಗೆ ಆತ ದಿಟ್ಟವಾದ ಸ್ಪಷ್ಟ ಉತ್ತರ ಕೊಟ್ಟಿದ್ದಾನೆ. ಅಮೆರಿಕೆಯ ಅಧ್ಯಕ್ಷ ಹಾಗೂ ವಿದೇಶಾಂಗ ಕಾರ್ಯದರ್ಶಿ ಹೇಳಿದಂತೆ ಈ ಧಾಳಿಯ ಗುರಿ, ಕೇವಲ ಪಾಶ್ಚಾತ್ಯ ನಾಗರಿಕತೆಯಲ್ಲ; ಅಥವಾ ಪ್ರಜಾಪ್ರಭುತ್ವವಲ್ಲ. ವಿಶ್ವ ವಾಣಿಜ್ಯ ಕೇಂದ್ರ, ಪೆಂಟಗಾನ್, ಕ್ಯಾಂಪ್ ಡೇವಿಡ್ ಮತ್ತು ಶ್ವೇತಭವನಗಳು ಅಮೆರಿಕನ್ನರಿಗೆ ಪ್ರಜಾಪ್ರಭುತ್ವ ಹಾಗೂ ನಾಗರಿಕತೆಯ ಸಂಕೇತಗಳಂತೆ ಕಂಡರೆ, ಹೊರಗಿನವರಿಗೆ ಅದರಲ್ಲೂ ವಿಶೇಷವಾಗಿ ಮುಸ್ಲಿಂ ಜನತೆಗೆ, ಇವು ಭಯ ಹಾಗೂ ದಮನಕಾರಿ ಸಂಕೇತಗಳಾಗಿವೆ. ಇರಾಕ್ ಹಾಗೂ ಪ್ಯಾಲೆಸ್ಟೈನ್‌ಗಳಲ್ಲಿ ಅಮೆರಿಕ ನಡೆಸಿರುವ ದಮನಕಾರಿ ದಬ್ಬಾಳಿಕೆಯಿಂದ ಆಗಿರುವ ಜೀವಹಾನಿ ಮತ್ತು ಅನ್ಯಾಯಗಳ ದೀರ್ಘ ಪಟ್ಟಿಯನ್ನೇ ಕೊಟ್ಟು, ಇದು ಭಯೋತ್ಪಾದನೆಯಲ್ಲವೇ ? ಎಂದು ಪ್ರಶ್ನಿಸಿದ್ದಾನೆ. ಈ ವರ್ಷವೊಂದರಲ್ಲಿಯೇ ಇಸ್ರೇಲ್‌ಗೆ ಅಮೆರಿಕ ಆರು ಬಿಲಿಯನ್ ಡಾಲರ್‌ಗಳ ನೆರವು ನೀಡಿದೆ. ಇದೆಲ್ಲವೂ ಅರಬ್ ಪ್ರಜೆಗಳನ್ನು ಕೊಲ್ಲುವುದಕ್ಕಲ್ಲದೆ ಬೇರೆ ಯಾವುದಕ್ಕೆ ಬಳಕೆಯಾಗುತ್ತದೆ ? ಇರಾಕ್ ಮೇಲೆ ವಿಧಿಸಿದ ಪ್ರತಿಬಂಧನೆಯಿಂದಾಗಿ ವೈದ್ಯಕೀಯ ನೆರವಿಲ್ಲದೆ ಇಷ್ಟು ವರ್ಷಗಳಿಂದ ಹತ್ತಾರು ಲಕ್ಷ ಮಕ್ಕಳು ಸತ್ತಿರುವುದಕ್ಕೆ ಹೊಣೆ ಯಾರು ? ಆದುದರಿಂದ ಉಗ್ರವಾದಿಗಳ ಭಯೋತ್ಪಾದನೆ, ಅಮೆರಿಕದ ದುಷ್ಟ ನೀತಿಗೆ ಅವರು ಕೊಟ್ಟ ಉತ್ತರವೆಂದೇ ಭಾವಿಸಬೇಕೆಂದು ಹೇಳುತ್ತಾನೆ. ಆದರೂ ಅಮೆರಿಕ ಮತ್ತು ಅಲ್ಲಿನ ನಾಯಕರಿಗೆ ವಿವೇಕ ಹುಟ್ಟುವುದಿಲ್ಲವೆಂದೂ ಈಗ ಅವರು ಇನ್ನೂ ಹೆಚ್ಚಿನ ದಮನಕಾರಿ ನೀತಿಯನ್ನು ಅನುಸರಿಸುವರೆಂದೂ ಬಿನ್ ಲಾಡೆನ್ ಹತ್ಯೆಗೆ ಮತ್ತು ಆಫ್‌ಘಾನಿಸ್ತಾನದ ವಿನಾಶಕ್ಕೆ ಸಜ್ಜಾಗುವರೆಂದೂ ಹೇಳುತ್ತಾನೆ. ಬಿನ್ ಲಾಡೆನ್ ಹುತಾತ್ಮನಾದರೆ ಅದಕ್ಕೆ ಪ್ರತಿಯಾಗಿ ನೂರು ಜನ ಬಿನ್‌ಲಾಡೆನ್‌ಗಳು ಹುಟ್ಟಿ ಭೀಕರ ಪರಿಣಾಮಕ್ಕೆಡೆಯಾಗುತ್ತದೆ ಎಂಬುದು ಅವನ ನಂಬಿಕೆಯಾಗಿದೆ.

ಸಾಸ್ಕಿಯ ಸಸೇನ್ ಪ್ರಕಾರ, ಉಗ್ರಗಾಮಿ ಧಾಳಿಯ ಮೂಲಕಾರಣ ಬಡತನ ಮತ್ತು ಹಿಂದುಳಿದಿರುವಿಕೆ. ಬಡತನದ ಭಾಷೆ ಅಸ್ಪಷ್ಟವಾಗಿದ್ದು, ಕೇಳಲು ಹಿತಕರವಾಗಿರುವುದಿಲ್ಲ. ಆದರೆ ನಿನ್ನೆ ನಡೆದ ಧಾಳಿಯ ಅರ್ಥ ಸ್ಪಷ್ಟವಾಗಿದೆ. ದಕ್ಷಿಣ ದೇಶಗಳಲ್ಲಿ ದಿನೇ ದಿನೇ ಬೆಳೆಯುತ್ತಿರುವ ಸಾಲದ ಹೊರೆ, ನಿರುದ್ಯೋಗ, ಪರಂಪರಾಗತ ಆರ್ಥಿಕ ವ್ಯವಸ್ಥೆ ಕುಸಿದು ಬಿದ್ದಿರುವುದರಿಂದಾಗಿ ಜನ ಅಲ್ಲಿಂದ ಉತ್ತರದ ಶ್ರೀಮಂತ ರಾಷ್ಟ್ರಗಳಿಗೆ ವಲಸೆ ಹೋಗುತ್ತಿದ್ದಾರೆ. ಹಸಿವು ಹಾಹಾಕಾರಗಳಿಂದ ಬಳಲುತ್ತಿರುವ ದೇಶಗಳ ಮೇಲೆ ಬಲಾಢ್ಯರು ಅಕ್ರಮವಾಗಿ ತಮ್ಮ ಮಿಲಿಟರಿ ಶಕ್ತಿಯನ್ನು ಪ್ರಯೋಗಿಸಿದರೆ ಅವರು ಸಂಪೂರ್ಣವಾಗಿ ಕುಸಿದು ಹೋಗುತ್ತಾರೆ. ತಾಳ್ಮೆಯ ಕಟ್ಟೆ ಒಡೆಯುವವರೆಗೆ ಅವರನ್ನು ಶೋಷಿಸಲಾಗಿದೆ. ಶ್ರೀಮಂತ ದೇಶಗಳು ಇನ್ನು ಸುರಕ್ಷಿತವಾಗಿ ಉಳಿಯಬೇಕಾದರೆ ತಮ್ಮ ಸ್ವಾರ್ಥದ ಸಲುವಾಗಿಯಾದರೂ ಬಡದೇಶಗಳಿಗೆ ನೆರವಾಗಬೇಕು ಮತ್ತು ತಮ್ಮ ಶೋಷಣೆಯ ನೀತಿಗೆ ವಿರಾಮ ಹಾಕಬೇಕೆಂದು ಅವನು ಎಚ್ಚರಿಕೆಯ ಮಾತುಗಳನ್ನು ಹೇಳಿದ್ದಾನೆ.

ಜಗತ್ತಿನ ಸುಮಾರು ಐವತ್ತು ರಾಷ್ಟ್ರಗಳು ಸಾಲದ ಬಲೆಯಲ್ಲಿ ಸಿಕ್ಕಿ ಒದ್ದಾಡುತ್ತಿವೆ. ಸಾಲ ತೀರಿಸಲು ಮತ್ತು ಜಾಗತೀಕರಣದ ಆರ್ಥಿಕ ಸವಾಲುಗಳನ್ನು ಎದುರಿಸಲು ಅವರಿಗೆ ಸಾಧ್ಯವಾಗುತ್ತಿಲ್ಲ. ಇದನ್ನು ಬಗೆಹರಿಸದಿದ್ದರೆ ಜನ ಅಲ್ಲಿಂದ ಮುಂದುವರಿದ ದೇಶಗಳಿಗೆ ವಲಸೆ ಹೋಗತೊಡಗುತ್ತಾರೆ. ವಲಸೆ ಬಂದ ಅತೃಪ್ತರು ಇಲ್ಲಿ ಸಮಸ್ಯೆಗೆ ಕಾರಣರಾಗುತ್ತಾರೆ. ಮೇಲುನೋಟಕ್ಕೆ ಉಗ್ರಗಾಮಿಗಳ ಧಾಳಿಗೂ ದಕ್ಷಿಣ ದೇಶಗಳ ಬಡತನಕ್ಕೂ ಸಂಬಂಧವಿಲ್ಲವೆನಿಸಬಹುದಾದರೂ ಸತ್ಯ ದರ್ಶನಕ್ಕೆ ಬಡದೇಶಗಳ ನಿಜ ಸ್ವರೂಪ ಗೊತ್ತಾಗಬೇಕು. ಶೋಷಣೆ ಹಾಗೂ ದಮನಕ್ಕೆ ಗುರಿಯಾದವರು ತಮ್ಮ ನೋವನ್ನು ತೋಡಿಕೊಳ್ಳಲು ಹಲವು ಬಗೆಯಲ್ಲಿ ಪ್ರಯತ್ನಿಸಿದರು. ಅವರ ಅಭಿವ್ಯಕ್ತಿ, ಉಳ್ಳವರಿಗೆ ಶೋಷಕರಿಗೆ ಅರ್ಥವಾಗಲಿಲ್ಲ. ಕೊಟ್ಟ ಕೊನೆಯದಾಗಿ ಹಿಂಸೆಯ ಉಗ್ರಗಾಮಿ ಭಾಷೆ ಬಳಸಲು ಆರಂಭಿಸಿದ್ದಾರೆ. ಕಾಲ ಮಿಂಚುವ ಮುನ್ನ ಸಮಸ್ಯೆಗೆ ಪರಿಹಾರ ಹುಡುಕುವುದು ಶ್ರೀಮಂತ ರಾಷ್ಟ್ರಗಳ ಜವಾಬ್ದಾರಿಯಾಗಿದೆ.

ದನ್ ಪ್ಲೆಶ್ ಎನ್ನುವ ರಕ್ಷಣಾ ನೀತಿ ನಿಪುಣ ಹೇಳುವಂತೆ, ಬಡತನ ಹಾಗೂ ಅನ್ಯಾಯ ಕಾರಣದಿಂದ ಹುಟ್ಟುವ ಅಪರಾಧಕ್ಕೆ ಪರಿಹಾರ ಹೆಚ್ಚಿನ ಪೊಲೀಸ್ ಪಡೆಯಲ್ಲ,

ಸಾಮಾಜಿಕ ಭದ್ರತೆ, ಸರ್ವಸಮಾನ ನ್ಯಾಯ ಪದ್ಧತಿ, ಸಮುದಾಯ ಮೇಲ್ವಿಚಾರಣೆಗಳಿಲ್ಲದೆ ಕೇವಲ ಉಗ್ರ ಪೊಲೀಸ್ ಪಡೆಗಳಿಂದ ಹೇಗೆ ಆಂತರಿಕ ದಂಗೆ ಮತ್ತು ಅಪರಾಧಗಳನ್ನು ತಡೆಗಟ್ಟಲಾಗುವುದಿಲ್ಲವೋ ಹಾಗೆ, ಅಂತರರಾಷ್ಟ್ರೀಯವಾಗಿಯೂ ಬಡದೇಶಗಳ ಸಿಟ್ಟನ್ನು ಬಾಂಬ್, ಕ್ಷಿಪಣಿಗಳಿಂದ ಪ್ರತಿಬಂಧಿಸಲಾಗುವುದಿಲ್ಲ. ಹಿಂದಿನ ಮಾದರಿಯ ಯುದ್ಧ, ಉಗ್ರಗಾಮಿ ಸಮರದ ಹೊಸಕಾಲಕ್ಕೆ ಹೊಂದಿಕೊಳ್ಳುವುದಿಲ್ಲ. ತಾರಾ ಸಮರ ಸಂಶೋಧನೆಗಾಗಿ ಬಿಲಿಯನ್‌ಗಟ್ಟಲೆ ಖರ್ಚು ಮಾಡಿದ್ದರೂ ಅದೆಲ್ಲ ಉಗ್ರಗಾಮಿ ಭಯೋತ್ಪಾದನೆಯ ಎದುರು ಹಾಸ್ಯಾಸ್ಪದವಾಗುವಂತಾಗಿದೆ. ನಿನ್ನೆ ನಡೆದ ವಿಮಾನ ಧಾಳಿ ಅಕಸ್ಮಾತ್ ಅಮೆರಿಕದ ಪರಮಾಣು ಶಕ್ತಿ ಕೇಂದ್ರಗಳ ಮೇಲೆ ಆಗಿದ್ದರೆ ಮುಂದಿನ ಅನಾಹುತವನ್ನು ಊಹಿಸಲೂ ಸಾಧ್ಯವಿಲ್ಲ. ರಷ್ಯ ಮತ್ತು ಅಮೆರಿಕದ ಬಳಿ ಇರುವ ಸಾವಿರಾರು ಅಣ್ವಸ್ತ್ರಗಳು ಸ್ವಲ್ಪ ಎಚ್ಚರ ತಪ್ಪಿದರೂ ಎಲ್ಲರನ್ನೂ ಸುಟ್ಟು ಭಸ್ಮ ಮಾಡಬಹುದು. ಬಳಕೆಗೆ ಬಾರದಂತಾಗಿರುವ ಈ ಅಸ್ತ್ರಗಳು ಹೊಸ ಸಮರದಲ್ಲಿ ನಿರುಪಯುಕ್ತವೆನಿಸಿವೆಯಲ್ಲದೆ ಸಾಂಪ್ರದಾಯಿಕ ಯುದ್ಧದಿಂದ ನಾಗರಿಕರಿಗೆ ಅಥವಾ ಸೈನ್ಯಕ್ಕೆ ಹಾನಿ ಮಾಡಬಹುದೇ ಹೊರತು ಭಯೋತ್ಪಾದನೆ ತಡೆಗಟ್ಟಲಾಗುವುದಿಲ್ಲ. ಆದುದರಿಂದ ಪಾಶ್ಚಾತ್ಯ ಕೇಂದ್ರಿತ ನ್ಯಾಯ ವಿತರಣೆಯ ನೀತಿಯನ್ನು ಬಿಟ್ಟುಕೊಟ್ಟು, ಎಲ್ಲ ದೇಶಗಳೂ ನಂಬಿ ಒಪ್ಪಬಹುದಾದ ನ್ಯಾಯ ಮತ್ತು ಆರ್ಥಿಕ ನೀತಿಯನ್ನು ಅಳವಡಿಸಿಕೊಳ್ಳದಿದ್ದರೆ, ಪರಿಸ್ಥಿತಿ ಕೈಮೀರಿ ಹೋಗುತ್ತದೆ. ಇಂತಹ ಸರ್ವಸಮಾನ ಪರಿಸರ ಸೃಷ್ಟಿಸಲು ವಿಶ್ವಸಂಸ್ಥೆ ಮುಂದಾಗಬೇಕೆಂದು ಅವನು ಕರೆ ಕೊಟ್ಟಿದ್ದಾನೆ.

ಪಾಲಿ ಟಾಯನ್ಬಿ ಎನ್ನುವವರು ಹತ್ತುವರ್ಷಗಳ ಹಿಂದೆ ಸೋವಿಯೆತ್ ಒಕ್ಕೂಟವನ್ನು ಛಿದ್ರಗೊಳಿಸಿದ ಮೇಲೆ ಪಾಶ್ಚಾತ್ಯರು ಹೇಗೆ ಜಗತ್ತಿನ ವ್ಯವಹಾರವನ್ನೆಲ್ಲಾ ಗೋಜಲು ಮಾಡಿದ್ದಾರೆಂಬುದರತ್ತ ನಮ್ಮ ಗಮನ ಸೆಳೆಯುತ್ತಾರೆ. ಪರ್ಲ್ ಹಾರ್ಬರ್ ಬಿಟ್ಟರೆ ಯಾವುದೇ ಬಗೆಯ ನೇರ ಧಾಳಿಗೆ ಎಂದೂ ಗುರಿಯಾಗದಿದ್ದ ಅಮೆರಿಕ, ಬೇರೆಯವರ ವ್ಯವಹಾರಗಳಲ್ಲಿ ಮೂಗು ತೂರಿಸಿ ಮಿಲಿಟರಿ ನ್ಯಾಯ ಪಂಚಾಯಿತಿ ಮಾಡುವುದರಲ್ಲಿ ಇಲ್ಲಿಯವರೆಗೆ ನಿರತವಾಗಿತ್ತು. ಅವರ ಮಿಲಿಟರಿ ಶಕ್ತಿ ಎಷ್ಟೇ ಅಗಾಧವಾಗಿದ್ದರೂ, ತನ್ನ ಸ್ವಂತ ಹಿತ್ತಲಿನಲ್ಲಿ ಧಾಳಿ ನಡೆದರೆ ಅದನ್ನು ಎದುರಿಸಬಲ್ಲ ಮಾನಸಿಕ ಪೂರ್ವಸಿದ್ಧತೆ ಅಮೆರಿಕಕ್ಕಿಲ್ಲವೆಂಬುದು ಈಗ ಸ್ಪಷ್ಟವಾಗಿದೆ. ಉಗ್ರಗಾಮಿಗಳನ್ನು ಶಿಕ್ಷಿಸಲು ಹಿಂದೆ ಆಫ್‌ಘಾನಿಸ್ತಾನ ಮತ್ತು ಸುಡಾನ್‌ಗಳ ಮೇಲೆ ಅವರು ಧಾಳಿ ಮಾಡಿದರಾದರೂ ಅದು ನಿಷ್ಪ್ರಯೋಜಕವೆನಿಸಿದೆ. ಉಗ್ರಗಾಮಿಗಳ ವೈರ ಮತ್ತು ಸಿಟ್ಟು ಇನ್ನೂ ಬೆಳೆಯಲು ಈ ಧಾಳಿಗಳು ನೀರೆರೆದಂತಾಯಿತು. ಈಗ ಅಮೆರಿಕ ಮತ್ತು ಮಿತ್ರ ರಾಷ್ಟ್ರಗಳು ಮತ್ತೊಂದು ಮಹಾಯುದ್ಧದ ಹೊಸ್ತಿಲಿನಲ್ಲಿ ನಿಂತಿದ್ದಾರೆ. ಇದು ಅವರೆದುರು ಬಾಯಿ ತೆರೆದು ನಿಂತಿರುವ ಬೋನಿನಂತಿದೆ. ಕಣ್ಣು ಮುಚ್ಚಿ ಅದರೊಳಗೆ ನುಗ್ಗಿದರೆ ಅವರಿಗೆ ಉಳಿಗಾಲವಿಲ್ಲ. ಆದುದರಿಂದ ಅಮೆರಿಕ ತನ್ನ ಶಕ್ತಿಯ ಬಗೆಗೆ ಇಟ್ಟುಕೊಂಡಿರುವ ಮಹಾಭ್ರಾಂತಿಯನ್ನು ಬಿಟ್ಟುಕೊಡಬೇಕು. ಇಸ್ರೆಲ್-ಪ್ಯಾಲಸ್ಟೇನ್ ಒಪ್ಪಂದವೇ ಮುಂತಾಗಿ ನೆನೆಗುದಿಗೆ ಬಿದ್ದಿರುವ ಹಲವು ಘರ್ಷಣೆಗಳಿಗೆ




ಕಾರಣವಾದ ಸಮಸ್ಯೆಗಳನ್ನು ಸಂಧಾನದ ಮೂಲಕ ಪರಿಹರಿಸಬೇಕು. ಆದರೆ ಬಲಿಷ್ಠ ರಾಷ್ಟ್ರಗಳಲ್ಲಿ ವಿವೇಕ ಹಿಂದೆ ಸರಿದು, ಅವರೆಲ್ಲ ಸಮೂಹ ಸನ್ನಿಗೆ ಬಲಿಯಾಗುವ ಸಂಭವವೇ ಜಾಸ್ತಿಯಾಗಿದೆ. ಪ್ರತೀಕಾರ, ವೈರ, ದಬ್ಬಾಳಿಕೆ ಇನ್ನೂ ಉಲ್ಬಣಗೊಳ್ಳುವ ಸಂಭವವೇ ಹೆಚ್ಚಾಗಿರುವುದು ದುರದೃಷ್ಟಕರವೆಂದು ಆತ ಹೇಳುತ್ತಾನೆ.

ಬ್ರಿಟಿಷ್ ಪಾರ್ಲಿಮೆಂಟ್ ಸದಸ್ಯ ಜಾರ್ಜ್ ಗಲೋವೆ ಅಮೆರಿಕ ಮತ್ತು ಅದರ ವಿರೋಧಿ ರಾಷ್ಟ್ರಗಳನ್ನು ಬೆಕ್ಕು-ಇಲಿ ಸಂಬಂಧಕ್ಕೆ ಹೋಲಿಸುತ್ತಾರೆ. ಸೊಮಾಲಿಯಾ, ಸುಡಾನ್, ಆಫ್‌ಘಾನಿಸ್ತಾನ, ಇರಾಕ್, ಪ್ಯಾಲೆಸ್ಟೇನ್ ಮುಂತಾದ ದೇಶಗಳು ನಿರಂತರವಾಗಿ ಅಮೆರಿಕನ್ ಬಾಂಬ್ ಧಾಳಿಗೆ ತುತ್ತಾಗಿವೆ. ಈಗ ಅಮೆರಿಕವು ತಾವು ಪಟ್ಟ ನೋವಿನ ಸ್ವಲ್ಪ ಅನುಭವವನ್ನು ಪಡೆಯಲೆಂದು ಆ ದೇಶಗಳು ಹಾರೈಸುತ್ತಿರುವಂತಿದೆ. ಇಲ್ಲೆಲ್ಲಾ ಅಮೆರಿಕನ್ ಬಾಂಬ್‌ಗಳು ಬಲಿ ಹಾಕಿದ್ದು ಕೇವಲ ಸೈನಿಕರನ್ನು ಮಾತ್ರವಲ್ಲ; ಸಾವಿರಾರು ಮುಗ್ಧ ನಾಗರಿಕರೂ ಸತ್ತಿದ್ದಾರೆ. ಇದ್ದಕ್ಕಿದ್ದಂತೆ ಬಂದೆರಗುವ ಈ ಅಮೆರಿಕಾ ಎಂಬ ಬೆಕ್ಕಿನ ಕೊರಳಿಗೆ ಗಂಟೆಕಟ್ಟಲು ವಿರೋಧಿಗಳೆಲ್ಲ ಬಯಸಿದ್ದರು. ಈಗ ಅವರಲ್ಲಿ ಯಾರೋ ಒಬ್ಬರು ಗಂಟೆ ಕಟ್ಟಿದ್ದಾರೆ. ಯಾರಿರಬಹುದು ? ಎಂಬುದಕ್ಕೆ ಉತ್ತರ ಹುಡುಕಲು ಒಂದೊಂದೂ ದೇಶದಲ್ಲಿ ಇತ್ತೀಚೆಗೆ ಅಮೆರಿಕ ನಡೆಸಿದ ಚೆಲ್ಲಾಟಗಳನ್ನು ಪರಿಶೀಲಿಸಿ, ಕೊನೆಗೆ ಒಸಾಮಾ ಬಿನ್ ಲಾಡೆನ್ ಎಂಬ ಹೆಗ್ಗಣವೇ ಈ ಕೆಲಸ ಮಾಡಿದೆ, ಎಂದು ಜಾರ್ಜ್ ನಿರ್ಣಯಿಸಿದ್ದಾರೆ. ರಷ್ಯನ್ ಕರಡಿಯನ್ನು ಮಟ್ಟಹಾಕಲು ಅಮೆರಿಕವೇ ಪಾಕಿಸ್ತಾನದ ಮೂಲಕ ಈ ಬಿನ್ ಲಾಡೆನ್‌ಗೆ ಹಣ, ಶಸ್ತಾಸ್ತ್ರ ಹಾಗೂ ಮತಾಂಧತೆಯ ಅಫೀಮನ್ನು ಸಮೃದ್ಧವಾಗಿ ಸರಬರಾಜು ಮಾಡಿತೆಂದು ಈತನೂ ನೆನಪು ಮಾಡಿಕೊಳ್ಳುತ್ತಾನೆ. ಅಮೆರಿಕ ಮತ್ತು ಬ್ರಿಟನ್ ಬೆಂಬಲದಿಂದ ರಷ್ಯಾ ವಿರುದ್ಧ 'ಪವಿತ್ರ ಸಮರ' ನಡೆಸಿದ ಮುಜಾಹಿದ್ದೀನ್‌ಗಳೇ ಈಗ ಅಮೆರಿಕದ ವಿರುದ್ಧ ತಿರುಗಿಬಿದ್ದಿದ್ದಾರೆ. ಈ ಮುಜಾಹಿದ್ದೀನ್ ಮತ್ತು ಬಿನ್ ಲಾಡೆನ್‌ಗೆ ಸಾವಿನ ಅಂಜಿಕೆಯಿಲ್ಲ, ಸತ್ತರೂ ಸ್ವರ್ಗದಲ್ಲಿ ಅವರಿಗೆ ಸನ್ಮಾನವಿದೆ ಎಂದು ದೃಢವಾಗಿ ನಂಬಿದ್ದಾರೆ. ಅಲ್ಲದೆ ಅಮೆರಿಕ ವಿರುದ್ಧ ಹೋರಾಡಲು ಅವರು ಹೊರಗಿನಿಂದ ಯೋಧರನ್ನು ರವಾನಿಸುವ ಅಗತ್ಯವಿಲ್ಲ. ಅಮೆರಿಕ ಮತ್ತು ಬ್ರಿಟನ್‌ಗಳಲ್ಲಿಯೇ ಬಿನ್ ಲಾಡೆನ್ ಕಾರ್ಯಕರ್ತರ ಪಡೆ ಹಾಗೂ ಹೇರಳ ಸಂಪತ್ತು ಶೇಖರಗೊಂಡಿದೆ. ಸುಮಾರು ಏಳು ಮಿಲಿಯನ್ ಮುಸ್ಲಿಮರು ಅಮೆರಿಕದಲ್ಲಿ ನೆಲೆಸಿದ್ದಾರೆ. ಸೆಪ್ಟೆಂಬರ್ ಮೊದಲ ವಾರದಲ್ಲಿಯೇ ಚಿಕಾಗೋ ನಗರದಲ್ಲಿ ಅವರು ಒಂದು ಸಮ್ಮೇಳನ ನಡೆಸಿದರು. ಮುವತ್ತು ಸಾವಿರ ಮುಸ್ಲಿಮರು ಭಾಗವಹಿಸಿದ್ದ ಈ ಸಮ್ಮೇಳನಕ್ಕೆ ಅತಿಥಿ ಉಪನ್ಯಾಸಕರಾಗಿ ಈ ಲೇಖಕರೂ ಹೋಗಿದ್ದರಂತೆ. ಅಮೆರಿಕದ ಪೌರತ್ವ ಪಡೆದಿರುವ ಎರಡನೆಯ ತಲೆಮಾರಿಗೆ ಸೇರಿದ ಇಂಗ್ಲಿಷ್ ಮಾತಾಡುವ ಪಾಶ್ಚಾತ್ಯ ವೇಷ ಭೂಷಣಗಳ ಸಾವಿರಾರು ಮುಸ್ಲಿಮ್ ತರುಣರೊಂದಿಗೆ ಅಲ್ಲಿ ಈತ ಮಾತನಾಡಿದಾಗ, ಅವರಿಗೆ ತಮ್ಮ ದೇಶವಾದ ಅಮೆರಿಕೆಯ ವಿಚಾರದಲ್ಲಿ ಭಾರಿ ಕೋಪವಿರುವುದು ಗೊತ್ತಾಯಿತಂತೆ. ಇಸ್ಲಾಮಿಕ್ ದೇಶಗಳಲ್ಲಿ ಪಾಶ್ಚಾತ್ಯರು ನಡೆಸುತ್ತಿರುವ ಆಟಾಟೋಪಗಳ ಬಗೆಗೆ ಅವರೆಲ್ಲ ಕುದಿಯುತ್ತಿದ್ದಾರೆ. ಆದುದರಿಂದ ಹೊರಗಿನ ಶತ್ರುಗಳಿಗಿಂತ ಅಲ್ಲಿಯೇ ನೆಲೆಸಿರುವ ಲಕ್ಷಾಂತರ ನಾಗರಿಕರ ಸಿಟ್ಟನ್ನು ಅಮೆರಿಕ ಈಗ ಎದುರಿಸಬೇಕಾಗಿ ಬಂದಿರುವ ವಾಸ್ತವಾಂಶವನ್ನು ಜಾರ್ಜ್ ಓದುಗರ ಗಮನಕ್ಕೆ ತಂದಿದ್ದಾರೆ. ಆಂಥ್ರಾಕ್ಸ್ ಮುಂತಾಗಿ ಜೈವಿಕ ಸಮರದ ಭೀತಿಯ ಹಿಂದಿರುವ ಶಕ್ತಿಗಳಾರು ? ಎಂಬುದನ್ನು ಈಗ ಊಹಿಸಲು ಜಾರ್ಜ್ ಹೇಳಿಕೆ ಪುಷ್ಟಿ ಕೊಡುವಂತಿದೆ. ಅಮೆರಿಕದೊಂದಿಗೆ ತನ್ನ ಭವಿಷ್ಯವನ್ನು ಪೂರ್ತಿ ತಳುಕುಹಾಕಿಕೊಂಡಿರುವ ಬ್ರಿಟನ್ ಬಗೆಗೂ ಈ ಲೇಬರ್ ಪಕ್ಷದ ಪಾರ್ಲಿಮೆಂಟ್ ಸದಸ್ಯನಿಗೆ ತೀವ್ರ ಆತಂಕವಿದೆ.

ಸೆಪ್ಟೆಂಬರ್ ಹನ್ನೆರಡರಂದು 'ದಿ ಗಾರ್ಡಿಯನ್' ಪ್ರಕಟಿಸಿರುವ ಮೇಲೆ ಉಲ್ಲೇಖಿಸಿರುವ ಆರೂ ಲೇಖನಗಳು ಮತ್ತು ಅದೇ ಸಂದರ್ಭದಲ್ಲಿ ಬಿ.ಬಿ.ಸಿ. ನಡೆಸಿದ ಅಭಿಪ್ರಾಯ ಸಮೀಕ್ಷೆ ಮತ್ತು ಸಂವಾದಗಳನ್ನು ಗಮನಿಸಿದರೆ - ಪಾಶ್ಚಾತ್ಯ ದೇಶಗಳಲ್ಲಿ, ವಿಶೇಷವಾಗಿ ಬ್ರಿಟನ್ ಕುರಿತು ಹೇಳುವುದಾದರೆ, ಅಲ್ಲಿನ ಜನಾಭಿಪ್ರಾಯ ಸ್ಪಷ್ಟವಾಗಿ ಹೊಸ ರಾಜನೀತಿಯ ಪರವಾಗಿದೆ. ಹಿಂದಿನ ದಮನಕಾರಿ ಅಮೆರಿಕನ್ ಧೋರಣೆಯನ್ನು ಅವರು ಒಪ್ಪುತ್ತಿಲ್ಲ. ಉಗ್ರಗಾಮಿಗಳನ್ನು ಯುದ್ಧದಿಂದ ನಿಯಂತ್ರಿಸಲು ಸಾಧ್ಯವಿಲ್ಲವೆಂದು ಅವರೆಲ್ಲ ನಂಬಿದ್ದಾರೆ. ಭಯೋತ್ಪಾದನೆ ರೋಗದ ಲಕ್ಷಣವೇ ಹೊರತು, ರೋಗವಲ್ಲ. ಜಗತ್ತಿನ ಅರ್ಧಭಾಗಕ್ಕೂ ಹೆಚ್ಚಿನ ಜನತೆ ದಟ್ಟ ದಾರಿದ್ರ್ಯ, ಕುರುಡು ನಂಬಿಕೆ ಹಾಗೂ ಇನ್ನಿಲ್ಲದ ಶೋಷಣೆಗೆ ಸಿಲುಕಿರುವುದೇ ರೋಗವಾಗಿದ್ದು ಇದರ ಚಿಕಿತ್ಸೆಗೆ ಹೊರಟಿರುವ ವೈದ್ಯರೇ ರೋಗಕ್ಕೆ ಮೂಲಕಾರಣವಾಗಿದ್ದಾರೆ. ಆದುದರಿಂದ ಚಿಕಿತ್ಸೆ ಎಂದರೆ ರೋಗಿಯನ್ನೇ ಕೊಂದುಹಾಕುವುದು ಎಂದೇ ಅವರು ನಂಬಿದ್ದಾರೆ. ಆದರೆ ರೋಗಿ ಸಾವನ್ನಪ್ಪುವ ಮುನ್ನವೇ ವೈದ್ಯರನ್ನೇ ಬಲಿ ತೆಗೆದುಕೊಳ್ಳಬಹುದಾದ ಸಾಧ್ಯತೆಯೇ ಹೆಚ್ಚಾಗುತ್ತಿರುವುದು ಇತ್ತೀಚಿನ ವಿದ್ಯಮಾನಗಳಿಂದ ಸ್ಪಷ್ಟವಾಗುತ್ತಿದೆ.

**ಡಾ|| ಕೆ. ಮರುಳಸಿದ್ದಪ್ಪ**
೧೩೭, ೧೨ನೇ ತಿರುವು, ಜೆ.ಪಿ.ನಗರ ೨ನೇ ಹಂತ
ಬೆಂಗಳೂರು - ೭೮



# ದಹನ

● ಫಕೀರ್ ಮುಹಮ್ಮದ್ ಕಟ್ಪಾಡಿ

ಎರಡು ದಿನಗಳಿಂದ ನೀರಿಲ್ಲದೆ ಅವನ ಹೊಟ್ಟೆಯೊಳಗೆ ಎರಡು ತುತ್ತೂ ಅನ್ನ ಹೋಗಿಲ್ಲ. ಕೂಲಿಗಳು ಕೂತು ಗಿರಾಕಿಗಳಿಗಾಗಿ ಕಾಯುತ್ತಿರುವ ತಾನರಿ ರಸ್ತೆಯ ಅಶ್ವತ್ಥ ಕಟ್ಟೆಯಲ್ಲಿ ಯಾರಾದರೂ ಹುಡುಕಿ ಬರುತ್ತಾರೋ ಎಂದು ಅನೇಕ ಕೂಲಿಗಳ ಜೊತೆ ಇವನೂ ಕಾಯುತ್ತಾ ಕೂತಿದ್ದ. ಇವನನ್ನು ಕೇಳುವವರು ಇಂದೂ ಯಾರೂ ಬರಲಿಲ್ಲ. ಬಂದವರು ಎಂದಿನಂತೆ ಮರದ ಕೆಲಸದವರನ್ನು, ಗಾರೆಕೆಲಸದವರನ್ನು ಕರೆದುಕೊಂಡುಹೋದರೇ ಹೊರತು ಇವನತ್ತ ಕಣ್ಣೆತ್ತಿ ನೋಡಲಿಲ್ಲ. ಮುಖದಲ್ಲಿ ಕುರುಚಲು ಗಡ್ಡ, ದಟ್ಟವಾಗಿ ಬೆಳೆದು ಧೂಳು ಕೂತ ತಲೆ ಕೂದಲು, ಬತ್ತಿದ ಮುಖ, ಹೊಂಡಬಿದ್ದ ಕಣ್ಣುಗಳು. ಪ್ಯಾಂಟು ಶರ್ಟುಗಳಲ್ಲಿ ಒಂದೆಡೆ ಉಬ್ಬಿಕೊಂಡಿದ್ದರೆ ಮತ್ತೊಂದೆಡೆ ಬಿಡಿಸಲಾರದ ಮಡಿಕೆಗಳು ಮೂಡಿವೆ. ಮೇಲ್ನೋಟಕ್ಕೆ ಇವನನ್ನು ಕಂಡವರು, ಯಾರೋ ಭಿಕಾರಿ ಅಥವಾ ಹುಚ್ಚನಿರಬಹುದು ಎಂದುಕೊಂಡಿರಬೇಕು. ಯಾರೂ ಇವನೊಬ್ಬ ಕೂಲಿಯಾಳು ಎಂದುಕೊಂಡಿರಲಿಕ್ಕಿಲ್ಲ. ಎರಡು ದಿನಗಳಿಂದ ಅನ್ನ ಕಾಣದ ಹೊಟ್ಟೆ ಒಂದೇ ಸಮನೆ ಸುಡುತ್ತಿತ್ತು. ಒಂದು ಧಡೂತಿ ಹೆಂಗಸು ಕಾಲೆಳೆಯುತ್ತಾ ಈ ಕಡೆ ಬರುತ್ತಿರುವಂತೆ ಕಂಡುಬಂದು ಇವನಿಗೆ ಆಸೆ ಚಿಗುರಿತು. 'ಹತ್ತುರೂಪಾಯಿ ಕೊಟ್ರೆ ಸಾಕು ಅಗೆಯುವುದು, ಕಡಿಯುವುದು, ಹೊರುವುದು, ಗುಡಿಸುವುದು ಅದ್ಯಾವ ಕೆಲಸವಾದ್ರೂ ದಿನವಿಡೀ ಮಾಡುತ್ತೇನೆ' ಎಂದು ಅವಳ ಮುಂದೆ ಹೇಳಬೇಕೆಂದು ಉರುಹಾಕಿಕೊಂಡ. ಕಟ್ಟೆಯಿಂದ ಎದ್ದು ರಸ್ತೆಗೆ ಬಂದ. ರಸ್ತೆಯ ಬದಿಯಲ್ಲಿ ಅದೇನೋ ಬಿದ್ದಿರುವುದನ್ನು ಹೆಕ್ಕಿಕೊಂಡ. ಅದೊಂದು ಚಾವಿಗೊಂಚಲಲ್ಲಿ ನೇತಾಡುವ ಪುಟ್ಟ ಹೆಣ್ಣು ಮಗುವಿನ ಗೊಂಬೆ. ಎತ್ತಿ ನೇತಾಡುವಂತೆ ಹಿಡಿದರೆ ಜೋಕಾಲಿಯಲ್ಲಿ ತೂಗಾಡುವಂತೆ ಆಕಡೆ ಈಕಡೆ ಓಲಾಡುತ್ತಿತ್ತು. ಕ್ಷಣ ಅದನ್ನೇ ನೋಡುತ್ತಾ ಮೈಮರೆತವ ಪಕ್ಕನೆ ಎಚ್ಚರಗೊಂಡು ಆ ಹೆಂಗಸಿನ ಕಡೆ ಹೊರಳಿದಾಗ ಅವಳು ಗಂಡು ಕೂಲಿಯಾಳುಗಳ ಮಧ್ಯೆ ನಿಂತಿದ್ದ ಹೆಣ್ಣಾಳನ್ನು ಕರೆದು ಮಾತಾಡುತ್ತಿದ್ದಳು. ನೋಡ ನೋಡುತ್ತಿದ್ದಂತೆ ಹೆಣ್ಣಾಳನ್ನು ಅವಳು ಕರೆದುಕೊಂಡು ಹೋದಳು. ಥತ್....! ನನ್ನ ಹಣೆಯಲ್ಲಿ ಇಂದು ಹಸಿವಿನಿಂದ ಸಾಯುವುದೇ ಬರೆದಿದೆಯೋ ಏನೋ ! ಎಂದುಕೊಳ್ಳುತ್ತಾ ಗೊತ್ತು ಗುರಿಯಿಲ್ಲದೆ ರಸ್ತೆಯಲ್ಲಿ ನಡೆಯತೊಡಗಿದ. ತನ್ನ ತಾಯಿ, ತಂದೆ ಎಲ್ಲರೂ ಹಸಿವಿನ ಕಾಯಿಲೆಯಲ್ಲೇ ಅಲ್ಲವೇ ಸತ್ತದ್ದು? ತನಗೆ ಅದೇ ಗತಿಯಲ್ಲದೆ ಇನ್ನೇನು ಹೊಟ್ಟೆತುಂಬಾ ತಿಂದು ಸಾಯುವ ಪುಣ್ಯ ಬರೆದಿರುತ್ತದೆಯೇ? ಅವರಿಬ್ಬರು ತಂಗಿಯರಿದ್ದರು. ಈಗ ಅವರೆಲ್ಲೋ? ಎಲ್ಲಿ ಸತ್ತಿದ್ದಾರೋ?

ನಡೆಯುತ್ತಾ ಹೋಗುತ್ತಿದ್ದಂತೆಯೇ ಕೈಯಲ್ಲಿದ್ದ ಗೊಂಬೆಯನ್ನು ಯಾಂತ್ರಿಕವಾಗಿ ನೇತಾಡಿಸುತ್ತಾ, ಆಡಿಸುತ್ತಾ ಇದ್ದರೂ ತಲೆಯಲ್ಲಿ ಬೆಳಿಗ್ಗೆ ಎದ್ದು ಹೊರಬರುತ್ತಿದ್ದಂತೆ ತನ್ನ ಕೋಣೆಯ ಮಾಲಕಿ ಮುದುಕಿ ಗಲಾಟೆ ಮಾಡಿದ್ದು ನೆನಪಿಗೆ ಬಂತು. ''ಒಂದು ವಾರದಿಂದ ನಿನ್ನ ಬಾಡಿಗೆ ಬಂದಿಲ್ಲ. ಈ ದಿನ ಸಂಜೆಯ ಒಳಗೆ ಬಾಡಿಗೆ ತಂದು ಕೊಡದಿದ್ದರೆ, ನಿನ್ನ ಕೋಣೆಯನ್ನು ಖಾಲಿ ಮಾಡಿ ಬೇರೆಯವರಿಗೆ ಕೊಡ್ತೇನೆ...'' ಎಂದಿದ್ದಳು. ಇವನೇನೂ ಮಾತಾಡದೆ ಸುಮ್ಮನೆ ಬಂದಿದ್ದ. ಮುದುಕಿ ನಾಲ್ಕು ದಿನಗಳಿಂದ ಇದೇ ಮಾತನ್ನು ಹೇಳುತ್ತಿದೆ. ಕೊಳಚೆ ಕೇರಿಯಲ್ಲಿರುವ ಅವಳ ಗುಡಿಸಲಿಗೆ ತಾಗಿ ಇರುವ ಪುಟ್ಟ ಗೋಣಿ ತಾಟು ಗೋಡೆ, ತಗಡು ಮಾಡಿನ ಪುಟ್ಟ ಕೋಣೆ. ದಿನಕ್ಕೆ ಐದು ರೂಪಾಯಿ ಬಾಡಿಗೆ. ಕೂಲಿ ಸಿಕ್ಕಾಗ ತಪ್ಪದೆ ಐದು ರೂಪಾಯಿ ತಂದು ಮುದುಕಿಯ ಕೈಗೆ ಕೊಡುತ್ತಿದ್ದ. ಎರಡು ದಿನಗಳಿಂದ ತಿನ್ನಲಿಕ್ಕೆ ಏನೂ ಗತಿ ಇಲ್ಲದವನು ಈ ಮುಂಡೆಗೆ ಐದು ರೂಪಾಯಿ ಎಲ್ಲಿಂದ ತಾನೇ ತಂದುಕೊಡ್ಲಿ? ಹಾಗೆ ಈ ಮುದುಕಿ ಒರಟು ಮಾತಿನವಳಾದರೂ ಒಳಗೊಳಗೆ ಮೃದು ಮನಸ್ಸಿನವಳು. ಅದೂ ಇದೂ ಸುಖ ಕಷ್ಟ ಹೇಳಿಕೊಂಡರೆ, 'ನನಗೂ ಬೇರೆ ಗತಿ ಇಲ್ಲ ನೋಡು ಮಾರಾಯ, ಹಪ್ಪಳ ಸಂಡಿಗೆ ವ್ಯಾಪಾರ ಕೂಡಾ ಇಲ್ಲ. ಈ ಮಳೆ ಜಿಟಿ ಜಿಟಿ ಹೊಡೆಯುವಾಗ ಮಾಡ್ಲಿಕ್ಕೂ ಆಗ್ತಾ ಇಲ್ಲ' ಎಂದು ಬೋಗಾರು ದುಕ್ಕ ಹೇಳಿಕೊಂಡು ನಾಳೆ ಮರೀದೆ ತಂದುಕೊಡು ಎಂದಾಳು. ಮತ್ತೆ ಮರುದಿವಸ ಪುನಃ ತಲೆತಿನ್ನದೆ ಬಿಡುವವಳಲ್ಲ ಹಲ್ಕಟ್ ಮುದುಕಿ!

ರಸ್ತೆಯಲ್ಲಿ ನಡೆಯುತ್ತಾ ಹೋಗುತ್ತಿರುವ ಇವನ ಕೈಯಲ್ಲಿ ಓಲಾಡುವ ಬೊಂಬೆಯನ್ನು ಶಾಲೆಗೆ ಹೋಗುವ ಹುಡುಗನೊಬ್ಬ ಆಸೆಯಿಂದ ನೋಡುತ್ತಿದ್ದ. ಮುದ್ದಾದ ಹುಡುಗ. ಬಿಳಿ ಶರ್ಟು, ನೀಲಿ ಚಡ್ಡಿ ಧರಿಸಿದ್ದ. ಬೆನ್ನ ಮೇಲೆ ಪುಸ್ತಕಗಳು ತುಂಬಿದ ಚೀಲ. ಕೈಯಲ್ಲಿ ಪುಟ್ಟ ಬುತ್ತಿಯನ್ನು ನೇತಾಡಿಸಿಕೊಂಡಿದ್ದ ಇವನು ಕೇಳಿದ, ''ನಿಂಗೆ ಬೇಕಾ ಇದು..?''

''ಹೌದು...''ಎಂದು ತಲೆಯಾಡಿಸಿದ ಹುಡುಗ.

''ಇದನ್ನು ಕೊಟ್ರೆ ನಂಗೇನು ಕೊಡ್ತಿಯಾ...'' ಅಂತ ಕೇಳಿದ.

''ನನ್ನತ್ರಯೇನೂ ಇಲ್ಲ ಕೊಡ್ಲಿಕ್ಕೆ...?'' ಎಂದ ಹುಡುಗ.

ಇವನ ಕಣ್ಣು ಅವನ ಕೈಯಲ್ಲಿ ನೇತಾಡುವ ಬುತ್ತಿಯ ಮೇಲೆ ಬಿತ್ತು.

''ಅದನ್ನು ನಂಗೆ ಕೊಡ್ತಿಯಾ...?'' ಎಂದ.

ಮರುಮಾತಾಡದೆ ಹುಡುಗ ಬುತ್ತಿಯನ್ನು ಇವನ ಕೈಗಿತ್ತ. ಇವನು ಬೊಂಬೆಯನ್ನು ಅವನ ಕೈಗಿತ್ತು ಬುತ್ತಿಯನ್ನು

ತೆರೆದ. ಎರಡು ಬ್ರೆಡ್ ತುಂಡುಗಳು ಒಂದು ಚೂರು ಆಮ್ಲೆಟ್ ಇತ್ತು. ಗಬಗಬನೆ ತಿಂದು, ಬುತ್ತಿಯನ್ನು ಅವನ ಕೈಗಿತ್ತು ಮುಂದೆ ನಡೆಯತೊಡಗಿದ. ಹುಡುಗ ಗೊಂಬೆಯನ್ನು ಆಡಿಸುತ್ತಾ ಖುಶಿಯಾಗಿದ್ದ. ಎರಡು ತುಂಡು ಬ್ರೆಡ್ ಚೂರು ಹೊಟ್ಟೆಯೊಳಗೆ ಹೋದದ್ದು ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆಯಂತಾಗಿತ್ತು. ಇದರಿಂದ ಇವನ ಹೊಟ್ಟೆಯ ಹಸಿವು ತಣಿಯಲಿಲ್ಲ. ಮರುಕ್ಷಣವೇ ''ನಾನು ಎಂಥಾ ನೀಚ ಕೆಲ್ಸ ಮಾಡಿಬಿಟ್ಟೆ!'' ಎಂದುಕೊಂಡು ಗಲಿಬಿಲಿಯಾದ. ಪಾಪ, ಶಾಲೆಗೆ ಹೋಗುವ ಹುಡುಗನ ಕೈಯಿಂದ ಬುತ್ತಿಯನ್ನು ಕಸಿದುಕೊಂಡು ತಿಂದ ನಾನೆಂತಹ ರಾಕ್ಷಸನಾಗಿಬಿಟ್ಟೆ! ಹೀಗೆಯೇ ಹಸಿವಿನಿಂದ ಸಾಯುತ್ತಿದ್ದರೆ ಯಾರಿಗೇನು ನಷ್ಟವಾಗುತ್ತಿತ್ತು! ದಾತುವಾರಿಲ್ಲದ ಶವ. ಕೊಳೆತು ಊರಿಡೀ ನಾರುವ ಮುಂಚೆ ತೆಗೆಯುವ ಅಂತ ಯಾವನಾದರೊಬ್ಬ ಪುಣ್ಯಾತ್ಮ ಮುಂದೆ ಬಂದೇ ಬರುತ್ತಾನೆ.

ಬಿಸಿಲು ಜೋರಾಗಿತ್ತು. ಹಸಿದ ಹೊಟ್ಟೆಯಿಂದಾಗಿ ಕೈ ಕಾಲಿಗೆ ಬಲವಿಲ್ಲದೆ ಹೇಗೋ ಎಳೆದುಕೊಂಡು ನಡೆಯುತ್ತಿದ್ದ. ಸನಿಹದಲ್ಲೇ ಬರ್ರನೆ ವೇಗವಾಗಿ ಬರುತ್ತಿದ್ದ ಕಾರು ಗಕ್ಕನೆ ಬ್ರೇಕು ಹಾಕಿ ನಿಂತಿತು. ''ಏಯ್... ಏನೋ... ಸಾಯ್ಲಿಕ್ಕೆ ಮನಸ್ಸಾಗಿದ್ರೆ, ಯಾವುದಾದ್ರೂ ಕೆರೆನೋ ಬಾವಿನೋ ನೋಡಬಾರ್ದಾ? ನನ್ನ ಕಾರ್ನಡಿಗೆ ಬಿದ್ದು ಸಾಯ್ಬೇಕಂತ ಹರಕೆ ಏನಾದ್ರೂ ಇಟ್ಟಿದಿಯಾ ?'' ಎಂದು ಕಾರಿನವ ಕೂಗಿದ. ಇವನು ಫಕ್ಕನೆ ಎಚ್ಚರಾಗುತ್ತಲೇ ಬದಿಗೆ ಹಾರಿ ನಿಂತು ವಿನಯದಿಂದ 'ಸಾರಿ...' ಎಂದ. ''ಏ... ನೋಡೇ... ಮತ್ತೆ ಇಂಗ್ಲಿಷ್ ಮಾತಾಡ್ತಾನೆ...'' ಎಂದು ಕಾರಿನೊಳಗಿದ್ದ ಹೆಣ್ಣು ಗೊಳ್ಳನೆ ನಕ್ಕಳು. ಕಾರು ಬರ್ರನೆ ಹೊರಟಿತು.

ನಗು... ನಗು, ನಿಂಗೆ ನಗುವ ಕಾಲ. ಹೊಟ್ಟೆಯೊಳಗೆ ನನ್ನನ್ನು ಸುಡುತ್ತಿರುವ ಬೆಂಕಿ ನಿನ್ನನ್ನೂ ಸುಡುತ್ತಿದ್ರೆ, ನಿಂಗೆ ಇಂತಹಾ ನಗೆ ಬರುತ್ತಿರ್ಲಿಲ್ಲ. ನೀನೇನು ಹೊಟ್ಟೆ ಬಿರಿಯುವಂತೆ ತಿಂದು ಬಿರ್ರನೆ ಕಾರಲ್ಲಿ ಓಡಾಡ್ತಿದೀಯಾ...!

ಬಡಕಲು ದೇಹದ ಕಪ್ಪು ನಾಯಿಯೊಂದು ವಯ್ಯಾರದಿಂದ ನಡೆಯುತ್ತಿದ್ದವಳನ್ನು ಹಿಂಬಾಲಿಸಿತು. ಆ ಮಿಟಕಲಾಡಿ ತಿರುಗಿ ಇವನತ್ತ ನೋಡಿ ನಕ್ಕಳು. ಇವನ ಮುಖದಲ್ಲಿ ನಗೆ ಮೂಡಲಿಲ್ಲ. ಮೊನ್ನೆ ನಿಂಗೆ ಕೊಟ್ಟ ಹತ್ತು ರೂಪಾಯಿ ನನ್ನ ಕೈಯಲ್ಲಿ ಇರುತ್ತಿದ್ರೆ, ಇಂದು ನಂಗೀಗತಿ ಬರ್ತಿರ್ಲಿಲ್ಲಾ! ಮುಂಡೆ ಹೀಗೆಯೇ ನಕ್ಕು ಮರುಳು ಮಾಡಿ ಕಲ್ಲು ಬಂಡೆಯೆಡೆಗೆ ಕರ್ಕೊಂಡ್ಹೋಗಿದ್ಲು. ಜೇಬಲ್ಲಿದ್ದ ಹತ್ತು ರೂಪಾಯಿ ಎಗರ್ಸಿಕೊಂಡು ಬಿಟ್ಲು. ಮತ್ತಿನ್ಯಾಕೆ ಸುಮ್ಮನೆ ಹಲ್ಲು ಕಿಸೀತಾ ಇದೀಯಾ? ಹೋಗೇ ಬೇರೆ ಇನ್ಯಾರನ್ನಾದ್ರೂ ನೋಡ್ಕೊಂಡು ಹಲ್ಲು ಕಿಸಿಯೇ ಕಪ್ಪುನಾಯಿಯವ್ವೇ ಒರಟು ಮುಖದವ್ವೇ...! ನಾನು ನಿಂಗೆ ಹತ್ರುಪಾಯಿ ಕೊಟ್ಟೇಂತ ಯಾರೂ ನಿಂಗೆ ಎಂಟಾಣೆನೂ ಕೊಡ್ಲಿಕ್ಕಿಲ್ಲಾ... ತಿಳಿದಿರ್ಲಿ...!

''ಯೇ... ಬಾರೋ ರಾಜಾ...'' ಎಂದು ವೀಳ್ಯ ಹಾಕಿ ಕೆಂಪಗಾದ ಹಲ್ಲುಗಳ ಸಾಲನ್ನು ಪ್ರದರ್ಶಿಸಿದಳು.

ಇವನು ಅವಳತ್ತ ಸಿಟ್ಟಾಗಿ ನೋಡಿದ.

ನಿಂಗೇನು ಕೊಳಕು ಮುಂಡೆ, ಕಾಮದ ಹಸಿವು! ನಂಗೆ ಹೊಟ್ಟೆ ಹಸಿವು. ನಿಂಗೆ ಮಾರಿಕೊಳ್ಳುವ ದೇಹವಾದ್ರೂ ಇದೆ. ನಂಗೆ ಅದೂ ಕೂಡಾ ಇಲ್ವಲ್ಲ! ನನ್ನ ಕೈಯಲ್ಲಾಗುತ್ತಿದ್ದರೆ ನಿನ್ನನ್ನು ನಿನ್ನ ನಾಯಿಯನ್ನು ಕೊಂದು ಬೆಂಕಿಯಲ್ಲಿ ತಂದೂರಿ ಮಾಡಿ ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದೆ!

ರಸ್ತೆ ತುಂಬ ಸ್ಕೂಟರು, ಸೈಕಲು, ಕಾರು, ಬಸ್ಸುಗಳು ಹೆಚ್ಚುತ್ತಾ ಹೋಯಿತು. ಅಲ್ಲಲ್ಲಿ ಹೊಂಡಗಳಿಗೆ ಡಬ್ ಡಬಲ್ ಶಬ್ದ ಮಾಡುತ್ತಾ ಬಿದ್ದು ಎದ್ದು ಹೋಗುತ್ತಿದ್ದವು. ಹೋಗುವ ರಭಸಕ್ಕೆ ಹೊಂಡದಲ್ಲಿದ್ದ ಕೊಳಚೆ ನೀರು ಪಚಕ್ಕನೆ ಅಲ್ಲಲ್ಲಾ ಹಾರುತ್ತಿತ್ತು. ರಾತ್ರಿ ಮಳೆ ಬಂದಿತ್ತು. ಕೋಣೆಯಲ್ಲಿ ಜಿಟಿ ಪಿಟಿ ಮಳೆ ಸೋರುತ್ತಿತ್ತು. ಅಲ್ಲಲ್ಲಿ ಪ್ಲಾಸ್ಟಿಕ್ ಚೀಲಗಳನ್ನು ಸಿಕ್ಕಿಸಿ ತಡೆಯುವ ಪ್ರಯತ್ನ ಮಾಡಿದ್ದ. ಮುದುಕಿಗೆ ಇದೆಲ್ಲಾ ಹೇಳಿದ್ರೆ,'ನೀನು ಬಿಟ್ಟು ಜಾಗ ನೋಡುವಾ ಇಲ್ಲಿಂದ ..' ಎಂದಾಳು.

ರಸ್ತೆಯುದ್ದಕ್ಕೂ ಸಾಲಿನಲ್ಲಿ ಅಂಗಡಿಗಳು. ಹೋಟೇಲಿನೊಳಗೆ ಪುಣ್ಯಾತ್ಮರು ಕೂತು ಚಾ ಕುಡಿಯುತ್ತಿದ್ದರು. ಏನೇನೋ ತಿಂಡಿಗಳನ್ನು ತಿನ್ನುತ್ತಿದ್ದರು. ಹಿತವಾದ ತಿಂಡಿ ವಾಸನೆ ಮೂಗಿಗೆ ಬಡಿದು ಇವನ ಹಸಿವನ್ನು ಇನ್ನಷ್ಟು ಹೆಚ್ಚಿಸಿತು. ''ಏ.. ಹೋಗೋ.. ಏನು ನಿಂತಿದ್ದಿಯಾ..?'' ಎಂದು ಹೋಟೇಲಿನ ಗಲ್ಲೆಯಲ್ಲಿ ಕೂತಿದ್ದ ಡೊಳ್ಳು ಹೊಟ್ಟೆಯವನು ಕೂಗಿದ. ಇನ್ನು ಇಲ್ಲಿ ನಿಂತರೆ ಬಿಸಿ ನೀರು ಚೆಲ್ತಾನೆ ಬೋಸ್ಡಿ ಮಗಾ...!

ಏಯ್... ಡೊಳ್ಳು ಹೊಟ್ಟೆಯವ್ನೇ... ನೀ ಸತ್ರೆ ದಢೂತಿ ದೇಹದ ಹುಳದಂತೆ ನರಕದಲ್ಲಿ ವಿಲವಿಲನೆ ಒದ್ದಾಡ್ತಿಯಾ... ನಾಯಿ ಮಗನೇ... ನನ್ನ ರಟ್ಟೆಯಲ್ಲಿ ಶಕ್ತಿ ಇರ್ತಿದ್ರೆ ನಿನ್ನ ಕಪಾಳಕ್ಕೆ ನಾಲ್ಕು ಬಿಗೀತಿದ್ದೆ. ನನ್ನ ಜೇಬಲ್ಲಿ ಹಣ ಇರ್ತಿದ್ರೆ ನಾಲಕ್ಕು ಇಡ್ಲಿ, ಟೀ ನಿನ್ನ ಕೈಲೇ ತರ್ಸಿ ತಿಂದು ಹಣ ನಿನ್ ಮೂತಿಗೆ ಬಿಸಾಕ್ತಿದ್ದೆ! ಹೀಗೇ ಡೊಳ್ಳು ಹೊಟ್ಟೆ ಬೆಳೆಸ್ತಾ ಇರು. ಒಂದ್ ದಿನಾ ನಿನ್ ಹೊಟ್ಟೆ ಒಡ್ದು ಸಾಯ್ತಿಯಾ...!

ನಡೆಯುತ್ತಾ ಹೋದಂತೆ ಶಾದಿಮಹಲಿನ ಕಟ್ಟಡದೊಳಗೆ ಮದುವೆ ಗೌಜಿ ಗದ್ದಲಗಳು ಕೇಳಿಸ್ತು. ದೊಡ್ಡ ಹಾಜಿ ಸಾಹೇಬ್ರ ಮಗನ ಮದುವೆಗೆ ಕುರ್ಚಿ ಒರೆಸುವ ಕೆಲಸಕ್ಕೆ ಹಿಂದೊಮ್ಮೆ ಈ ಕಟ್ಟಡದೊಳಗೆ ಹೋಗಿದ್ದ. ಅದೇನು ಗೌಜಿಯ ಮದುವೆ ! ಘಮ್ಮೆನ್ನುವ ಬಿರಿಯಾನಿ, ಕೋಳಿ ತಂದೂರಿ. ಸಾಲದ್ದಕ್ಕೆ ಐಸ್‌ಕ್ರೀಮು, ಜಾಮೂನು. ಓಹ್ ! ಆ ದಿನ ಮತ್ತೆ ಬರಬಾರದೇ !

ಅಂಗಳದಲ್ಲಿ ಹಾಕಿದ ಶಾಮಿಯಾನಾದಡಿಯಲ್ಲಿ ಕುರ್ಚಿ ಮೇಜುಗಳ ಮುಂದೆ ಅತಿಥಿಗಳು ಕೂತು ಘಮ ಘಮಿಸುವ ಪಲಾವ್ ಮುಕ್ಕುತ್ತಿದ್ದರು. ಇವನು ಆಸೆಗಣ್ಣಿನಿಂದ ನೋಡುತ್ತಾ ನಿಂತ. ಕಾಲುಗಳು ಯಾಂತ್ರಿಕವಾಗಿ ಗೇಟು ದಾಟಿ ಒಳಗೆ ನಡೆದವು. ಜನರ ಸದ್ದುಗದ್ದಲದ ಜೊತೆಗೆ ಧ್ವನಿವರ್ಧಕದ ಸಂಗೀತವು ಸೇರಿ ಒಂದು ವಿಚಿತ್ರ ವಾತಾವರಣ ಉಂಟಾಗಿತ್ತು. ಗೇಟು ದಾಟುತ್ತಾ ಒಳಗೆ ಹೋದವನು ಗರಿ ಗರಿಯಾದ ಬಟ್ಟೆ ತೊಟ್ಟ ಯುವಕನೊಂದಿಗೆ ''ಗಂಟೆ ಎಷ್ಟಾಯಿತು...?'' ಎಂದು ಕೇಳಿದ. ಆತ ''ಎರಡೂವರೆ...'' ಎಂದ. ಸ್ವಲ್ಪ ಧೈರ್ಯ ಮೂಡಿತು. ಕೋಳಿ ಫ್ರೈ ಒಳ್ಳೇ ಗರಂ ಆಗಿ ಕರಿದಿರಬೇಕು. ಒಳ್ಳೇ ರುಚಿ ಇರಬಹುದು... ಸಿಕ್ಕಿದ್ರೆ...! ಆ ಯುವಕ ವಾಚ್‌ಮ್ಯಾನ್‌ನನ್ನು ಕರೆದು ಅದೇನೋ ಹೇಳಿದ.

''ಏಯ್... ಎಲ್ಲಿಗಾ...? ಎಲ್ಲಿ ಹೋಗ್ತಿಯಾ... ಬಾರೋ ಇಲ್ಲಿ...'' ಎಂದು ವಾಚ್‌ಮ್ಯಾನ್ ಕರೆದ.

ಇವನು ಗಕ್ಕನೆ ನಿಂತ . ವಾಚ್‌ಮ್ಯಾನ್ ಹತ್ತಿರ ಬಂದವ ಕೋಲನ್ನು ತಿರುಗಿಸುತ್ತಾ ''ನಡೀ ಹೊರಗೆ... ನಡಿಯೋ...'' ಎಂದ. ಇವನು ಭಯಗೊಂಡು ಗೇಟಿನಿಂದ ಹೊರಬಂದ.

ವಾಚ್‌ಮ್ಯಾನ್‌ನ ಕೈಯಲ್ಲಿದ್ದ ಕೋಲನ್ನು ಕಿತ್ತುಕೊಂಡು ನಾಲ್ಕೇಟು ಬಿಗಿದು ''ನಿನ್ನಂತವ್ನೇ ನೋಡೋ ನಾನು ಕೂಡಾ... ನನ್ನಂತವ್ರಿಗೆ ಒಂದು ಹಿಡಿ ಅನ್ನ ಹಾಕಿದ್ರೆ, ನಿನ್ನ ಯಜಮಾನನ ಗಂಟೇನು ಕರಗುತ್ತದೋ?'' ಎಂದು ಕೇಳಬೇಕೆನಿಸಿತು.

''ಊಟಕ್ಕಿಂತ ಆಸೆಯಿಂದ ಬರ್ತಾರೆ, ಮತ್ತೆ ಕೈಗೆ ಸಿಕ್ಕಿದ್ದನ್ನು ಎಗರಿಸ್ಕೊಂಡು ಪರಾರಿಯಾಗ್ತಾರೆ...'' ಎಂದು ಯಾರಿಗೋ ವಾಚ್‌ಮ್ಯಾನ್ ಹೇಳಿದ್ದು ಕೇಳಿತು.

ಯಾವುದೋ ಒಂದು ಪಿಚ್ಚರಲ್ಲಿದ್ದ ಹಾಗೆ ಒಂದು ಕೋವಿ ಸಿಕ್ಕಿದ್ರೆ, ಈ ಬೋಳಿ ಮಕ್ಳಿಗೆ ತೋರ್ಸಿ, ಎಲ್ಲವನ್ನೂ ಗಂಟುಕಟ್ಟಿಕೊಂಡು ಹೋಗಿ ಆವರಣದ ಹೊರಗೆ ಆಸೆಯಿಂದ ನಿಂತಿರುವ ಭಿಕಾರಿಗಳಿಗೆ ಹಂಚಿಬಿಡಬೇಕು.

ರಸ್ತೆಯಲ್ಲಿ ಹೆಚ್ಚು ದೂರ ನಡೆಯಲಾಗಲಿಲ್ಲ. ಬಿಸಿಲು ಜೋರಾಗಿತ್ತು. ಜೊತೆಗೆ ಸುಸ್ತು, ಬೆವರಲ್ಲಿ ತೊಯ್ದು ಹೋದ. ರಸ್ತೆಯ ಬದಿಯಲ್ಲಿದ್ದ ನಳ್ಳಿಯ ಮುಂದೆ ಬಾಯಿ ತೆರೆದು ನಾಲಗೆ ಹೊರಚಾಚಿದ ನಾಯಿಯೊಂದು ತೇಕುತ್ತಾ ನಿಂತಿತ್ತು. ನಳ್ಳಿಯನ್ನು ತಿರುಗಿಸಿದ. ಪುಣ್ಯಕ್ಕೆ ನೀರು ಬರುತ್ತಿತ್ತು. ಬೊಗಸೆ ತುಂಬ ನೀರು ಹಿಡಿದು ಕುಡಿದ. ನಾಯಿಯೂ ಹತ್ತಿರ ಬಂದು ನೀರು ಕುಡಿಯಿತು. ''ನೀರಾದ್ರೂ ಕುಡಿ.. ಹೊಟ್ಟೆ ತುಂಬಿಸ್ಕೋ.. ಇದೊಂದೇ ಪುಕ್ಕಟೆಗೆ ಸಿಗೂದು...'' ಎಂದು ಅದಕ್ಕೆ ಬೇಕಾದಷ್ಟು ನೀರು ಬಿಟ್ಟು ನಳ್ಳಿಯನ್ನು ತಿರುಗಿಸಿ ಬಂದ್ ಮಾಡಿದ.

ಹೀಗೆಯೇ ಎಷ್ಟು ದಿನಾ ಬದುಕಿರೋದು...? ಏನಾದ್ರೂ ಮಾಡ್ಬೇಕು... ಏನಾದ್ರೂ ....

ಒಂದು ಮರದಡಿಯಲ್ಲಿ ಸ್ವಲ್ಪ ಹೊತ್ತು ಕೂತ. ಮತ್ತೆ ಎದ್ದು ನಡೆಯತೊಡಗಿದ. ಕೊಳಚೆಗೇರಿಯ ತನ್ನ ಕೋಣೆಯ ಗೋಣಿ ತಾಟು ಬಾಗಿಲನ್ನು ತೆರೆದ. ಚಾಪೆ ಬಿಡಿಸಿ ಬಿದ್ದುಕೊಂಡ. ಅಲ್ಲಿಗೆ ನಿದ್ದೆ ಆವರಿಸಿತು.

ಯಾರೋ ಕರೆಯುತ್ತಿರುವುದು ಕೇಳಿ ಎಚ್ಚರಾದ. ಎದ್ದು ಕುಳಿತ.

ಮುದುಕಿ ಒಳಗೆ ಬಂದಳು.

''ನೀನು ಈವತ್ತು ಬೇಗ ಬಂದಿದಿಯಾ..?'' ಎಂದಳು

''ಹೂಂ...'' ಎಂದು ಎದ್ದುನಿಂತ.

''ಈವತ್ತು ಹಣ ತಂದಿದೀಯಲ್ಲಾ... ಬಾಡಿಗೆ... ಈವತ್ತಂತೂ ನೀನು ಹಣ ಕೊಡದಿದ್ರೆ ಬಿಡುವವ್ಳಲ್ಲಾ... ನೀ ಕೊಡದಿದ್ರೆ, ನಾ ಉಪವಾಸವಿರ್ಬೇಕು...'' ಎಂದಳು.

''ಬೇಕಾದಷ್ಟಿದೆ. ನಿಂದು ಬಾಕಿ ಎಷ್ಟು?'' ಎಂದು ಗತ್ತಿನ ಧ್ವನಿಯಲ್ಲಿ ಕೇಳಿದ.

''ಅದೇ ಒಂದು ವಾರ ಮೂರು ದಿನದ್ದು ಒಟ್ಟು ಐವತ್ತು ರೂಪಾಯಿ...'' ಎಂದಳು ಮುದುಕಿ.

ಇವನು ಹೊರನಡೆದ.

''ಮನೇಲಿ ರೇಶನು ಚೂರೂ ಇಲ್ಲ ... ಅಂಗ್ಡಿಗೆ ಹೋಗ್ಬೇಕು... ಕೊಡೋ...'' ಎಂದಳು.

ಇವನು ಸುಮ್ಮನೆ ಹೋದ.

''ಎಲ್ಲಿ ಹೋಗ್ತಿಯಾ...?'' ಎಂದಳು.

''ಅದೇ, ಬ್ಯಾಂಕಿನಲ್ಲಿ ಡಿಪಾಸಿಟ್ ಇಟ್ಟಿದ್ದೇನೆ; ತರ್ಬೇಕಲ್ಲಾ...'' ಎಂದು ಜೋರಾಗಿ ನಡೆದ.

''ಹಾಳಾದೋನೇ... ನನ್ನ ಹೊಟ್ಟೆಗೆ ಹೊಡ್ದು ನೀನು ಉದ್ಧಾರ ಆಗ್ತಿಯಾ... ಹಾಳಾಗಿ ಮಣ್ಣು ತಿಂತಿಯಾ...'' ಎಂದು ಮುದುಕಿ ಶಾಪ ಹಾಕುತ್ತಿರುವುದು ಬಹಳ ದೂರದ ತನಕವೂ ಕೇಳಿಬರುತ್ತಿತ್ತು!

**ಫಕೀರ್ ಮುಹಮ್ಮದ್ ಕಟ್ಪಾಡಿ**
೪೭೫, 'ಸಂಕಲ್ಪ', ಕಾವಲ್ ಭೈರಸಂದ್ರ
ಆರ್. ಟಿ. ನಗರ, ಎಂ. ಎಂ. ಲೇಔಟ್
ಬೆಂಗಳೂರು- ೫೬೦ ೦೩೨

ಹೊಸ ವರ್ಷದ ಹಾರ್ದಿಕ ಶುಭಾಶಯಗಳು

# ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

## ರಾಷ್ಟ್ರೀಯ ಕೃಷಿ ವಿಮಾ ಯೋಜನೆ

*ಆತ್ಮಹತ್ಯೆ !* *ಆತ್ಮಹತ್ಯೆ !* *ಆತ್ಮಹತ್ಯೆ!*

ದೈನಂದಿನ ಸುದ್ದಿ ಪತ್ರಿಕೆಗಳಲ್ಲಿ ಬೆಳೆ ನಾಶ ಹೊಂದಿದ ನತದೃಷ್ಟ ರೈತರ ಆತ್ಮಹತ್ಯೆ ಪ್ರಕರಣದ ವರದಿ.

ಪ್ರಕೃತಿ ವಿಕೋಪದಿಂದ ಬೆಳೆ ನಾಶದಿಂದಾಗಿ ರೈತರ ಆತ್ಮಹತ್ಯೆ.

ಈ ಆತ್ಮಹತ್ಯೆ ನಿಲ್ಲಿಸಲು ಒಂದೇ ಒಂದು ದಿವ್ಯ ಔಷಧ ರಾಷ್ಟ್ರೀಯ ಕೃಷಿ ವಿಮಾ ಯೋಜನೆಗೆ ಸೇರಿಕೊಳ್ಳುವುದು. ರೈತರ ಅಭ್ಯುದಯಕ್ಕಾಗಿಯೇ ಸೃಜಿಸಲಾದ ಈ ಯೋಜನೆಯು ರಾಷ್ಟ್ರ / ರಾಜ್ಯದ ಕೃಷಿರಂಗದಲ್ಲಿ ಒಂದು ಪ್ರಮುಖ ಯೋಜನೆ. ವಾಣಿಜ್ಯ : ಸಹಕಾರ ಬ್ಯಾಂಕ್‌ಗಳಿಂದ ಬೆಳೆ ಸಾಲ ಪಡೆದ ರೈತರು ಕಡ್ಡಾಯವಾಗಿಯೂ ಒಳಪಡುವರು ಮತ್ತು ಬೆಳೆ ಸಾಲ ಪಡೆಯದ ರೈತರು ಸ್ವಯಂ ಪ್ರೇರಣೆಯಿಂದಲೂ ಸೇರಿಕೊಳ್ಳಬಹುದು.

ಪ್ರಕೃತಿ ವಿಕೋಪದಿಂದ ಬೆಳೆ ನಾಶ ಹೊಂದಿದ ಅರ್ಹ ರೈತರಿಗೆ ಸೂಕ್ತ ಪರಿಹಾರ ದೊರಕಿಸುವುದೇ ಈ ಯೋಜನೆಯ ಮುಖ್ಯ ಉದ್ದೇಶ.

ಬೆಳೆ ನಾಶದಿಂದ ಸಂಕಷ್ಟದಲ್ಲಿರುವ ಎಲ್ಲಾ ರೈತರಿಗೆ ಸೂಕ್ತ ಪರಿಹಾರ ದೊರಕಿಸುವ ಸದುದ್ದೇಶದಿಂದ ಕೇಂದ್ರ / ರಾಜ್ಯ ಸರ್ಕಾರವು ಈ ಯೋಜನೆಯನ್ನು ಹೋಬಳಿ ಮಟ್ಟದಲ್ಲಿ ಕೂಡ ಕೆಳಗಿನ ಬೆಳೆಗಳ ಮೇಲೆ ಜಾರಿಗೊಳಿಸಿದೆ. ಜೋಳ, ರಾಗಿ, ಶೇಂಗಾ ಮತ್ತು ತೊಗರಿ ಬೆಳೆಗಳನ್ನು ಮುಂಗಾರಿನಲ್ಲಿ, ಜೋಳ, ಗೋಧಿ ಮತ್ತು ಕಡಲೆ ಬೆಳೆಗಳನ್ನು ಹಿಂಗಾರಿನಲ್ಲಿ, ಶೇಂಗಾ ಮತ್ತು ರಾಗಿ ಬೆಳೆಗಳನ್ನು ಬೇಸಿಗೆಯಲ್ಲಿ ಜಾರಿಗೊಳಿಸಿದೆ.

ತಾಲ್ಲೂಕು ಮಟ್ಟದಲ್ಲಿ - ಭತ್ತ, ಮುಸುಕಿನಜೋಳ, ಸಜ್ಜೆ, ಸೂರ್ಯಕಾಂತಿ, ಹೆಸರು, ಉದ್ದು, ಸೋಯಾ, ಅವರೆ ಹಾಗೂ ತೋಟಗಾರಿಕೆ ಬೆಳೆಗಳಾದ ಆಲೂಗಡ್ಡೆ ಮತ್ತು ಈರುಳ್ಳಿಯನ್ನು ಮುಂಗಾರಿನಲ್ಲಿ, ಭತ್ತ, ಸೂರ್ಯಕಾಂತಿ, ಕುಸುಬೆ ಹಾಗೂ ಆಲೂಗಡ್ಡೆ ಬೆಳೆಗಳನ್ನು ಹಿಂಗಾರಿನಲ್ಲಿ, ಭತ್ತದ ಬೆಳೆಯನ್ನು ಬೇಸಿಗೆಯಲ್ಲಿ ಜಾರಿಗೊಳಿಸಲಾಗಿದೆ.

ಆರಿಸಿರುವ ತಾಲ್ಲೂಕು / ಹೋಬಳಿ ಮಟ್ಟದಲ್ಲಿ ಆರಿಸಿರುವ ಬೆಳೆಯ ಮೇಲೆ ಕನಿಷ್ಠ 16/10 ಬೆಳೆ ಕಟಾವು ಪ್ರಯೋಗಗಳನ್ನು ಕೈಗೊಂಡು ಹೆಕ್ಟೇರ್ ಒಂದರ ಸರಾಸರಿ ಇಳುವರಿ ಕಂಡುಹಿಡಿದು, ಆಯಾ ಬೆಳೆಯ ಅದೇ ಪ್ರದೇಶದ ಭರವಸೆ ಇಳುವರಿಯೊಂದಿಗೆ ಹೋಲಿಸಿ, ಬೆಳೆ ನಷ್ಟ ಕಂಡುಬಂದಲ್ಲಿ, ಬೆಳೆ ನಷ್ಟ ಪ್ರಮಾಣದ ಪರಿಹಾರ ಮೊತ್ತವನ್ನು ಅರ್ಹ ರೈತರಿಗೆ ನೀಡಲಾಗುತ್ತದೆ.

ಮುಂಬರುವ ವರ್ಷದಲ್ಲಿ ಈ ಯೋಜನೆಯನ್ನು ಗ್ರಾಮಪಂಚಾಯತ್ ಮಟ್ಟದಲ್ಲಿ ಜಾರಿಗೊಳಿಸುವ ಯೋಚನೆ ಸರ್ಕಾರದ ಗಮನದಲ್ಲಿ ಇದೆ. ಈ ಯೋಜನೆಯ ಹೆಚ್ಚಿನ ವಿವರಗಳಿಗೆ ಆಯಾ ಜಿಲ್ಲೆಯ ಉಪ/ಜಂಟಿ ಕೃಷಿ ನಿರ್ದೇಶಕರನ್ನು / ಜಿಲ್ಲೆಯ ಮಾರ್ಗದರ್ಶಿ ಬ್ಯಾಂಕಿನ ಅಧಿಕಾರಿಗಳನ್ನು ಸಂಪರ್ಕಿಸಿರಿ.

ಆತ್ಮಹತ್ಯೆ ನಿಲ್ಲಿಸಿ,
ಈ ಯೋಜನೆಯಡಿ ಸೇರಿಕೊಳ್ಳಿ
ಬೆಳೆ ನಾಶದ ಪರಿಹಾರ ಮೊತ್ತ ಪಡೆಯಿರಿ




# ಮಲ್ಲಿಗೆ ದರ್ಶಿನಿಮಾಲೆ – 2002




## ಯಾರು ಹಿತವರು ನಿಮಗೆ ಈ ಎಂಟರೊಳಗೆ ?




ಇದು ಬೆಂಗಳೂರು ಮುದ್ರಣಾಲಯದ
ಹೆಮ್ಮೆಯ ಕೊಡುಗೆ







ಪ್ರತಿದರ್ಶಿನಿಯ ಬೆಲೆ ರೂ. 15/-

- 560 018.
6703638, 6709027

# ನೂತನ ಭಯೋತ್ಪಾದಕತೆಯತ್ತ ...

■ ಎಂ. ಬಿ. ಲಾಲ್

ದೆಹಲಿಯಲ್ಲಿ ವಾಸಿಸುವುದೆಂದರೆ ಸಾಂಸ್ಕೃತಿಕ ತಲ್ಲಣಗಳಿಗೆ ಆಗಾಗ್ಗೆ ತೆರೆದುಕೊಳ್ಳುತ್ತಿರಬೇಕಾಗುತ್ತದೆ. ನೂರೈವತ್ತು ವರ್ಷಗಳ ನಂತರವೂ ಈ ನಗರ ತನ್ನ ಭೂತಕಾಲದ ಮೊಗಲ್ ರಾಜ್ಯಭಾರದ ವಿರುದ್ಧ ಸೆಣಸುತ್ತಲೇ ಇದೆಯೇನೋ ಎನಿಸುತ್ತದೆ. ಆದ್ದರಿಂದಲೇ ಹೊಸದಾಗಿ ಏನು ಬಂದರೂ ಅದನ್ನು ಗಬಕ್ಕನೆ ಆತುಕೊಳ್ಳುತ್ತದೆ: ಬಟ್ಟೆಗಳ ಫ್ಯಾಷನ್, ತಿಂಡಿ-ತಿನಿಸುಗಳು, ಜೀವನ ವಿಧಾನ, ಹೀಗೆ ಎಲ್ಲವೂ. ಪ್ರಪಂಚದ ಯಾವ ಕಡೆಯಿಂದ ಬಂದಿದ್ದರೂ ಸರಿಯೇ, ಅದಕ್ಕೆ ಅಡ್ಡಿಯಿಲ್ಲ. ನಾನು ೭೩ ವರ್ಷದವನು. ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ಈ ಊರಲ್ಲಿ ಕಳೆದಿದ್ದೇನೆ. ದೆಹಲಿಯ ಸಹನೆ ಮತ್ತು ನವೀನತೆಯ ರೋಮಾಂಚಕ ಸ್ಫೂರ್ತಿಯನ್ನು ಮೈಗೂಡಿಸಿಕೊಂಡಿದ್ದೇನೆಂಬ ಹೆಮ್ಮೆ ನನ್ನದು. ಇತ್ತೀಚೆಗೆ ನನ್ನ ಆಧುನಿಕತೆಯ ಬಗೆಗಿನ ವಿಶ್ವಾಸ ಸ್ವಲ್ಪ ಅಲುಗಾಡಿದಂತಾಯಿತು. ಮೊನ್ನೆ ಮೊನ್ನೆ ನನ್ನ ಸೊಸೆ ಹೇಳಿದ ವಿಷಯ : ಒಂದು ಶಾಲೆಗೆ ಅವಳ ಮಕ್ಕಳನ್ನು ಕಳಿಸುತ್ತಾಳೆ; ನಾಲ್ಕು ವರ್ಷದ ಹುಡುಗ, ಎಂಟು ವರ್ಷದ ಹುಡುಗಿ. ಆ ಶಾಲೆಯಲ್ಲಿ ಬರೀ ಬಿ.ಎ., ಎಂ.ಎ. ಓದಿದವರ ಮಕ್ಕಳಿಗೆ ಪ್ರವೇಶವಿಲ್ಲವಂತೆ! ಮಕ್ಕಳ ತಾತ-ಅಜ್ಜಿ ಸಹ ಕನಿಷ್ಠ ಪದವೀಧರರಾಗಿರಬೇಕಂತೆ. ಮಕ್ಕಳ ತಂದೆ ತಾಯಂದಿರು ಇನ್ನೂ ಏನಾದರೂ ದೊಡ್ಡ ಪದವಿ ಹೊಂದಿರಬೇಕು. ಔದ್ಯೋಗಿಕ ಪದವಿಯೋ ಅಥವಾ ಅಂತಹ ಇನ್ನೇನೋ.

ಇದು ನನಗೆ ಆಘಾತ ತಂದಿತು. ನನ್ನ ಮಕ್ಕಳನ್ನು ನಾನು ಶಾಲೆಗೆ ಕಳುಹಿಸಿದ ದಿನಗಳ ನೆನಪಾಯಿತು. ಅವೂ ಉತ್ತಮ ಶಾಲೆಗಳೇ. ನನ್ನಂತಹ ಒಬ್ಬ ಪತ್ರಕರ್ತನೂ ಆ ಶಾಲೆಗಳಿಗೆ ಮಕ್ಕಳನ್ನು ಕಳಿಸಲು ಸಾಧ್ಯವಿತ್ತು. ಇಂದಿನ ಕಟ್ಟುನಿಟ್ಟು ನಿಯಮವೇನಾದರೂ ಅಂದು ಇದ್ದಿದ್ದರೆ ನನ್ನ ಮಕ್ಕಳು ಬಹುಶಃ ಒಂದು ಸರ್ಕಾರಿ ಶಾಲೆಗೆ ಹೋಗುತ್ತಿದ್ದರೇನೋ. ಏಕೆಂದರೆ ನಾನೊಬ್ಬ ಖಾಲಿ ಎಂ.ಎ. ಪದವೀಧರ, ನನ್ನ ಪತ್ನಿ ಬಿ.ಎಸ್ಸಿ. ನನ್ನ ತಂದೆ ಎಂದೂ ಪ್ರಥಮ ದರ್ಜೆ ಕಾಲೇಜಿಗೆ ಹೋದವರಲ್ಲ. ನನ್ನ ತಾಯಿ ಶಾಲೆಗೇನೂ ಹೋಗಿರಲಿಲ್ಲ; ಆದರೆ ತನ್ನ ಮಾತೃಭಾಷೆಯಲ್ಲಿ ಧಾರ್ಮಿಕ ಸಾಹಿತ್ಯ ಓದಿಕೊಳ್ಳಬಲ್ಲವಳಾಗಿದ್ದಳು, ಕಾಗದ ಬರೆಯಬಲ್ಲವಳಾಗಿದ್ದಳು.

ಇನ್ನು ಹಣದ ಕಟ್ಟುಪಾಡುಗಳು : ಪ್ರವೇಶಕ್ಕಾಗಿ ಅರ್ಜಿ ಸಲ್ಲಿಸುವಾಗ ತಂದೆ-ತಾಯಂದಿರ ಆದಾಯ ಮತ್ತು ಸ್ಥಾನಮಾನ ತಿಳಿಸಬೇಕು, ಅಜ್ಜ-ತಾತರ ಸಾಮಾಜಿಕ ಸ್ಥಾನ ನಮೂದಿಸಬೇಕು. ಪ್ರವೇಶ ಶುಲ್ಕ ಇಂತಹ ಶಾಲೆಗಳಲ್ಲಿ ಕಡಿಮೆಯೆಂದರೆ ಇಪ್ಪತ್ತು ಸಾವಿರ ರೂಪಾಯಿ. ಇನ್ನೂ ಉನ್ನತ ಶ್ರೇಣಿಯ ಶಾಲೆಗಳಲ್ಲಿ ಅದು ಇನ್ನೂ ಎಷ್ಟೋಪಟ್ಟು ಜಾಸ್ತಿ. ಹವಾನಿಯಂತ್ರಿತ ಪಂಚತಾರಾ ಸೌಲಭ್ಯವಿರುವೆಡೆ ಮಗುವಿಗೆ ವಿದ್ಯಾಭ್ಯಾಸ. ನನ್ನ ಮೊಮ್ಮಕ್ಕಳು ಮತ್ತು ಅವರ ಸ್ನೇಹಿತರು ತಮ್ಮ ಹಾಗೂ ತಮ್ಮ ಸ್ನೇಹಿತರ ಹುಟ್ಟುಹಬ್ಬದ ಸಮಾರಂಭಗಳಿಗೆ ಖರ್ಚುಮಾಡುವ ಹಣವನ್ನು ಲೆಕ್ಕ ಮಾಡಿದರೆ ನನ್ನ ಇಡೀ ಶಾಲಾ ವ್ಯಾಸಂಗಕ್ಕೆ ಖರ್ಚಾದುದಕ್ಕಿಂತಲೂ ಹೆಚ್ಚಿರುತ್ತದೆ. ಅವರ ಈ ಸಮಾರಂಭಗಳ ಅದ್ದೂರಿಯೋ ಹೇಳತೀರದು. ಈಗಂತೂ ಅಂತಹ ಪರಿಪಾಠ ದೆಹಲಿಯ ಎಲ್ಲ ''ಒಳ್ಳೆಯ'' ಶಾಲೆಗಳಿಗೂ ಹಬ್ಬಿದೆ. ನಾನು ಸೂಚಿಸಿರುವ ಲೆಕ್ಕದಲ್ಲಿ ಸೇರಿರದ ಬಾಬ್ತುಗಳೂ ಇವೆ: ತಂದೆ-ತಾಯಂದಿರು ವ್ಯಯಮಾಡುವ ಸಮಯ, ವಾಹನದ ಖರ್ಚು, ದೆಹಲಿಯ ಯಾವಾವುದೋ ಮೂಲೆಗೆ ಕೊಂಡೊಯ್ಯುವ ಶ್ರಮ, ಮಕ್ಕಳು ಹಿಂದಿರುಗುವ ತನಕ ಅಲ್ಲೇ ಎಲ್ಲೋ ಠಳಾಯಿಸುತ್ತಿರುವುದು, ಇತ್ಯಾದಿ. ಮಗುವಿಗೆ ಸಾಮಾಜಿಕ ಶಿಕ್ಷಣ ದೊರೆಯುತ್ತಿರುವುದಿಲ್ಲವೆ, ಅದಕ್ಕಾಗಿ ಈ ಎಲ್ಲ ಪ್ರಯಾಸ; ವರ್ಷಕ್ಕೆ ಒಂದಿಪ್ಪತ್ತು ಬಾರಿ! ನಮ್ಮ ರಾಷ್ಟ್ರೀಯ ಪರಂಪರೆಯಲ್ಲಿ ಮಗುವಿನ ಹುಟ್ಟುಹಬ್ಬ ಎಂದರೆ ದೇವರ ಆಶೀರ್ವಾದ ಬೇಡುವುದು, ಬಡವರಿಗೆ ದಾನ ಮಾಡುವುದು ಇತ್ಯಾದಿ ಕಲ್ಪನೆಗಳು ಈಗ ಅಪ್ರಸ್ತುತ. ಪಕ್ಕದ ಮನೆಯ ಸೊಣ್ಣಪ್ಪನು ಎಷ್ಟು ಶ್ರೀಮಂತಿಕೆ ಮೆರೆದು ದುಂದುವೆಚ್ಚ ಮಾಡುತ್ತಾನೋ ಅಷ್ಟನ್ನು ನಾನೂ ಮಾಡಬೇಕು!

ಇಷ್ಟಾಗಿಯೂ, ಪ್ರಪಂಚದ ಇನ್ನು ಕೆಲವೆಡೆಗಳಿಗೆ ಹೋಲಿಸಿದರೆ ಇದು ಅಲ್ಪವೇ ಎನ್ನುತ್ತಾರೆ. ಆ ಅರ್ಥದಲ್ಲಿ ದೆಹಲಿ ಇನ್ನೂ ಹಿಂದುಳಿದಿರುವ ನಗರ. ತನ್ನ ಮಾರ್ಗದರ್ಶಿ ಅಮೆರಿಕಾದಿಂದ ಕಲಿಯಬೇಕಾದ ಆಧುನಿಕ ಪಾಠಗಳು ಇನ್ನೂ ಎಷ್ಟೋ ಇವೆ. ನನ್ನ ಮಗಳ ಮಗಳಿಗೆ ಒಂಬತ್ತು ವರ್ಷ. ಎರಡು ವಾರಗಳ ಹಿಂದೆ ಅವಳು ನನಗೊಂದು ಈ-ಮೇಲ್ ರವಾನಿಸಿದ್ದಾಳೆ, ಇಂಡೊನೇಷ್ಯಾದಿಂದ. ಜಕಾರ್ತಾ ಅಂತರರಾಷ್ಟ್ರೀಯ ಶಾಲೆಯಲ್ಲಿ ಅವಳು ಕಲಿಯುತ್ತಿರುವುದು. ಅವಳು ಹೇಳುತ್ತಾಳೆ: ನನ್ನ ವಯಸ್ಸಿನ ಸಹಪಾಠಿಯೊಬ್ಬಳ ಹುಟ್ಟುಹಬ್ಬವಿತ್ತು. ಅವಳು ಅಮೆರಿಕಾದವಳು. ನಾನವಳ ಮನೆಗೆ ಹೋಗಿದ್ದೆ. ಸಮಾರಂಭದ ಸ್ವಾರಸ್ಯವೇನೆಂದರೆ ಇದು ''ಅಲ್ಲೇ ಮಲಗುವಂತಹ ಹುಟ್ಟುಹಬ್ಬ.'' ನಮ್ಮ ಪಾರ್ಟಿ ಮಧ್ಯಾಹ್ನ ಮೂರಕ್ಕೆ ಆರಂಭವಾಗಿ ರಾತ್ರಿ ಎರಡು ಗಂಟೆಯವರೆಗೆ ಜರುಗಿತು. ಬೆಳಿಗ್ಗೆ ಏಳರವರೆಗೆ ನಾವೆಲ್ಲಾ ಅಲ್ಲೇ ಮಲಗಿದ್ದೆವು. ಆಮೇಲೆ ಮತ್ತೆ ಮೂರು ಗಂಟೆಗಳ ಮೋಜು: ಇನ್ನಷ್ಟು ಕೋಕಾ-ಕೋಲಾ, ಐಸ್‌ಕ್ರೀಂ, ಕೇಕ್ ಮತ್ತು ಇನ್ನೂ ಏನೇನೋ. ಆಮೇಲೆ ಮನೆಯ ಒಳಗೆ ಮತ್ತು ಹೊರಗೆ ಆಟಗಳು.

ನನಗನ್ನಿಸುತ್ತದೆ: ನಮ್ಮ ನಗರದ ಭಾರಿ ವಿದ್ಯಾವಂತ ಸಮೂಹ ಸದ್ಯದಲ್ಲೇ ಈ ಮಾದರಿಯನ್ನು ಅನುಕರಿಸಲು ಆರಂಭಿಸುತ್ತದೆ. ಶಿಕ್ಷಣದ ವರ್ಧನೆ ಎಂದರೆ ಈ ಜೀವನ ವಿಧಾನ ಅಳವಡಿಸಿಕೊಳ್ಳುವುದು ಎಂದರ್ಥ, ನಮ್ಮ ಶ್ರೀಮಂತ ಶಾಲೆಗಳ ದೃಷ್ಟಿಯಲ್ಲಿ. ನರ್ಸರಿ ಹಂತದಿಂದ ಮೇಲಿನವರೆಗೆ ದೆಹಲಿಯಲ್ಲಿ ಶೈಕ್ಷಣಿಕ ನೀತಿಯ ಮೂಲಭೂತ ಲಕ್ಷಣವೇನೆಂದರೆ ನೀನು ಹೆಚ್ಚುಹೆಚ್ಚು ಖರ್ಚು ಮಾಡಿದಷ್ಟೂ ಹೆಚ್ಚುಹೆಚ್ಚು ಕಲಿಯುತ್ತೀಯೆ, ಎಂಬುದು. ನಮ್ಮ ನಗರಪಾಲಿಕೆಯ ಅಧ್ವಾನದ ಪರಿಸ್ಥಿತಿ ನೋಡಿದರೆ ಈ ನೀತಿಯ ಇನ್ನೊಂದು ಮಗ್ಗುಲೂ ನಿಜವೆನಿಸುತ್ತದೆ: ಕಡಿಮೆ ಕೊಡು, ಕಡಿಮೆ ಕಲಿ! ಇನ್ನೂ ಮುಂದೆ ಹೋದರೆ, ''ಹಣ ಇಲ್ಲದಿದ್ದರೆ ಶಿಕ್ಷಣವೂ ಇಲ್ಲ'' ಎಂಬ ಸೂತ್ರ.

ಸ್ವಾತಂತ್ರ್ಯಾನಂತರ ನಾವು ಬಹುದೂರ ಕ್ರಮಿಸಿರುವುದು ಖಂಡಿತ ಸತ್ಯ. ನನ್ನ ಮೊಮ್ಮಗಳು ಜಕಾರ್ತಾದಿಂದ ಕಳಿಸಿದ ಈ-ಮೇಲ್ ನೋಡಿದಾಗ ನನಗೆ ಜ್ಞಾಪಕಕ್ಕೆ ಬರುವುದು ನನ್ನ ಮೊದಲ ಶಾಲೆ. ನಮ್ಮ ತಾಯಿಯ ಊರಿನಲ್ಲಿ ಅದೊಂದು ಒಬ್ಬರೇ ಉಪಾಧ್ಯಾಯರಿದ್ದ ಶಾಲೆ. ೧೯೩೦ರ ದಶಕ. ನಮ್ಮ ಯುವಕ ಉಪಾಧ್ಯಾಯರ ಹೆಸರು ಇನ್ನೂ ನೆನಪಿದೆ : ಕಬೂಲ್ ಮಾಸ್ಟರ್. ಇಪ್ಪತ್ತರ ಹರೆಯದವನಿರಬೇಕು. ನಮ್ಮ ಕುಟುಂಬದಿಂದ ನಾನು ಮತ್ತು ನನ್ನ ವಯಸ್ಸಿನ ಮೂರು ಹುಡುಗಿಯರು ಬೆಳಗಿನ ಹೊತ್ತು ಮೂರು ಗಂಟೆ ಶಾಲೆಯಲ್ಲಿ ಕಲಿಯಲು ಕಳಿಸಲ್ಪಡುತ್ತಿದ್ದೆವು. ಅದೊಂದು ಮಣ್ಣಿನ ಮನೆ. ಮುಂಭಾಗದಲ್ಲಿ ಒಂದು ಅಂಗಳ ಮತ್ತು ಎರಡು ಕೋಣೆಗಳು. ನಾವೆಲ್ಲಾ ಸೇರಿ ಇದ್ದವರು ಹತ್ತು-ಹನ್ನೆರಡು ಮಕ್ಕಳು. ಅಂಗಳದಲ್ಲಿದ್ದ ಒಂದು ಮರದಡಿ ಸಗಣಿ ನೀರು ಹಾಕಿ ಸಾರಿಸಿದ ನೆಲದ ಮೇಲೆ ನಾವು ಕೂಡುವುದು. ಮನೆಯಲ್ಲೇ ತಯಾರಿಸಿದ್ದ ಯಾವುದೋ ಬೊಂಬಿನ ಪೆನ್ನು, ಮರದಲ್ಲಿ ಮಾಡಿದ ಬಿಳಿ ಸ್ಲೇಟು, ಅದರ ಮೇಲೆ ಬರೆಯಲು ಹಸಿ ಸೀಮೆಸುಣ್ಣ – ಇವು ನಮ್ಮ ವಿದ್ಯಾ ಸಾಧನಗಳು. ಬರೆಯುತ್ತಿದ್ದುದೆಷ್ಟೋ ಕಾಣೆ, ಆದರೆ ಅಂಗಳದಲ್ಲಿ ಆಟವಾಡುತ್ತಾ ಕುಣಿದು ಕುಪ್ಪಳಿಸುತ್ತಿದ್ದುದೇ ಹೆಚ್ಚು. ಏನೋ ನಮೂನೆಯ ಚಮತ್ಕಾರದ ಆಟಗಳು. ಅಂಕಿಗಳಿಂದ ಹೆಣೆಯಲ್ಪಟ್ಟಿದ್ದ ಕೆಲವು ಲಯಬದ್ಧ ಹಾಡುಗಳು. ಒಂದು-ಎರಡು ಕಲಿಸಲು ಕಬೂಲ್ ಮಾಸ್ಟರ್ ಕಂಡುಕೊಂಡಿದ್ದ ವಿಧಾನ ಅದು. ನಮ್ಮ ಜ್ಞಾಪಕ ಶಕ್ತಿ ಹೆಚ್ಚಿಸಲು ಮತ್ತು ಶಿಸ್ತನ್ನು ಕಲಿಸಲು ಅವರಲ್ಲಿ ಒಂದು ಆಯುಧವಿತ್ತು: ಒಂದು ಉದ್ದನೆಯ ಹುಣಸೆಕಡ್ಡಿ. ಅದರ ಉಪಯೋಗ ಆಗುತ್ತಿದ್ದುದು ಕಡಿಮೆಯೇ.



ಡಾ॥ ಕೆ. ಎಸ್. ಕೃಷ್ಣನ್

ನಾವು ಶಾಲೆಗೆ ಸೇರಿ ಮೂರು ತಿಂಗಳು ಕಳೆದ ನಂತರ ಒಂದು ದಿನ ನನ್ನ ಚಿಕ್ಕಪ್ಪನ ಮಗಳ ಬೆರಳುಗಳು ತರಚಿಕೊಂಡಿದ್ದುದನ್ನು ಅಜ್ಜಿ ಗಮನಿಸಿದಳು. ಅದೇನೆಂದು ಕೇಳಿದಾಗ ಶಾಲೆಯ ಅಂಗಳ ಗುಡಿಸುವಾಗ ಪೊರಕೆಯಿಂದ

ಆದುದೆಂದು ನನ್ನ ತಂಗಿ ಹೇಳಿದಳು. ಅಜ್ಜಿಗೆ ಪಿತ್ತ ನೆತ್ತಿಗೇರಿತು. ಮೊದಲೇ ನನ್ನ ಈ ತಂಗಿ ಪೀಚಲು ಮತ್ತು ಯಾವಾಗಲೂ ನಗುನಗುತ್ತ ಇರುತ್ತಿದ್ದವಳು. ''ಆಹಾ, ನನ್ನ ರಾಜಕುಮಾರಿ'' ಎಂದೇ ಅಜ್ಜಿ ಅವಳನ್ನು ಕರೆಯುತ್ತಿದ್ದುದು. ರಾಜಕುಮಾರನೇ ಅವಳನ್ನು ಮದುವೆಯಾಗುವುದು ಎಂದೇ ಅವಳ ಎಣಿಸಿಕೆ. ತರಚಿದ್ದ ಬೆರಳುಗಳನ್ನು ನೇವರಿಸುತ್ತಾ ನಮ್ಮ ಮೂವರ ಮೇಲೂ ತನ್ನ ಕೋಪವನ್ನು ಹರಿಬಿಟ್ಟಳು ಅಜ್ಜಿ; ವಿಶೇಷತಃ ನನ್ನ ಮೇಲೆ, ಏಕೆಂದರೆ ನಾನೇ ದೊಡ್ಡವನು. ಮೂವರಿಗೂ ಎರಡೆರಡು ಬಿಗಿದಳು. ''ನಿಮ್ಮನ್ನು ಕಳಿಸುವುದು ಆ ಕಬೂಲ್ ಮಾಸ್ತರನ ಮನೆ ಗುಡಿಸಲು ಕಲಿಯಲೆಂದೆ ? ನಾಳೆ ಅವನ ಕಕ್ಕಸುಮನೆ ತೊಳೆಯಲು ಹೇಳುತ್ತಾನೆ ಅಯೋಗ್ಯ. ಮನೆಯ ಎಲ್ಲ ಆಳು-ಕಾಳುಗಳನ್ನೂ ಈಗಿಂದೀಗಲೆ ಮನೆಗೆ ಕಳಿಸಿಬಿಡುತ್ತೇನೆ, ನೀವೇ ಕಸ ಗುಡಿಸಿ, ಕಕ್ಕಸು ತೊಳೆಯಿರಿ, ತಿಳಿಯಿತೆ ?'' – ಅಜ್ಜಿ ಅಬ್ಬರಿಸಿದಳು.

ಆಮೇಲೆ ನಮ್ಮಮ್ಮನ ಸರದಿ : ''ಏನು, ಹೀಗೇ ಏನು ನೀನು ನಿನ್ನ ಮಗನನ್ನು ಬೆಳೆಸುವುದು ? ಈ ಹುಡುಗಿಯರದೇನೋ ಸರಿ, ಹೋಗಲಿ. ಅವರು ಬಾಯಿ ಮುಚ್ಚಿಕೊಂಡಿರುತ್ತಾರೆ. ಇವನಿಗೇನು ಬಂತು ? ಕಸ ಗುಡಿಸೆಂದರೆ ಒಲ್ಲೆ ಎನ್ನಬೇಕಿತ್ತು, ಇಲ್ಲ ನಮಗಾದರೂ ಹೇಳಬಹುದಿತ್ತು. ಅವನ ತಂದೆಯ ಹಾಗೂ ನಮ್ಮ ಕುಟುಂಬಕ್ಕೆ ಎಂಥ ಅಪಕೀರ್ತಿ ತಂದಿದ್ದಾನೆ ಇವನು ! ಎಷ್ಟೇ ಆಗಲಿ ಸರ್ಕಾರಿ ನೌಕರನ ಮಗನಲ್ಲವೆ ? ಇವನಿಂದ ಇನ್ನೇನು ನಿರೀಕ್ಷಿಸುವುದು !'' ಹೀಗೆನ್ನುತ್ತಾ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಕಬೂಲ್ ಮಾಸ್ತರರು ನಾಲ್ಕು ಪೊರಕೆಗಳನ್ನೂ ಒಂದು ಬಕೆಟ್ ತುಂಬ ಸಗಣಿಯನ್ನೂ ಇಟ್ಟಿರುತ್ತಿದ್ದರು. ಶಾಲೆಯಲ್ಲಿ ಮೊದಲ ಹದಿನೈದು - ಇಪ್ಪತ್ತು ನಿಮಿಷ ಗುಡಿಸುವುದು, ಸಾರಿಸುವುದು ಎಲ್ಲರ ಕೆಲಸ. ಪಾಠ ಆಮೇಲೆ ಮಾತ್ರವೇ. ಪಾಪ, ಆತನ ಬಗ್ಗೆ ತಪ್ಪು ಭಾವನೆ ಬರಬಾರದು: ನನ್ನ ತಂಗಿಯರಿಗೆ ಕೆಲಸ ಮಾಡಲು ಆತ ಎಂದೂ ಹೇಳಿರಲಿಲ್ಲ. ಅವರಿನ್ನೂ




ಬಹಳ ಚಿಕ್ಕವರೆಂದು ಆತನಿಗೆ ತಿಳಿದಿತ್ತು. ಈ ಕೈ ತರಚಿಸಿಕೊಂಡ ಹುಡುಗಿ ಕೇಳಬೇಕಲ್ಲ, ಅವಳಿಗೆ ಎಲ್ಲಿಲ್ಲದ ಹುರುಪು. ನಮ್ಮಿಂದ ಪೊರಕೆ ಕಿತ್ತುಕೊಂಡುಬಿಡುತ್ತಿದ್ದಳು.

ಸ್ವಲ್ಪ ದಿನಗಳ ನಂತರ ಕಬೂಲ್ ಮಾಸ್ತರಿಗೆ ಬುಲಾವು ಬಂತು : ಊರ ಪಟೇಲರ ಬಳಿಗೆ. ಅಜ್ಜಿಯೇ ಪಟೇಲಿಕೆ ನಡೆಸುವಂತಿದ್ದಳು ! ಆತ ಉಲ್ಲಾಸದಿಂದಲೇ ಬಂದ. ತನಗೇನು ಕಾದಿದ್ದಿತೆಂದು ಅವನಿಗೇನು ಗೊತ್ತು, ಪಾಪ ! ನಮ್ಮ ಹವೇಲಿಯ ಮಧ್ಯೆ ಒಂದು ಹಜಾರ, ಅದಕ್ಕೊಂದು ಭಾವಣಿ. ಮಾಸ್ತರು ಅಲ್ಲಿಗೆ ಬಂದದ್ದೇ ತಡ, ಶುರುವಾಯಿತು ಬೈಗುಳ ಸುರಿ ಮಳೆ : ''ನೀನೇನು ಉಪಾಧ್ಯಾಯನೋ, ಜಮಾದಾರನೋ ? ನಮ್ಮ ಮಕ್ಕಳನ್ನು ನಿನ್ನ ಶಾಲೆಗೆ ಕಳಿಸುವುದು ಗುಡಿಸಲು ಕಲಿಯಲಿ ಎಂದೇ ? ನಿನಗದೆಷ್ಟು ಪೊಗರು, ಅವರನ್ನು ಗುಡಿಸುವ ಕೆಲಸಕ್ಕೆ ಹಚ್ಚುತ್ತೀಯಲ್ಲ! ನಾನು ಯಾರೆಂದು ಗೊತ್ತು ತಾನೆ ? ಊರಿನಿಂದ ಹೊರಕ್ಕಟ್ಟಿ ಬಿಡುತ್ತೇನೆ, ತಿಳಿಯಿತೆ ? ಅಥವಾ ಒಂದು ಮರಕ್ಕೆ ನಿನ್ನನ್ನು ತಲೆಕೆಳಗಾಗಿ ನೇತು ಹಾಕಿಸಲೆ ?''

ಮಾರನೆಯ ದಿನದಿಂದ ನಾವು ಶಾಲೆಗೆ ಹೋಗುವ ಬದಲು ಕಬೂಲ್ ಮಾಸ್ತರ್ ಮನೆಗೆ ಬಂದು ಪಾಠ ಹೇಳಿಕೊಡಬೇಕೆಂದು ತೀರ್ಮಾನವಾಯಿತು. ಅದೂ ಮಧ್ಯಾಹ್ನದ ವೇಳೆಯಲ್ಲಿ. ನಮ್ಮನ್ನು ಹೀಗೆ ಶಿಕ್ಷಿಸುತ್ತಿದ್ದಳೆಂದು ಪಾಪ, ಆ ಅಜ್ಜಿಗೆಲ್ಲಿ ಗೊತ್ತಾದೀತು ! ಮಾಸ್ತರಿಗೆ ಸಂತೋಷವೇ ಆಯಿತು, ಏಕೆಂದರೆ ಮನೆಪಾಠಕ್ಕೆ ಸ್ವಲ್ಪ ಜಾಸ್ತಿಯೇ ಸಂಬಳವಿತ್ತು.

ಇದಾದ ಕೆಲವು ತಿಂಗಳುಗಳ ನಂತರ ತಾಯಿಯೊಡನೆ ನಾನು ಆ ಊರು ಬಿಟ್ಟೆ. ತಂದೆಗೆ ವರ್ಗ ಆಗುವಂತಹ ಕೆಲಸವಿದ್ದಿತು. ಅವರನ್ನು ಸೇರಿಕೊಳ್ಳಲು ನಾವು ಹೊರಟುಬಿಟ್ಟೆವು. ಈ ವರ್ಗದ ಕೆಲಸದಿಂದಾಗಿ ನಾನು ಎಂಟು ಕಡೆಗಳಲ್ಲಿ ಜ್ಞಾನದ ಬುಗ್ಗೆಗಳಲ್ಲಿ ನೀರು ಕುಡಿದೆ. ಕಾಲೇಜು ಸೇರುವ ವೇಳೆಗೇ ಇಷ್ಟು ಅನುಭವ ಉಂಟಾಗಿತ್ತು. ಒಂದು ಚಿಕ್ಕ ಪಟ್ಟಣದಲ್ಲಿದ್ದ ಶಾಲೆಯಲ್ಲಿ ನಾನು ಎಂಟನೆಯ ತರಗತಿ ಓದಿದ್ದು. ಆ ಊರಲ್ಲಿ ಅದೇ ಅತಿ ಉಚ್ಚಮಟ್ಟದ ತರಗತಿ. ಅದೊಂದು ಮುರುಕು ಧರ್ಮಶಾಲೆಯಲ್ಲಿ ನಡೆಯುತ್ತಿದ್ದ ಶಾಲೆ. ನಾಲ್ಕು ತರಗತಿಗಳಿಗೆ ಸೇರಿದ ಸುಮಾರು ಅರವತ್ತು ವಿದ್ಯಾರ್ಥಿಗಳು ನಾವು. ನನಗೀಗಲೂ ನೆನಪಿದೆ, ಅಲ್ಲೇ ಒಂದು ದೊಡ್ಡ ಕೋಣೆಯಲ್ಲಿ ನಾವು ರಾಮಲೀಲಾ ನಾಟಕ ಆಡಿದ್ದೆವು. ನನಗೆ ರಾವಣನ ತಂಗಿ ಶೂರ್ಪನಖಿಯ ಪಾತ್ರ. ನಾಟಕಕ್ಕೆ ನನ್ನ ತಾಯಿಯ ಬಟ್ಟೆಗಳನ್ನು ಬಳಸಿಕೊಂಡಿದ್ದೆ. ಬೂದಿ, ಸೀಮೆಸುಣ್ಣದ ಪುಡಿ, ಕಪ್ಪು ಕಾಡಿಗೆ, ಕುಂಕುಮ, ಇವೇ ನಮ್ಮ ಪ್ರಸಾಧನ ಸಾಮಗ್ರಿಗಳು. ಒಂದು ಕೃತಕವಾದ ಮೂಗನ್ನು ಗಟ್ಟಿಯಾದ ರಟ್ಟಿನಿಂದ ಮಾಡಿದ್ದೆವು. ಅದಕ್ಕೆ ಬಣ್ಣ ಹಚ್ಚಿ ನನ್ನ ಮುಖದ ಮೇಲೆ ಹೇಗೋ ಅಂಟಿಸಿದ್ದರು. ನಮ್ಮ ಕಲಾ ಆಚಾರ್ಯರ ಪ್ರೌಢಿಮೆಯ ಫಲ ಇದೆಲ್ಲಾ. ರಟ್ಟಿಗೆ ಕುಂಕುಮದ ನೀರನ್ನು ಚೆನ್ನಾಗಿ ಮೆತ್ತಿದ್ದರಾದ್ದರಿಂದ ಲಕ್ಷ್ಮಣನು ನನ್ನ ಮೂಗು ಕುಯ್ದಾಗ ರಕ್ತವು ಧಾರಾಕಾರವಾಗಿ ಸೋರಿತ್ತು.

ಇದೆಲ್ಲಾ ಏಕೆ ಹೇಳುತ್ತಿದ್ದೇನೆಂದರೆ ಇಂದು ನನ್ನ ಮೊಮ್ಮಗನ ಶಾಲೆಯಲ್ಲೇನಾದರೂ ನಾಟಕದ ಸಂದರ್ಭ ಬಂದರೆ ಅಲ್ಲಿಯವರು ಯಾವ ಸಂಕೋಚವೂ ಇಲ್ಲದೆ ಅದು ತಾ, ಇದು ತಾ, ಇಂಥ ಬಟ್ಟೆ ಹೊಲಿಸಿಕೊ, ಅಂಥ ಮೂಗು ಕೊಂಡು ತಾ, ಎಂದೆಲ್ಲಾ ಹೇಳಿ ನಮ್ಮಿಂದ ಒಂದೆರಡು ಸಾವಿರ ರೂಪಾಯಿ ಪೀಕಿಸುತ್ತಾರೆಯೇ ವಿನಾ ಹೇಗೋ ನೀವೇ ಎಲ್ಲಾ ಸವರಿಸಿಕೊಳ್ಳಿ ಎಂದು ಹೇಳುವುದಿಲ್ಲ. ಕೊಂಡ ವಸ್ತುಗಳೆಲ್ಲಾ ನಾಟಕದ ನಂತರ ದಂಡ ತಾನೆ ! ಕೆಲವು ನಿಮಿಷಗಳಿಗಾಗಿ ಇಷ್ಟು ಖರ್ಚು ಹೇರಲು ಅವರಿಗೇನೂ ಮುಜುಗರವಿಲ್ಲ. ನಾಲ್ಕು ವರ್ಷದ ಮೊಮ್ಮಗನಿಗೆ ಕಡೆ ಘಳಿಗೆಯಲ್ಲಿ ರಂಗಮಂಚ ಏರಲು ಭಯವಾದರೆ ಇಷ್ಟೂ ಕೊಂಡದ್ದು ವ್ಯರ್ಥ. ಅಂದರೆ, ನಮ್ಮ ಇಂದಿನ ಶಾಲೆಗಳಲ್ಲಿ ಶಿಕ್ಷಣದ ಹೆಸರಿನಲ್ಲಿ ಏನೆಲ್ಲಾ ವ್ಯರ್ಥವಾದ ಖರ್ಚುಗಳು, ದುಂದುಗಾರಿಕೆ, ನಡೆಯುತ್ತವೆಂಬುದಕ್ಕೆ ಇದು ಉದಾಹರಣೆ, ಅಷ್ಟೆ. ಇಂತಹ ನೂರು ಬೇರೆ ಉದಾಹರಣೆಗಳನ್ನು ಕೊಡಬಹುದು. ನಮ್ಮ ಘನತೆವೆತ್ತ ಶಾಲೆಗಳ ಸಂಪ್ರದಾಯ ಈ ಮಟ್ಟಕ್ಕೆ ಇಳಿದಿದೆ. ಈ ದಂಧೆಯಲ್ಲಿ ವಿದೇಶಿ ಬಹುರಾಷ್ಟ್ರೀಯ ಕಂಪೆನಿಗಳು, ಭಾರಿ ಉದ್ದಿಮೆಗಳು, ಈ ಅನಿವಾಸಿ ಭಾರತೀಯರು, ಎಲ್ಲಾ ಅನೇಕ ವಿಧಗಳಲ್ಲಿ ಶಾಮೀಲಾಗಿದ್ದಾರೆ. ಅವರೇ ರಜಾ ದಿನಗಳಲ್ಲಿ ದುಬಾರಿ ಪ್ರವಾಸಗಳನ್ನು ಆಯೋಜಿಸುವವರು. ಜೊತೆಗೆ ಶೈಕ್ಷಣಿಕ ಚಟುವಟಿಕೆಗಳು ಎಂದು ಎಂತೆಂಥಹದ್ದೋ ಖರ್ಚುಗಳನ್ನು ಹೇರಿ ವ್ಯಾಪಾರ ಕುದುರಿಸಿಕೊಳ್ಳುತ್ತಾರೆ. ಶಾಲೆಯ ಆಡಳಿತ ವರ್ಗ ಇದಕ್ಕೆಲ್ಲಾ ತನ್ನ ಸಮ್ಮತಿ ನೀಡುತ್ತದೆ. ತನ್ನ ಲಾಭಾಂಶವನ್ನೂ ಹೆಚ್ಚಿಸಿಕೊಳ್ಳುತ್ತದೆ. ಈಗಂತೂ ಮಾಹಿತಿ ತಂತ್ರಜ್ಞಾನದ ಪಿಡುಗೂ ಸೇರಿಬಿಟ್ಟಿದೆಯಾದ್ದರಿಂದ ಶಾಲೆಗೆ ಹೋಗುವ ಮಗುವಿಗೆ ಸೆಲ್-ಫೋನ್ ಬೇಕು, ತರಹೆವಾರಿ ಕಂಪ್ಯೂಟರ್‌ಗಳು ಬೇಕು, ವೀಡಿಯೋ ಆಟಗಳು ಬೇಕು. ಹೀಗೇ ಇನ್ನೂ ಏನೇನೋ. ಅವುಗಳಲ್ಲಿ ಬಹುತೇಕ ಯಾವ ಪ್ರಯೋಜನವೂ ಇಲ್ಲದ ದಂಡದ ವಸ್ತುಗಳು, ಕೆಲವಂತೂ ಮಕ್ಕಳಿಗೆ ಮಾರಕವಾದುವು; ಉದಾಹರಣೆಗೆ, ಇಂಟರ್‌ನೆಟ್‌ನಲ್ಲಿ ಸಿಕ್ಕುವ ಪೋಲಿ ಪ್ರದರ್ಶನಗಳು ಮತ್ತು ಕ್ಯಾನ್ಸರ್ ತರಿಸುವ ಮೊಬೈಲ್ ಫೋನುಗಳು.

ಒಂದು ವಿಷಯ ನನಗೆ ಮನದಟ್ಟಾಗಿದೆ : ಈಗಿನ ಮಕ್ಕಳಿಗೆ ವಿದ್ಯಾಭ್ಯಾಸವು ಆನಂದದ ಕ್ಷಣಗಳಾಗಿಲ್ಲ. ನಮಗಿದ್ದ ಖುಷಿಯ ಅರ್ಧದಷ್ಟೂ ಇವರಿಗಿಲ್ಲವಾಗಿದೆ. ಏನೇನನ್ನೋ ತುಂಬಿ ತುರುಕಿದ ಪ್ರವಾಸಗಳು, ವಿದ್ಯುನ್ಮಾನ ಅದ್ಭುತಗಳು ಮುಂತಾದುವೆಲ್ಲಾ ಇದ್ದಾಗ್ಯೂ ಮಕ್ಕಳಿಗಿರಬೇಕಾದ ಕುತೂಹಲಗಳನ್ನು ತಣಿಸುವಂತಹ ಕಾರ್ಯಕ್ರಮಗಳಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಬೈಸಿಕಲ್ ಸಂಚಾರ, ವಿಶಾಲ ನದಿಗಳಲ್ಲಿ ಈಜುವುದು, ಅವನ್ನು ದಾಟುವುದು, ಮುಂದಿನ ಬೆಳೆ ಆರಂಭವಾಗುವ ಮುನ್ನ ಹೊಲ-ಗದ್ದೆಗಳಲ್ಲಿರುವ ಕೂಳೆಯ ಮಧ್ಯೆ ನಡೆದು ರಮಿಸುವುದು, ಕಬ್ಬಿನ ತೋಟಗಳ ಸವಿ, ಹುಚ್ಚೆಳ್ಳು ಹೂವನ್ನು ನೋಡಿ ನಲಿಯುವುದು, ಸಾಲು-ಸಾಲು ಅವರೆಕಾಯಿ ಗಿಡಗಳಲ್ಲಿ ಕಾಯಿ ಬಿಡಿಸುವುದು, ಬೆಟ್ಟ-ಗುಡ್ಡ ಹತ್ತುವುದು, ಹರಿಯುವ ನೀರಿನಿಂದ ಚಲಿಸುವ ಹಿಟ್ಟು ಬೀಸುವ ಕಲ್ಲುಗಳನ್ನು ನೋಡುವುದು – ಇಂಥವನ್ನು ನಗರವಾಸಿ ಮಕ್ಕಳು ಅನುಭವಿಸುವ ಸಾಧ್ಯತೆ ಇಲ್ಲವಾಗಿದೆ. ಅದು ನೀಡುವ ಶಿಕ್ಷಣದಿಂದ ವಂಚಿತರಾದ ಮಕ್ಕಳ ವಿದ್ಯಾಭ್ಯಾಸ ಅಪೂರ್ಣವೆನಿಸುತ್ತದೆ. ನನ್ನ ಸಂಬಂಧಿಕರ ಮೊಮ್ಮಗಳೊಬ್ಬಳು ತಾನು ಕಲಿಯುತ್ತಿದ್ದ ಕೂಚಿಪ್ಪುಡಿ ನೃತ್ಯವನ್ನು ಕೈಬಿಟ್ಟು ಇತ್ತೀಚೆಗೆ ಡಿಸ್ಕೋ ನೃತ್ಯ ಕಲಿಯಲಾರಂಭಿಸಿದಳು. ಶಾಲೆಯ ಹನ್ನೆರಡನೆಯ ತರಗತಿಯಲ್ಲಿ ಅವಳ ಸರೀಕರಿಂದ ಬಂದ ಒತ್ತಡ ತಡೆಯಲಾರದೆ ಹಾಗೆ ಮಾಡಿದ್ದಾಳಂತೆ ! ದೆಹಲಿಯ ಚಿತ್ರಮಂದಿರಗಳಲ್ಲಿ ಮಧ್ಯಾಹ್ನದ ವೇಳೆ ಶಾಲಾಮಕ್ಕಳೇ ತುಂಬಿರುತ್ತಾರೆ. ಅವರು ನೀಡುವ ಪ್ರವೇಶಧನ ಕನಿಷ್ಠ ೧೫೦ ರೂಪಾಯಿಗಳು. ಹುಡುಗ-ಹುಡುಗಿಯರು ಶಾಲೆಗಳಲ್ಲಿರಬೇಕಾದ ವೇಳೆಯಲ್ಲಿ ಚಿತ್ರ ನೋಡುವ ಹವ್ಯಾಸ ಬೆಳೆದಿದೆ. ಅನುಕೂಲಸ್ಥರ ಮಕ್ಕಳಿಗೆ ಇನ್ನೂ ಬೇರೆ ಚಟಗಳಿವೆಯಂತೆ: ಸಿಗರೇಟು, ಮಾದಕ ವಸ್ತುಗಳು, ಮದ್ಯ, ಇತ್ಯಾದಿ. ಇವೆಲ್ಲಾ ''ಅನುಭವ''ದ ವಿಸ್ತಾರವೆನ್ನುತ್ತಾರೆ. ಶಿಕ್ಷಣದ ವಿಸ್ತಾರದ ಬಗ್ಗೆ ಏನೂ ಹೇಳುವುದಿಲ್ಲ !

ಇದಕ್ಕೆ ಕೇಳಿಬರುವ ವಿವರಣೆಯೆಂದರೆ ''ಕಾಲ ಬದಲಾಗಿದೆ'' ಎಂಬುದು. ಕಾಲ ಬದಲಾದರೆ ಮೌಲ್ಯಗಳನ್ನು ತಳ್ಳಿಹಾಕಬೇಕೆ ? ಏತಕ್ಕೋಸ್ಕರ ? ಹಣದ ಆರಾಧನೆಗಾಗಿ ಮತ್ತು ಹಣದಿಂದ ಕೊಳ್ಳಬಹುದಾದ್ದನ್ನು ''ಅನುಭವಿಸಲು'' ಹಾಗೆ ಮಾಡಬೇಕೆ ? ನಮ್ಮ ಶಿಕ್ಷಣ ತಜ್ಞರು ಹಾಕಿಕೊಳ್ಳಬೇಕಾದ ಪ್ರಶ್ನೆ ಇದು; ಏಕೆಂದರೆ ಅವರೂ ತಮ್ಮ ಮಕ್ಕಳನ್ನು, ಮೊಮ್ಮಕ್ಕಳನ್ನು ಇಂತಹ ಶಾಲೆಗಳಿಗೆ ಕಳಿಸುತ್ತಾರಲ್ಲವೆ ? ನಮ್ಮ ಈ ಸನ್ನಿವೇಶದ ಅಗಾಧ ಪರಿಣಾಮ ಎಂತಹುದೆಂಬುದರ ಪರಿವೆ ಅವರಿಗಿರಬೇಕೆಂದು ನಿರೀಕ್ಷಿಸುವುದು ಸಹಜ. ಈ ಪುಟ್ಟ ಮಕ್ಕಳಿಗೆ ಈಗೆಲ್ಲಾ ಹೇಳಿಕೊಡಲಾಗುತ್ತಿರುವುದು ಹಣವನ್ನು ಅನುಭವಿಸುವುದನ್ನೇ ಹೊರತು ಜೀವನವನ್ನಲ್ಲ. ಅವರ ತಂದೆ-ತಾಯಂದಿರ ಅಹಮಿಕೆಯ ಗರಿ ಇದರಿಂದ ವಿಜೃಂಭಿಸುತ್ತದೆ. ಕ್ರಮೇಣ ಮಕ್ಕಳ ಅಹಮಿಕೆ ಕೂಡ. ಅವರ ಪ್ರತಿಯೊಂದು ಕ್ರಿಯೆಯಲ್ಲೂ ಅವರ ಹಣದ ಮದದ ಭಾವನೆ ಹರಿಯುತ್ತಿರುತ್ತದೆ. ಸಿಗರೇಟು, ಮಾದಕ ದ್ರವ್ಯ, ದುಬಾರಿ ಸಿನೆಮಾ, ವಿದೇಶಿ ಪ್ರವಾಸ, ಝಗಮಗಿಸುವ ಕಾರು ಇಂಥವನ್ನೆಲ್ಲಾ ಭೋಗಿಸುವಾಗ ಅವರ ಮನಸ್ಸಿನಲ್ಲಿ ಥಳಥಳಿಸುವುದು ಹಣ. 'ಸಂಪಾದಿಸು, ಸುಟ್ಟು ಹಾಕು' ಎಂಬುದು ಅವರ ಜೀವನೋದ್ದೇಶ. ಸಂಪಾದಿಸು, ಕದಿ, ವಂಚಿಸು, ದಾದಾಗಿರಿ ಮಾಡು, ಕ್ಷುದ್ರ ರಾಜಕೀಯ ಮಾಡು, ಏನಾದರೂ ಮಾಡು, ಪರವಾಗಿಲ್ಲ ; ಆದರೆ ಸುಡಲು ಸಾಕಷ್ಟು ಶೇಖರವಾಗುವಂತೆ ನೋಡಿಕೊ. ಶ್ರೀಮಂತ ಶಾಲೆಗಳಲ್ಲಿ ನಾವು ಪೋಷಿಸುತ್ತಿರುವುದು ಈ ಲಕ್ಷಣವುಳ್ಳ ಬೃಹನ್ನೌಕೆಗಳನ್ನು, ಮೃಗೀಯ ಶಕ್ತಿಗಳನ್ನು, ಹಣ ಚೆಲ್ಲಾಡುವವರನ್ನು.



*ಡಾ|| ಮೇಘನಾದ ಸಹ*

ಇದಕ್ಕೆ ಪರ್ಯಾಯವಾಗಿ, ನಾವು ಬೆಳೆದದ್ದು ಜೀವನದ ರಸವನ್ನು ಹೀರಿಕೊಳ್ಳುವ ರೀತಿಯಲ್ಲಿ. ನಾವೇನೂ ಋಷಿಗಳಂತೆ ಆಶ್ರಮವಾಸಿಗಳಾಗಿರಲಿಲ್ಲ. ಶಿಕ್ಷಣವನ್ನು ನಾವೂ ಶಾಲೆಗಳಲ್ಲೇ ಪಡೆದದ್ದು. ಆದರೆ ನಮಗೆ ಕಲಿಸಲಾದ ಜೀವನ ವಿಧಾನದಲ್ಲಿ ಶ್ರೀಮಂತಿಕೆಯ ವೈಭವೀಕರಣವಿರಲಿಲ್ಲ. ಹಣಕ್ಕಿಂತಲೂ ಸುತ್ತಣ ಪರಿಸರ ದೊಡನೆ ಸೇರ್ಪಡೆ ಹೊಂದುವುದೇ ನಮಗೆ ಸಂತೋಷದ ಕ್ಷಣಗಳನ್ನು ನೀಡಿದ್ದು. ಉಪವಾಸ ಮೊದಲು, ಊತಣ ಆಮೇಲೆ, ಎಂಬುದು ನಮ್ಮ ಸಂಸ್ಕೃತಿಯಾಗಿತ್ತು. ಶ್ರೀಮಂತ ನಾಗಲಿ, ಬಡವನಾಗಲಿ, ಮೊದಲು ಕಟ್ಟುನಿಟ್ಟಾಗಿ ಸರಳತೆ ಯನ್ನು ಕಲಿಯುತ್ತಿದ್ದ. ನಮ್ಮ ಪರಿಸರವನ್ನು ರಚಿಸಿಕೊಳ್ಳುತ್ತಿದ್ದ ವರು ನಾವೇ. ತಂದೆ-ತಾಯಂದಿರು ಹಿನ್ನೆಲೆಯಲ್ಲೇ ಉಳಿಯುತ್ತಿದ್ದರು. ಅವರು ನಮ್ಮನ್ನು ಅತಿಯಾಗಿ ಮುದ್ದಿಸುತ್ತಿರಲಿಲ್ಲ. ಪದವಿ ಪಡೆದು ಮದುವೆಯಾಗುವ ತನಕ ಪೋಷಿಸುವ ಇಂದಿನ ತಂದೆ-ತಾಯಂದಿರ ಪ್ರೀತಿಗಿಂತ ಅವರ ಪ್ರೀತಿ ಕಡಿಮೆಯಾಗೇನೂ ಇರಲಿಲ್ಲ. ನಮ್ಮ ಗ್ರಹದ ಮೇಲೆ ಮಾನವ ಜನಾಂಗ ಉಳಿಯಬೇಕಾದರೆ, ಅಷ್ಟೇಕೆ, ನಮ್ಮ ಗ್ರಹ ಉಳಿಯಬೇಕಾದರೆ, ಆ ಮೌಲ್ಯಗಳು ಬಹಳ ಪ್ರಸ್ತುತವಾಗುತ್ತವೆ; ಅಂದಿಗಿಂತಲೂ ಹೆಚ್ಚು ಪ್ರಸ್ತುತವೆಂದರೂ ತಡೆಯುತ್ತದೆ.

ಇದಕ್ಕೊಂದು ನಿದರ್ಶನ ನೀಡಬಯಸುತ್ತೇನೆ. ನಲವತ್ತರ ದಶಕದ ಮೊದಲಲ್ಲಿ ನಾನು ಅಲಹಾಬಾದಿನ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ (ಇಂದಿನ ಪ್ರೀ-ಯೂನಿವರ್ಸಿಟಿ) ಓದುತ್ತಿದ್ದೆ. ಒಮ್ಮೆ ವರ್ತಮಾನ ಪತ್ರಿಕೆಯಲ್ಲಿ ಸುದ್ದಿಯೊಂದು ಪ್ರಕಟವಾಗಿತ್ತು ; ಖ್ಯಾತ ಭೌತವಿಜ್ಞಾನಿ ಡಾ|| ಮೇಘನಾದ ಸಹ ಅಲಹಾಬಾದಿಗೆ ಬಂದಿದ್ದರೆಂದು. (ಕಲ್ಕತ್ತಾದ ''ಸಹ ವಿಜ್ಞಾನ ಸಂಸ್ಥೆ'' ಇರುವುದು ಅವರ ಹೆಸರಲ್ಲಿ). ಆಗ್ಗೆ ನಮ್ಮ ದೇಶದಲ್ಲಿದ್ದ ಐದು ಮಂದಿ ಲಂಡನ್ನಿನ ರಾಯಲ್ ಸೊಸೈಟಿಯ ಫೆಲೋಗಳಲ್ಲಿ ಅವರೂ ಒಬ್ಬರು. ಅಲಹಾಬಾದಿನಲ್ಲಿದ್ದ ಇನ್ನೊಬ್ಬ ಫೆಲೋ ಡಾ|| ಕೆ. ಎಸ್. ಕೃಷ್ಣನ್ ಅವರ ಮನೆಯಲ್ಲಿ ಮೇಘನಾದರು ತಂಗಿದ್ದರು. ನಮ್ಮ ವಿಶ್ವವಿದ್ಯಾನಿಯಲದ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿದ್ದವರು ಕೃಷ್ಣನ್. ನಮ್ಮ ಕಾಲೇಜಿನ ವಿದ್ಯಾರ್ಥಿ ಸಂಘದ ''ಸಾಮಾಜಿಕ ಕಾರ್ಯದರ್ಶಿ'' ನಾನಾಗಿದ್ದೆ. ಆ ಘನವಾದ ಪದವಿಯಲ್ಲಿದ್ದವರ ಕೆಲಸ ಕಾಲೇಜಿನಲ್ಲಿ ಉಪನ್ಯಾಸಗಳನ್ನು ಆಯೋಜಿಸುವುದು, ಸಮಾರಂಭಗಳನ್ನು ನಡೆಸುವುದು. ನನ್ನ ಸ್ನೇಹಿತ ಮತ್ತು ನಾನು ಬೈಸಿಕಲ್ ಹತ್ತಿ ಡಾ|| ಕೃಷ್ಣನ್‌ರ ಮನೆಗೆ ಹೋದೆವು. ಅವರ ಮನೆಯೂ ವಿಶ್ವವಿದ್ಯಾನಿಲಯದ ಆವರಣದಲ್ಲೇ ಇತ್ತು. ಅಷ್ಟೇನೂ ದೊಡ್ಡ ಭವ್ಯ ಬಂಗಲೆ ಅದಾಗಿರಲಿಲ್ಲ. ಸುತ್ತ ಒಂದು ಮೋಟುಗೋಡೆ. ಮೊಗಸಾಲೆ, ಮುಖಮಂಟಪ ಎಂಥದೂ ಇಲ್ಲದ ಮನೆ. ಜಮಖಾನದಂತಹ ಒಂದು ಬಾಗಿಲು ಪರದೆ ಮಾತ್ರ ಇತ್ತು. ಮುಂಭಾಗದ ಕೋಣೆಯಲ್ಲಿ ಒಂದು ದೊಡ್ಡ ಮಂಚ ಬಿಟ್ಟರೆ ಎಲ್ಲಾ ಖಾಲಿ. ಮಂಚವೂ ಹಗ್ಗದಿಂದ ಹೆಣೆದದ್ದು. ಬಾಗಿಲು ತಟ್ಟುವುದು, ಭೇಟಿಗಾಗಿ ಮೊದಲೇ ಸಮಯ ನಿಗದಿಗೊಳಿಸಿಕೊಳ್ಳುವುದು, ಇವೆಲ್ಲಾ ನಮಗೆ ತಿಳಿದಿರದಿದ್ದ ಕಾಲ. ನೇರವಾಗಿ ಮನೆಯ ಒಳಹೊಕ್ಕೆವು. ಎಡಗಡೆಗೆ ಒಂದು ಕೋಣೆ, ಅಲ್ಲಿಂದ ಮುಂದಕ್ಕೆ ಇನ್ನೊಂದು ಕೋಣೆ. ಒಂದು ಮೇಜು, ಮೂರು ಕುರ್ಚಿಗಳು ಮತ್ತು ಒಂದು ಚಿಕ್ಕ ಮಂಚ ಹಿಡಿಸಬಹುದಾದಷ್ಟು ದೊಡ್ಡ ಕೋಣೆ ! ಎರಡು ಕಿಟಕಿಗಳಿಂದಾಗಿ ಕೋಣೆಯಲ್ಲಿ ಬೆಳಕು ಬೇಕಾದಷ್ಟು ಚೆಲ್ಲಿತ್ತು.

ಬಾಗಿಲಿಗೆ ಮುಖಮಾಡಿ ಕುರ್ಚಿಯಲ್ಲಿ ಪ್ರೊಫೆಸರ್ ಕೃಷ್ಣನ್ ಕುಳಿತಿದ್ದರು. ನಮ್ಮ ಕಡೆಗೆ

## ಮುಖಾಮುಖಿ

ಹಾರುವ ಲೋಹದ ಹಕ್ಕಿಯ ಡಿಕ್ಕಿ ಉಕ್ಕಿನ ಮರಗಳಿಗೆ
ಕಲ್ಲು ಉರಿದು ಉಕ್ಕು ಕರಗಿ ಗಗನದೇಣಿಗಳು ಮರಳಿದುವು ಧರೆಗೆ
ಜತೆಗೆ ದೇಹಗಳು, ಕಂಪ್ಯೂಟರೆಂಟನ, ನರಮಂಡಲ, ಮೆದುಳು,
ಶ್ರೇಷ್ಠತ್ವದ ಪ್ರತಿಷ್ಠೆ , ಪುಡಿಪುಡಿ ಮಹಡಿ ಮೇಲಿನ ಮಹಡಿ;
ಹೊಗೆ ಬೆಂಕಿಗುಡ್ಡದಾಚೆ ಮಧ್ಯಯುಗದ ವಿಕಾರದಮಲು;
ಸೇಡಿಗೆ ಕೋಡು ಮೂಡಿಸಿಕೊಂಡ ಶಿಲಾಯುಗದ ಕರಾಳ ನೆರಳು;
ಹಿಂದೆ ಹಿಂದಕೆ ನಡೆವ ಹಿಮ್ಮೊಗದ ಪಾದಗಳ ಪರಿಶೆ;
ಪ್ರಜಾಪ್ರಭುತ್ವಕ್ಕೆ ಧಕ್ಕೆಯೊಡ್ಡುವ ಕಿರಾತ ಕೇಕೆ.

ಕತ್ತಲಲ್ಲಿ ಕಣ್ಸನ್ನೆ ಮಾಡಿ ಹುಡುಕುತಿವೆ ತಾರೆಗಳು;
ನೆಲೆಯನ್ನರಸುತಿವೆ ಅಡ್ಡಾಡುವ ಮೋಡಗಳು;
ಗುರಿಯತ್ತ ಹರಿಯುತಿದೆ ಹಡ್ಸನ್ ನದಿ, ಮೌನಿ;
ತುಂಬಿ ಮುಂಬರಿವ ಗಂಗೆಗೆ ಹಾನಿ, ನೋವಿನ ನೆನಪು.
ಕೊಂದು ಸಾಯುವ ರೋಗಮೂಲದ ಪತ್ತೆ ಮತ್ತೂ ಜಟಿಲ;
ಅಭೇದ್ಯ ಗುಪ್ತಜಾಲ, ಮದ್ದಿನೊಳಗೇ ರೋಗಾಣು ಪ್ರಬಲ !

**ಕುತ್ಯಾಳ ನಾಗಪ್ಪಗೌಡ (ಕಿರಣ)**
ಕಿರಣಕುಟೀರ, ಸುಳ್ಯ-೫೭೪ ೨೩೯



ಬೆನ್ನು ಮಾಡಿ ಕೃಷ್ಣನ್ ಎದುರಿಗೆ ಇನ್ನೊಂದು ಕುರ್ಚಿಯಲ್ಲಿ ಸಹ ಕುಳಿತಿದ್ದರು. ಕೋಣೆಯಲ್ಲಿ ಗಮನಿಸಬಹುದಾಗಿದ್ದ ಇನ್ನೊಂದು ವಿಷಯವೆಂದರೆ ಮೇಜಿನ ಮೇಲೆಲ್ಲಾ ತುಂಬಿದ್ದ ಪುಸ್ತಕಗಳು. ಪಕ್ಕದ ಕಪಾಟುಗಳೂ ಪುಸ್ತಕಗಳಿಂದ ಭರ್ತಿಯಾಗಿದ್ದವು. ಮಂಚದ ಮೇಲಿನ ಹಾಸಿಗೆಯ ಮೇಲೆಯೇ ಕುಳಿತು ನಾವು ಮೇಘನಾದರನ್ನು ಉಪನ್ಯಾಸ ನೀಡಲು ಆಹ್ವಾನಿಸಿದೆವು. ಮರುದಿನ ರಾತ್ರಿ ಒಂಬತ್ತು ಗಂಟೆಗೆ ಕಲ್ಕತ್ತೆಗೆ ಹಿಂದಿರುಗಲು ಅವರಿಗೆ ರೈಲು ಇದ್ದಿತಾದ್ದರಿಂದ ಕಾಲೇಜಿಗೆ ಸಂಜೆ ಆರು ಗಂಟೆಗೆ ಬರಲು ಸಾಧ್ಯವೆಂದು ಹೇಳಿ ಒಪ್ಪಿದರು. ಅಂತಹ ದೊಡ್ಡ ವಿಜ್ಞಾನಿಯನ್ನು ಇಷ್ಟು ಸುಲಭವಾಗಿ ನಮ್ಮ ಕಾಲೇಜಿಗೆ ಕರೆತರಲು ಸಾಧ್ಯವಾದೀತೆಂದು ನಾವು ಎಣಿಸಿರಲಿಲ್ಲ. ನಮ್ಮ ಊಹೆಗೆ ನಿಲುಕದ ಸರಳ ಸಜ್ಜನರು ಅವರು. ಮಾರನೆಯ ದಿನ ಒಂದು ಜಟಕಾ ಬಂಡಿಯಲ್ಲಿ ಅವರನ್ನು ಕಾಲೇಜಿಗೆ ಕೊಂಡೊಯ್ದೆವು. ರಾಯಲ್ ಸೊಸೈಟಿಯ ಫೆಲೋ ಇರಬಹುದೇ ಈತ ಎನ್ನಿಸುವಷ್ಟು ಸರಳ ವ್ಯಕ್ತಿ. ಆಡಂಬರದ ಲಕ್ಷಣವೇ ಇಲ್ಲದವರು. ಅವರೆಷ್ಟು ಸ್ಫೂರ್ತಿ ಕೊಡುವ ಮನುಷ್ಯರೆಂದರೆ ಹಿಂದಿರುಗುವಾಗ ಅವರ ಜಟಕಾ ಬಂಡಿಯ ಹಿಂದೆ ಬೈಸಿಕಲ್ಲುಗಳನ್ನೇರಿ ನಾವೂ ಡಾ॥ ಕೃಷ್ಣನ್‌ರ ಮನೆಯತ್ತ ಹೊರಟೆವು ! ಮನೆಯಲ್ಲಿ ಸ್ವಲ್ಪ ಊಟ ಮಾಡಿ ರೈಲು ನಿಲ್ದಾಣಕ್ಕೆ ಹೊರಟರು, ನಾವೂ ಅವರೊಡನೆ ಹೊರಟೆವು. ರೈಲಿನಲ್ಲೊಂದು ದ್ವಿತೀಯ ದರ್ಜೆಯ ಕಂಪಾರ್ಟ್‌ಮೆಂಟ್ ಇತ್ತು. ಅದರಲ್ಲಿ ಒಂದು ಬರ್ತ್ ಹಿಡಿದು ತಮ್ಮ ಹಾಸಿಗೆ ಸುರುಳಿಯನ್ನು ಹರಡಿಸಿದರು. ಸುರುಳಿ ಬಿಚ್ಚುವಾಗ ಒಂದಷ್ಟು ಪುಸ್ತಕಗಳು ತಪತಪನೆ ಕೆಳಕ್ಕೆ ಉರುಳಿದುವು. ಅಂಥ ಅದ್ಭುತ ಹಾಸಿಗೆ ಸುರುಳಿ ಅದು !

ಇಂತಹ ಸರಳ ವ್ಯಕ್ತಿಯನ್ನು ಕಂಡು ನಾವು ಮೂಕವಿಸ್ಮಿತರಾದೆವು. ಇಡೀ ಪ್ರಪಂಚದಲ್ಲಿ ಖ್ಯಾತಿ ಗಳಿಸಿದ್ದ ಈತ ಅಸಾಧಾರಣ ಪ್ರತಿಭಾವಂತನೆಂದು ಕೇಳಿದ್ದೆವು. ಆದರೆ ಅವರ ಜೀವನ ಕ್ರಮ ಅತ್ಯಂತ ಸಾಮಾನ್ಯನೊಬ್ಬನ ಜೀವನಕ್ರಮಕ್ಕಿಂತ ಭಿನ್ನವಾಗಿರಲಿಲ್ಲ. ಸಹ ಮತ್ತು ಕೃಷ್ಣನ್‌ರ ಸರಳತೆಯನ್ನು ನಂಬಲು ಅದನ್ನು ನೋಡಬೇಕಿತ್ತು; ಅಷ್ಟು ಅನೂಹ್ಯವಾದ ಸರಳತೆ ಅವರಿಬ್ಬರದು. ಅವರ ಮಹಾನ್ ವ್ಯಕ್ತಿತ್ವಕ್ಕೆ ಅದೊಂದು ಮೆರುಗು. ಶ್ರೀಮಂತಿಕೆಯಲ್ಲಿ ಹೊರಳಾಡಿ ಮೇಲೆ ಬಂದವರಲ್ಲ. ಹಣವೆಂದರೆ ಏನೋ ಅಮೋಘವಾದ ಶ್ರೇಯಸ್ಸೆಂದು ಅವರಿಗೆಂದೂ ಅನ್ನಿಸಿರಲಿಕ್ಕಿಲ್ಲ. ಪ್ರತಿಭೆಯ ಹೊರಹೊಮ್ಮುವಿಕೆಗೆ ಅವರು ಹಣವನ್ನು ಸಾಧನ ಮಾಡಿಕೊಳ್ಳಬೇಕೆಂದು ಎಂದೂ ಭಾವಿಸಿದಂತಿರಲಿಲ್ಲ. ಕೃಷ್ಣನ್‌ರ ಮನೆಯ ಕೋಣೆಗಳು ಅವರು ವಿದ್ಯಾರ್ಥಿಯಾಗಿದ್ದಾಗಿನ ಅವರ ವಿದ್ಯಾರ್ಥಿನಿಲಯದ ಕೋಣೆಗಳಿಗಿಂತ ಭಿನ್ನವಾಗಿರಲಿಲ್ಲವೇನೋ ! ವಿದ್ಯಾರ್ಥಿದೆಸೆಯ ನಂತರದ ವರ್ಷಗಳಲ್ಲಿ ಅವರ ಸರಂಜಾಮಿಗೆ ಬೇರೇನನ್ನೂ ತುರುಕಿಕೊಂಡಂತೆ ಕಾಣುತ್ತಿರಲಿಲ್ಲ ಅವರು. ಅವರ ದೈನಂದಿನ ಬದುಕಿಗೆ, ಮನೆಯ ಖರ್ಚಿಗೆ ಮತ್ತು ಪುಸ್ತಕಗಳಿಗೆ ಬಿಟ್ಟು ಅವರಿಗೆ ಹಣದ ಅಗತ್ಯ ಕಾಣಲಿಲ್ಲ. ಅವರು ಗಳಿಸಿಕೊಂಡಿದ್ದೆಲ್ಲಾ ಬೌದ್ಧಿಕ ಸಂಪತ್ತೇ. ಜೀವನದ ಅನಗತ್ಯ ಸರಕುಗಳ ಬಗೆಗಿನ ಈ ರೀತಿಯ ವಿಮುಖತೆಯನ್ನು ಅವರು ಬಾಲ್ಯದಲ್ಲಿ ಕಲಿತಿದ್ದೇ ಇರಬೇಕು. ನಮ್ಮ ಶ್ರೀಮಂತ ಶಾಲೆಗಳು ಇಂತಹ ಮೌಲ್ಯವನ್ನು ವಿದ್ಯಾರ್ಥಿಗಳ ಪ್ರಜ್ಞೆಗೆ ಬೆಸೆಯಬಲ್ಲವೇನು ? ಸ್ವಲ್ಪ ಸಮಾಧಾನಚಿತ್ತದಿಂದ ನಮ್ಮ ದೇಶದ ಹಿಂದಿನ ದಿನಗಳನ್ನು ನಮ್ಮ ಮುಂದೆ ತಂದುಕೊಳ್ಳುವುದು ಆರೋಗ್ಯಕರವೆನಿಸುತ್ತದೆ. ಗಾಂಧಿ, ಟಾಗೋರ್, ತಿಲಕ್, ರಾಮನ್, ವಿವೇಕಾನಂದ ಇಂಥವರು ಬಂದದ್ದು ಆ ಹಿನ್ನೆಲೆಯಲ್ಲಿ. ಒಬ್ಬಿಬ್ಬರಲ್ಲ, ಅಂತಹ ಸಾವಿರಾರು ಮಂದಿ ಬಂದರು. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದವರೆಲ್ಲಾ ಆ ಪೀಳಿಗೆಯವರೇ. ಅವರು ಮಕ್ಕಳಾಗಿದ್ದಾಗ ಅವರ ಮನಸ್ಸಿಗೆ ತುಂಬಿದ್ದೇನು ? – ಉದಾರ, ಮುಕ್ತ ವ್ಯಕ್ತಿತ್ವದ ಭಾವನೆ ಮತ್ತು ಮೌಲ್ಯಗಳ ಬಗೆಗಿನ ಆಸ್ಥೆ. ಅದು ಮಕ್ಕಳಿಗೆ ಹಿತಕರವಾದ ಪರಿಸರ. ಅಂದಿನವರ ಪೈಕಿ ಅತ್ಯಂತ ಸ್ವಾರ್ಥಿಯಾಗಿ ಬಾಳಿದವನು ಕೂಡ ಮನುಷ್ಯನ ದುರಾಸೆಗೆ ಒಂದು ಎಲ್ಲೆ ಇದೆಯೆಂದು ನಂಬಿದ್ದವನೇ, ಯಾವುದೋ ಒಂದು ಹಂತವನ್ನು ದಾಟಿ ಬಾಚುವುದನ್ನು ನಿಗ್ರಹಿಸಿದವನೇ. ಒಟ್ಟಿನಲ್ಲಿ ಪರಸ್ಪರ ಸಂಬಂಧಗಳಿಗೆ ಬೆಲೆ ನೀಡುವ ವ್ಯವಸ್ಥೆ, ಸಾಮುದಾಯಿಕ ಹಿತವನ್ನು ಕಡೆಗಾಣಿಸದಂತಹ ಕಾಳಜಿ – ಇವು ನಮ್ಮ ಆದ್ಯತೆಗಳು.

ಇಂದಿನ ನಮ್ಮ ಶ್ರೀಮಂತ ಶಾಲೆಗಳು ಮಕ್ಕಳಲ್ಲಿ ಪ್ರಬಲವಾಗಿ ತುಂಬುವ ಮೌಲ್ಯಗಳು ಏನನ್ನು ನೀಡಬಹುದು ? – ಜಾಹಿರಾತುಗಳಿಗೆ ಮಾಡೆಲ್‌ಗಳು, ಚಲನಚಿತ್ರ ತಾರೆಯರು, ಭುವನಸುಂದರಿಯರು, ನಿಜ ಜೀವನದಲ್ಲಿ ಚಿತ್ರರಂಗದ ಪಾತ್ರಗಳು, ದಾದಾಗಳು, ಕಾಳಸಂತೆಕೋರರು, ದರೋಡೆ ತಂಡಗಳು, ಕಪ್ಪು ಹಣದ ಪ್ರವರ್ತಕರು, ವ್ಯಾಪಾರ ಕುದುರಿಸುವವರು, ಪಂಚತಾರಾ ಹೋಟೆಲ್‌ಗಳ ನಿರ್ಮಾಪಕರು, ವಿದೇಶಕ್ಕೆ ತೆರಳುವ ಇಂಜಿನಿಯರುಗಳು – ವೈದ್ಯರು, ಇತ್ಯಾದಿ ! ಅವರ ವ್ಯವಹಾರದಲ್ಲಿ ಯಾವ ಸಂಕೋಚವೂ ಇಲ್ಲದೆ ಲೈಂಗಿಕತೆ, ಹಣ, ರಾತ್ರಿಯಿಡೀ ಜರುಗುವ ಪಾರ್ಟಿಗಳು ಇವೆಲ್ಲಾ ತುಂಬಿರುತ್ತವೆ. ಅದೇ ಅವರಿಗೆ ''ಸುಖ.'' ಅದೇ ಅಂತಿಮ ದಿಗಂತದಲ್ಲಿ ಮಿನುಗುವ ಆಶಯ. ನಮಗೆ ಗಾಂಧಿ ಮತ್ತು ಟಾಗೋರ್ ಧೀಮಂತರಾಗಿ ಕಂಡರೆ ಅವರಿಗೆ ಬಿಲ್ ಗೇಟ್ಸ್ ಮತ್ತು ಅಮಿತಾಭ ಬಚ್ಚನ್ ಹೀರೋಗಳು.

ನಮ್ಮ ರಾಷ್ಟ್ರೀಯ ಜೀವನ ಮತ್ತು ವ್ಯಕ್ತಿತ್ವಗಳ ಮೇಲೆ ಇದೆಲ್ಲಾ ಎಂತಹ ಘೋರ ಪರಿಣಾಮ ಬೀರಬಹುದೆಂಬುದರ ಬಗ್ಗೆ ನಾವಿನ್ನೂ ಸಾಕಷ್ಟು ಗಂಭೀರ ಚಿಂತನೆಯಲ್ಲಿ ತೊಡಗಿಲ್ಲದಿರುವುದು ಆತಂಕದ ವಿಷಯ. ಈಚಿನ ದಿನಗಳಲ್ಲಿ ಪ್ರಚಾರಕ್ಕೆ ಬಂದಿರುವ ಒಂದು ಸಂಗತಿಯೆಂದರೆ ಪಾಕಿಸ್ತಾನ ಮತ್ತು ಆಫ್ಘಾನಿಸ್ತಾನಗಳಲ್ಲಿ ಇಸ್ಲಾಮಿ ಮದ್ರಸಾಗಳು ಭಯೋತ್ಪಾದಕರನ್ನು ಹುಟ್ಟುಹಾಕುವ ತಾಣಗಳಾಗಿ ಕೆಲಸಮಾಡಿವೆಯೆಂಬುದು. ಆ ಶಾಲೆಗಳ ಪರ ಅಥವಾ ವಿರೋಧವಾಗಿ ವಾದ ಮಂಡಿಸುವುದು ನನ್ನ ಉದ್ದೇಶವಲ್ಲ. ನಾನು ಗಮನಿಸಲಿಚ್ಛಿಸುವುದು ಒಂದು ವಿಶೇಷ ಅಂಶವನ್ನು ಮಾತ್ರ : ಈ ಶಾಲೆಗಳು ಅದ್ದೂರಿಯ ಸಂಭ್ರಮಗಳಿಗೆ ಮಾರುಹೋಗಿಲ್ಲ ಮತ್ತು ಅವುಗಳ ಆಕಾಂಕ್ಷೆಗೆ ಬದ್ಧವಾಗಿ ಕೆಲಸ ಮಾಡಿವೆ. ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಶಾಲೆಯು ಎಷ್ಟು ಮಹತ್ತರ ಪಾತ್ರ ವಹಿಸಬಹುದೆಂಬುದಷ್ಟನ್ನು ಈ ಶಾಲೆಗಳನ್ನು ನೋಡಿ ಇಡೀ ವಿಶ್ವ ಬೆರಗಾಗಿದೆ. ನಮ್ಮ ಮಕ್ಕಳಿಗೆ ಶುಭ್ರ ವ್ಯಕ್ತಿತ್ವ ನೀಡುವಂತಹ ಶಾಲೆಗಳನ್ನು ಗಾಂಧಿವಾದಿಗಳಾಗಲಿ, ಕಮ್ಯುನಿಸ್ಟರಾಗಲಿ ಸ್ಥಾಪಿಸಿಲ್ಲದಿರುವುದು ಒಂದು ಸೈದ್ಧಾಂತಿಕ ಕೊರತೆಯಾಗಿ ಉಳಿದಿದೆ. ಪಾಶ್ಚಾತ್ಯ ಶಕ್ತಿಗಳು ಶಾಲೆಯು ಎಂತಹ ಆಯುಧವಾಗಬಲ್ಲುದೆಂಬುದನ್ನು ಗ್ರಹಿಸಿವೆಯೆಂಬುದು ಅಚ್ಚರಿಯ ವಿಷಯವಲ್ಲ. ಜಾಗತೀಕರಣದಂತಹ ತೀವ್ರ ದಾಳಿಯ ಸಂದರ್ಭದಲ್ಲಿ ನಮ್ಮ ಶ್ರೀಮಂತ ಶಾಲೆಗಳು ತಯಾರಿಸುತ್ತಿರುವುದು ಹುಚ್ಚೆದ್ದು ಕುಣಿಯುವ ಕೊಳ್ಳುಬಾಕರನ್ನು. ಅವರೆಲ್ಲರ ಏಕಮೇವ ಆಶಯ ಇಡೀ ಜಗತ್ತನ್ನು ತಮ್ಮ ಆಸ್ತಿಯನ್ನಾಗಿ ಮಾಡಿಕೊಳ್ಳಬೇಕೆಂಬುದು. ಅದಕ್ಕಾಗಿ ಯಾವ ನೀತಿಯನ್ನು ಬೇಕಾದರೂ ಉಲ್ಲಂಘಿಸಲು ಅವರು ಸಿದ್ಧರಿರುತ್ತಾರೆ.

ಹಾಗಿದ್ದರೆ ನಮ್ಮ ಮುಂದಿರುವ ಆಯ್ಕೆ ಯಾವುದು ? ಯಾವುದೂ ಇಲ್ಲವೇನೋ ಎನಿಸಿದರೂ ಆಶ್ಚರ್ಯವಿಲ್ಲ. ಅಮೆರಿಕಾದಲ್ಲಿ ರಾಷ್ಟ್ರೀಯ ಸಾರಿಗೆಯಾಗಿ ಖಾಸಗಿ ವಾಹನವನ್ನು ಅಂಗೀಕರಿಸಲಾಗಿದೆ. ಹಾಗೆ ಮಾಡಿದಾಗ ಮೊದಲು ಸಾರ್ವಜನಿಕ ಸಾರಿಗೆಯನ್ನು – ಅಂದರೆ ರೈಲು, ಬಸ್ಸು, ಇತ್ಯಾದಿ – ಹೆಚ್ಚು ಕಡಿಮೆ ರದ್ದು ಮಾಡಲಾಯಿತು. ನಾವು ಮಾಡಿರುವುದೇನು ? ಪಾಶ್ಚಿಮಾತ್ಯ ಮಾದರಿಯನ್ನು ಅನುಕರಿಸುವ ಶಾಲೆಗಳಿಗೆ ಮಕ್ಕಳು ನುಗ್ಗಲೆಂದು ನಮ್ಮ ಸಾಮಾನ್ಯ ಶಾಲೆಗಳನ್ನು ಅಪಮೌಲ್ಯಗೊಳಿಸಿದ್ದೇವೆ ! ಉನ್ನತ ಮತ್ತು ಮಧ್ಯಮ ವರ್ಗದ ಮಕ್ಕಳಿಗೆ ಆ ಶಾಲೆಗಳು; ಇತರರಿಗೆ ಶಾಲೆಗಳಿಲ್ಲದಿದ್ದರೂ ಪರವಾಗಿಲ್ಲ ಎಂಬ ಕಟು ಧೋರಣೆ ಇದು. ಹಿಂದೆ ಈ ಸಾಮಾನ್ಯ ಶಾಲೆಗಳಲ್ಲದೆ ಬೇರೆಯವು ಇರಲಿಲ್ಲ. ಆದ್ದರಿಂದ ಆ ಶಾಲೆಗಳಲ್ಲಿ ಒಳ್ಳೆಯ ವಿದ್ಯಾಭ್ಯಾಸ ನೀಡದೆ ಗತ್ಯಂತರವಿರಲಿಲ್ಲ. ಬಡವರು, ಬಲ್ಲಿದರು, ರಾಜಕುಮಾರರು, ಎಲ್ಲಾ ಅಲ್ಲಿಗೇ ಹೋಗಬೇಕಾಗಿತ್ತು ಮತ್ತು ಅಧ್ಯಾಪಕರು ಬೇಜವಾಬ್ದಾರಿಯಿಂದ ವರ್ತಿಸಲು ಅವಕಾಶವಿರಲಿಲ್ಲ. ಪಾಶ್ಚಾತ್ಯರ ಅನುಕರಣೆ ಮಾಡುವ ಶ್ರೀಮಂತ ಶಾಲೆಗಳು ಇಲ್ಲಿರಲಿಲ್ಲ. ದೆಹಲಿಯಂತಹ ನಗರಗಳ ಸರ್ಕಾರಿ ಶಾಲೆಗಳಿಗೆ ಒಳ್ಳೆಯ ಶೈಕ್ಷಣಿಕ ತರಬೇತು ಇರುವವರನ್ನೇ ಆಯ್ಕೆ ಮಾಡಲಾಗುತ್ತದೆ, ಸಂಬಳವನ್ನೂ ಚೆನ್ನಾಗಿ ಕೊಡಲಾಗುತ್ತದೆ. ಆದರೂ ಗುಣಮಟ್ಟ ಕುಸಿಯುತ್ತಿದೆ ಎಂದರೆ ಏನು ಹೇಳಬೇಕು ? ದೆಹಲಿಯ ಹೊರಗಣ ರಾಜ್ಯಗಳಲ್ಲಿ ಪರಿಸ್ಥಿತಿ ಇನ್ನೂ ಹೀನಾಯವಾಗಿದೆ. ಎಷ್ಟೋ ಉಪಾಧ್ಯಾಯರು ತಿಂಗಳುಗಟ್ಟಲೆ ಶಾಲೆಯತ್ತ ಮುಖವನ್ನೇ ಮಾಡುವುದಿಲ್ಲವೆನ್ನುತ್ತಾರೆ. ಮನೆಯಲ್ಲೇ ಕೂತು ಅವರು ಸಂಬಳ ಪಡೆಯುತ್ತಿದ್ದಾರಂತೆ. ಚುನಾವಣೆಗಳಲ್ಲಿ ಅವರ ಮತಗಳು ಹಾಗೂ ಅವರ ಪ್ರಭಾವದಿಂದ ಬರುವ ಮತಗಳು ಗಣನೀಯವಾದ್ದರಿಂದ ಅವರು ಕಾನೂನಿಗೆ ಹೊರತಾಗಿ ನಡೆಯಲು ಅನುವು ಮಾಡಿಕೊಟ್ಟಿರುವುದು ತಿಳಿದ ವಿಷಯವೆಂದು ತಜ್ಞರು ಹೇಳುತ್ತಾರೆ. ಚೆನ್ನಾಗಿ ಪಾಠ - ಪ್ರವಚನದಲ್ಲಿ ತೊಡಗುವುದನ್ನುಳಿದು ಈ ಅಧ್ಯಾಪಕರು ಬೇರೇನನ್ನು ಬೇಕಾದರೂ ಮಾಡಬಹುದು ! ಕೆಲವು ರಾಜಕೀಯ ಮುಂದಾಳುಗಳು ಇವರ ಬೆನ್ನಿಗಿದ್ದಾರೆ. ಶಿಕ್ಷಣ ಕ್ಷೇತ್ರದ ಸಂಪೂರ್ಣ ವ್ಯಾಪಾರೀಕರಣವು ಇದರ ಪರಿಣಾಮವೂ ಹೌದು.

ಈಗಲಾದರೂ ಆಸಕ್ತ ಜನ ಕಣ್ಣುಬಿಟ್ಟು ನೋಡಬೇಕಲ್ಲವೆ ? ಉನ್ನತ ವರ್ಗದವರಿಗೆ ಉಣಬಡಿಸುವ ಪಾಶ್ಚಾತ್ಯ ಮಾದರಿಯ ಈ ಶ್ರೀಮಂತ ಖಾಸಗೀ ಶಾಲೆಗಳು ಹೊಸ ನಮೂನೆಯ ಭಯೋತ್ಪಾದಕರ ಪೀಳಿಗೆಯೊಂದನ್ನು ಹುಟ್ಟುಹಾಕುತ್ತಿದೆ. ಪಾಕಿಸ್ತಾನ ಮತ್ತು ಆಫ್ಘಾನಿಸ್ತಾನಗಳ ಇಸ್ಲಾಮಿ ಮದ್ರಸಾಗಳು ನೀಡಿರುವ ಭಯೋತ್ಪಾದಕರಿಗಿಂತಲೂ ಹೆಚ್ಚು ಕ್ರೂರಿಗಳಾದ ನವ ಭಯೋತ್ಪಾದಕರನ್ನು ಈ ನಮ್ಮ ಶಾಲೆಗಳು ಸೃಷ್ಟಿಸಿ ನಮ್ಮ ಭವಿಷ್ಯವನ್ನು ಭಗ್ನಗೊಳಿಸಬಹುದೆಂಬ ಎಚ್ಚರ ನಮಗಿಲ್ಲದಿದ್ದರೆ ಮುಂದೆ ಜನಸಾಮಾನ್ಯರು ನಮ್ಮನ್ನು ಶಪಿಸಬೇಕಾದೀತು.

*(ದೆಹಲಿಯ 'ದಿ ಸ್ಟೇಟ್ಸ್‌ಮನ್' ಪತ್ರಿಕೆಯ ಜಂಟಿ ಸಂಪಾದಕರಾಗಿದ್ದ ಶ್ರೀ ಎಂ. ಬಿ. ಲಾಲ್ ಅವರ ಆಂಗ್ಲ ಲೇಖನವನ್ನು ಕನ್ನಡದಲ್ಲಿ ಸಿದ್ಧಗೊಳಿಸಿದವರು ಜಿ. ರಾಮಕೃಷ್ಣ).*

ಎಂ. ಬಿ. ಲಾಲ್
ಡಿ-೩೦, ಪ್ರೆಸ್ ಎನ್‌ಕ್ಲೇವ್, ಸಾಕೇತ್, ನವದೆಹಲಿ-೧೧೦ ೦೧೭

# ನಗಾಲಿಗಾನು

## ಅ. ರಾ. ಮಿತ್ರ

ಅಧಿಕಾರ ಇಲ್ಲದಾಗ ತೂಕದ ಮಾತು
ಸಿದ್ಧರಾಮಯ್ಯ ಸಿಂಧ್ಯ
ಬಂದ್ಮೇಲೆ ಯಾಕೆ ಹಾಳಾಗ್ತಾರೆ
ಗೊತ್ತಾಗಲಿಲ್ಲ ಅಂಧ್ಯ ?



ರಿಟೈರಾಗ್ತಿನಾಗೀನಂತ
ಹೆದರಿಸ್ತಾರೆ ಹೆಗಡೆ
ಬರೀ ದಾಳ ಉರುಳಿಸ್ತಾರೆ
ಉದುರ್‍ಹೋಗಿದ್ರೂ ಪಗಡೆ



ಬದುಕಿನೊಂದಿಗೆ ಬೆರೆತ ನಮ್ಮ ಕಾರಂತ
ನಮ್ಮ ಜನರಿಗೆ ಹೇಳಿದ್ದು ಏನಂತ ?
''ಗಟ್ಯಾಗಿ ಬದುಕು ಜೊಳ್ಳುಗಳ ಹಾರಿಸು
ಇಲ್ಲದಿರೆ ನಿನ್ನ ಬದುಕು ಬುರ್ನಾಸು !''




'ಕನ್ನಡಕ್ಕಾಗಿ ಎಲ್ಲವನು ಕೊಡ ಸಿದ್ಧ'
-ಶಕ್ತಿ ಕೇಂದ್ರದ ಚಿದಾನಂದ ವಾಣಿ.
'ರಕ್ತವೊಂದನ್ನು ಬಿಟ್ಟು' ಎನ್ನಬೇಕೇ ಪೋಲಿ
ಪಾಪ ಎಲ್ಲಿದೆ ರಕ್ತ ಅವರ ಮೈಲಿ



ಕೀನ್ಯಾಕೈಲೂ ಹೊಡುಸ್ಕೋತೀವಿ
ನೋಡಿರಿ ನಮ್ಮ ಪ್ರತಾಪ
ಎಂದರು ನಮ್ಮ ಗಂಗೂಲಿ
ಸಿಕ್ಕರೆ ಸಾಕು ದಿನಗೂಲಿ

ಹೆಣ್ಣು : ಲೋಕವೇ ಈಗ ಆಗಿದೆ ಮೇಲುಕೋಟೆ
ನೋಡ್ತಾ ಇರಿ ಮಾಡ್ತೀವಿ ಫೀಮೇಲ್ ಕೋಟೆ
'ಹಿ'ಗೆ ಬದಲು 'ಷಿ'
ಗಂಡು : ನಿಮ್ದಿನ್ಮೇಲೆ 'ಷಿ' ಪಾಕ್ರಸಿ. ನಮ್ದೆಲ್ಲ 'ಹಿ'ಪ್ಪಾಚಾರ



ವರಕವೀರಿ ನಮ್ ಸಾಧನಕೇರಿ ಬೇಂದ್ರೆ
ಪ್ರಾಣ ಅವರ್ಗೆ ಯಾರಾದ್ರೂ ನೂ ಅಂಕೆ-ಸಂಖ್ಯೆ ಎಂದರೆ
ಹಾಡಿನ ಮೋಡಿ ಗಾಳ ಎಸೆದ್ರು, ಏನು ಅವರ ಲಕ್ಷ್ಯ ?
ಬಿದ್ವಿ ನಾವು ಮೀನುಗಳೆಲ್ಲ ಲಕ್ಷ ಲಕ್ಷ ಲಕ್ಷ !

ಅ. ರಾ. ಮಿತ್ರ
ನಂ.ಬಿ-೬, ಕೆ. ಹೆಚ್. ಬಿ. ಕಾಲೋನಿ, ಪುಟ್ಟೇನ ಹಳ್ಳಿ
ಯಲಹಂಕ, ಬೆಂಗಳೂರು-೫೬೦ ೦೬೪

# ನಾಮಪೀಡಿತರ ಎಡೆಯಲ್ಲಿ

ಅಕ್ಷರ ಮಾತ್ರವನ್ನು ಕಲಿಸಿದವನೂ ಗುರು, ಆ ಗುರುವು ದೇವರಿಗೆ ಸಮಾನ, ವಿದ್ಯಾದಾನ ಮಾಡುವ ಅಧ್ಯಾಪಕ ವೃತ್ತಿ ಬಲು ಪುಣ್ಯದ ವೃತ್ತಿ ಎಂದೆಲ್ಲ ಹಿಂದೆ ನಂಬುಗೆಯಿತ್ತಂತೆ. ಅದು ಗುರುಕುಲ ಕಾಲದ ಮಾತಾಯ್ತು. ಯುಗಗಳು ಉರುಳಿದಂತೆ ಗುರುಪಟ್ಟದ ಗುರುತ್ವ ಮಾಯವಾಗಿದೆ ಎನ್ನುತ್ತಾರೆ. ಗುರುಕುಲ ಸ್ಥಾಪಿಸಲು ಕಾಡೇ ಉಳಿದಿಲ್ಲ, ಶಾಲಾ ಕಾಲೇಜುಗಳು, ಡೊನೇಶನ್ನು ಕೊಟ್ಟು ಪಡೆಯುವ ಸೀಟುಗಳಲ್ಲಿ ವಿರಾಜಮಾನರಾದ ಶಿಷ್ಯಂದಿರು, ದಶಕಗಟ್ಟಲೆ ಸಮಯ, ಲಂಚ, ವಶೀಲಿ ವೃತ್ತಿ ನಡೆಸಿ ನೇಮಕಗೊಂಡ ಸುಸ್ತಾದ ಶಿಕ್ಷಕರು, ಗುಲ್ಬರ್ಗಾಕ್ಕೆ ಎತ್ತಂಗಡಿ ಮಾಡಿಸಿಬಿಡ್ತೀನಿ ನೋಡಿ ಎಂದು ಹೆದರಿಸುವ ಮೇಲಧಿಕಾರಿಗಳು, ಮಕ್ಕಳ ವಿಷಯ ತಲೆಬಿಸಿ ಮಾಡಿಕೊಂಡು ಆಸ್ಪತ್ರೆ ಸೇರುವ ತಾಯ್ತಂದೆಯರು, ಪರೀಕ್ಷೆ, ಕೃಪಾಂಕ, ಕೃಪಣಾಂಕ, ಕೋಪಾಂಕ.... ಭಯಾಂಕ... ಇವುಗಳ ನಡುವೆ ಎಲ್ಲಿಯ ಗುರು ಎಲ್ಲಿಯ ದೇವರು ?

**ಭುವನೇಶ್ವರಿ ಹೆಗಡೆ**

ಈ ವಿಷಯ ಗಾಢವಾಗಿ ಯೋಚಿಸುತ್ತ ಮನೆಯ ಕಡೆ ಹೆಜ್ಜೆ ಹಾಕುತ್ತಿದ್ದೆ. ಶಾಸ್ತ್ರಿ ಮಾಸ್ತರು ಎದುರಿಗೆ ಬಂದರು. 'ಚೆನ್ನಾಗಿದ್ದೀರಾ ಸಾರ್' ಎಂದು ಕೇಳಿದೆ. 'ದೇವರ ದಯೆಯಿಂದ ಚೆನ್ನಾಗಿದೀನಮ್ಮ' ಎಂದರು. ಎಲ್ಲದರಲ್ಲೂ ದೇವರನ್ನು ಕಾಣುವ, ಎಲ್ಲವನ್ನೂ ದೇವರಿಗೆ ಬಿಟ್ಟುಬಿಡುವ ನಿಶ್ಚಿಂತ ಜೀವಿಗಳಾದ ಶಾಸ್ತ್ರಿ ಮಾಸ್ತರರ ಮಾತು ಕೇಳುವುದೆಂದರೆ ನಂಬುಗೆಯ ಫ್ರಿಜ್ಜಿನಲ್ಲಿ ತಣ್ಣಗೆ ತಲೆಯಿಟ್ಟಂತೆ. ಅಪನಂಬಿಕೆಯ ಸ್ವರವೂ ಏಳದ 'ನಂಬುಜೀವ' ಅವರದ್ದು.

ಅಧ್ಯಾಪಕ ವರ್ಗದ ಮೇಲೆ ದೇವರ ದಯೆ ಇದೆ ಅಂತೀರಾ ? ಎಂದು ಕೇಳಿದೆ.

ಇಲ್ಲದೇ ಏನು ? ದೇವರ ದಯೆಯೇ ನಮ್ಮನ್ನು ಅತ್ತ ಮೇಲಧಿಕಾರಿ ದರಿ, ಇತ್ತ ಶಿಷ್ಯ ಕಲಿಗಳ ಪುಲಿ.... ಎರಡರ ನಡುವೆ ಇದ್ದೂ ಬದುಕುಳಿಯುವಂತೆ ಮಾಡಿದ್ದು ಎಂದರು.

ಈ ಅನುಗ್ರಹಕ್ಕೆ ಕಾರಣವೇನಿರಬಹುದು ಸಾರ್ ? ಎಂದೆ.

ಕೇಳಿಲ್ಲವೆ, ಕಲಿಯುಗದಲ್ಲಿ ನಾಮ ಸಂಕೀರ್ತನೆ ಮಾತ್ರದಿಂದ ದೇವರು ಒಲಿಯುತ್ತಾನೆಂದಿದೆ. ನಾವು ದಿನನಿತ್ಯ ಬೆಳ್ಳಾಗುತ್ತಲೇ ಕ್ಲಾಸಿನಲ್ಲಿ ಅನಂತ ಅಚ್ಯುತ ಗೋವಿಂದ.... ಎಂದು ನಾಮಜಪ ಮಾಡುತ್ತೇವಲ್ಲ ಅದೇ ನಾಮಾವಳಿ ಪಠಣ ಪುಣ್ಯ ನಮ್ಮನ್ನು ಕಾಪಾಡುತ್ತಿರೋದು ಎಂದು ಹೇಳಿ ನಡೆದುಬಿಟ್ಟರು.

ಅಷ್ಟರ ಬಳಿಕ ದಿನವೂ ಕ್ಲಾಸಿನಲ್ಲಿ ಹಾಜರಿ ಕೂಗುವಾಗ ನನಗೆ ಎಲ್ಲಿಲ್ಲದ ರಕ್ಷಿತ ಭಾವ ಮೂಡತೊಡಗಿತು. ಶಿಷ್ಯಗಡಣದ ಚೇಷ್ಟೆಯನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ ಕಾಯುವವನ ಕರುಣೆ ನನ್ನ ಮೇಲಿದೆ ಎಂಬ ಧೈರ್ಯದಲ್ಲಿ ಪಾಠ ಮಾಡಿಕೊಂಡಿದ್ದೆ.

ಎಂದಿನಂತೆ ಆ ದಿನವೂ ಕ್ಲಾಸಿಗೆ ಹೋದವಳು ಅನಂತ ಅಚ್ಯುತ ಹನುಮಂತ.... ಎಂದು ಎಟೆಂಡೆನ್ಸ್ ಜಪ ಶುರುಮಾಡಿ 'ಎಸ್‌ಮಿಸ್' 'ಪ್ರೆಸೆಂಟ್ ಮೇಡಂ'ಗಳಿಗನು ಸಾರವಾಗಿ ಆಯಾ ಹೆಸರಿನ ಎದುರು ಗುರುತು ಹಾಕಿಕೊಳ್ಳುತ್ತ ಮುಂದಿನ ನಂಬರಾದ 'ಲಕ್ಷ್ಮಿ' ಹೆಸರು ಕೂಗಿದೆ. ಉತ್ತರ ಬರಲಿಲ್ಲ. ಲಕ್ಷ್ಮಿ ಬಂದಿಲ್ವೇ ಎನ್ನುತ್ತ ತಲೆಯೆತ್ತಿ ನೋಡಿದಾಗ ಮೂರನೇ ಬೆಂಚಿನ ತನ್ನ ಸೀಟಿನಲ್ಲಿ ಲಕ್ಷ್ಮಿ ಕೂತೇ ಇದ್ದಾಳೆ. ಬಾಯಿ ತೆರೆಯುತ್ತಿಲ್ಲ.

ಏನು ಲಕ್ಷ್ಮಿ ಬೆಳಿಬೆಳಿಗ್ಗೆ ಕನಸು ಶುರುವಾಗಿದ್ಯಾ ? ಎಂದೆ. ಪ್ರತಿಕ್ರಿಯೆಯಿಲ್ಲ. ಅವಳ ಬದಲು ಅವಳ ಪಕ್ಕ ಕುಳಿತ ಕಾಳಿ ಬಾಯ್ಬಿಟ್ಟಳು.

''ನಿನ್ನೆಯಿಂದ ಲಕ್ಷ್ಮಿ ಹೆಸರು ಬದಲಾಯಿಸಿಕೊಂಡಿದಾಳೆ ಮೇಡಂ.''

''ಹೊಸ ಹೆಸರು ಏನಂತೆ ?''

''ಐಶ್ವರ್ಯ-ಸಿದ್ಧಿ ಪೂ ಪ್ರಸಾದ ಲಕ್ಷ್ಮಿ.''

ಪೂರ್ತಿ ಎರಡು ನಿಮಿಷಗೂಡಿ ಹೇಳಿ ಮುಗಿಸಿದಳು. ಅಷ್ಟೇ ಅಲ್ಲ ಲಕ್ಷ್ಮಿಯ ಬುಕ್ಕು ನೋಟ್‌ಬುಕ್ಕು ಎಲ್ಲಾ ಕಡೆ ಬದಲಾದ ಹೆಸರು ಕೆತ್ತಿದ್ದನ್ನೂ ತೋರಿಸಿದಳು. ಹಳೆ ಲಕ್ಷ್ಮಿ ನಾಪತ್ತೆಯಾಗಿದ್ದಳು. ಲಕ್ಷಣವಾಗಿದ್ದ ಲಕ್ಷ್ಮಿಗೆ ಇಷ್ಟೆಲ್ಲ ಕಾಲು, ಬಾಲ ಹಚ್ಚಿ ನಾಮಾಂತರ ಗೊಂಡಿದ್ದೇಕೆ ಎಂಬ ಪ್ರಶ್ನೆಗೆ ತಿಳಿದುಬಂದ ವಿಚಾರ ನಾಮ ಬದಲಾವಣೆಯೆಂಬ ಹೊಸ ಹುಚ್ಚಿನ ಸುಳಿವು ನೀಡಿತು.

ನಗರದ ಸ್ಟಾರ್ ಹೋಟೆಲ್ ಒಂದರಲ್ಲಿ ವಾರ ಕಾಲ ವಾಸ್ತವ್ಯ ಹೂಡಿದ್ದ ನಾಮ ಪಂಡಿತರೊಬ್ಬರು ಇಡೀ ನಗರದ ಅನೇಕ ಮುಗ್ಧರ ಹೆಸರು ಬದಲಾಯಿಸಿ ಹಣದ ಚೀಲ ಭರ್ತಿ ಮಾಡಿಕೊಂಡು ಬೇರೆ ಹೆಸರಿನ ಬೋರ್ಡಿನ ಜೊತೆ ಬೇರೆ ಊರಿಗೆ ಸವಾರಿ ಸಾಗಿಸಿದ್ದರು. ಪೇಪರು ಟಿ.ವಿ.ಗಳಲ್ಲೆಲ್ಲ ''ಹೆಸರು ಬದಲಾಯಿಸಿ ಅದೃಷ್ಟ ಖುಲಾಯಿಸಿ ಕೊಳ್ಳಿ'' ಎಂಬ ಜಾಹೀರಾತು ಕೊಟ್ಟು ಪ್ರಚಾರ ಪಡೆದಿದ್ದರು. ಆ ನಾಮತಜ್ಞರ ಸಲಹೆಯ ಪ್ರಕಾರವೇ ಲಕ್ಷ್ಮಿ ಹೆಸರು ಬದಲಾಯಿಸಿಕೊಂಡಿದ್ದಳು. ಇದರಿಂದಾಗುವ ಲಾಭವೇನು ಎಂದು ನಾನು ಕೇಳಿದ್ದಕ್ಕೆ ಲಕ್ಷ್ಮಿಯಿಂದ ಬಂದ ಉತ್ತರ ನನ್ನ ಬಾಯ್ಮುಚ್ಚಿಸಿತು.

''ನಾನು ಪ್ರತಿಸಲವೂ ನೂರು ಮಾರ್ಕು ಸಿಗಬೇಕೆಂದು ಪ್ರಯತ್ನ ಪಟ್ಟಿರುತ್ತೇನೆ. ಆದರೆ ನನಗೆ ಸಿಗುವುದು ಮೂವತ್ತೈದು ಮಾರ್ಕು. ಸಖತ್ ಬೇಜಾರಾಗಿತ್ತು. ಇವಕ್ಕೆಲ್ಲ ನನ್ನ ಹೆಸರಿನಲ್ಲಿರುವ ನಾಮದೋಷವೇ ಕಾರಣ ಎಂದು ಈ ನಾಮ ಪಂಡಿತರು ತಿಳಿಸಿಕೊಟ್ಟರು. ಹೆಸರು ಬದಲಾಯಿಸಿ ಹೊಸ ಹೆಸರು ಕೊಟ್ಟಿದ್ದಾರೆ. ಇನ್ನು ಮುಂದೆ ಮೂವತ್ತೈದು ಅಂಕಕ್ಕಾಗುವಷ್ಟು ಓದಿದರೂ ನೂರಕ್ಕೆ ನೂರು ಮಾರ್ಕು ಬರುತ್ತವೆಯೆಂದು ಆ ನಾಮತಜ್ಞರು ಭರವಸೆ ಕೊಟ್ಟಿದ್ದಾರೆ'' ಎನ್ನುತ್ತ ನನ್ನ ಕಡೆ ಒಂದು ಚಾಲೆಂಜಿಂಗ್ ನೋಟ ಬೀರಿ ಕುಳಿತಳು.

ನನಗೆ ಸ್ವಲ್ಪ ಮುಂಚೆ ತುಂಬಿಕೊಂಡಿದ್ದ ರಕ್ಷಿತಭಾವ ಕರಗಿಹೋಗಿ ಹೊಸ ಭಯ ಶುರುವಾಯ್ತು. ಕ್ಲಾಸಿನಲ್ಲಿರುವ ಎಲ್ಲ ಅನಂತ, ಪ್ರಕಾಶಗಳೂ, 'ಅನಂತ ವಿವೇಕ ಕೃಪಾಕರುಣಾಕರ' ಎಂದೋ, 'ಕೋಟಿ ಭಾನು ತೇಜಃ ಪುಂಜ ಪ್ರಕಾಶ' ಎಂದೋ ಹೆಸರು ಬದಲಾಯಿಸಿಕೊಂಡು ಕೂತರೆ ಅರ್ಧ ಘಂಟೆ ಪೂರ್ತಿ ಅಟೆಂಡೆನ್ಸ್ ಕೂಗುವುದೇ ಕೆಲಸವಾದೀತು. ಅಷ್ಟೇ ಅಲ್ಲ ಎಲ್ಲ ವಿದ್ಯಾರ್ಥಿಗಳೂ ''ನಾವು ನೂರಕ್ಕಿಂತ ಹೆಚ್ಚು ಅಂಕಗಳು ಬರುವ ಹಾಗೆ ಹೆಸರು ಬದಲಾಯಿಸಿಕೊಂಡಿದ್ದೇವೆ. ನೀವಿಷ್ಟು ಕಡಿಮೆ ಮಾರ್ಕು ಕೊಟ್ಟಿದ್ದೀರಿ'' ಎಂದು ಜಗಳಕ್ಕಿಳಿದರೆ.... ಎಂಬ ಭಯವೂ ಶುರುವಾಯ್ತು. ಮನೆಗೆ ಬರುವಾಗ ಮುಖ ನೋಡಿದರೆ ನೀರಿಲ್ಲದೂರಿಗೆ ಎತ್ತಂಗಡಿ ಆದಂತೆ ಕಾಣುತ್ತಿತ್ತು.

ಮನೆಗೆ ಬಂದಾಗ ಇನ್ನೊಂದು ಉತ್ಪಾತ ಕಾದಿತ್ತು. ಮಗಳ ರಿಪೋರ್ಟ್ ಕಾರ್ಡ್ ಬಂದಿತ್ತು. ನನಗೆ ತೋರಿಸದೇ ಅಪ್ಪನ ಬಳಿ ಸಹಿ ಪಡೆಯುವ ಹುನ್ನಾರವನ್ನು ನಾನು ಭಂಗಿಸಿ ''ಕೊಡಿಲ್ಲಿ ರಿಪೋರ್ಟು ಕಾರ್ಡು'' ಎಂದಿದ್ದೇ ತಡ ಮಗಳು ಎಗರಿಬಿದ್ದಳು.

''ನನಗೆ ಕೃಪಾ ಅಂತ ಹೆಸರಿಡಲು ಹೇಳಿದ್ದು ಯಾರು ?'' ಎಂದು ಹೂಂಕರಿಸಿದಳು. ನನಗೂ ತಲೆ ಬಿಸಿಯಾಗಿಯೇ ಇತ್ತು. ಪ್ರತಿ ಜಗಳದ ಧಾಟಿ ತೆಗೆದು - ''ನಿನ್ನಪ್ಪ'' ಎಂದೆ. ಮಗಳು ಹೊಸ ಜಗಳಕ್ಕೆ ಸಿದ್ಧತೆ ನಡೆಸಿದ್ದವಳಂತೆ ''ಕರಿ ಅಪ್ಪನ್ನ, ನಿಮ್ಮಿಬ್ಬರ ಸಮಕ್ಷಮದಲ್ಲಿ ನನ್ನ ಹೆಸರು ಬದಲಾಯಿಸಬೇಕಾಗಿದೆ. ನನ್ನೀ ಅನಿಷ್ಟ ಹೆಸರು ಹೋಗುವ ತನಕ ನನಗೆ ನಿಮ್ಮ ಕಾಟ, ಮಿಸ್ಸುಗಳ ಕಾಟ ತಪ್ಪುವುದಿಲ್ಲವಂತೆ'' ಎಂದಳು.

ನಾಮ ಪಂಡಿತರು ನನಗೆ ಗೊತ್ತಿಲ್ಲದೆಯೇ ನನ್ನ ಮನೆಯೊಳಗೆ ಪ್ರವೇಶ ಮಾಡಿದ್ದು ಸ್ಪಷ್ಟವಾಗಿತ್ತು.

''ಯಾರು ಹೇಳಿದ್ದು ನಿನಗೆ ಅನಿಷ್ಟ ಹೆಸರೆಂದು ? ಕೃಪಾ ಎಷ್ಟೊಳ್ಳೆ ಹೆಸರು !'' ದಬಾಯಿಸಿದಾಗ ಉತ್ತರ ರೆಡಿ ಇತ್ತು.

ನನ್ನ ಫ್ರೆಂಡ್ ಅಮ್ಮ ಅದ್ಯಾರೋ Nameologist ಹತ್ತಿರ ಹೋಗಿದ್ರಂತೆ. ನನ್ನ ಹೆಸರೂ ಬರೆದು ಕಳಿಸಿದ್ದೆ. ಅವರಮ್ಮ ನಂದು, ನನ್ನ ಫ್ರೆಂಡು ಪಿಂಕಿದು ಇಬ್ರದೂ ಹೆಸರು ಬದಲಾಯಿಸಿಕೊಂಡು ಬಂದಿದ್ದಾರೆ ಎಂದಳು. ಹೊಸ ಅಂಗಿ ತಂದಿದಾರೆ ಎಂಬಷ್ಟೇ ಸಲೀಸಾಗಿ ಹೊಸ ಹೆಸರು ತಂದಿದ್ದಾರೆ ಎನ್ನುತ್ತಿದ್ದಾಳೆ ! ಪಿಂಕಿ ಇನ್ಮೇಲೆ ಶ್ರೀ ಪಿಂಕಿಸ್ಥಿತೆ ಅಂತೆ. ಇವಳ ಹೆಸರು ಕೃಪಾರ್ದ್ರ ದಯಾಕರಿ ಎಂಬುದಾಗಿ ಬರೆದು ಕಳಿಸಿದ್ದಾರಂತೆ. ಇನ್ಮೇಲೆ ಹೊಸ ಹೆಸರಿನಲ್ಲಿ ನನ್ನ ಆರ್ಭಟ ನೋಡುವಿಯಂಥೆ ಎಂದು ನನ್ನನ್ನು ತಿವಿದಳು ಮಗಳು.

ಈ ನಾಮಾಂತರ ಪ್ರಕರಣದ ತಲೆನೋವನ್ನು ಇವಳ ಅಪ್ಪನ ತಲೆಗೆ ಕಟ್ಟುವುದೇ ಸೂಕ್ತವೆನ್ನಿಸಿ ಮೇಲೆ ಮಲಗಿರೋ ಅಪ್ಪನ್ನ ಕರ್ಕೊಂಡು ಬಾ ಎಂದು ಅಟ್ಟಿದೆ; ಎದ್ದು ಬರುವಾಗ ಆಸಾಮಿ ನಿದ್ದೆಗಣ್ಣಿನಲ್ಲಿದ್ದಂತೆ ತೋರಲಿಲ್ಲವಾದರೂ ಬಾಯಲ್ಲಿ ಅದೇನೋ ದ್ರ, ಮ್ರ, ಚ್ರ, ಕ್ರ ಎಂದು ಅರ್ಧ ಚಂದ್ರ ಪಠಣ ಮಾಡುತ್ತ, ಹಾ ! ರಾಹು ಮಧ್ಯ ಬಂತು ಶೇರುಪೇಟೆ ಧಮಾರೆನ್ನದೆ ಇನ್ನೇನು ? ಎಂದು ನನ್ನನ್ನೇ ಕೇಳಿದರು.

ನನ್ನ ತಲೆ ಕೆಡಲು ಇನ್ನೇನೂ ಉಳಿದಿರಲಿಲ್ಲ. ನನ್ನ ಪತಿರಾಯರೂ ನಾಮ ಪಂಡಿತರನ್ನು ಭೇಟಿಯಾಗಿ ಬಂದ ಸೂಚನೆಗಳಿದ್ದವು. ನೋಡ ನೋಡುತ್ತ ಒಂದೊಂದೇ ಬದಲಾವಣೆ ! ಮನೆ ಮುಂದೆ ಇದ್ದ ನಾಮಫಲಕ ಮಾಯವಾಗಿದೆ. ಗೇಟಿನ ಮುಂದೆ 'ಸ್ವಯಂಭೂ ನಿಲಯ'ವೆಂಬ ಹೊಸ ಬೋರ್ಡು. ಆ ನಾಮತಜ್ಞರನ್ನು ಕಾಣುವುದೊಂದೇ ದಾರಿ ನನಗೂ ಉಳಿಯಿತು.

ಸ್ಟಾರ್ ಹೋಟೆಲಿಗೆ ಹೋದಾಗ ನನ್ನಂತೆ ನಿರ್ನಾಮವಾದ ಕಳೆ ಹೊತ್ತ ಅನೇಕ ನಾಮಪೀಡಿತರು ಅಲ್ಲಿದ್ದರು. ಒಬ್ಬ ಸಾಹಿತಿಯೊಟ್ಟಿಗೆ ತಜ್ಞರ ಸಮಾಲೋಚನೆ ನಡೆದಿತ್ತು.

''ತಾವು ಸಾಹಿತಿಗಳೋ ? ಏನು ತಮ್ಮ ಸಮಸ್ಯೆ ?''

''ಕಷ್ಟ, ಕಡು ಕಷ್ಟ. ಹೆಸರಿಲ್ಲ ಕೀರ್ತಿಯಿಲ್ಲ, ಪ್ರಶಸ್ತಿಗಳಿಲ್ಲ ಹಣವಿಲ್ಲ.... ಬದುಕು ಬರಡು ಸಾಹಿತ್ಯದಂತಾಗಿದೆ. ಕಾರಣ ಹೇಳಿ ಸ್ವಾಮಿ.''

''ನಿಮ್ಮನ್ನು ನಾಮ ದೋಷ ಕಾಡುತ್ತಿದೆ. ಕೇತು ಕೆರಳಿದ್ದಾನೆ ರಾಹು ಹೂಂಕರಿಸುತ್ತಿದ್ದಾನೆ. ನೀವು ಇಷ್ಟು ವರ್ಷ ಬದುಕಿದ್ದೇ ಹೆಚ್ಚು.''

''ಅಯ್ಯೋ ಹಾಗೆನ್ನಬೇಡಿ ಸ್ವಾಮಿ. ಜೀವನದಲ್ಲಿ ಒಂದಾದರೂ ರೋಮಾಂಚಕಾರಿ ಪತ್ತೇದಾರಿ ಕಾದಂಬರಿ ಬರೆಯಬೇಕೆನ್ನುವ ಆಸೆ. ಈಡೇರದೆ ಸಾಯಲಾರೆ. ದೋಷ ಪರಿಹಾರವಿದ್ದರೆ ಹೇಳಿ ಸ್ವಾಮಿ.''

''ಉಂಟು. ಕಮಲಾಕ್ಷನೆಂಬ ನಿಮ್ಮ ಹೆಸರನ್ನು ಬದಲಾಯಿಸಿ 'ಬಹುಭ್ರಾಂತಿ ಪೀಡಿತ ಕವಿಕುಲಲಲಾಮ ಕೊರಮ' ಎಂದು ಬದಲಾಯಿಸಬೇಕಷ್ಟೆ.... ಆದರೆ ಅದಕ್ಕೆ ತಗಲುವ ಫೀಸು ಕೊಡಲು ಸಾಧ್ಯವೇ ?''

''ಕೊಡುತ್ತೇನೆ ಸ್ವಾಮಿ. ಪತ್ರಿಕೆಯೊಂದು ಹತ್ತು ರೂಪಾಯಿ ಸಂಭಾವನೆ ನೀಡಿದೆ, ಅದನ್ನು ಇಲ್ಲಿಡುತ್ತೇನೆ. ಹೊಸ ಹೆಸರು ನೀಡಿ'' ಎನ್ನುತ್ತ ಚೀಟಿಯಲ್ಲಿ ಬರೆದ ತನ್ನ ಹೊಸ ಹೆಸರನ್ನು ಕಣ್ಣೊತ್ತಿಕೊಳ್ಳುತ್ತ ನಿರ್ಗಮಿಸಿದ ಆ ಕೊರಮ.

ಮುಂದೆ ಜರುಗಿದ ನಾನು ದೀರ್ಘ ದಂಡ ಹಾಕಿದೆ. ನಾಮತಜ್ಞರು ''ಏನು ಮಗಳೇ ?'' ಎಂದಾಗ ಅಳು ಒತ್ತರಿಸಿ ಬಂತು.

- ನಾನು ಮಾಡದ ತಪ್ಪಿಗೆ ನನಗೆ ಶಿಕ್ಷೆ ಸಿಗುತ್ತಿದೆ.
- ಕುಟುಂಬದ ಕಿರಿ ಹಿರಿಯರ್‍ಯಾರೂ ನನ್ನನ್ನು ಕ್ಯಾರೇ ಅನ್ನುತ್ತಿಲ್ಲ.
- ಸಂಬಳದ ಹಣ ಕೈಗೆ ಬರುವವದೊಂದೇ ಕಾಣುತ್ತದೆ. ಆಮೇಲೇನಾಗುತ್ತದೆಯೋ ತಿಳಿಯುತ್ತಿಲ್ಲ.
- ಕ್ಲಾಸಿನಲ್ಲಿ ಎಟೆಂಡೆನ್ಸ್ ಕರೆದು ಮುಗಿಸುವಷ್ಟರಲ್ಲಿ ಸುಸ್ತಾಗಿ ಗಂಟಲೊಣಗಿ ಬರುತ್ತದೆ.
- ಎಲ್ಲ ವಿದ್ಯಾರ್ಥಿಗಳೂ ನೂರಕ್ಕೆ ನೂರು ಮಾರ್ಕು ಕೊಡಿ ಎಂದು ಹೆದರಿಸುತ್ತಿದ್ದಾರೆ.
- ಕೈಗಡ ತಗೊಂಡವರೆಲ್ಲಾ ನನ್ನ ಪರಿಚಯವಿಲ್ಲದವರಂತೆ ಓಡಾಡುತ್ತಿದ್ದಾರೆ.
- ಆಜೂ ಬಾಜೂ ಸುಖವಿಲ್ಲದ ಮುಖಗಳೇ ಕಾಣುತ್ತಿವೆ.

ಹೇಳಬೇಕಾದ್ದೆಲ್ಲ ಹೇಳಲಾಗಲಿಲ್ಲ, ದುಃಖ ಒತ್ತರಿಸಿ ಬರುತ್ತಿತ್ತು.

''ಹೆಸರೇನು ?'' ಬಂತು ಪ್ರಶ್ನೆ. ಹೇಳಿದೆ. ಕಣ್ಮುಚ್ಚಿ ಧ್ಯಾನಿಸಿದ ನಾಮತಜ್ಞರು 'ಶ್ವ' ಶ್ಯೀ ! ಅಸಡ್ಡಾಳ ಒತ್ತಕ್ಷರ 'ಶ್ವರಿ'ಯಲ್ಲೇ ಅರಿ ನೆಲೆಸಿದ್ದಾನೆ. ಭೂಮಿ ಗಾತ್ರದ ಕಷ್ಟ ಎಂದು ನಿಡುಸುಯ್ದರು. ನೇ... ನೇತಿ ಎಂದುದ್ಗರಿಸಿದರು. ಜೀವನದಲ್ಲಿ ಕಷ್ಟಕ್ಕೆ ಅಂಜದವರುಂಟೇ ? ''ಏನು ಪರಿಹಾರ ?'' ಎನ್ನಲೇಬೇಕಾಯ್ತು. ''ಸದ್ಯಕ್ಕೆ ನೂರು ರೂಪಾಯಿ. ಹೊಸ ನಾಮಕರಣವಾಗಬೇಕು'' ಎಂದರು.

''ರೆಕಾರ್ಡು ತಿದ್ದುವುದು ಕಷ್ಟ. (ಸಾವಿರಾರು ರೂಪಾಯಿ ಖರ್ಚಿದೆ) ರೂಢಿನಾಮ ಬೇಕಾದ್ರೆ ಬದಲಾಯಿಸಬಹುದು...'' ಎಂದೆ. ವ್ಯವಹಾರದ ಗೋಜಲುಗಳ ನೆನಪಾಗಿತ್ತು.

''ಪರವಾಗಿಲ್ಲ, ಅಷ್ಟು ಮಾಡಿದರೂ ಅರ್ಧ ಕಷ್ಟ ಪರಿಹಾರವಾದಂತೇ'' ಎಂದರು ನಾಮ ಪಂಡಿತರು.

ನನಗೋ ಹೊಸ ಹೆಸರಿನ ಕುತೂಹಲ. ಇಷ್ಟೇ ಕಳೆದುಕೊಂಡವಳಿಗೆ ನೂರು ರೂಪಾಯಿ ಇನ್ನೇನು, ಪದತಲದಲ್ಲಿಟ್ಟೆ. ಹೊಸ ನಾಮ ಪ್ರದಾನ ಮಾಡಿದರು.

''ಭವಸಾಗರ ಸಂಬಾಧಿತ ಭೂತಲೋದರಿ.''




ಹೆದರಿ ಹೌಹಾರಿದೆ. ಇನ್ನು ಮೇಲೆ ಇದು ನನ್ನ ಹೆಸರೇ ! ಎಂದು ತತ್ತರಿಸಿದೆ. ಆದರೆ ಕಡುಕಷ್ಟಗಳನ್ನು ಜಯಿಸಲು ಇರುವ ಸುಲಭ ಮಾರ್ಗ ಒಲ್ಲೆ ಎನ್ನಲಾದೀತೆ ? ''ಆಯ್ತು ಪ್ರಸಾದವೆಂದೆನು'' ಎನ್ನುತ್ತ ಮನೆಗೆ ಬಂದೆ.

ನನಗೆ ಒಳಿತಾಗಲೆಂಬ ಹೃದಯವುಳ್ಳ ನನ್ನ ಸ್ನೇಹಿತರು ಹಿತೈಷಿಗಳು ಇನ್ನು ಮೇಲೆ ನನ್ನ ಈ ಹೊಸ ಹೆಸರಿನಲ್ಲಿರುವ ಭ ಕಾರಗಳನ್ನು ನೆನಪಿಟ್ಟು (ಭೂತ ಎಂದು ಕರೆದರೂ ಬೇಸರಿಲ್ಲ) ಹೊಸ ಹೆಸರಿನಲ್ಲೇ ಸಂಬೋಧಿಸಿ ನನ್ನ ಭವಸಾಗರದ ಪೀಡೆಗಳಿಂದ ಮುಕ್ತಗೊಳಿಸಲು ನೆರವಾಗಬೇಕೆಂದು ಈ ಮೂಲಕ ಕೋರುತ್ತೇನೆ.


ಭುವನೇಶ್ವರಿ ಹೆಗಡೆ
ನಂ. ೧೧೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್. ಮಂಗಳೂರು - ೫೭೫ ೦೦೨



# ಅಣೆಕಟ್ಟೆಗಳು, ನ್ಯಾಯಪರತೆ ಹಾಗೂ ಲಾಭ ಹಂಚಿಕೆ ಸಮಸ್ಯೆಗಳು

■ ಪ್ರೊ|| ಡಿ. ನರಸಿಂಹ ರೆಡ್ಡಿ

**ಕ**ಳೆದ ಎರಡು ದಶಕಗಳಿಂದ ದೊಡ್ಡ ಅಣೆಕಟ್ಟೆಗಳು ದೇಶದ ಆರ್ಥಿಕ ಬೆಳೆವಣಿಗೆಗೆ ಸಂಬಂಧಿಸಿದ ಚರ್ಚೆಗಳಲ್ಲಿ ಹೆಚ್ಚು ಹೆಚ್ಚಾಗಿ ಕೇಂದ್ರಸ್ಥಾನದಲ್ಲಿರತೊಡಗಿವೆ. ಇದಕ್ಕೆ ಎರಡು ಮುಖ್ಯ ಕಾರಣಗಳುಂಟು - ಒಂದು ಪರಿಸರದ ಮೇಲೆ ಅವುಗಳ ಪ್ರಭಾವ. ಇನ್ನೊಂದು ಸಾಮಾಜಿಕ ಜೀವನದ ಮೇಲೆ ಅವುಗಳ ಪ್ರಭಾವ. ಈ ಎರಡನೆಯದು ಹೆಚ್ಚು ತುರ್ತಿನದಾಗಿದೆ. ಏಕೆಂದರೆ ಅದು ಸಾವಿರಾರು ಜನರ ಜೀವನಕ್ಕೆ ಸಂಬಂಧಿಸಿದುದು. ದೊಡ್ಡ ಅಣೆಕಟ್ಟೆಗಳು ಸಾವಿರಾರು ಜನರನ್ನು ನಿರ್ವಸತಿಕರನ್ನಾಗಿ ಮಾಡುತ್ತವೆ. ಬೆಳೆವಣಿಗೆಯ ಹೆಸರಿನಲ್ಲಿ ಲಕ್ಷಾಂತರ ಜನರನ್ನು .ಅವರ ಮೂಲ ನಿವಾಸದಿಂದ ಬೇರ್ಪಡಿಸುವುದು ಸರಿಯೇ, ಅವರಿಗೆಲ್ಲ ಸೂಕ್ತ ರೀತಿಯಲ್ಲಿ ಮರುವಸತಿ ಏರ್ಪಡಿಸಲಾಗಿದೆಯೇ ಎಂಬ ಕೂಗೆದ್ದು ಅಂತಹ ಅನ್ಯಾಯದ ವಿರುದ್ಧ ಜಗತ್ತಿನಾದ್ಯಂತ ಚಳವಳಿ, ಬಹುವೇಳೆ ಬೃಹತ್ ಸಭೆ ಮೆರವಣಿಗೆಗಳು ಜರಗಿವೆ. ದೊಡ್ಡ ಅಣೆಕಟ್ಟುಗಳಿಂದ ಸಾಮಾಜಿಕ ಜೀವನದ ಮೇಲಾಗಿರುವ ಪ್ರಭಾವವನ್ನು ಮೌಲ್ಯನಿರ್ಣಯಿಸುವಾಗ ಎರಡು ಅಂಶಗಳ ಕಡೆಗೆ –ನ್ಯಾಯಪರತೆ ಹಾಗೂ ಹಂಚಿಕೆ ಅಂಶಗಳ ಕಡೆಗೆ– ಗಮನ ನೀಡಬೇಕಾಗುತ್ತದೆ. 'ವಿಶ್ವ ಅಣೆಕಟ್ಟೆ ಆಯೋಗ'ವೂ ಜಲಸಂಪನ್ಮೂಲಗಳ ಬಳಕೆಗೆ ಸಂಬಂಧಿಸಿ ಸೂಕ್ತ ನಿರ್ಧಾರ ಕೈಗೊಳ್ಳಲು ಅನುವಾಗುವಂತೆ ಒಂದು ಹೊಸ ಚೌಕಟ್ಟನ್ನು ವಿಕಾಸಗೊಳಿಸುವ ಪ್ರಕ್ರಿಯೆಯಲ್ಲಿ ನ್ಯಾಯಪರತೆ ಹಾಗೂ ಹಂಚಿಕೆಯ ಪ್ರಶ್ನೆಗಳ ಕಡೆಗೆ ಗಣನೀಯ ಗಮನ ನೀಡಿದೆ. ದೊಡ್ಡ ಅಣೆಕಟ್ಟುಗಳು ಸಾಮಾಜಿಕ ಜೀವನದ ಮೇಲೆ ಬೀರುವ ಪ್ರಭಾವಗಳನ್ನು ಚರ್ಚಿಸುವಾಗ ಸಾಮಾನ್ಯವಾಗಿ ಮೂರು ಅಂಶಗಳನ್ನು ಗಮನಕ್ಕೆ ತಂದುಕೊಳ್ಳಲಾಗುತ್ತದೆ. ಈ ಅಂಶಗಳು ದೊಡ್ಡ ಅಣೆಕಟ್ಟುಗಳ ಕುರಿತು ಇರುವ ಪರ ಹಾಗೂ ವಿರೋಧಿ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ. ಮೊದಲನೆಯ ಅಂಶವೆಂದರೆ - ದೊಡ್ಡ ಅಣೆಕಟ್ಟೆಗಳನ್ನು ನಿರ್ಮಿಸುವಲ್ಲಿ ಕಂಡುಬರುವ ಅನುಕೂಲಗಳು ಪ್ರತಿಕೂಲಗಳಿಗಿಂತ ಹೆಚ್ಚಾದವೇ ಎಂಬುದನ್ನು ಪರಿಗಣಿಸುವಂತಹುದು. ಹೆಚ್ಚಿನ ಪ್ರಯೋಜನಗಳು ಉಂಟುಮಾಡುವ ಎಲ್ಲ ಸಾಮಾಜಿಕ ಹಾಗೂ ಆರ್ಥಿಕ ಪರಿಣಾಮಗಳನ್ನು ಕೂಲಂಕಷವಾಗಿ ಗಣನೆಗೆ ತಂದುಕೊಂಡಾಗ ಕಂಡುಬರುವುದೇನೆಂದರೆ, ದೊಡ್ಡ ಅಣೆಕಟ್ಟೆಗಳಿಂದ ರಾಷ್ಟ್ರಕ್ಕಾಗುವ ಪ್ರಯೋಜನವೇ ಪ್ರತಿಕೂಲಕ್ಕಿಂತ ಹೆಚ್ಚು ಎಂದು ದೊಡ್ಡ ಅಣೆಕಟ್ಟೆಗಳ ಬೆಂಬಲಿಗರು ಹೇಳುತ್ತಾರೆ. ಆದರೆ ದೊಡ್ಡ ಅಣೆಕಟ್ಟೆಗಳಿಂದಾಗುವ ಸಾಮಾಜಿಕ ಹಾಗೂ ಪರಿಸರ ಹಾನಿಗಳನ್ನೆಲ್ಲ ಸೂಕ್ತವಾಗಿ ಗಣನೆಗೆ ತಂದುಕೊಂಡಾಗ, ಅದರಲ್ಲೂ ವಿಶೇಷವಾಗಿ ಅವುಗಳಿಂದಾಗಿ ಭೂ ಹಾಗೂ ಜನಜೀವನದ ಮೇಲೆ ಆಗುವ ಪ್ರಭಾವವನ್ನು ಗಣನೆಗೆ ತಂದುಕೊಂಡಾಗ, ಅಂತಹ ಪ್ರಾಯೋಜನೆಗಳಿಂದ ಆಗಬಹುದಾದ ಅನುಕೂಲಗಳ ಪ್ರಮಾಣ ಪ್ರಶ್ನಾರ್ಹವಾಗಿಯೇ ಕಂಡುಬರುತ್ತದೆ, ಎಂದು ದೊಡ್ಡ ಅಣೆಕಟ್ಟೆಗಳ ವಿರೋಧಿಗಳು ವಾದಿಸುತ್ತಾರೆ.

ಈ ಚರ್ಚೆಯಲ್ಲಿನ ಎರಡನೆಯ ಅಂಶವೆಂದರೆ ದೊಡ್ಡ ಅಣೆಕಟ್ಟೆಗಳನ್ನು ನಿರ್ಮಿಸಲು ತಗಲುವ ವೆಚ್ಚವನ್ನು ಭರಿಸುವವರು ಅವುಗಳಿಂದ ಎಷ್ಟು ಪ್ರಯೋಜನ ಪಡೆಯುತ್ತಾರೆ, ಎಂಬುದು. ಕೊಟ್ಟಿದ್ದಕ್ಕಿಂತ ಹೆಚ್ಚು ಪಡೆಯುವವರು ಲಾಭ ಪಡೆದಂತೆ, ಉಳಿದವರು ನಷ್ಟಕ್ಕೊಳಗಾದಂತೆ. ದೊಡ್ಡ ಅಣೆಕಟ್ಟೆಗಳಿಂದ ಪ್ರಯೋಜನ ಒಮ್ಮೆಗೇ ಹರಿದುಬರುವುದಿಲ್ಲ, ಅವುಗಳ ನಿರ್ಮಾಣದಿಂದಾಗಿ ಕಷ್ಟಕ್ಕೊಳಗಾದ ಜನರಿಗಷ್ಟೇ ಅಲ್ಲ ಒಟ್ಟಿನ ಮೇಲೆ ಇಡೀ ಸಮಾಜಕ್ಕೆ ಈ ಪ್ರಯೋಜನ ಹನಿಹನಿಯಾಗಿ ಕಾಲಕ್ರಮೇಣ ಬರುತ್ತದೆ, ಎಂದು ದೊಡ್ಡ ಅಣೆಕಟ್ಟೆಗಳ ಬೆಂಬಲಿಗರು ವಾದಿಸುತ್ತಾರೆ. ಆದರೆ ಇದುವರೆವಿಗೂ ನಿರ್ಮಿತವಾಗಿರುವ ದೊಡ್ಡ ಅಣೆಕಟ್ಟೆಗಳಿಂದಾಗಿ ಸ್ಥಳಾಂತರಿತರಾದ ಜನರ ಹಾಗೂ ನದಿಬದಿಯ ಜನಸಮುದಾಯಗಳ ಅನುಭವವೇನು? ಅವರು ಒಟ್ಟಿನಲ್ಲಿ ನಷ್ಟಕ್ಕೊಳಗಾಗಿದ್ದಾರಷ್ಟೆ ಅಲ್ಲ, ನಿರ್ಮಾಣವಾದ ಅಣೆಕಟ್ಟೆಗಳಿಂದ ಲಭಿಸುವ ಅನುಕೂಲಗಳಿಂದಲೂ ವಂಚಿತರಾಗಿದ್ದಾರೆ, ಎಂದು ದೊಡ್ಡ ಅಣೆಕಟ್ಟೆಗಳ ವಿರೋಧಿಗಳು ವಾದಿಸುತ್ತಾರೆ. ಇನ್ನು, ಈ ಚರ್ಚೆಯಲ್ಲಿನ ಮೂರನೆಯ ಅಂಶವನ್ನು ಹಂಚಿಕೆಯ ಅಂಶ ಎಂದು ಕರೆಯಬಹುದು. ದೊಡ್ಡ ಅಣೆಕಟ್ಟೆಗಳ ನಿರ್ಮಾಣಕ್ಕಾಗಿ ತಗಲುವ ವೆಚ್ಚಗಳನ್ನೂ ಅವುಗಳಿಂದ ಲಭಿಸುವ ಪ್ರಯೋಜನಗಳನ್ನೂ ಗ್ರಾಮೀಣ - ನಾಗರೀಕ, ಸ್ತ್ರೀ - ಪುರುಷ, ಭೂಒಡೆಯ - ಭೂಹೀನ ಎಂದು ಮುಂತಾದ ವಿವಿಧ ಸಾಮಾಜಿಕ ವೃಂದ, ವರ್ಗ ಅಥವಾ ಸಮುದಾಯಗಳ ನಡುವೆ ಹೇಗೆ ಹಂಚಲಾಗಿದೆ ಎಂಬುದನ್ನು ಹೋಲಿಸಿ ನೋಡುವುದು ಈ ಅಂಶದ

ಮುಖ್ಯ ಗುರಿ. ಅಣೆಕಟ್ಟೆಯೊಂದು ಪ್ರಯೋಜನವನ್ನೇ ಉಂಟುಮಾಡುತ್ತದೆ ಎಂದೇ ಹೇಳಿದರೂ, ಈ ಉತ್ಪತ್ತಿಯಾದ ಸಂಪತ್ತನ್ನು ಹಂಚುವ ವಿಧಾನದಲ್ಲಿ ಅನ್ಯಾಯ ಹಾಗೂ ಪಕ್ಷಪಾತ ಆಗುವುದು ಸಾಧ್ಯವಿದೆ. ಆದ್ದರಿಂದ ನ್ಯಾಯಪರತೆಯ ಚರ್ಚೆಯಲ್ಲಿ ಹಂಚಿಕೆಯ ಅಂಶ ಕೇಂದ್ರಬಿಂದುವಾಗುತ್ತದೆ.

**ಸಾಮಾಜಿಕ ಪ್ರಭಾವ**

ದೊಡ್ಡ ಅಣೆಕಟ್ಟೆಗಳು ಜನರನ್ನೂ ಅವರ ಜೀವನೋಪಾಯವನ್ನೂ ವಿಸ್ತೃತ ಪ್ರಮಾಣದಲ್ಲಿ ಸ್ಥಳಾಂತರಿಸುತ್ತವೆ. ಈ ಅಂಶವೇ ಅವುಗಳ ವಿರುದ್ಧ ವಿಶ್ವವ್ಯಾಪೀ ಪ್ರತಿಭಟನೆಯ ಕೇಂದ್ರದಲ್ಲಿದೆ. ದೊಡ್ಡ ಅಣೆಕಟ್ಟೆಗಳು ಉಂಟುಮಾಡುವ ಸಾಮಾಜಿಕ ಪ್ರಭಾವದ ಕಡೆಗೆ, ಅದರಲ್ಲೂ ನಿರ್ದಿಷ್ಟವಾಗಿ ಋಣಾತ್ಮಕ ಸಾಮಾಜಿಕ ಪ್ರಭಾವದ ಕಡೆಗೆ, ವಿಶೇಷ ಗಮನ ನೀಡುವುದು ಅಗತ್ಯ. ಏಕೆಂದರೆ, ಅದು ಮೂಲತಃ ನ್ಯಾಯಪರತೆಯ ಪ್ರಶ್ನೆಯೊಂದಿಗೆ ಲಗತ್ತಾಗಿದೆ. ಈ ಋಣಾತ್ಮಕ ಸಾಮಾಜಿಕ ಪ್ರಭಾವವು ಎರಡು ಆಯಾಮಗಳಲ್ಲಿ ಉಂಟಾಗುತ್ತದೆ. ಒಂದು ಸ್ಥಳಾಂತರ. ಇನ್ನೊಂದು, ಈ ಅಣೆಕಟ್ಟೆಗಳಿಂದಾಗಿ ಲಾಭ ಪಡೆಯುವ ವೃಂದ ಹಾಗೂ ನಷ್ಟ ಅನುಭವಿಸುವ ವೃಂದಗಳ ನಡುವೆ ಉಂಟಾಗುವ ಒಡಕು ಹಾಗೂ ಬೇರ್ಪಡಿಕೆ. ವಿಶ್ವ ಅಣೆಕಟ್ಟೆ ಆಯೋಗ ಸಲ್ಲಿಸಿರುವ ವರದಿಯೊಂದರಲ್ಲೂ ಸಾಮಾಜಿಕ ಪ್ರಭಾವದ ಈ ಎರಡೂ ಅಂಶಗಳ ಕಡೆಗೆ ವಿಶೇಷ ಗಮನ ನೀಡಲಾಗಿದೆ. ಈ ಆಯೋಗವು ಸ್ಥಳಾಂತರದಲ್ಲೂ ಎರಡು ಆಯಾಮಗಳನ್ನು ಗುರುತಿಸಿದೆ. ಒಂದು 'ಭೌತಿಕ ಸ್ಥಳಾಂತರ', ಇನ್ನೊಂದು 'ಜೀವನೋಪಾಯ ಬದಲಿಕೆ' (ಅಥವಾ ಅಪಹರಣ). 'ಭೌತಿಕ ಸ್ಥಳಾಂತರ' ಎಂದರೆ ಅನಿಚ್ಛಿತ ಉಚ್ಚಾಟನೆ ಎಂದರ್ಥ. ಇದು ತುಂಬ ಆಗಾಗ್ಗೆ ಬಲಾತ್ಕಾರ, ಜುಲುಮೆ ಹಾಗೂ ಕೆಲವು ಪ್ರಸಂಗಗಳಲ್ಲಿ ಕೊಲೆಯಿಂದಲೂ ಕೂಡಿರುತ್ತದೆ. 'ಜೀವನೋಪಾಯದ ಬದಲಿಕೆ' ಎಂದರೆ ಸ್ಥಳೀಯ ಆರ್ಥಿಕ ವ್ಯವಸ್ಥೆಯ ಭಂಗ ಎಂಬ ಅರ್ಥವನ್ನಷ್ಟೆ ಅಲ್ಲ, ಅದು ಅನೇಕ ನೈಸರ್ಗಿಕ ಸಂಪನ್ಮೂಲಗಳೂ ಪರಿಸರ ಸಾಧನಗಳೂ ಜನರಿಗೆ ಲಭ್ಯವಾಗದಂತೆ ಅವರನ್ನು ಪರಿಣಾಮಕಾರಿಯಾಗಿ ಸ್ಥಳಾಂತರಿಸುತ್ತದೆ ಎಂಬ ಅರ್ಥವನ್ನು ನೀಡುತ್ತದೆ. ಬಹು ವೇಳೆ 'ಭೌತಿಕ ಸ್ಥಳಾಂತರ'ವೂ 'ಜೀವನೋಪಾಯ ಬದಲಿಕೆ'ಯೂ ಜೊತೆಜೊತೆಯಾಗಿ ಹೋಗುತ್ತವೆ. ದೊಡ್ಡ ಅಣೆಕಟ್ಟೆಗಳಿಂದಾಗಿ ಎಷ್ಟು ಜನ ಸ್ಥಳಾಂತರಗೊಳ್ಳುತ್ತಾರೆ ಅನ್ನುವುದು ಜಗತ್ತಿನಲ್ಲಿ ಸ್ಥಳದಿಂದ ಸ್ಥಳಕ್ಕೆ ತುಂಬ ಬದಲುತ್ತದೆ. ಅದು ಸುಮಾರು ೪೦ ಮಿಲಿಯನ್‌ನಿಂದ ೮೦ ಮಿಲಿಯನ್‌ವರೆಗೆ ಎಂದು 'ವಿಶ್ವ ಅಣೆಕಟ್ಟೆ ಆಯೋಗ' ಅಂದಾಜು ಮಾಡಿದಲ್ಲಿ, ಮಾರ್ಕ್ ಕಲ್ಲಿಯವರು (೧೯೯೬) ೬೦ ಮಿಲಿಯನ್ ಎಂದು ಅಂದಾಜು ಮಾಡುತ್ತಾರೆ. ಜಗತ್ತಿನ ಶೇ. ೫೭ರಷ್ಟು ದೊಡ್ಡ ಅಣೆಕಟ್ಟೆಗಳನ್ನು ಕಟ್ಟಿರುವ ಚೀಣಾ ಮತ್ತು ಭಾರತಗಳಲ್ಲಿ ಭಾರಿ ಪ್ರಮಾಣದಲ್ಲಿ ಜನರ ಸ್ಥಳಾಂತರವಾಗಿದೆ. ಚೀಣಾದಲ್ಲಿ ೧೦.೨ ಮಿಲಿಯನ್ ಜನ ಸ್ಥಳಾಂತರಗೊಂಡರು ಎಂಬ ಸರಕಾರದ ಅಧಿಕೃತ ಸಂಖ್ಯೆಯು ವಾಸ್ತವತೆಗಿಂತ ಭಿನ್ನವಾಗಿದೆಯಲ್ಲದೇ ಅಲ್ಪ ಅಂದಾಜಿನಿಂದ ಕೂಡಿದೆ ಎಂದೇ ಕಂಡುಬರುತ್ತದೆ. ಯಾಂಗ್‌ಟ್ಸೇ ನದಿ ಪಾತ್ರದಲ್ಲೇ ಸುಮಾರು ೧೦ ಮಿಲಿಯನ್ ಜನ ಸ್ಥಳಾಂತರಗೊಂಡರೆಂದು ಭಾವಿಸಲಾಗಿದೆ. ಇಂತಹ ಸ್ಥಳಾಂತರದ ಅನಧಿಕೃತ ವರದಿಯು ಈ ಸಂಖ್ಯೆ ೪೦ ಮಿಲಿಯನ್‌ನಿಂದ ೬೦ ಮಿಲಿಯನ್ ಮಧ್ಯೆ ಇದೆಯೆಂದು ತಿಳಿಸುತ್ತದೆ. ಭಾರತದಲ್ಲಿ ಈ ಸಂಖ್ಯೆ ೧೬ ಮಿಲಿಯನ್ ಹಾಗೂ ೩೮ ಮಿಲಿಯನ್‌ಗಳ ನಡುವೆ ಇದೆ. ೧೯೫೦-೧೯೯೦ರ ಕಾಲಾವಧಿಯಲ್ಲಿ ಭಾರತ ಹಾಗೂ ಚೀಣಾಗಳಲ್ಲಿ ಅಣೆಕಟ್ಟೆ ನಿರ್ಮಾಣದಿಂದಾಗಿ ಸ್ಥಳಾಂತರಗೊಂಡವರ ಸಂಖ್ಯೆ ೨೬ ಮಿಲಿಯನ್‌ನಿಂದ ೫೮ ಮಿಲಿಯನ್‌ವರೆಗಿದ್ದಿತೆಂದು 'ವಿಶ್ವ ಅಣೆಕಟ್ಟೆ ಆಯೋಗ' ಅಂದಾಜುಮಾಡುತ್ತದೆ.

ದೊಡ್ಡ ಅಣೆಕಟ್ಟೆಗಳಿಂದಾಗಿ ಸ್ಥಳಾಂತರಗೊಂಡವರ ಸಂಖ್ಯೆಯನ್ನು ಯಾವತ್ತೂ ಕಡಮೆಯಾಗಿ ಪ್ರಕಟಿಸುವುದು ಈ ಸಮಸ್ಯೆಯ ಒಂದು ಪ್ರಮುಖ ಲಕ್ಷಣವಾಗಿದೆ. ವಿಶ್ವ ಬ್ಯಾಂಕ್ ನಿಧಿಯಿಂದ ನಿರ್ಮಿತವಾದ ದೊಡ್ಡ ಅಣೆಕಟ್ಟೆಗಳಿಂದ ಸ್ಥಳಾಂತರಿತರಾದ ಜನರ ಸಂಖ್ಯೆ ಶೇ. ೪೭ರಷ್ಟು ಎಂದು ವಾಸ್ತವಿಕವಾಗಿ ದಾಖಲಾಗಿದೆ. ಇದು ಪ್ರಾಯೋಜನೆ ಪ್ರಾರಂಭಿಸುವುದಕ್ಕಿಂತ ಮುಂಚೆ ಮಾಡಿದ್ದ ಅಂದಾಜಿಗಿಂತ ಹೆಚ್ಚಿಗಿದೆ. ಆದರೆ 'ವಿಶ್ವ ಅಣೆಕಟ್ಟೆ ಆಯೋಗ' ಅಡ್ಡ ತನಿಖೆ ಮಾಡಿ ನೋಡಿದಾಗ ಈ ಸಂಖ್ಯೆ ಅಂದಾಜಿಗಿಂತ ಶೇ. ೬೫ರಷ್ಟು ಹೆಚ್ಚೆಂದು ಕಂಡುಬಂದಿತು. ಬಾಧಿತರಾದ ಅಧಿಕ ಸಂಖ್ಯೆ ಜನರನ್ನು ಸ್ಥಳಾಂತರಿತರಾದವರೆಂದು ಪರಿಗಣಿಸಿಯೂ ಇಲ್ಲ, ಅವರಿಗೆ ಲಭಿಸಬೇಕಾದ ಪರಿಹಾರವನ್ನು ನೀಡಿಯೂ ಇಲ್ಲ. ನದಿಯ ಜಲಾನಯನ ಪ್ರದೇಶದಲ್ಲಿ ವಾಸ ಮಾಡುತ್ತಿದ್ದ ಜನಸಮುದಾಯಗಳು, ಭೂರಹಿತ ಅಥವಾ ಕಾನೂನುಸಮ್ಮತ ಒಡೆತನ ಹಕ್ಕು ಇಲ್ಲದವರು, ಸ್ಥಳೀಯ ಜನರು, ಪ್ರಾಯೋಜನೆಯ ಅಧೋರಚನೆಯಿಂದ ಬಾಧಿತರಾದ ಜನರು – ಇವರನ್ನೆಲ್ಲ ಸ್ಥಳಾಂತರಿತ ಜನರ ಪಟ್ಟಿಯಲ್ಲಿ ಸೇರಿಸಿಯೇ ಇಲ್ಲ. ಕಾನೂನುಸಮ್ಮತ ಭೂ ಒಡೆತನದ ಹಕ್ಕು ಇದ್ದವರಿಗಷ್ಟೆ ಪರಿಹಾರ ನೀಡಲಾಗಿದೆ. ಇದರ ಫಲವಾಗಿ ಸ್ಥಳೀಯ ಜನರೂ ಜನಾಂಗೀಯ ಅಲ್ಪಸಂಖ್ಯಾತರೂ ತುಂಬ ಸಂಕಷ್ಟಕ್ಕೊಳಗಾಗಿದ್ದಾರೆ. ಲೆಕ್ಕದಲ್ಲಿ ಸೇರಿಸಲಾದ ಜನರಲ್ಲೂ ಎಲ್ಲರಿಗೂ ಏನೂ ಪುನರ್‌ವಸತಿ ಒದಗಿಸಿಕೊಟ್ಟಿಲ್ಲ. ಹೀಗೆ ಪುನರ್ ವಸತಿಯಲ್ಲಿ ತೋರಿರುವ ವೈಪರೀತ್ಯ ಪ್ರಮಾಣವೇ ಈ ಇಡೀ ಪ್ರಕ್ರಿಯೆ ಎಷ್ಟು ವಿಲಕ್ಷಣ ಸ್ವರೂಪದ್ದು ಎಂಬುದನ್ನು ತೋರಿಸಿಕೊಡುತ್ತದೆ. ಉದಾಹರಣೆಗೆ, ಭಾರತದಲ್ಲಿ ಭಾರ್ಗಿ ಅಣೆಕಟ್ಟೆ ಪ್ರಾಯೋಜನೆಯಲ್ಲಿ ಶೇ. ೧೦ರಷ್ಟು ಜನರಿಗಷ್ಟೆ ಪುನರ್‌ವಸತಿ ಏರ್ಪಡಿಸಿಕೊಟ್ಟಿದ್ದರೆ, ಧೋಮ್ ಅಣೆಕಟ್ಟೆ ಪ್ರಾಯೋಜನೆಯಲ್ಲಿ ಶೇ.೯೦ರಷ್ಟು ಜನರಿಗೆ ಈ ಸೌಲಭ್ಯ ಒದಗಿಸಲಾಗಿದೆ. ಅರ್ಜೆಂಟೈನಾ/ಪರಗ್ವೇಯ ಯಾಸುರೇಟಾ ಅಣೆಕಟ್ಟೆ ಪ್ರಾಯೋಜನೆಯಲ್ಲಿ ಸ್ಥಳಾಂತರಿತರಾದವರಲ್ಲಿ ಶೇ. ೩೦ರಷ್ಟು ಜನರಿಗೆ ಪುನರ್ ವಸತಿ ಕಲ್ಪಿಸಿಕೊಡಲು ೨೦ ವರ್ಷ ತೆಗೆದುಕೊಳ್ಳಲಾಯಿತು. ಪಾಕಿಸ್ತಾನದ ಟಾರ್ಬೆಲ ಅಣೆಕಟ್ಟೆ ನಿರ್ಮಿಸಿದಾಗ ಸ್ಥಳಾಂತರಿತರಾದವರಲ್ಲಿ ಮೂರನೇ ಎರಡು ಭಾಗದವರನ್ನಷ್ಟೆ ಹೊಸ ಭೂಮಿ ಪಡೆಯಲು ಅರ್ಹರೆಂದು ಕಂಡುಕೊಳ್ಳಲಾಯಿತು. ಇವರಲ್ಲೂ ಮೂರನೇ ಒಂದು ಪಾಲಿನಷ್ಟು ಅಥವಾ ೨೦,೦೦೦ ಜನ ಹೊಸ ಭೂಮಿ ಪಡೆಯಲೇ ಇಲ್ಲ. ಏಕೆಂದರೆ, ಇದಕ್ಕಾಗಿ ಅಧಿಕಾರಿಗಳು ಪಡೆದುಕೊಳ್ಳಲಾಗಿದ್ದ ಭೂಮಿ ಪ್ರಮಾಣ ಸಾಲದಾಯಿತು. ಟುಕುರೂಯಿ (ಬ್ರೆಜಿಲ್)ಯಲ್ಲಿ ಪರಕಾಮಾ ಬುಡಕಟ್ಟಿನ ಜನರಷ್ಟೆ ಪುನರ್‌ವಸತಿ ಪಡೆದರು, ಉಳಿದವರು ಪಡೆಯಲಿಲ್ಲ.

ಪುನರ್‌ವಸತಿಯ ಅನುಭವಕ್ಕೆ ಸಂಬಂಧಿಸಿ 'ವಿಶ್ವ ಅಣೆಕಟ್ಟೆ ಆಯೋಗ' ಸಂಗ್ರಹಿಸಿರುವ ಮಾಹಿತಿ ಯಾವ ರೀತಿಯಲ್ಲೂ ಪರಿಪೂರ್ಣವೇನಲ್ಲ. ಇದಕ್ಕೆ ಕಾರಣ ಸ್ಥಳಾಂತರಣ ಹಾಗೂ ಪುನರ್‌ವಸತಿಗೆ ಸಂಬಂಧಿಸಿ ವ್ಯವಸ್ಥಿತ ಅಧಿಕೃತ ಅಂದಾಜುಗಳು ಲಭ್ಯವಿಲ್ಲದಿರುವುದು. ಲಭ್ಯವಿದ್ದ ಮಾಹಿತಿಯೂ ತುಂಡು ತುಂಡಾಗಿದ್ದಿತು. ಇಡೀ ಚಿತ್ರಣ ಪಡೆಯಲು ಸುಲಭವಿರಲಿಲ್ಲ. ವಿಶ್ವ ಅಣೆಕಟ್ಟೆ ಆಯೋಗ ಕಾರ್ಯದ ಕಾಲ ಚೌಕಟ್ಟು ಹಾಗಿದ್ದಿತು. ಆದಾಗ್ಯೂ ಲಭಿಸಿದ ತುಣುಕು ಮಾಹಿತಿಯನ್ನು ಒಟ್ಟಾಗಿಸಿ ನೋಡಿದಾಗ, ಸ್ಥಳಾಂತರವನ್ನು ಎಷ್ಟು ಮೃಗೀಯವಾಗಿ ಹಾಗೂ ಭಾವಹೀನವಾಗಿ ನೆರವೇರಿಸಲಾಗಿದೆ ಎಂಬುದು, ಅದರ ಬಗೆಗೆ ಎಷ್ಟು ತುಚ್ಛೀಕಾರ ತೋರಲಾಗಿದೆ ಎಂಬುದು ಕಂಡುಬರುತ್ತದೆ. ಪ್ರಾಯೋಜನೆಯನ್ನು ರೂಪಿಸುವಾಗಾಗಲೀ ಪುನರ್‌ವಸತಿ ಮಾಡುವಾಗಾಗಲೀ ಬಾಧಿತ ಜನರೂ ಭಾಗವಹಿಸಿದ ಒಂದು ಉದಾಹರಣೆಯೂ ಇಲ್ಲ. ಸ್ಥಳಾಂತರವನ್ನು ಅಧಿಕಾರಿಗಳು ಸಾರತಃ ಬಲಾತ್ಕಾರದೊಂದಿಗೆ ನಡೆಸಿದ್ದಾರೆ. ಅದೊಂದು ನಿರಿಚ್ಛೆಯ ವೇದನೆಯಿಂದ ಕೂಡಿದ ಹಾಗೂ ಬಹಳ ಲಂಬಿತವಾದ ಪ್ರಕ್ರಿಯೆಯಾಗಿದೆ. ಕರೀಬಾ



(ಜಿಂಬಾಬ್ವೆ)ದಲ್ಲಿ ಪ್ರತಿಭಟಿಸುತ್ತಿದ್ದ ಜನರ ವಿರುದ್ಧ ಗುಂಡು ಹಾರಿಸಿದಾಗ ಎಂಟು ಮಂದಿ ಮೃತರಾದರು; ೩೭೬ ಮಂದಿ ಮಾಯಾ ಆಚಿ ಜನರನ್ನು ಕೊಲ್ಲಲಾಯಿತು. ಮಿಗುಯೆಲ್ ಅಲ್ಮಾನ್ ಅಣೆಕಟ್ಟೆ (ಮೆಕ್ಸಿಕೋ) ನಿರ್ಮಿಸಿದಾಗ ೨೧,೦೦೦ ಮಾಯಾ ಮೂಲದ ಇಂಡಿಯನ್ನರ ಮನೆಗಳನ್ನು ಸುಟ್ಟುಹಾಕಲಾಯಿತು. ಭಾರತದಲ್ಲೇ ಬಾರ್ಗಿ ಅಣೆಕಟ್ಟೆ ನಿರ್ಮಿಸಿದಾಗ ೧೬೨ ಹಳ್ಳಿಗಳು ನೀರಿನಲ್ಲಿ ಮುಳುಗಿ ಅಲ್ಲಿನ ಜನರು ಸ್ಥಳಾಂತರಿಸುವ ಬಲಾತ್ಕಾರಕ್ಕೊಳಗಾದರು. ಅದೇ ರೀತಿ ೧೯೮೧ರಲ್ಲಿ ಆಂಧ್ರಪ್ರದೇಶದಲ್ಲಿ ಶ್ರೀಶೈಲಮ್ ಪ್ರಾಯೋಜನೆಯನ್ನು ಕೈಗೊಂಡಾಗ ಹಲವಾರು ಹಳ್ಳಿಗಳ ಜನರನ್ನು ಅವರ ನೈಸರ್ಗಿಕ ಜೀವನ ಸ್ಥಳಗಳಿಂದ ಬಲಾತ್ಕಾರದಿಂದ ಹೊರಹಾಕಲಾಯಿತು.

ಅನೇಕ ಪ್ರಸಂಗಗಳಲ್ಲಿ ಪುನರ್‌ವಸತಿಗೊಂಡವರಿಗೆ ಪರಿಹಾರಧನ ನೀಡುವುದಾಗಿ ಹೇಳಲಾಯಿತು. ಆದರೆ ಈ ಪರಿಹಾರಧನವನ್ನು ತುಂಬ ತಡವಾಗಿ ನೀಡಿದ್ದು, ನೀಡಿದ ಹಣದ ಮೊತ್ತವೂ ಅತ್ಯಲ್ಪವಾಗಿದ್ದು ಸ್ಥಳಾಂತರಿತ ಜನರ ಜೀವನೋಪಾಯವನ್ನು ಪುನರ್‌ಸ್ಥಾಪಿಸಲು ಅದು ಎಷ್ಟು ಮಾತ್ರವೂ ಸಾಲದಾಗಿದ್ದಿತು. ಪುನರ್‌ವಸತಿಗಾಗಿ ನಿವೇಶನಗಳನ್ನು ಆಯ್ಕೆ ಮಾಡಿದಾಗ ಸ್ಥಳಾಂತರಿತ ಜನರ ಅಭಿಪ್ರಾಯ ಕೇಳಲೂ ಇಲ್ಲ, ಆ ಹೊಸ ಸ್ಥಳಗಳಲ್ಲಿ ಅವರ ಜೀವನೋಪಾಯಕ್ಕೆ ಸೂಕ್ತ ಸೌಲಭ್ಯಗಳಿವೆ ಎಂಬುದನ್ನೂ ಪರಿಗಣಿಸಲಿಲ್ಲ. ಉದಾಹರಣೆಗೆ, ಚೀಣಾದಲ್ಲಿ ಹಳದಿ ನದೀಪಾತ್ರದಲ್ಲಿ ಲಿಯೂ-ಯೌ-ಬಾ ಪ್ರಾಯೋಜನೆಯನ್ನು ನಿರ್ಮಿಸಿದಾಗ ಆ ಫಲವತ್ತಾದ ಕಣಿವೆ ಪ್ರದೇಶದಿಂದ ಹೊರಹಾಕಲಾದ ೪೦,೦೦೦ ಜನರಿಗೆ ಬಿರುಗಾಳಿಯ ಮೇಲು ಪ್ರದೇಶದಲ್ಲಿ ವಸತಿ ಕಲ್ಪಿಸಿ ಕೊಡಲಾಯಿತು. ಬೀಸುಗಾಳಿಯ ಕೊರೆತದಿಂದಾಗಿ ಈ ಪ್ರದೇಶ ಫಲವತ್ತತೆಯನ್ನು ಕಳೆದುಕೊಂಡಿದ್ದಿತು. ಹಾಗಾಗಿ ಪ್ರಯಾಸದಿಂದ ಕೃಷಿ ಭೂಮಿಯನ್ನಾಗಿ ಪರಿವರ್ತಿಸಲಾಗಿದ್ದ ಆ ಸ್ಥಳವನ್ನು ಬಿಟ್ಟುಕೊಡಬೇಕಾಯಿತು. ಇದರಿಂದಾಗಿ ಕೃಷಿಯೋಗ್ಯ ಭೂಮಿಯ ಪ್ರಮಾಣದಲ್ಲಿ ತೀವ್ರ ಕಡಿತವಾಯಿತು. ಇದರಿಂದಾಗಿ ಪುನರ್‌ವಸತಿಗೊಂಡ ಜನರು ಕಡುಬಡತನ ಎದುರಿಸುವಂತಾಯಿತು. ವಿಯೆತ್ನಾಂನ ಹೋವ ಬಿನ್ಹ್ ಪ್ರದೇಶ, ಥೈಲ್ಯಾಂಡ್‌ನ ಸಿರಿಂಧೋರ್ನ್, ಸರವಾಕ್-ಮಲೇಷ್ಯದ ಬಲಾಂಗ್ ಆಲಿ ಇವೆಲ್ಲವುಗಳಲ್ಲೂ, ಅಧಿಕ ಗ್ರಾಮಾಂತರ ಜನಸಂಖ್ಯೆಯ ಪ್ರಾಚ್ಯ ಏಷ್ಯನ್ ದೇಶಗಳ ಅಕ್ಕಿ ಬೆಳೆಯುವ ಅನೇಕ ದೇಶಗಳಲ್ಲೂ ಮೇಲಿನಂಥ ಅನುಭವವೇ ದಾಖಲಾಗಿದೆ. ಬೆಳೆ ಬೆಳೆಯುತ್ತಿದ್ದ ಭೂಮಿ ನಷ್ಟವಾದುದೂ, ಪ್ರತಿಯಾಗಿ ನೀಡಲಾದ ಭೂಮಿ ಕೀಳು ಗುಣಮಟ್ಟದ್ದಾಗಿದ್ದುದೂ, ಸ್ಥಳೀಯ ಜನರ, ಅದರಲ್ಲೂ ರೈತಾಪಿ ಜನರ, ಬಾಳನ್ನು ದುಸ್ಸಹವನ್ನಾಗಿ ಮಾಡಿತು. ಹೀಗೆ ಕೃಷಿಯೋಗ್ಯ ಭೂಮಿ ನೀಡುವುದರಲ್ಲಿ ವಿಫಲವಾದುದಷ್ಟೆ ಅಲ್ಲ, ಪುನರ್‌ವಸತಿಗೊಳಿಸಿದ ಸ್ಥಳಗಳಲ್ಲಿ ಮೂಲಭೂತ ಸೇವಾ ಸೌಲಭ್ಯಗಳೂ ಅಧಿರಚನೆಯೂ ಇಲ್ಲದಿದ್ದುದೂ ಸ್ಥಳಾಂತರಿತ ಜನರು ಪಡಬಾರದ ಕಷ್ಟಪಡುವಂತಾಯಿತು. ಉದಾಹರಣೆಗೆ, ಪಾಕಿಸ್ತಾನದಲ್ಲಿ ಟಾರ್ಬೆಲ ಅಣೆಕಟ್ಟೆ ನಿರ್ಮಿಸಿದಾಗ ಸ್ಥಳಾಂತರಿತ ಜನರಿಗೆ ತುಂಬ ಕಳಪೆ ಗುಣಮಟ್ಟದ ಕೃಷಿ ಪ್ರದೇಶಗಳನ್ನು ನೀಡಲಾಯಿತು. ಅವರು ೨೫ ವರ್ಷಗಳ ನಂತರವಷ್ಟೆ ವಿದ್ಯುತ್ ಸೌಲಭ್ಯ ಪಡೆದರು. ಅಲ್ಲಿ ಆರೋಗ್ಯ ಹಾಗೂ ಶಿಕ್ಷಣ ಸೌಲಭ್ಯಗಳಂತೂ ಎಷ್ಟು ಮಾತ್ರವೂ ಇರಲಿಲ್ಲ. ಈಶಾನ್ಯ ಥೈಲ್ಯಾಂಡ್‌ನಲ್ಲಿ ೧೯೮೦ರ ದಶಕದಲ್ಲಿ ಪುನರ್‌ವಸತಿ ವೈಫಲ್ಯದಿಂದಾಗಿ ೧೫,೦೦೦ ಕೃಷಿ ಕುಟುಂಬಗಳವರು ಭೂಹೀನರಾದರು. ಜಲಾಶಯ-ಪ್ರೇರಿತ ಪುನರ್‌ವಸತಿ ಸಮಸ್ಯೆ ಪರಿಹಾರದಲ್ಲಿ 'ಏಳು ತೊಂದರೆಗಳು' ಹಾಗೂ 'ನಾಲ್ಕು ಅಸಮರ್ಪಕತೆಗಳು' ಇವೆಯೆಂದು ಚೀಣಾದಲ್ಲಿ ಸರಕಾರೀ ವರದಿಗಳು ಒಪ್ಪಿಕೊಂಡಿವೆ. ''ಈ ಏಳು ತೊಂದರೆಗಳಲ್ಲಿ ವಿದ್ಯುಚ್ಛಕ್ತಿ, ಕುಡಿಯುವ ನೀರು, ಶಾಲೆಗಳು, ಆಹಾರ, ವೈದ್ಯಕೀಯ ಸೇವೆ, ಸಂಪರ್ಕ ಹಾಗೂ ಸಾರಿಗೆ ಸಾಧನಗಳು ಇವುಗಳು ಬೇಕಾದಷ್ಟು ಇಲ್ಲದಿರುವುದೂ ಸೇರಿದೆ. ನಾಲ್ಕು ಅಸಮರ್ಪಕತೆಗಳೆಂದರೆ: ನೀರಾವರಿ, ವಸತಿ, ಪ್ರವಾಹ ನಿಯಂತ್ರಣ ಹಾಗೂ ಜಲಾಶಯ ಸುಸ್ಥಿತಿಪಾಲನೆ - ಇವುಗಳು ಸಾಕಷ್ಟು ಪ್ರಮಾಣದಲ್ಲಿಲ್ಲದಿರುವುದು ಮತ್ತು ಲಭ್ಯವಿರುವುವೂ ಕಳಪೆ ಗುಣಮಟ್ಟದವಾಗಿರುವುದು.''

ಜನರನ್ನು ಪುನರ್‌ವಸತಿಗೊಳಿಸಿದಾಗಲೂ ಕೇಂದ್ರ ಗಮನ ಭೌತಿಕ ಪುನರ್‌ವಸತಿಯ ಕಡೆಗಿರುತ್ತದೆಯೇ ಹೊರತು ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯ ಕಡೆಗಿರುವುದಿಲ್ಲ. ಈ ವಿಷಯಗಳಲ್ಲಿ ರಾಜ್ಯದ ಅನಾಸಕ್ತಿ ಹಾಗೂ ಬೇಜವಾಬ್ದಾರಿತನ ಸಾಮಾನ್ಯ ಅನುಭವವಾಗಿದೆ. ಪುನರ್‌ವಸತಿಗೊಂಡ ಜನರ ಜೀವನೋಪಾಯವನ್ನು ಪೂರ್ಣವಾಗಿ ಪುನರ್‌ಸ್ಥಾಪಿಸುತ್ತಿಲ್ಲ. ಚೀಣಾದಲ್ಲಿ ಪುನರ್‌ವಸತಿಗೊಂಡ ೧೦ ಮಿಲಿಯನ್ ಜನರಲ್ಲಿ ಶೇ. ೪೬ರಷ್ಟು ಇನ್ನೂ 'ಕಡುಬಡತನ'ದಲ್ಲಿದ್ದಾರೆ. ಭಾರತದಲ್ಲಿ ಶೇ. ೭೪ರಷ್ಟು ಸ್ಥಳಾಂತರಿಸಿದ ಜನರನ್ನಿನ್ನೂ ಪುನರ್‌ವಸತಿಗೊಳಿಸಲಾಗಿಲ್ಲ, ಅವರಲ್ಲಿ ಹೆಚ್ಚಿನವರು ದಾರಿದ್ರ್ಯ ಸ್ಥಿತಿಯಲ್ಲಿದ್ದಾರೆ. ಬೆಳೆವಣಿಗೆಯ ಹೆಸರಿನಲ್ಲಿ ಇಷ್ಟು ಅಪಾರ ಪ್ರಮಾಣದಲ್ಲಿ ಮಾನವ ಜೀವಿಗಳ ಹಾಗೂ ಅವರ ಜೀವನ ವಿಧಾನದ ವಿನಾಶ ಉಂಟಾಗುವುದು ದೊಡ್ಡ ಅಣೆಕಟ್ಟೆಗಳ ನಿರ್ಮಾಣದ ವಿರುದ್ಧ ವಿಶಾಲ ವ್ಯಾಪ್ತಿಯ ಹಾಗೂ ಎಡೆಬಿಡದ ಪ್ರತಿಭಟನಾ ಚಳವಳಿಗೆ ದಾರಿ ಮಾಡಿಕೊಟ್ಟಿರುವುದರಲ್ಲಿ ಆಶ್ಚರ್ಯವೇನಿಲ್ಲ. ದೊಡ್ಡ ಅಣೆಕಟ್ಟೆಗಳ ನಿರ್ಮಾಣಕ್ಕಾಗಿ ತಗುಲುವ ವೆಚ್ಚ ಹಾಗೂ ಅವುಗಳಿಂದ ಲಭಿಸುವ ಪ್ರಯೋಜನ ಇವುಗಳ ಹಂಚಿಕೆಯಲ್ಲಿ ತುಂಬ ಅನ್ಯಾಯ ಹಾಗೂ ಅನೀತಿಪರತೆ ಉಂಟಾಗಿದೆ ಎಂದೇ 'ವಿಶ್ವ ಅಣೆಕಟ್ಟೆ ಆಯೋಗ'ದ ವರದಿಯ ಪ್ರಸ್ತಾವನೆಯಲ್ಲೂ ಸುಸ್ಪಷ್ಟವಾಗಿ ತಿಳಿಸಲಾಗಿದೆ. ದೊಡ್ಡ ಅಣೆಕಟ್ಟೆಗಳು ಅವುಗಳ ನಿರ್ಮಾಣದ ಸಾಮಾಜಿಕ ಹಾಗೂ ಪರಿಸರ ವೆಚ್ಚಗಳನ್ನು ಭರಿಸುವಂಥ ಜನರಿಗಲ್ಲ. ಆದರೆ, ಇತರ ವೃಂದಗಳಿಗೇ ಹೆಚ್ಚಿನ ಪ್ರಯೋಜನ ಉಂಟುಮಾಡಿಕೊಡುತ್ತವೆ. ಇವುಗಳ ನಿರ್ಮಾಣ ವೆಚ್ಚಗಳನ್ನು ಭರಿಸುವವರು ಸಾಮಾನ್ಯವಾಗಿ ಬಡಜನರಾಗಿರುತ್ತಾರೆ, ದುರ್ಬಲರಾಗಿರುತ್ತಾರೆ. ಅವರಿಗೆ ನಿರ್ಮಾಣದ ಯಾವ ಘಟ್ಟದಲ್ಲೂ ಪ್ರಾತಿನಿಧ್ಯ ಇರುವುದಿಲ್ಲ. ಈ ಅಸಮಾನತೆಗಳೇ ದೊಡ್ಡ ಅಣೆಕಟ್ಟೆಗಳ ವಿರುದ್ಧ ಚಳವಳಿಗಳ ಮೂಲದಲ್ಲಿರುವುದು. ಈ ಚಳವಳಿಗಳು ಇಂತಹ 'ಬೆಳೆವಣಿಗೆಗಳ' ಮೂಲರೂಪವನ್ನೇ ಪ್ರಶ್ನಿಸುತ್ತವೆ ಮತ್ತು ಸಮಾನತೆಯ ಮೇಲೆ ಆಧರಿಸಿದ ಪರ್ಯಾಯ ಬೆಳೆವಣಿಗೆಗಳ ಮಾರ್ಗಗಳನ್ನು ಅರಸುತ್ತಿವೆ.

**ಸ್ಥಳೀಯ ಜನಸಮೂಹ**

ದೊಡ್ಡ ಅಣೆಕಟ್ಟೆಗಳ ನಿರ್ಮಾಣದಿಂದ ತುಂಬ ಹೆಚ್ಚಿನ ಕೆಡುಕಿಗೆ ಒಳಗಾಗುವರೆಂದರೆ ಸ್ಥಳೀಯ ಜನರು. ಅವರ ಹಿತಗಳನ್ನು ಯಾವತ್ತೂ ಉಪೇಕ್ಷಿಸಲಾಗಿರುತ್ತದೆ. ಸ್ಥಳಾಂತರದ ಕಡುವೆಚ್ಚಗಳ ಭಾರ ಹೊರುವ ಹೊತ್ತಿನಲ್ಲೇ ಅವರಿಗೆ ಅವುಗಳಿಂದ ಲಭಿಸುವ ಪ್ರಯೋಜನಗಳಲ್ಲಿ ಕಿಂಚಿತ್ ಪಾಲೂ ಲಭಿಸುತ್ತಿಲ್ಲ. ಫಿಲಿಪ್ಪೀನ್ಸ್‌ನಲ್ಲಿ ಬಹುಮಟ್ಟಿಗಿನ ಎಲ್ಲ ಅಣೆಕಟ್ಟೆಗಳೂ ದೇಶದ ೬-೭ ಮಿಲಿಯನ್ ಸ್ಥಳೀಯ ಜನರ ವಸತಿ ಪ್ರದೇಶಗಳಲ್ಲೇ ನಿರ್ಮಿತವಾಗಿವೆ. ಭಾರತದಲ್ಲಿ ವಿಕಸನ ಪ್ರಾಯೋಜನೆಗಳಿಂದ ಸ್ಥಳಾಂತರಿತರಾದವರಲ್ಲಿ ಶೇ. ೪೦ - ಶೇ. ೫೦ರಷ್ಟು ಜನ ಬುಡಕಟ್ಟಿನ ಜನರೇ ಆಗಿದ್ದಾರೆ. ಸ್ಥಳಾಂತರಿತರಾದ ಬುಡಕಟ್ಟಿನ ಜನರ ಬಗೆಗೆ ಎಷ್ಟು ತಾತ್ಸಾರ ತೋರಲಾಗಿದೆ ಎಂಬುದನ್ನು ಅಮೆರಿಕದ ಗತ ಹಾಗೂ ಕೆನಡಾದ ಇಂದಿನ ಅನುಭವ ಸ್ಪಷ್ಟಪಡಿಸುತ್ತದೆ.

ದೊಡ್ಡ ಅಣೆಕಟ್ಟೆಗಳಿಂದಾಗುವ ಮತ್ತೊಂದು, ಸಾಮಾನ್ಯವಾಗಿ ಗಮನಕ್ಕೆ ಬಾರದ ಪ್ರತಿಕೂಲ ಪರಿಣಾಮವೆಂದರೆ – **ನದಿ ಪ್ರವಾಹದ ದಿಕ್ಕಿನಲ್ಲಿ ವಾಸಿಸುತ್ತಿರುವ ಜನರ ಜೀವನೋಪಾಯದ** ಮೇಲೆ ಆಗುವ ದುಷ್ಪ್ರಭಾವ. ಪ್ರವಾಹ ಮೂಲದ ಸರಳ ಸಾಗುವಳಿ, ಶುಷ್ಕಕಾಲದ ಸಾಗುವಳಿ ಹಾಗೂ ನದಿ ಪ್ರವಾಹದ ದಿಕ್ಕಿನಲ್ಲಿನ ಮೀನುಗಾರಿಕೆ ಇವೆಲ್ಲ ದೊಡ್ಡ ಅಣೆಕಟ್ಟೆಗಳಿಂದ ತೀವ್ರ ಕಷ್ಟಕ್ಕೊಳಗಾಗುತ್ತವೆ. ಸ್ತ್ರೀ-ಪುರುಷ ವೈಷಮ್ಯ ಹೆಚ್ಚುವುದು ಮತ್ತೊಂದು ದುಷ್ಪರಿಣಾಮ. ಇಂದು ಆಚರಣೆಯಲ್ಲಿ ಆಸ್ತಿ ಹಕ್ಕುಗಳೂ ವಾರಸುದಾರತನದಲ್ಲಿನ ಭೇದ ಭಾವವೂ ಈ ವೈಷಮ್ಯವನ್ನು ಉಲ್ಬಣಗೊಳಿಸಿವೆ. ದೊಡ್ಡ ಅಣೆಕಟ್ಟೆಗಳ ಹೆಚ್ಚಿನ ಪ್ರಾಯೋಜನೆಗಳು ಯೋಜನಾಘಟ್ಟದಲ್ಲಿ ಸ್ತ್ರೀ-ಪುರುಷ ಪರಿಗಣನೆಯ ಬಗೆಗೆ ಕುರುಡಾಗಿರುತ್ತವೆ ಮತ್ತು ಸ್ತ್ರೀಯರ ಜೀವನೋಪಾಯದ ಮೇಲಾಗುವ ದುಷ್ಪರಿಣಾಮಗಳನ್ನು ತೀವ್ರಗೊಳಿಸುತ್ತವೆ. ದೇಶದ ಪುರಾತನ ಸಾಂಸ್ಕೃತಿಕ ಸ್ವತ್ತುಗಳ ನಷ್ಟ, ಬಸವನ ಹುಳುಗಳಿಂದ ಬರುವ ರೋಗಗಳು, ಮಲೇರಿಯ, ಜಪಾನೀ ಮಿದುಳಿನ ಉರಿಯೂತ ರೋಗ – ಇವೆಲ್ಲ ಈ ದೊಡ್ಡ ಅಣೆಕಟ್ಟೆಗಳಿಂದಾಗುವ ಬೆಲೆ ಕಟ್ಟಲಾಗದ ಕೆಲವು ದುಷ್ಪರಿಣಾಮಗಳು.

**ನ್ಯಾಯಪರತೆಯ ಪರಿಗಣನೆ**

ನ್ಯಾಯಪರತೆಯ ಪರಿಗಣನೆ ತುಂಬ ಹಳೆಯ ಕಾಲದ್ದು. ಸಮಾಜದಲ್ಲಿ ಅಧಿಕಾರ ವ್ಯವಸ್ಥೆಯು ತಿರುಚಿಕೊಂಡಿದ್ದಂಥ ಕಾಲದಲ್ಲಿ ಪ್ರಾರಂಭವಾದುದು. ಹಾಗಾಗಿ ಕಾನೂನು ಪ್ರಕ್ರಿಯೆಯಲ್ಲಿ ಅಧಿಕಾರಾರೂಢರಾದವರ ಪ್ರಭಾವವೇ ಹೆಚ್ಚಿಗಿರುವ ಎಲ್ಲ ಸಾಧ್ಯತೆಗಳಿದ್ದವು. ಆದರೆ ಅನ್ಯಾಯವಾಗದಂತೆ ಬಡಜನರ ರಕ್ಷಣೆಯೇ ನ್ಯಾಯಪರತೆಯ ಮೂಲ ಸೂತ್ರವಾಗಿರಬೇಕು. ''ಕಾನೂನು ಮತ್ತು ನ್ಯಾಯಪರತೆ ಇವುಗಳ ನಡುವಿನ ಸಂಬಂಧವನ್ನು ನಿರೂಪಿಸುವಾಗ ಎರಡು ನಿರ್ಧಾರಕ ನಿಯಮಗಳು ಹುಟ್ಟಿಕೊಂಡವು. ಮೊದಲನೆಯದು ಹಕ್ಕುಗಳು ಪರಸ್ಪರ ಸಮತೋಲನದಲ್ಲಿರಬೇಕು, ಎಂಬುದು. ಬೇರೆ ಬೇರೆ ಸ್ಥಿತಿಯ ಜನರು ಬೇರೆ ಬೇರೆ ಹಕ್ಕುಗಳನ್ನು ಹೊಂದಿರುತ್ತಾರೆ ಅನ್ನುವುದನ್ನು ನ್ಯಾಯಪರತೆ ಒಪ್ಪಿಕೊಳ್ಳುತ್ತದೆ. ಆದರೆ ಅಧಿಕಾರ ಸ್ಥಿತಿಯಲ್ಲಿ ಅಸಮತೆ ಇದ್ದರೂ ಮೂಲ ಹಕ್ಕು

ಗಳನ್ನು ಮಾತ್ರ ಸರಿಯಾಗಿ ಗೊತ್ತುಪಡಿಸಬೇಕೆಂದು ನ್ಯಾಯಪರತೆ ಒತ್ತಾಯಿಸುತ್ತದೆ. ಇದನ್ನು ಸಾಧಿಸಲು ಎರಡು ಪಕ್ಷಗಳೂ ನ್ಯಾಯಾಲಯಕ್ಕೆ ಬಂದು ಒಪ್ಪಂದಕ್ಕಾಗಿ ಶ್ರಮಿಸಬೇಕು. ಹೀಗೆ ಒಪ್ಪಂದಕ್ಕೆ ಬಂದಾಗ ಎರಡನೆಯ ಸೂತ್ರವೊಂದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅದೆಂದರೆ- ಒಬ್ಬರ ಹಕ್ಕುಗಳು ಇನ್ನೊಬ್ಬರ ಹಕ್ಕುಗಳಿಗೆ ಕಂಟಕವಾಗ ಬಾರದು ಎಂಬುದು. ಹೀಗೆ ನ್ಯಾಯಪರತೆಯ ಪರಿಗಣನೆಯು ಸಂಭವನೀಯ ಅನ್ಯಾಯದೊಂದಿಗೆ ಪ್ರಾರಂಭವಾಗಿ 'ನ್ಯಾಯೋಚಿತ' ಅಥವಾ 'ಸಮದರ್ಶಿ' ನಿಯಮಕ್ಕೆ ಬರುವ ವಿಧಾನವಾಗಿ ಇನ್ನೊಬ್ಬರ ಹಕ್ಕುಗಳನ್ನು ಒಪ್ಪಿಕೊಳ್ಳುವುದರತ್ತ ಮತ್ತು ಸಹಯೋಗದತ್ತ ಗಮನ ಕೇಂದ್ರೀಕರಿಸುತ್ತದೆ.

''ಆದ್ದರಿಂದ ಅನ್ಯಾಯ ಉಂಟಾಗಿದೆ ಎಂದು ಭಾವಿಸಿದಾಗ ನ್ಯಾಯಪರತೆಯ ಸಮಸ್ಯೆ ಉದ್ಭವಿಸುತ್ತದೆ. ನ್ಯಾಯಪರತೆಯು ಅಣೆಕಟ್ಟೆಯಿಂದಾಗುವ ಪ್ರಯೋಜನಗಳಿಗಿಂತ ಅದಕ್ಕೆ ತಗಲುವ ವೆಚ್ಚಗಳ ಕಡೆಗೆ, ಹೆಚ್ಚು ಕಷ್ಟಕ್ಕೊಳಗಾಗುವವರ ಕಡೆಗೆ, ನಿರ್ದಿಷ್ಟವಾಗಿ ಯಾರ ಹಿತಗಳು ಎಷ್ಟು ಮಾತ್ರವೂ ಪ್ರಕಟವಾಗವೋ, ಸಂರಕ್ಷಿಸಲ್ಪಡುವುದಿಲ್ಲವೋ ಅಂಥವರ ಕಡೆಗೆ ಹೆಚ್ಚಿನ ಗಮನ ಹರಿಸುತ್ತದೆ. ಹೀಗೆ ಪ್ರತ್ಯೇಕಗೊಂಡ ಜನರು, ಹೆಚ್ಚು ದುರ್ಬಲರಾದ ಜನರು, ಸ್ಥಳೀಯ ಸಂಸ್ಕೃತಿಗಳು, ಮಹಿಳೆಯರು, ಯಾವುದೇ ಅಭಿವೃದ್ಧಿ ಯೋಜನೆಯಿಂದಲೂ ಬಲು ಸುಲಭವಾಗಿ ಕೆಡಕನ್ನಷ್ಟೆ ಅನುಭವಿಸುವಂಥ ಜನರು, ಇವರುಗಳು ಹೇಗೆ ದೊಡ್ಡ ಅಣೆಕಟ್ಟೆಗಳ ನಿರ್ಮಾಣದಿಂದ ಪ್ರಧಾನವಾಗಿ ಘಾಸಿಗೊಳ್ಳುತ್ತಾರೆಂಬುದನ್ನು ನ್ಯಾಯಪರತೆ ಎತ್ತಿ ತೋರಿಸುತ್ತದೆ. ಇದೇ ರೀತಿ ಪ್ರಾಯೋಜನೆಯಿಂದ ನೇರವಾಗಿ ಯಾವುದೇ ಪ್ರಯೋಜನ ಪಡೆಯದಂಥ ಜನರನ್ನು ಗಮನಕ್ಕೆ ತಂದುಕೊಂಡಾಗ ಹಂಚಿಕೆಯ ಸಮಸ್ಯೆ ಉದ್ಭವಿಸುತ್ತದೆ. ಪ್ರಯೋಜನಗಳ ಹಂಚಿಕೆಯಲ್ಲಿ ಎಲ್ಲಿ ಅನ್ಯಾಯವಾಗುವ ಸಾಧ್ಯತೆ ಹೆಚ್ಚು ಎಂಬುದನ್ನದು ಗೊತ್ತುಪಡಿಸುತ್ತದೆ. ಅಂತಿಮವಾಗಿ ಎಲ್ಲ ರೀತಿಯಲ್ಲೂ ನಷ್ಟಕ್ಕೀಡಾಗುವವರ ಕಡೆಗೆ ಅದು ಹೆಚ್ಚು ಗಮನ ನೀಡುತ್ತದೆ ಮತ್ತು ಒಟ್ಟಿನ ಮೇಲಿನ ಅಥವಾ ಬೃಹತ್ - ಆರ್ಥಿಕ ಸ್ವರೂಪದ ಕಡೆಗೆ ಅಷ್ಟಾಗಿ ಗಮನಹರಿಸುವುದಿಲ್ಲ'' (ವಿಶ್ವ ಅಣೆಕಟ್ಟೆ ಆಯೋಗ ವಿಷಯ ಪರಿಶೀಲನಾ ವರದಿ).

**ನ್ಯಾಯಪರತೆ ಅನುಷ್ಠಾನದ ವಿವಿಧ ದೃಷ್ಟಿಕೋನಗಳು**

ಜನಹಿತವನ್ನು ಗುರಿಯಾಗುಳ್ಳ ಆರ್ಥಿಕ ವ್ಯವಸ್ಥೆಯಲ್ಲಿ ದುರ್ಬಲರ ನ್ಯಾಯಪರತೆಗೆ ಸಂಬಂಧಿಸಿದ ಮುಖ್ಯ ಸೂತ್ರವೊಂದಿದೆ. ದುರ್ಬಲರು ಸಾಮಾನ್ಯವಾಗಿ ಅರ್ಹತೆಗಳಿಂದ ವಂಚಿತರಾಗಿರುತ್ತಾರೆ. ಈ ಕಾರಣದಿಂದಾಗಿ ನಿರ್ಲಕ್ಷಿಸಲ್ಪಡುವ ಅಪಾಯಕ್ಕೊಳಗಾಗಿರುತ್ತಾರೆ. ಅಂಥವರ ಪರವಾಗಿ ರಾಜ್ಯವು ಮಧ್ಯೆ ಪ್ರವೇಶಿಸಬೇಕು ಎಂಬುದು ಮೇಲಿನ ಸೂತ್ರಕ್ಕೆ ಆಧಾರವಾಗಿದೆ. ಅಂಗವಿಕಲನೊಬ್ಬ ಇದಕ್ಕೊಂದು ಉದಾಹರಣೆ. ಇವನಿಗೆ ಸಂಪನ್ಮೂಲಗಳು ದುರ್ಲಭ. ಲಭ್ಯವಿರುವ ಸಂಪನ್ಮೂಲಗಳಿಂದಲೂ ಗರಿಷ್ಠ ಪ್ರಯೋಜನ ಪಡೆಯಲು ಇವನ ಸಾಮರ್ಥ್ಯ ಅತ್ಯಲ್ಪ. ಹಾಗಾಗಿ ಜನಹಿತದ ಆರ್ಥಿಕ ವ್ಯವಸ್ಥೆಯಲ್ಲಿ, ಸಂಪನ್ಮೂಲಗಳ ಹಂಚಿಕೆಯಲ್ಲಿ, ಇವನಿಗೆ ಆದ್ಯತೆ ಸಲ್ಲಬೇಕು. ದುರ್ಬಲರು ಒಳಗಾಗುವ ಅಪಾಯಗಳನ್ನು ಆದಷ್ಟು ಕಡಿಮೆಗೊಳಿಸುವುದು, ಅವರ ಹಕ್ಕುಗಳ ಸಂರಕ್ಷಣೆ, ಅವರ ಸ್ಥಿತಿಗತಿಗಳ ಸುಧಾರಣೆ – ಇವುಗಳನ್ನು ಮೂರು ಕಣ್ಣೆಲೆಗಳಿಂದ ವಿವರಿಸಬಹುದು: ೧) ನೈತಿಕ ದೃಷ್ಟಿಕೋನ, ೨) ಹಕ್ಕು-ಆಧಾರಿತ ದೃಷ್ಟಿಕೋನ, ೩) ನ್ಯಾಯಪರತೆಯನ್ನು ಕಾರ್ಯಪಟುತ್ವವನ್ನಾಗಿ ಕಾಣುವ ದೃಷ್ಟಿಕೋನ. ನ್ಯಾಯಪರತೆಯ ನೈತಿಕ ದೃಷ್ಟಿಕೋನದಲ್ಲಿ ನೈತಿಕ ಮೌಲ್ಯಕ್ಕೆ ಕಾಳಜಿ ತೋರಲಾಗುತ್ತದೆ. ಇದಕ್ಕೆ ಉದಾಹರಣೆಯೆಂದರೆ, ಕೆಲವು ದುರ್ಬಲ ವೃಂದಗಳ ಜೀವನೋಪಾಯವನ್ನು ಸಂರಕ್ಷಿಸುವ ಹೊಣೆಗಾರಿಕೆಯನ್ನು, ಅವುಗಳ ಹಕ್ಕುಗಳ ಸ್ವರೂಪವನ್ನು ಪರಿಗಣಿಸದೆಯೇ ಸಮಾಜವು ತಾನೇ ಹೊರುವುದು. ಎರಡನೆಯ ಹಕ್ಕು-ಆಧಾರಿತ ದೃಷ್ಟಿಕೋನವು ಅಣೆಕಟ್ಟುಗಳ ನಿರ್ಮಾಣದಲ್ಲಿ ರಾಷ್ಟ್ರಗಳ ಹಕ್ಕುಗಳನ್ನು, ಈ ನಿರ್ಮಾಣದಿಂದಾಗಿ ಸೃಜಿತವಾದ ಸಂಪನ್ಮೂಲಗಳ ಮೇಲೆ ವಿವಿಧ ಜನವೃಂದಗಳ ಹಕ್ಕುಗಳನ್ನು, ಒಂದೇ ಮಟ್ಟದಲ್ಲಿ ಇರಿಸಿ ಪರಿಗಣಿಸುತ್ತದೆ. ನೈತಿಕ ದೃಷ್ಟಿಕೋನದ ಮೊದಲ ವಿಧಾನದಲ್ಲಿ ಬಡಜನರ ಬಗೆಗೆ ದಯಾವಂತಿಕೆಯ ಅಂಶವಿದ್ದಲ್ಲಿ, ಹಕ್ಕು - ಆಧಾರಿತವಾದ ಎರಡನೆಯ ವಿಧಾನದಲ್ಲಿ ಇಂಥ ಯಾವುದೇ ಪರಿಗಣನೆಗಳಿರುವುದಿಲ್ಲ. ನ್ಯಾಯಪರತೆಯನ್ನು ಕಾರ್ಯಪಟುತ್ವವನ್ನಾಗಿ ಕಾಣುವ ಮೂರನೆಯ ವಿಧಾನವು, ನ್ಯಾಯಪರತೆಯು ಕಾರ್ಯ ಪಟುತ್ವವನ್ನು ಸಾಧಿಸುವ ಸಾಧನವಾಗಿರಬೇಕೆಂಬುದನ್ನು ಒತ್ತಿ ಹೇಳುತ್ತದೆ. ನ್ಯಾಯಪರತೆಯೂ ಆರ್ಥಿಕ ಕಾರ್ಯ ಪಟುತ್ವವೂ ಪರಸ್ಪರ ವಿರೋಧಕ ಗುರಿಗಳೆಂದು ಬಹು ವೇಳೆ ಹೇಳಲಾದರೂ ನ್ಯಾಯಪರತೆ ಇಲ್ಲದಿರುವುದೇ ಘರ್ಷಣೆಗಳಿಗೆ ದಾರಿ ಮಾಡಿಕೊಡುತ್ತದೆ ಮತ್ತು ಅದು ತನ್ನ ಸರದಿಯಲ್ಲಿ, ಅತಿ ವಿಳಂಬ, ಅಧಿಕತರ ವೆಚ್ಚ ಮತ್ತು ಅಲ್ಪಕಾರ್ಯಪಟುತ್ವ ಗಳನ್ನು ಉಂಟುಮಾಡುತ್ತದೆ, ಎಂದು ಈ ವಿಧಾನ ಒತ್ತಿ ಹೇಳುತ್ತದೆ. ಅಣೆಕಟ್ಟುಗಳ ನಿರ್ಮಾಣಕ್ಕೆ ತಗುಲುವ ವೆಚ್ಚಗಳ ಹಾಗೂ ಅವುಗಳಿಂದ ಲಭಿಸುವ ಪ್ರಯೋಜನಗಳ ಅಸಮರ್ಪಕ ವಿತರಣೆಯೇ ವಾಸ್ತವವಾಗಿ ಹೆಚ್ಚಿನ ಘರ್ಷಣೆಗಳಿಗೆ ಕಾರಣವಾಗಿರುತ್ತದೆ. ಹೆಚ್ಚು ನ್ಯಾಯೋಚಿತ ವಿತರಣೆಯಿಂದ ಘರ್ಷಣೆಗಳು ಕಡಿಮೆಯಾಗುತ್ತವೆ ಮತ್ತು ತತ್ಫಲವಾಗಿ ಕಾರ್ಯಪಟುತ್ವ ಹೆಚ್ಚುತ್ತದೆ.

## ಕನ್ಯಾಕುಮಾರಿಯಲ್ಲಿ

೧

ಹೆಜ್ಜೆ ಊರಿದರಾಯ್ತು
ಅತ್ತ ಕಡೆಗೂ ಕಡಲು ಇತ್ತ ಕಡೆಗೂ ಕಡಲು
ನಿಂತ ನೆಲೆ ಬಿಟ್ಟುಳಿದುದೆಲ್ಲವೂ ಕಡಲು ಕಡಲೇ
ಕನ್ಯಾಕುಮಾರಿಯಲ್ಲೆಲ್ಲೂ.
ಸುರಿಯಲೆಷ್ಟೇ ಮಳೆ ಹೊಳೆಗಳೆಷ್ಟೇ ಬರಲಿ
ಹಿಗ್ಗಿ ಹಿರಿದಾಗುವುದು ತೆರೆದು ತೋಳುಗಳನ್ನು

೨

ಬೀಸಿ ಬರುವುವು ಗಾಳಿ ಎಲ್ಲೆಲ್ಲಿಂದಲೋ
ಹೊತ್ತು ತರುತ್ತ ಸುಗಂಧ
ಚಕ್ಕಂದವಾಡುವನು ದೂರದೂರಿನ ಸೂರ್ಯ
ಅಲೆಯಲೆಯ ತಲೆ ಮೇಲು
ಜಲಕ್ರೀಡೆಯಾಡುವುದು ಬೆಳ್ದಿಂಗಳಿಲ್ಲುಕ್ಕಿ
ಪಳಗುಟ್ಟುವುವು ನಕ್ಷತ್ರ
ಇರುಳೆಲ್ಲವೂ ಇಲ್ಲಿ ಅರಳು ಚೆಲ್ಲಿದ ಹಾಗೆ
ಇಲ್ಲಿನಲೆಯೆದ್ದದ್ದು ಎದೆಬಡಿತವಿದ್ದಂತೆ
ನಡೆದಾಡುವುದು ಸ್ವಚ್ಛಂದ
ದಿಗ್ದಿಗಂತದವರೆಗೂ ನಿಲ್ಲುವುದೇ ಇಲ್ಲ

೩

ಅನುಭವಿಸಲೆಂದೇ ಹಿಗ್ಗಿನನಂತತೆಯ
ಕಡಲಿಗಿಳಿಯಲು ಗೆಳೆಯ ಬೆರಳಲ್ಲಿ ಸೂಚಿಸಿದ:
ಇದೆ ಬಂಡೆ ಗುರು ವಿವೇಕಾನಂದರೇರಿದ್ದು.
ಪುಲಕಗೊಳ್ಳುತ ಚಲಿಸುತಿರುವಂತೆಯೇ ದೋಣಿ
ಗುಡುಗಾಡಿತ್ತು ಕರುಳು ಕೊರೆಯುವ ಹಾಗೆ
ಕಿವಿಗಳಲ್ಲನುರಣಿಸಿ ರಾಜಕಾರಣದ ದನಿ :

ಅತ್ತ ಅರಬಿಸಮುದ್ರ ಇತ್ತ ಬಾಂಗ್ಲಾ ಕೊಲ್ಲಿ
ಹಿಂದು ಸಾಗರವಷ್ಟೇ ನಿಮ್ಮದು.

೪

ಪಂಚಭೂತಗಳಲ್ಲಿ ಇದು ಒಂದು - ಜಲ;
ಇಲ್ಲಿ ಒಂದೊಂದಕ್ಕೆ ಸ್ವಂತ ಸೃಷ್ಟಿಯ ಶಕ್ತಿ
ಕೂಡಿದರೆ ನಾಲ್ಕು? ಅಗೋ – ಆಕಾಶ ಅವಕಾಶ.
ಗೂಡು ಕಟ್ಟುವುವಾಗ ಜೀವ-ಜೀವದ ಜಾಲ.
ಇರಬೇಕವನು, ಹೌದು - ಆರನೆಯ ಭೂತವೇ.
ಚಿಂದಿಮಾಡಿದ ನೆಲವ ರಷ್ಯ ಅಮೆರಿಕ ಏಷ್ಯ
ಖಂಡ ಖಂಡಗಳೆಂದು
ಕಡಲನೂ ಸೀಳಿ
ಸಾಲದೆಂದದಕೆ
ತಾನೆ ಕಟ್ಟಿದ ನಾಗರಿಕತೆಯ ಕಸ
ತುಂಬುತ್ತ
ಸೀಳಹೊರಟಿಹನಿವನು
ಅನಂತ ಆಕಾಶವನ್ನೂ.

ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ
೨೦೩, ೭ನೇ 'ಎ' ಮೆಯಿನ್, ಆರ್.ಪಿ.ಸಿ. ಲೇ ಔಟ್
ವಿಜಯನಗರ, ಬೆಂಗಳೂರು-೫೬೦ ೦೪೦

'ವಿಶ್ವ ಅಣೆಕಟ್ಟೆ ಆಯೋಗ'ವು ಪ್ರಜ್ಞಾಪೂರ್ವಕ ವಾಗಿಯೇ ನ್ಯಾಯಪರತೆಯ ಹಕ್ಕು - ಆಧಾರಿತ ದೃಷ್ಟಿ ಕೋನವನ್ನು ಒತ್ತಿ ಹೇಳಿದೆ. ಈ ದೃಷ್ಟಿ ಕೋನದಿಂದ ಉದ್ಭವಿಸುವ ಕೆಲವು ಸೂತ್ರಗಳನ್ನು ಪ್ರಾಯೋಜನೆಗಳ ಪರಿಗಣನೆಯ ಆರಂಭಿಕ ಹಂತದಲ್ಲೇ ನಿರ್ಧಾರಕ ಅಂಶ ಗಳನ್ನಾಗಿ ಪರಿಗಣಿಸಬೇಕೆಂದೂ ಅದು ಒತ್ತಾಯಿಸುತ್ತದೆ.

ಹಕ್ಕು-ಆಧಾರಿತ ದೃಷ್ಟಿಕೋನವನ್ನು 'ವಿಶ್ವ ಅಣೆಕಟ್ಟೆ ಆಯೋಗ'ದ ಚೌಕಟ್ಟಿನೊಳಗೆ ಒಡಮೂಡಿಸುವಾಗ ಕೆಲವು ಮೌಲ್ಯಗಳನ್ನು ಪ್ರಮುಖ ಆಧಾರವಾಗಿ ತೆಗೆದುಕೊಳ್ಳಲಾಗಿದೆ. ಈ ಮೌಲ್ಯಗಳನ್ನು ಅಣೆಕಟ್ಟೆ ನಿರ್ಮಾಣದ ಬಗೆಗೆ ನಿರ್ಧಾರ ತೆಗೆದುಕೊಳ್ಳುವ ಹಂತದಲ್ಲಿಯೇ ಅನಿವಾರ್ಯ ಸೂತ್ರಗಳನ್ನಾಗಿ ಪರಿಗಣಿಸಬೇಕೆಂದು ಒತ್ತಿ ಹೇಳಿ, ಸಂಪತ್ತಿನ ಹಂಚಿಕೆಯಲ್ಲಿ ಕೆಲವು ಸಂಸ್ಥೆಗಳು ಸಾಧಿಸಿದ ಯಶಸ್ವೀ ಅನುಭವಗಳನ್ನು ಅದು ನಮೂದಿಸಿದೆ.

**ಮೌಲ್ಯ ಕುರಿತ ಪ್ರಮೇಯಗಳು ಹಾಗೂ ಸೂತ್ರಗಳು**

ಅಣೆಕಟ್ಟೆ ಪ್ರಾಯೋಜನೆಗಳಲ್ಲಿ ಉನ್ನತ ಮಟ್ಟದ ನ್ಯಾಯಪರತೆಯನ್ನು ಸಾಧಿಸಲು ಅನುಸರಿಸ ಬಹುದಾದಂಥ ಮೂರು ಅಂತರಸಂಬಂಧಿತ ಮೌಲ್ಯಗಳನ್ನು 'ವಿಶ್ವ ಅಣೆಕಟ್ಟೆ ಆಯೋಗ'ವು ಒತ್ತಿ ಹೇಳುತ್ತದೆ. ಅವು ಯಾವುವೆಂದರೆ : ೧) ಅಣೆಕಟ್ಟೆಗಳ ಸಾಮಾಜಿಕ ಪ್ರಭಾವ, ಸ್ವರೂಪ ಹಾಗೂ ಪ್ರಮಾಣ ಗಳನ್ನು ಹೆಚ್ಚು ವಿಶಾಲವಾಗಿ ಅರ್ಥಮಾಡಿಕೊಳ್ಳುವಂತೆ ಮಾಡುವುದು; ೨) ಯಾರೂ ನಷ್ಟಕ್ಕೊಳಗಾಗದಂಥ ಗುರಿಸಾಧನೆಗಾಗಿ ಪ್ರಯತ್ನಿಸುವುದು; ೩) ಸಂಪತ್ತನ್ನು ನ್ಯಾಯಯುತವಾಗಿ ವಿತರಿಸುವುದು ಮತ್ತು ನಷ್ಟಾನುಭವಿಗಳನ್ನು ಪ್ರಯೋಜನಾನುಭವಿಗಳನ್ನಾಗಿ ಪರಿವರ್ತಿಸುವುದು. ಈ ಮೌಲ್ಯಗಳನ್ನು ಕಾರ್ಯರೂಪಕ್ಕೆ ತರಲು ಕೆಳಗೆ ಕಾಣಿಸಿದ ಸೂತ್ರಗಳನ್ನು ಅನುಸರಿಸುವುದು ಅವಶ್ಯವೆಂದು ಪರಿಗಣಿಸಲಾಗಿದೆ:

ಅ) ಅಭಿವೃದ್ಧಿ ಯೋಜನೆಗಳ ಆಯ್ಕೆಗಾಗಿ ಮೌಲ್ಯ ಮಾಪನ ಮಾಡುವಾಗ ನ್ಯಾಯಪರತೆಯನ್ನು ಒಂದು ಮೂಲಭೂತ ಅಂಶವನ್ನಾಗಿ ಪರಿಗಣಿಸಬೇಕು.

ಆ) ದೊಡ್ಡ ಅಣೆಕಟ್ಟೆಗಳ ನಿರ್ಮಾಣ ಕಾರ್ಯದಲ್ಲಿ, ಹಿಂಸೆ, ಪೀಡನೆ, ಭಯೋತ್ಪಾದನೆ ಹಾಗೂ ಅನುಚಿತ ಬಲಪ್ರಯೋಗ ಯಾವತ್ತೂ ಕೂಡದು.

ಇ) ಅಣೆಕಟ್ಟೆಗಳ ಹಾಗೂ ಇತರ ಪರ್ಯಾಯ ಯೋಜನೆಗಳ ವಿಶ್ಲೇಷಣೆ ಮಾಡುವಾಗ, ನದಿಯ ಮೇಲು ಹಾಗೂ ಕೆಳಭಾಗಗಳಲ್ಲಿ ವಾಸಿಸುವವರ ಮೇಲೆ ಅವುಗಳ ಪ್ರಭಾವ, ಇಂದಿನ ಹಾಗೂ ಕಾಲಾನುಕ್ರಮದಲ್ಲಿ ಅವುಗಳ ಪ್ರಭಾವ - ಹೀಗೆ ಎಲ್ಲ ಸಂಚಿತ ಪ್ರಭಾವಗಳನ್ನು ಪರಿಗಣಿಸಬೇಕು.

ಈ) ಅಣೆಕಟ್ಟೆಗಳಿಂದಾಗಲಿರುವ ಋಣಾತ್ಮಕ ಪ್ರಭಾವ ಗಳನ್ನು ಆದಷ್ಟೂ ಕನಿಷ್ಠಗೊಳಿಸಿ, ಧನಾತ್ಮಕ ಪ್ರಭಾವ ಗಳನ್ನು ಗರಿಷ್ಠಗೊಳಿಸಬೇಕು.

ಉ) ಪ್ರಾಯೋಜನೆಯ ಯೋಜನೆಯ ಮತ್ತು ಅನುಷ್ಠಾನದ ಎಲ್ಲ ಘಟ್ಟಗಳಲ್ಲೂ ಆಸಕ್ತ ಹಾಗೂ ಬಾಧಿತ ಜನವಿಭಾಗಗಳೆಲ್ಲವೂ ಭಾಗವಹಿಸುವುದನ್ನು ಅವಿಭಾಜ್ಯ ಭಾಗವನ್ನಾಗಿ ಮಾಡಬೇಕು.




ಊ) ಯೋಜನೆ ತಯಾರಿಸುವಾಗಲೇ ಅಣೆಕಟ್ಟೆ ವಿಕಾಸ ದಿಂದಾಗಿ ಉಂಟಾಗುವ ಪ್ರಭಾವ-ಪರಿಣಾಮ ಗಳನ್ನು (ಅದರಲ್ಲೂ ನಿರ್ದಿಷ್ಟವಾಗಿ ನದಿ ಜಲಾನಯನ ಪ್ರದೇಶಗಳ ಮೇಲೆ ಅವು ಉಂಟು ಮಾಡುವ ಪ್ರಭಾವವನ್ನು) ಕ್ರಮಬದ್ಧವಾಗಿ ಗೊತ್ತು ಹಚ್ಚುವ ಮತ್ತೆ ಆಗಾಗ್ಗೆ ಪುನರ್‌ಪರಿಶೀಲಿಸುವ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು.

**ಸಂಪತ್ತಿನ ಹಂಚಿಕೆಯ ಸಂಸ್ಥೀಕರಣ - ಅನುಭವಗಳು**

ಅಣೆಕಟ್ಟೆಗಳ ಬಗೆಗೆ ನಿರ್ಧಾರ ಕೈಗೊಳ್ಳುವಾಗ ನ್ಯಾಯ ಪರತೆಯ ಸೂತ್ರಗಳನ್ನು ಕಾರ್ಯಕ್ರಮ ಪಟ್ಟಿಯಲ್ಲಿ ಸೇರಿಸುವುದು ಮೇಲ್ನೋಟಕ್ಕೆ ದುಸ್ಸಾಧ್ಯವಾಗಿ ಕಂಡು ಬಂದರೂ, ಉತ್ತೇಜನಕಾರಿ ಫಲಿತಾಂಶಗಳನ್ನು ನೀಡುವ ''ಅತ್ಯುತ್ತಮ ಅಭ್ಯಾಸಗಳು'' ಎಂದು ಹೇಳಬಹುದಾದ ಇಂಥ ಅನೇಕ ಕಾರ್ಯಸಾಧು ಉಪಕ್ರಮಗಳೂ ಈ ನಿಟ್ಟಿನಲ್ಲಿ ಪರಿಶೀಲನಾರ್ಹವಾಗಿವೆ. ಅಣೆಕಟ್ಟೆಗಳ ವಿನ್ಯಾಸ ರಚನೆ ಹಾಗೂ ಯೋಜನೆಯ ಘಟ್ಟದಲ್ಲೇ 'ಪ್ರಯೋಜನ ಹಾಗೂ ಸಂಪತ್ತಿನ ಹಂಚಿಕೆ'ಯ ಮನೋಧರ್ಮ ಹೊಂದಿದ್ದಲ್ಲಿ ಅದು ನ್ಯಾಯಪರತೆಯನ್ನು ಸುಧಾರಿಸುವುದಕ್ಕೆ ಮಾರ್ಗ ಮಾಡಿಕೊಡಬಲ್ಲಂಥ ಅನೇಕ ರೂಪಗಳನ್ನು ತೋರಿಸಿಕೊಡುವುದು ಸಾಧ್ಯವಿದೆ. ಅಣೆಕಟ್ಟೆಗಳ ನಿರ್ಮಾಣದಿಂದ ಬಾಧಿತವಾದಂಥ ಪ್ರದೇಶಗಳ ಜನರಿಗೆ ವಿದ್ಯುಚ್ಛಕ್ತಿಯನ್ನು 'ಉಚಿತವಾಗಿ ಇಲ್ಲವೇ ಅಗ್ಗದ ದರದಲ್ಲಿ' ಒದಗಿಸುವುದು ಅವುಗಳಲ್ಲೊಂದು. ನಾರ್ವೇಯಲ್ಲಿ ಹೀಗೆಯೇ ಮಾಡಲಾಗಿದೆ. ಅಷ್ಟೇ ಅಲ್ಲ ವಿದ್ಯುಚ್ಛಕ್ತಿ ಮಾರಾಟದಿಂದ ಲಭಿಸಿದ ಆದಾಯದಲ್ಲಿ ಶೇಕಡಾ ಇಂತಿಷ್ಟು ಭಾಗವನ್ನು ಪುನರ್‌ವಸತಿಗೊಂಡವರಿ ಗಾಗಿಯೂ ಸ್ಥಳೀಯ ಆಡಳಿತಾಂಗ ಘಟಕಗಳಿಗಾಗಿಯೂ ತೆಗೆದಿರಿಸಬಹುದು. ಚೀಣಾದಲ್ಲಿನ ಲೂಬೂಗೆ, ಯಾಂತಾನ್, ಷುಯಿಕೌ ಹಾಗೂ ಎರ್ಟಾನ್ ಜಲವಿದ್ಯುದ್ಯೋಜನೆಗಳಲ್ಲೂ, ಕೊಲಂಬಿಯದಲ್ಲಿನ ರಿಯೋ ಗ್ರ್ಯಾಂಡ್ ಜಲವಿದ್ಯುದ್ಯೋಜನೆಯಲ್ಲೂ, ಬ್ರೆಜಿಲ್‌ನಲ್ಲಿನ ಅನೇಕ ಜಲವಿದ್ಯುದ್ಯೋಜನೆಗಳಲ್ಲೂ ಹೀಗೆ ಮಾಡಲಾಗಿದೆ. ಬಾಧಿತರಾದ ಜನರುಗಳ ನೀಡಬೇಕಾದ ಆಸ್ತಿ ತೆರಿಗೆ ಅಥವಾ ಸ್ಥಳೀಯ ಆಡಳಿತ ತೆರಿಗೆಗಳನ್ನು ಅಣೆಕಟ್ಟುಗಳ ಪ್ರಾಯೋಜನೆ ತಾನೇ ನೀಡಲು ಮುಂದಾಗುವುದು ಫ್ರಾನ್ಸ್ ಹಾಗೂ ನಾರ್ವೇಗಳಲ್ಲಿ ಅನುಸರಿಸಲಾಗುತ್ತಿರುವ ಲಾಭ ಹಂಚಿಕೆಯ ಮತ್ತೊಂದು ವಿಧಾನವಾಗಿದೆ. ಜಪಾನಿನಲ್ಲಿ ಜಲಾಶಯ ಕ್ಷೇತ್ರದ ಅಭಿವೃದ್ಧಿಗಾಗಿ ವಿಶೇಷ ಕ್ರಮಗಳ ಕುರಿತು ಒಂದು ಶಾಸನವನ್ನೇ ಮಾಡಲಾಗಿದೆ. ಅದರಲ್ಲಿ ಅಣೆಕಟ್ಟುಗಳಿಂದ ಬಾಧಿತರಾದ ಜನರಿಗೆ ನಾನಾ ರೀತಿಯ ಸೌಲಭ್ಯಗಳನ್ನು ಖಚಿತಗೊಳಿಸಿಕೊಡಲಾಗಿದೆ. ಚೀಣಾ ದಲ್ಲಿ 'ಜಲಾಶಯ ಪುನರ್‌ವಸತಿ ಶಾಸನ' ಎಂಬ ಒಂದು ಶಾಸನವನ್ನೇ ಮಾಡಲಾಗಿದೆ. ಅದು ಬಾಧಿತ ಜನರ ಹಕ್ಕುಗಳನ್ನು ಸ್ಪಷ್ಟೀಕರಿಸಿ ಅವುಗಳನ್ನು ಈಡೇರಿಸಲು ರಾಜ್ಯ ಅನುಸರಿಸಬೇಕಾದ ಕಟ್ಟುಪಾಡುಗಳನ್ನು ನಿರೂಪಿಸುತ್ತದೆ. ಈಚೆಗೆ ಅಲ್ಲಿ ಕ್ಸಿಯ ಒಲಂಗೋಲಿ ಪ್ರಾಯೋಜನೆಯನ್ನು ನಿರ್ಮಿಸಿದಾಗ ಮೇಲಿನ ಶಾಸನದಲ್ಲಿ ಅನೇಕ ಸುಧಾರಿತ ಕ್ರಮಗಳನ್ನು ಸೇರಿಸಲಾಯಿತು. ಅವನ್ನು ಜಗತ್ತಿನಲ್ಲಿ ಅನುಸರಿಸಬಹುದಾದ ಮಾದರಿಯೆಂದು ಶ್ಲಾಘಿಸಲಾಗಿದೆ. ೧೯೮೦ರ ದಶಕದಿಂದ ಚೀಣಾ ಕೈಗೊಂಡಿರುವ ಉಪಕ್ರಮಗಳಿಂದಾಗಿ ೪೭ಕ್ಕೂ ಹೆಚ್ಚು ಪ್ರದೇಶಗಳಲ್ಲಿ ೫ ಮಿಲಿಯನ್‌ಗೂ ಹೆಚ್ಚು ಪುನರ್‌ವಸತಿಗಾರರು ಪ್ರಯೋಜನ ಪಡೆದಿದ್ದಾರೆಂದು ಅಂದಾಜು ಮಾಡಲಾಗಿದೆ.

ಉಷ್ಣವಲಯ ಪ್ರದೇಶಗಳಲ್ಲಿ ನದಿಯ ಇಳಿ ಪ್ರದೇಶ ನಿವಾಸಿಗಳು ಒಳಗಾಗುವ ನಷ್ಟಗಳನ್ನು ತುಂಬಿಕೊಡಲು, ಆ ಕಾರ್ಯವನ್ನು ಒಂದು ರಾಷ್ಟ್ರೀಯ ಉಪಕ್ರಮವನ್ನಾಗಿಯೇ ಪರಿಗಣಿಸಬಹುದು. ಜೊತೆಗೆ ಮೇಲೆ ತಿಳಿಸಿದ ಸಂಪತ್ತಿನ ಹಂಚಿಕೆಯ ವಿಧಾನಗಳನ್ನು ಜಾರಿಗೆ ತರಬಹುದು. ನೀರಾವರಿಗೊಳಿಸಿದ ಪ್ರದೇಶಗಳನ್ನು ಹಂಚುವಾಗಲೂ, ಮೀನುಗಾರಿಕೆ ಹಕ್ಕುಗಳನ್ನು ನೀಡುವಾಗಲೂ ಬಾಧಿತ ಜನಸಮುದಾಯಗಳಿಗೆ ಆದ್ಯತೆ ನೀಡುವುದು ಬೆಂಬಲದ ಇನ್ನೊಂದು ವಿಧಾನವಾಗಿದೆ. ಈಗಾಗಲೇ ಅಸ್ತಿತ್ವದಲ್ಲಿರುವ ಅಣೆಕಟ್ಟುಗಳ ವಿಷಯದಲ್ಲಿ ಹೇಳುವುದಾದರೆ, ಹಿಂದಿನ ತೊಂದರೆಗಳನ್ನು ನಿವಾರಿಸಲು ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು (ಉದಾಹರಣೆಗೆ ಜಾಂಬಿಯಾದಲ್ಲಿ ಗ್ವೆಂಬೆ - ಟಾಂಗಾ ಪುನರ್‌ವಸತಿ ಹಾಗೂ ಅಭಿವೃದ್ಧಿ ಪ್ರಾಯೋಜನೆ ಯಲ್ಲಿ ಮಾಡಿರುವಂತೆ) ಸಂಪತ್ತಿನ ಹಂಚಿಕೆಯ ಹಾಗೂ ವೆಚ್ಚ ತಗ್ಗಿಸುವ ವಿಧಾನಗಳಲ್ಲೊಂದಾಗಿದೆ.

ದೊಡ್ಡ ಅಣೆಕಟ್ಟುಗಳನ್ನು ನಿರ್ಮಿಸುವಾಗ ನ್ಯಾಯ ಪರತೆಯನ್ನು ಖಚಿತಗೊಳಿಸಲು ಮತ್ತು ಸೌಲಭ್ಯಗಳನ್ನು ಹೆಚ್ಚು ನಿಷ್ಪಕ್ಷಪಾತವಾಗಿ ವಿತರಿಸಲು ಮೇಲಿನ ಕ್ರಮಗಳು 'ವಿಶ್ವ ಅಣೆಕಟ್ಟೆ ಆಯೋಗ' ಸಲಹೆ ಮಾಡಿರುವ ಧನಾತ್ಮಕ ಹಾಗೂ ನಿರ್ಧಾರಕ ಅಂಶಗಳಾಗಿವೆ.

(ಕನ್ನಡ ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್)

**ಪ್ರೊ॥ ಡಿ. ನರಸಿಂಹ ರೆಡ್ಡಿ**
ಅರ್ಥಶಾಸ್ತ್ರ ಪ್ರಾಧ್ಯಾಪಕರು
ಹೈದರಾಬಾದ್ ವಿಶ್ವವಿದ್ಯಾನಿಲಯ, ಹೈದರಾಬಾದ್




## ಜೀವದ ನಂಟು

'ಮಣ್ಣಿಂದ ಕಾಯಾ ಮಣ್ಣಿಂದ' ಎಂದು ಹಾಡಿದರು ದಾಸರು. ಆದರೆ, ಮಣ್ಣಿನಲ್ಲಿರುವ ಧಾತುಗಳೇ ಬೇರೆ, ನಮ್ಮ ದೇಹದಲ್ಲಿರುವ ಧಾತುಗಳೇ ಬೇರೆ. ಮಣ್ಣಿನಲ್ಲಿ ಸಿಲಿಕಾನಿನ ಅಂಶ ಬಹಳ ಹೆಚ್ಚು. ನಮ್ಮ ದೇಹದಲ್ಲಿ ಇಲ್ಲವೇ ಇಲ್ಲ ಎನ್ನಬಹುದು. 'ನೀರಿಂದ ಕಾಯಾ ನೀರಿಂದ' ಎಂದು ಹಾಡಿದ್ದರೆ ಹೆಚ್ಚು ಯುಕ್ತವಾಗಿದ್ದಿತು. ಏಕೆಂದರೆ, ಎಲ್ಲ ಪ್ರಾಣಿಗಳ, ಸಸ್ಯಗಳ ಹೆಚ್ಚಿನ ಅಂಶ ನೀರೇ. ಅದೂ, 'ಸಮುದ್ರದ ನೀರಿಂದ' ಎಂದಿದ್ದರೆ ಇನ್ನೂ ಸಮಂಜಸ ವಾಗಿರುತ್ತಿತ್ತು. ನಮ್ಮ ರಕ್ತದಲ್ಲಿ ಕಂಡು ಬರುವ ಅನೇಕ ಲವಣಗಳ ಸಾಂದ್ರತೆ ಸಮುದ್ರದ ನೀರಿನಲ್ಲಿರುವ ಆಯಾ ಲವಣಗಳ ಸಾಂದ್ರತೆಗಳನ್ನೇ ಹೋಲುತ್ತವೆ. ಬೆರಳು ಗಾಯವಾದಾಗ ತಟಕ್ಕನೆ ಚೀಪಿದರೆ ದೊರೆಯುವ ಉಪ್ಪಿನ ಅನುಭವವೇ ಸಮುದ್ರದ ನೀರಿನಿಂದಲೂ ದೊರೆಯುತ್ತದೆ. ಜೀವ ಹುಟ್ಟಿ ಬೆಳೆದಿದ್ದೆಲ್ಲಾ ಮೊದಲಿಗೆ ಸಮುದ್ರದ ನೀರಿನಲ್ಲಿಯೇ. ನೀರು ತ್ಯಜಿಸಿ, ಭೂಮಿಯ ಮೇಲೆ ಬದುಕಲು ಜೀವಿಗಳಿಗೆ ಕೋಟ್ಯಂತರ ವರ್ಷಗಳ ಪ್ರಯತ್ನದ ನಂತರವೇ ಸಾಧ್ಯವಾಯಿತು. ಈಗಲೂ ಸಮುದ್ರದಲ್ಲಿ ಕಾಣುವ ಜೀವರಾಶಿಯ ವೈವಿಧ್ಯತೆ ಭೂಮಿಯಲ್ಲಿ ಕಾಣದು. ನಮ್ಮ ದೇಹದಲ್ಲಿ ನಡೆಯುವ ಹೆಚ್ಚಿನ ರಾಸಾಯನಿಕ ಕ್ರಿಯೆಗಳೆಲ್ಲಾ ಸಜಲ ಪರಿಸರದಲ್ಲೇ ನಡೆಯುತ್ತದೆ. ನಮಗೆ ಊಟವಿಲ್ಲದೇ ತಿಂಗಳುಗಟ್ಟಲೆ ಬದುಕಿರುವುದು ಸಾಧ್ಯ. ನೀರಿಲ್ಲದೇ ಹಲವು ದಿನಗಳೂ ಬದುಕಲಾರೆವು. ನೀರು ಪ್ರಪಂಚದ ದ್ರವ್ಯಗಳಲ್ಲೆಲ್ಲಾ ಅತಿ ವಿಶಿಷ್ಟ ದ್ರವ್ಯ. ಇದರ ಕೆಲವು ಭೌತಿಕ, ರಾಸಾಯನಿಕ ಗುಣಗಳು ಇನ್ನಾವ ದ್ರವದಲ್ಲಿಯೂ ಕಾಣಬರುವುದಿಲ್ಲ. ಇದರ ವಿಶಿಷ್ಟ ಸ್ವಭಾವಗಳು ವಿಶ್ವದ ಇತರ ನಕ್ಷತ್ರ ಲೋಕಗಳಲ್ಲಿ ಜೀವಿಗಳಿದ್ದರೆ, ಅವೂ ನೀರಿನಿಂದಲೇ ಕೂಡಿರುತ್ತವೆ ಎಂಬ ಬಲವಾದ ಊಹೆಗೆ ಎಡೆಮಾಡಿಕೊಡುತ್ತವೆ.

### ಮೂರು ಸ್ಥಿತಿಗಳ ಪರಿಣಾಮ

ಭೂಮಿಯಲ್ಲಿ ಅತ್ಯಂತ ಛಳಿ ಧ್ರುವ ಪ್ರದೇಶ ಗಳಲ್ಲಿದೆ. ಧ್ರುವ ಪ್ರದೇಶಗಳ ಉಷ್ಣತೆಯಲ್ಲಿ ನೀರು ಹೆಪ್ಪುಗಟ್ಟಿ ಘನಾಕಾರದಲ್ಲಿರುತ್ತದೆ. ಭೂಮಧ್ಯ ರೇಖೆಯ ಸುತ್ತಾ ನೀರು ದ್ರವ ರೂಪದಲ್ಲಿ ಮಾತ್ರ ಕಂಡುಬರುತ್ತದೆ. ಸಮುದ್ರ ಮಟ್ಟದಲ್ಲಿ ನೀರು ಕುದಿಯುವುದು ೧೦೦ ಡಿಗ್ರಿ ಸೆಂಟೀಗ್ರೇಡ್ ಆದರೂ, ಉಷ್ಣವಲಯದ ೪೦-೫೦ ಡಿಗ್ರಿ ಸೆಂಟೀಗ್ರೇಡಿನಲ್ಲಿಯೂ ನೀರು ತ್ವರಿತವಾಗಿ ಆವಿಯಾಗಿ ಅನಿಲ ರೂಪ ಪಡೆದು ಕಾರ್ಮೋಡಗಳಿಗೆ ಜನ್ಮ ನೀಯುತ್ತದೆ. ಹೀಗೆ ಸಹಜವಾಗಿ, ನಮ್ಮ ವಾತಾವರಣದಲ್ಲಿ ಘನ, ದ್ರವ, ಅನಿಲ ಮೂರೂ ರೂಪಗಳಲ್ಲಿ ಕಂಡುಬರುವುದು ನೀರು ಮಾತ್ರ.

ನೀರಿನ ಪ್ರಾಮುಖ್ಯತೆಯ ಅತಿ ಪ್ರಾಚೀನ ಉಲ್ಲೇಖ ನಮಗೆ ಋಗ್ವೇದದಲ್ಲಿ ದೊರೆಯುತ್ತದೆ. ನೀರಿನ ದಾಹವನ್ನು ಆಗಿನ ಜನ ತಮ್ಮದೇ ವಿಶಿಷ್ಟ ರೀತಿಯಲ್ಲಿ ಚಿತ್ರಿಸಿದ್ದಾರೆ. ಮಳೆ ಸುರಿಯಲು ಬಿಡದೇ, ನೀರನ್ನು ತನ್ನೊಳಗೇ ಅಡಗಿಸಿ ಇಟ್ಟುಕೊಂಡ ಕಪ್ಪು ಮೋಡ ವೃತ್ರನೆಂಬ ರಾಕ್ಷಸ. ಆತ ನಿದ್ರಾವಶನಾಗಿ, ಲೋಕದ ಜನರನ್ನೆಲ್ಲಾ ಬರಗಾಲದ ಕೂಪಕ್ಕೆ ತಳ್ಳುವ ಕುತಂತ್ರ ನಡೆಸುತ್ತಾನೆ. ವೃತ್ರನ ಭುಜಬಲವನ್ನು ಮುರಿಯಲು ಇಂದ್ರ ತನ್ನ ಮಿಂಚಿನ ವಜ್ರಾಯುಧ ಪ್ರಯೋಗಿಸುತ್ತಾನೆ. ವೃತ್ರನ ಅವಸಾನವಾಗುತ್ತದೆ. ಮೋಡ ಬಿಡುಗಡೆಯಾಗು ತ್ತದೆ. ಮಳೆ ಧಾರಾಕಾರವಾಗಿ ಸುರಿದು ಆರ್ಯರ, ಅವರ ಗೋವುಗಳ ದಾಹ ಹಿಂಗಿಸುತ್ತದೆ. ಇಂತಹ ವೃತ್ರ ಹರನಾದ ಇಂದ್ರನೇ ಅಲ್ಲವೇ ಅತ್ಯಂತ ಸ್ತುತ್ಯ ದೇವತೆ?

ನಮ್ಮ ಸಾಂಸ್ಕೃತಿಕ ಬದುಕು ನೀರಿನಿಂದ ಹಾಗೂ ಅದರ ಭೌತಿಕ, ರಾಸಾಯನಿಕ ಗುಣಗಳ ಪ್ರಭಾವಗಳಿಂದ ರೂಪಗೊಂಡಿದೆಯೆಂದು ಧಾರಾಳವಾಗಿ ಹೇಳಬಹುದು. ನದಿ ದಂಡೆಗಳು ಸಂಸ್ಕೃತಿಯ, ನಾಗರೀಕತೆಯ ತವರುಗಳು. ಟೈಗ್ರಿಸ್ ಮತ್ತು ಯೂಫ್ರಟಿಸ್ ನದಿ ದಂಡೆ ಗಳಲ್ಲಿ ಪ್ರಾರಂಭವಾದ ಸಂಸ್ಕೃತಿಗಳ ಬಗ್ಗೆ ಕೇಳಿದ್ದೇವೆ. ನಮ್ಮಲ್ಲಿ ಇಂದಿಗೂ ಶುಭಾಶುಭ ಕಾರ್ಯಗಳಲ್ಲಿ ಅನೇಕ ನದಿಗಳಿಂದ ಸಂಗ್ರಹಿಸಿದ ನೀರನ್ನೋ, ಹಾಗೆ ಸಂಗ್ರಹಿಸಿದ್ದೆಂದು ಕಲ್ಪಿಸಿಕೊಂಡ ನೀರನ್ನೋ ಪ್ರೋಕ್ಷಿಸುತ್ತೇವೆ. 'ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ನರ್ಮದೇ ಸಿಂಧು ಕಾವೇರಿ...' ಈ ಎಲ್ಲ ನದಿಗಳ ನಂಟಿನಿಂದ ನಾವು ಬಿಡಿಸಿಕೊಳ್ಳಲಾರೆವು. ನಮ್ಮ ಪೂರ್ವಿಕರಿಗೆ ಬದುಕಲು ಹೆಸರಿಲ್ಲದ ಊರಾದರೂ ಸಾಕಾಗಿತ್ತು, ಆದರೆ ಅದು ಗಂಗೆಯ ದಡದಲ್ಲೋ, ಯಮುನೆಯ ದಡದಲ್ಲೋ ಇರಲೇ ಬೇಕು. ನೀರಿನ ಪ್ರಾಮುಖ್ಯತೆಯನ್ನು ಹಲವು ಹತ್ತಾರು ರೀತಿಯಲ್ಲಿ ಪ್ರಶಂಸಿಸಲು, ಪ್ರದರ್ಶಿಸಲು ಕಲಿತಿದ್ದೇವೆ.

### ನೀರಿನ ಅಣುರಚನೆ

ಆಕ್ಸಿಜನ್, ಹೈಡ್ರೊಜನ್ನುಗಳ ಮಿಶ್ರಣಕ್ಕೆ ಬೆಂಕಿ ತಗುಲಿದರೆ, ಆಸ್ಫೋಟನೆಗೊಂಡು ಕ್ಷಣದಲ್ಲಿ ನೀರಾಗಿ ರಾಸಾಯನಿಕ ಬದಲಾವಣೆ ಹೊಂದುತ್ತವೆ. ಆಕ್ಸಿಜನ್ನಿನ ಒಂದು ಪರಮಾಣುವಿಗೆ ಎರಡು ಹೈಡ್ರೊಜನ್ನಿನ ಪರಮಾಣುಗಳು ರಾಸಾಯನಿಕ ಬಂಧದಿಂದ ಸೇರಿ ನೀರಿನ ಒಂದು ಅಣುವಾಗುತ್ತದೆ.

ಆಕ್ಸಿಜನ್ನಿನಿಂದ ಹೈಡ್ರೊಜನ್ ಕಡೆಗೆ ಹೊರಟಿರುವ ಎರಡು ರಾಸಾಯನಿಕ ಬಂಧಗಳ ನಡುವೆ ಇರುವ ಕೋಣ ೧೦೫ ಡಿಗ್ರಿ. ಆಕ್ಸಿಜನ್ ಪರಮಾಣುವನ್ನು ಎರಡು ಸೆಂಟೀಮೀಟರಿನ ಗೋಲಿ ಎಂದು ಭಾವಿಸಿದರೆ, ಹೈಡ್ರೊಜನ್ ಪರಮಾಣುವಿನ ಗಾತ್ರ ಸುಮಾರು ಒಂದೂ ಕಾಲು ಸೆಂಟೀಮೀಟರಾಗುತ್ತದೆ. ಈ ಗೋಲಿಯಾಕಾರದ ಪರಮಾಣುಗಳು ಪರಸ್ಪರ ರಾಸಾಯನಿಕ ಬಂಧ ಹೊಂದಿದಾಗ, ಅವುಗಳ ಕೇಂದ್ರಗಳ ನಡುವೆ ಬರಿಯ ಒಂದೂಕಾಲು ಸೆಂಟೀಮೀಟರಿನಷ್ಟೇ ದೂರವಿರುತ್ತದೆ. ಹೈಡ್ರೊಜನ್ ಗೋಲಿ, ಆಕ್ಸಿಜನ್ ಗೋಲಿಯನ್ನು ಅರ್ಧದಷ್ಟು ಪ್ರವೇಶಿಸಿದೆ ಎನ್ನಬಹುದು. ಹಾಗೆಯೇ, ಆಕ್ಸಿಜನ್ ಪರಮಾಣು, ಎರಡೂ ಹೈಡ್ರೊಜನ್ ಪರಮಾಣುಗಳನ್ನು ಅರ್ಧದಷ್ಟು ನುಂಗಿದೆ ಎಂದೂ ಹೇಳಬಹುದು. ಆದ್ದರಿಂದ, ನೀರಿನ ಅಣು ಒಂದು ದಿಕ್ಕಿನಿಂದ ಗೋಲಾಕಾರವಾಗಿಯೇ ಕಾಣುತ್ತದೆ. ಆಕ್ಸಿಜನ್ ಪರಮಾಣುವಿನಲ್ಲಿ ಅದರ ಕೇಂದ್ರದ ಸುತ್ತ ಭ್ರಮಿಸುತ್ತಿರುವ ಎಂಟು ಇಲೆಕ್ಟ್ರಾನುಗಳಿರುತ್ತವೆ.








ಚಿತ್ರ ೧: ನೀರಿನ ಅಣು

ಇವುಗಳಲ್ಲಿ ಎರಡು ಕೇಂದ್ರಕ್ಕೆ ಹತ್ತಿರದಲ್ಲಿರುವ, ಇನ್ನು ಆರು ಕೇಂದ್ರಕ್ಕೆ ದೂರದಲ್ಲಿರುವ ಕೋಶಗಳಲ್ಲಿ ಚಲಿಸುತ್ತವೆ. ಹೈಡ್ರೊಜನ್ ಪರಮಾಣುವಿನಲ್ಲಿ ಬರಿಯ ಒಂದು ಇಲೆಕ್ಟ್ರಾನ್ ಇರುತ್ತದೆ. ಇವೆರಡೂ ರಾಸಾಯನಿಕ ಬಂಧ ಹೊಂದಿದಾಗ ಆಕ್ಸಿಜನ್ ಹೊರವಲಯದಲ್ಲಿರುವ ಆರು ಹಾಗೂ ಎರಡು ಹೈಡ್ರೊಜನ್ ಪರಮಾಣುಗಳಿಗೆ ಸೇರಿದ ಎರಡು (ಒಟ್ಟು ಎಂಟು) ಇಲೆಕ್ಟ್ರಾನುಗಳು ಎರಡೂ ಪರಮಾಣುಗಳಿಗೆ ಸೇರಿದಂತೆ ಪರಮಾಣು ಕೇಂದ್ರಗಳ ಸುತ್ತ ಭ್ರಮಿಸಲು ತೊಡಗುತ್ತವೆ. ಆಗ ರಾಸಾಯನಿಕ ಬಂಧ ಏರ್ಪಟ್ಟಿತೆನ್ನುತ್ತೇವೆ. ಆದರೆ, ರಾಸಾಯನಿಕ ಬಂಧ ನಿರ್ಮಾಣವಾದ ಮೇಲೂ ಆಕ್ಸಿಜನ್ ಪರಮಾಣುವಿಗೆ ಇಲೆಕ್ಟ್ರಾನ್ ಕಣಗಳನ್ನು ಆಕರ್ಷಿಸುವ, ತನ್ನೆಡೆಗೇ ಸೆಳೆದುಕೊಳ್ಳುವ ವಿಶೇಷ ಗುಣವಿದೆ. ಆದ್ದರಿಂದ, ಇಲೆಕ್ಟ್ರಾನುಗಳು ಆಕ್ಸಿಜನ್ ಪರಮಾಣುವಿನ ಸುತ್ತಲೇ ಹೆಚ್ಚಾಗಿ ನೆರೆದು, ಆಕ್ಸಿಜನ್‌ಗೆ ಸಣ್ಣ ಪ್ರಮಾಣದ ಋಣ ವಿದ್ಯುತ್ ಅಂಶವನ್ನೂ, ಹೈಡ್ರೊಜನ್ ಪರಮಾಣುಗಳಿಗೆ ಒಟ್ಟು ಅಷ್ಟೇ ಪ್ರಮಾಣದ ಧನ ವಿದ್ಯುತ್ ಅಂಶವನ್ನೂ ಉಂಟುಮಾಡುತ್ತವೆ. ಈ ರೀತಿಯ ಎರಡು ಬಗೆಯ ವಿದ್ಯುತ್ ಅಂಶಗಳು ಆಕ್ಸಿಜನ್, ಹೈಡ್ರೊಜನ್ ಪರಮಾಣುಗಳ ಮೇಲಿರುವುದರಿಂದ, ನೀರಿನ ಅಣುಗಳಿಗೆ, ಇನ್ನೊಂದು ಬಗೆಯ ಬಂಧದಿಂದ ಕೂಡುವ ಗುಣವಿದೆ. ಈ ಹೊಸಬಗೆಯ ಬಂಧಕ್ಕೆ ಹೈಡ್ರೊಜನ್ ಬಂಧ ಎನ್ನುತ್ತಾರೆ. ಈ ಬಂಧ ರಾಸಾಯನಿಕ ಬಂಧದಷ್ಟು ಬಲವಲ್ಲ. ಆದ್ದರಿಂದ ಇದು ನೀರಿನ ಅಣುಗಳನ್ನು ಪರಸ್ಪರ ಅಗಲದಂತೆ ಬಂಧಿಸಲಾರದು. ಆದರೆ ಈ ಅಣುಗಳ ಮಧ್ಯೆ ಸಾಕಷ್ಟು ಜಿಗುಟಿರುವಂತೆ ಮಾಡಿ, ಸಾಧಾರಣ ಉಷ್ಣತೆಯಲ್ಲಿ ನೀರು ದ್ರವರೂಪದಲ್ಲಿ ಇರುವುದಕ್ಕೆ ಕಾರಣವಾಗಿದೆ. ನೀರಿನ ಅಂಟಿಕೊಳ್ಳುವ ಸ್ವಭಾವಕ್ಕೂ ಈ ಗುಣಗಳೇ ಕಾರಣ.

**ಭೌತಿಕ ಗುಣಗಳ ಅಳತೆಗೋಲು**

ವಿಜ್ಞಾನದಲ್ಲಿ ಬೇಕಾಗುವ ಹಲವಾರು ಅಳತೆಗೋಲುಗಳಿಗೆ ನೀರಿನ ಗುಣಗಳೇ ಆಧಾರ. ಉಷ್ಣಶಕ್ತಿಯಿಂದ ರಚನೆ ನಾಶವಾಗುವ ರಾಸಾಯನಿಕ ವಸ್ತುಗಳು, ಉಷ್ಣತೆಯ ಮಟ್ಟ (ಉಷ್ಣಾಂಶ) ಹೆಚ್ಚುತ್ತಾ ಹೋದಂತೆ ಘನ ರೂಪದಿಂದ ದ್ರವರೂಪಕ್ಕೂ, ದ್ರವರೂಪದಿಂದ ಅನಿಲರೂಪಕ್ಕೂ ಬದಲಾಗುತ್ತವೆ. ಸಮುದ್ರ ಮಟ್ಟದಲ್ಲಿ ಮಂಜುಗಡ್ಡೆ ಕರಗುವ ಉಷ್ಣತೆಯನ್ನು ಸೊನ್ನೆ ಡಿಗ್ರಿ ಎಂದೂ, ನೀರು ಕುದಿಯುವ ಉಷ್ಣತೆಯನ್ನು ನೂರು ಡಿಗ್ರಿ ಎಂದೂ ಭಾವಿಸಿ, ಅವುಗಳ ನಡುವಣ ಉಷ್ಣಾಂಶದ ವ್ಯತ್ಯಾಸವನ್ನು ನೂರು ಭಾಗಗಳಾಗಿ ವಿಂಗಡಿಸಿ ಉಷ್ಣತೆಯ ಮಟ್ಟವನ್ನು ಅಳತೆಮಾಡುವ ಮಾಪನವೇ ಸೆಂಟೀಗ್ರೇಡ್. ಈ ಮಾನದಂಡವನ್ನೇ ನಾವು ಉಷ್ಣತೆಯನ್ನು ಸೂಚಿಸಲು ಬಳಸುತ್ತೇವೆ. ಒಂದು ಗ್ರಾಂ. ನೀರಿನ ಉಷ್ಣತೆಯನ್ನು ಒಂದು ಡಿಗ್ರಿ ಸೆಂಟೀಗ್ರೇಡ್ ಏರಿಸಲು ಬೇಕಾದ ಉಷ್ಣ ಶಕ್ತಿಯನ್ನೇ ಒಂದು ಕೆಲೊರಿ ಎಂದು ಕರೆದು ಉಷ್ಣ ಶಕ್ತಿಯ ಅಳತೆಯಾಗಿ ಉಪಯೋಗಿಸುತ್ತೇವೆ. ನಾವು ಸ್ನಾನ ಮಾಡುವ ಒಂದು ಬಕೆಟ್ ನೀರು ಎಂದರೆ ಸುಮಾರು ೧೫ ಲೀಟರ್ ಇಲ್ಲವೇ ಹದಿನೈದು ಕಿಲೋಗ್ರಾಂ ನೀರನ್ನು ವಾತಾವರಣದ ೨೦ ಡಿಗ್ರಿ ಸೆಂಟೀಗ್ರೇಡಿನಿಂದ ನಮಗೆ ಹಿತವೆನಿಸುವ ೪೦ ಡಿಗ್ರಿ ಸೆಂಟೀಗ್ರೇಡಿಗೆ ಏರಿಸಬೇಕಾದರೆ

ನಾಗಾಲೋಟ

ಅ. ರಾ. ಮಿತ್ರ

ಅನಂತಮೂರ್ತಿ ಆಚೆಗೆ ಬಂದ್ರು
ನೋಡ್ತಾ 'ಕುದುರೆ ಮುಖ'
ಗೋವಿಂದ್‌ರಾವಿಂದ್ ಮರ್ತೇಹೋಗಿತ್ತು
ಡಾಲರ್ ಮನೆ ಸುಖ

ನಾವು ಖರ್ಚುಮಾಡಬೇಕಾದ ಉಷ್ಣಶಕ್ತಿ ಸುಮಾರು ೬೦,೦೦೦ ಕೆಲೊರಿಗಳು. ನಾವು ದಿನವಿಡೀ ಕೆಲಸ ಮಾಡಿದರೆ ಖರ್ಚುಮಾಡುವ ಶಕ್ತಿ ಸುಮಾರು ೩ ದಶಲಕ್ಷ ದಿಂದ ೬ ದಶಲಕ್ಷ ಕೆಲೊರಿಗಳು. ಇಷ್ಟು ಶಕ್ತಿ ಸಂಪಾದಿಸಲು ನಮ್ಮ ದೇಹ ೫೦೦ ಗ್ರಾಂ. ಸಕ್ಕರೆಯನ್ನು ಪೂರ್ಣ ಬಳಸಿಕೊಂಡರೆ ಸಾಕು.

ಒಂದು ಗ್ರಾಂ. ದ್ರವ್ಯರಾಶಿಯಿರುವ ಧಾತುವಿನ ಉಷ್ಣತೆಯನ್ನು ಒಂದು ಡಿಗ್ರಿ ಸೆಂಟೀಗ್ರೇಡ್ ಹೆಚ್ಚಿಸಲು ಬೇಕಾದ ಉಷ್ಣಶಕ್ತಿಯನ್ನು ಆ ಧಾತುವಿನ ವಿಶಿಷ್ಟ ಶಾಖ (Specific Heat) ಎನ್ನುತ್ತೇವೆ. ನಮಗೆ ತಿಳಿದಿರುವ ನೀರಿನ ವಿಶಿಷ್ಟ ಶಾಖವೇ ಅತಿ ಹೆಚ್ಚಿನದು. ಆದ್ದರಿಂದ ನೀರನ್ನು ಬಿಸಿಮಾಡಲು, ಅದೇ ದ್ರವ್ಯರಾಶಿಯಿರುವ ಇತರ ಎಲ್ಲ ವಸ್ತುಗಳಿಗೆ ಬೇಕಾಗುವ ಉಷ್ಣಶಕ್ತಿಗಿಂತ ಹೆಚ್ಚಿನ ಶಕ್ತಿ ಬೇಕಾಗುತ್ತದೆ. ನೀರಿಗೆ ಹೋಲಿಸಿದರೆ, ಹರಳೆಣ್ಣೆ ಕಾಯಿಸಲು ಕಾಲಂಶ ಉಷ್ಣಶಕ್ತಿ ಸಾಕು. ಹಾಗೆಯೇ, ಬಿಸಿ ನೀರು ಆರುವುದಕ್ಕಿಂತ ಬಹು ಬೇಗ ಎಣ್ಣೆ ತಣ್ಣಗಾಗುತ್ತದೆ. ಆದ್ದರಿಂದಲೇ ಹರಳೆಣ್ಣೆಯಲ್ಲೇ ಮೀಯುವುದು, ಅದರ ಜಿಡ್ಡನ್ನು ಸಹಿಸಿಕೊಂಡರೂ, ನಮಗೆ ಹಿತವೆನಿಸದು. ತಲೆಯ ಮೇಲೆ ಬಿದ್ದ ಬಿಸಿಬಿಸಿ ಎಣ್ಣೆ ಕಾಲು ತಲುಪುವ ಮೊದಲೇ ಆರಿರುತ್ತದೆ. ಸದ್ಯ, ನೀರು ಹಾಗಿಲ್ಲ.

**ನೀರು ಘನೀಕರಿಸಿದಾಗ ಉಬ್ಬುತ್ತದೆ**

ಘನರೂಪದ ನೀರು (ಮಂಜುಗಡ್ಡೆ) ದ್ರವರೂಪದ ನೀರಿನಲ್ಲಿ ತೇಲುತ್ತದೆ. ಇನ್ನೆಲ್ಲ ವಸ್ತುಗಳ ಘನರೂಪಗಳು ಅದೇ ವಸ್ತುಗಳು ದ್ರವರೂಪದಲ್ಲಿ ಮುಳುಗುತ್ತವೆ. ನೀರಿನ ಈ ವಿಶಿಷ್ಟ ಗುಣಕ್ಕೆ ಅದರ ಅಣುಗಳ ನಡುವೆ ಇರುವ ಹೈಡ್ರೊಜನ್ ಬಂಧಗಳೇ ಕಾರಣ. ದ್ರವರೂಪದ ನೀರಿನಲ್ಲಿ ಹೈಡ್ರೊಜನ್ ಬಂಧಗಳು ಪ್ರತಿ ಸೆಕೆಂಡಿಗೂ ಲಕ್ಷಾಂತರ ಬಾರಿ ಛಿದ್ರಗೊಂಡು ಪುನಃ ನಿರ್ಮಾಣಗೊಳ್ಳುತ್ತಿರುತ್ತವೆ. ಅದೇ ಸೊನ್ನೆ ಡಿಗ್ರಿಗಿಂತಲೂ ಕಡಿಮೆ ಉಷ್ಣತೆಯಲ್ಲಿ, ಹೈಡ್ರೊಜನ್ ಬಂಧಗಳು ಛಿದ್ರಗೊಳ್ಳದೇ ನೀರಿನ ಅಣುಗಳ ಮಧ್ಯೆ ಗಟ್ಟಿ ಕೋಲುಗಳಂತೆ ಸ್ಥಾಪನೆಗೊಂಡು, ಅಣುಗಳ ನಡುವಿನ ದೂರ ಹೆಚ್ಚಾಗಲು ಕಾರಣವಾಗುತ್ತವೆ. ಆದ್ದರಿಂದ, ಘನರೂಪಕ್ಕೆ ತಿರುಗಿದಾಗ ನೀರಿನ ಗಾತ್ರ ಹೆಚ್ಚಿ ಅದರ ಸಾಂದ್ರತೆ ಕಡಿಮೆಯಾಗುತ್ತದೆ. ಛಳಿ ಪ್ರದೇಶಗಳಲ್ಲಿ ಕಡಲ ಜೀವಿಗಳ ಬದುಕೇ ನೀರಿನ ಈ ವಿಶಿಷ್ಟ ಗುಣದಿಂದ ಉಳಿದುಕೊಳ್ಳಲು ಸಾಧ್ಯವಾಗಿದೆ. ಧ್ರುವ ಪ್ರದೇಶಗಳಲ್ಲಿ, ಛಳಿಯಿಂದ ಸಮುದ್ರದ ನೀರು ಹೆಪ್ಪುಗಟ್ಟುತ್ತದೆ. ಹೀಗೆ ಹೆಪ್ಪುಗಟ್ಟಿದ ಹಿಮ ತೇಲಿ ಸಮುದ್ರದ ಮೇಲೆ ಒಂದು ಕವಚ ನಿರ್ಮಿಸುತ್ತದೆ. ಈ ಕವಚ ಉಷ್ಣಶಕ್ತಿಯನ್ನು ತನ್ನ ಮೂಲಕ ಸುಲಭವಾಗಿ ಹರಿಯಲು ಬಿಡುವುದಿಲ್ಲ. ಹೀಗಾಗಿ, ಒಳಗಿರುವ ಕರಗಿದ ನೀರಿನಲ್ಲಿರುವ ಉಷ್ಣಶಕ್ತಿ ಹಿಮದ ಮೂಲಕ ಹೊರಗಿನ ವಾತಾವರಣಕ್ಕೆ ಹಂಚಿಹೋಗದೇ, ಕೆಳಪದರದ ನೀರು ದ್ರವರೂಪದಲ್ಲೆ ಉಳಿಯುವುದು ಸಾಧ್ಯವಾಗುತ್ತದೆ. ಹಿಮಗಡ್ಡೆಯ ಅಡಿಯಲ್ಲಿರುವ ಸೊನ್ನೆ ಡಿಗ್ರಿ ಸೆಂಟೀಗ್ರೇಡ್ ನೀರಿನಲ್ಲಿ ಮೀನು ಮತ್ತಿತರ ಜಲಚರಗಳು ಬದುಕುತ್ತವೆ. ನೀರು ಕರಗುವ ಉಷ್ಣಾಂಶ ಅದರಲ್ಲಿ ಲೀನವಾಗಿರಬಹುದಾದ ವಸ್ತುಗಳನ್ನು ಅವಲಂಬಿಸಿ ಬದಲಾಗಬಲ್ಲದು. ಧ್ರುವ ಪ್ರದೇಶಗಳಲ್ಲಿರುವ ಮೀನುಗಳ ರಕ್ತದಲ್ಲಿ ವಿಶೇಷ ಬಗೆಯ ಅಣುಗಳಿದ್ದು, ಅವು ರಕ್ತ ಸೊನ್ನೆ ಡಿಗ್ರಿ ಸೆಂಟೀಗ್ರೇಡಿನಲ್ಲಿಯೂ ಹೆಪ್ಪುಗಟ್ಟದಂತೆ ರಕ್ಷಣೆ ನೀಡುತ್ತವೆ. ಆದ್ದರಿಂದ, ನೀರಿನ ಸಹಜ ಗುಣದಿಂದಲೂ, ಜೀವಿಗಳ ಪರಿಸರಕ್ಕೆ ಹೊಂದಿಕೊಳ್ಳುವಂತೆ ವಿಕಾಸ ಹೊಂದುವ ಗುಣದಿಂದಲೂ ಧ್ರುವ ಪ್ರದೇಶಗಳಲ್ಲೂ ಜಲಚರಗಳು ಜೀವಿಸುವುದು ಸಾಧ್ಯವಾಗಿದೆ.

**ನೀರು ವಿದ್ಯುತ್ ಅಂಶಗಳ ಆಕರ್ಷಣೆ ವಿಕರ್ಷಣೆಗಳನ್ನು ಕ್ಷೀಣಿಸುತ್ತದೆ**

ಮಿಕ್ಕೆಲ್ಲ ದ್ರವಗಳಿಗಿಂತ ಹೆಚ್ಚಾಗಿ ನೀರಿಗೆ ವಿದ್ಯುತ್ ಅಂಶಗಳ ನಡುವಿನ ಆಕರ್ಷಣೆಯನ್ನೂ, ವಿಕರ್ಷಣೆಯನ್ನೂ ಕಡಿಮೆ ಮಾಡುವ ಗುಣವಿದೆ. ಧನ ವಿದ್ಯುತ್ ಋಣ ವಿದ್ಯುತ್ ಅಂಶವನ್ನು ಆಕರ್ಷಿಸುತ್ತದೆ. ಅದೇ ಧನ ವಿದ್ಯುತ್ ಅಂಶವುಳ್ಳ ಎರಡು ಧಾತುಗಳ ನಡುವೆ ಮತ್ತು ಋಣ ವಿದ್ಯುತ್ ಅಂಶವುಳ್ಳ ಎರಡು ಧಾತುಗಳ ನಡುವೆ ವಿಕರ್ಷಣೆ ಇರುತ್ತದೆ. ವಿರುದ್ಧ ವಿದ್ಯುತ್ ಅಂಶಗಳ ನಡುವಣ ಆಕರ್ಷಣೆಯೇ ನಮ್ಮ ಅಡುಗೆಯ ಉಪ್ಪಿನ ಸ್ಥಿರ ರಚನೆಗೆ ಕಾರಣ. ಅಡುಗೆಯ ಉಪ್ಪು ಧನ ವಿದ್ಯುತ್ ಅಂಶವುಳ್ಳ ಸೋಡಿಯಂ ಪರಮಾಣುಗಳ ಹಾಗು ಋಣ ವಿದ್ಯುತ್ ಅಂಶವುಳ್ಳ ಕ್ಲೋರಿನ್ ಪರಮಾಣುಗಳ ಆಕರ್ಷಣೆಯಿಂದ ದೊರಕುವ ಅಣು. ಈ ಆಕರ್ಷಣೆಯಿಂದಾಗಿ ಕಾಯಿಸಿದಾಗ ಉಪ್ಪು ಸುಲಭವಾಗಿ ದ್ರವರೂಪಕ್ಕೆ ತಿರುಗುವುದಿಲ್ಲ. ಉಪ್ಪು ಕರಗುವ ಉಷ್ಣಾಂಶ ೩,೦೦೦ ಡಿಗ್ರಿ ಸೆಂಟೀಗ್ರೇಡ್. ಅದೇ ಉಪ್ಪನ್ನು ನೀರಿನಲ್ಲಿ ಹಾಕಿದಾಗ, ಸೋಡಿಯಂ ಮತ್ತು ಕ್ಲೋರಿನ್ ಪರಮಾಣುಗಳ ನಡುವೆ ಆಕರ್ಷಣೆ ೮೦ ಪಟ್ಟು ಕಡಿಮೆಯಾಗುತ್ತದೆ. ಆಗ, ಆ ಪರಮಾಣುಗಳು ಪರಸ್ಪರ






*ಚಿತ್ರ ೨: ನ್ಯೂಕ್ಲಿಯಿಕ್ ಆಮ್ಲ ಮತ್ತು ಪ್ರೋಟೀನಿನ ಅಣುಗಳು*

ಸಂಗ ತೊರೆದು ಸ್ವತಂತ್ರವಾಗಿ ನೀರಿನಲ್ಲಿ ಚಲಿಸಲು ಪ್ರಾರಂಭಿಸುತ್ತವೆ. ಉಪ್ಪು ನೀರಿನಲ್ಲಿ ಲೀನವಾಯಿತು ಎನ್ನುತ್ತೇವೆ. ಉಪ್ಪುಗಳನ್ನು ಲೀನವಾಗಿಸಿಕೊಳ್ಳುವ ಎಲ್ಲ ದ್ರಾವಣಗಳಲ್ಲಿ ನೀರೇ ಅತ್ಯಂತ ಪ್ರಬಲ. ನೀರಿಗೆ ಈ ಗುಣವಿರುವುದಕ್ಕೆ ಅದರಲ್ಲಿರುವ ಆಕ್ಸಿಜನ್, ಹೈಡ್ರೋಜನ್ ಪರಮಾಣುಗಳಲ್ಲಿ ಸಣ್ಣ ಪ್ರಮಾಣದ ಋಣ ಮತ್ತು ಧನ ವಿದ್ಯುತ್ ಅಂಶಗಳಿರುವುದೇ ಕಾರಣ. ನೀರು ವಿದ್ಯುತ್ ಅಂಶಗಳ ನಡುವಿನ ಆಕರ್ಷಣೆಯನ್ನು ಕಡಿಮೆಮಾಡಿದಷ್ಟು ಇನ್ನಾವ ದ್ರವವೂ ಮಾಡಲಾರದು. ನೀರಿನಲ್ಲಿ ಉಪ್ಪು ಸುಲಭವಾಗಿ ಲೀನವಾಗುವುದರಿಂದಲೇ ಸಸ್ಯಗಳು ನೆಲದಿಂದ ಉಪ್ಪಿನ ಸಾರವನ್ನು ಹೀರಿಕೊಳ್ಳಬಲ್ಲವು. ನೀರಿನ ಅಂಶವೇ ಪ್ರಧಾನವಾಗಿರುವ ನಮ್ಮ ರಕ್ತ ದೇಹದ ಎಲ್ಲೆಡೆಗೆ ಉಪ್ಪನ್ನು ರವಾನಿಸಬಲ್ಲದು.

### ಲೋಹಗಳ ಲೇಪ

ಪರಿಶುದ್ಧ ನೀರು ವಿದ್ಯುತ್ ವಾಹಕವಲ್ಲ. ಆದರೆ, ಲವಣ ಲೀನವಾದ ನೀರು ಒಳ್ಳೆಯ ವಿದ್ಯುತ್ ವಾಹಕ. ನಮ್ಮ ಮನೆಗಳಲ್ಲಿ ಬಳಸುವ ನೀರಿನಲ್ಲಿ ಕರಗಿದ ಲವಣಗಳು ಇದ್ದೇ ಇರುತ್ತವೆ. ಆದ್ದರಿಂದಲೇ ಸ್ನಾನದ ಮನೆಯಲ್ಲಿ ನೀರು ಕಾಯಿಸಲು ಇಟ್ಟುಕೊಳ್ಳುವ, ಸರಿಯಾದ ಹೊದಿಕೆಯಿಲ್ಲದ, ವಾಹಕ ತಂತಿ ಇರುವ ಲೋಹ ಪಾತ್ರೆಯ ನೀರನ್ನು ಮುಟ್ಟಿದರೆ ಬಲವಾದ ಇಲೆಕ್ಟ್ರಿಕ್ ಶಾಕಿನ ಅನುಭವವಾಗುತ್ತದೆ. ಲವಣ ಲೀನವಾದ ನೀರಿನ ವಿದ್ಯುತ್ ವಾಹಕ ಗುಣವನ್ನು ಬಳಸಿ ಒಂದು ಲೋಹಕ್ಕೆ ಇನ್ನೊಂದು ಲೋಹದ ಲೇಪವನ್ನು ಕೊಡಲು ಸಾಧ್ಯ. ಉದಾಹರಣೆಗೆ, ತಾಮ್ರದ ಆಭರಣಗಳಿಗೆ ಚಿನ್ನದ ಲೇಪ ಕೊಟ್ಟು, ಕಡಿಮೆ ಬೆಲೆಯಲ್ಲಿ ಹೆಚ್ಚು ಬೆಲೆಬಾಳುವ ಚಿನ್ನದ ಆಭರಣ ಧರಿಸಿದ ಆನಂದ ಪಡೆಯಬಹುದು.

### ನೀರಿನ ಬೇಕು, ಬೇಡಗಳು

ನೀರು ಅನೇಕ ವಸ್ತುಗಳನ್ನು ಒದ್ದೆ ಮಾಡುತ್ತದೆ ಆದರೆ ಕೆಲವು ವಸ್ತುಗಳಿಗೆ ಅಂಟುವುದೇ ಇಲ್ಲ. ಹೀಗೆ ನೀರು ಅಂಟದ ನೈಲಾನ್, ಟೆರಿಲೀನ್ ಮುಂತಾದ ಕೃತಕ ಸೂಲಿನ ದಾರದಿಂದ ತಯಾರಾದ ಅಂಗವಸ್ತ್ರಗಳಿಂದ ನಮ್ಮ ಮೈ ತಿಕ್ಕಿ ಒಣಗಿಸಿಕೊಳ್ಳಲಾಗುವುದಿಲ್ಲ. ನಮ್ಮ ಚರ್ಮಕ್ಕಿಂತಲೂ ನೀರಿಗೆ ಹತ್ತಿ ಬಟ್ಟೆಯಲ್ಲಿರುವ ಸೆಲ್ಯುಲೋಸ್ ಅಣುಗಳ ಮೇಲೇ ಬಹಳ ಪ್ರೀತಿ. ಆದ್ದರಿಂದಲೇ ಹತ್ತಿ ವಸ್ತ್ರದಿಂದ ಮೈ ಒರೆಸಿಕೊಳ್ಳುವುದು ಹಿತವೆನಿಸುತ್ತದೆ. ನೀರು ಕಮಲದ ಎಲೆಗಳಿಗೆ ಅಂಟುವುದಿಲ್ಲ. ಆದ್ದರಿಂದ, ಕಮಲದ ಎಲೆಯ ಮೇಲೆ ನೀರ ಹನಿ ಪಾದರಸದಂತೆ ಹೊಳೆಯುತ್ತದೆ. ಬೆಣ್ಣೆ ಕೊಬ್ಬಿನ ಜಾತಿಗೆ ಸೇರಿದ ಅಣು. ಇದು ಕೂಡಾ ನೀರಿನೊಡನೆ ಸಖ್ಯ ಬೆಳೆಸಲು ಇಷ್ಟಪಡುವುದಿಲ್ಲ. ಆದ್ದರಿಂದಲೇ, ಮೊಸರು ಕಡೆದಾಗ, ಬೆಣ್ಣೆಯ ಮುದ್ದೆ ನೀರಿನಿಂದ ಬೇರ್ಪಡುತ್ತದೆ.

ನೀರಿನ ಇಂತಹ ಬೇಕು ಬೇಡಗಳ ಆಧಾರದ ಮೇಲೆ ನಮ್ಮ ದೇಹದಲ್ಲಿ ಮುಖ್ಯ ಪಾತ್ರ ವಹಿಸುವ ಅನೇಕ ಅಣುಗಳು (ಚಿತ್ರ ೨) ತಮ್ಮದೇ ಆದ ರಚನೆ, ಗುಣಗಳನ್ನು ಪಡೆಯುತ್ತವೆ.

ಉದಾಹರಣೆಗೆ, ನಮ್ಮ ಆನುವಂಶಿಕ ಮಾಹಿತಿ ಹೊತ್ತ ಡಿ.ಎನ್.ಎ. ಅಣುಗಳಲ್ಲಿ ಮೂರು ಬಗೆಯ ರಾಸಾಯನಿಕ ಗುಂಪುಗಳಿರುತ್ತವೆ. ಇವು ನ್ಯೂಕ್ಲಿಯಿಕ್ ಪ್ರತ್ಯಾಮ್ಲಗಳು, ಫೋಸ್ಫೇಟ್ ಗುಂಪು ಹಾಗು ಸಕ್ಕರೆಯ ಗುಂಪು. ನ್ಯೂಕ್ಲಿಯಿಕ್ ಪ್ರತ್ಯಾಮ್ಲಗಳಿಗೆ ನೀರನ್ನು ವಿಕರ್ಷಿಸುವ ಸ್ವಭಾವವಿದ್ದರೆ, ಫೋಸ್ಫೇಟ್ ಗುಂಪಿಗೆ ನೀರನ್ನು ಆಕರ್ಷಿಸುವ ಗುಣವಿದೆ. ಸಕ್ಕರೆಯ ಗುಂಪಿಗೆ ನೀರನ್ನು ಆಕರ್ಷಿಸುವ ಗುಣವಿದೆಯಾದರೂ, ಫೋಸ್ಫೇಟ್ ಗುಂಪಿನಷ್ಟು ಇಲ್ಲ. ಆದ್ದರಿಂದ, ಡಿ.ಎನ್.ಎ. ರಚನೆ ವರ್ತುಲಾಕಾರದಲ್ಲಿದ್ದು, ನ್ಯೂಕ್ಲಿಯಿಕ್ ಪ್ರತ್ಯಾಮ್ಲಗಳು ನೀರು ತಲುಪದ ಅಣುವಿನ ಒಳಭಾಗದಲ್ಲಿರುತ್ತವೆ. ಫೋಸ್ಫೇಟ್ ಗುಂಪು ಅಣುವಿನ ಹೊರಗಿನ ಭಾಗದಲ್ಲಿದ್ದು, ನೀರಿನೊಡನೆ ಸಂಪರ್ಕ ಹೊಂದಿರುತ್ತದೆ. ಸಕ್ಕರೆಯ ಗುಂಪುಗಳು ಇವುಗಳ ನಡುವಿನ ಸ್ಥಳದಲ್ಲಿರುತ್ತದೆ. ಜಟಿಲವಾದ ಪ್ರೋಟೀನುಗಳು ತಮ್ಮದೇ ವಿಶಿಷ್ಟ ರಚನೆಯನ್ನು ಪಡೆಯುವುದೂ ಹೀಗೆಯೇ ಇರಬಹುದು. ಪ್ರೋಟೀನುಗಳು ಅಮೈನೋ ಆಮ್ಲಗಳ ಸರಪಳಿಗಳು. ಒಟ್ಟು ೨೦ ಬಗೆಯ ಅಮೈನೋ ಆಮ್ಲಗಳು ಪ್ರೋಟೀನುಗಳಲ್ಲಿ ಸಾಧಾರಣವಾಗಿ ಕಂಡುಬರುತ್ತವೆ. ಇವುಗಳಲ್ಲಿ ಹಲವಾರು ಅಮೈನೋ ಆಮ್ಲಗಳು ನೀರನ್ನು ಪ್ರಬಲವಾಗಿ ವಿಕರ್ಷಿಸುತ್ತವೆ. ಇನ್ನು ಕೆಲವು ನೀರಿನಿಂದ ಆಕರ್ಷಿತವಾಗುತ್ತವೆ. ಈ ಬಲಗಳಿಂದ, ಪ್ರೋಟೀನಿನ ಸರಪಳಿ, ನೀರನ್ನು ವಿಕರ್ಷಿಸುವ ಅಮೈನೋ ಆಮ್ಲಗಳು ಆದಷ್ಟು ಅಣುವಿನ ಒಳಭಾಗಲ್ಲಿರುವಂತೆಯೇ, ನೀರಿನ ಜೊತೆ ಬಂಧ ಬೆಳೆಸುವ ಅಮೈನೋ ಆಮ್ಲಗಳು ಆದಷ್ಟು ಅಣುವಿನ ಹೊರಗಿರುವಂತೆ ಸುತ್ತಿಕೊಳ್ಳುತ್ತವೆ.

### ಬೀಜದಲ್ಲಿಲ್ಲದ ಗುಣ ಗಿಡದಲ್ಲಿ ಕಾಣಿಸೀತೇ?

ಹೈಡ್ರೋಜನ್ ಹಾಗೂ ಆಕ್ಸಿಜನ್‌ಗಳು ಸಾಧಾರಣ ಉಷ್ಣತೆಯಲ್ಲಿ ಅನಿಲಗಳು. ಇವುಗಳಿಗೆ ವಾಸನೆಯಾಗಲಿ, ಬಣ್ಣವಾಗಲಿ, ರುಚಿಯಾಗಲಿ ಇಲ್ಲ. ಇವುಗಳ ಭೌತಿಕ, ರಾಸಾಯನಿಕ ಗುಣಗಳಿಗೂ ನೀರಿನ ಗುಣಗಳಿಗೂ ಯಾವುದೇ ಸಂಬಂಧ ಇದ್ದಂತೆ ಕಾಣುವುದಿಲ್ಲ. ಇವುಗಳ ರಾಸಾಯನಿಕ ವರ್ತನೆಯಿಂದಲೇ ನೀರು ಉತ್ಪನ್ನವಾಗಿರುವುದು. ಹಾಗಾದರೆ ನೀರಿಗೆ ಅದರ ಸ್ವಭಾವ ಬರಲು ಅದರ ಅಂಗವಾದ ಆಕ್ಸಿಜನ್, ಹೈಡ್ರೋಜನ್‌ಗಳ ಗುಣಗಳಲ್ಲದೇ ಇನ್ನೂ ಬೇರೆಯ ಕಾರಣಗಳಿವೆಯೇ ಎಂಬ ಪ್ರಶ್ನೆ ಏಳುತ್ತದೆ. ಇಂತಹ ಪ್ರಶ್ನೆಗಳು ಇನ್ನೂ ಅನೇಕ ಸಂದರ್ಭಗಳಲ್ಲಿ ಎದುರಾಗುತ್ತವೆ ಹಾಗೂ ತಾತ್ವಿಕ ದೃಷ್ಟಿಯಿಂದ ಬಹು ಮುಖ್ಯವೆನಿಸಿವೆ. ನೀರಿನ ಗುಣ ಅದರಲ್ಲಿರುವ ಪರಮಾಣುಗಳ ಸ್ವಭಾವವೇ, ಅವುಗಳ ಗುಣಗಳ ಮೊತ್ತವೇ ಎನ್ನುವುದು ವಿಜ್ಞಾನದ ನಿಲುವು. ಇದಕ್ಕೆ ವಿರುದ್ಧವಾಗಿ, ನೀರಿನ ಸ್ವಭಾವವನ್ನು ಅದನ್ನು ಕತ್ತರಿಸುವಾಗ ದೊರೆಯುವ ಧಾತುಗಳ ಸ್ವಭಾವದ ಆಧಾರದ ಮೇಲೆ ಅರ್ಥಮಾಡಿಕೊಳ್ಳುವುದು ಸಾಧ್ಯವೇ ಇಲ್ಲ; ನೀರು ಉತ್ಪತ್ತಿಯಾದಾಗ, ಅದರಲ್ಲಿ ಹೊಸದಾಗಿ ಬಂದು ಸೇರಿಕೊಂಡ ಗುಣಗಳು ಕಾಣಿಸಿಕೊಳ್ಳುತ್ತವೆ; ಈ ಗುಣಗಳನ್ನು ನೀರಿನ ಅಣುವಿನಲ್ಲಿರುವ ಪರಮಾಣುಗಳನ್ನು ತಿಳಿಯುವುದರಿಂದ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ ಎನ್ನುವುದು ಇನ್ನೊಂದು ತಾತ್ವಿಕ ನಿಲುವು. ನೀರಿನ ವಿಷಯದಲ್ಲಿ ಈ ಪ್ರಶ್ನೆ ಅಷ್ಟು ಗಹನ ಎನ್ನಿಸದಿರಬಹುದು. ಇಂತಹದೇ ಪ್ರಶ್ನೆ ಜೀವರಾಶಿಯನ್ನು ಕುರಿತದ್ದಾದರೆ ಬಲು ತೊಡಕಿನವು ಎನಿಸಿ ಬಿಸಿ ಬಿಸಿ ವಾದ ವಿವಾದಗಳಿಗೆ ಎಡೆಮಾಡಿಕೊಡುತ್ತವೆ. ಉದಾಹರಣೆಗೆ, ನಮ್ಮ ದೇಹ ಅದರಲ್ಲಿರುವ ಅಣುಗಳ ಮೊತ್ತವೋ; ಮೊತ್ತಕ್ಕಿಂತ ಹೆಚ್ಚಾದ, ದೇಹದ ನಿರ್ಮಾಣಕ್ಕೆ ಕಾರಣವಾದ ಅಣುಗಳಲ್ಲಿ ಇಲ್ಲದ ಇನ್ನೂ ಒಂದು ವಿಶೇಷ ಗುಣ ಅಥವಾ ಶಕ್ತಿ ಪಡೆದಿರುವ ವ್ಯವಸ್ಥೆಯೋ? – ಎಂದು ನಮ್ಮನ್ನು ನಾವೇ ಕೇಳಿಕೊಳ್ಳಬಹುದು. ದೇಹದ ಕ್ರಿಯೆ ಬಹು ಜಟಿಲ. ಅನೇಕ ತತ್ವಜ್ಞಾನಿಗಳಿಗೆ ಇನ್ನೊಂದು ವಿಶೇಷ ಶಕ್ತಿಯಿಲ್ಲದೇ ದೇಹದ ಕೆಲಸ ಸಾಧ್ಯವಾಗಲಾರದು ಎನ್ನಿಸಿದೆ. ಆದರೆ ನೀರಿನಂತಹ ಸರಳ ಅಣುಗಳ ಗುಣಗಳು ಅವುಗಳಲ್ಲಿರುವ ಅಣುಗಳಿಂದಲೇ ನಿರ್ಧಾರಿತವಾಗುತ್ತದೆ. ಇದನ್ನೇ ಪರ್ಯಾಯವಾಗಿ ಹೇಳಬೇಕೆಂದರೆ, ನಮಗೆ ಆಕ್ಸಿಜನ್ ಮತ್ತು ಹೈಡ್ರೋಜನ್ ಪರಮಾಣುಗಳ ಎಲ್ಲ ಗುಣಗಳೂ ತಿಳಿದಿದ್ದರೆ, ನೀರಿನ ಭೌತಿಕ ಹಾಗೂ ರಾಸಾಯನಿಕ ಗುಣಗಳನ್ನು ಊಹಿಸಬಹುದು. ನೀರಿನ ಭೌತಿಕ ಹಾಗೂ ರಾಸಾಯನಿಕ ಗುಣಗಳನ್ನು ಅದರ ರಾಸಾಯನಿಕ ರಚನೆಯ ಆಧಾರದ ಮೇಲೆ ಅರ್ಥಮಾಡಿಕೊಳ್ಳಬಹುದು. ಹೆಚ್ಚಿನ ವಿಜ್ಞಾನ ನಿಂತಿರುವುದು ಇಂತಹ ತಾತ್ವಿಕ ಬುನಾದಿಯ ಮೇಲೆ. ಇದೇ ಮಾರ್ಗವನ್ನು ಅನುಸರಿಸಿ, ವಿಜ್ಞಾನ ಸಮಸ್ತ ಜೀವರಾಶಿಯನ್ನೂ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದೆ, ಅದರಲ್ಲಿ ಬಹುಮಟ್ಟಿಗೆ ಯಶಸ್ಸೂ ಗಳಿಸುತ್ತಿದೆ.

ಎಂ. ಆರ್. ಎನ್. ಮೂರ್ತಿ
ಮಾಲಿಕ್ಯುಲರ್ ಬಯಾಲಜಿ ವಿಭಾಗ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್
ಬೆಂಗಳೂರು-೫೬೦ ೦೧೨

# ಹೃದಯದ ತೊಂದರೆ

■ ನಾ. ಡಿಸೋಜ

**ಊ**ಟ ಮುಗಿಸಿಕೊಂಡು ಕೋಣೆಗೆ ಹೋದವರು ಏಕೋ ಕೂಗಿಕೊಂಡಂತೆ ಆಯಿತು. ನಾನು ಧಾವಿಸಿ ಬಂದು ನೋಡಿದರೆ ಇವರು ಮಂಚದ ಚೌಕಟ್ಟಿಗೆ ತಲೆ ಕೊಟ್ಟು ಕುಳಿತಿದ್ದಾರೆ.

''ಏನು... ಏನಾಯ್ತು?'' ಎಂದೆ.

''ತಲೆ ತಿರುಗುತ್ತಾ ಇದೆ'' ಎಂದವರೇ, ಮುಖ ತಿರುಚಿಕೊಂಡರು.

''ವಾಂತಿಯಾಗುತ್ತೆ'' ಎಂದು ಬೇರೆ ಹೇಳಿ ಬಚ್ಚಲಿಗೆ ಓಡಿದರು.

ತಲೆ ತಿರುಗುವುದು ನಿಲ್ಲಲಿಲ್ಲ. ಜೊತೆಗೆ ವಾಂತಿ ಕೂಡ.

ನೆರೆಮನೆಯ ರಾಘಣ್ಣ ಹೋಗಿ ವೈದ್ಯರನ್ನು ಕರೆತಂದ. ಪರೀಕ್ಷೆ ಮಾಡಿದ ವೈದ್ಯರು -

''ಒಂದು ದಿನದ ಮಟ್ಟಿಗೆ ನರ್ಸಿಂಗ್ ಹೋಮಿನಲ್ಲಿರಲಿ'' ಎಂದಾಗ ನನಗೆ ಆತಂಕವಾಯಿತು.

ಯಾವತ್ತೂ ಕಾಯಿಲೆ ಎಂದು ಮಲಗಿದವರಲ್ಲ, ಒಂದು ತಲೆ ನೋವು ನೆಗಡಿ ಎಂದು ನರಳಿರಲಿಲ್ಲ, ಪಿತ್ತಕ್ಕೋ ಮತ್ತೊಂದಕ್ಕೋ ತಲೆ ತಿರುಗಿರಬೇಕು, ವಾಂತಿಯಾಗಿರಬೇಕು ಅಂದುಕೊಂಡೆ ನಾನು. ಕೂಡಲೆ ಇವರನ್ನು ಆಸ್ಪತ್ರೆಗೆ ಸೇರಿಸಿದ್ದೂ ಆಯಿತು. ವೈದ್ಯರು ಇ.ಸಿ.ಜಿ. ಮಾಡಿ -

''ನೋಡಿ ಅಮ್ಮ... ಒಂದು ಸಾರಿ ಶಿವಮೊಗ್ಗಕ್ಕೆ ಹೋಗಿಬನ್ನಿ'' ಎಂದರು. ಇದು ಪಿತ್ತವಲ್ಲ ಅನ್ನುವುದು ಖಚಿತವಾಯಿತು. ವೈದ್ಯರ ಮುಖ ಕೂಡ ಗಂಭೀರವಾಗಿತ್ತು.

''ಯಾಕೆ ಡಾಕ್ಟ್ರೆ...''

''ಅವರಿಗೆ ಹೇಳಬೇಡಿ... ನೀವೂ ಗಾಬರಿಯಾಗ ಬೇಡಿ.. ಏನೋ ಹೃದಯದ ಕಾಯಿಲೆ ಅಂತ ಕಾಣುತ್ತೆ. ಒಂದು ಸಾರಿ ಹೋಗಿಬನ್ನಿ, ನಾನು ಚೀಟಿ ಕೊಡುತ್ತೇನೆ...'' ಎಂದರು.

ಮೆಟ್ಟಿಲು ಎಂದು ತಿಳಿದು ಕಾಲಿಟ್ಟಲ್ಲಿ ನೆಲ ಬಾಯಿ ತೆರೆದುಕೊಂಡ ಅನುಭವವಾಗಿ ನಾನು ಗಾಬರಿಯಾದೆ. ಹೃದಯದ ಕಾಯಿಲೆ ಅಂದಕೂಡಲೇ ನನ್ನ ಎದೆ ಒಡೆದಂತಾಯಿತು. ದೇವರೆ ಇದೆಲ್ಲಾ ಸುಳ್ಳಾಗಲಿ ಎಂದು ಹಾರೈಸಿದೆ. ವೈದ್ಯರು ಇವರಿಗೂ ಸೂಕ್ಷ್ಮವಾಗಿ ಹೇಳಿದರು.

''ಹೋಗಿ ಬರುತ್ತೇನೆ..'' ಎಂದು ಇವರೂ ಒಪ್ಪಿಕೊಂಡರು.

ಇವರು ಕೊಂಚ ಅಧೀರರಾದರು. ನಾನು ಕೂಡ. ಆಗುವುದೇ ಅಲ್ಲವೆ? ಯಾವ ಆತಂಕ, ಚಿಂತೆಯೂ ಇಲ್ಲದೆ ನೆಮ್ಮದಿಯಿಂದಿದ್ದ ತಮಗೆ ಇದೊಂದು ಚಿಂತೆ ಬೆನ್ನು ಹತ್ತಿತ್ತೆ! ಅದೂ ಹೃದಯದ ಚಿಂತೆ.

''ಯಾರಿಗೂ ತಿಳಿಸಬೇಡ... ಹೋಗಿಬರೋಣ'' ಎಂದರು ಇವರು.

ಹೆಣ್ಣುಮಕ್ಕಳಿಗೆ ತಿಳಿಸಲು ಹೋಗಲಿಲ್ಲ. ಇವರ ಅಣ್ಣಂದಿರು, ತನ್ನ ಅಣ್ಣಂದಿರು ಇದ್ದಾರೆ. ಅವರಿಗೆಲ್ಲ ಈಗಲೇ ಹೇಳುವುದು ಬೇಡ ಅಂದುಕೊಂಡೆ.

''ದೊಡ್ಡ ಆಸ್ಪತ್ರೆಗೆ ಹೋಗುತ್ತೇವಲ್ಲ.. ಅಲ್ಲಿ ಡಾಕ್ಟರು ತಿಳಿದವರು.. ಅವರು ಹೇಳುತ್ತಾರೆ ಬಿಡಿ... ನಿಮಗೆ ಏನೂ ಆಗಿಲ್ಲ...'' ಎಂದು ಅವರಿಗೆ ಸಮಾಧಾನ ಹೇಳಿದೆ.

ಅವರನ್ನು ನೋಡಿದರೆ ಅವರಿಗೆ ಕಾಯಿಲೆ ಎಂದು ಯಾರೂ ಹೇಳುವುದಿಲ್ಲ. (ಹೃದಯ ರೋಗ ಚೆನ್ನಾಗಿರುವವರಿಗೇನೆ ತಟ್ಟನೆ ಕಾಣಿಸಿಕೊಳ್ಳುತ್ತದಲ್ಲವೆ?) ಆದರೂ ನೋಡೋಣ.

ಶಿವಮೊಗ್ಗದ ಖಾಸಗಿ ಆಸ್ಪತ್ರೆಯಲ್ಲಿ ಎರಡು ಗಂಟೆ

ಉದ್ದ ಸಾಲಿನಲ್ಲಿ ಕುಳಿತು ಕಾದು ಕೊನೆಗೆ ಅಲ್ಲಿಯ ವೈದ್ಯರನ್ನು ನೋಡಿದ್ದಾಯಿತು. ಮತ್ತೆ ಇ.ಸಿ.ಜಿ. ಎಂದರು. ಅದೇನೋ ಬೆಲ್ಟಿನ ಮೇಲೆ ನಡೆಸಿದರು. ಮತ್ತೇನೋ ಸ್ಕ್ಯಾನಿಂಗ್ ಎಂದರು. ಇತರೆ ಕೆಲ ಪರೀಕ್ಷೆಗಳೂ ಆದವು. ಒಂದಿಷ್ಟು ಗುಳಿಗೆ ಬರೆದುಕೊಡುತ್ತ ಆ ವೈದ್ಯರು –

''ಬೆಂಗಳೂರಿಗೆ ಹೋಗತೀರೇನು?'' ಎಂದು ಕೇಳಿದರು. ಅವರ ಮುಖ ಕೂಡ ಗಂಭೀರವಾಗಿತ್ತು.

''ಯಾಕೆ ಸಾರ್?''

''ಒಂದು ಆಂಜಿಯೋಗ್ರಫಿ ಟೆಸ್ಟ್ ಮಾಡಿಸಿ.. ಹತ್ತು ಹನ್ನೆರಡು ಸಾವಿರ ಆಗುತ್ತೆ... ಏನೋ ಟ್ರಬಲ್ ಇರೋದಂತೂ ಹೌದು'' ಎಂದರು.

ಆಕಾಶ ಕುಸಿಯಿತು. ಕುರ್ಚಿಯ ಮೇಲಿನ ನನ್ನ ಕೈಯನ್ನು ಇವರು ಹಿಡಿದುಕೊಂಡರೋ ಇವರ ಕೈಯನ್ನು ನಾನು ಹಿಡಿದುಕೊಂಡೆನೋ.. ಅಂತೂ ನಾವು ಪರಸ್ಪರ ಧೈರ್ಯ ಹೇಳಿಕೊಂಡೆವು.

''ಎದೆ ನೋವು ಬಂದರೆ ಈ ಗುಳಿಗೇನ ನಾಲಿಗೆ ಕೆಳಗೆ ಇಟ್ಟುಕೊಳ್ಳಿ... ತಕ್ಷಣ ಡಾಕ್ಟರನ್ನು ನೋಡಿರಿ'' ಎಂದು ವೈದ್ಯರು ಸಲಹೆ ನೀಡಿದರು.

ಮನೆಯಲ್ಲಿ ಒಂದು ಬಗೆಯ ಕಪ್ಪು ನೆರಳು ಕವಿಯಿತು.

ಭದ್ರಾವತಿಯಲ್ಲಿದ್ದ ಮಗ ಹೆಂಡತಿಯೊಡನೆ ಬಂದ. ಗಂಡ ಹೆಂಡತಿ ಇಬ್ಬರೂ ಕೆಲಸದ ಮೇಲಿರುವವರು.

''ರಮಾನಂದ, ಬೇಗನೆ ಬೆಂಗಳೂರಿಗೆ ಹೋಗಿ ಬರೋಣ... ನನಗೆ ಯಾಕೋ ಗಾಬರಿಯಾಗತಿದೆ'' ಎಂದೆ ಅವನ ಎದುರು.

''..ಯಾವಾಗ ಅಂದ್ರೆ ಅವಾಗ ಹೋಗೋದು ಹೇಗಮ್ಮ... ನನಗೂ ರಜೆ ಸಿಗಬೇಕು, ಅವಳಿಗೂ ರಜೆ ಸಿಗಬೇಕು... ಹಣದ ವ್ಯವಸ್ಥೆ ಬೇರೆ ಮಾಡಿಕೋಬೇಕು...'' ಎಂದ ಮಗ.

ಅವನಲ್ಲಿ ತನ್ನ ತಂದೆಯ ಕಾಯಿಲೆಯ ಬಗ್ಗೆ ಯಾವುದೇ ಆತಂಕವಿರಲಿಲ್ಲ. ಆತ ಬೇರೇನೋ ವಿಚಾರ ಮಾಡುತ್ತಿದ್ದ.

ಇವರೂ ಕೂಡ -

''ಹೋಗೋಣ ಬಿಡು... ಡಾಕ್ಟರು ಹೇಗೂ ಗುಳಿಗೆ ಕೊಟ್ಟದ್ದಾರಲ್ಲ...'' ಎಂದರು. ಕ್ರಮೇಣ ಇವರು ಸೊರಗತೊಡಗಿದರು. ತಮಗೆ ಹೃದಯದ ಕಾಯಿಲೆ ಇದೆ ಎಂಬ ವಿಷಯವೇ ಇವರನ್ನು ತಿನ್ನತೊಡಗಿತ್ತು.

ಹೀಗೆಂದು ನಾನು ಸುಮ್ಮನುಳಿಯುವುದುಂಟೆ?

ವಿಷಯ ಹೆಣ್ಣು ಮಕ್ಕಳಿಗೆ ಹೇಳಿದೆ. ನನ್ನ ಅಣ್ಣಂದಿರಿಗೆ ತಿಳಿಸಿದೆ. ಇವರ ಬಂಧು ಬಳಗಕ್ಕೆ ವಿಷಯ ತಿಳಿಯಿತು. ಅವರೆಲ್ಲ -

''ಬೇಗ ಬೆಂಗಳೂರಿಗೆ ಹೋಗಿ ಬಂದುಬಿಡಿ.. ಮನಸ್ಸಿನಲ್ಲಿ ಅನುಮಾನ ಇಟ್ಟುಕೊಂಡು ಕೊರಗುವುದು ಬೇಡ'' ಎಂದರು.

''ರಮಾನಂದ, ಏನಾದರೂ ವ್ಯವಸ್ಥೆ ಮಾಡು'' ಎಂದೆ ಮಗನಿಗೆ. ಲೀಲಾ, ಶಾರದ, ಸರಸ್ವತಿಯರು ಕೂಡ ತಮ್ಮ ಅಣ್ಣನಿಗೆ ಹೇಳಿ ನೋಡಿದರು.

ತುಂಬಾ ಪೇಚಾಡಿಕೊಂಡಂತೆ ರಮಾನಂದ, ಅವನ ಹೆಂಡತಿ ರಜೆ ತೆಗೆದುಕೊಂಡರು.

''ಹಣದ ವ್ಯವಸ್ಥೇನ ಅಪ್ಪಾನೇ ಮಾಡಬೇಕಮ್ಮ... ನಾವು ಇಬ್ಬರೂ ಪ್ರಾವಿಡೆಂಟ್ ಫಂಡ್ ಲೋನಿಗೆ ಅರ್ಜಿ ಹಾಕಿದ್ದೇವೆ. ಅದು ಬರೋದು ತಡವಾಗುತ್ತೆ..'' ಎಂದ ರಮಾನಂದ.

ಇವರು - ''ಇರಲಿ ಬಿಡು... ಅವರಿಗೆ ಯಾಕೆ ಹೊರೆ'' ಎಂದರು.

ಇವರೇ ಅಲ್ಲಿ ಇಲ್ಲಿ ಇರಿಸಿದ ಹಣ ಒಟ್ಟು ಮಾಡಿಕೊಂಡರು. ಬೆಂಗಳೂರಿಗೆ ಹೋಗುವಾಗ ಮಾತ್ರ ಮಗ ಸೊಸೆ ಜೊತೆಗೆ ಬಂದರು. ಸಂಗಡ ಯಾರಾದರೂ ಇರಬೇಕಲ್ಲ, ಬನ್ನಿ ಎಂದೆ ನಾನು ಕೂಡ.

ಅಲ್ಲಿ ಮತ್ತೆ ಆಸ್ಪತ್ರೆ, ವೈದ್ಯರ ರೂಮಿನೆದುರು ನಿಂತು ಕಾಯುವುದು. ಎಲ್ಲ ಪರೀಕ್ಷೆಗಳ ನಂತರ ಇವರನ್ನು ಆಸ್ಪತ್ರೆಗೆ ಸೇರಿಸಿಕೊಂಡರು.

''ಆಂಜಿಯೋಗ್ರಫಿ ಮಾಡಿ ನೋಡುತ್ತೇವೆ..'' ಎಂದವರು ಅದನ್ನೂ ಮಾಡಿ ಮುಗಿಸಿದರು. ತೊಡೆಯ ಬಳಿ ಒಂದು ತೂತು ಮಾಡಿ ಒಳಗೊಂದು ಸಣ್ಣ ಕೊಳವೆ ಹಾಕಿ ಅದರ ಮೂಲಕ ಅದೇನೋ ದ್ರಾವಕ ಬಿಟ್ಟು ಒಳಗಿನದನ್ನೆಲ್ಲ ನೋಡಿದರಂತೆ. ಇವರು ತಾನು ಕೂಡ ಅದೇನೇನೋ ನೋಡಿದೆ ಎಂದರು. ಇಷ್ಟೆಲ್ಲ ಮಾಡಿದ್ದರಿಂದ ಮನಸ್ಸಿನಲ್ಲಿದ್ದ ಆತಂಕ ದೂರವಾಗಲಿಲ್ಲ; ಅದರ ಬದಲು ಆತಂಕ ಆಪತ್ತಾಗಿ ಪರಿಣಮಿಸಿತು. ವೈದ್ಯರು ಮತ್ತೆ ನನ್ನನ್ನು ಕರೆದು -

''ನೋಡಿ... ಅವರ ಹೃದಯಕ್ಕೆ ರಕ್ತವನ್ನು ಸರಬರಾಜು ಮಾಡುವ ಮೂರು ರಕ್ತನಾಳಗಳು ಕೆಲಸ ಮಾಡುತ್ತಿಲ್ಲ. ಹೃದಯ ಶಸ್ತ್ರಕ್ರಿಯೆ ಮಾಡಿ ಈ ರೋಗವನ್ನು ಸರಿಪಡಿಸದಿದ್ದರೆ ಅಪಾಯವಾಗುವ ಸಂಭವವಿದೆ.. ಆದಷ್ಟು ಬೇಗನೆ ಈ ಶಸ್ತ್ರಕ್ರಿಯೆಯಾಗಬೇಕು...'' ಎಂದರು.

ನನಗೆ ಸುಧಾರಿಸಿಕೊಳ್ಳಲು ಕೆಲ ನಿಮಿಷಗಳಾದವು. ಹಂತಹಂತವಾಗಿ ನಾನು ಕತ್ತಲೆಯ ಕೂಪಕ್ಕೆ ಇಳಿಯುತ್ತ ಹೋಗಿದ್ದೆ. ಮೊದಲು ಮೆಟ್ಟಿಲು ಕುಸಿದಿತ್ತು. ನಂತರ ನೆಲ. ಈಗ, ಅಂತ್ಯವೇ ಇಲ್ಲದ ಕತ್ತಲೆಯ ಗವಿ ಹೊಕ್ಕ ಅನುಭವವಾಯಿತು. ಇವರನ್ನು ಬೆಂಗಳೂರಿಗೆ ಕರೆತಂದ ಸುದ್ದಿ ಕೇಳಿ ಅಲ್ಲಿಗೂ ಬಂದಿದ್ದ ರಾಘಣ್ಣ ಹೋಗಿ ವೈದ್ಯರನ್ನು ಕಂಡುಬಂದ.

''ಆಪರೇಷನ್‌ಗೆ ತೊಂಬತ್ತು ಸಾವಿರ ಬೇಕು'' ಎಂದರಂತೆ ಅವರು.

ಇವರು ವಾರ್ಡಿನಲ್ಲಿದ್ದರು. ನಾನು, ರಾಘಣ್ಣ ರಮಾನಂದ, ಅವನ ಹೆಂಡತಿ ಶಾಂತಿ ಹೊರಗೆ ಕುಳಿತಿದ್ದೆವು.

ರಾಘಣ್ಣ ಈ ವಿಷಯ ಪ್ರಸ್ತಾಪಿಸಿದಾಗ ರಮಾನಂದ –

''ಸರಕಾರಿ ಆಸ್ಪತ್ರೆಗೆ ಸೇರಿಸೋಣ... ನನಗೆ ಅನುಕೂಲವಾಗುತ್ತೆ...'' ಎಂದ .

''ಅಲ್ಲೂ ಖರ್ಚು ಇದ್ದದ್ದೆ... ನರ್ಸು, ವಾರ್ಡ್‌ಬಾಯ್, ಡಾಕ್ಟರುಗಳಿಗೆ ಹಣ ಕೊಡಲಿಲ್ಲ ಅಂದರೆ ಅವರು ಏನೂ ಮಾಡೋದಿಲ್ಲ... ರೋಗೀನೂ ಚೆನ್ನಾಗಿ ನೋಡಿಕೊಳ್ಳೋಲ್ಲ... ರೋಗಿ ಕಡೆಯವರನ್ನೂ ಹೀನಾಮಾನ ಅಂತಾರೆ... ದುಡ್ಡು ಖರ್ಚಾದರೂ ಇಲ್ಲೇ ವಾಸಿ'' ಎಂದ ರಾಘಣ್ಣ.

ಏಕೋ ಈ ಮಾತು ರಮಾನಂದನಿಗೆ ಹಿಡಿಸಲಿಲ್ಲ.

''ದುಡ್ಡು ಇದ್ದರಲ್ಲವೆ ಖರ್ಚು ಮಾಡೋದು.'' ಎಂದ ರಮಾನಂದ.

''ನಿನ್ನ ತಂದೆಗೆ ನೆಂಟರು ಇಷ್ಟರು ಕಡಿಮೆ ಏನಯ್ಯ... ನೀನು ನಿನ್ನ ಭಾವಂದಿರು ಇದೀರಾ, ಅವರ ಅಣ್ಣಂದಿರು ಇದ್ದಾರೆ... ನೋಡಿ ನಾನು ಹೇಳೋದು ಹೇಳ್ದೆ. ಉಳಿದದ್ದು ನಿಮಗೆ ಬಿಟ್ಟದ್ದು'' ಎಂದು ರಾಘಣ್ಣ ಎದ್ದು ಇವರನ್ನು ಮಾತನಾಡಿಸಲು ಒಳಹೋದ.

ನಾನು ರಮಾನಂದನ ಮುಖ ನೋಡಿದೆ.

ಇವರಲ್ಲಿ ಹಣವಿಲ್ಲ ಅನ್ನುವುದು ನನಗೆ ಗೊತ್ತಿತ್ತು. ತೊಂಬತ್ತು ಸಾವಿರ ಒಬ್ಬರೇ ಹೊಂದಿಸಿಕೊಳ್ಳುವುದು ಕಷ್ಟವೆ. ಅದೂ ಮೂರು ಮದುವೆ ಮಾಡಿ, ಮಗನಿಗೆ ಎರಡು ಲಕ್ಷ ಕೊಟ್ಟು ಕೆಲಸ ಕೊಡಿಸಿ ಎಲ್ಲ ಬರಿದಾಗಿರುವಾಗ ಇಷ್ಟೊಂದು ಹಣ ಎಲ್ಲಿಂದ ತಂದಾರು? ಹೀಗೆಂದು ಇವರನ್ನು ಹೀಗೆಯೇ ಬಿಡುವುದೆ ?

''ರಮಾನಂದ ಏನೋ ಮಾಡೋದು?'' ಎಂದು ತೊದಲಿದೆ. ನನ್ನಿಂದ ಮಾತನಾಡಲಾಗಲಿಲ್ಲ.

ರಮಾನಂದ ಹೆಂಡತಿಯ ಮುಖ ನೋಡಿದ.

ಅವಳು ಎದ್ದು ಕಾರಿಡಾರಿನಲ್ಲಿ ತಿರುಗಾಡತೊಡಗಿದಳು.

''ನಿನ್ನ ಇಬ್ರು ದೊಡ್ಡಪ್ಪಂದಿರಿಗೆ ವಿಷಯ ತಿಳಿಸು... ನಾನೂ ನಿನ್ನ ಸೋದರಮಾವಂದಿರಿಗೆ ತಿಳಿಸ್ತೀನಿ... ನಿನ್ನ ಅಕ್ಕ ಭಾವನವರಿಗೂ ತಿಳಿಸು...'' ಎಂದೆ ನಾನು. ತೀರಾ ನಿರಾಶೆ ಪಡುವ ಅವಶ್ಯಕತೆ ಇಲ್ಲವೇನೋ ಅನಿಸಿತು. ರಾಘಣ್ಣ ಹೇಳಿದ ಹಾಗೆ ಬಳಗ ದೊಡ್ಡದಿದೆ. ಎಲ್ಲರೂ ಕೈ ಹಾಕಿದರೆ ಇದು ಕಷ್ಟವಾಗಲಾರದಲ್ಲವೆ?

''ಆಯ್ತು - ಈಗ ಅದೊಂದೇ ದಾರಿ ಉಳಿದಿರೋದು'' ಎಂದು ರಮಾನಂದ ಎದ್ದ.

ಕೊಂಚ ಹೊತ್ತಿಗೆಲ್ಲ ರಾಘಣ್ಣ ಹೊರಬಂದ.

''ನೋಡ್ರಮ್ಮ ಸೂಕ್ಷ್ಮವಾಗಿ ನಾನು ಅವರಿಗೆ ವಿಷಯ ಹೇಳಿದೀನಿ... ನೀವು ಮತ್ತೆ ಊರಿಗೆ ಹೋಗೋದು ತಿರುಗಿ ಬರೋದು ಬೇಡ... ಇಲ್ಲೇ ಆರ್ಡಿನರಿ ವಾರ್ಡ್‌ನಲ್ಲಿ ನಾಲ್ಕು ದಿನ ಇರಿ... ಅಷ್ಟರಲ್ಲಿ ಒಂದು ದಾರಿ ಕಾಣಬಹುದು..'' ಎಂದ ಆತ.

ಆಯಿತು ಎಂದು ತಲೆದೂಗಿದೆ. ಅವನ ಸಂಬಂಧಿಕ ಕುಟುಂಬ ಒಂದರ ಪರಿಚಯ ಮಾಡಿಕೊಟ್ಟ. ಅವರ ಮನೆ ಕೂಡ ಆಸ್ಪತ್ರೆಯ ಹತ್ತಿರವೇ ಇತ್ತು.

''ಊರಿಗೆ ಹೋಗಿಬಿಡೋಣ ನಾಗಿ...'' ಎಂದರು ಇವರು.

''ಹೆಣ್ಣು ಮಕ್ಕಳ ಮದುವೆ ಮಾಡಿದೀನಿ. ಮಗನಿಗೆ ಕೆಲಸ ಕೊಡಿಸಿದೀನಿ... ಇನ್ನೆರಡು ವರ್ಷಕ್ಕೆ ನಿವೃತ್ತನಾಗುತ್ತೇನೆ... ಈಗಲೇ ಹೋಗಬೇಕು ಅಂತ ಇದ್ರೆ, ಯಾರು ತಡೆದು ನಿಲ್ಲಿಸಲಿಕ್ಕೆ ಸಾಧ್ಯ? ಹೋಗಿಬಿಡೋಣ ನಡಿ ಊರಿಗೆ...'' ಎಂದು ಇವರು ಹೇಳ ತೊಡಗಿದರು.

''ಎಲ್ಲ ಆಯ್ತು ಅಂತ ಅಷ್ಟು ಸುಲಭವಾಗಿ ಬಿಟ್ಟುಕೊಡಲಿಕ್ಕೆ ಆಗುತ್ತೆ.. ನೀವು ಇಲ್ಲದ್ದನ್ನೆಲ್ಲ ಹೇಳಬೇಡಿ..'' ಎಂದೆ ನಾನು, ಕಣ್ಣಲ್ಲಿ ನೀರು ತಂದುಕೊಂಡು.

''ನಮ್ಮವರೆಲ್ಲ ಇದಾರೆ... ಏನಾದರೂ ಮಾಡೋಣ'' ಎಂದು ಅವರಿಗೇನೆ ಧೈರ್ಯ ಹೇಳಿದೆ. ಆದರೆ ನನ್ನಲ್ಲಿ ಯಾವ ಧೈರ್ಯವೂ ಇರಲಿಲ್ಲ.

ಸುದ್ದಿ ತಿಳಿದದ್ದೇ ಅಳಿಯಂದಿರು ತಮ್ಮ ಹೆಂಡಿರನ್ನು ಹಿಂದಿರಿಸಿಕೊಂಡು ಬಂದರು.

ಆಸ್ಪತ್ರೆ ಬಾಗಿಲಿಗೆ ಬರುತ್ತಿರುವಂತೆಯೆ ಲೀಲಾ, ಸರಸ್ವತಿ, ಶಾರದರು ಅಳತೊಡಗಿದರು.

''ಅಳೋದು ಯಾಕೆ... ಅವರಿಗೇನೂ ಆಗಿಲ್ಲ'' ಎಂದು ಅವರಿಗೆ ಧೈರ್ಯ ಹೇಳಿದೆ.

ಎಲ್ಲರೂ ಹೋಗಿ ಅವರ ಮುಂದೆ ನಿಂತರು. ಇವರು ಗಾಬರಿಯಾಗಿ -

''ಏನು ಎಲ್ಲ ದಂಡುಗಟ್ಟಿಕೊಂಡು ಬಂದಿದ್ದೀರಾ?'' ಎಂದು ನಕ್ಕರು.

ಎಲ್ಲರೂ ಇವರ ಜತೆ ಮಾತನಾಡಿ ಒಬ್ಬೊಬ್ಬರಾಗಿ ಹೊರಗೆ ಬಂದರು. ವೆರಾಂಡದಲ್ಲಿ ಗೋಡೆ ಕಿಟಕಿ ಕಂಬಗಳಿಗೆ ಒರಗಿ, ಅಲ್ಲಲ್ಲಿ ಕುಳಿತು ಮುಂದಿನ ವಿಷಯ ಮಾತನಾಡಿದರು.

''ತೊಂಬತ್ತು ಸಾವಿರ ಅಂದರೆ ಕಡಿಮೆ ಅಲ್ಲ'' ಎಂದ ಲೀಲಾಳ ಗಂಡ.

''ಹದಿನೈದು ದಿನ ಮುಂಚೆ ಆಗಿದ್ದಿದ್ರೆ ನಾನೇ ಕೊಡತಿದ್ದೆ... ಹೋದವಾರ ಬಿಸನೆಸ್‌ಮೇಲೆ ಹಾಕಿದೆ...'' ಎಂದು ಆತ ಲೊಚಗುಟ್ಟಿದ.

''ನಾನೂ ಕೂಡ ಒಂದು ಸೈಟು ಕೊಂಡುಕೊಂಡೆ.. ಪೂರ್ತಿ ಹಣ ಕಟ್ಟಬೇಕು ಅಂದರು. ಎರಡು ಲಕ್ಷ ಎಲ್ಲಿ ಬರಬೇಕು... ಒಂದು ಲಕ್ಷ ಕಟ್ಟಿ... ಮುಂದಿನದನ್ನು ಕಂತಿನ ಮೇಲೆ ಕೊಡತೀನಿ ಅಂತ ಹೇಳಿದೆ... ಆ ಕಂತನ್ನು ಬೇರೆ ಕಟ್ಟಬೇಕು....'' ಎಂದ ಎರಡನೆಯ ಅಳಿಯ.

ಮೂರನೆಯವ -

''ಅಯ್ಯೋ ನಾನು ಸಾವಿರ ನೋಡಿ ಎಷ್ಟೋ ತಿಂಗಳಾಯ್ತು... ಸಾಲ, ಹಬ್ಬದ ಮುಂಗಡ ಅಂತೆಲ್ಲ ಮುರಿದುಕೊಂಡು ನನ್ನ ಕೈಗೆ ಬರೋದೇ ಒಂಬೈನೂರು...'' ಎಂದೇನೋ ಹೇಳಲು ಹೋದವ ಉಳಿದವರ ಮುಖ ನೋಡಿ ಸುಮ್ಮನಾದ.

ನಾನು ಗೋಡೆಗೊರಗಿದೆ.

ಅಳಿಯಂದಿರು ಈ ವಿಷಯವನ್ನೇ ಎಳೆದು ಜಗ್ಗಿ ಮಾತನಾಡಿ ಎದ್ದುಹೋದರು. ಲೀಲಾ ಶಾರದ ಸರಸ್ವತಿಯರು ಮುಖ ಬಾಡಿಸಿಕೊಂಡು ಕುಳಿತಿದ್ದರು. ನಾನು ಅವರೆಲ್ಲರ ಮೈ ಕತ್ತು ಕೈ ನೋಡಿದೆ. ಬರುವಾಗಲೆಲ್ಲ ತಂದೆ ಮಾಡಿಸಿಕೊಟ್ಟ ಬಳೆ, ನೆಕಲೇಸ್, ಸರ ಎಂದೆಲ್ಲ ಹಾಕಿಕೊಂಡು ಬರುತ್ತಿದ್ದವರು ಈಗ ಬರೀ ಮೈಯಲ್ಲಿ ಬಂದಿದ್ದರು. ನಾನು ಅದನ್ನು ಗಮನಿಸಿದ್ದನ್ನು ಅರ್ಥ ಮಾಡಿಕೊಂಡಂತೆ ಲೀಲಾ -

''... ನನ್ನ ಸಾದಿನೀನ ನೋಡಲಿಕ್ಕೆ ಗಂಡು ಬರುತ್ತಂತೆ... ಅದಕ್ಕೆ ಎಲ್ಲ ತೆಗೆದು ಕೊಟ್ಟೆ...'' ಎಂದಳು.

ಸರಸ್ವತಿ -

''ನೀನು ಸಾದಿನೀಗೆ ಕೊಟ್ಟು ಬಂದೆ.. ಪುಣ್ಯವಂತೆ.. ಇವರು ವಯ್ದು ಬ್ಯಾಂಕಿನಲ್ಲಿ ಇಟ್ಟಿದ್ದಾರೆ...'' ಎಂದಳು.

ಮೂರನೆಯವಳು-

''... ನಂದೆಲ್ಲ ಮಾರಿ ತಿಂದಾಯ್ತು.... ಒಂಬೈನೂರು ಮನೆಗೆ ತಂದ್ರೆ ಹೊಟ್ಟೆಗೇನು ತಿನ್ನೋದು'' ಎಂದಳು.

ನನಗೆಲ್ಲ ಅರ್ಥವಾಯಿತು. ಇವರು ಹೆಣ್ಣು ಮಕ್ಕಳಿಗೆ ಬಂಗಾರ ಮಾಡಿಸಲು ತುಂಬಾ ಶ್ರಮಿಸಿದ್ದರು. ಎರಡೇ ಎರಡು ಜೊತೆ ಬಟ್ಟೆ ಒಂದು ಪ್ಲಾಸ್ಟಿಕ್ ಚಪ್ಪಲಿಯಲ್ಲಿ ಕಾಲ ಕಳೆದಿದ್ದರು.

''ಹೆಣ್ಣು ಮಕ್ಕಳು ಅವರಿವರು ಹಾಕೋದನ್ನ ನೋಡಿ ತಾವೂ ಆಸೆ ಪಡುತ್ವೆ... ಅವರಿಗೆ ಏನು ಬೇಕೋ ಮಾಡಿಸು..'' ಎಂದು ಹೇಳುತ್ತಿದ್ದರು.

ಈಗ ಹೆಣ್ಣು ಮಕ್ಕಳ ಬಾಯಿಂದ ಹೊರಬರುತ್ತಿರುವ ಈ ಮಾತುಗಳು ನನ್ನ ಹೃದಯ ಹಿಂಡಿದವು.

ಅವರ ಮಾತಿಗೆ ತಡೆ ಹಾಕಿ ನಾನೆಂದೆ–

''....ಈಗ ಈ ವಿಷಯಾನ ಯಾಕೆ ತೆಗೀತಿದೀರಾ... ನಿಮ್ಮ ಬಂಗಾರಾನ ಯಾರಾದ್ರೂ ಕೇಳಿದ್ರ?''

ಮೊದಲೇ ಕಂಗಾಲಾಗಿ ಕುಳಿತ ನನಗೆ ಸಿಟ್ಟೂ ಬಂದಿತು. ಈ ಸಿಟ್ಟಿನಲ್ಲೇ ನಾನೆದ್ದು ಒಳಹೋದೆ.

ಅವರು ನಿದ್ದೆ ಮಾಡುತ್ತಿದ್ದರು. ಆಸ್ಪತ್ರೆಗೆ ಬಂದ ದಿನದಿಂದ ಮತ್ತೂ ಇಳಿದು ಹೋಗಿದ್ದರು. ಕಾಯಿಲೆಯ ವಿಷಯ ತಿಳಿದು ಗಾಬರಿಯಾಗಿದ್ದರು. ಶಸ್ತ್ರ ಚಿಕಿತ್ಸೆ, ಅದಕ್ಕೆ ಬೇಕಾಗುವ ಅಪಾರ ಹಣ, ಅದನ್ನು ದೊರಕಿಸಿಕೊಳ್ಳಲಾಗದ ಅಸಹಾಯಕತೆ ಎಲ್ಲ ಅವರನ್ನು ಜರ್ಜರಗೊಳಿಸಿತ್ತು. ರಾತ್ರಿ ಬಹಳ ಹೊತ್ತಿನವರೆಗೆ ಚಿಂತೆ ಮಾಡುತ್ತಿದ್ದರು.

''ಅದೇನಾಗುತ್ತೋ ಆಗಲಿ ಊರಿಗೆ ಹೋಗೋಣ ನಾಗು'' ಅನ್ನುತ್ತಿದ್ದರು.

ಬದುಕಬೇಕೆಂಬಾಸೆ ಯಾರಿಗೂ ಇರುತ್ತದೆ. ಇಷ್ಟೆಲ್ಲ ಜನ ಇದ್ದೂ ಸಾಯುವುದೆಂದರೆ

ಅದು ಸುಲಭವಲ್ಲ, ನ್ಯಾಯವೂ ಅಲ್ಲ. ಈ ವಿಷಯವೇ ಅವರನ್ನು ಹಿಂಡುತ್ತಿತ್ತೇನೋ.

ನಾನು ಅವರ ಮಗ್ಗುಲಲ್ಲಿ ಕುಳಿತು ಅವರ ಹಣೆ ನೇವರಿಸತೊಡಗಿದೆ. ಕೆಲ ನಿಮಿಷಗಳ ನಂತರ ವಾರ್ಡ್‌ಬಾಯ್ ಓಡಿಬಂದು -

''ಅಮ್ಮ ನಿಮಗೆ ಫೋನ್'' ಎಂದ.

ಇವರ ಅಣ್ಣ ಹೈದರಾಬಾದಿನಿಂದ ಮಾತನಾಡುತ್ತಲಿದ್ದರು.

''ವಿಷಯ ಗೊತ್ತಾಯ್ತು... ಈಗ ವೆಂಕಟ ಹೇಗಿದ್ದಾನೆ?''

''ಅವರು ಚೆನ್ನಾಗಿದ್ದಾರೆ... ಆಪರೇಷನ್ ಮಾಡಬೇಕು ಅಂತ ಡಾಕ್ಟರ್ ಹೇಳಿದ್ದಾರೆ...''

''ಹೌದಾ... ನಾನು ಬರತಾ ಇದೀನಿ... ನಾಳೆ ಸಾಯಂಕಾಲದ ಫ್ಲೈಟಿಗೆ ನಾನು ಬರುತ್ತೇನೆ... ಏರೋಡ್ರೋಮಿಂದ ಆಸ್ಪತ್ರೆಗೆ ಒಂದು ಕಾರಿನ ವ್ಯವಸ್ಥೆ ಮಾಡತೀಯ ಅಮ್ಮ ?'' ನಾನು ಗಲಬಿಲಿಗೊಂಡೆ.

''ಇಲ್ಲಿ ಮತ್ತೆ ಯಾರೂ ಇಲ್ಲ. ಕಾರು ಗೀರು ಅಂದ್ರೆ ನನಗೆ ಗೊತ್ತಾಗೋಲ್ಲ...''

''ಸರಿ ಬಿಡು... ನಾನು ಹೇಗಾದರೂ ಮಾಡಿಕೊಂಡು ಬರತೀನಿ...'' ಎಂದವರು ಫೋನ್ ಇಟ್ಟರು.

ನನಗೆ ತುಸು ಧೈರ್ಯ ಬಂದಿತು. ಇವರ ಅಣ್ಣ ತುಂಬಾ ಅನುಕೂಲವಂತರು. ಸಾಕಷ್ಟು ಹಣ ಕೂಡ ಮಾಡಿ ಇರಿಸಿದ್ದಾರೆ. ತಮ್ಮನ ವಿಷಯ ಕೇಳಿದ್ದೇ ಪ್ಲೇನಿನಲ್ಲಿ ಹೊರಟಿದ್ದಾರೆ. ಏರೋಡ್ರೋಮಿನಿಂದ ಆಸ್ಪತ್ರೆಗೆ ಬರಲು ಅವರಿಗೆ ಕಾರಿನ ವ್ಯವಸ್ಥೆ ಮಾಡಬೇಕಿತ್ತು. ಆದರೆ ನಾನು ಒಂಟಿ ಹೆಂಗಸು ಏನು ಮಾಡಲಿ ?

ಈ ಬಗ್ಗೆ ನಾನು ಪೇಚಾಡುತ್ತಿರುವಾಗಲೇ ಇವರ ಮತ್ತೊರ್ವ ಅಣ್ಣ ಮೈಸೂರಿನಿಂದ ಬಂದರು. ಬರುವಾಗಲೇ ಮಡಿಯಲ್ಲಿ ಬಂದರು.

''ನಾನು ಪ್ರಸಾದ ತಂದಿದೀನಿ.. ಸಾಯಿಬಾಬ ಪ್ರಸಾದ.. ಇದನ್ನ ನಿನ್ನ ಗಂಡ ತೊಕೊಂಡ್ರೆ ಏನೇ ಹಾರ್ಟ್ ಪ್ರಾಬ್ಲಮ್ ಇದ್ರು ಅದು ವಾಸಿಯಾಗುತ್ತೆ'' ಎಂದರು.

ತಮ್ಮನಿಗೆ ತಾವೇ ಪ್ರಸಾದ ನೀಡಿದರು.

''ಮೂರು ದಿನ ತೊಕೋ.. ಮತ್ತೆ ಆಸ್ಪತ್ರೆ ಆಪರೇಷನ್ನು ಅಂತ ಇಲ್ಲಿ ಕೂರಬೇಡ. ನಿನ್ನ ಕಾಯಿಲೆ ವಾಸಿ ಆಯ್ತು ಅಂತ ತಿಳಿ.. ನೇರ ಊರಿಗೆ ಹೋಗು'' ಎಂದರು ತುಸು ತಡೆದು.

''ಇಷ್ಟಕ್ಕೂ ಆಗಲಿಲ್ಲ.. ನಾನು ಪುಟ್ಟಪರ್ತಿಯಲ್ಲಿ ನಿನಗೆ ಫ್ರೀಯಾಗಿ ಆಪರೇಷನ್ ಮಾಡಿಸ್ತೇನೆ.. ನೀನೇನೂ ಯೋಚನೆ ಮಾಡಬೇಡ'' ಎಂಬ ಭರವಸೆ ನೀಡಿದರು.

ಒಂದೆರಡು ಗಂಟೆ ಇದ್ದು - ''ನಾನು ಹೇಳಿದ ಹಾಗೆ ಮಾಡಿ'' ಎಂದು ಮತ್ತೆ ಮತ್ತೆ ಹೇಳಿ ಮೈಸೂರಿನ ರೈಲು ಹತ್ತಿದರು.

ಅವರು ಅತ್ತ ಹೋಗುತ್ತಿರಲು ಬಂದವರು ನನ್ನ ಖಾಸಾ ಅಣ್ಣಂದಿರು.

''... ನಾಗಮ್ಮ... ಏನಾಯ್ತು?'' ಎಂದು ಮಂಚದ ಬಳಿ ಬಂದು ನಿಂತು ಕೇಳಿದರು.

''..ಹಾರ್ಟ್... ಅದು ಎಲ್ಲರಿಗೂ ಇದ್ದದ್ದೆ... ಆಪರೇಷನ್ ಮಾಡಿದ್ರೆ ಎರಡು ವರ್ಷ... ಮಾಡದಿದ್ರೆ ಒಂದು ವರ್ಷ... ಈಗೇನು ನಿರ್ಧಾರ ಮಾಡಿದೀಯ? ಕಷ್ಟಾನೋ ಸುಖಾನೋ ಸರಕಾರಿ ಆಸ್ಪತ್ರೆ ಒಳ್ಳೇದು...''

ಅವರೂ ಮಾತನಾಡಿದರು. ದಂಡಿಯಾಗಿ ಉಪದೇಶ ಕೊಟ್ಟರು.

''ಆಪರೇಷನ್ ಯಾವತ್ತು ತಿಳಿಸು ನಾವು ಬರತೇವೆ. ಅಷ್ಟೂ ನೆರವಾಗದಿದ್ರೆ ಹ್ಯಾಗೆ... ನೀನು ಯೋಚಿಸಬೇಡ ದೇವರಿದ್ದಾನೆ. ಹಣೇಲಿ ಬರೆದಿದ್ದನ್ನ ಯಾರಿಂದ ತಪ್ಪಿಸಲಾಗುತ್ತೆ...''

ನಾನು ಹೋಗಿ ಅವರನ್ನು ಆಸ್ಪತ್ರೆ ಬಾಗಿಲವರೆಗೂ ಬಿಟ್ಟುಬಂದೆ.

ಆ ಸಂಜೆ ರಮಾನಂದ ಬಂದ. ಜೊತೆಯಲ್ಲಿ ಹೆಂಡತಿ ಬಂದಿರಲಿಲ್ಲ.

''ರಮಾನಂದ, ಯಾವುದೋ ಲೋನ ಬರೋದಿದೆ ಅಂತ ಹೇಳಿದ್ದಿಯಲ್ಲ...''

''ನೀನು ಅದರ ದಾರಿ ಕಾಯತಿದೀಯ ಅಮ್ಮ?''

''ಇಲ್ಲ... ಕೇಳ್ದೆ....''

ಅವನಿಗೆ ನನ್ನ ಮುಖ ನೋಡುವ ಧೈರ್ಯ ಕೂಡ ಇರಲಿಲ್ಲ.

ಪ್ರಾವಿಡೆಂಟ್ ಫಂಡಿನ ಹಣವನ್ನು ಬೇಗನೆ ಪಡೆಯುವ ವಿಷಯದಲ್ಲಿ ರಮಾನಂದನಿಗಾಗಲಿ ಅವನ ಹೆಂಡತಿಗಾಗಲಿ ಆಸಕ್ತಿ ಇದ್ದಂತಿಲ್ಲ ಎಂಬುದು ನನಗೆ ಅವನ ಮಾತಿನಿಂದ ತಿಳಿದುಹೋಯಿತು. ಅವನು, ಅವನ ಹೆಂಡತಿ ಈ ಸಾಲಕ್ಕಾಗಿ ಅರ್ಜಿ ಹಾಕಿದ್ದೂ ಹೌದು, ಅದು ಮಂಜೂರಾಗುವ ಹಂತದಲ್ಲೂ ಇದ್ದಿರಬಹುದು. ಆದರೆ ಈಗ ಅದನ್ನು ತೆಗೆದುಕೊಂಡರೆ ಅದರ ವಿನಿಯೋಗ ಬೇರೆ ರೀತಿಯಲ್ಲಿ ಆಗುತ್ತದಲ್ಲವೆ ?

ನನಗೆ ಒಂದೊಂದೂ ಕಡೆಯಿಂದ ನಿರಾಶೆಯಾಗತೊಡಗಿತು.

ಆ ರಾತ್ರಿ ನಾನು ನಿದ್ದೆ ಮಾಡಲಿಲ್ಲ.

ಮೂವತ್ತು ವರ್ಷಗಳಿಗೂ ಮಿಕ್ಕಂತೆ ನನ್ನ ಜೊತೆ ಬಾಳುವೆ ಮಾಡುತ್ತ ಬಂದವರು, ನನ್ನ ಮನೆ, ಮಕ್ಕಳ ಅಭಿವೃದ್ಧಿಗೆ ಕಾರಣರಾದವರು, ಸದಾ ಮನೆ ಮನೆ ಎಂದು ಪರದಾಡಿದವರು ಕಷ್ಟಕ್ಕೆ ಸಿಲುಕಿರುವಾಗ ಅವರಿಗಾಗಿ ನಾನು ಏನೂ ಮಾಡಲಾರದೆಹೋದೆನೆ ?

ನಾನು ಇವರತ್ತ ಬೆನ್ನು ಮಾಡಿ ಅಡ್ಡ ಬೆಂಚಿನ ಮೇಲೆ ಮಲಗಿ ಕಣ್ಣೊರೆಸಿಕೊಂಡೆ.

ಇವರು ಒಂದೆರಡು ಬಾರಿ ಕೇಳಿದರು -

''ನಾಗು ನಿದ್ದೆ ಬರಲಿಲ್ವ''.

''ಬಂದಿತ್ತು... ಇದೇ ಎಚ್ಚರವಾಯ್ತು... ನೀವು ಮಲಗಿ.''

ಸಾಯಂಕಾಲ ಹೈದರಾಬಾದಿನ ಇವರ ಅಣ್ಣ ಬಂದರು.

''ಏನಯ್ಯ... ಹೆದರಿಸಿಬಿಟ್ಟೆ... ಏನಾಗಿದೆ ನಿನಗೆ... ಚೆನ್ನಾಗೇ ಇದೀಯಲ್ಲ...'' ಎಂದರು.

''ಈ ಡಾಕ್ಟ್ರಗಳ ಮಾತನ್ನ ನಂಬಬೇಡ... ಅವರು ಏನೇನೆಲ್ಲ ಯಂತ್ರಗಳನ್ನು ತರಿಸಿರತಾರಲ್ಲ ಅದರ ಹಣಾನ ನಿಮ್ಮಿಂದ ವಸೂಲಿ ಮಾಡತಾರೆ...'' ಎಂದು ಮಂಚದ ಮೇಲೆ ಇವರ ಮಗ್ಗುಲಲ್ಲಿ ಕುಳಿತು ವೈದ್ಯರನ್ನು ಬೈಯ್ದರು.

''ಆಂಜಿಯೋಗ್ರಫಿ ಮಾಡಿದ ಫಿಲಂನ ಬೇರೆ ಯಾರಿಗಾದರೂ ತೋರಿಸು. ನಂತರ ಒಂದು ನಿರ್ಧಾರಕ್ಕೆ ಬಾ..'' ಎಂದು ಸಲಹೆ ನೀಡಿದರು.

''ನಾನು ಗಾಬರಿಯಾಗಿ ಬಂದೆ... ನೀನು ನೋಡಿದ್ರೆ ಗುಂಡುಕಲ್ಲಿನ ಹಾಗಿದೀಯ'' ಎಂದು ನಕ್ಕರು.

''ಪ್ಲೇನಿನಲ್ಲಿ ಬರೋದು ನನಗೆ ಕಷ್ಟ ಆಗಲಿಲ್ಲ.. ಏರೋಡ್ರೋಮಿಂದ ಆಟೋದಲ್ಲಿ ಬರೋದು ಕಷ್ಟ ಆಯ್ತು... ಒಂದು ಟ್ಯಾಕ್ಸಿ ಕೂಡ ಸಿಗಲಿಲ್ಲ...'' ಎಂದು ಗೊಣಗಿದರು.

''ನನಗೆ ಬಳ್ಳಾರಿಯಲ್ಲಿ ಒಂದಿಷ್ಟು ಕೆಲಸ ಇದೆ... ಅಲ್ಲಿಗೆ ಹೋಗಿ ಇನ್ನು ಒಂದೆರಡು ದಿನಗಳಲ್ಲಿ ನಾನು ಮತ್ತೆ ಬರತೇನೆ... ಅಷ್ಟರಲ್ಲಿ ಅದೇನು ಮಾಡತೀರೋ ನೋಡಿ'' ಎಂದು ನನಗೆ ಹೇಳಿ ಅವರು ಹೊರಟರು.

ಆ ರಾತ್ರಿ ಇವರು ''ನಾಗು'' ಎಂದರು.

''ಏನು ?''

''ನೀನು ಬಾಯಿ ಬಿಟ್ಟು ಹೇಳದಿದ್ರೂ ನನಗೆಲ್ಲ ಅರ್ಥವಾಗುತ್ತೆ.''

ಇವರ ದನಿ ನಡುಗುತ್ತಿತ್ತು.

''ಊರಿಗೆ ಹೋಗಿಬಿಡೋಣ ಅಂದೆ.. ನೀನು ಕೇಳಲಿಲ್ಲ... ಈಗ ಬೇರೆ ದಾರಿ ಯಾವುದಿದೆ ಹೇಳು...''

ನನಗೆ ಗೊತ್ತಿಲ್ಲದೇನೆ ನನ್ನ ಕಣ್ಣುಗಳು ತುಂಬಿಬಂದವು. ಒಂದು ಅರ್ಥದಲ್ಲಿ ಹತ್ತಿರದವರೆಲ್ಲರೂ ಕೈ ಬಿಟ್ಟಿದ್ದರು. ಅವರೆಲ್ಲ ಬರುವಾಗ ಕೈಯಲ್ಲಿ ಹಿಡಿದು ತಂದ ಮೋಸಂಬಿ, ಸೇಬು, ದಾಳಿಂಬೆ, ಕಿತ್ತಲೆ, ಚಿಕ್ಕು ಹಣ್ಣುಗಳ ರಾಶಿ ಮೇಜಿನ ಮೇಲೆ ಬಿದ್ದಿತ್ತು. ಒಂದೇ ಒಂದು ಹಣ್ಣನ್ನು ಇವರು ತಿಂದಿರಲಿಲ್ಲ. ನಾನೂ ಮುಟ್ಟಿರಲಿಲ್ಲ.

ಮುಂದೇನು ? ಮುಂದೇನು ? ಎಂಬ ಪ್ರಶ್ನೆ ನನ್ನೆದುರು ನಿಂತಿತ್ತು.

ಇನ್ನು ಕೈಲಿರುವ ಹಣದಲ್ಲಿ ವಾರ್ಡ್‌ಬಾಯಿಗೆ ಕೊಟ್ಟು ಊರಿಗೆ ಹಿಂದಿರುಗುವುದೇ ಸರಿ ಅಂದುಕೊಂಡೆ. ಇದೊಂದು ರಾತ್ರಿ ಕಳೆಯಲಿ ಎಂದು ಕಾದೆ.

ಕೊನೆಗೂ ಹಣೆಯಲ್ಲಿ ಬರೆದಂತೆ ಆಗುತ್ತದೆ ಎಂಬ ಮಾತಿನಲ್ಲಿ ನನಗೆ ನಂಬಿಕೆ ಮೂಡತೊಡಗಿತು. ನನ್ನ ಅಸಹಾಯಕತೆ, ದೌರ್ಬಲ್ಯ ಕುತ್ತಿಗೆಯ ನೇಣಾಗಿ ಪರಿಣಮಿಸಿತು. ಆ ರಾತ್ರಿ ಬಹಳ ದೀರ್ಘವಾಗಿತ್ತು. ನಾನು ಕಣ್ಣ ರೆಪ್ಪೆಗೆ ರೆಪ್ಪೆ ಮುಟ್ಟಿಸಲಿಲ್ಲ. ಇವರೂ ಮಲಗಲಿಲ್ಲ.

ಬೆಳಕು ಹರಿದು ನಾನು ನನ್ನ ಇವರ ಬಟ್ಟೆಗಳನ್ನು ಮಡಚುತ್ತಿರುವಾಗ ಅಟೆಂಡರ್ ಬಂದು ''ಫೋನ್ ಬಂದಿದೆ ಅಮ್ಮ'' ಎಂದ. ''ಇನ್ನು ಸಂಬಂಧಿಕರು ಯಾರೂ ಇಲ್ಲವೆ! ಯಾರ ಫೋನು'' ಎಂದು ವಿಚಾರ ಮಾಡುತ್ತ ಹೋಗಿ ಫೋನ್ ಎತ್ತಿಕೊಂಡೆ.

ಊರಿನಿಂದ ರಾಘಣ್ಣ ಮಾತನಾಡುತ್ತಿದ್ದ.

''ರಾಘಣ್ಣ.. ಹಣದ ವ್ಯವಸ್ಥೆ ಏನೂ ಆಗಲಿಲ್ಲ... ನಾನು ಅವರನ್ನು ಕರಕೊಂಡು ತಿರುಗಿ ಬರತಾ ಇದೇನೆ'' ಎಂದೆ. ನನಗೆ ಅಳು ತಡೆಯಲಾಗಲಿಲ್ಲ.

''ಛೆ, ಛೆ, ಹಾಗೆ ಮಾಡಬೇಡಿ... ನಾನು ಹಣದ ವ್ಯವಸ್ಥೆ ಮಾಡಿದೇನೆ... ಹಣ ತೊಕೊಂಡು ಬರತಾ ಇದೇನೆ...'' ಎಂದ ರಾಘಣ್ಣ.

ನಾನು ನನ್ನ ಕಿವಿಗಳನ್ನೇ ನಂಬಲಿಲ್ಲ.

ನಾ. ಡಿಸೋಜ
೧೫/೧೪, ೨ನೇ ಕ್ರಾಸ್, ನೆಹರು ನಗರ, ಸಾಗರ-೫೭೭ ೪೦೧



# ಅಷ್ಟೊಂದು ಹೊತ್ತು

ಹಕ್ಕಿ ಕಿಲಿಕಿಲಿಯ ಚುಮುಚುಮು ನಸುಕಲ್ಲಿ
ಹೊರಟಿದ್ದೆ ಹೊರಗೆ
ಅಂಗಳದ ಬದಿಯಲ್ಲಿ ತುಳಸಿ, ಕಾಮಕಸ್ತೂರಿ
ಪಚ್ಚೆತೆನೆಗಳ ಕಂಪು
ಗಿಡಗಿಡದ ತಲೆಯಲ್ಲಿ ಕೈಯಾಡಿಸಿ
ಇಳಿದು ಅಡಿಕೆ ತೋಟದ ನಡುವೆ
ಸಿಂಗಾರ ಪಟಪಟನೆ ಬಿರಿವ ಪರಿಮಳದಲ್ಲಿ
ತೇಲುತ್ತ ಸಾಗಿದೆ.

ತೋಟದಲಿ ಅಲ್ಲಲ್ಲಿ ತೆಂಗು ಗರಿಗಳ
ಎಡೆಯೆಡೆಗೆ ಕೊಂಬುಗಳು
ಒಡೆದು ಹೂವರಳಿದಲ್ಲಿ;
ಹೂ ಬಿಟ್ಟ ಮುಳ್ಳು ನಾಚಿಕೆಯಲ್ಲಿ
ದುಂಬಿಗಳ ಝೇಂಕಾರ:
ಅಂಗಾಂಗ ತೆರೆದು ಹೂಗಾಳಿಯಲ್ಲಿ
ಗೊನೆಬಿಟ್ಟ ಬಾಳೆಗಳ, ಕರಿಮೆಣಸು ಬಳ್ಳಿಗಳ
ದಾಟುತ್ತ ದಾಟುತ್ತ ಪ್ರಕೃತಿ ಸಹವಾಸದಲಿ
ಉಲ್ಲಾಸಗೊಳ್ಳುತ್ತ ಮುಂದೆ ನಡೆದೆ.

ಅಲ್ಲೆ ಮುಂದುಗಡೆ ಹರಿವ ತೋಡಲ್ಲಿ
ಕಸಕಡ್ಡಿ, ಎಲೆಚೂರು, ಕಾಡು ಹೂಗಳು ಚೆಲ್ಲಿ
ತೆಪ್ಪ ತೇಲುವ ನೋಟ ಕಣ್ಣಲ್ಲಿ
ತುಂಬಿಕೊಳ್ಳುತ್ತ,
ಹೆಜ್ಜೆ ಸರಿದಂತೆ ಆಚೆ ಮಗ್ಗುಲಿಗೆ
ಅಂತರಿಕ್ಷಕ್ಕೆ ಏಣಿಯಿಟ್ಟಂತೆ ಕೊರಳೆತ್ತಿ ನಿಂತ
ಕೊಟ್ಟೆ ತೆಂಗಿನಮರ
ತೆರೆದ ಗರಿಗರಿಯಲ್ಲಿ ತೊಟ್ಟಿಕ್ಕುವಂತೆ
ಹೊಳೆಹೊಳೆವ ಬಂಗಾರ ಬೆಳಕು.

ಕ್ಷಣ ನಿಂತು ನೋಡಿದೆ-ಹಿನ್ನೆಲೆಗೆ
ಕೋಟಿಮಲೆ,
ಎದುರು ಹಸಿರುಕ್ಕುವ ಈ ಕಲ್ಪವೃಕ್ಷ
ನಿಂತಲ್ಲೇ ನೆಲಮುಗಿಲ ಬೆಸೆವ ನೋಟ:
ಮೈಮರೆತ ಕ್ಷಣದಲ್ಲೇ ಪುಟ್ಟ ಅಳಿಲೊಂದು
ಬಾಳೆ ಸೆರೆಯಿಂದ ಪುಟುಪುಟು
ಓಡೋಡಿ ಬಂದು
ಸರಸರನೆ ಆ ಮರವನ್ನೇ ಏರುವುದ ಕಂಡೆ.

ಏರುತ್ತಲಿದ್ದ ಅಳಿಲು ನಟ್ಟನಡುವಲ್ಲಿ
ಯಾಕೋ ನಿಂತು ಅತ್ತಿತ್ತ ನೋಡಿತು
ಸಹಜವಾಗಿಯೇ ಅದರ ನುಣುಪು ಬೆನ್ನಲ್ಲಿ
ರಂಗೋಲಿಯೆಳೆಯಂತೆ ಹೊಳೆವ
ಆ ಮೂರು ಬಿಳಿಯ ಗೆರೆಗಳು ಕಣ್ಸೆಳೆದು
ತೆರೆದಂತೆ ವಾತ್ಸಲ್ಯಪಥ
ಮೂಕ ವಿಸ್ಮಿತನಾದೆ: ಆ ಮರಕ್ಕೇ ಬಣ್ಣ ಬಳಿವಂತೆ
ಬಾಲದ ಕುಂಚ ಕುಣಿಸುತ್ತ
ಅಳಿಲು ಕಿಚಕಿಚ ಎಂದಿತು.

ಕ್ಷಣಾರ್ಧದಲ್ಲಿ ಎಲ್ಲಿಂದಲೋ
ಕಿರ್ರೆಂದು ಹಾರಿ ಮರಕುಟಿಗ
ಗಕ್ಕನೆ ಅಳಿಲ ಮೇಲೆರಗಿತು !
ಫಕ್ಕನೆ ಕೌತುಕದ ಕಣ್ಣಾದೆ:
ಮರಕುಟಿಗ ಕುಕ್ಕುತ್ತಲಿತ್ತು ಕೊಕ್ಕಲ್ಲಿ
ಅಳಿಲ ಬೆನ್ನು !
ಕ್ಷಣವೊಂದು ಯುಗವಾಗಿ ಗಾಢ ವಿಷಾದ
ಆವರಿಸಿತು.

ಅಳಿಲು ತೆಪ್ಪಗಿದೆ !
ಭೀತಿಯಲಿ ಮರಗಟ್ಟಿಹೋಯಿತೆ ?
ತಟ್ಟನೆ ನೆನಪಾಗಿ, ಅಷ್ಟೊಂದು ಹೊತ್ತು
ಹೆಗಲಲ್ಲೇ ತೂಗುತ್ತಲಿದ್ದ ದುರ್ಬೀನು
ಹಿಡಿದೆತ್ತಿ, ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ:
ಏನಿದೀ ವಿಚಿತ್ರ ! ಈ ಒಳಗಣ್ಣ ನೋಟಕ್ಕೆ
ಅಷ್ಟೊಂದು ಹೊತ್ತೆ ?

ಮರವನ್ನಪ್ಪಿ ಹಿಡಿದಿದ್ದ ಅಳಿಲು ಬೆನ್ನೊಡ್ಡಿ
ಪಿಳಿಪಿಳಿ ಕಣ್ಣು ಮಿಟುಕಿಸುತ್ತಿತ್ತು;
ಮರಕುಟಿಗ ಅಳಿಲ ಬೆನ್ನಿಂದ
ಹೇನು ಹೆಕ್ಕಿ ಹೆಕ್ಕಿ ತಿನ್ನುತ್ತಲಿತ್ತು.

ಮುದಗೊಂಡು ನೋಡನೋಡುತ್ತಲಿದ್ದಂತೆ
ಮರಕುಟಿಗ ರಿವ್ವನೆ ಎತ್ತಲೋ ಹಾರಿತು;
ಅಳಿಲು ಚಕ್ಕನೆ ಪುಟಿದು
ತೆಂಗು ಗರಿಗಳ ನಡುವೆ ಮರೆಯಾಯಿತು.

ಜಿ. ಎಸ್. ಉಬರಡ್ಕ
'ಕಾರ್ತಿಕ', ದೊಡ್ಡತೋಟ-೫೭೪ ೨೪೮, ಸುಳ್ಯ ತಾ|| ದಕ್ಷಿಣ ಕನ್ನಡ ಜಿಲ್ಲೆ

# ಮಾಧ್ಯಮ ರಂಗಕ್ಕೆ ನುಸಿಪೀಡೆ



■ ಮೋಹನ್ ಕುಡ್ಲ

ವಿದೇಶಿ ಪತ್ರಿಕೆಗಳಿಗೆ ಭಾರತದಲ್ಲಿ ಮುದ್ರಣಕ್ಕೆ ಅವಕಾಶ ನೀಡಬೇಕೆಂಬ ವಿಷಯ ಮತ್ತೆ ಮತ್ತೆ ಪ್ರಸ್ತಾಪವಾಗುತ್ತಿದೆ. ಜಾಗತೀಕರಣದ ಬಿರುಗಾಳಿ ಭಾರತದ ಹಲವು ರಂಗಗಳನ್ನು ತರಗೆಲೆಯಾಗಿಸಿದೆ. ಆದರೆ ಮಾಧ್ಯಮ ಕ್ಷೇತ್ರವನ್ನು ಇನ್ನೂ ತನ್ನ ತೆಕ್ಕೆಗೆ ಸಂಪೂರ್ಣವಾಗಿ ತೆಗೆದುಕೊಳ್ಳಲು ಸಾಧ್ಯವಾಗಿಲ್ಲ. ಜಾಗತೀಕರಣ ಭಾರತದ ಮಾಧ್ಯಮದೊಳಗೆ ಸಾಕಷ್ಟು ಬದಲಾವಣೆಗಳನ್ನು ತಂದಿರಬಹುದು. ಆದರೆ ಈ ಕ್ಷೇತ್ರವನ್ನು ನೇರವಾಗಿ ಪ್ರವೇಶಿಸಲು ಸಾಧ್ಯವಾಗಿಲ್ಲ. ಹೀಗಾಗಿ ಭಾರತ ಸರ್ಕಾರ ಈ ಕ್ಷೇತ್ರದ ನೇರಪ್ರವೇಶಕ್ಕೆ ಮುಚ್ಚಿರುವ ಬಾಗಿಲನ್ನು ತೆರೆಯುವಂತೆ ಪದೇಪದೇ ಒತ್ತಡವನ್ನು ಹೇರುತ್ತಿದೆ. ಸ್ವಾತಂತ್ರ್ಯಾನಂತರ ಇದುವರೆಗೂ ಒಂದು 'ಮಾಧ್ಯಮ ನೀತಿ'ಯನ್ನು ರೂಪಿಸಲು ಸಾಧ್ಯವಾಗಿಲ್ಲದ ಸರ್ಕಾರ ಈ 'ವಿದೇಶಿ' ಪ್ರಶ್ನೆಯನ್ನು ಸಾಕಷ್ಟು ಗಂಭೀರವಾಗಿ ಪರಿಗಣಿಸಿಯೇ ಇಲ್ಲ. ಹೀಗಾಗಿ ಜಾಗತೀಕರಣದ ವಕ್ತಾರನಂತೆ ಈ ವಿವಾದವನ್ನು ಜೀವಂತವಾಗಿಟ್ಟಿದೆ.

ಗ್ಯಾಟ್ ಒಪ್ಪಂದಕ್ಕೆ ಭಾರತ ಸಹಿ ಹಾಕಿದ ನಂತರ ಭಾರತ ಒಂದು ದೇಶ ಎನ್ನುವುದಕ್ಕಿಂತ ಒಂದು 'ಬ್ರ್ಯಾಂಡ್' ಆಗಿ ಪರಿವರ್ತಿತವಾಗಿದೆ. ದೇಶಗಳನ್ನು, ರಾಜ್ಯಗಳನ್ನು, ನಗರಗಳನ್ನು ಬ್ರ್ಯಾಂಡ್ ಆಗಿ ಪರಿವರ್ತಿಸುವ, ಅಲ್ಲಿ ಮಾರಾಟದ ಸಾಧ್ಯಾನುಸಾಧ್ಯತೆಗಳನ್ನು ಪರಿಶೀಲಿಸಿ ಇದು ನಮ್ಮ ಹಣ ಹೂಡಿಕೆಗೆ ತಕ್ಕ ಜಾಗ ಎಂದು ಪರಿಗಣಿಸುವುದನ್ನು ಬ್ರ್ಯಾಂಡ್ ಆಗಿ ಪರಿಗಣಿಸುವಿಕೆ ಎಂದು ಕರೆಯಲಾಗುತ್ತಿದೆ. ಇತ್ತೀಚೆಗೆ ದೆಹಲಿಯಲ್ಲಿ ಜರುಗಿದ ಸಮ್ಮೇಳನ ಬೆಂಗಳೂರನ್ನು ಬ್ರ್ಯಾಂಡ್ ಎಂದು ಗುರುತಿಸಿದೆ. ಇದನ್ನು ರಾಜ್ಯ ಸರ್ಕಾರದ ಸಾಧನೆ ಎಂದೂ ಮುಖ್ಯಮಂತ್ರಿಗಳು ಬಣ್ಣಿಸಿಕೊಳ್ಳುತ್ತಿದ್ದಾರೆ. ಜಾಗತೀಕರಣ ಉಂಟುಮಾಡಿರುವ ಬದಲಾವಣೆ ಇದು. ದೇಶಗಳನ್ನು ಬ್ರ್ಯಾಂಡ್‌ಗಳನ್ನಾಗಿಸಿ ಇವು ತಮ್ಮ ಮಾಲು ವಿಲೇವಾರಿ ಮಾಡುವ ಆಯಕಟ್ಟಿನ ಜಾಗ ಎಂದು ಗುರುತಿಸಿ ಬಹುರಾಷ್ಟ್ರೀಯ ಕಂಪೆನಿಗಳು ಇಲ್ಲಿಗೆ ನುಗ್ಗುತ್ತಿವೆ. ಭಾರತದ ಮಾರುಕಟ್ಟೆಯನ್ನು ಇಂತಹ ಕಂಪೆನಿಗಳಿಗಾಗಿ ಗ್ಯಾಟ್ ಒಪ್ಪಂದಕ್ಕೆ ಸಹಿ ಮಾಡುವ ಮೂಲಕ ನಡೆಮುಡಿ ಹಾಸಿ ಮುಕ್ತವಾಗಿಸಲಾಗಿದೆ. ಹೇರಳ ತೊಗರಿ ಬೆಳೆವ ಪ್ರದೇಶಕ್ಕೆ ತೊಗರಿ ಕಳಿಸುವ, ಗೋಧಿಯ ಖಜಾನೆಗೇ ಗೋಧಿ ರಫ್ತು ಮಾಡುವ, ಹತ್ತಿಯನ್ನು ಹಲವು ಬಗೆಯಲ್ಲಿ ಬಿತ್ತಿ ಬೆಳೆದ ದೇಶಕ್ಕೇ ಹತ್ತಿ ಬೆಳೆವ ತಂತ್ರಜ್ಞಾನ ಕಲಿಸುವ, ಸಮೃದ್ಧ ಹಾಲು ಇರುವ ದೇಶದಲ್ಲಿ ವಿದೇಶಿ ಹಸುವಿನ ತಳಿ ಬೆಳೆಸಲು ತಿಳಿಸುವ ಧಿಮಾಕನ್ನು ಈ ಜಾಗತೀಕರಣ ಪ್ರದರ್ಶಿಸುತ್ತಿದೆ.

ಮಾಧ್ಯಮ ಕ್ಷೇತ್ರದಲ್ಲಿ ಭಾರತ ಸಣ್ಣ ಪ್ರಮಾಣದ ಸಾಧನೆಯನ್ನೇನೂ ಪ್ರದರ್ಶಿಸಿಲ್ಲ. ಜಗತ್ತಿನಲ್ಲಿ ಭಾರತದ ಮಾಧ್ಯಮ ರಂಗ ನಾಲ್ಕನೆಯ ಸ್ಥಾನದಲ್ಲಿದೆ. ಅಮೆರಿಕಾ, ಚೀನಾ, ಜಪಾನ್, ನಂತರದ ಸ್ಥಾನ ಭಾರತಕ್ಕೆ. ಭಾರತೀಯ ವೃತ್ತ ಪತ್ರಿಕಾ ಸಂಸ್ಥೆ (ಐಎನ್‌ಎಸ್) ಪ್ರಕಾರ ಭಾರತದ ಪತ್ರಿಕಾರಂಗ ಬಲಿಷ್ಠವಾಗಿಯೂ, ಸ್ವತಂತ್ರವಾಗಿಯೂ, ಚುರುಕಾಗಿಯೂ ಇದೆ. ತೊಗರಿ ಬೆಳೆವ ಪ್ರದೇಶಕ್ಕೆ ತೊಗರಿ ರಫ್ತು ಮಾಡಿದ ಲೆಕ್ಕಾಚಾರದಲ್ಲಿಯೇ ಮಾಧ್ಯಮಗಳು ಬಲಿಷ್ಠವಾಗಿರುವ ದೇಶಕ್ಕೆ ಮಾಧ್ಯಮಗಳನ್ನು ರಫ್ತು ಮಾಡಲು ಜಾಗತೀಕರಣಗ ನೇತಾರರು ಪ್ರಯತ್ನಿಸುತ್ತಿದ್ದಾರೆ.

ಮಾಧ್ಯಮ ರಂಗಕ್ಕೆ ನುಗ್ಗುವಲ್ಲಿ ಇನ್ನೊಂದು ಮುಖ್ಯ ಕಾರಣವೂ ಇದೆ. ತೊಗರಿ, ಗೋಧಿ, ಹಾಲು ಇವು ದೇಶದ ಸಾಮೂಹಿಕ ಅಭಿಪ್ರಾಯವನ್ನು ರೂಪಿಸಲಾರವು. ಆದರೆ ಮಾಧ್ಯಮಕ್ಕೆ ಈ ಶಕ್ತಿ ಇದೆ. ಮಾಧ್ಯಮ ಬಹುರಾಷ್ಟ್ರೀಯ ಕಂಪೆನಿಗಳಿಗೆ ಒಂದು ಮಾರುಕಟ್ಟೆಯೂ ಹೌದು. ಹಾಗೆಯೇ ಸಾರ್ವಜನಿಕ ಅಭಿಪ್ರಾಯ ರೂಪಿಸುವ ದಾರಿಯೂ ಹೌದು. ಸಾರ್ವಜನಿಕ ಅಭಿಪ್ರಾಯ ರೂಪಿಸುವ ಒಂದು ಸಾಧನ ಕೈಯಲ್ಲಿದೆ ಎಂದರೆ ಸರ್ಕಾರದ ಜುಟ್ಟು ಕೈಯಲ್ಲಿದೆ ಎಂದೇ ಅರ್ಥ. ಹಾಗಾಗಿ ಮಾಧ್ಯಮ ಕ್ಷೇತ್ರಕ್ಕೆ ನುಗ್ಗುವುದು ಈಗ ಜಾಗತೀಕರಣದ ಮುಖ್ಯಸ್ಥರಿಗೆ ಆದ್ಯತೆಯ ಕೆಲಸ. ಭಾರತದಲ್ಲಿ ವಿದೇಶಿ ಪತ್ರಿಕೆಗಳನ್ನು ಪ್ರಕಟಿಸಲು ಅವಕಾಶ ನೀಡಬೇಕೆಂಬ ಒತ್ತಡ ಈ ಮೊದಲಿನಿಂದಲೂ ಇದೆ. ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ಕಾರಣ ಒತ್ತಡ ಹೇರಿಕೆ ಬಲವಾಯಿತು. ೧೯೮೯, ೧೯೯೦, ೧೯೯೪, ೧೯೯೫ ಹೀಗೆ ವಿದೇಶ ಒತ್ತಡ ಹೆಚ್ಚುತ್ತಲೇ ಇದೆ. ಆದರೆ ಈಗ ಬಹುರಾಷ್ಟ್ರೀಯ ಸಂಸ್ಥೆಗಳ ಪ್ರಕಾರ ಕಾಲ ಪಕ್ವವಾಗಿದೆ. ಬಹುರಾಷ್ಟ್ರೀಯ ಕಂಪೆನಿಗಳು ಒಂದೊಂದಾಗಿ ಭಾರತದಲ್ಲಿ ನೆಲೆಯೂರಿದ ನಂತರ ಈಗ ಅದಕ್ಕೆ ಜನರ ಅಭಿಪ್ರಾಯದ ಮೇಲೆ ಸವಾರಿ ಮಾಡುವ ಸಾಧನವೊಂದು ಬೇಕಾಗಿದೆ. ದೇಶದ ನಿರ್ಧಾರಗಳಲ್ಲಿ ಭಾಗಿಯಾಗಬೇಕಾಗಿದೆ. ದೇಶದ ನಿರ್ಧಾರಗಳು ಈ ಕಂಪೆನಿಗಳ ಹಿತಾಸಕ್ತಿಗೆ ಪೂರಕವಾಗಿರುವಂತೆ ನೋಡಿಕೊಳ್ಳಬೇಕಾಗಿದೆ. ಈ ಕಾರಣಕ್ಕಾಗಿ ವಿದೇಶಿ ಪತ್ರಿಕೆಗಳನ್ನು ಪ್ರಕಟಿಸುವಂತೆ ಒತ್ತಡ ಹಿಂದೆಂದಿಗಿಂತಲೂ ಬಲವಾಗಿದೆ. ಭಾರತ ಸರ್ಕಾರ ಸಹ ಇದನ್ನು ಆಗಿಸಿಯೇ ಬಿಡಬೇಕು ಎಂದು ತೀರ್ಮಾನಿಸಿದಂತೆ ಜನರ ಮುಂದೆ ಒಳ್ಳೊಳ್ಳೆಯ ಪದಗಳನ್ನು ಆರಿಸಿ ವಿದೇಶಿ ಪತ್ರಿಕೆಗಳ ಪ್ರಶ್ನೆಯನ್ನು ಆಕರ್ಷಕವಾಗಿ ಮುಂದಿಡುತ್ತಿದೆ.

ಅಡಿಕೆ ಧಾರಣೆ ಕುಸಿದದ್ದು, ತೆಂಗಿಗೆ ನುಸಿಪೀಡೆ

ಬಂದದ್ದು, ಸಾರ್ವಜನಿಕ ಪಡಿತರ ಅಂಗಡಿಗಳಿಂದ ಬೇಕಾದ ದವಸಧಾನ್ಯವೇ ಮಾಯವಾದದ್ದು, ಬೀಡಿ ಹೆಂಗಸರು ಮನೆಗೆಲಸದವರಾಗಿ ಬದಲಾಗುತ್ತಿರುವುದು, ಮೀನುಗಾರರಿಗೆ ಭೀಕರ ಕ್ಷಾಮ ಎದುರಾಗಿರುವುದು, ಹತ್ತಿ, ತೊಗರಿ, ಗೋಧಿ, ಬತ್ತ ಬೆಳೆಯುವ ರೈತರು ಆತ್ಮಹತ್ಯೆಯ ದಾರಿ ತುಳಿದಿರುವುದಕ್ಕೂ ಜಾಗತೀಕರಣಕ್ಕೂ ಕಾಣಿಸುವ, ಕಾಣಿಸಲಾರದ ಎಳೆಗಳು ಇವೆ.

ವಿದೇಶಿ ಪತ್ರಿಕೆಗಳ ಪ್ರಕಟಣೆ ಇಂತಹ ಸಮಸ್ಯೆಗಳನ್ನು ಮಾಧ್ಯಮ ರಂಗಕ್ಕೆ ಆಹ್ವಾನಿಸಲಿದೆ. ನುಸಿಪೀಡೆ ತೆಂಗಿನ ದೇಹವನ್ನೇ ಕೊರೆದು ಹಾಕಿದಂತೆ ಸಮುದ್ರದ ಒಡಲಲ್ಲಿ ಮೀನನ್ನೇ ಬರಿದು ಮಾಡಿ ಕ್ಷಾಮ ಸೃಷ್ಟಿಸಿದಂತೆ ಮಾಧ್ಯಮ ಕ್ಷೇತ್ರದ ದೇಹವನ್ನೇ ಕೊರೆಯುವ ತಂತ್ರ ಸೃಷ್ಟಿಯಾಗಿದೆ.

ವಿದೇಶಿ ಪತ್ರಿಕೆಗಳ ಪ್ರಕಟಣೆ ಆರಂಭಿಸಬೇಕೆನ್ನುವವರು ಹಲವು ದಾರಿ ಮುಂದಿಡುತ್ತಿದ್ದಾರೆ : ವಿದೇಶಿಯರಿಗೆ ಹಣಹೂಡಿಕೆಗೆ ಅವಕಾಶ ನೀಡಿ, ಆಡಳಿತಕ್ಕಲ್ಲ, ಹಣ ಹೂಡಿಕೆಯಲ್ಲೂ ಅಷ್ಟೆ, ಅವರ ಹಣವೇ ಪ್ರಧಾನವಾಗದಂತೆ ನೋಡಿಕೊಳ್ಳಬೇಕಾದರೆ ಅವರ ಪತ್ರಿಕೆಗಳಿಗೆ ಸಂಪಾದಕೀಯ ಮಂಡಳಿಯಲ್ಲಿ ಭಾರತೀಯರು ಇರುವಂತೆ ಮಾಡಿ, ಯಾರು ಪತ್ರಿಕೆ ಪ್ರಕಟಣೆಗೆ ಅವಕಾಶ ಕೇಳುತ್ತಾರೋ ಎಲ್ಲರಿಗೂ ಕೊಡಬೇಕೆಂದೇನಿಲ್ಲ, ಹೀಗೆ ಯಾರಿಗೆ ಬೇಕೋ ಅವರಿಗೆ ಕೊಡಿ – ಜಾಗತೀಕರಣದ ಭರಾಟೆಯಲ್ಲಿ ಸರ್ಕಾರಗಳೇ ಅರ್ಥ ಕಳೆದುಕೊಳ್ಳುತ್ತಿರುವ ಪರಿಸ್ಥಿತಿ ಸೃಷ್ಟಿಯಾಗಿದೆ. ವಿದೇಶಿ ಸಾಲದ ಹೆಸರಲ್ಲಿ ಇಂದು ದೇಶದ ಬಗೆಗಿನ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಿರುವುದು ದೆಹಲಿಯಲ್ಲಲ್ಲ, ವಿಶ್ವ ವ್ಯಾಪಾರ ಸಂಘಟನೆಯ ಕಚೇರಿಯಲ್ಲಿ. ಜನರ ಆರೋಗ್ಯ ಕಾಪಾಡಲು ಇರುವ ಕಾರ್ಯಕ್ರಮಗಳನ್ನು ರದ್ದುಮಾಡುವ, ಬೆಂಬಲ ಬೆಲೆ ಸಬ್ಸಿಡಿ ಕಿತ್ತುಹಾಕುವ, ಪಡಿತರ ಅಂಗಡಿಯಲ್ಲಿ ಇರಬೇಕಾದದ್ದೇನು ಎಂಬ ನಿರ್ಧಾರದಲ್ಲಿ ಸರ್ಕಾರದ ಪಾತ್ರ ಎಷ್ಟು ಎಂಬುದು ಎಲ್ಲರಿಗೂ ಗೊತ್ತು. ಪ್ರತೀ ನಿರ್ಧಾರವನ್ನೂ ವಿದೇಶಿ ಸಾಲ ನೀಡುವ ಸಂಸ್ಥೆಗಳು ತೆಗೆದುಕೊಳ್ಳುತ್ತಿವೆ. ಈ ಕಾರಣಕ್ಕಾಗಿಯೇ ಕೋಟ್ಯಾಂತರ ಜನರು ಹಸಿವೆಯಿಂದ ತತ್ತರಿಸುತ್ತಿದ್ದರೂ ಆಹಾರ ಧಾನ್ಯಗಳನ್ನು ಸಮುದ್ರಕ್ಕೆ ಎಸೆಯಲಾಗುತ್ತಿದೆ. ಪರಿಸ್ಥಿತಿ ಹೀಗಿರುವಾಗ ಹಾಗೆ ಮಾಡಿ, ಹೀಗೆ ಮಾಡಿ ಎಂದು ವಿದೇಶಿ ಪತ್ರಿಕೆಗೆ ಸಂಬಂಧಿಸಿದಂತೆ ಉಪದೇಶ ನೀಡಲಾಗುತ್ತಿದೆ. ಇವು ಭಾರತದ ಬಾಗಿಲು ಒಮ್ಮೆ ತೆಗೆದರೆ ಸಾಕು ಎಂದು ಹೂಡಲಾಗಿರುವ ಬಾಣಗಳು ಮಾತ್ರ. ನಿರ್ಧಾರ






ತೆಗೆದುಕೊಳ್ಳಲಾಗದ ಸರ್ಕಾರದ ಸ್ಥಿತಿಯೇ ಭಾರತದಲ್ಲಿ ವಿದೇಶಿ ಪತ್ರಿಕೆಗಳ ಪ್ರಕಟಣೆಯ ವಿಷಯದಲ್ಲಿಯೂ ಮುಂದುವರಿದಿದೆ. ಹಾಗಾಗಿಯೇ ಸರ್ಕಾರಕ್ಕೂ ಭಾರತದ ಬಾಗಿಲು ತೆಗೆದುಬಿಡುವ ಉತ್ಸಾಹ. ವಿದೇಶಿ ಪತ್ರಿಕೆ ವಿಷಯದಲ್ಲಿ ಇಷ್ಟಾದರೂ ತಡವಾಗಿದ್ದರೆ ಅದಕ್ಕೆ ಭಾರತದಲ್ಲಿ ಮೂಡಿಬಂದಿರುವ ಪ್ರತಿರೋಧ ಮಾತ್ರ ಕಾರಣವೇ ಹೊರತು ಸರ್ಕಾರದ ನಿರ್ಧಾರ ಕೈಗೊಳ್ಳುವ ಸಾಮರ್ಥ್ಯವಲ್ಲ.

ವಿದೇಶಿ ಪತ್ರಿಕೆಯ ಪ್ರಕಟಣೆಗೆ ಅವಕಾಶ ನೀಡುವ ಪ್ರಶ್ನೆ ಕಾನೂನಿನ ಪ್ರಶ್ನೆಯಲ್ಲ. ಇದು ದೇಶದ ಹಿತಾಸಕ್ತಿಯ ಪ್ರಶ್ನೆ ಎಂಬುದನ್ನೇ ಮುಚ್ಚಿಡಲಾಗುತ್ತಿದೆ. ಭಾರತ ತನ್ನದೇ ಆದ ಒಂದು ಮಾಧ್ಯಮ ನೀತಿ ರೂಪಿಸಲು ವಿಫಲವಾಗಿದ್ದರೂ ಸಹ ವಿದೇಶಿ ಪತ್ರಿಕೆಯ ವಿಷಯದಲ್ಲಿ ಮಾತ್ರ ದೃಢ ನಿಲುವು ತಳೆದಿದೆ. ೧೯೫೫ರಲ್ಲಿ ವಿದೇಶಿ ಪತ್ರಿಕೆಗಳ ಪ್ರಕಟಣೆಯ ವಿಷಯದಲ್ಲಿ ಭಾರತದ ಬಾಗಿಲನ್ನು ಮುಚ್ಚಲಾಯಿತು. 'ದಿ ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ಭಾರತದಲ್ಲಿ ತನ್ನ ಅಂತರರಾಷ್ಟ್ರೀಯ ಆವೃತ್ತಿ ತರಲು ಅನುಮತಿ ಕೇಳಿದಾಗ ಈ ನಿರ್ಧಾರಕ್ಕೆ ಬರಲಾಯಿತು. ಈ ನಿರ್ಧಾರ ಆತುರದ ತೀರ್ಮಾನವಾಗಿರಲಿಲ್ಲ. ೩ ವರ್ಷಗಳ ಕಾಲ ಈ ಪ್ರಶ್ನೆಯನ್ನು ಸತತವಾಗಿ ಪರಿಶೀಲಿಸಲಾಗಿತ್ತು. ದೇಶದ ಹಿತಾಸಕ್ತಿಯ ರಕ್ಷಣೆ ಈ ನಿರ್ಧಾರದ ಹಿಂದಿತ್ತು. ಅದು ಒಂದು ಸಾಮ್ರಾಜ್ಯದ ಹಿಡಿತದಿಂದ ಸತತ ಹೋರಾಟ ನಡೆಸಿ ಹೊರಬಂದ ಕಾಲ. ಇದು ಮತ್ತೆ ಸಾಮ್ರಾಜ್ಯಶಾಹಿ ಹಿಡಿತಕ್ಕೆ ತಲೆಕೊಡುತ್ತಿರುವ ಕಾಲ. ಈ ವ್ಯತ್ಯಾಸವೇ ವಿದೇಶಿ ಪತ್ರಿಕೆಗೆ ಅವಕಾಶ ನೀಡುವಂತೆ ಮನ ಒಲಿಸುತ್ತಿದೆ.

ದೇಶದ ಹಿತಾಸಕ್ತಿ ರಕ್ಷಣೆ ಮಾಧ್ಯಮದ ಜವಾಬ್ದಾರಿ ಹೌದೇ ಅಲ್ಲವೇ ? ಎಂಬುದರ ಬಗ್ಗೆ ಜಗತ್ತಿನಾದ್ಯಂತ ಚರ್ಚೆ ನಡೆಯುತ್ತಲೇ ಇದೆ. ಈ ಪ್ರಶ್ನೆಯನ್ನು ಮುಂದಿಟ್ಟುಕೊಂಡೇ ವಿಶ್ವಸಂಸ್ಥೆ ಇದಕ್ಕೆ ಉತ್ತರ ಹುಡುಕಲು ಬಯಸಿತ್ತು. ಖ್ಯಾತ ನೊಬೆಲ್ ಪ್ರಶಸ್ತಿ ವಿಜೇತ ಸಾಹಿತಿ ಸೀನ್ ಮ್ಯಾಕ್‌ಬ್ರೈಡ್ ಜಗತ್ತಿನೆಲ್ಲೆಡೆ ಸುತ್ತಿ, ವಿವಾದಗಳನ್ನು ಆಲಿಸಿ, ಮನವಿಗಳನ್ನು ಸ್ವೀಕರಿಸಿ, ಚರ್ಚೆಗಳಲ್ಲಿ ಭಾಗವಹಿಸಿ ನಂತರ ಮಂಡಿಸಿದ ವರದಿಯಲ್ಲಿ ಸ್ಪಷ್ಟ ಅಭಿಪ್ರಾಯ ಮಂಡಿಸಿದ್ದರು. ಮುಂದುವರಿದ ದೇಶಗಳಲ್ಲಿ ಮಾಧ್ಯಮ ಮತ್ತೊಂದು ಸರಕು ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾಧ್ಯಮ ದೇಶ ಕಟ್ಟಲು ಇರುವ ಊರುಗೋಲು. ಭಾರತದಲ್ಲಿ ದೇಶ ಕಟ್ಟುವ ಕ್ರಿಯೆ ಇನ್ನೂ ಪೂರ್ಣಗೊಂಡಿಲ್ಲ. ಬೆಳಕಿಗಾಗಿ ತಹತಹಿಸುತ್ತಿರುವ ದೇಶ ಇದು. ಕಟ್ಟ ಕಡೆಯ ಮನುಷ್ಯನಿಗೆ ನೆಮ್ಮದಿಯ ಬದುಕು ಸಿಕ್ಕಾಗ ಮಾತ್ರ ದೇಶವನ್ನು ಕಟ್ಟುವ ಕ್ರಿಯೆ ಸಂಪೂರ್ಣವಾಗಿದೆ ಎಂದು ಅರ್ಥ. ಭಾರತದಲ್ಲಿ ಮಾಧ್ಯಮಗಳು ಈ ಜವಾಬ್ದಾರಿಯನ್ನು ಹೊತ್ತುಕೊಂಡಿವೆ. ಆ ವೇಳೆಗೆ ಜಾಗತೀಕರಣದ ಗಾಳಿ ಬಲವಾಗಿ ಬೀಸಿದೆ. ಮಾಧ್ಯಮ ಎಂದರೆ ಏನು ಎಂದು ಇಷ್ಟು ದಿನ ನಂಬಲಾಗಿತ್ತೋ ಆ ಬೇರುಗಳನ್ನೇ ಸಡಿಲಿಸುತ್ತಿದೆ. ಮಾಧ್ಯಮ ಎಂಬುದು ಮತ್ತೊಂದು ಸರಕು ಎಂಬ ನಂಬಿಕೆಯನ್ನು ಪ್ರತಿಷ್ಠಾಪಿಸುತ್ತಿವೆ. ಭಾರತದ ಮಾಧ್ಯಮ ರಂಗದಲ್ಲಿಯೂ ಈ ಜಾಗತೀಕರಣದ ಪ್ರಭಾವ ಸ್ಪಷ್ಟವಾಗಿಯೇ ಕಾಣಿಸಿದೆ. ಅನೇಕ ಪತ್ರಿಕೆಗಳು ಮಾಧ್ಯಮ ಎಂಬುದು ಲಾಭ ತರುವ ಇನ್ನೊಂದು ಉದ್ಯಮ ಎಂಬುದನ್ನು ಮಾತ್ರ ನಂಬಿದ್ದಾರೆ. ಈ

ಬದಲಾವಣೆಯೇ ಭಾರತದ ಮಾಧ್ಯಮ ಕ್ಷೇತ್ರದಲ್ಲಿ ಸಾಕಷ್ಟು ಬಿರುಗಾಳಿ ಎಬ್ಬಿಸಿದೆ. ಈ ಮಧ್ಯೆ ವಿದೇಶಿ ಪತ್ರಿಕೆಗಳಿಗೂ ಅವಕಾಶ ನೀಡುವ ಪ್ರಶ್ನೆ ಮತ್ತೆ ಪ್ರಸ್ತಾಪಿಸಲಾಗಿದೆ.

ಅವಕಾಶ ನೀಡಬಾರದು ಏಕೆ ? ಎಂದು ಪ್ರಶ್ನಿಸುವವರು ಹಲವು ಪ್ರಶ್ನೆಗಳನ್ನು ಮುಂದಿಡುತ್ತಾರೆ. ಸ್ಪರ್ಧೆ ಇದ್ದಷ್ಟೂ ಉತ್ತಮ ಪತ್ರಿಕೆ ರೂಪಿಸಲು ಸಾಧ್ಯ, ವಿದೇಶಿ ಬಹುರಾಷ್ಟ್ರೀಯ ಕಂಪೆನಿಗಳು ಇಂಗ್ಲಿಷ್ ಪತ್ರಿಕೋದ್ಯಮಕ್ಕೆ ನುಗ್ಗುತ್ತಾರೆಯೇ ಹೊರತು ಭಾರತದ ಇತರ ಭಾಷೆಗಲ್ಲ ಅದರಲ್ಲಿ ಅವರಿಗೇನು ಆಸಕ್ತಿ, ವಿದೇಶಿ ಪತ್ರಿಕೆ ಬಂದರೂ ಸಹ ಕೆಲಸ ಮಾಡಲಿಕ್ಕೆ ಭಾರತೀಯರೇ ಬೇಕಲ್ಲ? ವಿದೇಶಿ ಪತ್ರಿಕೆ ಬಂದರೆ ವಿದೇಶಿ ಸುದ್ದಿ ಕೊಡಲಿಕ್ಕಾಗುತ್ತದೆಯೇ ನಮ್ಮದೇ ಸುದ್ದಿ ಬರುತ್ತದೆ, ಉದ್ಯೋಗ ಅವಕಾಶ ದಿಢೀರ್ ಹೆಚ್ಚುತ್ತದೆ.

ಈ ಪ್ರಶ್ನೆಗಳನ್ನು ಮುಂದಿಡುವವರು ಜಾಗತಿಕ ಮಾಧ್ಯಮ ರಂಗದಲ್ಲಿ ಆಗಿರುವ, ಆಗುತ್ತಿರುವ ಬದಲಾವಣೆಗೆ ಕಣ್ಣು ಮುಚ್ಚಿದ್ದಾರೆ ಎಂದು ಮಾತ್ರ ಅರ್ಥ. ದೊಡ್ಡ ಹುದ್ದೆ, ದೊಡ್ಡ ಸಂಬಳದ ಮೇಲೆ ಕಣ್ಣಿಟ್ಟು ಮಾತನಾಡುವ ಪತ್ರಕರ್ತರು 'ಮೊದಲವರು ಯಹೂದಿಗಳನ್ನು ಹುಡುಕಿ ಬಂದರು. ನಾನು ಬಾಯಿ ಬಿಡಲಿಲ್ಲ ಏಕೆಂದರೆ ನಾನು ಯಹೂದಿಯಾಗಿರಲಿಲ್ಲ...' ಎಂಬ ಮಾತುಗಳನ್ನು ನೆನಪಿಗೆ ತರುತ್ತಾರೆ.

'ನಾನು ತಿಂಡಿಗೆ ಪತ್ರಿಕೆಗಳನ್ನೂ, ಊಟಕ್ಕೆ ಸ್ಯಾಟಲೈಟ್ ಟಿವಿಯನ್ನೂ ತಿನ್ನುತ್ತೇನೆ' ಎಂದು ಬಹಿರಂಗವಾಗಿ ಘೋಷಿಸಿರುವ ಮಾಧ್ಯಮ ಸಾಮ್ರಾಟ ರೂಪರ್ಟ್ ಮುರ್ಡೋಕ್‌ಗೆ ಅಂತಹ ರಾಬರ್ಟ್ ಮ್ಯಾಕ್ಸ್‌ವೆಲ್, ಜೀನ್ ಲುಕ್‌ಲಗಾರ್ಡಿ, ಟೆಡ್ ಟರ್ನರ್ ಅವರಿಗೆ ಆಸ್ಟ್ರೇಲಿಯಾ ಆಗಲೀ, ಅಮೆರಿಕ ಆಗಲೀ, ಇಂಗ್ಲೆಂಡ್ ಆಗಲೀ, ಆಫ್ರಿಕಾ , ಭಾರತ ಆಗಲೀ ಎಲ್ಲವೂ ಒಂದೇ. ಊಟ ತಿಂಡಿಗೆ ಯಾವ ದೇಶದ ಯಾವ ಭಾಷೆಯ ಪತ್ರಿಕೆ, ಟಿವಿ ಆದರೂ ಆದೀತು.

ಸ್ಪರ್ಧೆ ಹೆಚ್ಚಿದಂತೆ ಉತ್ತಮ ಗುಣಮಟ್ಟದ ಪತ್ರಿಕೆ ಬರುತ್ತದೆ ಎಂಬುದು ಎಷ್ಟು ಸುಳ್ಳು ಎಂಬುದನ್ನು ಬ್ರಿಟನ್ ಪತ್ರಿಕೋದ್ಯಮ ಈಗಾಗಲೇ ಮನವರಿಕೆ ಮಾಡಿಕೊಟ್ಟಿದೆ. ಬಹುರಾಷ್ಟ್ರೀಯ ಬಹು ಉದ್ಯಮದ ಕಂಪೆನಿಗಳ ಹಣಬಲ ಯಾವುದೇ ದೇಶದ ಬಲಾಢ್ಯ ಮಾಧ್ಯಮವನ್ನೂ ಸಲೀಸಾಗಿ ಕೊಚ್ಚಿ ಹಾಕುತ್ತದೆ. ಇದಕ್ಕೆ ಬೆಲೆ ಇಳಿಕೆ, ಉಚಿತ ಪತ್ರಿಕೆ, ಬಣ್ಣ ಮುದ್ರಣ, ದಿನಕ್ಕೊಂದು ಪುರವಣಿ, ಒಂದಕ್ಕೆ ಇನ್ನೊಂದು ಉಚಿತ ಎಂಬೆಲ್ಲಾ ತಂತ್ರಗಳು ಉಂಟು. ಸ್ಪರ್ಧೆಯಲ್ಲಿ ಉಳಿಯುವುದು ಹಣಬಲ ಉಳ್ಳ ಸಂಸ್ಥೆಗಳು ಮಾತ್ರ. ಜಯ ಬಹುರಾಷ್ಟ್ರೀಯ ಕಂಪೆನಿಗಳದ್ದೇ. ಬಲಾಢ್ಯ ಪತ್ರಿಕೆಗಳ ತವರು ಎನಿಸಿದ್ದ ಬ್ರಿಟನ್‌ನಲ್ಲಿ ಪತ್ರಿಕೆಗಳು ಧೂಳಿಪಟವಾಗಿ ಹೋಗಿವೆ.

ಸ್ಪರ್ಧೆಗೆ ಸಮತಟ್ಟಾದ ವೇದಿಕೆ ನಿರ್ಮಿಸುವುದು ಅಗತ್ಯ. ಆದರೆ ಗ್ಯಾಟ್ ರೂವಾರಿಗಳು ನಿರ್ಮಿಸಿರುವ ವೇದಿಕೆ ಬಹುರಾಷ್ಟ್ರೀಯ ಕಂಪೆನಿಗಳಿಗೆ ಅಶ್ವಮೇಧಯಾಗಕ್ಕೆ ಅವಕಾಶ ಮಾಡಿಕೊಟ್ಟಿದೆ.






ವಿದೇಶಿ ಕಂಪೆನಿಗಳು ಇಂಗ್ಲಿಷ್ ಪತ್ರಿಕೋದ್ಯಮಕ್ಕೆ ಮಾತ್ರ ನುಗ್ಗುತ್ತಾರೆ ಎಂಬ ನಂಬಿಕೆ ಇರುವವರಿಗೆ ಜಗತ್ತಿನಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಜನ ಬಳಸುವ ಹೀಬ್ರೂ ಭಾಷೆಯಲ್ಲಿಯೂ ರೂಪರ್ಟ್ ಮುರ್ಡೋಕ್ ದಿನಪತ್ರಿಕೆ ಪ್ರಕಟಿಸುತ್ತಾರೆ ಎಂಬುದು ಮರೆತಿದೆ. ಹಂಗೇರಿ, ಹಾಂಕಾಂಗ್, ಪಪುವಾ, ಫಿಜಿ, ನ್ಯೂ ಗಿನಿ ಮುಂತಾದೆಡೆ ಎಲ್ಲಾ ಭಾಷೆಗಳಲ್ಲಿ ಪತ್ರಿಕೆಗಳಿವೆ. ಇದೇ ಮುರ್ಡೋಕ್ ಒಡೆತನದ ಸ್ಟಾರ್ ಟಿವಿ ಇಂಗ್ಲಿಷ್ ಚಾನಲ್ ಅಲ್ಲ ಹಿಂದಿಯ ಮೇಲೆ ಸವಾರಿ ಮಾಡಿದೆ, ಬಂಗಾಳಿ, ತಮಿಳು ಭಾಷೆಗಳಲ್ಲಿ ಚಾನಲ್ ಹೊಂದಿದೆ. ಮಾರುಕಟ್ಟೆ ಆಕ್ರಮಿಸಲು ಬರುವ ಕಂಪೆನಿಗಳಿಗೆ ಇಂಗ್ಲಿಷ್ ಮಾರುಕಟ್ಟೆ, ಕನ್ನಡ ಮಾರುಕಟ್ಟೆ, ಹಿಂದಿ ಮಾರುಕಟ್ಟೆ ಎಂಬ ಭೇದವೇ ಇರುವುದಿಲ್ಲ. ಎದುರಿಗೆ ಕಾಣಿಸುವುದು ಮಾರುಕಟ್ಟೆ ಮಾತ್ರ. ಕೊನೆಯ ಲಾಭ ಇರುವವರೆಗೆ ಅದನ್ನು ಬಳಸುವುದು ಮಾತ್ರ.

ವಿದೇಶಿ ಪತ್ರಿಕೆ ಬಂದರೆ ವಿದೇಶಿ ಸುದ್ದಿ ಬರುತ್ತದೆ ಎಂದು ಯಾರೂ ನಿರೀಕ್ಷಿಸಿಲ್ಲ. ಈ ನೆಲದ ಸುದ್ದಿಗಳೇ ಬರುತ್ತವೆ. ವಿದೇಶಿ ಪತ್ರಿಕೆಗಳ ಒಡೆತನ ಹೊಂದಿರುವ ಬಹುರಾಷ್ಟ್ರೀಯ ಸಂಸ್ಥೆಗಳು ದೇಶದ ಹಿತಾಸಕ್ತಿಗೆ ಕೊಡಲಿಪೆಟ್ಟು ನೀಡುತ್ತವೆ. ವೈವಿಧ್ಯಮಯ ಸಂಸ್ಕೃತಿಯನ್ನು ನಾಶಪಡಿಸುತ್ತವೆ. ಪತ್ರಿಕೆ ಎಂಬುದು ಮಾರುಕಟ್ಟೆಯ ವಿಸ್ತರಣೆಯಾಗಿರುತ್ತದೆ. ಕಾಳಜಿಯ ಸ್ಥಾನದಲ್ಲಿ ಮನರಂಜನೆ ಮಾತ್ರ ಇರುತ್ತದೆ. ಈ ಆಸಕ್ತಿಗಳ ಬದಲಾವಣೆಯೇ ದೇಶ ಕಟ್ಟುವುದು ಇನ್ನೂ ಮುಗಿದಿಲ್ಲದ ದೇಶಕ್ಕೆ ಮಾರಕ. ಆಯ್ಕೆಯ ಅವಕಾಶವನ್ನು ಇಲ್ಲವಾಗಿಸುವುದರಿಂದ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಕೊನೆಯ ಮೊಳೆ ಜಡಿದಂತೆ. ವಿದೇಶಿ ಪತ್ರಿಕೆ ಎಂದಾಕ್ಷಣ ವಿದೇಶಿ ಪತ್ರಕರ್ತರು, ವಿದೇಶಿ ಸುದ್ದಿ, ಎಂದಲ್ಲ. ಈ ಪತ್ರಿಕೆ ಮಾತನಾಡುವುದು ನಮ್ಮ ಭಾಷೆಯನ್ನೇ, ನಮ್ಮವರ ಮೂಲಕವೇ ಕಾರ್ಯ ಸಾಧಿಸುತ್ತದೆ.

ಗ್ರಾಮೀಣ ಕೃಪಾಂಕದ ಮೂಲಕ ಅವಕಾಶದ ಏಣಿ ಏರುವ, ಮೀಸಲಾತಿಯ ಮೂಲಕ ಸಾಮಾಜಿಕ ನ್ಯಾಯ ದಕ್ಕಿಸಿಕೊಳ್ಳುವ, ಒಂದು ರಸ್ತೆ ಕಲ್ಪಿಸುವುದರ ಮೂಲಕ ಆರೋಗ್ಯವಂತ ಹಳ್ಳಿ ಸೃಷ್ಟಿಸಿಕೊಳ್ಳುವ ಜನತೆ ಈ ವಿದೇಶಿ ಪತ್ರಿಕೆಗಳ ದೃಷ್ಟಿಯಲ್ಲಿ ಜನತೆಯಲ್ಲ. ಏಕೆಂದರೆ ಇವರು ಕೊಳ್ಳುವ ಸಾಮರ್ಥ್ಯ ಇರುವ ಜನತೆಯಲ್ಲ. ಹೀಗಾಗಿ ವಿದೇಶಿ ಪತ್ರಿಕೆ ಕೊಳ್ಳುವವರ ಬೇಟೆಗೆ ನಿಲ್ಲುತ್ತದೆ. ಕೊಳ್ಳಲಾಗದವರು ದೇಶದ ಭೂಪಟದಲ್ಲಿ ಚುಕ್ಕೆಗಳಾಗಿಯೂ ಇರುವುದಿಲ್ಲ.

**ಮೋಹನ್ ಕುಡ್ಲ**
ಏಕತನ್, ನಂ. ೩-೬೫-೯೨, ೧ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಲೋಹಿತ್ ನಗರ,
ಮಂಗಳೂರು-೫೭೫೦೦೬



# 'ಭಯೋತ್ಪಾದನೆ'ಯ ಎರಡು ನಿರೂಪಣೆಗಳು

■ ಜಿ. ರಾಜಶೇಖರ

**ಸೆ**ಪ್ಟೆಂಬರ್ ೧೧ರಂದು ನ್ಯೂಯಾರ್ಕ್ ಮತ್ತು ವಾಷಿಂಗ್ಟನ್ ನಗರಗಳ ಮೇಲೆ ಧಾಳಿ ನಡೆದ ನಂತರ, ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್, ಭಯೋತ್ಪಾದನೆಯ ವಿರುದ್ಧ ಯುದ್ಧದಲ್ಲಿ ಯಾರು ಅಮೆರಿಕದ ಜೊತೆ ಸಹಕರಿಸುವುದಿಲ್ಲವೋ ಅವರು ಅಮೆರಿಕದ ಎದುರಾಳಿಗಳು ಮಾತ್ರವಲ್ಲ, ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವಗಳ ವೈರಿಗಳು ಕೂಡ ಎಂದು ಸಾರಿದರು. ತಮ್ಮ ಸರಕಾರ ಭಯೋತ್ಪಾದನೆಯನ್ನು ತಡೆಗಟ್ಟುವುದಕ್ಕೆ ಜಾರಿಗೊಳಿಸುತ್ತಿರುವ ಶಾಸನವನ್ನು ಯಾರು ವಿರೋಧಿಸುತ್ತಾರೋ, ಅವರು ಭಯೋತ್ಪಾದಕರ ಹಿತೈಷಿಗಳು ಎಂದು ಕೇಂದ್ರದ ಗೃಹಮಂತ್ರಿಗಳು ಘೋಷಿಸಿದ್ದಾರೆ. ಅಮೆರಿಕದ ಅಧ್ಯಕ್ಷ ಮತ್ತು ಭಾರತದ ಗೃಹಮಂತ್ರಿ ಇಬ್ಬರ ಮನೋಧರ್ಮವೂ ಒಂದೇ; ತಾವು ಸತ್ಯ, ನ್ಯಾಯ, ಸ್ವಾತಂತ್ರ್ಯ, ಪ್ರಜಾಸತ್ತೆಗಳನ್ನು ಎತ್ತಿಹಿಡಿಯುವವರು; ತಮ್ಮ ಅಧಿಕಾರವನ್ನು ಪ್ರಶ್ನಿಸುವವರೆಲ್ಲ ಈ ಮೌಲ್ಯಗಳನ್ನು ಸಹಿಸದ ಭಯೋತ್ಪಾದಕರ ಪರವಾಗಿರುವವರು. ಭಯೋತ್ಪಾದನೆ ಎಂದರೆ ಏನು ? ನೋಮ್ ಚೋಮ್‌ಸ್ಕಿ ಭಯೋತ್ಪಾದನೆಯನ್ನು ಎರಡು ರೀತಿಗಳಲ್ಲಿ ನಿರೂಪಿಸಬಹುದು ಎಂದು ಅಭಿಪ್ರಾಯಪಡುತ್ತಾರೆ. ಮೊದಲನೆಯದು, ಕಾನೂನಿಗೆ ಅನುಗುಣವಾದ ನಿರೂಪಣೆ, -"ಹಿಂಸೆ ಅಥವಾ ಹಿಂಸೆಯ ಬೆದರಿಕೆ ಒಡ್ಡಿ, ಬಲಾತ್ಕಾರದಲ್ಲಿ ಕೆಲವು ವ್ಯಕ್ತಿಗಳು ಅಥವಾ ಸಂಘಟನೆಗಳು ತಮ್ಮ ರಾಜಕೀಯ, ಧಾರ್ಮಿಕ ಅಥವಾ ತಾತ್ವಿಕ ಉದ್ದೇಶಗಳನ್ನು ಈಡೇರಿಸಿಕೊಳ್ಳುವುದು." ಭಯೋತ್ಪಾದನೆಯ ಇನ್ನೊಂದು ನಿರೂಪಣೆ, ಸೈದ್ಧಾಂತಿಕ ವಾದದ್ದು. ಜಗತ್ತಿನ ಎಲ್ಲ ದೇಶಗಳ ಎಲ್ಲ ಸರಕಾರಗಳೂ ತಮ್ಮ ಅಧಿಕಾರವನ್ನು ಪ್ರಶ್ನಿಸುವವರನ್ನು ಭಯೋತ್ಪಾದಕರು ಎಂದು ಈಗ ಸಾರುತ್ತಿವೆ. ಭಯೋತ್ಪಾದನೆಗೆ ಒಂದು ಕಾರಣ ಪರಂಪರೆ ಇರಬಹುದು ಎಂಬುದನ್ನು ಈ ಸೈದ್ಧಾಂತಿಕ ನಿರೂಪಣೆ ಗಮನಿಸುವುದಿಲ್ಲ. ತನ್ನ ಆಪಾದನೆಗಳಿಗೆ ನ್ಯಾಯಾಲಯಕ್ಕೆ ಸಮ್ಮತವಾಗುವ ಸಾಕ್ಷಿ ಆಧಾರಗಳನ್ನು ಒದಗಿಸುವ ಜರೂರು ಕೂಡ ಈ ಸರಕಾರೀ ನಿರೂಪಣೆಗೆ ಇಲ್ಲ. ವಾಸ್ತವದಲ್ಲಿ ಆಧುನಿಕ ಸರಕಾರಗಳೇ ಅತಿದೊಡ್ಡ ಭಯೋತ್ಪಾದಕ ಸಂಸ್ಥೆಗಳು. ಬಲಿಷ್ಠ ದೇಶಗಳ ಸರಕಾರದ ವಶದಲ್ಲಿರುವ ಸೈನ್ಯ, ಶಸ್ತಾಸ್ತ್ರ, ಪೊಲೀಸು ವ್ಯವಸ್ಥೆ ಎಲ್ಲವೂ ಬಲಿಷ್ಠವಾಗಿರುವುದರಿಂದ ಅವೇ ಜಗತ್ತಿನ ಅತಿ ದೊಡ್ಡ ಭಯೋತ್ಪಾದಕ ಸಂಸ್ಥೆಗಳು. ಈ ದೇಶಗಳಲ್ಲಿ ಕೆಲವಂತೂ ತಮ್ಮ ಪ್ರಜೆಗಳ ಮೇಲೆ ಮಾತ್ರವಲ್ಲ, ಹೊರದೇಶಗಳ ಮೇಲೂ ದಬ್ಬಾಳಿಕೆ ನಡೆಸುವಂತಹವು. ಯುರೋಪ್ ಮತ್ತು ಅಮೆರಿಕಗಳ ಸಾಮ್ರಾಜ್ಯಶಾಹಿ ವ್ಯವಸ್ಥೆ ಜನರಿಗೆ ಪೆಪರ್ ಮಿಂಟ್ ಹಂಚಿ, ತಮ್ಮ ಆಳ್ವಿಕೆ ನಡೆಸುತ್ತಿಲ್ಲ. ತಮ್ಮ ಮಾತು ಮೀರಿ ನಡೆದರೆ ಬಲಪ್ರಯೋಗದ ಬೆದರಿಕೆಯಿಂದಲೇ ಈ ಆಳ್ವಿಕೆ ಮುಂದುವರಿದಿದೆ. ಬಡದೇಶಗಳ ಸರಕಾರಗಳು ಸೈನ್ಯ, ಶಸ್ತಾಸ್ತ್ರ ಸಂಗ್ರಹ, ಪೊಲೀಸು ವ್ಯವಸ್ಥೆ ಮುಂತಾದ್ದಕ್ಕೆ ಇಂದು ತಮ್ಮ ಶಕ್ತಿ ಮೀರಿ ವೆಚ್ಚ ಮಾಡುತ್ತಿವೆ. ತಮ್ಮ ದೇಶಗಳ ಬಡವರನ್ನು, ಅಲ್ಪಸಂಖ್ಯಾತರನ್ನು ಮತ್ತು ಬುಡಕಟ್ಟು ಜನರನ್ನು ಹಿಡಿತದಲ್ಲಿಟ್ಟುಕೊಳ್ಳಲು ಈ ರೀತಿ ವೆಚ್ಚ ಅನಿವಾರ್ಯವಾಗಿದೆ. ಆಶೀಶ್ ನಂದಿ ಗುರುತಿಸುವಂತೆ ೨೦ನೇ ಶತಮಾನದಲ್ಲಿ ಖಾಸಗೀ ವ್ಯಕ್ತಿಗಳು ಅಥವಾ ಸಂಘಟನೆಗಳ ಭಯೋತ್ಪಾದನೆಗಿಂತ, ಪ್ರಭುತ್ವದ ಭಯೋತ್ಪಾದನೆ ಹಲವು ಪಟ್ಟು ಹೆಚ್ಚಾಗಿದೆ. ಅದೂ ಅಲ್ಲದೆ ಖಾಸಗಿ ಸಂಘಟನೆಗಳ ಭಯೋತ್ಪಾದನೆ ಕೂಡ, ಪ್ರಭುತ್ವದ ರಾಜಕೀಯದ ಜೊತೆ ನೇರ ಸಂಬಂಧವನ್ನು ಪಡೆದಿದೆ. ಉದಾಹರಣೆಗೆ, ಶ್ರೀಲಂಕದಲ್ಲಿ ಎಲ್.ಟಿ.ಟಿ.ಇ.ಯ ಭಯೋತ್ಪಾದನೆಗೆ ಎರಡು ಸರಕಾರಗಳ ಪ್ರಚೋದನೆ ಇದೆ. ೧) ಶ್ರೀಲಂಕ ಸರ್ಕಾರ ತನ್ನ ಭಾರತೀಯ ಸಂಜಾತ ಪ್ರಜೆಗಳನ್ನು ಹೀನಾಯವಾಗಿ ನೋಡಿಕೊಂಡದ್ದು. ೨) ಭಾರತ ಸರ್ಕಾರ ಮತ್ತು ಇಲ್ಲಿನ ಕೆಲವು ರಾಜಕೀಯ ಪಕ್ಷಗಳು ಎಲ್.ಟಿ.ಟಿ.ಇ.ಗೆ ಗುಪ್ತವಾಗಿ ಎಲ್ಲ ಬಗೆಯ ಸಹಾಯ ನೀಡಿದ್ದು. ಸ್ವಲ್ಪಮಟ್ಟಿಗೆ ಎಲ್.ಟಿ.ಟಿ.ಇ. ಶ್ರೀಲಂಕದ ತಮಿಳರ ಸಕಾರಣವಾದ ಆಕ್ರೋಶದ ದನಿಯಾಗಿರುವುದು ನಿಜ. ಆದರೆ ಎಲ್.ಟಿ.ಟಿ.ಇ. ಅಲ್ಲದೆ ತಮಿಳರ ಇತರ ಸಂಘಟನೆಗಳೂ ಇದ್ದವು. ಪ್ರಜಾಸತ್ತಾತ್ಮಕ ಹೋರಾಟದಲ್ಲಿ ತೊಡಗಿದ್ದ ಈ ಎಲ್ಲ ಸಂಘಟನೆಗಳ ನಾಯಕರನ್ನೂ ಎಲ್.ಟಿ.ಟಿ.ಇ. ಕೊಲೆ ಮಾಡಿದೆ. ಒಟ್ಟಿನಲ್ಲಿ ಎಲ್.ಟಿ.ಟಿ.ಇ. ಭಯೋತ್ಪಾದನೆ, ಈ ಉಪಖಂಡದ ಎರಡು ಜನವಿರೋಧಿ ಸರಕಾರಗಳ ಧೋರಣೆಗಳ ಜೊತೆ ನಿಕಟವಾಗಿ ಹೆಣೆದುಕೊಂಡಿದೆ. ಇದನ್ನು ಮರೆಮಾಚಿ ಎಲ್.ಟಿ.ಟಿ.ಇ.ಯ ಕರಾಳ ಕೃತ್ಯಗಳನ್ನು ಮಾತ್ರ ಖಂಡಿಸುವುದು ಕೇವಲ ಆತ್ಮವಂಚನೆ. ಎಲ್.ಟಿ.ಟಿ.ಇ. ಅಥವಾ ಇನ್ನು ಯಾವುದೇ ಭಯೋತ್ಪಾದಕ ಸಂಘಟನೆ, ಇದ್ದಕ್ಕಿದ್ದಂತೆ ಆಕಾಶದಿಂದ ಉದುರುವುದಿಲ್ಲ.

> ಕಳೆದ ೫೦ ವರ್ಷಗಳ ಜಗತ್ತಿನ ಚರಿತ್ರೆಯ ಅತಿ ದೊಡ್ಡ ಸತ್ಯವೆಂದರೆ, ಜಗತ್ತಿನ ಹಿರಿಯಣ್ಣ ಎನ್ನಿಸಿಕೊಂಡಿರುವ ಅಮೆರಿಕ ನವಸಾಮ್ರಾಜ್ಯಶಾಹಿ ಶಕ್ತಿಯಾಗಿ ರೂಪುಗೊಂಡು, ಜಾಗತಿಕ ಸಂಪನ್ಮೂಲ ಮತ್ತು ಮಾರುಕಟ್ಟೆಗಳನ್ನು ತನ್ನ ಕೈವಶ ಮಾಡಿಕೊಂಡಿರುವುದು. ತನ್ನ ಅಗಾಧ ಮಿಲಿಟರಿ ಬಲವನ್ನು ಬಳಸಿಕೊಂಡು ಜಗತ್ತಿನಾದ್ಯಂತ ಅಮೆರಿಕ ನಡೆಸುತ್ತಿರುವ ಭಯೋತ್ಪಾದಕ ರಾಜಕೀಯದಿಂದ ಮಾತ್ರ, ಇದು ಸಾಧ್ಯವಾಗಿದೆ.

ಯಾವುದು ಭಯೋತ್ಪಾದನೆ ? ಯಾವುದು ಅಲ್ಲ? ೧೯೮೪ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರ ಕೊಲೆಯ ಮಾರನೆ ದಿನ ದೆಹಲಿಯಲ್ಲಿ ೩೦೦೦ ಜನರನ್ನು ಕಾಂಗ್ರೆಸ್ ಪಕ್ಷದ ಪುಡಾರಿಗಳೇ ಕೊಲೆ ಮಾಡಿಸಿದರು. ಇದು ಭಯೋತ್ಪಾದನೆ ಅಲ್ಲವೋ ? ಎಲ್. ಕೆ. ಅದ್ವಾನಿ ಸಾರಥ್ಯ ವಹಿಸಿದ ರಥಯಾತ್ರೆ ಮತ್ತು ಇಡೀ ರಾಮ ಜನ್ಮಭೂಮಿ ಚಳುವಳಿ, ಭಯೋತ್ಪಾದಕವಲ್ಲದೆ ಮತ್ತಿನ್ನೇನು ? ಕಡೆಯ ಪಕ್ಷ ಈ ದೇಶದ ಮುಸ್ಲಿಮ್ ಪ್ರಜೆಗಳಿಗಂತೂ, ಆ ಚಳುವಳಿ ಈಗಲೂ ಒಂದು ಭೀಕರ ದುಃಸ್ವಪ್ನವಾಗಿ ಕಾಡುತ್ತಿದೆ. ರಾಮ, ಕೃಷ್ಣ, ಶಿವ ಎಂಬ ಹೆಸರುಗಳನ್ನು ಕೇಳಿದರೇ ಮುಸ್ಲಿಮರು ಭಯದಲ್ಲಿ ನಡುಗುವಂತೆ ಮಾಡಿದ ಈ ಚಳುವಳಿಯ ನಾಯಕರೇ ಇಂದು ಭಯೋತ್ಪಾದನೆಯ ವಿರುದ್ಧ ಯುದ್ಧ ಸಾರಿದ್ದಾರೆ !

ಮತೀಯ ದ್ವೇಷ ಮತ್ತು ಭಯೋತ್ಪಾದನೆಗಳನ್ನು ಅಧಿಕಾರಕ್ಕೆ ಏರುವ ಸಾಧನಗಳನ್ನಾಗಿ ಬಳಸಿಕೊಂಡದ್ದು ಬಿ.ಜೆ.ಪಿ. ಮಾತ್ರ ಅಲ್ಲ. ೧೯೯೨ ಡಿಸೆಂಬರ್ ಮತ್ತು ೧೯೯೩ ಜನವರಿ ತಿಂಗಳುಗಳಲ್ಲಿ ಮುಂಬಯಿಯಲ್ಲಿ ನಡೆದ ಭೀಕರ ಮತೀಯ ದೊಂಬಿಗಳಲ್ಲಿ ಬಿ.ಜೆ.ಪಿ.ಯ ಜೊತೆ ಶಿವಸೇನೆ ಕೂಡ ಶಾಮೀಲಾಗಿತ್ತು. ಆದರೆ ಕೇಂದ್ರ ಮತ್ತು ರಾಜ್ಯದ ಕಾಂಗ್ರೆಸ್ ಸರಕಾರ ಈ ಪಕ್ಷದ ಕ್ರಿಮಿನಲ್‌ಗಳ ವಿರುದ್ಧ ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ತಮ್ಮದೇ ಆಡಳಿತ ವ್ಯವಸ್ಥೆ ಮತ್ತು ಪೊಲೀಸರು ಈ ದೊಂಬಿಗಳಿಗೆ ಕುಮ್ಮಕ್ಕು ಕೊಡುತ್ತಿದ್ದುದನ್ನೂ ಆಗಿನ ಕಾಂಗ್ರೆಸ್ ಸರಕಾರ ಉಪೇಕ್ಷಿಸಿತು. ಕೆಲವು ವರ್ಷಗಳ ಕೆಳಗೆ ಕರ್ನಾಟಕ ಮತ್ತು ತಮಿಳುನಾಡು ರಾಜ್ಯಗಳ ನಡುವೆ ಕಾವೇರಿ ನದಿ ನೀರಿನ ಹಂಚಿಕೆಯ ಕುರಿತು ವಿವಾದ ತಲೆದೋರಿದಾಗ, ಬೆಂಗಳೂರು ಮತ್ತು ರಾಜ್ಯದ ಅನೇಕ ಕಡೆ, ತಮಿಳು ಪ್ರಜೆಗಳ ವಿರುದ್ಧ ಭಯೋತ್ಪಾದನೆಯ

ಕೃತ್ಯಗಳು ನಡೆದವು. ಕರ್ನಾಟಕದ ಯಾವ ರಾಜಕೀಯ ಪಕ್ಷದ ಧುರೀಣನೂ ಬಹುಶಃ ಇದನ್ನು ಖಂಡಿಸಿಲ್ಲ. ಅದಕ್ಕೆ ಪ್ರತಿಯಾಗಿ ಈ ರಾಜ್ಯದ ಎಲ್ಲ ರಾಜಕೀಯ ಪಕ್ಷಗಳೂ ಈ ಭಯೋತ್ಪಾದನೆಯನ್ನು ಇನ್ನಷ್ಟು ಹೆಚ್ಚಿಸುವಂತಹ ಉಗ್ರ ನಿಲುವನ್ನೇ ಈ ವಿವಾದದ ಕುರಿತು ತಳೆದವು. ಅತ್ಯಂತ ನಾಚಿಕೆಗೇಡಿನ ಸಂಗತಿ ಎಂದರೆ ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳ ತಮಿಳು ಭಾಷಿಗರ ಮೇಲೆ ನಡೆದ ಹಲ್ಲೆಗಳನ್ನು ಕನ್ನಡ ಪತ್ರಿಕೆಗಳು (ಲಂಕೇಶ್ ಪತ್ರಿಕೆ ಒಂದನ್ನು ಬಿಟ್ಟು) ವರದಿ ಮಾಡಲಿಲ್ಲ. ಚೋಮ್‌ಸ್ಕಿ ಹೇಳುವ, ಭಯೋತ್ಪಾದನೆಯ ಕಾನೂನು ರೀತ್ಯಾ ನಿರೂಪಣೆಯ ಪ್ರಕಾರ ಮೇಲೆ ಉದಾಹರಿಸಿದ ಎಲ್ಲವೂ ಭಯೋತ್ಪಾದನೆ ಕೃತ್ಯಗಳೇ ಸರಿ. ಈ ದೇಶದ ಕ್ರಿಮಿನಲ್ ಕಾಯ್ದೆಯ ಅನ್ವಯ ಕೂಡ ಇವೆಲ್ಲವೂ ಘೋರ ಅಪರಾಧಗಳು. ಆದರೆ ಕರ್ನಾಟಕದ ರಾಜಕೀಯ ಪಕ್ಷಗಳು ಮತ್ತು ಪತ್ರಿಕೆಗಳು, ತಮಿಳರ ಮೇಲೆ ಧಾಳಿ ನಡೆಸಿದವರನ್ನು ಭಯೋತ್ಪಾದಕರು ಎಂದು ಪರಿಗಣಿಸುವುದಿಲ್ಲ. ತಮಿಳು ನಾಡಿನ ಕೆಲವು ರಾಜಕಾರಣಿಗಳ ಮಟ್ಟಿಗೆ ಇವತ್ತಿಗೂ ಎಲ್.ಟಿ.ಟಿ.ಇ. ಭಯೋತ್ಪಾದಕ ಸಂಘಟನೆ ಅಲ್ಲ. ಕೇಂದ್ರ ಗೃಹಮಂತ್ರಿಗಳಿಗೆ, ಭಜರಂಗದಳ, ವಿಹಿಂಪಗಳು ಭಯೋತ್ಪಾದಕ ಸಂಘಟನೆಗಳಲ್ಲ. ಸರಕಾರ ಮತ್ತು ಮಾಧ್ಯಮಗಳ ಮೌನಸಮ್ಮತಿಯೊಂದಿಗೆ ನಡೆಸುವ ಭಯೋತ್ಪಾದನೆಯ ರಾಜಕೀಯಕ್ಕೆ ಅತ್ಯುತ್ತಮ ಉದಾಹರಣೆ, ಮಹಾರಾಷ್ಟ್ರದ ಶಿವಸೇನೆ. ಹಿಂದುತ್ವವಾದವನ್ನು ಪ್ರತಿಪಾದಿಸುವುದು ಶಿವಸೇನೆಯ ಇತ್ತೀಚೆಗಿನ ಅವತಾರ. ಇದಕ್ಕೆ ಮೊದಲು ಶಿವಸೇನೆ ''ಮುಂಬಯಿ ಮರಾಠಿಗರಿಗೆ ಮಾತ್ರ'' ಎಂಬ ಚಳುವಳಿ ನಡೆಸಿ, ಮುಂಬಯಿ ನಗರದ ತಮಿಳರು, ಕನ್ನಡಿಗರು, ಮಲೆಯಾಳಿಗಳು, ಗುಜರಾತಿಗಳು ಮತ್ತು ಇತರ ಅನ್ಯ ಭಾಷಿಗರ ಮೇಲೆ ಪದೇ ಪದೇ ಹಿಂಸಾತ್ಮಕ ಹಲ್ಲೆ ನಡೆಸಿ ಈ ಜನರ ಅಂಗಡಿ, ಮುಂಗಟ್ಟುಗಳನ್ನು ನಾಶಪಡಿಸಿತು. ಅದಕ್ಕೂ ಮೊದಲು, ಮುಂಬಯಿಯ ಕಮ್ಯುನಿಸ್ಟರ ವಿರುದ್ಧ ಭಯೋತ್ಪಾದಕ ಹಲ್ಲೆಗಳನ್ನು ನಡೆಸಿದ ಚರಿತ್ರೆಯೂ ಶಿವಸೇನೆಗಿದೆ. ವಾಸ್ತವವಾಗಿ, ಮುಂಬಯಿಯಲ್ಲಿ ೬೦ರ ದಶಕದಲ್ಲಿ ಹೆಚ್ಚುತ್ತಿದ್ದ ಕಮ್ಯುನಿಸ್ಟ್ ಕಾರ್ಮಿಕ ಸಂಘಟನೆಗಳ ಪ್ರಭಾವವನ್ನು ಹೊಸಕಿ ಹಾಕಲು, ಮುಂಬಯಿಯ ಬಂಡವಾಳಶಾಹಿಗಳು ಕಾಂಗ್ರೆಸ್ ಪಕ್ಷದ ಎಸ್.ಕೆ. ಪಾಟೀಲ ಎಂಬ ತಮ್ಮ ಚೇಲಾನನ್ನು ಬಳಸಿಕೊಂಡು ಈ ಸಂಘಟನೆಯನ್ನು ಹುಟ್ಟುಹಾಕಿದರು. ಇದು ನಡೆಸಿದ ಮೊತ್ತಮೊದಲ ರಾಜಕೀಯ ಕೊಲೆ ಕೃಷ್ಣ ದೇಸಾಯಿ ಎಂಬ ಕಮ್ಯುನಿಸ್ಟ್ ಧುರೀಣರದ್ದು. ಶಿವಸೇನೆಯ ಭಯೋತ್ಪಾದಕ ರಾಜಕೀಯದ ಈ ಎಲ್ಲ ರೂಪಗಳಲ್ಲೂ ಮಹಾರಾಷ್ಟ್ರದ ಸರಕಾರ, ಆ ರಾಜ್ಯದ ಕಮ್ಯುನಿಸ್ಟೇತರ ರಾಜಕೀಯ ಪಕ್ಷಗಳು ಮತ್ತು ಬಹುತೇಕ ಮರಾಠಿ ಪತ್ರಿಕೆಗಳು ಅದನ್ನು ಬೆಂಬಲಿಸಿವೆ; ಅಥವಾ ಸಮ್ಮತಿಪೂರ್ವಕ ಮೌನ ತಳೆದಿವೆ. ಆದರೆ ಇವೇ ಪಕ್ಷಗಳು ಮತ್ತು ಪತ್ರಿಕೆಗಳು, ತಮ್ಮ ಹಕ್ಕಿಗಾಗಿ ಹೋರಾಡುವ ರೈತ ಕಾರ್ಮಿಕರ ಸಂಘಟನೆ, ಚಳುವಳಿಗಳನ್ನು ಭಯೋತ್ಪಾದಕ ಎಂದು ಹಣೆಪಟ್ಟಿ ಹಚ್ಚಿ ತುಳಿದುಹಾಕಲು ಹಿಂದೆ ಮುಂದೆ ನೋಡುವುದಿಲ್ಲ.



ಈಗಂತೂ, ಭಾರತದಲ್ಲಿ ಭಾರತ ಸರಕಾರದ ಧೋರಣೆಗಳನ್ನು ವಿರೋಧಿಸುವುದು ಮಾತ್ರ ಭಯೋತ್ಪಾದನೆ ಅಲ್ಲ; ಅಮೆರಿಕ ಸರಕಾರದ ಧೋರಣೆಗಳನ್ನು ಭಾರತದಲ್ಲಿ ವಿರೋಧಿಸುವುದೂ ಭಯೋತ್ಪಾದನೆ ಮತ್ತು ಅಪರಾಧ! ದೆಹಲಿಯಲ್ಲಿ ಆಫಘಾನಿಸ್ತಾನದ ವಿರುದ್ಧ ಅಮೆರಿಕ ನಡೆಸುತ್ತಿರುವ ಯುದ್ಧವನ್ನು ವಿರೋಧಿಸಿದವರ ಜೊತೆಗೆ ಆ ಕುರಿತ ಕರಪತ್ರಗಳನ್ನು ಮುದ್ರಿಸಿದ ಪ್ರೆಸ್ ಮಾಲಿಕನನ್ನು ಸಹ ಸರಕಾರ ಬಂಧಿಸಿದೆ. ಬಿ.ಜೆ.ಪಿ. ಸರಕಾರ, ಈ ದೇಶದ ಅರ್ಥ ವ್ಯವಸ್ಥೆಯ ಜೊತೆ, ದೇಶದ ಸಂವಿಧಾನವನ್ನೂ ಈಗ ಅಮೆರಿಕಕ್ಕೆ ಒತ್ತೆ ಇರಿಸಿದೆ. ಹಾಗಾಗಿ ಭಯೋತ್ಪಾದನೆ ಕುರಿತ ಕಾನೂನಿನ ನಿರೂಪಣೆಯ ಬದಲು, ಅದು ಸೈದ್ಧಾಂತಿಕ ನಿರೂಪಣೆಯನ್ನು ನೆಚ್ಚಿಕೊಂಡಿದೆ. ಆದರೆ ಈ ನಿರೂಪಣೆಯ ಪ್ರಕಾರ, ನ್ಯಾಯಕ್ಕೋಸ್ಕರ ಹೋರಾಡುತ್ತಿರುವ, ಈ ಜಗತ್ತಿನ ಎಲ್ಲ ನೊಂದವರೂ ''ಭಯೋತ್ಪಾದಕರು'' ಎಂದು ಕರೆಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ಕಳೆದ ೫೦ ವರ್ಷಗಳ ಜಗತ್ತಿನ ಚರಿತ್ರೆಯ ಅತಿ ದೊಡ್ಡ ಸತ್ಯವೆಂದರೆ, ಜಗತ್ತಿನ ಹಿರಿಯಣ್ಣ ಬೆಳೆಸಿಕೊಂಡಿರುವ ಅಮೆರಿಕ ನವಸಾಮ್ರಾಜ್ಯಶಾಹಿ ಶಕ್ತಿಯಾಗಿ ರೂಪುಗೊಂಡು, ಜಾಗತಿಕ ಸಂಪನ್ಮೂಲ ಮತ್ತು ಮಾರುಕಟ್ಟೆಗಳನ್ನು ತನ್ನ ಕೈವಶ ಮಾಡಿಕೊಂಡಿರುವುದು. ತನ್ನ ಅಗಾಧ ಮಿಲಿಟರಿ ಬಲವನ್ನು ಬಳಸಿಕೊಂಡು ಜಗತ್ತಿನಾದ್ಯಂತ ಅಮೆರಿಕ ನಡೆಸುತ್ತಿರುವ ಭಯೋತ್ಪಾದಕ ರಾಜಕೀಯದಿಂದ ಮಾತ್ರ ಇದು ಸಾಧ್ಯವಾಗಿದೆ. ಜಗತ್ತಿನ ಅತಿ ಶ್ರೀಮಂತ ದೇಶವಾದ ಅಮೆರಿಕ, ಜಗತ್ತಿನ ಅತಿ ದೊಡ್ಡ ದರೋಡೆಕೋರ ದೇಶವೂ, ಅತಿ ದೊಡ್ಡ ಭಯೋತ್ಪಾದಕ ಶಕ್ತಿಯೂ ಆಗಿರುವುದು ಆಕಸ್ಮಿಕವಲ್ಲ; ಒಂದು ಇನ್ನೊಂದಕ್ಕೆ ಅನಿವಾರ್ಯವಾಗಿದೆ. ಸೆಪ್ಟೆಂಬರ್ ೧೧ರ ಧಾಳಿಯಲ್ಲಿ ಹತ್ತಿರ ಹತ್ತಿರ ೬೦೦೦ ಜನ ಕಾರಣವಿಲ್ಲದೆ ತೀರಿಕೊಂಡರು. ಇದು ಒಂದು ಘೋರ ದುರಂತ ಮತ್ತು ಅಕ್ಷಮ್ಯ ಅಪರಾಧ. ಆದರೆ ದ್ವಿತೀಯ ಮಹಾಯುದ್ಧದ ನಂತರ ಈ ೫೦ ವರ್ಷಗಳಲ್ಲಿ ಅಮೆರಿಕದ ಸೈನ್ಯ ಜಗತ್ತಿನಾದ್ಯಂತ ಊಹೆಗೆ ನಿಲುಕದಷ್ಟು ನಾಗರಿಕರನ್ನು ಕೊಂದಿದೆ. ಅಸಂಖ್ಯ ಜನರು ಹಾಗೂ ವೃದ್ಧರು, ಮಕ್ಕಳು ಮತ್ತು ಹೆಂಗಸರನ್ನೂ ಬಿಡದೆ ಇಡೀ ಊರಿಗೆ ಊರೇ ನಾಶವಾಗುತ್ತದೆ ಎಂದು ಗೊತ್ತಿದ್ದೂ, ಅದನ್ನು ದೃಢಪಡಿಸಿಕೊಳ್ಳಲೆಂದೇ ಅಮೆರಿಕ, ಹಿರೋಷಿಮಾ ನಾಗಸಾಕಿಗಳ ಮೇಲೆ ಅಣುಬಾಂಬ್ ಪ್ರಯೋಗಿಸಿತು. ೨,೨೦,೦೦೦ ಜನರ ಸಾವಿಗೆ ಕಾರಣವಾದ ಆ ಧಾಳಿಗೆ ಒಂದು ಪಿಳ್ಳೆ ನೆವವೂ ಇರಲಿಲ್ಲ. ಜಪಾನ್ ಆ ವೇಳೆಗಾಗಲೇ ಯುದ್ಧದಲ್ಲಿ ಸೋತು ಶರಣಾಗತಿಗೂ ಸಿದ್ಧವಾಗಿತ್ತು. ಆದರೆ ಅಮೆರಿಕದ ಹೊಸ ವೈಜ್ಞಾನಿಕ ಆವಿಷ್ಕಾರಕ್ಕೆ ಹಿರೋಶಿಮಾ ನಾಗಸಾಕಿಗಳ ಪ್ರಯೋಗ ಅವಶ್ಯವಾಗಿತ್ತು. ಅಮೆರಿಕ ಜಗತ್ತಿನ ಅತಿ ದೊಡ್ಡ ಅಣು ಅಸ್ತ್ರ ಸಂಗ್ರಹ ಹೊಂದಿರುವ ದೇಶ. ನಾಗರಿಕರ ಮೇಲೆ ಅಣು ಅಸ್ತ್ರ ಪ್ರಯೋಗಿಸಿದ (ನಾಗರಿಕರಲ್ಲದೆ ಇನ್ನು ಯಾರ ಮೇಲೆ ಅದನ್ನು ಪ್ರಯೋಗಿಸಲು ಸಾಧ್ಯ) ಏಕೈಕ ದೇಶವೂ ಅಮೆರಿಕವೇ. ಈಗ ಈ ಹೆಗ್ಗಳಿಕೆಯೂ ಸಾಲದು ಎಂಬಂತೆ ಅಮೆರಿಕ, ತನ್ನ ಹೊಸ ಅಣು ಕ್ಷಿಪಣಿ ಯೋಜನೆಯ ಮುಖಾಂತರ ಬಾಹ್ಯಾಕಾಶವನ್ನೂ ಇಡಿಯಾಗಿ ವಶಪಡಿಸಿಕೊಳ್ಳುವ ಸನ್ನಾಹದಲ್ಲಿದೆ. ಅಮೆರಿಕ ಸರಕಾರದ ಗೂಢಚರ್ಯೆ ವಿಭಾಗ ಸಿ.ಐ.ಎ. ಇತ್ತೀಚೆಗೆ ಸಿದ್ಧಪಡಿಸಿರುವ ವರದಿಯೊಂದರ ಪ್ರಕಾರ, ಜಾಗತೀಕರಣದಿಂದ ಬರುವ ದಿನಗಳಲ್ಲಿ ಜಗತ್ತಿನ ಬಡದೇಶಗಳು ಮತ್ತು ಅಮೆರಿಕದ ನಡುವಣ ಅಂತರ ಇನ್ನಷ್ಟು ಜಾಸ್ತಿ ಆಗಲಿದೆ. ಇದರಿಂದ ತಲೆದೋರುವ ರಾಜಕೀಯ ಪ್ರಕ್ಷುಬ್ಧತೆಯನ್ನು ಹೊಸಕಿ ಹಾಕಲು ಬಾಹ್ಯಾಕಾಶದಿಂದಲೇ ಈ ದೇಶಗಳ ಮೇಲೆ ಧಾಳಿ ನಡೆಸಲು ಅಮೆರಿಕ ಈ ಯೋಜನೆ ಹಾಕಿಕೊಂಡಿದೆ. ಚೋಮ್‌ಸ್ಕಿ ಹೇಳುವಂತೆ, ೧೯ನೆಯ ಶತಮಾನದಲ್ಲಿ ಬ್ರಿಟನ್, ಜರ್ಮನಿ ಮತ್ತು ಯುರೋಪ್‌ನ ಇತರ ದೇಶಗಳು ಸಾಗರಗಳ ಮೇಲೆ ಒಡೆತನ ಸ್ಥಾಪಿಸಿ ತಮ್ಮ ಸಾಮ್ರಾಜ್ಯ ವಿಸ್ತರಣೆಗೆ ಅನುಕೂಲ ಮಾಡಿಕೊಂಡಂತೆ, ೨೧ನೇ ಶತಮಾನದಲ್ಲಿ ಅಮೆರಿಕ ಬಾಹ್ಯಾಕಾಶದ ಮೇಲೆ ಒಡೆತನ ಸಾಧಿಸಿ ಜಗತ್ತನ್ನು ಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಿದೆ.

ಕಳೆದ ೫೦ ವರ್ಷಗಳಲ್ಲಿ ಅಮೆರಿಕದ ಆಕ್ರಮಣಕ್ಕೆ ಒಳಗಾಗಿರುವ ದೇಶಗಳ ಪಟ್ಟಿ ದೊಡ್ಡದಿದೆ. ಈ ಎಲ್ಲ ಆಕ್ರಮಣಗಳ ಪ್ರಧಾನ ಲಕ್ಷಣವೆಂದರೆ, ಆಕ್ರಮಿತ ದೇಶಗಳ ನಾಗರಿಕರನ್ನು ಭಾರಿ ಸಂಖ್ಯೆಯಲ್ಲಿ ಅಮೆರಿಕದ ಸೈನ್ಯ ಕೊಲೆ ಮಾಡಿರುವುದು. ೧೯೬೧ರಿಂದ ೧೯೭೫ರವರೆಗೆ, ಅಮೆರಿಕ ಜಗತ್ತಿನ ಅತ್ಯಂತ ಬಡ ದೇಶಗಳಲ್ಲಿ ಒಂದಾಗಿದ್ದ ವಿಯೆಟ್ನಾಂ ಮೇಲೆ ಆಕ್ರಮಣ ನಡೆಸಿ ೧೫ ಲಕ್ಷ ಜನರನ್ನು ಕೊಂದುಹಾಕಿತು. ಆ ಪುಟ್ಟ ದೇಶದ ಕಾಡು, ಗುಡ್ಡ, ಹೊಲ, ಗದ್ದೆಗಳನ್ನೂ ನಾಶಪಡಿಸಿ ನದಿಗಳಿಗೂ ವಿಷವಿಟ್ಟಿತು. ೧೯೪೫ರಿಂದ ೧೯೫೩ರವರೆಗೆ ಚೀನಾ ಮತ್ತು ಕೊರಿಯಾಗಳ ವಿರುದ್ಧ ಸತತ ಧಾಳಿ ನಡೆಸಿ ಅಲ್ಲಿನ ಕಮ್ಯುನಿಸ್ಟ್ ಸರಕಾರಗಳನ್ನು ಉರುಳಿಸಲು ಅದು ಪ್ರಯತ್ನಿಸಿತು. ವಿಯೆಟ್ನಾಂ ಪಕ್ಕದ ಲಾವೋಸ್ ಮತ್ತು ಕಾಂಬೋಡಿಯಾಗಳಲ್ಲಿ ೧೯೬೪ರಿಂದ ೧೯೭೫ರವರೆಗೆ ಯುದ್ಧ ನಡೆಸಿ ಅಮೆರಿಕ ಹಲವು ಲಕ್ಷ ಜನರನ್ನು ಕೊಂದಿದೆ. ಆ ದೇಶಗಳಿಗೆ ಸನಿಹದಲ್ಲೇ ಇರುವ ಇನ್ನೊಂದು ನತದೃಷ್ಟ ದೇಶ ಇಂಡೋನೇಶ್ಯದಲ್ಲಿ ೧೯೫೮ರಲ್ಲಿ ಅಮೆರಿಕ, ಅಧಿಕಾರದಲ್ಲಿದ್ದ ಸುಕರ್ಣರ ಸರಕಾರವನ್ನು ಪದಚ್ಯುತಿಗೊಳಿಸಿ, ಜನರಲ್ ಸುಹರ್ತೋನ ಮಿಲಿಟರಿ ಸರ್ವಾಧಿಕಾರವನ್ನು ಸ್ಥಾಪಿಸಿತು. ಸುಹರ್ತೋ ಅಮೆರಿಕ ಒದಗಿಸಿದ ಶಸ್ತ್ರಾಸ್ತ್ರಗಳು ಮತ್ತು ಸಿ.ಐ.ಎ. ನೆರವಿನಿಂದ ಇಂಡೋನೇಶ್ಯದ ೧೦ ಲಕ್ಷ ಬಡರೈತರನ್ನು, ಅವರು ಕಮ್ಯುನಿಸ್ಟ್ ಬೆಂಬಲಿಗರು ಎನ್ನುವ ಕಾರಣಕ್ಕೆ, ಕೊಂದುಹಾಕಿದ.

ಆಗ್ನೇಯ ಏಷ್ಯಾದ ಕಥೆ ಹೀಗಾದರೆ, ದಕ್ಷಿಣ ಅಮೆರಿಕ ಖಂಡವನ್ನಂತೂ ಅಮೆರಿಕ ತನ್ನ ಹಿತ್ತಲು ಎಂದೇ ಭಾವಿಸಿಕೊಂಡಿದೆ. ಆ ಖಂಡದ ಖನಿಜ ಸಂಪತ್ತು, ಸಮೃದ್ಧ ಅರಣ್ಯ ಮತ್ತು ಕೃಷಿ ಭೂಮಿಗಳನ್ನು ಅಮೆರಿಕದ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಆಸ್ತಿ ಎಂಬಂತೆ ಬಳಸಿಕೊಳ್ಳುತ್ತಿವೆ. ದಕ್ಷಿಣ ಅಮೆರಿಕದ ಬಡಜನರ ಎಲ್ಲ ಹೋರಾಟಗಳನ್ನು ಅಮೆರಿಕದ ಸೈನ್ಯ

ಹತ್ತಿಕ್ಕಿದೆ. ೧೯೭೩ರಲ್ಲಿ ಚಿಲಿಯಲ್ಲಿ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದ ಸಾಲ್ವೆಡೋರ್ ಅಲೆಂಡೆಯ ಎಡರಂಗ ಸರಕಾರವನ್ನು ಅಮೆರಿಕ ಉರುಳಿಸಿ, ಅಲ್ಲಿ ಒಂದು ಮಿಲಿಟರಿ ಸರಕಾರವನ್ನು ಸ್ಥಾಪಿಸಿತು. ಈ ಕಾರ್ಯಾಚರಣೆಯಲ್ಲಿ ೩೫,೦೦೦ ಜನ ಸತ್ತರು. ೧೯೮೦ರಲ್ಲಿ ನಿಕರಾಗುವಾದ ಮೇಲೆ ಧಾಳಿ ನಡೆಸಿ, ಅಮೆರಿಕ ಆ ದೇಶದ ಚುನಾಯಿತ ಸಮಾಜವಾದಿ ಸರಕಾರವನ್ನು ಉರುಳಿಸಿತು. ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೋ ನೇತೃತ್ವದ ಕಮ್ಯುನಿಸ್ಟ್ ಸರಕಾರವನ್ನು ಉರುಳಿಸಲು ಸತತ ಪ್ರಯತ್ನ ನಡೆಸಿ ವಿಫಲವಾದ ಅಮೆರಿಕ ಈಗ ಆ ದೇಶದ ಮೇಲೆ ವಾಣಿಜ್ಯ ದಿಗ್ಬಂಧನವನ್ನು ಹೇರಿಬಿಟ್ಟಿದೆ; ಸಿ.ಐ.ಎ. ಕ್ಯಾಸ್ಟ್ರೋನನ್ನು ಕೊಲ್ಲಲು ಹಲವು ಬಾರಿ ಯತ್ನಿಸಿದೆ. ಪೆರು, ಗ್ರೆನಾಡಾ, ಎಲ್ ಸಾಲ್ವಡೋರ್, ಪನಾಮಾ, ಡಾಮಿನಿಕನ್ ರಿಪಬ್ಲಿಕ್, ಕೊಲಂಬಿಯಾ, ಹೊಂಡ್ಯುರಾಸ್, ಹೈಟಿ - ಹೀಗೆ ಅಮೆರಿಕದ ಸೈನ್ಯ ಧಾಳಿ ನಡೆಸದ ಮತ್ತು ಸಿ.ಐ.ಎ. ಮಧ್ಯೆ ಪ್ರವೇಶಿಸದ ದೇಶವೇ ದಕ್ಷಿಣ ಅಮೆರಿಕ ಖಂಡದಲ್ಲಿ ಇಲ್ಲ. ಎಲ್ಲ ಕಾರ್ಯಾಚರಣೆಗಳಲ್ಲೂ ಅಸಂಖ್ಯ ನಾಗರಿಕರು ಕೊಲೆಯಾಗಿದ್ದಾರೆ.



ಆಫ್ರಿಕ ಮತ್ತು ಮಧ್ಯ ಪ್ರಾಚ್ಯದಲ್ಲಿಯೂ ಅಮೆರಿಕದ ದಾಖಲೆ ಇಷ್ಟೇ ಕರಾಳವಾಗಿದೆ. ದಕ್ಷಿಣ ಆಫ್ರಿಕಾದ ವರ್ಣದ್ವೇಷಿ ಸರಕಾರಕ್ಕೆ ನಿರಂತರವಾಗಿ ಬೆಂಬಲ ನೀಡಿದ ಅಮೆರಿಕ, ಆ ಸರಕಾರ ತನ್ನ ನೆರೆಯ ದೇಶಗಳ ಮೇಲೆ ನಡೆಸಿದ ಧಾಳಿಗಳಿಗೂ ಸಹಾಯ ಮಾಡಿದೆ. ಈ ಧಾಳಿಗಳಲ್ಲಿ ೧೫ ಲಕ್ಷ ಕರಿಯರು ಮೃತರಾಗಿದ್ದಾರೆ ಎಂದು ಅಂದಾಜು ಮಾಡಲಾಗಿದೆ. ೧೯೫೩ರಲ್ಲಿ ಮಧ್ಯ ಪ್ರಾಚ್ಯದ ಇರಾನ್‌ನಲ್ಲಿ ಮೊಹಮದ್ ಮೊಸಾದೆಕ್ ನೇತೃತ್ವದ ಚುನಾಯಿತ ಸಮಾಜವಾದೀ ಸರಕಾರವನ್ನು ಅಮೆರಿಕ ಉರುಳಿಸಿ, ಆ ದೇಶದಲ್ಲಿ ಪಹ್ಲವಿ ರಾಜ ಮನೆತನವನ್ನು ಅಧಿಕಾರಕ್ಕೆ ಏರಿಸಿತು. ಈ ಹೊಸ ಸರಕಾರ ಇರಾನ್‌ನ ಎಡಪಂಥೀಯರನ್ನೆಲ್ಲ ಸೆರೆಯಲ್ಲಿರಿಸಿತು. ಜೊತೆಗೆ ದೇಶದ ಅಪಾರ ತೈಲ ಸಂಪತ್ತನ್ನು ಅಮೆರಿಕಕ್ಕೆ ಸೂರಿಬಿಟ್ಟಿತು. ಪಹ್ಲವಿಗಳ ಕ್ರೂರ ಆಳ್ವಿಕೆಯಿಂದ ಬಿಡುಗಡೆ ಹೊಂದಲು ಇರಾನ್‌ನ ಜನತೆ ಅನಿವಾರ್ಯವಾಗಿ ಧರ್ಮಗುರು ಆಯತೊಲ್ಲ ಖೊಮಾನಿಯ ಇಸ್ಲಾಮಿಕ್ ಮೂಲಭೂತವಾದಿ ಚಳುವಳಿಯನ್ನು ಬೆಂಬಲಿಸಬೇಕಾಯಿತು. ಈಜಿಪ್ಟ್‌ನಲ್ಲಿ ಪ್ರಗತಿಶೀಲ ಮತ್ತು ಸಮಾಜವಾದೀ ಒಲವಿನ ಅಧ್ಯಕ್ಷ ನಾಸೆರ್‌ನನ್ನು ಕೊಲ್ಲಿಸಿ ಇಸ್ಲಾಮಿಕ್ ಮೂಲಭೂತವಾದಿ ಮಿಲಿಟರಿ ಸರಕಾರವೊಂದನ್ನು ಅಮೆರಿಕ ನೆಲೆಗೊಳಿಸಿತು. ಮಧ್ಯ ಪ್ರಾಚ್ಯದ ಸಮಕಾಲೀನ ರಾಜಕೀಯ ವ್ಯವಸ್ಥೆಯ, ಈ ವಿಚಿತ್ರ ಮಿಶ್ರಣ - ಇಸ್ಲಾಂ ಮೂಲಭೂತವಾದ, ಸೈನ್ಯ ಮತ್ತು ಸರ್ವಾಧಿಕಾರ- ಈ ಪ್ರದೇಶದ ಜನತೆಗೆ ಅಮೆರಿಕ ಕೊಟ್ಟ ಉಡುಗೊರೆ. ಮುಸ್ಲಿಮರ ಪವಿತ್ರ ಕ್ಷೇತ್ರಗಳಿರುವ ಸೌದಿ ಅರೇಬಿಯಾವನ್ನೇ ನೋಡಿ, ಅದು ಇಡೀ ಜಗತ್ತಿನಲ್ಲಿಯೇ ಅತ್ಯಂತ ಕಠೋರವಾದ ಇಸ್ಲಾಮಿಕ್ ಮೂಲಭೂತವಾದೀ ರಾಷ್ಟ್ರ. ಆದರೆ ಸೌದಿ ಅರೇಬಿಯಾ ಅಮೆರಿಕದ ಒಂದು ಮಿತ್ರರಾಷ್ಟ್ರವೂ ಹೌದು. ತನ್ನ ಪವಿತ್ರ ಭೂಮಿಯಲ್ಲಿ ಅಮೆರಿಕದ ಖಾಯಂ ಸೈನಿಕ ನೆಲೆಗಳಿಗೂ ಅದು ಅವಕಾಶ ಮಾಡಿಕೊಟ್ಟಿದೆ ! ನಮ್ಮ ನೆರೆಯ ಪಾಕಿಸ್ತಾನವೂ ಇಂತಹದ್ದೇ ಇನ್ನೊಂದು ಉದಾಹರಣೆ. ಕುಖ್ಯಾತ ತಾಲಿಬಾನ್ ಕೂಡಾ ಅಮೆರಿಕದ್ದೇ ಸೃಷ್ಟಿ.

ಮಧ್ಯ ಪ್ರಾಚ್ಯದ ಅಪಾರ ತೈಲ ನಿಕ್ಷೇಪಗಳ ಮೇಲೆ ತನ್ನ ಒಡೆತನವನ್ನು ಉಳಿಸಿಕೊಳ್ಳಲು ಅಮೆರಿಕ ಈ ಪ್ರದೇಶದ ಹೆಚ್ಚಿನ ರಾಷ್ಟ್ರಗಳಲ್ಲಿ ತನಗೆ ವಿಧೇಯವಾಗಿರುವ ಮಿಲಿಟರಿ ಸರಕಾರಗಳನ್ನು ಸ್ಥಾಪಿಸಿದೆ. ಇಲ್ಲಿನ ಜನರ ಪ್ರಜಾಸತ್ತಾತ್ಮಕ ಹಕ್ಕುಗಳ ಬಗ್ಗೆ ಅಮೆರಿಕಕ್ಕೆ ಕಿಂಚಿತ್ತೂ ಕಾಳಜಿ ಇಲ್ಲ. ಈ ಪ್ರದೇಶದ ಪ್ಯಾಲೆಸ್ತೀನ್ ಪ್ರಜೆಗಳ ಮೇಲೆ ನಿರಂತರ ಧಾಳಿ ನಡೆಸುತ್ತಿರುವ ಇಸ್ರೇಲ್‌ಗೆ ಅಮೆರಿಕದ ಸಂಪೂರ್ಣ ಆರ್ಥಿಕ ಮತ್ತು ಮಿಲಿಟರಿ ಸಹಕಾರವಿದೆ. ೧೯೮೨ರಲ್ಲಿ ಇಸ್ರೇಲ್, ಲೆಬನಾನ್‌ನ ಪ್ಯಾಲೆಸ್ತೀನ್ ನಿರಾಶ್ರಿತರ ನೆಲೆಗಳ ಮೇಲೆ ಧಾಳಿ ನಡೆಸಿ ೧೭೫೦೦ ಜನರನ್ನು ಕೊಂದುಹಾಕಿತು. ಈ ಧಾಳಿಗೆ ಅಮೆರಿಕದ ಪ್ರೋತ್ಸಾಹವಿತ್ತು. ೧೯೯೧ರಿಂದ ಅಮೆರಿಕ ಇರಾಕ್ ಮೇಲೆ ಬಾಂಬ್ ಧಾಳಿ ನಡೆಸಿ ■ ಲಕ್ಷ ನಾಗರಿಕರನ್ನು ಕೊಂದುಹಾಕಿದ್ದು ಈ ಧಾಳಿ ಈಗಲೂ ಮುಂದುವರಿದಿದೆ. ಇದೂ ಸಾಲದು ಎಂಬಂತೆ, ಅಮೆರಿಕ ಇರಾಕ್‌ನ ಮೇಲೆ ವಾಣಿಜ್ಯ ದಿಗ್ಬಂಧನವನ್ನು ವಿಧಿಸಿದ್ದು, ಜೀವರಕ್ಷಕ ಔಷಧಿಗಳೂ ಇರಾಕ್‌ನಲ್ಲಿ ಈಗ ದೊರೆಯುತ್ತಿಲ್ಲ. ಇದರಿಂದಾಗಿ ಕನಿಷ್ಠ ೫ ಲಕ್ಷ ಮಕ್ಕಳು ಸತ್ತಿದ್ದಾರೆ ಎಂದು ಅಂದಾಜು ಮಾಡಲಾಗಿದೆ. ೧೯೯೮ರಲ್ಲಿ ಸೂಡಾನ್‌ನ ಏಕೈಕ ಔಷಧ ತಯಾರಿಕೆಯ ಕಾರ್ಖಾನೆಯ ಮೇಲೆ ಅಮೆರಿಕ ಬಾಂಬ್ ಧಾಳಿ ನಡೆಸಿತು. ಈ ಸ್ಥಾವರ ಒಸಾಮಾ ಬಿನ್ ಲಾಡೆನ್ ಮಾಲಿಕತ್ವದ ಒಂದು ಶಸ್ತ್ರಾಸ್ತ್ರ ಕಾರ್ಖಾನೆಯಾಗಿರಬಹುದು ಎಂಬ ಸಂದೇಹದಿಂದ ಅಮೆರಿಕ ಈ ಧಾಳಿ ನಡೆಸಿತ್ತು. ಈ ಪ್ರಮಾದದಿಂದಾಗಿ ಸೂಡಾನ್‌ನ ಲಕ್ಷಗಟ್ಟಲೆ ಜನ ಔಷಧಗಳಿಲ್ಲದೆ ಸತ್ತಿರಬಹುದು ! ಆದರೆ ಅಮೆರಿಕ ಆ ಬಡದೇಶಕ್ಕೆ ಒಂದು ಚಿಕ್ಕಾಸನ್ನೂ ಪರಿಹಾರವಾಗಿ ಕೊಟ್ಟಿಲ್ಲ! ಈ ಪ್ರದೇಶದಲ್ಲಿ ತನ್ನ ಸ್ವಾರ್ಥಕ್ಕೋಸ್ಕರ ಅಮೆರಿಕ ಎಷ್ಟು ಕ್ರೂರವಾಗಿ ವರ್ತಿಸಬಲ್ಲದು ಎಂಬುದಕ್ಕೆ ಇತ್ತೀಚೆಗಿನ ಉದಾಹರಣೆ ಅಫಘಾನಿಸ್ತಾನ. ಕಳೆದ ೨೦ ವರ್ಷಗಳಿಂದ ಅಮೆರಿಕದ ಶಸ್ತ್ರಾಸ್ತ್ರಗಳ ನೆರವಿನೊಂದಿಗೆ ತಾಲಿಬಾನ್‌ನ ಬಾಡಿಗೆ ಸೈನಿಕರು ಆ ದೇಶದಲ್ಲಿ ನಡೆಸಿರುವ ಯುದ್ಧ ಮತ್ತು ಅಂತರ್ಯುದ್ಧಗಳಿಂದ ೨೫ ಲಕ್ಷ ಜನ ತೀರಿಕೊಂಡಿದ್ದಾರೆ. ೬೩ ಲಕ್ಷ ಜನ ನಿರಾಶ್ರಿತರಾಗಿದ್ದಾರೆ. ಅಸಂಖ್ಯ ಜನ ಅಂಗವಿಕಲರಾಗಿದ್ದಾರೆ. ಆ ದೇಶದ ಒಟ್ಟು ಜನಸಂಖ್ಯೆ ಎರಡೂವರೆ ಕೋಟಿ ! ಅಂದರೆ ದೇಶದ ೧೦% ಜನ ಸಾವಿಗೀಡಾಗಿದ್ದಾರೆ. ೩೦%ರಷ್ಟು ಜನ ನಿರಾಶ್ರಿತರಾಗಿದ್ದಾರೆ !

ಭಯೋತ್ಪಾದಕರ ಧಾಳಿಗೆ ತುತ್ತಾದ ನ್ಯೂಯಾರ್ಕ್‌ನ ೬೦೦೦ ನಾಗರಿಕರ ಜೀವಗಳು ಅಮೂಲ್ಯ. ಆದರೆ ಜಗತ್ತಿನಾದ್ಯಂತ ಅಮೆರಿಕ ಧಾಳಿಗಳಿಂದ ಸತ್ತ ಪ್ರಜೆಗಳ ಜೀವಕ್ಕೆ ಬೆಲೆಯೇ ಇಲ್ಲವೆ ? ಅಥವಾ ಹೀಗೆ ಸತ್ತವರೆಲ್ಲರೂ ಬಡದೇಶಗಳ, ಮಾಜೀ ವಸಾಹತುಗಳ ವರ್ಣೀಯ ಪ್ರಜೆಗಳಾಗಿರುವುದರಿಂದ ಇವರ ಜೀವಕ್ಕೆ ಸ್ವಲ್ಪ ಕಡಿಮೆ ಬೆಲೆಯೇ ? ದುರಂತವೆಂದರೆ ನಾವು ಇಂದು ಈ ಪ್ರಶ್ನೆಯನ್ನು ಅಮೆರಿಕದ ವಿದೇಶಾಂಗ ನೀತಿಯ ಬಗ್ಗೆ ಮಾತ್ರವಲ್ಲ, ನಮ್ಮ ಸರಕಾರದ ಧೋರಣೆಯ ಬಗೆಗೂ ಕೇಳಬೇಕಾಗಿದೆ. ಈ ದೇಶದ ಅರ್ಥವ್ಯವಸ್ಥೆಯನ್ನು ಈಗಾಗಲೇ ಪರಾಧೀನಗೊಳಿಸಿರುವ ಸರಕಾರ, ಸೆಪ್ಟೆಂಬರ್ ೧೧ರ ನಂತರ, ಈ ದೇಶದ ಸಾರ್ವಭೌಮತೆ ಮತ್ತು ಸ್ವಯಂ ಅಧಿಕಾರಗಳನ್ನೂ ಅಮೆರಿಕದ ಅಧ್ಯಕ್ಷರ ಕಾಲುಬುಡದಲ್ಲಿ ಇರಿಸಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಈ ಜಗತ್ತಿನ ಬಡವರ ವಿರುದ್ಧ ನಡೆಸುತ್ತಿರುವ ಭಯೋತ್ಪಾದನೆ – ಆರ್ಥಿಕ ಮತ್ತು ತೋಳ್ಬಲ ಎರಡೂ ರೂಪಗಳಲ್ಲಿ – ಯನ್ನೇ ಭಾರತದಲ್ಲಿ ಬಿ.ಜೆ.ಪಿ. ಇಲ್ಲಿನ ಬಡ ಜನರ ವಿರುದ್ಧ ನಡೆಸುತ್ತಿದೆ. ಈ ಸರಕಾರದ ಆರ್ಥಿಕ ಧೋರಣೆಗಳಿಂದ ೨ ಲಕ್ಷಕ್ಕೂ ಮಿಕ್ಕು ಸಣ್ಣ ಕೈಗಾರಿಕೆಗಳು ದಿವಾಳಿ ಎದ್ದು ಕಾರ್ಮಿಕರು ನಿರುದ್ಯೋಗಿಗಳಾಗಿದ್ದಾರೆ. ಸರಕಾರ ತರಲು ಉದ್ದೇಶಿಸಿರುವ ಹೊಸ ಕಾರ್ಮಿಕ ಶಾಸನದಿಂದ ಈ ದೇಶದ ಶೇ. ೯೦ಕ್ಕೂ ಮಿಕ್ಕು ಕಾರ್ಮಿಕರಿಗೆ ಕಾರ್ಮಿಕ ಕಾನೂನಿನ ಯಾವ ರಕ್ಷಣೆಯೂ ಇರುವುದಿಲ್ಲ. ಅಮೆರಿಕ ಮುಂಚೂಣಿಯಲ್ಲಿರುವ ಜಾಗತೀಕರಣದ ನೀತಿಗಳ ಪರಿಣಾಮವಾಗಿ, ಈ ದೇಶದ ನೇಕಾರರು ಮತ್ತು ರೈತರು ಆತ್ಮಹತ್ಯೆಯ ದಾರಿ ಹಿಡಿದಿದ್ದಾರೆ. ಸರಕಾರೀ ಗೋದಾಮುಗಳಲ್ಲಿ ೪ ಕೋಟಿ ೨೫ ಲಕ್ಷ ಟನ್ ಆಹಾರ ಧಾನ್ಯ ಅಕ್ಷರಶಃ ಕೊಳೆಯುತ್ತ ಬಿದ್ದಿದೆ. ಆದರೆ ಅಮೆರಿಕದ ಹಿಡಿತದಲ್ಲಿರುವ ವಿಶ್ವಬ್ಯಾಂಕ್ ಹಾಕಿಕೊಟ್ಟ ನೀತಿಗೆ ಅನುಗುಣವಾಗಿ ಸರಕಾರ ಈ ಆಹಾರ ಧಾನ್ಯವನ್ನು ಬಡಜನರಿಗೆ ವಿತರಿಸುವಂತಿಲ್ಲ. ಇದೇ ವೇಳೆಗೆ ದೇಶದ ಅನೇಕ ಕಡೆ ಜನ ಹಸಿವೆಯಿಂದ ಸತ್ತ ವರದಿಗಳು ಪ್ರಕಟವಾಗಿವೆ. ಆದರೆ ಕೇಂದ್ರ ಸರಕಾರ ಈ ಸಮಸ್ಯೆಗಳಿಂದ ಜನರ ಗಮನವನ್ನು ಬೇರೆಡೆ ಸೆಳೆಯಲು ಮತ್ತೊಮ್ಮೆ ಮತೀಯ ದ್ವೇಷವನ್ನು ಹರಡುವ ತನ್ನ ಮಾಮೂಲಿ ತಂತ್ರವನ್ನೇ ಅನುಸರಿಸುತ್ತಿದೆ. ಸರಕಾರದ ಮುಖ್ಯ ಘಟಕವಾಗಿರುವ ಬಿ.ಜೆ.ಪಿ. ರಾಮಜನ್ಮಭೂಮಿ ಚಳುವಳಿಯ ಜೊತೆ ಸೆಪ್ಟೆಂಬರ್ ೧೧ರ ಧಾಳಿಯನ್ನೂ ಸಿನಿಕತನದಲ್ಲಿ ಬಳಸಿಕೊಂಡು ಮುಸ್ಲಿಮರೆಲ್ಲ ಭಯೋತ್ಪಾದಕರು ಅಥವಾ ಭಯೋತ್ಪಾದನೆಯನ್ನು ಬೆಂಬಲಿಸುವವರು ಎಂದು ಅಪಪ್ರಚಾರ ಮಾಡುತ್ತಿದೆ. ಈ ದೇಶದ ಮುಸ್ಲಿಮರ ವಿರುದ್ಧ ಯಾವ ಆರೋಪವನ್ನು ಬೇಕಾದರೂ ಮಾಡಬಹುದು; ಹಿಂಸಾಕೃತ್ಯಗಳನ್ನೂ ಎಸಗಬಹುದು. ಆದರೆ ಅದಕ್ಕೆ ಅವರು ಪ್ರತಿಕ್ರಿಯೆ ತೋರಿಸಿದರೆ ಭಯೋತ್ಪಾದಕರಾಗಿಬಿಡುತ್ತಾರೆ. ಬಿ.ಜೆ.ಪಿ.ಯ ಈ ಅಪಾಯಕಾರೀ ರಾಜಕೀಯದಿಂದ ಅದಕ್ಕೆ ತಾತ್ಕಾಲಿಕ ಲಾಭವಷ್ಟೇ ಆಗ ಬಹುದು. ಆದರೆ ಒಂದು ಇಡೀ ಸಮುದಾಯ ಅತಂತ್ರ ಭಾವವನ್ನು ಅನುಭವಿಸಬೇಕಾಗಿ ಬಂದರೆ ಅದರಿಂದ ರಾಷ್ಟ್ರದ ಸಮಗ್ರತೆಗೇ ಗಂಡಾಂತರ ಬರುವುದು ಖಂಡಿತ. ಬಿ.ಜೆ.ಪಿ.ಯ ಮನೆಮುರುಕ ಧೋರಣೆ ಈ ದೇಶವನ್ನು ಇನ್ನೊಂದು ವಿಭಜನೆಯತ್ತ ಒಯ್ಯುತ್ತಿದೆ.

ಜಿ. ರಾಜಶೇಖರ
ಎಲ್ ಐ ಸಿ ಆಫ್ ಇಂಡಿಯಾ, ಡಿವಿಜನಲ್ ಆಫೀಸ್, 'ಜೀವನ ಕೃಷ್ಣ', ಅಜ್ಜರಕಾಡು, ಉಡುಪಿ-೫೭೬ ೧೦೧

# ಕಥೆ ಬೇಕು ಕಥೆ

ಅದೀಬ್ ಅಖ್ತರ್

ನನಗೆ ಮೊದಲೇ ಸೂಚನೆ ಕೊಡದೆ ಗೆಳೆಯರೊಬ್ಬರು ತಮ್ಮೊಂದಿಗೆ ಟಿ.ವಿ. ಧಾರಾವಾಹಿ ನಿರ್ದೇಶಕನೊಬ್ಬನನ್ನು ಕರೆದುಕೊಂಡು ನಮ್ಮ ಮನೆಗೆ ಬಂದು ಅವನನ್ನು ನನಗೆ, ನನ್ನನ್ನು ಅವನಿಗೆ ಪರಿಚಯಿಸಿದ ಬಳಿಕ 'ನಮ್ಮ ನಿರ್ದೇಶಕರು ನಿಮ್ಮಿಂದ ಒಂದು ಕಥೆ ಬರೆಸಲು ಬಂದಿದ್ದಾರೆ' ಎಂದರು.

'ಬರೀ ಕಥೆ ಮಾತ್ರ ಅಲ್ಲ ಚಿತ್ರಕಥೆ, ಸಂಭಾಷಣೆ ಸಹ ಬರೆದು ಕೊಡಬೇಕು.' ನಿರ್ದೇಶಕ ಮಧ್ಯ ಬಾಯಿ ಹಾಕಿದ.

'ಎಷ್ಟು ಎಪಿಸೋಡ್ ಬರೆಯಬೇಕಾಗುತ್ತೆ ?'

'ಮುನ್ನೂರುಕ್ಕು ಹೆಚ್ಚು ಎಪಿಸೋಡ್‌ನಷ್ಟು.'

'ಹನುಮಾನನ ಬಾಲದಂತೆ ಅಷ್ಟೊಂದು ದೊಡ್ಡ ಕಥೆ ಬರೆಯಲು ನನ್ನಿಂದ ಸಾಧ್ಯವಿಲ್ಲ' ಎಂದೆ ನಡುಗುತ್ತ.

'ನೀವೇನು ಹೆದರಿಕೊಳ್ಳಬೇಡಿ, ಕಥೆ ಹೇಗೆ ಹೆಣೆಯಬೇಕೆಂದು ನಮ್ಮ ನಿರ್ದೇಶಕರೆ ಹೇಳಿ ಕೊಡುತ್ತಾರೆ,' ಗೆಳೆಯ ಹೇಳಿದ.

'ನನಗೆ ಧೈರ್ಯವೇ ಸಾಲುತ್ತಿಲ್ಲ' ಎಂದೆ ಬೆವತುಕೊಂಡು.

'ನಿಮಗೆ ಧೈರ್ಯ ಕೊಡಲು ನಾನಿದ್ದೇನಲ್ಲ' ನಿರ್ದೇಶಕ ಹೇಳಿದ.



'ಧಾರಾವಾಹಿಯವರು ಲೇಖಕನ ಮಾತಿಗೆ ಮೂರು ಕಾಸಿನ ಬೆಲೆ ಕೊಡುವುದಿಲ್ಲವಂತೆ ?' ಪ್ರಶ್ನಿಸಿದೆ.

'ಈ ರೀತಿ ನಿಮಗೆ ಯಾವ ಮೂರ್ಖ ಹೇಳಿದ್ದು? ನಿಮ್ಮ ಒಂದೊಂದು ಕಲ್ಪನೆಗೆ ನಾವು ಸಾವಿರಾರು ರೂಪಾಯಿ ನೀರಿನಂತೆ ಸುರಿಯುತ್ತೇವೆ ಗೊತ್ತೇನು. ಯಾವನೋ ಮೂರ್ಖ ಹೇಳಿದ ಮಾತಿಗೆ ನಾವು ಬೆಲೆ ಕೊಡುವುದು ಬೇಡ, ಒಂದು ಒಳ್ಳೆ ಕಥೆ ಹೇಳಿ ಮೂರು ನಿಮಿಷದಲ್ಲಿ.' ನಿರ್ದೇಶಕ ಗಡಿಯಾರ ನೋಡುತ್ತ ಹೇಳಿದ.

'ಮುನ್ನೂರು ಎಪಿಸೋಡಿಗೆ ಆಗುವ ಕಥೆಯನ್ನು ಹೇಗೆ ಮೂರು ನಿಮಿಷದಲ್ಲಿ ಹೇಳಬೇಕೆಂದು ತಿಳಿಯುತ್ತಿಲ್ಲ. ನಾನು ನನ್ನ ಎರಡು ಕಾದಂಬರಿ ಕೊಡುತ್ತೇನೆ, ಅವುಗಳನ್ನು ಓದಿಕೊಂಡು ಅವರೆಡರಲ್ಲಿ ನಿಮಗೆ ಯಾವುದು ಇಷ್ಟವಾಗುತ್ತೆ ತಿಳಿಸಿ.'

'ಕಾದಂಬರಿ ಓದುವಷ್ಟು ಸಮಯ ಹಾಗೂ ತಾಳ್ಮೆ ನನಗಿಲ್ಲ. ಯಾವುದಾದರೊಂದು ಕಥೆ ಹೇಳಿ ಪ್ಲೀಸ್' ಎಂದ ನಿರ್ದೇಶಕ, ಮೂಡ್ ಆಫ್ ಮಾಡಿಕೊಳ್ಳುತ್ತ.

'ಯಾವುದಾದರೊಂದು ಕಥೆ ಹೇಳಿ, ಇಲ್ಲದಿದ್ದರೆ ನಮ್ಮ ನಿರ್ದೇಶಕರು ಬೇಸರ ಮಾಡಿಕೊಳ್ಳುತ್ತಾರೆ.' ಗೆಳೆಯ ನಿರ್ದೇಶಕನ ಪರ ವಹಿಸಿ ಹೇಳಿದ.

ಪೀಡೆ ತೊಲಗಲಿ ಎಂದು, ಒಂದೆರಡು ಕ್ಷಣ ಯೋಚಿಸಿದ ಬಳಿಕ ಹೇಳಿದೆ, 'ಒಂದೂರಲ್ಲಿ ಒಂದು ಹುಡುಗ ಇರುತ್ತಾನೆ' ಅವನು ಒಂದು ಹುಡುಗಿಯನ್ನು ಪ್ರೀತಿಸುತ್ತಿರುತ್ತಾನೆ, ಇಂಥದ್ದರಲ್ಲಿ ಒಂದು ದಿನ ಏನಾಗುತ್ತದೆಂದರೆ......'

ನನಗೆ ಮುಂದೆ ಏನೂ ಹೇಳಲು ಅವಕಾಶ ಕೊಡದೆ ತಕ್ಷಣ ನಿರ್ದೇಶಕ ಸಂತೋಷ ವ್ಯಕ್ತಪಡಿಸುತ್ತ ಹೇಳಿದ.

'ಕಥೆ ಒಪನಿಂಗ್ ಬಹಳ ಚೆನ್ನಾಗಿದೆ, ಕಥೆ ಓ.ಕೆ.....'

'ಇನ್ನೂ ನೀವು ಕಥೆಯನ್ನು ಒಂದು ಚೂರು ಸಹ ಕೇಳಲಿಲ್ಲ, ಆಗಲೇ ಕಥೆ ಚೆನ್ನಾಗಿದೆ, ಓ.ಕೆ. ಎನ್ನುತ್ತಿದ್ದೀರಲ್ಲ..' ಆಶ್ಚರ್ಯದಿಂದ ಕೇಳಿದೆ. 'ಪುರಾಣವೆಲ್ಲ ಕೇಳಿಕೊಂಡು ಕಥೆ ಅರ್ಥ ಮಾಡಿಕೊಳ್ಳುವ ಮೂರ್ಖ ನಾನಲ್ಲ. ನನಗೆ ಒಂದು ಚೂರು ಕಥೆ ಹೇಳಿದರೆ ಸಾಕು ಎಲ್ಲಾ ಅರ್ಥ ಮಾಡಿಕೊಳ್ಳುತ್ತೇನೆ' ಎಂದು ಹೇಳಿ ನಿರ್ದೇಶಕ ಸಾವಿರ, ಸಾವಿರದ ಐದು ನೋಟಗಳನ್ನು ನನ್ನ ಕೈಗೆ ಚಾಚುತ್ತ 'ಕಥೆ ಬಹಳ ಬೊಂಬಾಟಾಗಿದೆ; ಯಾರ ಮುಂದೆ ಬಾಯಿ ಬಿಡಲು ಹೋಗಬೇಡಿ' ಎಂದ.

'ಆಯಿತು' ಎಂದು ಹೇಳಿ ಸಾವಿರ, ಸಾವಿರದ ಐದು ನೋಟುಗಳನ್ನು ಸೂಕ್ಷ್ಮವಾಗಿ ಗಮನಿಸಲು ತೊಡಗಿದಾಗ ನಿರ್ದೇಶಕ 'ಅಸಲಿ ನೋಟುಗಳು ಸಾರ್, ಯಾಕೆ ಹಾಗೆ ಅನುಮಾನದಿಂದ ನೋಡುತ್ತೀರ' ಎಂದ.

ನಾನು ನಾಚಿಕೊಂಡು ನೋಟುಗಳನ್ನು ಜೋಬಿಗೆ ಹಾಕಿಕೊಂಡಾಗ ನಿರ್ದೇಶಕ ಮಾತು ಮುಂದುವರಿಸಿದ.

'ನನ್ನ ಮೊದಲನೆಯ ಕಂಡಿಷನ್ ಏನೆಂದರೆ ಈ ಕಥೆ ಮತ್ತೊಬ್ಬರಿಗೆ ಹೇಳಕೂಡದು, ಎರಡನೆ ಕಂಡಿಷನ್ ಏನೆಂದರೆ ನಮ್ಮ ನಿರ್ಮಾಪಕರು ಹಾಗೂ ಅವರ ಕುಟುಂಬದ ಸದಸ್ಯರು ಹೇಳಿದಂತೆ ಆಗಾಗ ಕಥೆಯನ್ನು ಬದಲಾಯಿಸುತ್ತ ಹೋಗಬೇಕು.'

'ಸಂಭಾಷಣೆ ನಾನೇ ಬರೆಯಬೇಕೆ ಅಥವಾ ನಿಮ್ಮ ನಿರ್ಮಾಪಕರೆ ಬರೆಯುತ್ತಾರೊ?' ಕುತೂಹಲದಿಂದ ಕೇಳಿದೆ.

'ನಮ್ಮ ನಿರ್ಮಾಪಕರಿಗೆ ಓದು ಬರಹ ಬರುವುದಿಲ್ಲ.'

'ಹಾಗಿದ್ದರೆ ಸಂಭಾಷಣೆ ನಾನೇ ಬರೆಯಬೇಕೇನು ?'

'ನೀವು ಬರೆಯುವ ಹಾಗಿಲ್ಲ.'

'ಮತ್ತೆ ಯಾರು ಬರೆಯುತ್ತಾರೆ?'

'ನೀವು ಬಿಳಿ ಹಾಳೆಗಳನ್ನು ತೆಗೆದುಕೊಂಡು ಲೊಕೇಷನ್‌ಗೆ ಬರಬೇಕು, ನೀವು ಸೀನ್ ಹೇಳಿದರೆ ನಮ್ಮ ಆರ್ಟಿಸ್ಟ್‌ಗಳೇ ಸಂಭಾಷಣೆ ಹೇಳುತ್ತಾರೆ. ಅವರು ಹೇಳಿದ್ದನ್ನು ನೀವು ಬರೆದುಕೊಳ್ಳಬೇಕು.'

'ಎಲ್ಲವನ್ನೂ ನೀವೇ ಮಾಡಿಕೊಳ್ಳುವುದಾದರೆ ಒಬ್ಬ ಲೇಖಕನ ಅವಶ್ಯಕತೆ ಯಾಕೆ ?'

'ನೋಡಿ ಇವರೇ, ನಮಗೆ ಓದಲು ಬರೆಯಲು ಬರುವುದಿಲ್ಲ, ನಿಮಗೆ ಬರೆಯಲು ಬರುತ್ತೆ, ಅದಕ್ಕೆ ನಿಮ್ಮಂಥ ಲೇಖಕರ ಅವಶ್ಯಕತೆ ಇರುವುದು' ಎಂದ ನಿರ್ದೇಶಕ ಎದ್ದೇಳುತ್ತ.

ಅದೀಬ್ ಅಖ್ತರ್
c/o ಖಾನ್ ಮೊಹಮ್ಮದ್, ಬನ್ನೂರು - ೫೭೧ ೧೦೧, ಮೈಸೂರು ಜಿಲ್ಲೆ



## ದೇಶವನು ಪ್ರೀತಿಸೆಂಬುವ...

ದೇಶವನು ಪ್ರೀತಿಸೆಂಬುವ
ಒಳಿತು ಎಂಬುದ ಬೆಳೆಸು ಎಂಬುವ
ಬರಿದು ಮಾತನು ಕಟ್ಟಿ ಮಡಗೊ
ಗಟ್ಟಿತನವನು ತಲೆಗೆ ಮುಡಿಯೊ

ಹಾಲು ಹಯನು ಉಕ್ಕಿ ಹರಿಯೊ
ದುಡಿಮೆ ಧರ್ಮದ ದಾರಿ ಸವೆಸೊ
ಅನ್ನವಿದ್ದರೆ ಖಂಡ ಬಲವೊ
ಖಂಡವಿದ್ದವನವನೆ ಮನುಜನೊ

ಉಸುರೆನ್ನುತ ಜನರು ಇರಲು
ದೇಶವೆಂತು ಹದುಳಗೊಳುವುದೊ
ಕಲೆಯ ಕರಗತ ಮಾಡಿಕೊಂಡು
ದೇಸಿ ಸರಕನು ಹೆಚ್ಚಿಸೊ

ಸಕಲ ದೇಶವ ಕವಿಯಬೇಕೋ
ದೇಸಿ ಸರಕನು ನೆಚ್ಚಬೇಕೊ
ಹಣವು ತಾರದ ಜನರಿಗೆಲ್ಲ
ಕೀರ್ತಿ ಸಿರಿಯದ ಲಭಿಸದೊ

ಹಿಂದೆ ತೋರಿದ ಕಾರ್ಯವೇನೊ ?
ಒಳಿತು ಗತದಲ್ಲಿ ಕೊಂಚವೇನೊ
ತಡವು ಮಾಡದೆ ಮುಂದೆ ಸಾಗೊ
ಹಿಂದಕುಳಿದರೆ ಹಿಂದಕುಳಿವೊ

ಹೂಡು ಸ್ಪರ್ಧೆಯ ವಿದ್ಯೆಯಲ್ಲಿ
ಹಗೆಯೆ ವಣಿಕ ವಾಣಿಜ್ಯದಲ್ಲಿ
ವ್ಯರ್ಥ ಕಲಹವ ದೂರ ಸರಿಸೊ
ಕತ್ತಿ ವೈರವ ದೂರ ಮಾಡೊ

ದೇಶಾಭಿಮಾನವು ನನಗೆ ಉಂಟು
ಬರಿದೆ ಬುರುಡೆ ಬೇಡ ಬಂಧು
ತೊಡಗಿಕೊಂಡು ಮೇಲನೊಂದು
ಮಾಡಿ ಜನರಿಗೆ ತೋರಿಸು

ಸಹನೆ ಇರದ ದೆವ್ವ ದೇಶವ
ಹಿಡಿದು ಹೀರಿ ಎಸೆಯಿತೊ
ನೆರೆಯ ಏಳ್ಗೆಗೆ ಹರುಷ ಪಡುತ
ಐಕ್ಯಮತ್ಯವ ಕಲಿತು ನಡೆಯೊ

ಪರರ ಭಾಗ್ಯಕೆ ಹೊರಳಿ ಅಳುವ
ಪಾಪಿಗೆಲ್ಲಿಯ ಸುಖವು ಉಂಟೊ ?
ಒಬ್ಬರೊಳಿತು ತನದು ಎನ್ನುವ
ಜಾಣನಾದರೆ ಒಳಿತು ಕೋಟಿಯೊ

ಸ್ವಂತ ಲಾಭವ ಕೊಂಚ ಮರೆತು
ನೆರೆಯ ಜನರಿಗೆ ನೆರವು ನೀಡೊ
ದೇಶವೆಂದರೆ ಮಣ್ಣು ಅಲ್ಲವೊ
ದೇಶವೆಂದರೆ ಮನುಜರೊ

ಕೈಯಿ ಕೈಯಿ ಹಿಡಿದುಕೊಂಡು
ದೇಶಸ್ಥರೆಲ್ಲ ನಡೆಯಬೇಕೊ
ಅಣ್ಣ ತಮ್ಮಂದಿರಂತೆ ಜಾತಿ
ಮತಗಳೆಲ್ಲ ಬಾಳಬೇಕೊ

ಮತವು ಬೇರೆ ಆದರೇನೊ
ಮನಸು ಕಲೆತ ಮನುಜರಿರಲು
ಜನಗಣವು ಎದ್ದು ಬೆಳೆವುದೊ
ಬಾಳು ಲೋಕದಿ ಮೆರೆವುದೊ

ದೇಶವೆಂಬುವ ದೊಡ್ಡ ಮರವು
ಪ್ರೀತಿ ಎಂಬುವ ಹುವ್ವ ತೊಟ್ಟು
ನರರ ಬೆವರಲಿ ನೆನೆದು ಬೇರು
ಧನವು ಫಸಲು ಬೆಳೆಯಬೇಕೊ

ಎಲೆಯ ಮರೆಯಲಿ ಅಡಗಿ ಕುಳಿತು
ಕವಿತೆ ಕೋಗಿಲೆ ಹಾಡಬೇಕೊ
ಹಾಡ ಕೇಳಿ ದೇಶಾಭಿ-
ಮಾನವು ಮೊಳೆಯಬೇಕೊ

ತೆಲಗು ಮೂಲ : **ಗುರಜಾಡ ಅಪ್ಪಾರಾವು**
ಅನುವಾದ : **ಸ. ರಘುನಾಥ**
ಬಾಲಾಂಜನೇಯಸ್ವಾಮಿ ಗುಡಿಯ ಪೂರ್ವ, ರಾಮಕೃಷ್ಣ ಬಡಾವಣೆ,
ಶ್ರೀನಿವಾಸಪುರ-೫೬೩ ೧೩೫, ಕೋಲಾರ ಜಿಲ್ಲೆ

# ಜೆ. ಸಿ. ಬೋಸ್‌ರ ಕಾಲ-ಬದುಕು ಒಂದು ವಿವೇಚನೆ

■ ಡಾ॥ ಸಂಜಯ್ ಬಿಸ್ವಾಸ್

ಭಾರತದ ಖ್ಯಾತ ವಿಜ್ಞಾನಿ ಜಗದೀಶ್ ಚಂದ್ರ ಬೋಸ್‌ರನ್ನು ಕೇಂದ್ರವಾಗಿಟ್ಟುಕೊಂಡು ಭಾರತದಲ್ಲಿ ೧೯ನೆಯ ಶತಮಾನದ ಕೊನೆ ಹಾಗೂ ೨೦ನೆಯ ಶತಮಾನದ ಆರಂಭದಲ್ಲಿ ವಿಜ್ಞಾನ ಪ್ರಾಯೋಜನೆಯನ್ನು ಆವರಿಸಿದ್ದ ವರ್ಗ ಸಂಬಂಧಗಳ ಅನ್ವೇಷಣೆ ಈ ಲೇಖನದ ಮೂಲೋದ್ದೇಶ. ವಸಾಹತು ಭಾರತದಲ್ಲಿ ಜೆ. ಸಿ. ಬೋಸ್‌ರವರು ಭಾರತೀಯ ವಿಜ್ಞಾನಕ್ಕೆ ಒಂದು ನ್ಯಾಯಯುತ ಸ್ಥಾನ ಸ್ಥಾಪಿಸಿಕೊಡಲು ತಮ್ಮ ವೈಜ್ಞಾನಿಕ ಚಟುವಟಿಕೆಗಳ ಮೂಲಕ ಅವಿಶ್ರಾಂತವಾಗಿ ದುಡಿದರು ಎಂಬುದು ನಿಜ. ಆದರೆ, ಆ ಕಾಲದಲ್ಲಿ ಅವರ ಹಾಗೂ ಇತರ ವೈಜ್ಞಾನಿಕ ಸಂಸ್ಥೆಗಳ ಯತ್ನಗಳೆಲ್ಲ ಬಂಡವಾಳವಾದಿ ಪರವಾದ ಹಾಗೂ ಯೂರೋಪು-ಕೇಂದ್ರಿತ ಚೌಕಟ್ಟಿನೊಳಗೇ ನಡೆಯುತ್ತಿದ್ದವು ಎಂಬುದನ್ನೂ ಮರೆಯಲಾಗದು. ದೇಶದ ಆಂತರಿಕ ಬೆಳವಣಿಗೆಯನ್ನು ಬಾಹ್ಯ ಮೂಲವೊಂದರೊಂದಿಗೆ ಹೊಂದಿಸಿಕೊಂಡು ಆಗುಮಾಡಲು ಯತ್ನಿಸಲಾಯಿತು. ಇಂತಹ ಬಾಹ್ಯೀಕರಣದ ಪರಿಣಾಮ ಏನೆಂಬುದು ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣದ ಕಹಿಗುಳಿಗೆಗಳನ್ನು ನುಂಗುತ್ತಿರುವ ನಮಗಿಂದು ಹೆಚ್ಚು ಸುಲಭ ವೇದ್ಯವಾಗಿದೆ.

ಜಗದೀಶ್ ಚಂದ್ರ ಬೋಸ್‌ರು ಒಬ್ಬ ಅತ್ಯಂತ ಮೇಧಾವಿ ಶ್ರದ್ಧಾವಂತ ಹಾಗೂ ಗುರಿಸಾಧಕ ವಿಜ್ಞಾನಿಯಾಗಿದ್ದರು. ೧೮೮೦ ಹಾಗೂ ೧೯೩೦ರ ನಡುವಿನ ಕಾಲದಲ್ಲಿ ಅವರು ಗಳಿಸಿದ ವೈಜ್ಞಾನಿಕ-ತಾಂತ್ರಿಕ ಸಾಧನೆ ಅಪ್ರತಿಮವಾದುದು. ಅದೂ ಆ ಕಾಲದಲ್ಲಿ ಹಣಕಾಸಿನ ಹಾಗೂ ತಾಂತ್ರಿಕ ಪರಿಸ್ಥಿತಿಗಳು ಗಂಭೀರವಾಗಿದ್ದವು. ಜೊತೆಗೆ ಬ್ರಿಟಿಷ್ ಅಧಿಕಾರಿಗಳು ಒಡ್ಡುತ್ತಿದ್ದ ಅಡ್ಡಿ ಆತಂಕಗಳು ಬೇರೆ. ಅವರು ವಿವಿಧ ಇಲಾಖಾ ಮುಖ್ಯಸ್ಥರ ನಡುವೆ ಹಾಗೂ ಸಹೋದ್ಯೋಗಿಗಳ ನಡುವೆಯೇ ವೈಷಮ್ಯದ ಬೀಜ ಬಿತ್ತಿ ಕಾರ್ಯ ವೈಫಲ್ಯಗೊಳ್ಳಲು ಎಲ್ಲ ಯತ್ನ ಮಾಡುತ್ತಿದ್ದರು. ಇಂಥ ಪರಿಸ್ಥಿತಿಯಲ್ಲೂ ಜೆ. ಸಿ. ಬೋಸರು ಸಾಧಿಸಿದ ಯಶಸ್ಸು ಅಮೋಘವಾದುದೇ ಸರಿ. ಇದು ಅವರ ಪ್ರಕಟಿತ ಕೃತಿಗಳಲ್ಲಿ ವ್ಯಕ್ತಗೊಂಡಿದೆ. ಆದರೆ ಇದಕ್ಕೆ ಇನ್ನೂ ಒಂದು ಮುಖ ಉಂಟು ಎಂಬುದೂ ಗಮನಾರ್ಹ.

**ವರ್ಗಮೂಲ, ವೈಚಾರಿಕ ಹಿನ್ನೆಲೆ....**

ಜೆ. ಸಿ.ಬೋಸರು ಆ ಕಾಲದ ಬಂಗಾಳೀ ಮಧ್ಯಮ ವರ್ಗಕ್ಕೆ ಸೇರಿದ್ದು ವಸಾಹತುಶಾಹಿ ಗೊತ್ತುಪಡಿಸಿಕೊಟ್ಟ ಆ ವರ್ಗದ ಪರಿಮಿತಿಯೊಳಗೇ ಕೆಲಸ ಮಾಡಿದರು. ಅವರು ಯಾವತ್ತೂ ವಸಾಹತುಶಾಹಿ ಹಾಕಿಕೊಟ್ಟ ಗೊತ್ತು ಗುರಿಗಳನ್ನೇ ತಮ್ಮ ಮಾರ್ಗದರ್ಶಿಯನ್ನಾಗಿ ಇರಿಸಿಕೊಂಡಿದ್ದರು. ಯುರೋಪಿನ ಉದಾರವಾದದಿಂದ ಪ್ರಭಾವಿತರಾಗಿದ್ದಾಗಲೇ ಅವರು ಅದಕ್ಕೂ ಯೂರೋಪಿನ ಕೈಗಾರಿಕಾ ಹಾಗೂ ಹಣಕಾಸು ಬಂಡವಾಳದ ಹಿತಕ್ಕೂ ನಡುವೆ ಇದ್ದ ವೈಪರೀತ್ಯದಿಂದಲೂ ಕಳವಳಕ್ಕೊಳಗಾಗಿದ್ದರು. ಬ್ರಿಟಿಷರು ಏನು ಮಾಡಬಲ್ಲರೋ ಅದನ್ನು ನಾವು ಇನ್ನೂ ಹೆಚ್ಚು ಚೆನ್ನಾಗಿ ಮಾಡಬಲ್ಲೆವು ಎಂಬ ಬಂಗಾಳೀ ಆತ್ಮಗೌರವದ ಭಾವನೆಗೆ ಮಾರುಹೋಗಿದ್ದಾಗಲೇ ಜೆ. ಸಿ. ಬೋಸ್‌ರು ಮಹಾತ್ಮ ಗಾಂಧಿಯವರ ಅಸಹಕಾರ ಮತ್ತಿತರ ಚಳುವಳಿಗಳಿಂದ ವಿಚಲಿತರೂ ಆಗಿದ್ದರು.

ಜೆ. ಸಿ. ಬೋಸ್‌ರು ೧೮೫೮ರಲ್ಲಿ ಪೂರ್ವ ಬಂಗಾಳದ ಮೈಮೆನ್‌ಸಿಂಗ್ ನಗರದಲ್ಲಿ ಮಧ್ಯಮವರ್ಗದ ಬಂಗಾಳೀ ಕುಟುಂಬವೊಂದರಲ್ಲಿ ಜನಿಸಿದರು. ಆ ಕಾಲದಲ್ಲಿ ಅಲ್ಲಿ ಮುಸಲ್ಮಾನರಲ್ಲದವರೇ ಹೆಚ್ಚಾಗಿ ವಾಸಿಸುತ್ತಿದ್ದರು. ಕೃಷಿಯಿಂದಲೂ ವಾಣಿಜ್ಯ ಬೆಳೆಗಳಿಂದಲೂ ಹೆಚ್ಚಿನ ಲಾಭ ಗಳಿಸುವುದೇ ಅಂದಿನ ವಸಾಹತು ಆಡಳಿತದ ಎಲ್ಲ ಗುರಿಯಾಗಿದ್ದಿತು. ಇದಕ್ಕೆ ನೆರವಾಗುವಂತೆ ಬಾಬು ಅಥವಾ ಭದ್ರಲೋಕ್ ಮಧ್ಯಮ ವರ್ಗದ ಅಧಿಕಾರಿಗಳನ್ನು ಬೆಳೆಸುವಂತೆ ಅವರು ಶೈಕ್ಷಣಿಕ ಹಾಗೂ ವಿದ್ಯಾಭ್ಯಾಸ ವ್ಯವಸ್ಥೆ ರೂಪಿಸಿದ್ದರು. ಆರ್ಥಿಕ ಕ್ಷೇತ್ರದಲ್ಲಿ ಜಮೀನ್ದಾರಿ ಪದ್ಧತಿಯನ್ನು ಜಾರಿಗೆ ತಂದು ಹಿಂದೂ ಜಮೀನ್ದಾರರಿಂದ ಮುಸ್ಲಿಮ್ ರೈತರ ಶೋಷಣೆಗೆ ದಾರಿ ಮಾಡಿಕೊಟ್ಟಿದ್ದರು. ಭದ್ರಲೋಕ್ ಮಧ್ಯಮವರ್ಗದ ಜನ ಗುಮಾಸ್ತಗಿರಿ ಕೆಲಸ ಮಾಡುತ್ತ ಬ್ರಿಟಿಷರಿಂದ ಅನ್ನ ಸಂಪಾದಿಸಿಕೊಳ್ಳುವುದನ್ನೇ ತಮ್ಮೆಲ್ಲ ಸೈದ್ಧಾಂತಿಕ ಸೂತ್ರವನ್ನಾಗಿ ಮಾಡಿಕೊಂಡಿದ್ದರು.

ಬೋಸ್‌ರ ಕುಟುಂಬವೂ ಈ ಮಧ್ಯಮ ವರ್ಗದ ವೈಚಾರಿಕ ಪರಿಮಿತಿಯೊಳಗೇ ಬೆಳೆಯುತ್ತಿದ್ದಿತು. ಬೋಸ್‌ರ ತಂದೆ ಭಗಬಾನ್ ಬೋಸ್ ೧೮೪೩ರಲ್ಲಿ ಮೈಮೆನ್ ಸಿಂಗ್‌ನಲ್ಲಿ ಸ್ಥಾಪಿತವಾದ ಮೊದಲ ಸರಕಾರಿ ಆಂಗ್ಲಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರು. ಅವರೂ ಅವರ ಪತ್ನಿಯೂ 'ಬ್ರಹ್ಮೋ ಸಮಾಜ' ಸೇರಿ ಕಲಕತ್ತೆಗೆ ಹೋದರು. ಅಲ್ಲಿ ಹೆಚ್ಚಿನ ಶಿಕ್ಷಣ ಪಡೆದರು. ೧೮೫೮ರಲ್ಲಿ ಡೆಪ್ಯೂಟಿ ಕಲೆಕ್ಟರಾದ ಭಗಬಾನ್ ಬೋಸ್‌ರನ್ನು ಪಶ್ಚಿಮ ಬಂಗಾಳದ ಬರ್ದ್‌ವಾನ್ ಜಿಲ್ಲೆಗೆ ವರ್ಗ ಮಾಡಲಾಯಿತು. ಹೀಗಾಗಿ ಜಗದೀಶ್ ಬೋಸರು ಕಲಕತ್ತೆಯಲ್ಲಿ ಶಾಲಾಭ್ಯಾಸ ಮಾಡಿ ೧೮೮೦ರಲ್ಲಿ ಸೇಂಟ್ ಕ್ಸೇವಿಯರ್ ಕಾಲೇಜಿನಿಂದ ವಿಜ್ಞಾನದಲ್ಲಿ ಬಿ.ಎ. ಡಿಗ್ರಿ ಪಡೆದರು. ಹೀಗೆ ಅವರ ವೈಚಾರಿಕ ನೆಲೆ ಬಂಗಾಳೀ ಮಧ್ಯಮ ವರ್ಗದ ಪ್ರಮಿತಿಗಳೊಳಗೆ ಸ್ಥಾಪಿತಗೊಂಡಿತು. ಅವರು ತಮ್ಮ ಜೀವನಾದ್ಯಂತ ಈ ಪ್ರಮಿತಿಗಳೊಳಗೇ ಕೆಲಸ ಮಾಡಿದರು. ಅದನ್ನು ಮೀರಿ ಮೇಲೇರಲೂ ಇಲ್ಲ, ಅದರ ವಿರುದ್ಧ ಬಂಡಾಯ ಏಳಲೂ ಇಲ್ಲ.

**ಸಮಕಾಲೀನ ಮಧ್ಯಮ ವರ್ಗದ ಸೀಮಿತ ಸಿದ್ಧಾಂತ**

ಆ ಕಾಲದ ವೈಜ್ಞಾನಿಕ ಬುದ್ಧಿಜೀವಿಗಳ ಸಿದ್ಧಾಂತದ ಎರಡು ಲಕ್ಷಣಗಳು ಗಮನಾರ್ಹ. ಒಂದು, ವಿಜ್ಞಾನವು ದೇಶದ ಬೆಳವಣಿಗೆಯಲ್ಲಿ ಧನಾತ್ಮಕ ಪಾತ್ರ ನಿರ್ವಹಿಸುತ್ತದೆ ಎಂಬ ನಂಬಿಕೆ. ಎರಡನೆಯದು – ತಾವೇ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರೂ ತಮ್ಮ ಸುತ್ತಮುತ್ತ ಆರ್ಥಿಕ ಹಾಗೂ ಸಾಮಾಜಿಕ ವೈಪರೀತ್ಯಗಳಿದ್ದವು ಎಂಬುದರ ಅರಿವು ಅವರಲ್ಲಿದ್ದುದು. ಅವರು ಬೆಳವಣಿಗೆಯನ್ನು ಸಾಮ್ರಾಜ್ಯವಾದದ ಚೌಕಟ್ಟಿನೊಳಗಷ್ಟೇ ಕಂಡುಕೊಳ್ಳುತ್ತಿದ್ದರು. ಜಗದೀಶ್ ಚಂದ್ರ ಬೋಸರು ಇಂತಹ ವೈಜ್ಞಾನಿಕ ಸಮುದಾಯದ ಅಧ್ವರ್ಯುವಾಗಿದ್ದರು.

ಅವರು ಭಾರತೀಯ ನೆಲದ ಮೇಲೆ ವೈಜ್ಞಾನಿಕ ಶಿಕ್ಷಣಕ್ಕೆ ಅಪಾರ ಪ್ರಾಮುಖ್ಯ ನೀಡಿದರು. ಅದಕ್ಕಾಗಿಯೇ ಕಲಕತ್ತದಲ್ಲಿ 'ಬೋಸ್ ಇನ್‌ಸ್ಟಿಟ್ಯೂಟ್' ಸಂಸ್ಥಾಪಿಸಿದರು. ತಮ್ಮ ತಂದೆಯಂತೆ ಅವರೂ ಅಂಧಶ್ರದ್ಧೆಯ ವಿರುದ್ಧ ವೈಚಾರಿಕ ಮನೋಧರ್ಮಕ್ಕಾಗಿ ಹೋರಾಟ ನಡೆಸಿದರು. ಸ್ಥಳೀಯ ಭಾಷಾ ಶಿಕ್ಷಣಕ್ಕೂ ಹಿಂದೂ- ಮುಸ್ಲಿಮ್ ಏಕತೆಗೂ ಪ್ರೋತ್ಸಾಹ ನೀಡಿದರು. ತಂದೆಯಂತೆ ಅವರೂ ಭಾರತದ ಕೃಷಿ ಹಾಗೂ ಕೈಗಾರಿಕಾ ಬೆಳವಣಿಗೆಗೆ ವೈಜ್ಞಾನಿಕ ಹಾಗೂ ತಾಂತ್ರಿಕ ಶಿಕ್ಷಣ ಅತ್ಯವಶ್ಯ ಎಂದು ಪ್ರತಿಪಾದಿಸಿ ಅದಕ್ಕಾಗಿ ಶ್ರಮಿಸಿದರು.



ಶ್ರೇಷ್ಠ ವಿಜ್ಞಾನಿಯಾಗಿ ಅವರ ಅಪರಿಮಿತ ಯಶಸ್ಸುಗಳನ್ನು ನಿರ್ಲಕ್ಷಿಸಿದರೂ ಮೇಲಿನ ಅವರ ಸಾಧನೆಯೇ ಅವರನ್ನು ದೇಶದ ಅಗ್ರ ಶ್ರೇಣಿಯ ದೇಶಭಕ್ತರ ಸಾಲಿನಲ್ಲಿರಿಸಿದೆ. ೧೯೦೩ರಲ್ಲಿ ವಿಕ್ರಮ್‌ಪೂರ್‌ನ ನಾಗರಿಕರನ್ನು ಉದ್ದೇಶಿಸಿ ಅವರು ಹೇಳಿದರು: ''ಸುಶಿಕ್ಷಿತರಾದ ನಾವು ನಮ್ಮ ದೃಷ್ಟಿಯನ್ನು ಶ್ರೀಮಂತ ನಗರಗಳಿಂದ ಬಡತನದಲ್ಲಿ ಮುಳುಗಿರುವ ಹಳ್ಳಿಗಳ ಕಡೆಗೆ ಹರಿಸಬೇಕು. ಹಳ್ಳಿಗಳ ಜನರು ಹಸಿವಿನಿಂದ ಬಳಲಿ ಬೆಂಡಾಗಿದ್ದಾರೆ. ಆದರೆ, ಅವರ ಶ್ರಮವೇ ರಾಷ್ಟ್ರದ ಸಂಪತ್ತನ್ನು ಸೃಷ್ಟಿಸುತ್ತಿರುವುದು, ದೇಶದ ಏಳಿಗೆಗೆ ಕಾರಣವಾಗಿರುವುದು... ಕತ್ತಲಿನ ಆವರಣ ತೊಲಗಿಸಬೇಕಾದರೆ ನಾವು ಜಡತೆ, ಸ್ವಾರ್ಥಪರತೆ ಹಾಗೂ ಅಸೂಯೆಯನ್ನು ಬಿಟ್ಟುಕೊಡಬೇಕು.'' ಹೀಗೆ ಅವರು ಮತ್ತೆ ಮತ್ತೆ ಹಸಿವು, ಆರ್ಥಿಕ ಹಿಂದುಳಿದಿರುವಿಕೆ ಹಾಗೂ

ನಿರುದ್ಯೋಗಿಗಳನ್ನು ಉಲ್ಲೇಖ ಮಾಡಿ ಅವೇ ದೇಶದ ಆರ್ಥಿಕ ಪ್ರಗತಿಗೆ ಅಡ್ಡಿಯಾಗಿರುವ ಮೂರು ಪೀಡೆಗಳು ಎಂದು ಒತ್ತಿ ಹೇಳುತ್ತಿದ್ದರು. ಇದು ಈ ದೇಶಕ್ಕಷ್ಟೆ ಸೀಮಿತವಾದುದಲ್ಲ, ಆದರೆ ಸಾರ್ವತ್ರಿಕವಾದುದು ಎಂಬ ಅಂಶವನ್ನೂ ತಮ್ಮ ಭಾಷಣಗಳಲ್ಲಿ ಎತ್ತಿ ತೋರಿಸುತ್ತಿದ್ದರು.

ದೇಶದ ಹಿಂದುಳಿದಿರುವಿಕೆಯನ್ನು ಹೋಗಲಾಡಿಸಲು ಮೊದಲು ಜನರ ಸಮಸ್ಯೆಗಳನ್ನು ಪರಿಹರಿಸಬೇಕು, ಅದನ್ನು ಸಾಧಿಸುವ ಮಾರ್ಗಗಳಲ್ಲಿ ಒಂದು - ''ಸಂಘರ್ಷ'' ಹಾಗೂ ''ಕ್ರಾಂತಿ'' ಎಂಬುದನ್ನೂ ಅವರು ೧೯೨೧ರ ಹೊತ್ತಿಗೆ (ಅಂದರೆ ರಷ್ಯನ್ ಕ್ರಾಂತಿಯ ನಂತರ) ಅರಿತಿದ್ದರು. ೧೯೨೫ರಲ್ಲಿ ರೋಟರಿ ಕ್ಲಬ್‌ನ್ನು ಉದ್ದೇಶಿಸಿ ಮಾಡಿದ ಭಾಷಣದಲ್ಲಿ, ''....ಜನರೆಲ್ಲರ ಸಮಾನತೆ ಒಂದು ಸಹಜ ಪ್ರಕ್ರಿಯೆ. ಇದಕ್ಕೆ ಅಡ್ಡಿಪಡಿಸಿದರೆ ಅಪಾಯಕಾರೀ ಬಿಕ್ಕಟ್ಟು ಉಂಟಾಗಿ ಅದು ಸಿಡಿತದಲ್ಲಿ ಕೊನೆಗಾಣುವುದು'' ಎಂದು ಹೇಳಿದರು. ಅದನ್ನು ಅವರು ''ಕ್ರಾಂತಿ ಎಂದು ಕರೆಯಲಾಗುವ ಮಾನವ ಸಂಘರ್ಷ'' ಎಂದು ಕರೆದರು. ಇದೇ ಭಾಷಣದಲ್ಲಿ ಅವರು 'ಉಳ್ಳವರ' ಹಾಗೂ 'ಇಲ್ಲದವರ' ನಡುವಿನ ಘರ್ಷಣೆಯನ್ನೂ ಉಲ್ಲೇಖಿಸಿದ್ದರು.

ಇಷ್ಟೊಂದು ಸಾಮಾಜಿಕ ಪ್ರಜ್ಞೆ ಹಾಗೂ ವಿಚಾರಶಕ್ತಿಯನ್ನು ತೋರಿದ ಮೇಲೆ ಸಹಜವಾಗಿಯೇ ಅವರ ಮುಂದಿನ ಹೆಜ್ಜೆ ಸಾಮ್ರಾಜ್ಯಶಾಹಿಯ ಆಧಾರಕ್ಕೆ ಸವಾಲು ಹಾಕುವುದಾಗಿದ್ದಿತು. ಬ್ರಿಟಿಷರನ್ನು ಸಾಮ್ರಾಜ್ಯಶಾಹಿ ದಬ್ಬಾಳಿಕೆಗಾರರನ್ನಾಗಿ ಘೋಷಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ಆಗ್ರಹಿಸಬೇಕಾಗಿದ್ದಿತು. ತಿಲಕ್, ಲಾಜಪತ್ ರಾಯ್, ಗಾಂಧಿ, ನೆಹರೂ ಮತ್ತಿತರರು ಮಾಡಿದುದು ಇದನ್ನೇ. ಇದಕ್ಕೂ ಮುಂದಿನ ಹೆಜ್ಜೆ ಭಗತ್ ಸಿಂಗ್, ಸುಭಾಷ್ ಬೋಸ್, ಡಾಂಗೆ ಮತ್ತಿತರರು ಮಾಡಿದಂತೆ, ವರ್ಗ ಹೋರಾಟಕ್ಕೆ ಅಣಿಯಾಗುವುದಾಗಿದ್ದಿತು.

### ಐರೋಪ್ಯ ಉದಾರವಾದ ಹಾಗೂ ಸುಧಾರಣಾವಾದಕ್ಕೆ ಬೆಂಬಲ

ಆದರೆ ನಿಜಕ್ಕೂ ಆದುದೆಂದರೆ - ಬೋಸ್‌ರು ಈ ''ತರ್ಕಬದ್ಧ ಹೆಜ್ಜೆ''ಗಳನ್ನು ಬಿಟ್ಟುಕೊಟ್ಟರು. ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಹಾಗೂ ಜಮೀನುದಾರರೊಂದಿಗೆ ಘರ್ಷಣೆಯನ್ನು ಬಿಟ್ಟುಕೊಟ್ಟರು. ಮಧ್ಯಮ ವರ್ಗದ ರಾಜಿ ಮಾಡಿಕೊಳ್ಳುವ ಸೈದ್ಧಾಂತಿಕ ಮಿತಿಗಳಿಗೆ ತಮ್ಮನ್ನು ಒಪ್ಪಿಸಿಕೊಂಡರು. ಐರೋಪ್ಯ ಉದಾರವಾದದ ಸುಧಾರಣಾವಾದಿ ಮಾರ್ಗ ಹಿಡಿದರು. ಜನರೆಲ್ಲ ಹುಟ್ಟುತ್ತಲೇ ಸಮಾನರು, ಪರಿಸ್ಥಿತಿಗಳಷ್ಟೇ ಅವರನ್ನು ಅಸಮಾನರನ್ನಾಗಿ ಮಾಡುತ್ತವೆ. ಆದ್ದರಿಂದ ಶಿಕ್ಷಣಕ್ಕೆ ಹೆಚ್ಚಿನ ಒತ್ತು ನೀಡಬೇಕು, ಉತ್ಪಾದನೆಯನ್ನು ಹೆಚ್ಚಿಸಬೇಕು, ಆ ಮೂಲಕ ಅಸಮಾನತೆಯನ್ನು ತೊಡೆದುಹಾಕಬೇಕು ಎಂಬ ಲಾಕ್ (೧೬೩೨-೧೭೦೪) ಪ್ರತಿಪಾದಿಸಿದಂಥ ಉದಾರವಾದದ ಅನುಯಾಯಿಯಾದರು. ಇಂಥವರು ಸಾಮ್ರಾಜ್ಯವಾದದ ಬೆಂಬಲಿಗರೇನೂ ಆಗಿರಲಿಲ್ಲ ಮತ್ತು ಬಲೋದ್ಬಂಧದಿಂದ ಲಾಭಗಳಿಸುವುದರ ವಿರೋಧವಿದ್ದರು. ಅವರು ಮುಕ್ತ ಸ್ಪರ್ಧೆಯ ಪರವಾಗಿದ್ದರು. ಆದರೆ, ಈಸ್ಟ್ ಇಂಡಿಯಾ ಕಂಪನಿ ಹಾಗೂ ಭಾರತೀಯ ರೈತರ ನಡುವಿನ ಸ್ಪರ್ಧೆಯಲ್ಲಿ ಎಷ್ಟು ಮುಕ್ತತೆ ಇದ್ದಿತು ಎಂಬುದನ್ನವರು ಎಂದೂ ಪ್ರಶ್ನಿಸಲಿಲ್ಲ. ಅವರ ದೃಷ್ಟಿಯಲ್ಲಿ ವರ್ಗ ಸಂಬಂಧಗಳು ಗೌಣ. ವಿಜ್ಞಾನ, ಉದ್ಯಮಶೀಲತೆ, ಇವೇ ಬೆಳವಣಿಗೆಗೆ ಅತ್ಯವಶ್ಯವಾದ ಅಂಶಗಳು. ಅಂಧಶ್ರದ್ಧೆ, ಧರ್ಮ, ರಾಜಪ್ರಭುತ್ವ ಇತ್ಯಾದಿಗಳ ಬಂಧನಕ್ಕೊಳಗಾಗದೆ ನಾಗರಿಕತೆ ಮುಂದುವರಿದರೆ ಸಾಕು, ಅದರಿಂದ ಯಾವ ವರ್ಗಕ್ಕೆ ಲಾಭ, ಯಾವ ವರ್ಗಕ್ಕೆ ನಷ್ಟ ಎನ್ನುವುದು ಮುಖ್ಯವಲ್ಲ. ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೆಲಸಕ್ಕಿದ್ದಂಥ ಜಾನ್ ಸ್ಟುವರ್ಟ್ ಮಿಲ್ ಹಾಗೂ ಜೇಮ್ಸ್ ಮಿಲ್‌ರಂಥ ಸಾಮ್ರಾಜ್ಯವಾದಿ ಉದಾರವಾದಿಗಳ ವಿಚಾರದಿಂದ ಬೋಸ್ ಪ್ರಭಾವಿತರಾಗಿದ್ದರು. ಜೊತೆಗೆ ಡೇವಿಡ್ ರಿಕಾರ್ಡೊರಂಥ ಬ್ರಿಟಿಷ್ ಅರ್ಥಶಾಸ್ತ್ರಜ್ಞರ ಪ್ರಭಾವವೂ ಅವರ ಮೇಲೆ ಸಾಕಷ್ಟಿದ್ದಿತು.

ಆದ್ದರಿಂದಲೇ ದೇಶವು ಉತ್ತಮ ಸಾಮಾನುಗಳನ್ನು ಸಮರ್ಥವಾಗಿ (ವೈಜ್ಞಾನಿಕವಾಗಿ) ಉತ್ಪಾದಿಸಿ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರುವ ಮೂಲಕವಷ್ಟೇ ಏಳಿಗೆ ಸಾಧಿಸಬಲ್ಲದು, ಮುಕ್ತ ವ್ಯಾಪಾರವು ಜಾಗತಿಕ ಸಂಪತ್ತನ್ನೂ ಮಾನವ ಸಂಕ್ಷೇಮವನ್ನೂ ಪರಮಾವಧಿಗೆ ಏರಿಸುವುದಲ್ಲದೆ ರಾಜ್ಯಗಳ ನಡುವೆ ಶಾಂತಿ ಸಹಕಾರಗಳಿಗೂ ದಾರಿ ಮಾಡಿಕೊಡುವುವೆಂಬ ಭಾವನೆ ಬೋಸ್‌ರವರಲ್ಲಿ ಬೇರೂರಿದ್ದಿತು.

### ಪ್ರಕೃತಿಯ ಬಗೆಗೆ ಭೌತವಾದಿ ದೃಷ್ಟಿಕೋನ

ಬೋಸ್‌ರವರ ವೈಜ್ಞಾನಿಕ ಕಾರ್ಯ ಚಟುವಟಿಕೆಗಳೆಲ್ಲ ದೃಢವಾದ ಭೌತವಾದಿ ಆಧಾರದ ಮೇಲೆ ನಿಂತಿದ್ದವು. ವಸ್ತು ಪ್ರಾಧಾನ್ಯತೆ, ವೈವಿಧ್ಯತೆಯಲ್ಲಿ ಏಕತೆ, ಗುಣ ಪ್ರಮಾಣಗಳ ನಡುವಿನ ಸಂಬಂಧ - ಇವು ಅವರ ಚಿಂತನೆಯ ಮೂರು ಮುಖ್ಯಾಂಶಗಳಾಗಿದ್ದವು. ೧೯೦೧ರಲ್ಲಿ ಲಂಡನ್ನಿನಲ್ಲಿ 'ಶುಕ್ರವಾರ ಸಂಜೆ ಸಲ್ಲಾಪ'ದಲ್ಲಿ ಸಸ್ಯಗಳ ಪ್ರತಿಕ್ರಿಯೆ ಕುರಿತ ತಮ್ಮ ವೈಜ್ಞಾನಿಕ ಕಾರ್ಯದ ಸಾರಾಂಶ ತಿಳಿಸುತ್ತ ಬೋಸ್ ಹೇಳಿದರು: ''ಜೀವಂತ ಹಾಗೂ ನಿರ್ಜೀವ ವಸ್ತುಗಳೆರಡರಲ್ಲೂ ನಾವು ಆಯಾಸದಿಂದ ನಿಷ್ಕ್ರಿಯಗೊಳ್ಳುವ, ಉತ್ತೇಜಕಗಳಿಂದ ಉದ್ರೇಕಗೊಳ್ಳುವ, ವಿಷ ಪದಾರ್ಥಗಳಿಂದ ಮರಣಿಸುವ

ಒಂದೇ ರೀತಿಯ ಪ್ರತಿಕ್ರಿಯೆಯನ್ನು ಕಾಣುತ್ತೇವೆ. ಆದ್ದರಿಂದ, 'ಇಲ್ಲಿ ಭೌತ ಪ್ರಕ್ರಿಯೆ ನಿಲ್ಲುತ್ತದೆ, ಅಲ್ಲಿ ಶಾರೀರಿಕ ಪ್ರಕ್ರಿಯೆ ಪ್ರಾರಂಭಿಸುತ್ತದೆ' ಎಂದು ಬೇರ್ಪಡಿಸುವ ಗೆರೆ ಎಳೆಯುವುದು ಹೇಗೆ ಸಾಧ್ಯ ? ಅಂಥ ಯಾವುವೇ ತಡೆಗಟ್ಟುಗಳಿಲ್ಲ.... ಹೊಸತಾದ ಹಾಗೂ ಸಾಮರಸ್ಯದಿಂದ ಕೂಡಿದ ಸರಳತೆಯಲ್ಲಿ ಪರಸ್ಪರ ವಿರೋಧಿ ಅಥವಾ ಯಾದೃಚ್ಛಿಕ ಎಂದು ತೋರುವಂಥವುಗಳನ್ನೂ ಒಟ್ಟಿಗೆ ಸೇರಿಸಿಕೊಳ್ಳುವ ಮೂಲಕವಷ್ಟೇ ವಿಜ್ಞಾನದಲ್ಲಿ ಪ್ರತಿಯೊಂದು ಹೆಜ್ಜೆಯನ್ನೂ ಇಡಲಾಗಿದೆ. ವೈವಿಧ್ಯತೆಯಲ್ಲಿ ಏಕತೆಯನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳುವುದರಲ್ಲೇ ಯಾವತ್ತೂ ವಿಜ್ಞಾನದ ಮುನ್ನಡೆ ಸಾಗಿದೆ.''

ತೀವ್ರತರವಾದ ಆರ್ಥಿಕ ಸಂಕಟದಿಂದಷ್ಟೇ ಅಶಾಂತಿ ಮೂಡುತ್ತದೆ. ಇದು ಸರಕಾರವನ್ನು ಅಸ್ಥಿರಗೊಳಿಸುತ್ತದೆ. ಜಗತ್ತಿನ ಎಲ್ಲೆಡೆಗಳಲ್ಲಿನಂತೆ ಭಾರತದಲ್ಲೂ ಉತ್ಪಾದನಾ ಸಾಮರ್ಥ್ಯವನ್ನು ಪೂರ್ಣವಾಗಿ ವಿಕಾಸಗೊಳಿಸದಿರುವುದೇ ಈ ಅಶಾಂತಿಗೆ ಕಾರಣ. ಭಾರತದಲ್ಲಿ ಅನೇಕ ಪ್ರಾಂತಗಳಲ್ಲಿರುವಂತೆ ಬಂಗಾಲದಲ್ಲೂ ಅಗಾಧ ಪ್ರಮಾಣದಲ್ಲಿ ಮಣ್ಣಿನ ಹಾಗೂ ಖನಿಜ ಸಂಪನ್ಮೂಲಗಳಿವೆ. ಪ್ರಕೃತಿಯ ಈ ವರದಾನವನ್ನು ಗರಿಷ್ಠ ಪ್ರಮಾಣದಲ್ಲಿ ಬಳಕೆಗೆ ತಂದಲ್ಲಿ ಭಾರತವೂ ಜಗತ್ತಿನ ಅತ್ಯಂತ ಸಿರಿವಂತ ರಾಷ್ಟ್ರವಾಗಬಹುದು... ಇದಕ್ಕೆ ಸಮರ್ಥವಾಗಿ ನಡೆಸುವ ವಿದ್ಯಾಶಾಲೆಗಳಲ್ಲಿ ಅಧಿಕ ಸಂಖ್ಯೆಯ ಯುವಜನರಿಗೆ ಅತ್ಯಂತ ಮುಂದುವರಿದ ವೈಜ್ಞಾನಿಕ ವಿಧಾನಗಳಲ್ಲಿ ಸೂಕ್ತ ತರಬೇತು ನೀಡಬೇಕು ಎಂಬ ವಿಚಾರವನ್ನು ಬೋಸ್ ಪದೇ ಪದೇ ತಮ್ಮೆಲ್ಲ ಉಪನ್ಯಾಸ ಭಾಷಣಗಳಲ್ಲೂ ಒತ್ತಿ ಹೇಳುತ್ತಿದ್ದರು. ವೈಜ್ಞಾನಿಕ ಶಿಕ್ಷಣ ಹಾಗೂ ದೇಶಭಕ್ತ ಭಾವನೆಗಳಿಗೆ ಬೋಸ್ ಯಾವತ್ತೂ ಆದ್ಯತೆ ನೀಡಿದ್ದರು.

**ಬೋಸ್ ಮತ್ತು ಬ್ರಿಟಿಷ್ ಸಾಮ್ರಾಜ್ಯ**

ಇಂಥ ವಿಚಾರ ಹೊಂದಿದ್ದ ಬೋಸ್ ಸ್ಪಷ್ಟವಾಗಿಯೇ ಬ್ರಿಟಿಷ್ ಆಳ್ವಿಕೆಯನ್ನಾಗಲೀ ಸಾಮ್ರಾಜ್ಯವಾದವನ್ನಾಗಲೀ ವಿರೋಧಿಸುವ ಆವಶ್ಯಕತೆಯನ್ನು ಕಂಡುಕೊಳ್ಳಲೇ ಇಲ್ಲ. ಉದಾರವಾದಿ ಸಾಮ್ರಾಜ್ಯಶಾಹಿ ಚೌಕಟ್ಟಿನೊಳಗೇ ಭಾರತ ಪ್ರಗತಿ ಸಾಧಿಸಬಲ್ಲದು ಎಂದವರು ನಿಜಕ್ಕೂ ನಂಬಿದ್ದರು. ಬ್ರಿಟಿಷ್ ಆಡಳಿತದಡಿ ವ್ಯವಸ್ಥಾಬದ್ಧ ಪ್ರಗತಿ ಆಗುತ್ತಿದೆ, ಅದು ಒಳ್ಳೆಯದೇ. ಆದರೆ ಬ್ರಿಟಿಷರು ಭಾರತಕ್ಕೆ ಹೆಚ್ಚು ಸಮರ್ಥವಾದ ವೈಜ್ಞಾನಿಕ ಅಧಿರಚನೆ ನಿರ್ಮಿಸಿಕೊಳ್ಳಲು ನೆರವಾಗಬೇಕು, ಅಷ್ಟೆ. ಇದು ಬಿಟ್ಟರೆ 'ಕ್ರಾಂತಿ'ಯೇ ಬೇರೆ ಮಾರ್ಗ. ಆದರೆ ಅದು ಅರಾಜಕತೆಗಷ್ಟೇ ದಾರಿಮಾಡಿಕೊಡುತ್ತದೆ ಎಂದು ಬೋಸ್ ಭಾವಿಸಿದ್ದರು. ಕ್ರಮೇಣ ಪರಿವರ್ತನೆಯ ಈ ಭಾವನೆಯು, ಉತ್ಪಾದನಾ ಸಾಧನಗಳ ಮೇಲಿ ಒಡೆತನವಿಲ್ಲದಿದ್ದರೂ ತಮಗೆ ಅನುದಿನದ ಅನ್ನ ಖಚಿತಪಡಿಸಿಕೊಡುತ್ತಿದ್ದಂಥ ಯಥಾಸ್ಥಿತಿಯ ಮುಂದುವರಿಕೆಯನ್ನೇ ಸಮರ್ಥಿಸುವ ಮಧ್ಯಮ ವರ್ಗದ ಚಿಂತನೆಗೆ ಅನುಗುಣವಾಗಿದ್ದಿತು.

ಪಾಟ್ನಾ ವಿಶ್ವವಿದ್ಯಾಲಯದಲ್ಲಿ ಮಾಡಿದ ಘಟಿಕೋತ್ಸವ ಭಾಷಣದಲ್ಲಿ ಬೋಸ್‌ರವರು ಭಾರತದಲ್ಲಿ ಹೆಚ್ಚು ಉತ್ತಮ ವೈಜ್ಞಾನಿಕ ವಿದ್ಯಾಸಂಸ್ಥೆಗಳ ಅವಶ್ಯಕತೆಯ ಬಗ್ಗೆ ಮಾತನಾಡುತ್ತ ಹೇಳಿದರು: ''ಅಂಥ ಕಾರ್ಯಕ್ರಮ ಈಡೇರಿಸಲು ದೂರದೃಷ್ಟಿಯ ಸಮಗ್ರ ರಾಜ್ಯನೀತಿ ಅವಶ್ಯ... ಭಾರತಕ್ಕೆ ಲಾಭದಾಯಕವಾಗುವುದಾದರೆ ಎಷ್ಟೇ ಹಣ ಖರ್ಚು ಮಾಡಲೂ ದೇಶ ಹಿಂದೆಗೆಯದು.... ಆಂಗ್ಲರೂ ಭಾರತೀಯರೂ ಸಹಕರಿಸಿ ಪರಸ್ಪರರಿಗೆ ಪ್ರಯೋಜನ ವಾಗುವಂತೆ ದುಡಿಯಲು ಅಪಾರ ಅವಕಾಶಗಳಿವೆ... ಆದರೆ ನಾವು ಪರಸ್ಪರ ಅಪನಂಬಿಕೆ ಯಿಂದ ನಿಶ್ಚೇಷ್ಟಿತರಾಗಿದ್ದೇವೆ. ಭಾರತದ ಹಿತಗಳಿಗೆ ಎಷ್ಟು ಮಾತ್ರವೂ ಸ್ನೇಹಪರವಲ್ಲದ ಇತರ ರಾಷ್ಟ್ರಗಳು ಇದರ ಪ್ರಯೋಜನ ಪಡೆಯುತ್ತಿವೆ...''

**ವರ್ಗಪ್ರಜ್ಞೆ**

ಬೋಸ್‌ರವರ ವೈಜ್ಞಾನಿಕ ಪ್ರಾಯೋಜನೆ ವಿಫಲಗೊಳ್ಳುವುದಕ್ಕೆ ಅವರ ವರ್ಗ ಪ್ರಜ್ಞೆಯೇ ಮೂಲ ಕಾರಣವೆನ್ನಬಹುದು. ಅವರ ವರ್ಗಪ್ರಜ್ಞೆಯು ಆಂತರಿಕವಾಗಿ ಬಂಡವಾಳವಾದದ ಪರವಾಗಿದ್ದಿತು, ಬಾಹ್ಯವಾಗಿ ಸಾಮ್ರಾಜ್ಯವಾದದ ಪರವಾಗಿದ್ದು ಸುಧಾರಣಾವಾದದ ಛಾಯೆ ಹೊಂದಿದ್ದಿತು.

ಅವರ ಪ್ರಾಯೋಜನೆಗಳಿಗೆ ಯಾವತ್ತೂ ಹಣದ ಕೊರತೆ ಇರುತ್ತಿದ್ದಿತು. ವಸಾಹತು ಸರಕಾರ ಸಾಕಷ್ಟು ಸಹಾಯಧನ ನೀಡುತ್ತಿರಲಿಲ್ಲ, ಹಾಗಾಗಿ ಅವರು ಸದಾ ಶ್ರೀಮಂತ ಜಮೀನ್ದಾರರ ಮೊರೆ ಹೋಗಬೇಕಿದ್ದಿತು. ಜಮೀನ್ದಾರರು ಬಡರೈತರನ್ನು ಉಗ್ರವಾಗಿ




ಶೋಷಿಸುತ್ತಿದ್ದುದರ ಅರಿವು ಇದ್ದರೂ ಬೋಸ್‌ರವರು ಜಮೀನ್ದಾರರ ವಿರುದ್ಧ ಚಕಾರವೆತ್ತದಿದ್ದುದಕ್ಕೆ ಇದೇ ಕಾರಣವಿರಬಹುದು. ಅವರ ಬರವಣಿಗೆಗಳಲ್ಲೂ ಇಂಡಿಗೋ ಬಂಡಾಯದ ಬಗೆಗಾಗಲೀ ಪಾಬ್ನಾ ಬಂಡಾಯದ ಬಗೆಗಾಗಲೀ ಉಲ್ಲೇಖ ಕೂಡ ಇಲ್ಲದಿರುವುದು ಇದಕ್ಕೆ ಸಮರ್ಥನೆ ನೀಡುತ್ತದೆ.

ಅದೇ ರೀತಿ ಅವರು 'ಸತಿ', 'ವಿಧವಾ ವಿವಾಹ' ಮುಂತಾದ ಸಾಮಾಜಿಕ ಸಮಸ್ಯೆಗಳ ಬಗೆಗೂ, ಈಶ್ವರಚಂದ್ರ ವಿದ್ಯಾಸಾಗರರಂಥವರು ಪ್ರಬಲ ಚಳವಳಿ ನಡೆಸುತ್ತಿದ್ದರೂ, ಮೌನದಿಂದಿದ್ದುದು ಅವರ ಬಂಗಾಳೀ ಉಚ್ಚ ಜಾತಿ ಹಾಗೂ ಮಧ್ಯಮವರ್ಗದ ಸಾಂಪ್ರದಾಯಿಕ ಹಾಗೂ ಸಂಕುಚಿತ ಮನೋಧರ್ಮಕ್ಕೆ ದ್ಯೋತಕವಾಗಿದೆ.

**ಬಾಹ್ಯ ಪ್ರಚಾರ ಹಾಗೂ ಸಮ್ಮತಿಗೆ ಒಲವು**

ಭಾರತದ ಏಳಿಗೆಗೆ ದೇಶದೊಳಗೇ ವೈಜ್ಞಾನಿಕ ಕಾರ್ಯಕರ್ತರುಗಳ ತರಬೇತಿ ಹಾಗೂ ಪ್ರಾಯೋಜನೆಗಳ ನಿರ್ಮಾಣ ಅತ್ಯವಶ್ಯ ಎಂದು ನಂಬಿದ್ದರೂ ಬೋಸ್‌ರವರು ತಮ್ಮ ಯೋಜನೆಗಳನ್ನು ಭಾರತದ ಹೊರಗೇ, ಅದರಲ್ಲೂ ವಿಶೇಷವಾಗಿ ಬ್ರಿಟನ್ನಿನಲ್ಲಿ, ನಡೆಸಲು ಹಾಗೂ ಜನಪ್ರಿಯಗೊಳಿಸಲು ಹೆಚ್ಚಿನ ಒಲವು ಹೊಂದಿದ್ದರು. ೧೮೮೦ ಹಾಗೂ ೧೯೩೦ರ ನಡುವೆ ಅವರು ಹನ್ನೆರಡು ಬಾರಿ ವಿದೇಶೀ ಪ್ರವಾಸ ಕೈಗೊಂಡಿದ್ದರು. ತಮ್ಮ ಜೀವಿತದ ೫೦ ವರ್ಷಗಳಲ್ಲಿ ೧೨ ವರ್ಷ ಹೊರನಾಡಿನಲ್ಲೇ ಕಳೆದರು. ಅವರ ಮೊದಲ ೩೨ ವೈಜ್ಞಾನಿಕ ಪ್ರಬಂಧಗಳು ವಿದೇಶೀ ಪತ್ರಿಕೆಗಳಲ್ಲಿ ಪ್ರಕಟವಾದವು. ಹೊರ ದೇಶಗಳಲ್ಲಿ ತಮ್ಮ ವಿಚಾರಗಳಿಗೆ ಪ್ರಚಾರ, ಒಲವು ಗಳಿಸುವುದರಲ್ಲಿ ಅವರ ಆಸಕ್ತಿ ಅವರ ವರ್ಗಪ್ರಜ್ಞೆಗೆ ಅನುಗುಣವಾಗಿಯೇ ಇದ್ದಿತು. ಅವರ ದಿನಚರಿಯಲ್ಲೂ ಪತ್ರಗಳಲ್ಲೂ ಅವರು ಬ್ರಿಟನ್, ಫ್ರಾನ್ಸ್, ಆಸ್ಟ್ರಿಯಾ, ಅಮೆರಿಕ, ರಷ್ಯ ಹಾಗೂ ಜಪಾನೀ ವಿಜ್ಞಾನಿಗಳಿಂದ ತಮ್ಮ ಕಾರ್ಯಕ್ಕೆ ದೊರೆತ ಪ್ರಶಂಸೆ ಅನುಮೋದನೆಗಳನ್ನು ಬಹಳ ವಿಶೇಷವಾಗಿ ಉಲ್ಲೇಖಿಸಿದ್ದಾರೆ.

ತಮ್ಮ ಪ್ರಾಯೋಜನೆಗಳಿಗೆ ಹೊರದೇಶಗಳಲ್ಲಿ ಮನ್ನಣೆ ಪಡೆಯಲು ಉತ್ಸುಕರಾಗಿದ್ದಾಗಲೇ ಅವರು ಅದರಿಂದ ದೇಶದೊಳಗೇ ತಮ್ಮ ಕಾರ್ಯಕ್ಕೆ ಧನಸಹಾಯ ಪಡೆಯಲು ಅನುಕೂಲವಾಗುವುದೆಂದೂ ನಂಬಿದ್ದರು. ಅದಕ್ಕಾಗಿಯೇ ಅವರು ೧೯೦೫ರಲ್ಲಿ ಬಂಗಾಳದ ಗವರ್ನರ್ ಸರ್ ಆಂಡ್ರ್ಯೂ ಫ್ರೇಸರ್‌ಗೆ ಹೀಗೆ ಪತ್ರ ಬರೆದಿದ್ದರು: ''ನಾನು ವಿದ್ಯುಚ್ಛಕ್ತಿ ಕುರಿತು ನಡೆಸಿರುವ ಆವಿಷ್ಕಾರಗಳು.. ಇಂಗ್ಲೆಂಡಿನಲ್ಲೂ ಯೂರೋಪಿನಲ್ಲೂ ಉನ್ನತ ವಿದ್ಯಾಲಯಗಳ ಪಠ್ಯಪುಸ್ತಕಗಳಲ್ಲಿ ಸೇರ್ಪಡೆಯಾಗಿವೆ. ಎನ್‌ಸೈಕ್ಲೋಪಿಡಿಯಾ ಬ್ರಿಟಾನಿಕಾದ ಇತ್ತೀಚೆಗಿನ ಆವೃತ್ತಿಯಲ್ಲೂ ಅವುಗಳಲ್ಲಿ ಕೆಲವಕ್ಕೆ ಉಲ್ಲೇಖಗಳಿವೆ. ಅವು ವೈಜ್ಞಾನಿಕ ಚಿಂತನೆಯಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಬಲ್ಲವೆಂದು ಲಿನ್ನಿಯಾನ್ ಸೊಸೈಟಿಯ ಅಧ್ಯಕ್ಷರು ಶ್ಲಾಘಿಸಿದ್ದಾರೆ....''

ಐರೋಪ್ಯ ವೈಜ್ಞಾನಿಕ ಪರಂಪರೆಯಿಂದ ಸ್ಫೂರ್ತಿಗೊಂಡಿದ್ದ ಜೆ. ಸಿ. ಬೋಸ್‌ರು ಭೌತಶಾಸ್ತ್ರ ಹಾಗೂ ಜೀವಶಾಸ್ತ್ರಗಳಲ್ಲಿ ಜ್ಞಾನ ಪರಿಧಿಯನ್ನು ವಿಸ್ತರಿಸಲು ಅವಿರತವಾಗಿ ಶ್ರಮಿಸಿದರು. ವೈಜ್ಞಾನಿಕ ಶಿಕ್ಷಣ ಹಾಗೂ ಚಟುವಟಿಕೆಗಳು ಸ್ಥಳೀಯ ಭಾಷೆಗಳಲ್ಲೇ ಜರುಗಬೇಕೆಂಬುದಕ್ಕೂ ಅವರ ಬೆಂಬಲವಿದ್ದಿತು. ಆದರೆ ಇಂದು ನಮ್ಮ ದೇಶದಲ್ಲಿ ವೈಜ್ಞಾನಿಕ ಸ್ಥಿತಿಗತಿಗಳು ತುಂಬ ಶೋಚನೀಯ ಸ್ಥಿತಿಯಲ್ಲಿವೆ. ದೇಶದ ಸಮಗ್ರ ರಾಷ್ಟ್ರೀಯ ಉತ್ಪನ್ನ (ಜಿಎನ್‌ಪಿ)ದಲ್ಲಿ ಶೇ.೧ರಷ್ಟು ಅತ್ಯಲ್ಪ ಹಣವನ್ನು ವೈಜ್ಞಾನಿಕ ಸಂರಚನೆಗಾಗಿ ವ್ಯಯಿಸಲಾಗುತ್ತಿದೆ. ಇಂದೂ, ವಸಾಹತು ಕಾಲದಲ್ಲಿದ್ದಂತೆಯೇ ವೈಜ್ಞಾನಿಕ ಸಮುದಾಯವು ಸ್ಫೂರ್ತಿ ಹಾಗೂ ಅನುಮೋದನೆಗಾಗಿ ಹೊರ ದೇಶಗಳತ್ತಲೇ ಮುಖ ಮಾಡಿವೆ. ಇದರಿಂದ ಭಾರತೀಯ ವಿಜ್ಞಾನವು ಆಂತರಿಕ ರಾಷ್ಟ್ರೀಯ ಚಾಲಕ ಶಕ್ತಿಗಳಿಂದ ತನ್ನನ್ನು ಬೇರ್ಪಡಿಸಿಕೊಂಡು ಪ್ರಾಥಮಿಕ ಸ್ಫೂರ್ತಿ ಸೆಲೆಯನು ಕಳೆದುಕೊಂಡಿದೆ. ಪ್ರಗತಿ ಸಾಧಿಸಬೇಕಾದರೆ ಇದು ಬದಲಾಗಬೇಕು. ಬೋಸ್‌ರವರ ಜೀವನ ಚಟುವಟಿಕೆಗಳ ಅಧ್ಯಯನದಿಂದ ಈ ಪಾಠ ಕಲಿಯಬೇಕಾಗಿದೆ.

(ಕನ್ನಡ ಸಂಗ್ರಹಾನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್)

ಡಾ॥ ಸಂಜಯ್ ಬಿಸ್ವಾಸ್
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು-೧೨

# ಜೀವೋತ್ಪತ್ತಿಯ ಬಗೆಗೆ ಬದಲುತ್ತಿರುವ ಪ್ರಕಲ್ಪನೆಗಳು

## ಅಮೆರಿಕ ಬ್ರಿಟನ್‌ಗಳಲ್ಲಿ ಈ ಬಗೆಗೆ ಮಾಡಿರುವ ನಿರ್ಣಯಗಳು, ಶಾಸನಗಳು

*ಈ ಲೇಖನ ಪ್ರಕಟವಾಗುತ್ತಿರುವ ಹೊತ್ತಿಗಾಗಲೇ ಅಮೆರಿಕದ ಮೆಸ್ಸಾಚುಸೆಟ್ಸ್‌ನ ಅಡ್ವಾನ್ಸ್‌ಡ್ ಸೆಲ್ ಟೆಕ್ನಾಲಜಿ ಎಂಬ ಖಾಸಗಿ ಕಂಪೆನಿಯೊಂದು ಮಾನವ ಭ್ರೂಣದ ತದ್ರೂಪ ಸೃಷ್ಟಿಸಿರುವ ಸುದ್ದಿ ಹೊರಬಿದ್ದಿದೆ. ತಕ್ಷಣವೇ ಅಮೆರಿಕದ ಅಧ್ಯಕ್ಷ ಬುಷ್‌ರಾದಿಯಾಗಿ ಬಹುಮಂದಿ ರಾಜಕೀಯ ಮುಖಂಡರೂ ಧಾರ್ಮಿಕ ನಾಯಕರೂ ಅದನ್ನು 'ಅನೈತಿಕ', 'ಘೋರ ಪಾತಕ ಕೃತ್ಯ' ಎಂದೆಲ್ಲ ಬಹು ಕಟುವಾಗಿ ಟೀಕಿಸಿ ಹೇಳಿಕೆಗಳನ್ನಿತ್ತಿದ್ದಾರೆ. ಇದು ಮಾನವ ಕುಲಕ್ಕೇ ಕಂಟಕಪ್ರಾಯ, ಇದಕ್ಕೆ ಅವಕಾಶ ನೀಡಲೇಬಾರದು, ಎಲ್ಲ ದೇಶಗಳೂ ಸೂಕ್ತ ಕಾನೂನುಗಳನ್ನು ಜಾರಿಗೆ ತಂದು ಇಂತಹ ಸಂಶೋಧನೆಗಳಿಗೆ ಕೂಡಲೇ ಕೊನೆಹಾಕಬೇಕು ಎಂದು ಅವರು ಒತ್ತಾಯದ ಹೇಳಿಕೆಗಳನ್ನಿತ್ತಿದ್ದಾರೆ.*

*ಅದೇ ಹೊತ್ತಿನಲ್ಲಿ ವಿಜ್ಞಾನಿಗಳ ಹಾಗೂ ಸಂಶೋಧಕರ ಕಡೆಯಿಂದ ಪ್ರತಿ-ಹೇಳಿಕೆಗಳೂ ಬರತೊಡಗಿವೆ: ಇದರಲ್ಲಿ ಅನೈತಿಕವಾದುದು, ಅಮಾನವೀಯವಾದುದು ಏನೂ ಇಲ್ಲ. ಆರಂಭಿಕ ಭ್ರೂಣಗಳಲ್ಲಿ ಸಾಮಾನ್ಯ ತಿಳಿವಳಿಕೆಯ ಜೀವವೆಂಬುದು ಇರುವುದಿಲ್ಲವಾದ್ದರಿಂದ ಸ್ಟೆಮ್-ಸೆಲ್ ಸಂಶೋಧನೆಯಿಂದ ಜೀವಹತ್ಯೆ ಮಾಡಿದಂತೇನೂ ಆಗುವುದಿಲ್ಲ. ಆದರಿಂದ ಮಾನವ ಕುಲಕ್ಕೆ ಭಾರಿ ಪ್ರಯೋಜನವುಂಟು. ಕ್ಯಾನ್ಸರ್, ಆಲ್ಜೈಮರ್ ಡಿಸೀಸ್, ಪಾರ್ಕಿನ್ಸನ್ಸ್ ಡಿಸೀಸ್ ಮುಂತಾದ ಇದುವರೆವಿಗೂ ಮಾನವನ ನಿಯಂತ್ರಣಕ್ಕೆ ಸಿಗದೆ ಹೋಗಿರುವ ಭೀಕರ ರೋಗಗಳನ್ನು ವಾಸಿ ಮಾಡಲು ಇದು ಬಹುವಾಗಿ ಸಹಾಯ ಮಾಡುವುದು. ಆದ್ದರಿಂದ ಸ್ಟೆಮ್-ಸೆಲ್ ಸಂಶೋಧನೆಗೆ, ಕೆಲವು ಇತಿಮಿತಿಗಳನ್ನು ಗೊತ್ತುಪಡಿಸಿಯಾದರೂ, ಅವಕಾಶ ನೀಡಲೇಬೇಕು. ಇಲ್ಲದಿದ್ದರೆ ವೈಜ್ಞಾನಿಕ ಪ್ರಗತಿಯಾಗುವುದಾದರೂ ಹೇಗೆ ಎಂದೆಲ್ಲಾ ಇವರು ವಾದಿಸತೊಡಗಿದ್ದಾರೆ.*

*ಹೀಗೆ ಈ ವಿಷಯಕ್ಕೆ ಸಂಬಂಧಿಸಿದ ವಾದ-ವಿವಾದ ಮತ್ತೆ ಭುಗಿಲೆದ್ದಿದೆ.*



**ಕೆ. ಎಲ್. ಗೋಪಾಲಕೃಷ್ಣ ರಾವ್**

೨೦೦೧ರ ಆಗಸ್ಟ್ ತಿಂಗಳ ಮೊದಲವಾರದಲ್ಲಿ ಅಮೆರಿಕದ ಶಾಸನ ಸಭೆಯು ಮಾನವ ಕ್ಲೋನಿಂಗ್‌ಗೆ (ಪ್ರತಿ ರೂಪ ಸೃಷ್ಟಿ/ಅಬೀಜಸಂತಾನ) ಸಂಬಂಧಿಸಿ ಒಂದು ಮಹತ್ವಪೂರ್ಣ ನಿರ್ಣಯವನ್ನು ಅಂಗೀಕರಿಸಿತು. ಮಾನವ ಭ್ರೂಣದ ಕೃತಕ ಸೃಷ್ಟಿಯನ್ನದು 'ಮತಿಗೆಟ್ಟ ವಿಜ್ಞಾನ' ಎಂದು ಕರೆಯಿತು. ಈ ವೃತ್ತಿಯನ್ನನುಸರಿಸುವ ಅಥವಾ ಇಂತಹ ವ್ಯಾಪಾರದಲ್ಲಿ ತೊಡಗುವ ಯಾರಿಗೇ ಆಗಲಿ ಒಂದು ಮಿಲಿಯನ್ ಡಾಲರುಗಳ ದಂಡ ಮತ್ತು ಹತ್ತು ವರ್ಷಗಳ ಜೈಲು ವಾಸದ ಶಿಕ್ಷೆ ವಿಧಿಸಬೇಕು ಎಂದು ಅದು ನಿರ್ಣಯಿಸಿತು.

ಇದಕ್ಕೆ ಮುನ್ನ ಅನೇಕ ವಾರಗಳ ಕಾಲ ಪ್ರತಿನಿಧಿ ಸಭೆಯಲ್ಲೂ ದೂರದರ್ಶನ - ಪತ್ರಿಕಾ ಮಾಧ್ಯಮಗಳಲ್ಲೂ ಈ ವಿಷಯ ಕುರಿತು ವಿಪುಲ ಚರ್ಚೆ ವಾಗ್ವಾದಗಳು ನಡೆದವು. ಮಾನವ ಜೀವ ಒಂದು ಮಹತ್ತಾದ ವರದಾನ, ಅದರೊಂದಿಗೆ ಚೆಲ್ಲಾಟವಾಡಲು ಯಾವುದೇ ಮತಿಹೀನ ವಿಜ್ಞಾನಿಗೂ ಅವಕಾಶ ನೀಡಬಾರದು ಎಂದು ರಿಪಬ್ಲಿಕನ್ ಸೆನೇಟರೊಬ್ಬರು ವಾದಿಸಿದರು. ಸ್ಟೆಮ್-ಸೆಲ್ [ಕಾಂಡ(ಮೂಲ) ಕೋಶ] ಸಂಶೋಧನೆಯಲ್ಲಿ ತಪ್ಪೇನೂ ಇಲ್ಲ, ವಿಜ್ಞಾನದ ಮುನ್ನಡೆಗೆ ಇದು ಅತ್ಯವಶ್ಯ, ಈ ಕ್ಷೇತ್ರದಲ್ಲಿ ಸಂಶೋಧನೆ ಮಾಡಲಾದರೂ ಅವಕಾಶ ನೀಡಬೇಕು, ಇದರಿಂದ ಅನೇಕ ಭೀಕರ ಹಾಗೂ ಮಾರಕ ರೋಗಗಳ ಪರಿಹಾರಕ್ಕೆ ಸಹಾಯವಾಗುತ್ತದೆ ಎಂದು ಮತ್ತೆ ಕೆಲವರು ವಾದಿಸಿ ನಿರ್ಣಯವೊಂದನ್ನು ಮಂಡಿಸಿದರು. ಆದರೆ ಶಾಸನಸಭೆ ಆ ನಿರ್ಣಯವನ್ನು ಭಾರಿ ಬಹುಮತದಿಂದ ತಿರಸ್ಕರಿಸಿತು. ೧೯೯೭ರಲ್ಲಿ 'ಡಾಲಿ' ಎಂಬ ಕುರಿಯ ಕೃತಕ ಸೃಷ್ಟಿ ಮಾಡಿದಂತೆಯೇ ಮಾನವ ವ್ಯಕ್ತಿಗಳ ಕೃತಕ ಸೃಷ್ಟಿಗೆ ಎಡೆ ಮಾಡಿಕೊಡಬಹುದಾದಂಥ ಯಾವುದೇ ಅಹಿತಕರ ಪ್ರಯೋಗಗಳಿಗೂ ಅವಕಾಶ ಖಂಡಿತ ಕೂಡದು ಎಂಬುದು ಸಾಮಾನ್ಯ ಅಭಿಪ್ರಾಯವಾಗಿತ್ತು.

ಇದೇ ಸಂದರ್ಭದಲ್ಲಿ ಮಾನವ ಭ್ರೂಣಗಳಿಂದ ಪಡೆದ ಸ್ಟೆಮ್-ಸೆಲ್ ಸಂಶೋಧನೆಗೆ ಸಂಬಂಧಿಸಿದ್ದಕ್ಕೆ ಫೆಡರಲ್ ಸರಕಾರ ಸಹಾಯಧನ ನೀಡಬೇಕೇ ಬೇಡವೇ ಎಂಬ ಬಗೆಗೂ ವಿಪುಲ ಚರ್ಚೆ ನಡೆಯಿತು. ಮಾನವ ಪ್ರತಿರೂಪ ಸೃಷ್ಟಿಯಲ್ಲಿನ ನೈತಿಕ ಹಾಗೂ ದಾರ್ಶನಿಕ ಅಂಶಗಳು ತುಂಬ ಪ್ರಗಾಢವಾಗಿದ್ದು ವೈಜ್ಞಾನಿಕ ಆವಿಷ್ಕರಣೆ-ಸಂಶೋಧನೆಗಳ ತಡಕಾಟದಲ್ಲಿ ಅವನ್ನು ಕಡೆಗಣಿಸಲಾಗದು ಎಂದು ಒಂದು ವಿಭಾಗ ವಾದಿಸಿದರೆ, ಸ್ಟೆಮ್-ಸೆಲ್ ಸಂಶೋಧನೆಯಿಂದ ಆಲ್ಜೈಮರ್ ಮತ್ತು ಪಾರ್ಕಿನ್ಸನ್‌ಗಳಂಥ ಭಯಂಕರ ರೋಗಗಳಿಗೆ ಸೂಕ್ತ ಪರಿಹಾರ ಕಂಡುಹಿಡಿಯುವುದು ಸಾಧ್ಯವಾಗುತ್ತದೆ. ಆದ್ದರಿಂದ ಅದಕ್ಕೆ ಅವಕಾಶ, ನೆರವು ನೀಡಬೇಕು ಎಂದು ಇನ್ನೊಂದು ಗುಂಪಿನವರು ವಾದಿಸಿದರು.

ಈ ಮೊದಲೇ ತಿಳಿಸಿರುವಂತೆ ಪತ್ರಿಕಾ ಮಾಧ್ಯಮಗಳಲ್ಲೂ ಪರ - ವಿರೋಧಿ ಲೇಖನಗಳು ಪ್ರಕಟವಾದವು. 'ವಾಷಿಂಗ್ಟನ್ ಪೋಸ್ಟ್' ಪತ್ರಿಕೆಯಲ್ಲಿ ರಿಕ್‌ವೀಸ್ ಎಂಬುವರು ಒಂದು ಸ್ವಾರಸ್ಯಕರ ಲೇಖನ ಬರೆದು, ಜೀವ ಜನ್ಮ ತಾಳುವುದು ಯಾವ ಘಳಿಗೆಯಲ್ಲಿ ಎಂಬುದಕ್ಕೆ ಸಂಬಂಧಿಸಿದ ಪ್ರಕಲ್ಪನೆ ಹೇಗೆ ಕಾಲಕಾಲಕ್ಕೆ ಬದಲುತ್ತ ಬಂದಿದೆ ಎಂಬುದನ್ನು ವಿಚಾರಪೂರ್ಣವಾಗಿ ವಿಶ್ಲೇಷಿಸಿದ್ದಾರೆ.

ವರ್ಜೀನಿಯಾದ ವಿಜ್ಞಾನಿಗಳು ಸ್ಟೆಮ್-ಸೆಲ್ ಪಡೆಯುವ ಏಕೋದ್ದೇಶದಿಂದ ಹಚ್ಚ ಹೊಸ ಮಾನವ ಭ್ರೂಣಗಳನ್ನು ಆಗಲೇ ತಯಾರಿಸಿದ್ದಾರೆ. ಅದೇ ರೀತಿ ಮೆಸಾಚುಸೆಟ್ಸ್ ಸಂಶೋಧಕರು ಇಂಥದೇ ಪ್ರಯೋಜನಾತ್ಮಕ ಗುರಿಯೊಂದಿಗೆ ಕೃತಕ ಮಾನವ ಭ್ರೂಣಗಳನ್ನು ಸೃಷ್ಟಿಸಿದ್ದಾರೆ. ಮಾನವ ಭ್ರೂಣಗಳಿಂದ ಪಡೆದ ಕೋಶಗಳ ಇಂಥ ಸಂಶೋಧನೆಗೆ ಹಣ ಒದಗಿಸಬೇಕೇ ಬೇಡವೇ ಎಂಬುದು ನಿರ್ಧಾರವಾಗಬೇಕಿದೆ.

ಒಂದು ವಾರದ ಮಾನವ ಭ್ರೂಣಗಳೊಳಗೆ ನೆಲೆಗೊಂಡ ಸ್ಟೆಮ್-ಸೆಲ್‌ಗಳು ಅನೇಕ ರೋಗಗಳ ಪರಿಹಾರಕ್ಕೆ ನೆರವಾಗಬಲ್ಲ ಅತ್ಯಂತ ಪರಿಪೂರ್ಣ ಕಚ್ಚಾ ಪದಾರ್ಥ ಎಂಬುದು ಸುವಿದಿತ ವಾಸ್ತವಾಂಶ. ಆದರೆ ಈ ಸ್ಟೆಮ್-ಸೆಲ್‌ಗಳನ್ನು ಪಡೆಯಲು ಭ್ರೂಣಗಳನ್ನು ನಾಶಪಡಿಸಬೇಕಾಗುತ್ತದೆ. ಒಂದು ವಾರದ ಭ್ರೂಣಗಳನ್ನು ನಾಶಪಡಿಸಿದರೆ ಜೀವವನ್ನೇ ನಾಶಪಡಿಸಿದಂತಾಗುತ್ತದೆಯೇ ? ಜೀವ ಜನ್ಮ ತಾಳುವುದು ಯಾವಾಗ ?

### ಕ್ರೈಸ್ತ ಧರ್ಮದ ನಂಬಿಕೆ..

ತಾಯಿಯ ಒಡಲೊಳಗೆ ಗರ್ಭ ತಳೆದ ಕೂಡಲೇ ಜೀವ ಹುಟ್ಟಿತೆಂದೇ ಹೇಳಬೇಕು ಎಂಬುದು ಕ್ರೈಸ್ತ ಧರ್ಮದ ಯುಗಯುಗಾಂತರಗಳ ನಂಬಿಕೆ. ಇದರಲ್ಲಿ ವಿವಾದಕ್ಕೆ ಎಡೆಯೇ ಇಲ್ಲ ಎಂದು ಕೆಲವರು ವಾದಿಸುತ್ತಾರೆ. ಇದು ಸರಿಯೇ ?

ಸರಿಯಲ್ಲ ಎನ್ನುತ್ತಾರೆ ಇನ್ನೂ ಕೆಲವರು. ಮಾನವ ಜೀವ ಜನ್ಮ ತಾಳುವ ಕ್ಷಣ ಯಾವುದು ಎಂಬುದರ ಇತಿಹಾಸ ನೋಡಿದಾಗ ಹೇಗೆ ಈ ಭಾವನೆ ಕಾಲಕಾಲಕ್ಕೆ ಬದಲುತ್ತ ಬಂದಿದೆ ಎಂಬುದು ತಿಳಿದುಬರುತ್ತದೆ. ಭ್ರೂಣವೊಂದು ಹೊಸದಾಗಿ ರೂಪುಗೊಂಡ ಕೂಡಲೇ ಅದೊಂದು ಪೂರ್ಣ - ವಿಕಸಿತ ಮಾನವಜೀವಿಯಾಗುತ್ತದೆ ಎಂಬುದೇನೋ ಕ್ಯಾಥೊಲಿಕ್ ಚರ್ಚ್‌ನ ಇಂದಿನ ಅಭಿಪ್ರಾಯ. ಇದು

ಆದಿಯಿಂದಲೂ ಹೀಗೆಯೇ ಇದ್ದಿತೆ? ಇಲ್ಲ. ೧೮೬೯ರಲ್ಲಷ್ಟೇ ಈ ಭಾವನೆ ಮೂಡಿತು. ಅದಕ್ಕೆ ಮುಂಚೆ ಜೀವದ ಹುಟ್ಟಿನ ಆರಂಭಕ್ಕೆ ಸಂಬಂಧಿಸಿದ ಪ್ರಕಲ್ಪನೆಗಳು ವಿಜ್ಞಾನಿಗಳ ತತ್ವಜ್ಞಾನಿಗಳ, ಹಾಗೂ ಕಾನೂನು ವಿದ್ವಾಂಸರ ಚಿಂತನೆಯಲ್ಲಿ ಹಲವಾರು ಬಾರಿ ಬದಲಾಗಿವೆ. ನೈತಿಕ ಸಂವೇದನೆ ಹಾಗೂ ವೈಜ್ಞಾನಿಕ ತಿಳಿವಳಿಕೆ, ಇವುಗಳ ನಡುವಿನ ಸಂಘರ್ಷದ ಫಲವಾಗಿ ಈ ಬದಲಾವಣೆಗಳಾಗಿವೆ.

ಜೀವೋತ್ಪತ್ತಿಯು ಸ್ತ್ರೀಯ ಗರ್ಭಾಶಯದಲ್ಲಿ ಪುರುಷನ ವೀರ್ಯಾಣು ಹಾಗೂ ಸ್ತ್ರೀಯ ಅಂಡಾಣುಗಳ ಸಂಯೋಗದ ಫಲವಾಗಿಯಷ್ಟೇ ಜರಗುತ್ತದೆ. ಅದನ್ನಷ್ಟೇ ಅವಲಂಬಿಸಿರುತ್ತದೆ ಎಂಬ ಹಳೆಯ ಕಥೆ 'ಡಾಲಿ' ಕುರಿಯ ಪ್ರತಿರೂಪ ಸೃಷ್ಟಿಯ ನಂತರದ ಈ ಯುಗದಲ್ಲಿ ಮೂಲೆಗುಂಪಾಗತೊಡಗಿದೆ. ಹಾಗಾಗಿ ಭ್ರೂಣ ಎಂಬುದರ ನಿಜವಾದ ಅರ್ಥವೇನು, ಅದರ ರಕ್ಷಣೆ ಶ್ರೇಷ್ಠವೇ ಅಥವಾ ಆಗಲೇ ಜನ್ಮ ತಾಳಿರುವವರ ಆರೋಗ್ಯ ಸುಧಾರಣೆಯ ಸಲುವಾಗಿ ಅದರ ನಾಶ/ಬಳಕೆ ಶ್ರೇಷ್ಠವೇ ಯಾವುದಕ್ಕೆ ಆದ್ಯತೆ ನೀಡಬೇಕು ಎಂಬುದೀಗ ಮುಖ್ಯಾಂಶವಾಗಿ ಹೊರಹೊಮ್ಮಿದೆ.

**ಅರಿಸ್ಟಾಟಲನ ಅನಿಸಿಕೆ..**

ಆರಂಭದಲ್ಲಿ ಮತ್ತು ಅನಂತರ ದೀರ್ಘಕಾಲದವರೆಗೆ, ಹುಟ್ಟಿನ ಬಗೆಗೆ ಅದು ಗಂಡಸಿನ ವೀರ್ಯಾಣು ಹಾಗೂ ಹೆಂಗಸಿನ ಅಂಡಾಣು ಮೇಳೈಸಿಕೊಂಡ ಕ್ಷಣದಲ್ಲೇ ಆಗುತ್ತದೆ ಎಂಬ ಏಕೈಕ ಕಲ್ಪನೆ ಜನರ ಮನಸ್ಸಿನಲ್ಲಿ ಬೇರೂರಿ ನಿಂತು ಯಾರೂ ಅದನ್ನು ಪ್ರಶ್ನಿಸುವ ಗೋಜಿಗೇ ಹೋಗಲಿಲ್ಲ. ಹಾಗೆ ನೆಲೆನಿಂತ ಚಿತ್ರವನ್ನು ಬದಲಿಸಲು/ಮಸುಕಾಗಿಸಲು ವಿಜ್ಞಾನದ ಉದಯವೂ ಆಗಿರಲಿಲ್ಲ. ವಿಜ್ಞಾನವು ವೀರ್ಯಾಣು ಹಾಗೂ ಅಂಡಾಣುಗಳನ್ನು ಆವಿಷ್ಕರಿಸುವುದಕ್ಕೂ ಅನೇಕ ಶತಮಾನಗಳ ಮುನ್ನ, ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ (ಕ್ರಿ.ಪೂ. ೩೮೪-೩೨೨) ಸ್ತ್ರೀಯಲ್ಲಿ ಗರ್ಭಧಾರಣೆಯ ನಂತರ ಜೀವೋತ್ಪತ್ತಿಗೆ ಸಂಬಂಧಿಸಿ ಒಂದು ವಿಶೇಷ ವಿವರಣೆ ನೀಡಿದ್ದ. ಸ್ತ್ರೀಯು 'ವಸ್ತು/ಪದಾರ್ಥ'ವನ್ನು (ಮ್ಯಾಟರ್) ನೀಡುತ್ತಾಳೆ, ಪುರುಷನು 'ಚಲನೆ'ಯನ್ನು (ಮೋಷನ್) ನೀಡುತ್ತಾನೆ. ಇವೆರಡರ ಮಿಲನಾನಂತರ ಕೆಲ ಕಾಲದ ಮೇಲೆ ಇದರೊಟ್ಟಿಗೆ 'ಚೇತನ/ಜೀವಕಳೆ' (ಕ್ವಿಕನಿಂಗ್) ಕೂಡಿಕೊಳ್ಳುತ್ತದೆ. ಆಗಷ್ಟೇ ಜೀವದ ಉದಯವಾಯಿತು ಎನ್ನಬಹುದು ಎಂದು ಹೇಳಿದ ಅರಿಸ್ಟಾಟಲನ ಪ್ರಕಾರ ಈ ಚೇತನ/ಜೀವಕಳೆ ೪೦ ದಿನಗಳ ನಂತರ ಗೋಚರಕ್ಕೆ ಬಂದಲ್ಲಿ ಆ ಭ್ರೂಣ ಗಂಡು, ೯೦ ದಿನಗಳ ನಂತರ ಗೋಚರಕ್ಕೆ ಬಂದಲ್ಲಿ ಅದು ಹೆಣ್ಣು. ಈ ವಿವರಣೆಯಲ್ಲಿ ಅರಿಸ್ಟಾಟಲನ ಮತ್ತೊಂದು ವಿಚಾರವೂ ವ್ಯಕ್ತಪಡುತ್ತದೆ. ಅವನ ಪ್ರಕಾರ ಹೆಣ್ಣು, ಗಂಡಿನ ನ್ಯೂನತಾ ರೂಪವಷ್ಟೆ. ಆದ್ದರಿಂದಲೇ ಅವನು ಗಂಡಿಗೆ ೪೦ ದಿನಗಳ ಹಾಗೂ ಹೆಣ್ಣಿಗೆ ೯೦ ದಿನಗಳ ಅವಧಿಯನ್ನು ಗೊತ್ತುಪಡಿಸಿದುದು. ೪೦ ದಿನಗಳ ಅವಧಿಗೆ ಮುನ್ನಿನ ಭ್ರೂಣದಲ್ಲಿ ಜೀವ ಇಲ್ಲವೆಂದೇ ತೆಗೆದುಕೊಳ್ಳಬಹುದು ಮತ್ತು ಆಗ ಏನೇ ಜರುಗಿದರೂ ಅದು ಅಪ್ರಸ್ತುತ ಎಂದವನು ಭಾವಿಸಿದ್ದ. ಹಾಗಾಗಿ ಆ ದಿನಗಳಲ್ಲಿ ಯಾರೇ ಆಗಲಿ ಸ್ಟೆಮ್-ಸೆಲ್ ಸಂಶೋಧನೆಗಾಗಿ ಭ್ರೂಣವನ್ನು ಬಳಸಲು ಮುಂದಾಗಿದ್ದಲ್ಲಿ ಅರಿಸ್ಟಾಟಲ್ ಅದಕ್ಕೆ ಯಾವ ರೀತಿಯಲ್ಲೂ ವಿರೋಧ ವ್ಯಕ್ತಪಡಿಸುತ್ತಿರಲಿಲ್ಲ.

ಗರ್ಭಧಾರಣೆಯನ್ನು ಪತ್ತೆಹಚ್ಚಲು ಇಂದಾದರೆ ಅನೇಕ ರೀತಿಯ ಸೂಕ್ಷ್ಮಾತಿಸೂಕ್ಷ್ಮ ಪರೀಕ್ಷೆಗಳು, ಸಾಧನಗಳು ಲಭ್ಯವಿವೆ. ಆದರೆ ಅರಿಸ್ಟಾಟಲನ ಕಾಲದಲ್ಲಿ ಇವಿನ್ನೂ ಇರಲಿಲ್ಲವಷ್ಟೆ, ಹಾಗಾಗಿ 'ಚೇತನ/ಜೀವಕಳೆ' ಸಾಮಾನ್ಯವಾಗಿ ಗರ್ಭತಾಳಿದ ಸುಮಾರು ೨೦ ವಾರಗಳಲ್ಲಿ ಕಾಣಿಸಿಕೊಳ್ಳುತ್ತದೆಂಬ ಇಂದಿನ ಗ್ರಹಿಕೆಯನ್ನು ಅವನು ತಿಳಿಯದಾಗಿದ್ದ.

ಅರಿಸ್ಟಾಟಲನ ೪೦ ದಿನಗಳ ನಿಯಮವನ್ನೇ ಆ ಕಾಲದ ಎಲ್ಲ (ಪಾಶ್ಚಿಮಾತ್ಯ) ಧರ್ಮಗಳೂ ಸ್ವೀಕರಿಸಿದವು. ಕೆಲವು ಧಾರ್ಮಿಕ ಸಂಪ್ರದಾಯಗಳಲ್ಲಿ ಅದು ಇಂದಿಗೂ ಸಾಪೇಕ್ಷವಾಗಿ ಬದಲಾಗದೆ ಉಳಿದಿದೆ. ೪೦ ದಿನಗಳ ವಯಸ್ಸಿನ ಭ್ರೂಣಗಳು ಚೈತನ್ಯರಹಿತವಾದವು, ಅವು ನೀರಿಗಿಂತ ಭಿನ್ನವಲ್ಲ, ಅವನ್ನು ಹೇಗೆ ಬೇಕಾದರೂ ವಿಲೇವಾರಿ ಮಾಡಬಹುದು ಅಥವಾ ಯಾವುದೇ ನೈತಿಕ ಪರಿಣಾಮಗಳ ಬಗೆಗೆ ಚಿಂತಿಸದೆಯೇ ಅವನ್ನು ಪ್ರಯೋಗಗಳಲ್ಲಿ ತೊಡಗಿಸಬಹುದು ಎಂದು ಯಹೂದ್ಯ ಹಾಗೂ ಮುಸ್ಲಿಮ್ ವಿದ್ವಾಂಸರು ಇಂದೂ ಬೋಧಿಸುತ್ತಾರೆ.

**ಕ್ಯಾಥೊಲಿಕ್ ಪ್ರಕಲ್ಪನೆ..**

ಆದರೆ ಕ್ಯಾಥೊಲಿಕ್‌ರಿಗೆ ಸಂಬಂಧಿಸಿದಂತೆ ೧೫೮೮ರಲ್ಲಿ ಈ ಎಲ್ಲ ಕಲ್ಪನೆಗಳೂ ಬದಲಾದವು. ಆಗ ಪೋಪ್ ಆಗಿದ್ದ ಐದನೆಯ ಸಿಕ್ಸ್‌ಟಸ್ ಗರ್ಭ ನಿರೋಧಕಗಳ ಬಳಕೆಯೂ ಗರ್ಭಪಾತವೂ ಮಹಾಪಾಪ ಎಂದು ಘೋಷಿಸಿದರು. 'ಆತ್ಮ ಸೇರ್ಪಡೆ'ಯು ಅಂದರೆ, ನವಸೃಜಿತ ದೇಹದೊಳಕ್ಕೆ ಆತ್ಮ ಸೇರಿಕೊಳ್ಳುವುದು ಗರ್ಭಧಾರಣೆಯಾದ ಘಳಿಗೆಯಲ್ಲೇ ಸಂಭವಿಸುತ್ತದೆಯೇ ಹೊರತು ೪೦ ದಿನಗಳ ನಂತರವಲ್ಲ ಎಂಬುದು ಇದರ

ಗೂಢಾರ್ಥವಾಗಿದ್ದಿತು. ಹಾಗಾಗಿ ಗರ್ಭಪಾತದ ಪಾತಕವೆಸಗಿದ ವ್ಯಕ್ತಿಗೆ ಆ ದಿನಗಳಲ್ಲಿ ಜಾತಿಯಿಂದ ಹೊರಹಾಕುವ (ಮತ ಬಹಿಷ್ಕಾರದ) ಶಿಕ್ಷೆ ವಿಧಿಸಲಾಗುತ್ತಿದ್ದಿತು.

ಮೂರು ವರ್ಷಗಳ ನಂತರ, ಅಂದರೆ ೧೫೯೧ರಲ್ಲಿ ಹದಿನಾಲ್ಕನೆಯ ಪೋಪ್ ಗ್ರೆಗೋರಿ ಅಧಿಕಾರಕ್ಕೆ ಬಂದರು. ಅವರು ಚರ್ಚನ್ನು ಮತ್ತೆ ಹಳೆಯ ಕಲ್ಪನೆಗೇ, ಅಂದರೆ ತಡವಾಗಿ 'ಚೈತನ್ಯ' ಮೂಡುವ ಹಾಗೂ ಆತ್ಮ ಸೇರ್ಪಡೆಯಾಗುವ ಕಲ್ಪನೆಗೇ, ಕರೆದೊಯ್ದರು. ೧೮೬೯ರವರೆಗೂ ಇದು ಹಾಗೆಯೇ ಇದ್ದಿತು.

ಆದರೆ ಆಗ ಅಧಿಕಾರಕ್ಕೆ ಬಂದ ಒಂಬತ್ತನೆಯ ಪೋಪ್ ಪಯಸ್ ಯಾವುದೇ ಘಟ್ಟದಲ್ಲೇ ಆಗಲಿ ಭ್ರೂಣಹತ್ಯೆ/ಗರ್ಭಪಾತ ಒಂದು ಮಹಾ ಪಾತಕ, ಅಂತಹ ಪಾಪವೆಸಗಿದ ಪಾತಕಿಯನ್ನು ಧರ್ಮಬಾಹಿರನನ್ನಾಗಿ ಮಾಡುವುದೇ ತಕ್ಕ ಶಿಕ್ಷೆ ಎಂದು ಹಳೆಯ ಕಲ್ಪನೆಯನ್ನೇ ಮತ್ತೆ ಆಚರಣೆಗೆ ತಂದರು. ಅಂದಿನಿಂದ ಇಂದಿನವರೆಗೂ ಗರ್ಭಧಾರಣೆ ಯಾದ ಘಳಿಗೆಯಲ್ಲೇ ದೇಹದೊಳಕ್ಕೆ ಆತ್ಮದ ಸೇರ್ಪಡೆಯಾಗುತ್ತದೆ, ಎಂಬುದೇ ಕ್ಯಾಥೊಲಿಕ್ ಚರ್ಚ್‌ನ ಪ್ರಧಾನ ನಿಲುವಾಗಿ ಉಳಿದುಕೊಂಡಿದೆ.

ಪೋಪರ ಪೋಷಾಕು ತೊಟ್ಟ ವ್ಯಕ್ತಿಗಳ ವಿಷಯ ಹಾಗಿರಲಿ, ಪ್ರಯೋಗಶಾಲೆಯ ಬಿಳಿಯ ಉದ್ದ - ನಿಲುವಂಗಿ ತೊಟ್ಟ ವಿಜ್ಞಾನಿಗಳ ವಿಷಯದಲ್ಲೂ, ಜೀವಂತ ವ್ಯಕ್ತಿ ಎಂದು ಯಾರನ್ನು ಕರೆಯಬಹುದು, ಅವನಲ್ಲಿ ಜೀವ ಹುಟ್ಟುವುದು ಯಾವಾಗ ಎಂಬುದಕ್ಕೆ ಸಂಬಂಧಿಸಿ ಗೊಂದಲ ಭಿನ್ನಾಭಿಪ್ರಾಯಗಳು ಇದ್ದುಕೊಂಡೇ ಬಂದಿವೆ. ಈ ಜಿಜ್ಞಾಸೆ ಪ್ರಾರಂಭವಾದದ್ದು ೧೭ನೆಯ ಶತಮಾನದಲ್ಲಿ. ಆಗಷ್ಟೇ ಸೂಕ್ಷ್ಮದರ್ಶಕದ ಆವಿಷ್ಕರಣೆಯಾಗಿದ್ದಿತು. ಆಗ ವಿಜ್ಞಾನಿ ಆಂಟೋನ್ ವಾನ್ ಲ್ಯೂವೆನ್‌ಹೋಕ್ ಪುರುಷನೊಬ್ಬನ ಒಂದಿಷ್ಟು ವೀರ್ಯವನ್ನು ತೆಗೆದುಕೊಂಡು ಅದನ್ನು ಸೂಕ್ಷ್ಮದರ್ಶಕದಲ್ಲಿಟ್ಟು ವೀಕ್ಷಿಸಿದ. ಒಂದೊಂದು ವೀರ್ಯದಲ್ಲೂ ಪೂರ್ವರೂಪಿತ ಜೀವ ಇದ್ದುದನ್ನು 'ಪತ್ತೆ ಹಚ್ಚಿ' ಆದರಿಂದ ದಿಗ್ಭ್ರಾಂತನಾದ. ಶರೀರವನ್ನು 'ಚೇತನಗೊಳಿಸು' ವಂಥ ಆತ್ಮವನ್ನೊಳಗೊಂಡ ಪೂರ್ಣರೂಪದ ಜೀವಿಯಾಗಿದ್ದಿತು ಅದು ಎಂದವನು ಘೋಷಿಸಿದ. ಅಂದರೆ, ಈ ದೃಷ್ಟಿಯಲ್ಲಿ ಪುರುಷನ ವೀರ್ಯವೂ ೪೦ ದಿನಗಳ ವಯಸ್ಸಿನ ಭ್ರೂಣದಷ್ಟೇ ಪ್ರಶಸ್ತವಾದುದು ಎಂದಾಯಿತು. ಗಂಡಸಿನ ವೀರ್ಯದಲ್ಲೇ ಜೀವಿ ಇರುತ್ತದೆ ಎಂದಾದಮೇಲೆ ಜೀವಿಯ ಸೃಷ್ಟಿಯಲ್ಲಿ ಸ್ತ್ರೀಯ ಪಾತ್ರವೇನು ? ವೀರ್ಯದಿಂದ ಲಭಿಸಿದ ಪುಟ್ಟ ಕುಬ್ಜ ಜೀವಿಯು ಪೂರ್ಣ ಪ್ರಮಾಣದ ಮಾನವ ಜೀವಿಯಾಗಿ ಬೆಳೆಯುವಂತೆ ಪಾಲಿಸಿ, ಪೋಷಿಸಿ, ಪುಷ್ಟಿ ನೀಡಲು ಅವಶ್ಯವಾದ ಫಲವತ್ತಾದ ಉತ್ತ ನೆಲವನ್ನು, ಭೂಮಿಯನ್ನು ಒದಗಿಸುವುದಷ್ಟೇ ಅವಳ ಪಾತ್ರ ಎಂಬುದು ಆ ಕಾಲದ ಪ್ರಕಲ್ಪನೆಯಾಗಿದ್ದಿತು.

೧೮೨೭ರಲ್ಲಿ ಜರ್ಮನ್ ವಿಜ್ಞಾನಿ ಕಾರ್ಲ್ ಅರ್ನ್‌ಸ್ಟ್ ವಾನ್ ಬಾಯೆರ್ ಮಾನವ ಅಂಡ ಅಥವಾ ಅಂಡಾಣುವನ್ನು ಪತ್ತೆ ಹಚ್ಚಿದಾಗ ವಿಜ್ಞಾನ ಹಾಗೂ ಧಾರ್ಮಿಕ ಚಿಂತನೆಯಲ್ಲಿ ಹೊಸ ದೃಷ್ಟಿಕೋನವೊಂದು ಮೂಡಿತು. ಇದೇ ಇಂದಿನ ಭ್ರೂಣಶಾಸ್ತ್ರಕ್ಕೆ ಮೂಲನೆಲೆ ಒದಗಿಸಿರುವುದು. ಭ್ರೂಣಗಳು ಬೆಳವಣಿಗೆಯ ಮೊದಲ ಕೆಲವು ವಾರಗಳಲ್ಲಿ ಎರಡಾಗಿ ವಿಭಜನೆಗೊಳ್ಳುವ ಸಾಮರ್ಥ್ಯ ಹೊಂದಿರುತ್ತವೆ ಮತ್ತು ಏಕರೂಪದ ಅವಳಿಗಳನ್ನು ಸೃಜಿಸುತ್ತವೆ ಎಂದು ವಿಜ್ಞಾನಿಗಳು ಭಾವಿಸಿದರು. ಆದರೆ ಆತ್ಮಗಳು ಅವಿಭಾಜ್ಯ ಎಂದು ಬಹಳ ಕಾಲದಿಂದ ಒಪ್ಪಿಕೊಂಡು ಬಂದಿಲ್ಲವೇ ? ಆದ್ದರಿಂದ ಆತ್ಮವು ಜೀವಿಯೊಳಕ್ಕೆ ಅದು (ಆ ಜೀವಿ) ವಿಭಜನೆಗೊಳ್ಳುವ ಕೊನೆಯ ಅವಕಾಶದ ನಂತರವಷ್ಟೆ, ಅಂದರೆ ಅದು ಇನ್ನೆಷ್ಟು ಮಾತ್ರವೂ ವಿಭಜನೆಗೊಳ್ಳದು ಎಂದಾಗಲಷ್ಟೇ, ಸೇರಿಕೊಳ್ಳುತ್ತದೆ ಎಂದಾಯಿತಲ್ಲವೇ ? ಅಂದ ಮೇಲೆ ೧ ವಾರ ವಯಸ್ಸಿನ ಭ್ರೂಣಗಳನ್ನು ತೆಗೆದುಕೊಂಡು ಸ್ಟೆಮ್-ಸೆಲ್ ಸಂಶೋಧನೆ ಮಾಡುವುದರಲ್ಲಿ ತಪ್ಪೇನಿದೆ ? ಆಗ ಅದಕ್ಕಿನ್ನೂ ಆತ್ಮ ಸೇರಿಕೊಂಡಿರುವುದಿಲ್ಲವಾದ್ದರಿಂದ ಅದು ಜೀವಿಯ ಹತ್ಯೆಯೇನೂ ಆಗುವುದಿಲ್ಲ - ಎಂದು ಕೆಲವು ವಿಜ್ಞಾನಿಗಳು ವಾದಿಸಿದಲ್ಲಿ, ಇದಕ್ಕೆ ವಿರುದ್ಧವಾಗಿ ಸ್ಟೆಮ್-ಸೆಲ್ ಸಂಶೋಧನೆ ನಿಜಕ್ಕೂ ಜೀವಿ ಹತ್ಯೆಯೇ ಎಂದು ಇನ್ನು ಕೆಲವು ವಿಜ್ಞಾನಿಗಳು ವಾದಿಸಿದರು. ಇದು ಇಂದಿಗೂ ಅಪರಿಹಾರ್ಯ ಜಿಜ್ಞಾಸೆಯಾಗಿಯೇ ಉಳಿದಿದೆ.

**ಭಾವನೆಗಳ ಗೊಂದಲ, ತುಮುಲ....**

ಹೊಸ ವೈದ್ಯಕೀಯ ತಂತ್ರಜ್ಞಾನದ ಉದಯವಾಗಿರುವ ಈಚೆಗಿನ ದಶಕಗಳಲ್ಲಿ ಇದು, ಭ್ರೂಣ ಅಥವಾ ಆರಂಭಿಕ ಪಿಂಡ ಯಾರು ಅಥವಾ ಏನು, ಈ ಪೂರ್ವ-ಜೀವಿ ನಮ್ಮ ಗೌರವಕ್ಕೆ, ನಮ್ಮ ಪ್ರೀತಿಗೆ ಹಾಗೂ ಇನ್ನೂ ವಿಶಿಷ್ಟವಾಗಿ ನಮ್ಮ ರಕ್ಷಣೆಗೆ, ಎಷ್ಟರಮಟ್ಟಿಗೆ ಯೋಗ್ಯ ಎಂಬ ಬಗೆಗೆ ನಮ್ಮ ಭಾವನೆಗಳಲ್ಲಿ ಗೊಂದಲ ಹಾಗೂ ತುಮುಲವನ್ನು ಇನ್ನಷ್ಟು ಉತ್ಕರ್ಷಿಸಿದೆಯಷ್ಟೆ. ಆಧುನಿಕ ವೈದ್ಯ ವಿಜ್ಞಾನವು ಅಕಾಲ ಪ್ರಸವ ಅಥವಾ ಗರ್ಭಸ್ರಾವದ ವಿರುದ್ಧವೂ ಶಿಶು ಮರಣದ ವಿರುದ್ಧವೂ ಯಶಸ್ವಿಯಾಗಿ ಹೋರಾಟ ನಡೆಸಿ ಸಂರಕ್ಷಣೆಯ ನಾನಾ ಮಾರ್ಗೋಪಾಯಗಳನ್ನು ಕಂಡುಹಿಡಿದಿದೆ. ಇದರಿಂದಾಗಿ ಇಂದಿನ ಮಾತಾಪಿತರು ತಮ್ಮ ಇನ್ನೂ ಹುಟ್ಟದ ಸಂತಾನದ ಬಗೆಗೆ ಹೆಚ್ಚು ಮಮತೆ, ಅನುರಾಗ ಬೆಳೆಸಿಕೊಳ್ಳುವುದು ಸಾಧ್ಯವಾಗಿದೆ. ಹಿಂದೆಂದೂ ಹೀಗೆ ಅಜಾತ ಸಂತಾನದ ಬಗೆಗೆ ಅನುರಾಗ ಹೊಂದುವ ಸಾಹಸವನ್ನು ಅವರು ಮಾಡದಾಗಿದ್ದರು. ಹಿಂದೆ ಶಿಶುಮರಣ ಎಷ್ಟು ಹೆಚ್ಚಾಗಿದ್ದಿತೆಂದರೆ ಅನೇಕ ದೇಶ-ಸಂಸ್ಕೃತಿ- ಸಂಪ್ರದಾಯ ಗಳಲ್ಲಿ ಮಗು ಹುಟ್ಟುವುದಕ್ಕೂ ಮುನ್ನವೇ ಅದಕ್ಕೆ ಹೆಸರಿಡಲು ಹಿಂದೆಗೆಯುತ್ತಿದ್ದರು, ಶಿಶುವು ತಾಯಿಯ ಗರ್ಭದಿಂದ ಜೀವಂತವಾಗಿ ಹೊರಬರುವವರೆಗೂ ಅದಕ್ಕೆ ಹೆಸರಿಡುವುದನ್ನು ತಡವಾಗಿಸುತ್ತಿದ್ದರು. (ಅಂದಹಾಗೆ, ಅನೇಕ ಪಾಶ್ಚಿಮಾತ್ಯ ದೇಶಗಳಲ್ಲಿ ಶಿಶು ಜನನಕ್ಕೂ ಮುನ್ನವೇ, ಅದು ತಾಯಿಯ ಗರ್ಭದಲ್ಲಿದ್ದಾಗಲೇ, ತಾಯಿ ತಂದೆಯರು ಅದರ ಹೆಸರನ್ನು ನಿರ್ಧರಿಸಿ, ಅದು ಹುಟ್ಟಿದ ಕೂಡಲೇ ಆ ಹೆಸರನ್ನು ಆಸ್ಪತ್ರೆಯಲ್ಲಿ ದಾಖಲಿಸುವ ವಿಶೇಷ 'ನಾಮಕರಣ' ಸಮಾರಂಭಕ್ಕಾಗಿ ಕಾಯದಿರುವ ಪರಿಪಾಠವಿದೆ.)

೬೦ರ ದಶಕದ ಮಧ್ಯಭಾಗದಲ್ಲಿ ಲೆನಾರ್ಟ್ ನಿಲ್ಸನ್‌ರು ಆರಂಭಿಕ ದೆಸೆಯ ಮಾನವ ಭ್ರೂಣಗಳ ವರ್ಣಚಿತ್ರಗಳನ್ನು ತೆಗೆದು ಭಾರಿ ಕೋಲಾಹಲ ಎಬ್ಬಿಸಿದರು. ಖಗೋಳಯಾತ್ರಿಗಳು ಅಂತರಿಕ್ಷದಿಂದ ತೆಗೆದ ನಮ್ಮ ಭೂಮಿ ತಾಯಿಯ ಚಿತ್ರಗಳು ವೀಕ್ಷಕರಲ್ಲಿ ಹೇಗೆ ಒಂದು ರೀತಿಯ ಮಾತೃಸದೃಶ ವಾಸ್ತವಿಕ ತುಯ್ತ ಉಂಟುಮಾಡಿದವೋ ಹಾಗೆಯೇ ಮಾನವ ಭ್ರೂಣಗಳ ಈ ಚಿತ್ರಗಳು ನಮ್ಮ ತೋರ್ಕೆಯ ತೂಕರಹಿತ ಅದ್ಭುತರೂಪಿ

## ಆಜೀವ

ಬೆವರ ಮೂಡಿಸುವ
ಬಿಸಿಲೇ ನಮ್ಮ ಕಾಯಲಿ.
ಅಸಲೀ ನೇರ ನಮ್ಮ ತಟ್ಟಿ
ಎಲ್ಲ ಬಿಚ್ಚಲು ಪ್ರೇರಿಸುವುದು
ತಣ್ಣನೆಯ ಬಯಕೆ ದೇಹವ ಸುಡುವುದು.

ಕುಲುಮೆ ತಿದಿತುದಿಯ ನವಿರು ಕೆಂಡ
ಪ್ರಜ್ವಲಿಸಿ ದ್ರವಿಸುವುದು ಕಬ್ಬಿಣವ.
ಕರಗಿ ಬೇಕೆಂಬ ವಿನ್ಯಾಸಕ್ಕೆ ಅಷ್ಟು ಮೃದು;
ಕಿಡಿ ಕಾರಿದರೂ, ನೀರನೇ ಸುಟ್ಟರೂ.

ಕಣ್ಣಬಿಂಬದಲಿ ಸೂರ್ಯ ತುಂಬಿ
ಸೂರ‍್ಯಪಾನವೂ ಉನ್ಮತ್ತ ಲಯಗೀತ.
ಸತ್ವವನುರುಬಿ ಉರುಬಿ ಅರಳಿ
ಬಾನಿಗೆ ಮತ್ತೆ ಮುಖಕ್ಕೆ ರಾಚುವುದು.

ಎಂಥ ಬಿಸಿಲು ಅಂಥ ಬಿಸಿಲು
ಅಲೆಯಂಥ ಬೆಳಕು
ಅದೆಂಥ ಸಂದೇಶ
ರೋಮರೋಮದ ಕಾಂಡ ಮುಟ್ಟ
ಜಿನುಗಿಸುವುದು.

ಬೆವರೂ, ಘ್ರಾಣೋಲ್ಲಸಿತ ವಾಸನೆಯೂ
ಬಿಸಿಲಂಥ ಬಿಸಿಲೂ ಅರಿವ ಬಸಿರು
ಅದು ಅಳಿಯದುಳಿದು ನಮ್ಮ ಕಾಯಲಿ.

**ಸುರೇಶ, ಕೆ. ಪಿ.**
ಕಂಜರ್ಪಣೆ ಮನೆ, ಕುಕ್ಕಜಡ್ಕ ಅಂಚೆ (ವಯಾ ಸುಳ್ಯ)

ಪೂರ್ವಗಾಮಿಗಳ ಬಗೆಗೆ ನಮ್ಮಲ್ಲಿ ಹೊಸ ಮಟ್ಟಗಳ ಅನುಕಂಪದ ಅಲೆಗಳನ್ನೆಬ್ಬಿಸಿದವು.

ಈಚೆಗಂತೂ ಶ್ರವಣಾತೀತ ಸಾಧನಗಳು ಬಳಕೆಗೆ ಬಂದಿವೆ. ಅವುಗಳ ನೆರವಿನಿಂದ ತಾಯಿ ತಂದೆಯರು ಗರ್ಭಧಾರಣೆಯಾದ ಕೆಲವು ವಾರಗಳಲ್ಲೇ ಭ್ರೂಣಗಳ ನಿಕಟ ನೋಟ ಪಡೆಯಬಹುದಾಗಿದೆ. ಇದು ಇನ್ನೂ ಹುಟ್ಟದ ಶಿಶುವಿನ ಬಗೆಗೆ ತಾಯಿತಂದೆಯರಲ್ಲಿ ವಿಶೇಷ ರೀತಿಯ ಭಾವನಾತ್ಮಕ ಬೆಸುಗೆಯನ್ನು ದೃಢಗೊಳಿಸುವುದರಲ್ಲಿ ಯಶಸ್ವಿಯಾಗಿದೆ. ಆದರೆ ಅದೇ ಹೊತ್ತಿನಲ್ಲಿ ಆಮ್ನಿಅಸೆಂಟೇಸಿಸ್ (ಉಲ್ಬದ್ರವಚೂಷಣ – ಭ್ರೂಣದ ಒಳಪೊರೆಯಲ್ಲಿರುವ ದ್ರವವನ್ನು ಪರೀಕ್ಷಿಸಲು ಕೊಳವೆಯಂತಿರುವ ಸೂಜಿಯನ್ನು ಚುಚ್ಚಿ ದ್ರವದ ಸ್ವಲ್ಪ ಭಾಗವನ್ನು ತೆಗೆದುಕೊಳ್ಳುವ ವೈದ್ಯವಿಧಾನ) ಮತ್ತಿತರ ಪ್ರಸವಪೂರ್ವ ಪರೀಕ್ಷೆಗಳು ಲಭ್ಯವಿರುವುದು ಅನುಕೂಲದಂತೆ ಪ್ರತಿಕೂಲವಾಗಿಯೂ ಪರಿಣಮಿಸಬಹುದೆಂದು ಬರೂಚ್ ಕಾಲೇಜಿನ ಸಮಾಜವಿಜ್ಞಾನಿ ಬಾರ್ಬರ ಕಾಟ್ಸ್ ರಾತ್ಮನ್ ಅಭಿಪ್ರಾಯಪಡುತ್ತಾರೆ. ಹುಟ್ಟಲಿರುವ ಮಗು ಅನಾರೋಗ್ಯ ಪೀಡಿತ ಎಂದು ಈ ಪ್ರಯೋಗಗಳಿಂದ ತಿಳಿದ ತಾಯಿ ಗರ್ಭಪಾತಕ್ಕೂ ಸಿದ್ಧಳಾದ ಪ್ರಸಂಗಗಳೂ ಬೆಳಕಿಗೆ ಬಂದಿವೆ.

**ಧಾರ್ಮಿಕ ನಂಬಿಕೆ ಹಾಗೂ ವೈಜ್ಞಾನಿಕ ಚಿಂತನೆಗಳ ನಡುವೆ ಘರ್ಷಣೆ...**

ತಾಯಂದಿರ ಗರ್ಭದಲ್ಲಷ್ಟೇ ಅಲ್ಲ, ''ಗಾಜಿನ ತಟ್ಟೆಯೊಳಗೂ'', ಜೀವಿಯ ಹೊರಗಡೆ ಪ್ರನಾಳಗಳಲ್ಲೂ ಜೀವಾಂಕುರವಾಗುವಂತೆ ಮಾಡುವುದು ಸಾಧ್ಯವಿದೆ ಎಂದು ಪತ್ತೆ ಹಚ್ಚಲ್ಪಟ್ಟಾಗ ಧಾರ್ಮಿಕ ನಂಬಿಕೆ ಹಾಗೂ ವೈಜ್ಞಾನಿಕ ಚಿಂತನೆಗಳ ನಡುವಿನ ಘರ್ಷಣೆ ಹಿಂದೆಂದೂ ಕಂಡುಬರದಷ್ಟು ತಾರಕ ಮಟ್ಟಕ್ಕೇರಿತು. ೧೯೭೮ರಲ್ಲಿ ಲೂಯಿ ಬ್ರೌನ್ ಎಂಬಾಕೆ ಹುಟ್ಟಿದ್ದು ಹೀಗೆಯೇ. ಆಕೆ ತನ್ನ ಭ್ರೂಣಾತ್ಮಕ ಜೀವನದ ಅತ್ಯಾರಂಭಿಕ ದಿನಗಳನ್ನು ಪ್ರಯೋಗಶಾಲೆಯ ತಟ್ಟೆಯಲ್ಲಿ ಕಳೆದ ಮೊದಲ ಶಿಶುವಾಗಿದ್ದಳು.

ಆದರೆ ಪ್ರನಾಳದಲ್ಲಿ ಹುಟ್ಟಿದ ಈ ಶಿಶು ಆ ಗಾಜಿನ ನಳಿಕೆಯಲ್ಲಿ ಕೇವಲ ಜೀವಂತವಾಗಿರಬಲ್ಲುದಿದ್ದಿತಷ್ಟೇ. ಬೆಳೆಯಲು ಅದಕ್ಕೆ ಆ ಪರಿಸರದಲ್ಲಿ ಸಾಧ್ಯವಿರಲಿಲ್ಲ. ಆ ಸಾಮರ್ಥ್ಯ ಅದಕ್ಕಿರಲಿಲ್ಲ. ಇಂಥ ವಿಚಿತ್ರ ಪರಿಸ್ಥಿತಿಯಲ್ಲಿ ಭ್ರೂಣದ ಬಗೆಗೆ ಗೌರವದ ಭಾವನೆ ಇರಿಸಿಕೊಂಡೇ ಇರಬೇಕೇ ಎಂಬುದನ್ನು ಪುನರ್ ಪರಿಶೀಲಿಸುವಂತೆ ಈ 'ಪ್ರನಾಳ ಶಿಶು ಪ್ರಯೋಗ' ಒತ್ತಾಯಿಸಿತು. ಇದರಿಂದಾಗಿ ಗರ್ಭಪಾತ ಕೂಡದೆಂದು ಹೇಳುವುದೂ ಸಾಧ್ಯವಿದೆ. (ಏಕೆಂದರೆ ಪ್ರನಾಳದಲ್ಲಿರುವ ಭ್ರೂಣದಲ್ಲಿ 'ಜೀವ'ವಂತೂ ಇರುತ್ತದಷ್ಟೆ). ಮತ್ತೆ ಅದೇ ಹೊತ್ತಿನಲ್ಲಿ ಸ್ಟೆಮ್-ಸೆಲ್ ಸಂಶೋಧನೆಯನ್ನು ಮುಂದುವರಿಸಲೋಸುಗ ಭ್ರೂಣಹತ್ಯೆಯನ್ನು ಸಮರ್ಥಿಸುವುದೂ ಸಾಧ್ಯವಿದೆ. (ಏಕೆಂದರೆ, ಭ್ರೂಣದಲ್ಲಿ ಜೀವ ಇದ್ದರೂ ಅದಕ್ಕೆ ಬೆಳೆಯುವ ಸಾಮರ್ಥ್ಯವಿಲ್ಲದ್ದರಿಂದ ಅದನ್ನು ಪ್ರಯೋಗಗಳಿಗೆ ಬಳಸುವುದರಲ್ಲಿ ತಪ್ಪೇನಿಲ್ಲ ಎಂದಾಯಿತು.)

ಅಮೆರಿಕದ ಶಾಸನಸಭೆಯ ಕನ್ಸರ್ವೆಟಿವ್ ಪಕ್ಷದ ಸದಸ್ಯರೊಬ್ಬರು ಆರೋಗ್ಯ ಹಾಗೂ ಮಾನವಸೇವಾ ಸೆಕ್ರೆಟರಿಗೆ (ಸಚಿವ) ಪತ್ರವೊಂದನ್ನು ಬರೆದು, ಪ್ರನಾಳದಲ್ಲಿ ಅಥವಾ ಪ್ರಯೋಗಶಾಲೆಯ ತಟ್ಟೆಯಲ್ಲಿ ರೂಪುಗೊಳಿಸಿದ ಭ್ರೂಣವನ್ನು ತ್ಯಜಿಸುವುದರಲ್ಲಿ ತಪ್ಪೇನಿಲ್ಲ, ಕೊನೆಯ ಪಕ್ಷ ಸ್ಟೆಮ್-ಸೆಲ್ ಸಂಶೋಧನೆಯಂಥ ಆಶಾದಾಯಕ ಪ್ರಯೋಗಗಳ ಉದ್ದೇಶಕ್ಕಾಗಿ ಅದರ ಬಳಕೆ ಅಪರಾಧವಲ್ಲ ಎಂದು ವಾದಿಸಿದರು. ಏಕೆಂದರೆ ಪ್ರಯೋಗಶಾಲೆಯ ತಟ್ಟೆಯಲ್ಲಿ ಇರುವಂಥ ಭ್ರೂಣವು ಜೀವಂತ ವ್ಯಕ್ತಿಯಾಗಿ ಬೆಳೆಯುವ ಸಾಮರ್ಥ್ಯ ಹೊಂದಿರುವುದಿಲ್ಲ. ಮಹಿಳೆಯೊಬ್ಬಳ ಗರ್ಭಾಶಯದೊಳಕ್ಕೆ ವರ್ಗಾಯಿಸಿದ ನಂತರವಷ್ಟೇ ಈ ಭ್ರೂಣವು ಒಬ್ಬ ಜೀವಂತ ವ್ಯಕ್ತಿಯಾಗಿ ವೃದ್ಧಿಗೊಳ್ಳುವ ಸಹಜ ಸಾಮರ್ಥ್ಯ ಪಡೆಯಬಲ್ಲದು ಮತ್ತು ಆನಂತರವಷ್ಟೇ ಅದನ್ನು ಸಂರಕ್ಷಿಸುವುದರಲ್ಲಿ ಆಸಕ್ತಿ ತಳೆಯುವುದು ಉಚಿತವಾಗುತ್ತದೆ ಎಂದಾತ ಪ್ರತಿಪಾದಿಸಿದರು.




**'ಸಂಭಾವ್ಯ' ಜೀವಿ –'ಪ್ರಚ್ಛನ್ನ' ಜೀವಿ....**

ಈ ವಾದವು ಒಂದು ರೀತಿಯಲ್ಲಿ ಜೀವಿಯೊಳಕ್ಕೆ ಆತ್ಮ ಸೇರಿಕೊಳ್ಳುವುದು ತಡವಾಗಿಯಷ್ಟೇ ಎಂಬ ಹಳೆಯ ಪ್ರಕಲ್ಪನೆಯನ್ನೇ ಮರುಧ್ವನಿಸುತ್ತದೆ. ಈಚೆಗಿನ ಕೆಲವು ತತ್ವಜ್ಞಾನಿಗಳೂ ತಮ್ಮ ಬರವಣಿಗೆಗಳಲ್ಲಿ ಹೆಚ್ಚು ಕಡಿಮೆ ಇದೇ ಮನೋಭಾವ ವ್ಯಕ್ತಪಡಿಸಿದ್ದಾರೆ. ಅವರು 'ಸಂಭಾವ್ಯ' ಜೀವಿ ಹಾಗೂ 'ಪ್ರಚ್ಛನ್ನ' ಜೀವಿ ಎಂದು ಜೀವಿಗಳಲ್ಲಿ ಎರಡು ರೀತಿಯ ಭಿನ್ನತೆಯನ್ನು ಗುರುತಿಸಿದ್ದಾರೆ. ಪ್ರನಾಳದಲ್ಲಿದ್ದಾಗ ಅದು 'ಸಂಭಾವ್ಯ' ಜೀವಿ. ಇದು 'ಪ್ರಚ್ಛನ್ನ' ಜೀವಿ ಆಗಬೇಕಾದರೆ ಅದಕ್ಕಾಗಿ ವಿಶೇಷ ನಿರ್ಧಾರ ಕೈಗೊಳ್ಳಬೇಕು. ಅದೇ ಸ್ವತಂತ್ರವಾಗಿ ವಿಕಾಸಗೊಳ್ಳಲು ಸಾಧ್ಯವಿರುವಂಥ ಸೂಕ್ತ ಪರಿಸ್ಥಿತಿಯನ್ನು ಅದಕ್ಕೆ ಸೃಜಿಸಿಕೊಡಬೇಕು. ಆಗಷ್ಟೇ ಈ ಪರಿವರ್ತನೆ ಸಾಧ್ಯ ಎಂದು ಮಿನಿಯಾಪೊಲಿಸ್‌ನ ತತ್ವಜ್ಞಾನಿ ಹಾಗೂ ಜೀವ ನೀತಿಶಾಸ್ತ್ರಜ್ಞ ಕರೋಲ್ ಟಾವರ್ ವಾದಿಸಿದ್ದಾರೆ.

ತೀರ ಈಚೆಗೆ 'ಡಾಲಿ' ಕುರಿಯ ಪ್ರತಿರೂಪ ಜನನವು ನಮ್ಮ ಕೋಶೀಯ ಪೂರ್ವಜರ ಬಗೆಗೆ ನಾವು ಎಲ್ಲಿ ಮತ್ತು ಎಷ್ಟು ಮೌಲ್ಯ ನೀಡಬೇಕು ಎಂಬುದಕ್ಕೆ ಸಂಬಂಧಿಸಿ ನಮ್ಮ ಶೋಧೆಯನ್ನು ಮತ್ತೆ ಮುಂತಂದಿದೆ. ಮುಂದಿನ ಪೀಳಿಗೆಯ ಒಬ್ಬ ಸದಸ್ಯನನ್ನು ಸೃಜಿಸಲು ಲೈಂಗಿಕವಾಗಿ ಉತ್ಪಾದಿತವಾದ ಭ್ರೂಣ ಕೂಡ ಬೇಕಾಗಿಲ್ಲ ಎಂಬುದು ಈ ಕ್ಲೋನಿಂಗ್ (ಪ್ರತಿರೂಪ ಸೃಷ್ಟಿ) ನಮಗೆ ಕಲಿಸಿದ ಪಾಠವಾಗಿದೆ. ನಾವು ಪ್ರತಿದಿನವೂ ನಮ್ಮ ಶರೀರದಿಂದ ಸಾವಿರ-ಸಾವಿರ ಸಂಖ್ಯೆಯಲ್ಲಿ ಹೊರಹಾಕುವ ಚರ್ಮ-ಕೋಶಗಳಲ್ಲಿ ಒಂದೊಂದರಿಂದಲೂ ಒಬ್ಬ ಪ್ರಚ್ಛನ್ನ ವ್ಯಕ್ತಿಯನ್ನು ಸೃಜಿಸಬಹುದು. ಅದಕ್ಕೆ ಸೂಕ್ತ ಕುಶಲತೆಯ ವ್ಯವಸ್ಥೆ ಅವಶ್ಯವಷ್ಟೆ ಎಂಬುದೀಗ ಸರ್ವಾಂಗೀಕೃತ ಅಂಶವಾಗತೊಡಗಿದೆ.

ಹೀಗಿರುವಾಗ, ನಾವು ಪ್ರತಿದಿನವೂ ಹೊರಹಾಕುತ್ತಿರುವ ಈ ಸಾವಿರ-ಸಾವಿರ ಸಂಖ್ಯೆಯ ಸಂಭವನೀಯ ವ್ಯಕ್ತಿಗಳಿಗೆ ಅಂತಿಮ ಸಂಸ್ಕಾರ ನೀಡುವ ಬಗೆಗೆ ಯಾರೇ ಆಗಲಿ ತಲೆ ಕೆಡಿಸಿಕೊಂಡಿದ್ದಾರೆಯೇ ? ಭ್ರೂಣಗಳ ಕುರಿತು ಹಿಂದೆ ನೈತಿಕ ಪ್ರಶ್ನೆಯನ್ನೆತ್ತಿ ಅವುಗಳ ಸಂರಕ್ಷಣೆಯನ್ನು ಅತ್ಯಂತ ಹುರುಪಿನಿಂದ ಸಮರ್ಥಿಸುತ್ತಿದ್ದ ಜನರೂ ಈಗ ಈ ಕ್ಲೋನಿಂಗ್‌ನ ಉತ್ಪನ್ನಕ್ಕೂ – ಭ್ರೂಣದಂತೆಯೇ ತೋರುವ, ಆದರೆ ವೀರ್ಯದಿಂದ ಉತ್ಪಾದಿತವಾದ ಭ್ರೂಣದಿಂದ ತೀರ ಭಿನ್ನವಾದ ಜೈವಿಕ ಮೂಲ ಹೊಂದಿರುವ ಈ ಕ್ಲೋನಿಂಗ್ ಉತ್ಪನ್ನಕ್ಕೂ – ಅದೇ ನೈತಿಕ ಮೌಲ್ಯ ನೀಡುವುದು ತರವೇ ಎಂದು ಚಿಂತಿಸತೊಡಗಿದ್ದಾರೆ.

ಅಬೀಜ ಸಂತಾನ ಸೃಷ್ಟಿ (ಕ್ಲೋನಿಂಗ್) ಕ್ಷೇತ್ರದಲ್ಲಿ ಸಂಶೋಧನೆಯಲ್ಲಿ ತೊಡಗಿರುವ ಕೆಲವು ವಿಜ್ಞಾನಿಗಳೂ ನೈತಿಕವಾದಿಗಳೂ ಈ ಸಮಸ್ಯೆಯನ್ನು ಬಗೆಹರಿಸಲು ಒಂದು ಸುಲಭೋಪಾಯ ಸೂಚಿಸುತ್ತಿದ್ದಾರೆ. ಅಬೀಜಸಂತಾನ ಕ್ರಿಯೆಯ ಆರಂಭದಲ್ಲಿ ಲಭಿಸುವ ಉತ್ಪನ್ನವನ್ನು ಬೇರೆಯೇ ಹೆಸರಿನಿಂದ ಕರೆಯೋಣ. ಅದನ್ನು 'ಭ್ರೂಣ' ಎಂದು ಕರೆಯುವುದೇ ಬೇಡ ಎಂದು ಅವರು ಭಾಷಾಶಾಸ್ತ್ರೀಯ ಪರಿಹಾರ ಸೂಚಿಸುತ್ತಿದ್ದಾರೆ. ಇದರಿಂದ ವಿವಾದಕ್ಕೆ ಹೆಚ್ಚು ವೈಜ್ಞಾನಿಕವಾದ ಹಾಗೂ ವೈಚಾರಿಕವಾದ ಲಕ್ಷಣ ಒದಗಿಸಿದಂತಾಗುತ್ತದೆ ಎಂದವರು ಅಭಿಪ್ರಾಯಪಡುತ್ತಾರೆ. ಮೆಸಾಚುಸೆಟ್ಸ್‌ನಲ್ಲಿ ಮಾನವ ಭ್ರೂಣ ಪ್ರತಿರೂಪ ನಿರ್ಮಾಣ ಸಂಶೋಧನೆಯಲ್ಲಿ ತೊಡಗಿರುವ ಕಂಪನಿಯ ಪ್ರೌಢಕೋಶ ಯಂತ್ರಕಲಾ ಮಂಡಲಿಯ ನೈತಿಕ ಸಲಹೆಗಾರರಲ್ಲೊಬ್ಬರಾದ ಹಾರ್ವರ್ಡ್ ಪ್ರಾಧ್ಯಾಪಕ ಆನ್ ಕೀಪ್ಲಿಂಗ್‌ರವರು ಕ್ಲೋನಿಂಗ್‌ನಿಂದ ಸೃಜಿತವಾದ ಭ್ರೂಣ-ಸದೃಶ ವಸ್ತುವಿಗೆ 'ಓವಸೋಮ್' ಎಂಬ ಹೆಸರು ಸೂಚಿಸಿದ್ದಾರೆ. ಈ ಪದವು ಓವ (ಅಂಡ) ಮತ್ತು ಸೋಮ್(ತನು/ಒಡಲು) ಎಂಬ ಪದಮೂಲಗಳ ಸಮ್ಮಿಳನವಾಗಿದೆ. ಆದರೆ ಕಂಪನಿಯ ಅಧ್ಯಕ್ಷರೂ ಪ್ರಧಾನ ಕಾರ್ಯ ನಿರ್ವಾಹಕರೂ ಆದ ಮೈಕೇಲ್ ವೆಸ್ಟ್‌ರವರು 'ನ್ಯೂಕ್ಲಿಯರ್ ಟ್ರಾನ್ಸ್‌ಫರ್-ಡಿರೈವ್ಡ್ ಬ್ಲಾಸ್ಟೊಸಿಸ್ಟ್' (ಬೈಜಿಕ ವರ್ಗಾವಣೆ-ಲಬ್ಧ ಭ್ರೂಣಪೊರೆ ಕೋಶ) ಎಂಬ ಅಷ್ಟು ಆಕರ್ಷಕವಲ್ಲದ ಆದರೆ ವೈಜ್ಞಾನಿಕವಾಗಿ ಹೆಚ್ಚು ಸರಿಯಾದ ಪದಪುಂಜವನ್ನು ಹೆಚ್ಚು ಇಷ್ಟಪಡುತ್ತಾರೆ.

ಗಂಡಿನ ವೀರ್ಯಾಣು ಹಾಗೂ ಹೆಣ್ಣಿನ ಅಂಡಾಣು ಮಿಳನಗೊಂಡ ಕ್ಷಣದಲ್ಲೇ ಜೀವೋತ್ಪತ್ತಿಯಾಗುತ್ತದೆ ಎಂದು ಹಳೆಯ ನಂಬಿಕೆಯನ್ನು ಬೆಂಬಲಿಸುವವರು ಮೇಲಿನ ಆಧುನಿಕ ವಿಜ್ಞಾನಿಗಳ ಯತ್ನಗಳನ್ನು ಸ್ಪಷ್ಟವಾಗಿಯೇ ವಿಷಯವನ್ನು ಜಟಿಲಗೊಳಿಸುವ ಅವಿವೇಕ ಎಂದು ಜರಿಯುತ್ತಿರುವುದರಲ್ಲಿ ಆಶ್ಚರ್ಯವೇನಿಲ್ಲ. ''ಇದು ಆರ್ವೆಲ್‌ನ ಪುನರಾವತಾರ. ಇದು ವಿಷಯವನ್ನು ಅಸ್ಪಷ್ಟಗೊಳಿಸುವ ಸೌಮ್ಯಭಾಷಾ ತಂತ್ರ'' ಎಂದು ಷಿಕಾಗೋ ವಿಶ್ವವಿದ್ಯಾಲಯದ ನೀತಿಶಾಸ್ತ್ರಜ್ಞ ಲಿಯೋನ್ ಕಾಸ್ ಉದ್ಗರಿಸುತ್ತಾರೆ. ''ವಸ್ತುಗಳನ್ನು ಅವುಗಳ ನಿಜವಾದ ಹೆಸರುಗಳಿಂದ ಕರೆಯೋಣ. ಪಾಪ ಎಸಗಲೇಬೇಕು ಎನ್ನುವುದಾದರೆ ಧೈರ್ಯದಿಂದ ಎಸಗೋಣ. 'ಭ್ರೂಣ' ಎಂಬ ಪದವನ್ನೇ ಬಳಸೋಣ, ಅದರಲ್ಲಿ ತಪ್ಪೇನಿಲ್ಲ'' ಎನ್ನುತ್ತಾರೆ ಅವರು.

**ವೈಪರೀತ್ಯಗಳ ಹೊಂದಾಣಿಕೆ...**

ಕೊನೆಯಲ್ಲಿ, ವಿಜ್ಞಾನ, ಧರ್ಮ ಅಥವಾ

ಅಂತರ್ಬೋಧೆ ಇವುಗಳಲ್ಲಿ ಯಾವುದು ಸರಿ ಎಂಬುದಲ್ಲ ಮುಖ್ಯವಾದುದು. ಜನರ ಭಿನ್ನವಿಭಿನ್ನವಾದ ಹಾಗೂ ಸತತವಾಗಿ ಬದಲುತ್ತಿರುವ ಭಾವನೆ ಸಂವೇದನೆಗಳನ್ನೆಲ್ಲ ಪರಿಗಣನೆಗೆ ತಂದುಕೊಂಡು ಅವುಗಳನ್ನೆಲ್ಲ ಸಾಮರಸ್ಯವಾಗಿ ಹೊಂದಾಣಿಸಿ ಆದಷ್ಟೂ ಉದಾರವಾದ ಒಂದು ನೀತಿಯನ್ನು ನಿರ್ಮಿಸುವುದು ಇಂದಿನ ಅಗತ್ಯವಾಗಿದೆ.

ಧಾರ್ಮಿಕ ಅಭಿಪ್ರಾಯಗಳನ್ನು ಕಾನೂನುಗಳೊಳಕ್ಕೆ ಸೇರಿಸಲು/ಅಳವಡಿಸಲು ಹೋದಾಗ ವಿಚಿತ್ರ ಪರಿಸ್ಥಿತಿಗಳು ಉದ್ಭವಿಸಬಹುದು. ಉದಾಹರಣೆಗೆ, ''ಗರ್ಭಧಾರಣೆಯಾದ ಘಳಿಗೆಯಲ್ಲೇ ಜೀವೋತ್ಪತ್ತಿಯಾಗುತ್ತದೆ'' ಎಂಬ ಧಾರ್ಮಿಕ ನಂಬಿಕೆಯನ್ನು ಮಿಸ್ಸೌರಿಯ ಗರ್ಭಪಾತ-ವಿರೋಧಿ ಶಾಸನದ ಪೂರ್ವ ಪೀಠಿಕೆಯಲ್ಲೇ ಸುಸ್ಪಷ್ಟವಾಗಿ ಸೇರಿಸಲಾಗಿದೆ. ಸಾಲದೆನ್ನುವಂತೆ ಇದೇ ಧಾರ್ಮಿಕ ನಂಬಿಕೆ ಮಿಸ್ಸೌರಿಯ ಎಲ್ಲ ನ್ಯಾಯಶಾಸನಗಳಿಗೂ ಅನ್ವಯವಾಗುತ್ತದೆಂದು ಆ ರಾಜ್ಯದ ಸರ್ವೋಚ್ಚ ನ್ಯಾಯಾಲಯವೂ ತನ್ನ ತೀರ್ಪೊಂದರಲ್ಲಿ ಘೋಷಿಸಿಬಿಟ್ಟಿದೆ. ಇದು ಅನೇಕ ಪ್ರಸಂಗಗಳಲ್ಲಿ ಅನರ್ಥಕಾರಿ ಪರಿಣಾಮಗಳಿಗೆ ದಾರಿ ಮಾಡಿಕೊಟ್ಟಿದೆ. ಉದಾಹರಣೆಗೆ, ಕಾರು ಚಾಲಕ ಪರವಾನಗಿ (ಲೈಸೆನ್ಸ್) ವ್ಯಕ್ತಿಯೊಬ್ಬನಿಗೆ ೧೮ನೆಯ ವಯಸ್ಸು ದಾಟಿದ ಮೇಲಷ್ಟೇ ನೀಡಲಾಗುವುದು ಎಂಬ ನಿಯಮವೊಂದಿದೆ. ಆದರೆ ವ್ಯಕ್ತಿಯೊಬ್ಬ ಒಂಬತ್ತು ತಿಂಗಳ ಮುನ್ನವೇ ತನಗೆ ಚಾಲಕ ಲೈಸೆನ್ಸ್ ನೀಡಬೇಕೆಂದು ಆಗ್ರಹಿಸಲು ಮೇಲಿನ ಘೋಷಣೆ ಅವಕಾಶ ಮಾಡಿಕೊಟ್ಟಿದೆ. ಏಕೆಂದರೆ ವ್ಯಕ್ತಿಯ ವಯಸ್ಸು ಜನನ ಪ್ರಮಾಣಪತ್ರದ ಪ್ರಕಾರ ೧೮ ವರ್ಷ ಎಂದಿದ್ದರೂ ತನ್ನ ಹುಟ್ಟು, ಸರ್ವೋಚ್ಚ ನ್ಯಾಯಾಲಯದ ವಿವರಣೆಯ ಮೇರೆಗೆ, ಒಂಬತ್ತು ತಿಂಗಳ ಮುನ್ನವೇ (ಅಂದರೆ ತನ್ನ ತಂದೆಯ ವೀರ್ಯಾಣು ಹಾಗೂ ತಾಯಿಯ ಅಂಡಾಣು ಜೊತೆಗೂಡಿದ ಘಳಿಗೆಯಿಂದಲೇ) ಆಗಿದೆಯಾದ್ದರಿಂದ ತನ್ನ ವಯಸ್ಸೀಗ ೧೮ ವರ್ಷ ಒಂಬತ್ತು ತಿಂಗಳು ಎಂದವನು ವಾದ ಮಾಡಬಹುದು. ಹಾಗೆ ವಾದ ಮಾಡಿದ ಕೆಲವು ಪ್ರಸಂಗಗಳೂ ಬೆಳಕಿಗೆ ಬಂದಿವೆ. ಹಾಗಾಗಿ ಧಾರ್ಮಿಕ ನಂಬಿಕೆಗಳನ್ನು (ಅವು ಎಷ್ಟೇ ಸನಾತನ ಹಾಗೂ ಸತ್ಯಸ್ಯಸತ್ಯ ಎಂದು ದೃಢವಾಗಿ ನಂಬಲಾಗಿದ್ದರೂ) ನಿತ್ಯಜೀವನದ ಕಾನೂನಿನ ಪರಿಧಿಯೊಳಕ್ಕೆ ತರುವುದು ಸಲ್ಲ ಹಾಗೂ ಅನುಚಿತ ಎಂದಾಯಿತು.

ಇದೇ ರೀತಿ ಕೇವಲ ವೈಜ್ಞಾನಿಕ ವಿಚಾರಕ್ಕನುಗುಣವಾಗಿ ಚಿಂತನೆ ಮಾಡಹೊರಟಾಗಲೂ ಇಂಥವೇ ಅನಾಹುತಗಳಿಗೆ ಎಡೆಮಾಡಿಕೊಟ್ಟ ಪ್ರಸಂಗಗಳೂ ಇವೆ. ಉದಾಹರಣೆಗೆ, ೧೯೬೮ರಲ್ಲಿ ವಿಶ್ವವಿಖ್ಯಾತ ವಿಜ್ಞಾನಿಗಳ ವೃಂದವೊಂದು ವ್ಯಕ್ತಿಯ ಸಾವಿಗೆ ಸಂಬಂಧಿಸಿ ಒಂದು ವಿವರಣೆ ನೀಡಿತು. ಹೃದಯದ ಬಡಿತವು ಅವಿಪರ್ಯಯವಾಗಿ ನಿಂತಾಗಲಷ್ಟೆ ಸಾವು ಸಂಭವಿಸಿತೆಂಬುದು ಹಳೆಯ ನಿರೂಪಣೆಯಷ್ಟೆ, ಇದು ತೀರ ಸಂಕುಚಿತವಾದುದು ಎಂದದು ಘೋಷಿಸಿತು. ಬದಲಿಗೆ ''ಮಿದುಳು ಸಾವು'' (ಬ್ರೈನ್ ಡೆತ್) ಎಂಬ ಹೊಸ ಪ್ರಕಲ್ಪನೆಯನ್ನು ಜಾರಿಗೆ ತಂದಿತು. ಇದರಿಂದ ಭಾರಿ ಅನಾಹುತವಾಗಬಹುದೆಂದು ಕೆಲವು ಜನ ಅಂಜಿಕೆ ವ್ಯಕ್ತಪಡಿಸಿದರೂ ಇದು ಕಾನೂನಿನೊಳಕ್ಕೂ ನುಸುಳಿಕೊಂಡಿತು. ಎಷ್ಟೋ ವೇಳೆ ವ್ಯಕ್ತಿಯೊಬ್ಬನ ಹೃದಯದ ಮಿಡಿತ ನಿಂತ ಮೇಲೂ ಜೀವಾಧಾರಕ ಯಂತ್ರಗಳ (ಉದಾಹರಣೆಗೆ ಉಸಿರಾಟದ ಯಂತ್ರದ) ಸಹಾಯದಿಂದ ಅವನನ್ನು ''ಜೀವಂತವಾಗಿ'' ಇರಿಸಿರಲಾಗುತ್ತದೆ. ಅಂಥ ವ್ಯಕ್ತಿಯನ್ನೂ 'ಸತ್ತವನು' ಎಂದು ಘೋಷಿಸಲು ಈ 'ಮಿದುಳುಸಾವಿ'ನ ಪ್ರಕಲ್ಪನೆ ಒಂದು ನೆಪ ಒದಗಿಸಿಕೊಡುತ್ತದೆ ಎಂದು ಅವರು ಅಂಜಿಕೆ ವ್ಯಕ್ತಪಡಿಸಿದ್ದಾರೆ.

ಆದ್ದರಿಂದ ತಲೆತಲಾಂತರಗಳಿಂದ ಒಪ್ಪಿಕೊಂಡು ಬಂದ ಭಾವನೆಗಳಷ್ಟೆ ಸರ್ವ ಸಮರ್ಪಕ ಸರ್ವಸಮ್ಮತ ಎಂದು ಭಾವಿಸುವುದು ಎಷ್ಟು ಅನುಚಿತವೋ, ಕೇವಲ ಆಧುನಿಕ ವೈಜ್ಞಾನಿಕ ವಿಚಾರಗಳಷ್ಟೆ ನಂಬಲರ್ಹ, ಅನುಕರಣಾರ್ಹ ಎಂದು ಭಾವಿಸುವುದೂ ಅಷ್ಟೇ ಅನುಚಿತ ಎಂದು 'ವಾಷಿಂಗ್ಟನ್ ಪೋಸ್ಟ್' ಲೇಖಕ ರಿಕ್‌ವೀಸ್ ಕೊನೆಯಲ್ಲಿ ತೀರ್ಮಾನಕ್ಕೆ ಬಂದಿದ್ದಾರೆ. ನಮ್ಮ ಜೀವಗಳ ಅತ್ಯಂತ ಆರಂಭಕ ಮಾರ್ದನಿಗಳನ್ನು - ನಮ್ಮ ಜನನ ಕಾಲಕ್ಕಷ್ಟೇ ಅಲ್ಲ, ನಮ್ಮ ಭ್ರೂಣೀಯ ಬೇರುಗಳ ಕಾಲಕ್ಕಷ್ಟೇ ಅಲ್ಲ, ಅದಕ್ಕೂ ಹಿಂದಕ್ಕೆ ತೀರ ತೀರ ಹಿಂದಕ್ಕೆ ಭೂಮಿಯ ಮೇಲೆ ಜೀವದ ಮೊದಲ ಪಿಂಡೀಕರಣವಾದಷ್ಟು ಹಿಂದಕ್ಕೆ ಹೋಗಿ ಆಗಿನ ಮಾರ್ದನಿಗಳನ್ನು – ತಿಳಿದುಕೊಳ್ಳಲು ಮತ್ತು ಅವಕ್ಕೆ ಸೂಕ್ತ ಅರ್ಥ ನೀಡಲು ನಾವು ನಮ್ಮ ಇನ್ನೂ ಮಿಡಿಯುತ್ತಿರುವ ಹೃದಯಗಳ ಬಡಿತವನ್ನು ಬಹು ಎಚ್ಚರಿಕೆಯಿಂದ ಕೇಳಿಸಿಕೊಳ್ಳುವುದು ಅತ್ಯವಶ್ಯ ಎಂದವರು ತಿಳಿಸುತ್ತಾರೆ.

ಅಮೆರಿಕದ ಅಧ್ಯಕ್ಷರ ಮುಂದಿರುವ ಸಲಹೆಯೊಂದು, ಪ್ರಯೋಗಶಾಲೆಯ ಪ್ರನಾಳದಲ್ಲಿ ಫಲೀಕರಣಗೊಳಿಸಿದ ನಂತರ ಉಳಿದ ಹಾಗೂ ಬಿಸುಡಲಾಗುವಂಥ ಮಿಗುತಾಯ ಭ್ರೂಣಗಳಿಂದ ಪಡೆದ ಸ್ಟೆಮ್-ಸೆಲ್‌ಗಳನ್ನು ಸಂಶೋಧನೆಗೆ ಬಳಸಲು ಅವಕಾಶ ಮಾಡಿಕೊಡುತ್ತದೆ. ಗರ್ಭಪಾತವನ್ನು ವಿರೋಧಿಸುವವರಲ್ಲೂ ರೋಮನ್ ಕ್ಯಾಥೊಲಿಕ್ಕರಲ್ಲೂ ಬಹುಮಂದಿ ಈ ಸಲಹೆಗೆ ಬೆಂಬಲ ನೀಡಿದ್ದಾರೆ. ಆದರೆ ಸಂಶೋಧನೋದ್ದೇಶಕ್ಕಾಗಿ ಅಂಡಾಣು ಹಾಗೂ ವೀರ್ಯಾಣುಗಳಿಂದ ಭ್ರೂಣಗಳನ್ನು ಸೃಜಿಸುವುದಕ್ಕೆ ಅಂತಹ ಒಮ್ಮತದ ಬೆಂಬಲವಿಲ್ಲ. ಅದೇ ರೀತಿ ಕೇವಲ ಸ್ಟೆಮ್-ಸೆಲ್‌ಗಳನ್ನು ಪಡೆಯಲೆಂದೇ ಭ್ರೂಣಗಳನ್ನು ಕ್ಲೋನ್ ಮಾಡುವುದಕ್ಕೂ ಬೆಂಬಲವಿಲ್ಲ. ಆದರೂ, ಹಸುವಿನ ಅಂಡಾಣುಗಳನ್ನು ಮಾನವ ಬೀಜಕಣಗಳೊಂದಿಗೆ ಬೆಸೆಯುವ ಪ್ರಯೋಗಗಳನ್ನು ಮೆಸ್ಸಾಚುಸೆಟ್ಸ್‌ನ ಕಂಪನಿಯೊಂದು ಹಲವು ವರ್ಷಗಳ ಹಿಂದೆ ಪ್ರಾರಂಭಿಸಿ ಈಗಲೂ ತೆರೆಮರೆಯಲ್ಲಿ ನಡೆಸುತ್ತಲೇ ಇದೆ ಎಂಬ ಸುದ್ದಿಯೂ ಪ್ರಕಟಗೊಂಡಿದೆ.

**ಬ್ರಿಟನ್ನಿನಲ್ಲಿ ವಿರುದ್ಧ ದಿಕ್ಕಿನಲ್ಲಿ ಮುನ್ನಡೆ....**

ಯಾವುದು ಅನುಮತಿಗೆ ಅರ್ಹ ಹಾಗೂ ಯಾವುದು ಅನರ್ಹ ಎಂಬವುಗಳನ್ನು ಪ್ರತ್ಯೇಕಿಸುವ ನೈತಿಕ ಹಾಗೂ ಕಾನೂನೀಯ ಗೆರೆ ಎಳೆಯುವುದು ಅಷ್ಟು ಸುಲಭವಲ್ಲ ಎಂಬುದು ಮೇಲಿನ ನಿದರ್ಶನಗಳಿಂದ ತಿಳಿದುಬರುತ್ತದೆ. ಅಮೆರಿಕದಲ್ಲಿ ಈ ಬಗೆಗೆ ಇನ್ನೂ ವಾದವಿವಾದ ನಡೆಯುತ್ತಿರುವಾಗಲೇ ಬ್ರಿಟನ್ನಿನಲ್ಲಿ ಈ ಕ್ಷೇತ್ರದಲ್ಲಿ ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ಈಗಾಗಲೇ ಎರಡು ವರ್ಷಗಳಿಂದ ಭಾರಿ ಮುನ್ನಡೆ ಸಾಧಿಸಲಾಗಿದೆ. ಇಲ್ಲಿ ೧೯೯೦ರಲ್ಲಿ 'ಮಾನವ ಫಲೀಕರಣ ಹಾಗೂ ಭ್ರೂಣಶಾಸ್ತ್ರ ಕಾಯಿದೆ'ಯೊಂದನ್ನು ಅಂಗೀಕರಿಸಲಾಯಿತು. ಪ್ರನಾಳಗಳಲ್ಲಿ ಫಲೀಕರಣ ಪ್ರಯೋಗಗಳು, ದಾನವಾಗಿ ಇತ್ತ ಅಂಡಾಣುಗಳು ಹಾಗೂ ವೀರ್ಯಾಣುಗಳು, ಭ್ರೂಣ ಸಂಶೋಧನೆ – ಇವೆಲ್ಲವುಗಳ ಬಗೆಗೆ ಈ ಕಾಯಿದೆ ಸಮಗ್ರ ನಿಯಮ ರೂಪಿಸುವುದರ ಜೊತೆಗೆ ಅಂತಹ ಸಂಶೋಧನೆಗಾಗಿ ಮಾನವ ಭ್ರೂಣಗಳನ್ನು ಸೃಜಿಸುವುದಕ್ಕೂ ಅವಕಾಶ ನೀಡಿದೆ.

'ಡಾಲಿ' ಕುರಿ ನೀಡಿದ ತಂತ್ರಗಳನ್ನು ಬಳಸಿಕೊಂಡು, ಆದರೆ ಸ್ತ್ರೀಯ ಗರ್ಭದೊಳಕ್ಕೆ ಕ್ಲೋನ್‌ಗಳನ್ನು (ಅಬೀಜಗಳನ್ನು) ಸೇರಿಸುವುದನ್ನು ಹೊರತುಪಡಿಸಿ (ಹೊಸ ಶಾಸನವೊಂದರ ಮೂಲಕ ಇದನ್ನು ನಿಷೇಧಿಸಲಾಗುವುದು), ಕ್ಲೋನಿಂಗ್ ಮೂಲಕ ಮಾನವ ಭ್ರೂಣಗಳ ಸೃಜನೆ; ಸ್ಟೆಮ್-ಸೆಲ್ ಸಂಶೋಧನೆ ಹಾಗೂ ಚಿಕಿತ್ಸೆ – ಇವುಗಳಿಗೆ ಅವಕಾಶ ನೀಡುವಂಥ ತಿದ್ದುಪಡಿಯೊಂದನ್ನು ಮೇಲಿನ ಕಾಯಿದೆಗೆ ಸೇರಿಸಲಾಗಿದ್ದು ಈ ಕಾಯಿದೆ ೨೦೦೧ರ ಜನವರಿಯಲ್ಲಿ ಒಂದು ಶಾಸನವಾಗಿ ಅಂಗೀಕೃತವಾಗಿದೆ. ಹೀಗೆ ಕ್ಲೋನ್ ಮಾಡಿದ ಭ್ರೂಣಗಳನ್ನು ಸ್ಟೆಮ್-ಸೆಲ್‌ಗಳ ಆಕರವಾಗಷ್ಟೆ ಮತ್ತು ಅವುಗಳ ಮೂಲಕ ದಾತೃವಿಗೆ ಪ್ರತಿರಕ್ಷೆ ನೀಡಲು ಯೋಗ್ಯವಾಗಿರುವಂಥ ಕೋಶಗಳನ್ನೂ ಊತಕಗಳನ್ನೂ ಸೃಜಿಸಲಷ್ಟೇ ಬಳಸಲಾಗುವುದು ಎಂದು ಸ್ಪಷ್ಟೀಕರಣವನ್ನೂ ನೀಡಲಾಗಿದೆ.

ಕೆ. ಎಲ್. ಗೋಪಾಲಕೃಷ್ಣರಾವ್
೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು-೫೬೦ ೦೨೮

## ಯಾರು ಕದ್ದರು

ಯಾರು ಕದ್ದರು,
ಸಂತರ ಎದೆಯ ಬೆಳಕು
ಶಬ್ದದೊಳಗಿನ ನಿಶ್ಶಬ್ದ
ನೀರವ ಕತ್ತಲೆಯ ಚಂದ್ರನನ್ನು....

ಯಾರು ಕದ್ದರು,
ದರ್ಗಾದ ಗೋರಿಗಳ ಮೇಲಿನ ಗುಲಾಬಿ
ಮಂದಿರದ ಮೂಲೆಮೂಲೆಯ ದೀಪ
ಶಿಲುಬೆಗಂಟಿದ ಕ್ರಿಸ್ತನ ಕರುಣೆ....

ಯಾರು ಕದ್ದರು,
ಫಕೀರರ ಬಟ್ಟಲೊಳಗಿನ ಕಾಸು
ಜಂಗಮರ ಜೋಳಿಗೆಯ ಹಿಟ್ಟು
ಭಿಕಾರಿಗಳ ಹಳಸಿದನ್ನದ ಗಂಟು...

ಯಾರು ಕದ್ದರು,
ಕೂಸಿನ ಪಾಲಿಗಿಟ್ಟಿದ್ದ ಹಾಲು
ಮನುಜರ ಎದೆಯಾಳದ ಕನಸು
ಉರಿವ ಈ ನೆಲದ ನೆಮ್ಮದಿ....



ವಿಕ್ರಮ ವಿಸಾಜಿ
ಅಧ್ಯಾಪಕ, ಕನ್ನಡ ಅಧ್ಯಯನ ವಿಭಾಗ
ಸ್ನಾತಕೋತ್ತರ ಕೇಂದ್ರ, ರಾಯಚೂರು
ಪೋಸ್ಟ್ : ಯರಗೇರಾ - ೫೮೪೧೩೩

**ಕು**ಕನೂರಿನಲ್ಲಿ ೧೧ನೇ ಶತಮಾನಕ್ಕೂ ಪ್ರಾಚೀನವಾದ ೧೫ ದೇಗುಲಗಳಿದ್ದು, ಇವುಗಳಲ್ಲಿ ಸರಸ್ವತಿ ಮತ್ತು ಮಹಾಮಾಯಾ ದೇಗುಲಗಳನ್ನು ಬಿಟ್ಟರೆ ಮಿಕ್ಕವೆಲ್ಲಾ ಶಿವನ ದೇಗುಲಗಳೇ ಆಗಿವೆ. ಈ ಊರಿನ ದೇಗುಲ ಸಂಸ್ಕೃತಿಯ ಇತಿಹಾಸವು ಭಿನ್ನ ಪಂಥಗಳ ಘರ್ಷಣೆಯ ಇತಿಹಾಸವೇ ಆಗಿದೆ. ಈ ಘರ್ಷಣೆಯನ್ನು ಮುಖ್ಯವಾಗಿ ಮೂರು ಹಂತಗಳಲ್ಲಿ ಗುರುತಿಸಬಹುದು : ಅ) ಸ್ಥಳೀಯ ಬುಡಕಟ್ಟು ಮತ್ತು ಶೈವ ಘರ್ಷಣೆ, ಆ) ಶೈವ-ವೈಷ್ಣವ ಘರ್ಷಣೆ, ಇ) ವೈಷ್ಣವ-ವೀರಶೈವ ಘರ್ಷಣೆ.

ಸ್ಥಳೀಯ ಬುಡಕಟ್ಟು ಮತ್ತು ಶೈವರ ಘರ್ಷಣೆಯಲ್ಲಿ ಶೈವರು ಮೇಲುಗೈ ಸಾಧಿಸಿ ಸುಮಾರು ೯ನೇ ಶತಮಾನದ ಹೊತ್ತಿಗೆ ಕುಕನೂರು ಸಂಪೂರ್ಣ ಶೈವಮಯವಾಗಿದೆ. ೧೨ನೇ ಶತಮಾನದವರೆಗೆ ಶೈವ ಕಾಳಾಮುಖರದೇ ಪ್ರಾಬಲ್ಯ ನಡೆದಿದೆ. ೧೩ನೇ ಶತಮಾನದಿಂದ ಶೈವ-ವೈಷ್ಣವ ಘರ್ಷಣೆ ಆರಂಭವಾಗಿ ಈ ನಂತರ ವೈಷ್ಣವರು ಪ್ರಾಬಲ್ಯ ಸ್ಥಾಪಿಸಿದ್ದಾರೆ. ೧೫ನೇ ಶತಮಾನದ ನಂತರ ವಿಜಯನಗರ ಇಳಿಮುಖ ಕಾಲದಲ್ಲಿ ವೀರಶೈವ-ವೈಷ್ಣವ ಘರ್ಷಣೆ ನಡೆದು, ವೀರಶೈವರು ಪಕ್ಕದಲ್ಲೇ ಗುದ್ನೆಪ್ಪನ ಮಠವೆಂಬ ಮಠವೊಂದನ್ನು ಕಟ್ಟಿಕೊಂಡು ಕುಕನೂರಿನಿಂದ ದೂರ ಸರಿಯಬೇಕಾಗಿ ಬಂದಿದೆ. ಆನಂತರ ಇಲ್ಲಿನ ಶೈವ ದೇಗುಲಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಆದಿಶಿವೆ ಮಹಾಮಾಯಾ ದೇಗುಲ ವೈಷ್ಣವೀಕರಣಕ್ಕೂ ಒಳಗಾಗಿದೆ. ಆನಂತರದಲ್ಲಿ ಕುಕನೂರಿನಲ್ಲಿ ಶೈವ ಮತ್ತು ವೈಷ್ಣವ ಬ್ರಾಹ್ಮಣರಲ್ಲಿ ಅಂತರ್ಯುದ್ಧ ನಡೆಯುತ್ತಲೇ ಹೋಗಿದೆ. ಈಗಲೂ ನಡೆಯುತ್ತಿದೆ.



*ಚಿತ್ರ. ೧ : ಸುಣ್ಣ ಬಣ್ಣ ಬಳಿದುಕೊಂಡ ಮಹಾಮಾಯಾದ ಬಲಪಾರ್ಶ್ವದ ಪ್ರವೇಶ ದ್ವಾರ*

# ಕುಕನೂರಿನ ದೇಗುಲಗಳು

*ಹೈದ್ರಾಬಾದ್ ಕರ್ನಾಟಕ ಪ್ರಾಂತದ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕಿನ ಒಂದು ಹೋಬಳಿ ಕೇಂದ್ರ ಕುಕನೂರು. ಇದು ಕೊಪ್ಪಳ ಯಲಬುರ್ಗಾ ರಸ್ತೆಯಲ್ಲಿ ಕೊಪ್ಪಳದಿಂದ ೩೦ ಕಿ.ಮೀ. ದೂರದಲ್ಲಿದೆ. ಇಟಗಿಯಿಂದ ೭ ಕಿ.ಮೀ. ದೂರದಲ್ಲಿದೆ.*

*ಒಂದಾನೊಂದು ಕಾಲದಲ್ಲಿ ಕುಕನೂರು ಬೆಳ್ವೊಲನಾಡಿನ, ಕುಂತಳದೇಶದ ತಿಲಕಪ್ರಾಯವಾದ ಅಗ್ರಹಾರವಾಗಿತ್ತು. ಇದನ್ನು ದುಷ್ಟಬುದ್ಧಿ ಆಳಿದ ಊರೆಂದೂ, ಚಂದ್ರಹಾಸ ಆಳಿದ ಊರೆಂದೂ ಜನ ಈಗಲೂ ಹೇಳುತ್ತಾರೆ. ಕುಕನೂರಿನ ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿದಂತೆ ೨೪ ಶಾಸನಗಳು ದೊರಕಿವೆ. ಈ ಶಾಸನಗಳ ಮೂಲಕ ಇಲ್ಲಿ ಸಾಕಷ್ಟು ಬಾಳೆ, ನಿಂಬೆ, ಹೂವಿನ ತೋಟಗಳಿದ್ದಂತೆಯೂ, ಚಂದಿರನನ್ನೇ ಮೀರಿಸುವ ಬೆಲೆವೆಣ್ಣುಗಳಿದ್ದಂತೆಯೂ, ಒಂದು ಸಾವಿರ ಮಹಾಜನರಿದ್ದಂತೆಯೂ, ಯಜ್ಞಯಾಗ ನಡೆಯುತ್ತಿದ್ದಂತೆಯೂ, ವೇದಾಧ್ಯಯನ ಪಾಠಶಾಲೆಗಳಿದ್ದಂತೆಯೂ ಇಲ್ಲಿ ಹೊಸ ಮಠವೆಂಬ ಕಾಳಾಮುಖ ಮಠವಿದ್ದಂತೆಯೂ, ಮಹಾಮಾಯಾ ಒಂದು ಶಕ್ತಿಪೀಠವಾಗಿದ್ದಂತೆಯೂ, ಸಾಧು, ಸಿದ್ಧ, ಯೋಗಿ, ಸಹಜಾಯೋಗಿನಿಯರು ಇಲ್ಲಿ ಇದ್ದಂತೆಯೂ ತಿಳಿದುಬರುತ್ತದೆ.*

*ಕುಕನೂರು-೩೦ ಎಂದೇ ಪ್ರಸಿದ್ಧವಾಗಿ ಕುಂತಳದೇಶಕ್ಕೇ ತಿಲಕಪ್ರಾಯವಾಗಿ ಬದುಕಿದ ಈ ಊರು ಇಂದು ಪ್ರಾಚೀನ ವೈಭವದ ವಾಸನೆಯೂ ಇಲ್ಲದ ಒಂದು ಅಪ್ರಸಿದ್ಧ ಸ್ಥಳ. ಇತ್ತ ಹಳ್ಳಿಯೂ ಅಲ್ಲದ ಅತ್ತ ನಗರವೂ ಅಲ್ಲದ ಮಧ್ಯಮವರ್ಗಿ. ದೇಶ ವಿದೇಶಗಳಲ್ಲಿ ಹೆಸರು ಮಾಡಿರುವ ಗ್ರಾನೈಟ್ ಉದ್ಯಮವು ಕ್ರಮೇಣ ಇಳಿಮುಖವಾಗಿ ಈಗ ಕುಕನೂರು ಈ ಗ್ರಾನೈಟ್ ಉದ್ಯಮದ ಪರಿಣಾಮಗಳಿಂದ ಬಿಡಿಸಿಕೊಳ್ಳಲು ಹೆಣಗುತ್ತಿದೆ. ಇಲ್ಲಿನ ಕುಲಕಸುಬುಗಳು, ಪಾರಂಪರಿಕ ರೀತಿ ರಿವಾಜುಗಳು ನಾಮಾವಶೇಷವಾಗಿರುವುದು ಕಣ್ಣಿಗೆ ರಾಚುತ್ತದೆ. ನಗರೀಕೃತ ವ್ಯಾಪಾರಿ ಮನೋಭಾವ, ಗೌಪ್ಯ ಅನೈತಿಕತೆ, ಸ್ವಾರ್ಥಮೂಲ ಬದುಕು ಈ ಊರನ್ನು ಗಾಢವಾಗಿ ಕವುಚಿಕೊಂಡಿದೆ. ಅದು ಬೇರೆಷ್ಟೋ ಊರುಗಳಿಗೂ ಅನ್ವಯವಾಗುವಂಥದು.*

*ಈ ಊರು ಲಕ್ಕುಂಡಿಗೆ, ಇಟಗಿಗೆ ಬಹಳ ಹತ್ತಿರವಿದ್ದರೂ ಪ್ರಸಿದ್ಧವಾಗಿಲ್ಲ. ಆದರೆ ಲಕ್ಕುಂಡಿ, ಇಟಗಿಗಳಿಗೆ ಹೋಲಿಸಿದರೆ ಸಾಂಸ್ಕೃತಿಕವಾಗಿ ಕುಕನೂರು ಯಾವ ದೃಷ್ಟಿಯಿಂದಲೂ ಚಿಕ್ಕದಲ್ಲ. ಸಂಖ್ಯೆ ಮತ್ತು ವಾಸ್ತು ಎರಡೂ ದೃಷ್ಟಿಯಿಂದ ಇಲ್ಲಿನ ದೇಗುಲಗಳು ಅಚ್ಚರಿ ಹುಟ್ಟಿಸುತ್ತವೆ. ಈ ದೇಗುಲಗಳು ವೈಭವೋಪೇತ ಬದುಕನ್ನೂ, ಕಲ್ಪನಾತೀತ ಅಸಡ್ಡೆಯನ್ನೂ ಕಂಡಿವೆ. ಈ ಹಿನ್ನೆಲೆಯಲ್ಲಿ ಕುಕನೂರಿನ ದೇಗುಲ ಸಂಸ್ಕೃತಿಯ ಒಂದು ಸಿಂಹಾವಲೋಕನ ಈ ಲೇಖನ.*

■ ರಾಮಲಿಂಗಪ್ಪ ಟಿ. ಬೇಗೂರು

ಕುಕನೂರಿನ ಮಹಾಮಾಯಾ, ನವಲಿಂಗೇಶ್ವರ, ಕಲ್ಲೇಶ್ವರ, ಮಲ್ಲಿಕಾರ್ಜುನ, ಗವರೇಶ್ವರ, ಚಳೇಶ್ವರ, ಬ್ರಹ್ಮೇಶ್ವರ, ಪಾತಾಳೇಶ್ವರ, ಗಣೇಶ್ವರ ಈ ಒಂಬತ್ತು ದೇಗುಲಗಳ ಬಗ್ಗೆ ಈ ಲೇಖನದಲ್ಲಿ ಸ್ಥೂಲವಾಗಿ ಚರ್ಚಿಸಲಾಗುವುದು. ಮೂಲೇಶ್ವರ, ತೋಟಿಗೇಶ್ವರ, ಭೈರವೇಶ್ವರ, ಮಸಣಬೋವ, ಮರುಳದೇವ, ಸರಸ್ವತಿ ದೇವರು - ಈ ದೇಗುಲಗಳಿಂದು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ, ಇವುಗಳ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿರುವುದರಿಂದ ಇವುಗಳನ್ನು ಆಸಕ್ತರು ಸಂಶೋಧಿಸಬಹುದಾಗಿದೆ.

ಪಾತಾಳೇಶ್ವರ, ಮಲ್ಲಿಕಾರ್ಜುನ ಮೊದಲಾದ ದೇಗುಲಗಳು ನೆಲದಲ್ಲಿ ಹೂತು ಹೋಗಿರುವುದನ್ನು ನೋಡಿದರೆ, ಊರಿನಂಚಿಗೆ ಕಟ್ಟಡವೊಂದಕ್ಕೆ ಪಾಯ ತೆಗೆಯುವಾಗ (ಶಿವಬಾರಗಟ್ಟಿ ಹತ್ತಿರ) ಶಾಸನ ಮತ್ತು ಕಟ್ಟಡದ ಅವಶೇಷಗಳು ದೊರಕಿರುವುದನ್ನು ನೋಡಿದರೆ, ಕುಕನೂರಿನಲ್ಲಿ ವ್ಯಾಪಕ ಉತ್ಖನನ ನಡೆಸಿ ಇತಿಹಾಸಕ್ಕೆ ಸಂಬಂಧಿಸಿದ ಕುತೂಹಲಕರ ವಿಷಯಗಳನ್ನು ಹೊರಕ್ಕೆ ತರಬಹುದು ಅನ್ನಿಸುತ್ತದೆ.

**ಮಹಾಮಾಯಾ**

ಕುಕನೂರಿನ ದೇಗುಲ ಎಂದರೆ ಮಹಾಮಾಯಾ ಒಂದೇ ಎಂಬಷ್ಟರ ಮಟ್ಟಿಗೆ ಇದು ಪ್ರಖ್ಯಾತವಾಗಿದೆ. ಈ ಮಹಾಮಾಯಾದ ಇತಿಹಾಸ ಎಷ್ಟೊಂದು ಸಂಕೀರ್ಣವಾದುದೆಂದರೆ, ಇದೊಂದೇ ದೇಗುಲದ ಇತಿಹಾಸವೇ ಇಡೀ ಕುಕನೂರಿನ ಸಾಂಸ್ಕೃತಿಕ ರಾಜಕಾರಣದ ಇತಿಹಾಸವನ್ನು ಹೇಳಬಲ್ಲದು.

ಮಹಾಮಾಯಾ ಒಂದು ದೇಗುಲವಲ್ಲ, ದೇಗುಲ ಸಮುಚ್ಚಯ. ಇದಕ್ಕೆ ದೊಡ್ಡ ಪೌಳಿ ನಿರ್ಮಿಸಲಾಗಿದ್ದು ಬಹು ಎತ್ತರದ ಪ್ರವೇಶದ್ವಾರವಿದೆ. ದೇಗುಲದ ಮುಂಭಾಗದಲ್ಲಿ ಛಾವಣಿಮಟ್ಟಕ್ಕೆ ವಿಷ್ಣುವಿನ ದಶಾವತಾರದ ಕತೆಯನ್ನು ಮಣ್ಣಿನ ಉಬ್ಬುಶಿಲ್ಪಗಳಿಂದ ಇತ್ತೀಚೆಗೆ ರಚಿಸಲಾಗಿದೆ. ಈ ಚಿತ್ರಗಳಿಗೆ ಆಧುನಿಕ ಬಣ್ಣವನ್ನೂ ಹಚ್ಚಲಾಗಿದೆ. ಈ ದಶಾವತಾರದ ಚಿತ್ರಗಳಲ್ಲಿ ಶಿವನ ಚಿತ್ರವೂ ಇದೆ. ಈ ದೇಗುಲದ ಕಂಬ ಬೋದಿಗೆಗಳಿಗೆ ಸುಣ್ಣ ಬಣ್ಣಗಳನ್ನು ಬಳಿದು ಮೂಲವಾಸ್ತುವನ್ನು ಮರೆಮಾಚಲಾಗಿದೆ. (ಕುಕನೂರಿನ ಬಹುತೇಕ ದೇಗುಲಗಳಿಗೆ ಹೀಗೆ ಮಾಡಲಾಗಿದೆ. ದೇಗುಲಗಳನ್ನು ಬಾಳಿಸುವ ರಕ್ಷಿಸುವ ಈ ಜನರ ವಿಧಾನ ಇದು).

ಮಹಾಮಾಯಾದ ಆವರಣದಲ್ಲೇ ಒಂದೆಡೆ ಉರಗಶಯನ ವಿಷ್ಣುವಿನ ಪಾದ ಒತ್ತುವ



*ಚಿತ್ರ. ೨ : ಧಾವಣಿಯವರೆಗೆ ಹೂತುಹೋಗಿರುವ ಮಲ್ಲಿಕಾರ್ಜುನ ದೇಗುಲ*

ಲಕ್ಷ್ಮಿ ಮತ್ತು ಸುತ್ತುವರಿದ ದೇವಗಣದ ಶಿಲ್ಪವಿದೆ. ಈ ದೇವಗಣದಲ್ಲಿ ಶಿವ, ಪಾರ್ವತಿ, ಬ್ರಹ್ಮರೂ ಇದ್ದಾರೆ. ಇದರ ಪಕ್ಕದಲ್ಲೇ ಲಿಂಗದಾಕಾರದ ಒಂದು ಶಿಲೆಯಲ್ಲಿ ವರಹಾಮೂರ್ತಿಯನ್ನು ಕೆತ್ತಿ ಇರಿಸಲಾಗಿದೆ (ಚಿತ್ರ-೪). ಇತ್ತೀಚೆಗೆ ಇಲ್ಲೊಂದು ದತ್ತ ಗುಡಿಯನ್ನೂ ನಿರ್ಮಿಸಲಾಗಿದೆ. ಇಲ್ಲಿ ವೆಂಕಟೇಶ್ವರ, ಗೋವಿಂದರಾಜ, ವರಾಹಮೂರ್ತಿ, ಶ್ರೀರಾಮ, ಗಣಪತಿ, ಬಿಂದುಮಾಧವ, ಶ್ರೀದತ್ತ, ದಕ್ಷಿಣಾಮೂರ್ತಿ, ನವಲಿಂಗೇಶ್ವರ ಹೀಗೆ ಹಲವಾರು ಗಂಡು ದೇವರುಗಳ ದಂಡೇ ಇದೆ. ಎರಡು ರೀತಿಯ ಘರ್ಷಣೆಯು ಇಲ್ಲಿರುವುದನ್ನು ಗಮನಿಸಬಹುದು: ಅ) ಮಾತೃಶಕ್ತಿ ಮತ್ತು ಪುರುಷ ಪ್ರಾಬಲ್ಯದ ಘರ್ಷಣೆ; ಆ) ಶೈವ - ವೈಷ್ಣವ ಪ್ರಾಬಲ್ಯದ ಘರ್ಷಣೆ. ಏನೇ ಆದರೂ ಶಕ್ತಿದೇವತಾ ಕ್ಷೇತ್ರದಲ್ಲಿ ಪುರುಷ ದೈವಗಳ ಪ್ರವೇಶವು ಮಹಾಮಾಯೆಯ ಪ್ರಾಬಲ್ಯವನ್ನು ಕಿಂಚಿತ್ತೂ ಕಡಿಮೆಗೊಳಿಸಿಲ್ಲ.

ಮಹಾಮಾಯಾ ಆದಿಶಕ್ತಿ ಮಹಾಲಕ್ಷ್ಮಿಯದು ಎಂದು ಹೇಳಲಾಗುವ ದೇಗುಲವು ನಿಜಕ್ಕೂ ಆದಿಶಕ್ತಿ ಮಹಾಲಕ್ಷ್ಮಿಯ ದೇಗುಲವಲ್ಲ. ಇದೊಂದು ಕಾಳಾಮುಖ ತಾಂತ್ರಿಕ ಉಪಾಸಕರಿಂದ ನಿರ್ಮಿಸಲ್ಪಟ್ಟ ಆದಿಶಕ್ತಿ ಶಿವೆಯ ದೇಗುಲ ಎಂದೂ ತಿಳಿಯಲಾಗಿದೆ. ಆದರೆ ನಿಜವಾಗಿ ಇದು ಮಾತೃ ಆರಾಧಕ ಬುಡಕಟ್ಟಿನ ದೇವತೆಯೊಬ್ಬಳ ಸ್ಥಾನವನ್ನ ಕಾಳಾಮುಖ ಶಕ್ತಿ ದೇವತೆಯು (ಜ್ಯೇಷ್ಠಾದೇವಿ) ಅತಿಕ್ರಮಿಸಿದ ದೇಗುಲವಾಗಿದೆ. ಇದನ್ನು ಪುಷ್ಟೀಕರಿಸಲು ಹಲವಾರು ಜಾನಪದೀಯ ಆಧಾರಗಳಿವೆ. ವಿಚಿತ್ರವೆಂದರೆ ಜಾನಪದೀಯ ಆಧಾರಗಳನ್ನು ಇಲ್ಲಿನ ಶಾಸನಾಧಾರಗಳು ವಿರೋಧಿಸುತ್ತವೆ. ಶಾಸನಗಳು ಇಲ್ಲಿ ಅಕ್ಷರದ ಅಧಿಕೃತತೆಯ ಮೂಲಕ ಮೇಲ್ವರ್ಣದ ಯಾಜಮಾನ್ಯವನ್ನು ಸ್ಥಿರೀಕರಿಸುವುದಕ್ಕೆ ಬಳಕೆಯಾಗಿವೆ.

ಇದೊಂದು ಅತಿಕ್ರಮಿತ ಬುಡಕಟ್ಟು ದೇವತೆ-ಗ್ರಾಮ ದೇವತೆ ಎಂಬುದಕ್ಕೆ ಹಲವು ಆಧಾರಗಳನ್ನು ನೀಡಬಹುದು. ಉತ್ತರ ಕರ್ನಾಟಕದ ಬಹುತೇಕ ಗ್ರಾಮದೇವತೆಗಳನ್ನು ಉಡಿತುಂಬುವ ಆಚರಣೆಯಿಂದ ಅರ್ಚಿಸುವಂತೆ ಮಹಾಮಾಯಾಳನ್ನೂ ಉಡಿ ತುಂಬಿ ಅರ್ಚಿಸಲಾಗುತ್ತದೆ. ಧಾರವಾಡ, ಶಿರಸಿ, ಹರಿಹರ, ರಾಣೆಬೆನ್ನೂರು, ರಾಯಚೂರು, ಬಾಗಲಕೋಟೆ ಈ ಕಡೆಯ ಬಹುಪಾಲು ಸಾಮಾನ್ಯ ಗ್ರಾಮೀಣರು ಈಕೆಗೆ ಮನೆದೇವರೆಂದು ನಡೆದುಕೊಳ್ಳುತ್ತಾರೆ. ಅಲ್ಲದೆ ಇವರ್‍ಯಾರೂ ಈಕೆಯನ್ನು ಮಹಾಮಾಯಾ ಎನ್ನುವುದಿಲ್ಲ, ದ್ಯಾಮವ್ವ ಎನ್ನುತ್ತಾರೆ. ಕೆಲವರು ದುರ್ಗಮ್ಮ ಎನ್ನುತ್ತಾರೆ. (ವಕ್ತೃ:ಚಂದ್ರಪ್ಪ ಅಜ್ಜಪ್ಪ ಮಾಸಣಿಗಿ-ಸಾಕಿನ ಚಿಕ್ಕಕುರುವತ್ತಿ- ರಾಣೆಬೆನ್ನೂರು-೪೦)

ಬಹಳಷ್ಟು ಜನ ಮಹಾಮಾಯಾ ಎಂಬುದು ಬ್ರಾಹ್ಮಣರು ಇಟ್ಟಿರುವ ಹೆಸರು. ಇವಳು ಕುಕನೂರಿನವಳೇ ಅಲ್ಲ, ಶಿರಸಿಯಿಂದ ಓಡಿಬಂದವಳು. ಇವಳು ದ್ಯಾಮವ್ವ - ಮಾರಿಕಾಂಬಾ ಎನ್ನುತ್ತಾರೆ (ವಕ್ತೃ:ಪಕೀರಪ್ಪ ಈರಪ್ಪ ಕಾಳಿ-ಕುಕನೂರ-ಯಲಬುರ್ಗಾ-೪೫). ಉತ್ತರ ಕರ್ನಾಟಕದ ದುರುಗವ್ವ-ದ್ಯಾಮವ್ವರ ವಾಹನ ಸಿಂಹ. ಕುಕನೂರ ಮಹಾಮಾಯಾಳಿಗೂ ಸಿಂಹವೇ ವಾಹನ (ಕಾಳಿಯ ವಾಹನವೂ ಸಿಂಹವೇ). ಮಾಷ್ಟೀಕರ ದೇವತೆ ದುರುಗವ್ವ ಕೂಡ ಸಿಂಹಸಂಚಾರಿ. ಈ ದೃಷ್ಟಿಯಿಂದ ಮಹಾಮಾಯಾ ಕೂಡ ದುರುಗವ್ವ-ದ್ಯಾಮವ್ವ ಆಗಿರುವುದರಿಂದ ಒಂದು ಕಾಲದಲ್ಲಿ ಮಾಷ್ಟೀಕರಂತಹ ಒಂದು ಬುಡಕಟ್ಟಿನ ದೇವತೆಯಾಗಿದ್ದಿರಬೇಕು.

ಧಾರವಾಡ - ಬಿಜಾಪುರ - ಬೆಳಗಾವಿ ಜಿಲ್ಲೆಗಳ ದುರುಗವ್ವ- ದ್ಯಾಮವ್ವರ ಕತೆಗೂ ಮಾರಿಕತೆಗೂ ಪೂರ್ತಿ ಹೋಲಿಕೆ ಇದೆ. ಇಲ್ಲಿ ದ್ಯಾಮವ್ವ ಎಂಬುದು ಊರ ಮಾರಿಗೇ ಇರುವ ಇನ್ನೊಂದು ಹೆಸರು. ಹೀಗಾಗಿ ಮಹಾಮಾಯಾ (ದ್ಯಾಮವ್ವ) ಕೂಡ ಒಂದು ಕಾಲದಲ್ಲಿ ಗ್ರಾಮದೇವಿಯಾಗಿದ್ದಿರಬಹುದೆಂದು, ಕಾಳಾಮುಖರು ಈಕೆಯನ್ನು ಶಕ್ತಿದೇವತೆಯಾಗಿ ಮಾರ್ಪಡಿಸಿರಬಹುದೆಂದು ಊಹಿಸಬಹುದಾಗಿದೆ.

ಮಹಾಮಾಯಾದ ಜೊತೆಗೇ ತಳಕು ಹಾಕಿಕೊಂಡಿರುವ ದಕ್ಷಿಣಾಮೂರ್ತಿ ಎಂಬ ಯತಿಯ ಐತಿಹ್ಯವೊಂದು ಮಹಾಮಾಯಾದ ರೂಪಾಂತರದ ಇತಿಹಾಸಕ್ಕೆ ಸಂಬಂಧಿಸಿದ ಕತೆಯ ಒಂದು ರೂಪವಾಗಿದೆ. ಅದು ಹೀಗಿದೆ : ''ಮೂಲದೇವಿ ಅತ್ಯುಗ್ರವಾಗಿದ್ದಳು, ಸಾಕಷ್ಟು ಬಲಿಕೊಟ್ಟರೂ ಆಕೆಯನ್ನು ತೃಪ್ತಿಗೊಳಿಸಲು ಸಾಧ್ಯವಾಗಲಿಲ್ಲ. ಈ ಕಾರಣದಿಂದ ಊರು ಹಾಳಾಗುತ್ತ ಹೋಯಿತು. ಅನಂತರ ದಕ್ಷಿಣಾಮೂರ್ತಿ ಎಂಬ ಯತಿ ಇಲ್ಲಿಗೆ ಬಂದನು. ದೇವಿಯ ಪ್ರಖರತೆಯನ್ನು ಕಡಿಮೆ ಮಾಡಿ ಸೌಮ್ಯ ರೂಪವನ್ನು ತಂದುಕೊಟ್ಟನು. ಈ ಯತಿಯ ವಿಗ್ರಹವು ದೇವಿಯ ಗುಡಿಯಲ್ಲಿ ಇದೆ'' (ಕುಕನೂರ ಮಹಾಮಾಯಾ ಮಹಾತ್ಮೆ, ಪಿ. ಬಿ. ದೇಸಾಯಿ, ಪು. ೨೨). ಇದೇ ಐತಿಹ್ಯವನ್ನು ಇಲ್ಲಿನ ಅರ್ಚಕರು ಹೀಗೆ ಹೇಳಿದ್ದಾರೆ : ''ಜ್ಯೇಷ್ಠೆಯು ಉಗ್ರರೂಪಿಣಿಯಾಗಿದ್ದಳು. ಸ್ಥಳೀಯವಾಗಿ ಈಕೆಯನ್ನು ಪ್ರಸನ್ನಗೊಳಿಸಲು ಅನೇಕ ಪ್ರಯತ್ನಗಳು ವಿಫಲವಾದ ನಂತರ ದಕ್ಷಿಣಾಮೂರ್ತಿ ಎಂಬ ಯತಿಗಳನ್ನು ಕರೆಸಲಾಯ್ತು. ದಕ್ಷಿಣಾಮೂರ್ತಿಗಳು ಎಷ್ಟೇ ಯತ್ನಿಸಿದರೂ ದೇವಿಯ ರೂಪ ಪ್ರಸನ್ನವಾಗಲಿಲ್ಲ. ದಕ್ಷಿಣಾಮೂರ್ತಿಗಳ ಸ್ವಪ್ನದಲ್ಲಿ ದೇವಿಯೇ ಒಮ್ಮೆ ಪ್ರತ್ಯಕ್ಷಳಾಗಿ 'ನನಗೆ ಅಪಚಾರವಾಗಿದೆ. ನೀನು ಎಷ್ಟೇ ಯತ್ನಿಸಿದರೂ ನನ್ನ ಮುಖಭಾವ ಪ್ರಸನ್ನವಾಗುವುದಿಲ್ಲ. ಆದ್ದರಿಂದ ನನ್ನ ಪೂರ್ವದಿಕ್ಕಿಗೆ ಸ್ವಲ್ಪ ದೂರದಲ್ಲಿ ಪ್ರಸನ್ನ ಮೂರ್ತಿಗಳಿವೆ. ಅವನ್ನೇ ತಂದು ಪ್ರತಿಷ್ಠಾಪಿಸು' ಎಂದು ಆಜ್ಞಾಪಿಸಿದಳು. ಹೀಗಾಗಿ ದಕ್ಷಿಣಾಮೂರ್ತಿಗಳು ಹೊಸ ಪ್ರಸನ್ನ ದೇವಿ ಮೂರ್ತಿಯನ್ನು ಪ್ರತಿಷ್ಠಾಪಿಸಿದರು.'' ಇದೇ ಕತೆಯು ಬೇರೆ ಬೇರೆ ವಕ್ತೃಗಳಲ್ಲಿ ಬೇರೆ ಬೇರೆ ಪಾಠಾಂತರಗಳಲ್ಲಿ ದೊರಕುತ್ತದೆ.

ಇಲ್ಲಿ ಕಾಳಾಮುಖ-ಉಗ್ರ-ದೇವತೆಯನ್ನು ವೈಷ್ಣವ ಬ್ರಾಹ್ಮಣರ ಕೈವಶ ಮಾಡಿಕೊಡಲು ಆಗಮಿಸಿದ ಒಬ್ಬ ಮೇಲ್ವರ್ಣದ ಸಾಂಸ್ಕೃತಿಕ ನಾಯಕನನ್ನಾಗಿ ದಕ್ಷಿಣಾ ಮೂರ್ತಿಯನ್ನು ಅರ್ಥೈಸಿಕೊಳ್ಳಬೇಕಾಗಿದೆ. ಇವನೂ ಇದೇ ಗುಡಿಯಲ್ಲಿ ಅನಂತರ ದೇವರಾಗಿರುವುದೂ ಇದಕ್ಕೆ ಸಾಕ್ಷಿ. ಈ ಕತೆಯು ಒಂದು ಬಹು ದೊಡ್ಡ ಜನಾಂಗಿಕ ಘರ್ಷಣೆ- ಅಂತರ್ಯುದ್ಧ- ಪಂಥೀಯ ಪಲ್ಲಟವನ್ನೇ ಹೇಳುವ ಬೀಜ ರೂಪವಾಗಿದೆ. ದಕ್ಷಿಣಾಮೂರ್ತಿಯು ಮೂಲ-ಉಗ್ರ- ವಿಗ್ರಹದ ಬದಲಿಗೆ ಬೇರೆಯದೇ ಸೌಮ್ಯಮೂರ್ತಿಯನ್ನು ತಂದು ಪ್ರತಿಷ್ಠಾಪಿಸುವುದು ಒಂದು ತತ್ವ-ಸಿದ್ಧಾಂತದ ಪಲ್ಲಟವೇ ಆಗಿದೆ.

ಮಹಾಮಾಯಾದ ಮೇಲೆ ಮುಸ್ಲಿಂ ದಾಳಿಯಾದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ (ನೋಡಿ ೧೫೬೧ರ ಶಾಸನ). ಅನಂತರ ಜೀರ್ಣೋದ್ಧಾರ ಕಾರ್ಯವೂ ನಡೆದಿದೆ. ಆದರೆ ಮುಸ್ಲಿಂ ದೊರೆಗಳು ಹಿಂದೂ ದೇಗುಲಗಳಿಗೆ ಏನು ಶಾಸ್ತಿಯನ್ನು ಮಾಡಿದರೋ ಅದೇ ಶಾಸ್ತಿಯನ್ನು ಯಾವುದೇ

> *ಅನ್ಯ ಸಾಂಸ್ಕೃತಿಕ, ಅನ್ಯ ಭಾಷಿಕ, ಅನ್ಯ ಪಂಥೀಯ ದಾಳಿಗಳು ಸ್ಥಳೀಯ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಬಂಧದಲ್ಲಿ ಹೇಗೆ ವಿಘಟನೆಯನ್ನುಂಟುಮಾಡಬಲ್ಲುವು, ಸಂಸ್ಕೃತಿಯು ಹೇಗೆ ಸಾಮಾಜಿಕ ಆರ್ಥಿಕ ಮಗ್ಗುಲಿಗೆ ಅಭೇದ್ಯವಾಗಿ ಬೆಸೆದುಕೊಂಡಿರುತ್ತದೆ, ಸಾಂಸ್ಕೃತಿಕ ಪಲ್ಲಟಕ್ಕೂ ಸಾಮಾಜಿಕ ಮತ್ತು ಆರ್ಥಿಕ ಪಲ್ಲಟಗಳಿಗೂ ಹೇಗೆ ಅವಿನಾಭಾವ ಸಂಬಂಧವಿರುತ್ತದೆ, ಈ ತ್ರಿವಳಿ ಪಲ್ಲಟಗಳ ಏಕಸೂತ್ರವಾಗಿ 'ಪ್ರಯೋಜನವಾದ'ವು ಹೇಗೆ ಕೆಲಸ ಮಾಡುತ್ತದೆ ಎಂಬುದಕ್ಕೆ ಕುಕನೂರಿನ ದೇಗುಲ ಸಂಸ್ಕೃತಿಯ ಇತಿಹಾಸ ಸಾಕ್ಷಿಯಾಗಿದೆ.*

ಸೈನಿಕ ದಾಳಿಗಳಿಲ್ಲದೆ ಸಾಂಸ್ಕೃತಿಕ ರಾಜಕಾರಣದ ಮೂಲಕವೇ ವಿಜಯನಗರ ಸಾಮ್ರಾಜ್ಯವು ಶೈವ ದೇಗುಲಗಳ ಮೇಲೆ ಮಾಡಿದೆ. ಕುಕನೂರಿನ ದೇಗುಲ ಗಳಿಂದ ಇದು ಸಾಬೀತಾಗುತ್ತದೆ. ಇಲ್ಲಿ ಮಹಾಮಾಯಾ ದೇಗುಲದ ಶೈವ ಆದಿಶಕ್ತಿಯನ್ನು ಮಹಾಲಕ್ಷ್ಮಿಯನ್ನಾಗಿ ಮಾಡಿದ ಮೊದಲ ಶಾಸನ ವಿಜಯನಗರ ಅರಸರಿಗೇ ಸೇರಿದ್ದಾಗಿದೆ. (೧೩೭೯ರ ಶಾಸನ).

ಇಂದು ಒಂದೇ ಕಾಂಪೌಂಡಿನಲ್ಲಿರುವ ದತ್ತ, ವೆಂಕಟೇಶ್ವರ, ವರಾಹಮೂರ್ತಿ, ದಕ್ಷಿಣಾಮೂರ್ತಿ ಎಲ್ಲರೂ ಪೂಜೆಗೊಳಗಾಗುತ್ತಿರುವಾಗ ನವಲಿಂಗೇಶ್ವರ ಯಾಕೆ ಪೂಜೆಗೆ ಒಳಗಾಗುತ್ತಿಲ್ಲ? ಇದು ವೈಷ್ಣವ ರಾಜಕಾರಣವಲ್ಲದೆ ಮತ್ತೇನು ? ಹೀಗಾಗಿರುವುದು ಕೇವಲ ನವಲಿಂಗೇಶ್ವರಕ್ಕೆ ಮಾತ್ರ ಅಲ್ಲ. ಇಲ್ಲಿನ ಎಲ್ಲ ಶಿವ ದೇಗುಲಗಳಿಗೂ ಇದೇ ಗತಿ. ಇವೆಲ್ಲವೂ ಮಹಾಮಾಯೆಯಂತೆ ಪೂರ್ತಿ ವೈಷ್ಣವೀಕರಣಕ್ಕೆ ಒಳಪಡಿಸಲಾಗದ ಶಿವದೇಗುಲಗಳಾದ್ದರಿಂದ ತಿರಸ್ಕರಿಸಲ್ಪಟ್ಟು ನಿರ್ಲಕ್ಷಿತವಾಗಿವೆ. ಇಲ್ಲಿನ ಶೈವರೂ ಮಹಾತ್ಮರೇನೂ ಅಲ್ಲ. ಈ ಊರಿನ ಅನ್ಯದೈವಗಳಿಗೆ ಶೈವರು ಮಾಡಿರುವುದೂ ಹೀಗೇನೆ.

ಒಟ್ಟಾರೆ ಮಹಾಮಾಯಾದ ಚರಿತ್ರೆಯು ಒಂದು ಸಂಘರ್ಷಯುಕ್ತ ಚರಿತ್ರೆಯಾಗಿದೆ. ಜಾನಪದೀಯ ಆಧಾರಗಳು ಶಿವಸಂಸ್ಕೃತಿ ಮತ್ತು ಸ್ಥಳೀಯ ಸಂಸ್ಕೃತಿಯ ನಡುವಿನ ಆದಿಮ ಸಂಘರ್ಷದ ಕತೆಯನ್ನು ಹೇಳಿದರೆ ದಕ್ಷಿಣಾಮೂರ್ತಿಯ ಕತೆ ಮತ್ತು ಶಾಸನಾಧಾರಗಳು ಕಾಳಾಮುಖ ಮತ್ತು ವೈಷ್ಣವರ ನಡುವಿನ ಸಂಘರ್ಷದ ಕತೆಯನ್ನು ಹೇಳುತ್ತವೆ.

**ನವಲಿಂಗೇಶ್ವರ**

೯ ಲಿಂಗಗಳು, ೯ ನಂದಿಗಳು, ೯ ದ್ವಾರಗಳು ಮತ್ತು ೯ ಕಲಶಗಳುಳ್ಳ ಪ್ರಾಚೀನ ದೇಗುಲವೇ ನವಲಿಂಗೇಶ್ವರ. ಇಟಗಿಯ ನಾರಾಯಣ ಮತ್ತು ಮಹದೇವ ದೇಗುಲಗಳ ಕೆತ್ತನೆ ಮತ್ತು ಹೊರ ಚಿತ್ರಗಳನ್ನು ನವಲಿಂಗೇಶ್ವರದ ಕೆತ್ತನೆ ಮತ್ತು ಹೊರಚಿತ್ರಗಳು ಹೋಲುತ್ತವೆ. ಆದರೆ ಸಂರಚನೆ ಮತ್ತು ಕಲ್ಲುಗಳ ಸ್ವರೂಪವು ನವಲಿಂಗೇಶ್ವರವು ಇಟಗಿ ದೇಗುಲಕ್ಕಿಂತ ಬಹಳ ಪ್ರಾಚೀನವಾದುದೆಂದು ತಿಳಿಸುತ್ತದೆ.

ಇದರ ಹೊರಭಾಗವು ಮಳೆ ಗಾಳಿಯ ಹೊಡೆತಕ್ಕೆ ಸಂಪೂರ್ಣ ಶಿಥಿಲವಾಗಿದೆ. ಒಂಭತ್ತು ಕಲಶಗಳಲ್ಲಿ ಒಂದು ಕಲಶ ಬಿದ್ದುಹೋಗಿದೆ. ದೇಗುಲದ ಛಾವಣಿ ಸ್ವಲ್ಪ ಜೀರ್ಣೋದ್ಧಾರಕ್ಕೆ ಒಳಗಾಗಿದೆ. ದೇಗುಲದ ಬಲ ಪಾರ್ಶ್ವಕ್ಕೆ ದಟ್ಟವಾಗಿ ಬಳ್ಳಾರಿ ಜಾಲಿ ಬೆಳೆದುಕೊಂಡಿದೆ. ಕೆತ್ತನೆಯ ಕಲ್ಲು, ನೆಲಹಾಸು, ಒಳಭಾಗಗಳೂ ಕೂಡ ಶಿಥಿಲಗೊಂಡಿವೆ. ಮಹಾಮಾಯಾದ ಆವರಣಕ್ಕೆ ಸಂಪೂರ್ಣ ಕಾಂಪೌಂಡ್ ನಿರ್ಮಾಣವಾಗಿರುವುದರಿಂದ ಇದೇ ಆವರಣದಲ್ಲಿರುವ ಈ ದೇಗುಲದ ಪ್ರವೇಶದ್ವಾರ ಎತ್ತ ಕಡೆ ಇದೆ ಎಂಬುದೇ ತಿಳಿಯದಾಗಿದೆ. ಕುಕನೂರಿನ ಗತವೈಭವದ ಪಳೆಯುಳಿಕೆಯಂತೆ- ಸಾಂಸ್ಕೃತಿಕ ಸಂಘರ್ಷದ ಸಾಕ್ಷಿಯಂತೆ ನವಲಿಂಗೇಶ್ವರ ಬಂದಿಯಾಗಿ ನಿಂತಿದೆ.

**ಕಲ್ಲೇಶ್ವರ**

ಇದು ಕುಕನೂರಿನ ಬೇರೆಲ್ಲ ಶಿವದೇಗುಲಗಳಿಗಿಂತ ಪ್ರಾಚೀನ ದೇಗುಲವಾಗಿದೆ. ಶಾಸನದಲ್ಲಿ ಇದನ್ನು ಮೂಲಸ್ಥಾನ ದೇವರು ಎಂದು ಕರೆಯಲಾಗಿದೆ. ಈ ದೇಗುಲವು ಈಗ ಊರಿನ ಹೊರಭಾಗದಲ್ಲಿ ಊರಿಂದ ಸುಮಾರು ಒಂದು ಫರ್ಲಾಂಗ್ ದೂರಕ್ಕೆ ಕುಕನೂರಿನಿಂದ ಗದಗಕ್ಕೆ ಹೋಗುವ ರಸ್ತೆಯಲ್ಲಿ ಎಡಕ್ಕಿದೆ. ಇದೇ ದೇಗುಲದ ಹತ್ತಿರವೇ ಮುಂಚೆ ಊರು ಇದ್ದು ಯಾವುದೋ ಕಾರಣಕ್ಕೆ ಊರು ಸ್ಥಳಾಂತರವಾದಂತೆ ಕಾಣುತ್ತದೆ. ದೈವದ ಅವಕೃಪೆ, ಬರ, ಪ್ಲೇಗು ಹೀಗೆ ಊರಿನ ಸ್ಥಳಾಂತರಕ್ಕೆ ಭಿನ್ನ ಕಾರಣಗಳನ್ನು ಇಲ್ಲಿನ ಸ್ಥಳ ಪುರಾಣಗಳು ನೀಡುತ್ತವೆ.

ಕಲ್ಲೇಶ್ವರದ ಅಂಗಳವು ಮೊದಲಿಗೆ ಒಂದು ದೇಗುಲ ಸಮುಚ್ಚಯವಾಗಿತ್ತೆಂಬುದಕ್ಕೆ ಇಲ್ಲಿನ ಭೂಗೋಳ ಪುಷ್ಟಿ ನೀಡುತ್ತದೆ. ಈ ದೇಗುಲದ ಎದುರಿಗೆ ಒಂದು ಬೃಹತ್ ನಂದಿಯಿದೆ. ಎಲ್ಲಿಂದಲೋ ಎತ್ತಿ ತಂದ ಒಂದು ಸ್ತ್ರೀ ಮೂರ್ತಿಯನ್ನು (ಸರಸ್ವತಿ ?) ಒಳಗಡೆಯೂ, ಒಂದು ಬೃಹತ್ ಶಿವಲಿಂಗವನ್ನು ಹೊರಗಡೆಯೂ ಇಡಲಾಗಿದೆ. ಕಲ್ಲೇಶ್ವರದ ಒಳಾಂಗಣ ಮತ್ತು ನುಣುಪಾದ ಕಂಬ, ಬೋದಿಗೆ, ಭುವನೇಶ್ವರಿಗಳಿಗೆ ಸುಣ್ಣ ಬಣ್ಣಗಳನ್ನು ಬಳಿಯಲಾಗಿದೆ. ಇದರ ಹೊರಮೈ ಎಷ್ಟೊಂದು ಶಿಥಿಲವಾಗಿದೆಯೆಂದರೆ ಕಲ್ಲುಗಳನ್ನು ಹಿಚುಕಿದರೆ ಪುಡಿಯಾಗುತ್ತವೆ. ಅಲ್ಲೊಂದು ಇಲ್ಲೊಂದು ಶಿಲ್ಪಾಕೃತಿಗಳು ಮಾತ್ರ ಉಳಿದಿವೆ. ಇದರ ಆಸುಪಾಸು ಗ್ರಾನೈಟ್ ಸಿಡಿಸಲು ಇಟ್ಟಿಗೆ ಹಾಕಲು ಅವಕಾಶ ನೀಡಲಾಗಿದೆ. ಸದ್ಯಕ್ಕೆ ಗ್ರಾನೈಟ್ ಸಿಡಿಸುವ ಕೆಲಸ ನಿಂತಿರುವುದರಿಂದ ದೇಗುಲ ಅಪಾಯದಿಂದ ದೂರವಾಗಿದೆ. (ಚಿತ್ರ-೫)

**ಮಲ್ಲಿಕಾರ್ಜುನ**

ಮಹಾಮಾಯಾದ ಬಲಕ್ಕೆ ಬ್ರಾಹ್ಮಣಕೇರಿಯಲ್ಲಿರುವ ಮಲ್ಲಿಕಾರ್ಜುನ ದೇಗುಲ ನಮ್ಮ ಕೈಗೆ ಛಾವಣಿ ಎಟುಕುವಷ್ಟರವರೆಗೆ ನೆಲದಲ್ಲಿ ಹೂತುಹೋಗಿದೆ. ವಾಸ್ತು ದೃಷ್ಟಿಯಿಂದ ಇದು ಗಣೇಶ್ವರ, ಗವರೇಶ್ವರಗಳನ್ನು ಹೋಲುತ್ತದೆ. ಛಾವಣಿಯ ಮೇಲೆ ಹುಲ್ಲು ಗಿಡಗಳು ಬೆಳೆದು ಪಾರ್ಶ್ವದಲ್ಲಿಯೂ ಮಣ್ಣು ಮುಚ್ಚಿಹೋಗಿರುವುದರಿಂದ ಇದರ ಕೆತ್ತನೆ ಶಿಲ್ಪ ಸೌಂದರ್ಯಗಳು ಕಾಣುವುದಿಲ್ಲ. ಈ ದೇಗುಲದ ಒಂದು ಪಾರ್ಶ್ವ ಮತ್ತು ಗರ್ಭಗುಡಿಯು ಶ್ರೀ ಸುಂದರೇಶಶಾಸ್ತ್ರಿ ಎಂಬುವರಿಂದ ಸಂರಕ್ಷಣೆಗೆ ಒಳಗಾಗಿದೆ. ಈ ದೇಗುಲದ ಬಲಪಾರ್ಶ್ವವನ್ನು ಈ ಶಾಸ್ತ್ರಿಗಳ ಸೋದರ ಸಂಬಂಧಿಯು ತಮ್ಮ ಕೃಷಿ ಸಾಮಗ್ರಿ ಮತ್ತು ಕಟ್ಟಿಗೆ ಒಟ್ಟುವ ಉಗ್ರಾಣವನ್ನಾಗಿ ಮಾಡಿಕೊಂಡಿದ್ದಾರೆ. ಎಡಪಾರ್ಶ್ವದ ಮೇಲೆ ಬಾಡಿಗೆಗೊಂದು ಮನೆಯನ್ನೂ ಕಟ್ಟಲಾಗಿದೆ. ಪಂಚಾಯಿತಿಯವರು ಈ ಮನೆಯ ಒಡೆಯರಿಂದ ಇಲ್ಲಿ ಸಂಡಾಸು ಕಟ್ಟಿಸುವುದಿಲ್ಲವೆಂದು ಮುಚ್ಚಳಿಕೆ ಬರೆಸಿಕೊಂಡು ಪರವಾನಿಗೆಯನ್ನೂ ನೀಡಿದ್ದಾರೆ! ಇದೇ ದೇಗುಲದ ಮುಖಭಾವವನ್ನು ಸಾರ್ವಜನಿಕ ತಿಪ್ಪೆ ಎಂಬಂತೆ ಕೇರಿಯವರೆಲ್ಲ ಕಸ ಹಾಕಲು ಬಳಸುತ್ತಿದ್ದಾರೆ. ಅಂತೂ ಮಲ್ಲಿಕಾರ್ಜುನ ದೇಗುಲವು ಖಾಸಗಿ ಆಸ್ತಿಯಂತೆ, ಸಾರ್ವಜನಿಕ ತಿಪ್ಪೆಯಂತೆ ಇಂದಿಗೂ ಬೇರೆ ಬೇರೆ ರೀತಿಯಿಂದ ಉಪಯೋಗಕ್ಕೆ ಒಳಗಾಗುತ್ತಿದೆ.

ಕಲಚುರಿ ಅರಸರ ಕಾಲದ ಮೂರು ಶಾಸನಗಳು ಇಲ್ಲಿವೆ. ಕುತೂಹಲವೆಂದರೆ ಈ ಮೂರು ಶಾಸನಗಳಲ್ಲಿ ಕಲಚುರಿ ವಂಶಾವಳಿ ನೀಡಲಾಗಿದ್ದು ಮೂರರಲ್ಲೂ ಭಿನ್ನತೆಯಿದೆ. ಸೊಲ್ಲಾಪುರದ ಶಾಸನಗಳಿಂದ ರಚಿಸಿರುವ ಕಲಚುರಿ ವಂಶಾವಳಿಗಿಂತ ಭಿನ್ನ ವಂಶಾವಳಿ ಈ ಶಾಸನಗಳಲ್ಲಿದೆ. (ನೋಡಿ : *ಇನ್‌ಸ್ಕ್ರಿಪ್ಷನ್ಸ್ ಫ್ರಮ್ ಸೋಲಾಪುರ್ ಡಿಸ್ಟ್ರಿಕ್ಟ್* : ಸಂ. ಶ್ರೀನಿವಾಸ ರಿತ್ತಿ ಮತ್ತು ಆನಂದ ಕುಂಬಾರ, ಧಾರವಾಡ, ೧೯೮೮, ಪು-೪)

೧೨ನೇ ಶತಮಾನದಲ್ಲಿ ಕಲ್ಯಾಣ ಕ್ರಾಂತಿಯಲ್ಲಿ 'ದೇಹವೇ ದೇಗುಲ', 'ವೇದವೆಂಬುದು ಓದಿನ ಮಾತು' ಮುಂತಾಗಿ ಬಿರುಸಿನಿಂದ ವೀರಶೈವ ಚಳುವಳಿ ನಡೆಯುತ್ತಿದ್ದರೆ, ಇದೇ ಕಾಲಕ್ಕೆ ಕಲ್ಯಾಣ ಕಲಚುರಿಗಳಿಂದಲೇ ಕುಕನೂರಿನಲ್ಲಿ ವೇದಾಧ್ಯಯನಕ್ಕೆ ದಾನ ದೊರೆಯುತ್ತದೆ. ಸಂಸ್ಕೃತದಲ್ಲಿ ಶಾಸನಗಳು ಕೆತ್ತಲ್ಪಡುತ್ತವೆ. ದೇವಸ್ಥಾನಗಳು ಜೀರ್ಣೋದ್ಧಾರವಾಗುತ್ತವೆ. ಇದೇ ಮಲ್ಲಿಕಾರ್ಜುನ ದೇವರಿಗೆ ಲಕ್ಷ ಗಡುಗೆ ಜಲಾಭಿಷೇಕವೂ, ಸಹಸ್ರ ಗಡುಗೆ ಕ್ಷೀರಾಭಿಷೇಕವೂ, ಮಹಾ ಪೂಜೆಯೂ ಜರುಗುತ್ತದೆ. (ನೋಡಿ. ೧೧೭೦ರ ಶಾಸನ). ೧೧೭೦-೮೦ರ ಕಾಲದಲ್ಲಿ ಕಲಚುರಿ ರಾಜವಂಶವು ನಿತ್ಯವೂ ಅಪಾರ ರಾಜಕೀಯ ತಲ್ಲಣಗಳಿಗೆ ಒಳಗಾಗುತ್ತಿದ್ದರೂ ಆಗ ಕೆತ್ತಲ್ಪಟ್ಟ ಎಲ್ಲ ಶಾಸನಗಳಲ್ಲಿ ರಾಜರುಗಳನ್ನು 'ಸುಖಸಂಕಥಾ ವಿನೋದ ದಿಂದ ರಾಜ್ಯಂಗೆಯುತ್ತುಮಿರೆ' ಎಂದೇ ವರ್ಣಿಸಲಾಗಿದೆ.



ಚಿತ್ರ.೩ : ಉರಗಶಯನನಪಾದ ಒತ್ತುವ ಲಕ್ಷ್ಮಿ ಮತ್ತು ಸುತ್ತುವರಿದ ದೇವಗಣ

**ಗವರೇಶ್ವರ**

ಸರಿಸುಮಾರು ಗಣೇಶ್ವರ ಮತ್ತು ಕಲ್ಲೇಶ್ವರಗಳ ನಡುವೆ ಈಗಿನ ಕೋಳಿಪೇಟೆಯಲ್ಲಿ ಗವರೇಶ್ವರ ದೇಗುಲವಿದೆ. ಗವರೇಶ್ವರ ಎಂದರೆ ಗೌರಿಯ ಈಶ – ಈಶ್ವರನೇ. ಇದರ ಗರ್ಭಗುಡಿಯಲ್ಲಿ ಒಂದು ಶಿವಲಿಂಗ ಮಾತ್ರ ಇದೆ. ಬೇರೆ ಯಾವ ಮೂರ್ತಿಯೂ ಇಲ್ಲ. ಆದರೆ ಇಲ್ಲಿನ ಜನ ಇದನ್ನು ಲಕ್ಷ್ಮಿಗುಡಿ ಎನ್ನುತ್ತಾರೆ. ಶಿವಪುರುಷ ದೇವಾಲಯವೊಂದು ವೈಷ್ಣವ ಸ್ತ್ರೀ ದೇಗುಲವಾಗಿ ಹೇಗೆ ಪರಿವರ್ತಿತವಾಯಿತು ? ಇದರ ಹಿಂದೆ ಒಂದು ಸಾಂಸ್ಕೃತಿಕ ಸಂಘರ್ಷದ ಇತಿಹಾಸವೇ ಇರಬಹುದು.

ಈಗ ಇದು ಸಂಪೂರ್ಣ ಶಿಥಿಲ ಸ್ಥಿತಿಯಲ್ಲಿದ್ದು ಇನ್ನು ಕೆಲವೇ ದಿನಗಳಲ್ಲಿ ನಿಶ್ಶೇಷವಾಗಲೂಬಹುದು. ಕೆಲವು ಕಂಬಗಳು ಮಾತ್ರ ಸುಸ್ಥಿತಿಯಲ್ಲಿದ್ದು ಛಾವಣಿ ಬಹುಪಾಲು ಉದುರಿಹೋಗಿದೆ. ಕಂಬಗಳ ಕೆತ್ತನೆ ಪ್ರಾಚೀನವೂ ಸುಂದರವೂ ಆಗಿದೆ. ಮಲ್ಲಿಕಾರ್ಜುನ, ಕಲ್ಲೇಶ್ವರದ ಕಂಬಗಳ ಕೆತ್ತನೆಯನ್ನು ಇವು ಹೋಲುತ್ತವೆ. ಈ ದೇಗುಲದ ಒಳಗೆ ಕಲ್ಲೇಶ್ವರದ ಕಡೆಗೆ ಹೋಗಲು ಸುರಂಗ (ಭವಾರ) ಮಾರ್ಗವೊಂದು ಇದೆಯೆಂದು ಇಲ್ಲಿನ ಜನ ಹೇಳುತ್ತಾರೆ. ಇದರ ಬಗ್ಗೆ ದಂತಕತೆಗಳನ್ನೂ ಹೇಳುತ್ತಾರೆ. ಈ ಕೇರಿಯ ಜನ ತಮ್ಮ ಹಳೇ ಮನೆಯ ಮುರಿದ ಕಟ್ಟಿಗೆ ಸಾಮಗ್ರಿ ಮತ್ತು ಕೃಷಿ ಸಾಮಗ್ರಿಗಳನ್ನು ಒಟ್ಟಲು ಈ ದೇಗುಲವನ್ನು ಬಳಸುತ್ತಿದ್ದಾರೆ.

**ಚಕೀಶ್ವರ**

ಗಣೇಶ್ವರದ ನೇರಕ್ಕೆ ಅಭಿಮುಖವಾಗಿ ಊರಗಡಿಯಲ್ಲಿರುವ ಇದರ ತಲ ವಿನ್ಯಾಸ ಅಷ್ಟಭುಜಾಕೃತಿಯಲ್ಲಿದ್ದು



*ಚಿತ್ರ.೪ : ಲಿಂಗದಾಕಾರದಲ್ಲಿನ ಶಿಲೆಯಲ್ಲಿ ವರಾಹಮೂರ್ತಿಯನ್ನು ಕೆತ್ತಿರುವುದು*

ಗರ್ಭಗೃಹ ಮತ್ತು ಪ್ರಾಂಗಣ ಮಾತ್ರ ಇಂದು ಸುಸ್ಥಿತಿಯಲ್ಲಿ ಉಳಿದಿವೆ. ದೇಗುಲದ ಪೂರ್ವ, ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಶಿವಲಿಂಗಗಳು ಬಿಸಿಲಿನಲ್ಲಿ ಬಿದ್ದಿವೆ. ಇಲ್ಲಿರುವ ಲಿಂಗಗಳು ಮತ್ತು ದೇಗುಲದ ಸಂರಚನೆಯನ್ನು ನೋಡಿದರೆ ಇದು ಪಂಚಲಿಂಗೇಶ್ವರ ದೇಗುಲವಿರಬೇಕೆನ್ನಿಸುತ್ತದೆ.

ಈ ದೇಗುಲದ ಪುಷ್ಕರಿಣಿ ಇಂದು ಕೊಳಚೆ ಹೊಂಡವಾಗಿದೆ. ಪ್ರತಿದಿನವೂ ದೇಗುಲದ ಪ್ರಾಂಗಣ ಮುಂಭಾಗದಲ್ಲಿ ಕಾವಿಧಾರಿ ಮುದುಕರು ಭಂಗಿ ಸೇದುತ್ತಾ ಕಾಲ ಕಳೆಯುತ್ತಾರೆ. ಕೆಲವೇ ಹಬ್ಬ ಹುಣ್ಣಿಮೆಗಳಲ್ಲಿ ಮಾತ್ರ ದೇವರಿಗೆ ಈ ಡ್ರಗ್ಸ್ ಭಕ್ತರಿಂದ ಮುಕ್ತಿ ದೊರಕುತ್ತದೆ. ಹಬ್ಬ ಹುಣ್ಣಿಮೆ ಶಿವರಾತ್ರಿಗಳನ್ನೂ ಲೆಕ್ಕಿಸದೆ ೩೬೫ಲೂ ದಿನ ಈ ದೇಗುಲದ ಸುತ್ತ ಜನ ಸಂಡಾಸಿಗೆ ಕೂಡ್ರುತ್ತಾರೆ. ಹೀಗೆ ಸಾರ್ವಜನಿಕರು ಕಕ್ಕಸ್ಸು ಗುಂಡಿಯನ್ನಾಗಿ ಪ್ರಾಚೀನ ದೇಗುಲದ ಸ್ಥಳವನ್ನು ಬಳಸುವುದು ಬೇರೆಲ್ಲೂ ಇರಲಾರದು. ಇಷ್ಟಾದರೂ ಈ ದೇಗುಲದಲ್ಲಿ ಹಬ್ಬ ಹುಣ್ಣಿಮೆಗೆ ಅರ್ಚನೆಯೂ ಸಂಜೆ ಹೊತ್ತು ಭಜನೆಯೂ ನಡೆಯುತ್ತದೆ.

**ಬ್ರಹ್ಮೇಶ್ವರ**

ಬ್ರಹ್ಮೇಶ್ವರವು ಇಂದು ಛಿದ್ರವಾಗಿದೆ. ಸಾವಿರಕ್ಕೂ ಹೆಚ್ಚು ವರ್ಷಗಳಷ್ಟು ಪ್ರಾಚೀನವಾದ ಈ ದೇಗುಲದ ಕಂಬ, ಬೋದಿಗೆ, ಛಾವಣಿಗಳನ್ನೆಲ್ಲಾ ಕೆಡವಿ, ಸೀಳಿ ಸೈಜುಕಲ್ಲುಗಳನ್ನಾಗಿ ಕತ್ತರಿಸಲಾಗಿದೆ. ಇವನ್ನು ಬಳಸಿಕೊಂಡೇ ಚಿಕ್ಕದೊಂದು ಬಸವಣ್ಣನ ಗುಡಿಯನ್ನು ಕಟ್ಟಲಾಗಿದೆ. ಈ ದೇಗುಲದಿಂದ ಸ್ವಲ್ಪ ಮುಂದೆ ಹೋದರೆ ನಂದಿ ವಿಗ್ರಹ, ಲಿಂಗ ಮತ್ತು ಶಾಸನ ನೆಲದಲ್ಲಿ ಬಿದ್ದಿವೆ. ಅನಾಥವಾಗಿ ಬಿದ್ದಿರುವ ಲಿಂಗವನ್ನೇ ಇಲ್ಲಿನ ಜನ ಬಯಲು ಬ್ರಹ್ಮೇಶ್ವರ ಎಂದು ಕರೆಯುತ್ತಾರೆ. ಈ ದೇಗುಲವು ಮಹಾಮಾಯಾಕ್ಕೆ ಹೋಗುವ ಕುಕನೂರಿನ ಮುಖ್ಯರಸ್ತೆಯಲ್ಲಿ ಶೆಟ್ಟರ ಹೊಸ ಅಂಗಡಿಯ ಎದುರಿಗೆ ಇದೆ.

**ಪಾತಾಳೇಶ್ವರ**

ಈ ದೇಗುಲದ ಗರ್ಭಗೃಹವೊಂದು ಮಾತ್ರ ಉಳಿದಿದ್ದು ಇದೂ ಮನೆಯೊಂದರ ಒಳಗೆ ತಳಭಾಗದಲ್ಲಿ ಇದೆ. ಈ ಗುಡಿಯು ಪ್ರಾಚೀನವಾದುದಾಗಿದ್ದು ದಿನ ಕ್ರಮೇಣ ಊರು ಬೆಳೆದಂತೆಲ್ಲ ಇದು ನೆಲ ಸೇರಿರಬಹುದು. ಇದರ ಮುಂಚಿನ

ಹೆಸರು ಬೇರೆಯೇ ಆಗಿದ್ದು ಇತ್ತೀಚೆಗೆ ಇದು ಆಳದಲ್ಲಿರುವ ಕಾರಣಕ್ಕೆ ಜನ ಇದನ್ನು ಪಾತಾಳೇಶ್ವರ ಎಂದು ಕರೆದಿರಬಹುದು. ಈ ದೇಗುಲದ ಮೇಲೆ ಮನೆ ಕಟ್ಟಿಕೊಂಡು ಬಿಟ್ಟಿರುವುದರಿಂದ ಪಾತಾಳೇಶ್ವರ ಇಂದು ಎಲ್ಲಿದೆ ಎಂದು ನೋಡುವುದೇ ಒಂದು ಸಾಹಸವಾಗಿದೆ. ಇದರ ಆಸುಪಾಸು ಉತ್ಖನನ ನಡೆಸಿದರೆ ಹೆಚ್ಚಿನ ವಿವರಗಳು ದೊರಕಬಹುದು.



*ಚಿತ್ರ. ೫ : ನವಲಿಂಗೇಶ್ವರ ದೇಗುಲದ ಚಿತ್ರ*

**ಗಣೇಶ್ವರ**

ಈ ಊರಿನ ಶಿವದೇಗುಲಗಳಲ್ಲೆಲ್ಲ ಸ್ವಲ್ಪ ಉತ್ತಮ ಸ್ಥಿತಿಯಲ್ಲಿದ್ದು, ನಿತ್ಯಾರ್ಚನೆಗೆ ಒಳಗಾಗುವ ದೇಗುಲ ವೆಂದರೆ ಇದೊಂದೇ. ಅರ್ಚಕರಿಗೆ ವಾಸದ ಮನೆಗಳನ್ನು ಕಟ್ಟಿಸಿಕೊಟ್ಟು ಅವರ ಪಾಲನೆಗೆ ಈ ದೇಗುಲ ಒಪ್ಪಿಸಿರುವುದರಿಂದ ಇದು ಸ್ವಲ್ಪ ಸುಸ್ಥಿತಿಯಲ್ಲಿದೆ. ೮೦ರ ದಶಕದಲ್ಲಿ ಜೀರ್ಣೋದ್ಧಾರ ಮಾಡಿಸಿ ಇಲ್ಲಿ ಒಂದು ಹೊಸಗನ್ನಡ ಶಾಸನವನ್ನೂ ಕೆತ್ತಿಸಲಾಗಿದೆ.

ಎಲ್ಲಿ ಅರ್ಚಕರಿಗೆ ವಾಸಿಸಲು ಮನೆ, ಜೀವನಕ್ಕೆ ಜೀವನಾಂಶ, ಖರ್ಚಿಗೆ ದಕ್ಷಿಣೆ-ಪೂಜಾದಾಯ ಇದೆಯೋ ಅಲ್ಲಿ ಮಾತ್ರ ದೇಗುಲಗಳು ಸಂರಕ್ಷಣೆಗೆ ಒಳಗಾಗುತ್ತವೆ. ಯಾವ ದೇಗುಲಕ್ಕೆ ಆದಾಯ ಒದಗಿಸಬಹುದಾದ ಸ್ಥಿತಿವಂತ ಭಕ್ತರಿರುತ್ತಾರೋ ಆ ದೇಗುಲ ಮಾತ್ರ ಸಂರಕ್ಷಣೆಗೆ-ಅರ್ಚನೆಗೆ ಪಾತ್ರವಾಗುತ್ತದೆ ಎಂಬುದು ಈ ಗಣೇಶ್ವರದಿಂದ ಸಾಬೀತಾಗುತ್ತದೆ.

**ಉಪಸಂಹಾರ**

ಕುಕನೂರಿನ ದೇಗುಲ ಸಂಸ್ಕೃತಿಯ ಇತಿಹಾಸದಲ್ಲಿ ಏನೇ ನಡೆದಿರಲಿ, ಅದೆಲ್ಲವೂ ದೇಗುಲದ ಆರ್ಥಿಕ ಮತ್ತು ಸಾಮಾಜಿಕ ಪಾತ್ರಕ್ಕೆ ತಕ್ಕಂತೆ ನಡೆದಿದೆ. ಭಕ್ತ-ಅರ್ಚಕ-ದೈವ ಈ ಮೂವರಲ್ಲೂ ಒಂದು ಪ್ರಯೋಜನವಾದೀ - ಉಪಭೋಗಿ ನೆಲೆಯ ಸಂಬಂಧವಿದೆ. ಈ ನೆಲೆಗೆ ಧಕ್ಕೆ ಒದಗಿದಾಗೆಲ್ಲ ಈ ಮೂವರ ಸಂಬಂಧವು ವಿಘಟಿತಗೊಂಡಿದೆ. ದೇಗುಲ ಸಂಸ್ಕೃತಿಯಲ್ಲಿ ಆಧ್ಯಾತ್ಮ, ಭಕ್ತಿ, ಸೇವೆ, ನಂಬಿಕೆ, ಆಚರಣೆ ಎಲ್ಲವೂ ಉಪಭೋಗೀ-ಪ್ರಯೋಜನವಾದೀ ನೆಲೆಯಲ್ಲೇ ನಿರ್ವಚಿತಗೊಳ್ಳುವುದು ಒಂದು ರೀತಿ ವಿಪರ್ಯಾಸವೇ ಹೌದು.

ಕುಕನೂರಿನ ಪ್ರತಿಷ್ಠಿತ ಪ್ರಾಚೀನ ಶೈವ ದೇಗುಲ (ಮಲ್ಲಿಕಾರ್ಜುನ)ಕ್ಕೆ ಶೈವ ಬ್ರಾಹ್ಮಣರೇ ಯಾಕೆ ಇಂದು ಕಸ ಹಾಕುತ್ತಿದ್ದಾರೆ ? ಪ್ರಾಚೀನ ದೇಗುಲವೊಂದು ಕಸದಬುಟ್ಟಿಯಾಗಿ ಪರಿವರ್ತಿತವಾಗಿರುವುದರ ಹಿಂದೆ ಯಾವ ಮಾಸ್ ಸೈಕಾಲಜಿ ಕೆಲಸ ಮಾಡುತ್ತಿದೆ ? ದೇಗುಲದ ಸ್ಥಳವನ್ನು ಹೇಲುಗುಂಡಿ ಮಾಡುವ, ದೇಗುಲಗಳ ಮೇಲೆ ಮನೆಕಟ್ಟಿ ಬಾಡಿಗೆಗೆ ಕೊಡುವ, ಕಟ್ಟಿಗೆ ಒಟ್ಟುವ, ಖಾಸಗಿ ಆಸ್ತಿಯಂತೆ ಬಳಸುವ ಸ್ಥಿತಿಗೆ ದೇಗುಲಗಳು ಯಾಕೆ ಈಡಾಗಿವೆ ? ಇದಕ್ಕೆ ಐತಿಹಾಸಿಕ ಪ್ರಜ್ಞೆಯ ಕೊರತೆ ಕಾರಣವೇ ? ಹೀಗೆ ಮಾಡುವವರೆಲ್ಲರೂ ತಿಳಿದವರು, ಮೇಲ್ವರ್ಣದವರಾಗಿದ್ದರೂ ಹೀಗೇಕೆ ? ಭಕ್ತ, ಭವಿ, ಅರ್ಚಕ ಎಲ್ಲರೂ ಸೇರಿದಂತೆ ಪ್ರತಿಯೊಬ್ಬರೂ ಪ್ರಯೋಜನವಾದದ ಪಡಿಯಚ್ಚುಗಳೇ ಆಗಿರುವುದೇ ಇದಕ್ಕೆ ಮುಖ್ಯ ಕಾರಣವಾಗಿದೆ.

ಅದೂ ಅಲ್ಲದೆ, ದೇಗುಲಗಳ ಮೂಲಕ ಸಾಂಸ್ಕೃತಿಕ ನಾಯಕರಾಗಿ ವಿಜೃಂಭಿಸಿದ ಉನ್ನತ ವರ್ಣೀಯರು ಮೊದಲಿಗೆ ಇಂಗ್ಲಿಷ್ ಚಕ್ರಾಧಿಪತ್ಯ ಮತ್ತು ಇಂಗ್ಲಿಷ್ ವಿದ್ಯಾಭ್ಯಾಸದಿಂದ ದಾಳಿಗೆ ಒಳಗಾದರು. ಈ ದಾಳಿಯು ಸಾಮಾಜಿಕ-ಸಾಂಸ್ಕೃತಿಕ ಸ್ತರವಿನ್ಯಾಸದಲ್ಲಿ ತೀವ್ರತರ ವ್ಯತ್ಯಾಸಗಳನ್ನು ಉಂಟುಮಾಡಿತು. ಇದರಿಂದಾಗಿ ತಮ್ಮ ಪಾರಂಪರಿಕ ಸಾಮಾಜಿಕ ಆರ್ಥಿಕ ಔನ್ನತ್ಯವನ್ನು ಉನ್ನತ ವರ್ಣೀಯರು ಕಳಕೊಳ್ಳುತ್ತಾ ಬಂದರು. ಆನಂತರ ಪ್ರಜಾಪ್ರಭುತ್ವ, ಸಂವಿಧಾನ, ನ್ಯಾಯಾಂಗಗಳಿಂದಾಗಿ ಸಾಮಾಜಿಕ ಕಾನೂನು ನಿರ್ಮಾಣದ ತಮ್ಮ ಅಧಿಕಾರವನ್ನೂ ಕಳಕೊಳ್ಳುತ್ತಾ ಮತ್ತಷ್ಟು ದುರ್ಬಲರಾದರು. ಇದೀಗ ಕುಕನೂರಿನಲ್ಲಿ ಗ್ರಾನೈಟ್ ಉದ್ಯಮ, ಆಧುನಿಕ ವಿದ್ಯಾಭ್ಯಾಸ ಮತ್ತು ರಾಜಕೀಯ ಮೀಸಲಾತಿ ಇತ್ಯಾದಿಗಳು ಸಾಂಸ್ಕೃತಿಕ ವಾತಾವರಣದಲ್ಲಿ ಅನಿರೀಕ್ಷಿತ ಅಲ್ಲೋಲ ಕಲ್ಲೋಲಗಳಿಗೆ ಕಾರಣವಾಗಿದೆ. ಹಾಗಾಗಿ ವಲಸೆ ಹೋಗಿ ಹೊಸ ವರ್ಗವಿನ್ಯಾಸಕ್ಕೆ ತಮ್ಮನ್ನು ಒಡ್ಡಿಕೊಳ್ಳದೆ ಗ್ರಾಮದಲ್ಲೇ ಉಳಿದ ಉನ್ನತ ವರ್ಣೀಯರು ಅಧಃಪಾತಾಳಕ್ಕೆ ತಳ್ಳಲ್ಪಡುತ್ತಿದ್ದಾರೆ. ಇವರ ಪಾರಂಪರಿಕ ಬೌದ್ಧಿಕ ಔನ್ನತ್ಯ ಕೂಡ ಪಲ್ಲಟಗೊಳ್ಳುತ್ತಿದೆ. ಯಾವ ಹಂತದಲ್ಲೂ ಇವರ ದೇವರಾಗಲೀ, ದೇಗುಲಗಳಾಗಲೀ ಇವರನ್ನು ರಕ್ಷಿಸಲು, ಉನ್ನತೀಕರಿಸಲು ವಿಫಲವಾಗಿವೆ. ಇಂಥ ವಿಫಲ ದೇಗುಲಗಳ ಮೇಲೆ ಜನಸಮುದಾಯ ಹೀಗೆ ಕಸ ಹಾಕುವ ಮೂಲಕ ತನ್ನ ಸೇಡು ತೀರಿಸಿಕೊಳ್ಳುತ್ತಿದೆ.

ಒಬ್ಬ ಸಾಮಾನ್ಯ ರೈತ ಕುಟ್ಟಿ ಹಿಡಿದು ನಿರುಪಯುಕ್ತವಾದ ಗುದ್ದಲಿಯ ಕಾವೊಂದನ್ನು ನಿರಾತಂಕವಾಗಿ ಒಲೆಗೆ ಹಾಕುವಷ್ಟೇ ಸಹಜವಾಗಿ ಬ್ರಾಹ್ಮಣ್ಯವು ಈ ದೇಗುಲಗಳನ್ನು ವರ್ಜಿಸುತ್ತಿದೆ. ಜನ ಈ ದೇಗುಲಗಳನ್ನ ತಮ್ಮ ಉಪಯೋಗಕ್ಕೆ ಹೇಗೆ ಬೇಕೋ ಹಾಗೆ ಬಳಸಿಕೊಳ್ಳುತ್ತಿದ್ದಾರೆ. ಇಲ್ಲಿನ ಮಹಾಮಾಯಾ ದೇಗುಲವು ಇಂದು ಆತ್ಯಂತಿಕ ಆದರಕ್ಕೆ ಪಾತ್ರವಾಗಿರುವುದರ ಹಿಂದೆ ಕೂಡ ಪ್ರಯೋಜನ ದೃಷ್ಟಿಕೋನವೇ ಇದೆ. ಯಾಕೆಂದರೆ ಇಂದಿಗೂ ಈ ದೇಗುಲಕ್ಕೆ ಸಹಸ್ರಾರು ಮುಗ್ಧ ಭಕ್ತರಿದ್ದಾರೆ. ಇವರಿಂದ ಈ ದೇಗುಲಕ್ಕೆ (ರಕ್ಷಕರಿಗೆ) ಆದಾಯವಿದೆ. ಈ ಕಾರಣಕ್ಕೇ ಈ ದೇಗುಲಕ್ಕೆ ಭಕ್ತರೊಟ್ಟಿಗೆ ಅರ್ಚಕರೂ ಅಭಿಮಾನಿಗಳೂ ಅವಲತ್ತುಗೊಂಡಿದ್ದಾರೆ. ಅಂತೂ ಎಲ್ಲಿ ಬೆಲ್ಲ ಇರುತ್ತದೋ ಅಲ್ಲಿ ಇರುವೆ ಬರುತ್ತವೆಂಬುದು ಕುಕನೂರಿನ ದೇಗುಲಗಳಿಂದ ಸಾಬೀತಾಗಿದೆ. ಇಲ್ಲಿನ ಶೈವ ಬ್ರಾಹ್ಮಣರೂ ಕೂಡ ವೈಷ್ಣವ ಬ್ರಾಹ್ಮಣರು ತಮ್ಮಿಂದ ಈ ದೇಗುಲವನ್ನು ಕಿತ್ತುಕೊಂಡು ದುಂಡಾವರ್ತಿ ಮಾಡುತ್ತಿದ್ದಾರೆ ಎಂದು ದೂರುವುದರ ಹಿಂದೆಯೂ ಈ ದೇಗುಲದ ಆದಾಯ - ವರ್ಚಸ್ಸು ನಮಗೆ ಲಭಿಸುತ್ತಿಲ್ಲವಲ್ಲ ಎಂಬ ಹೊಟ್ಟೆಕಿಚ್ಚು ಇದೆಯೇ ವಿನಾ ಭಕ್ತಿಯೇನೂ ಇಲ್ಲ. ಇದ್ದಿದ್ದರೆ ಹತ್ತಾರು ಶಿವನ ದೇಗುಲಗಳು ಅನಾಥವಾಗಿ ಯಾಕೆ ಒಣಗಬೇಕಾಗಿತ್ತು !

ಹಾಗೇ ಯಾರೇ ಪ್ರವಾಸಿಗಳು ಬಂದರೂ ಇಲ್ಲಿನ ಮಹಾಮಾಯಾದ ಜನ ವೈಷ್ಣವ ರಾಜಕಾರಣ ಮಾಡುತ್ತಾರೆ. ಎಲ್ಲಕ್ಕೂ ಮಿಗಿಲಾದುದೇ ಮಹಾಮಾಯಾ ಎಂದು ಶಂಖ ಊದುತ್ತಾರೆ. ಕಲ್ಲೇಶ್ವರ, ನವಲಿಂಗೇಶ್ವರ, ಮಲ್ಲಿಕಾರ್ಜುನಗಳನ್ನು ತಮ್ಮ ಊರಿನ ಹೆಮ್ಮೆಯಾಗಿ ಎಂದೂ ಪರಿಗಣಿಸುತ್ತಿಲ್ಲ.

ದೇಗುಲದ ಬುಡ ಸುಳಿಗೆ ಬಳ್ಳಾರಿ ಜಾಲಿ ಬೆಳೆಸುವ, ದೇಗುಲವನ್ನು ಸೀಳಿ ಸೈಜುಗಲ್ಲು ಮಾಡುವ, ದೇಗುಲದ ಅಕ್ಕಪಕ್ಕ ಹೇಲುಗುಂಡಿ ಮಾಡುವ, ಒಳಾಂಗಣವನ್ನೇ ಡಸ್ಟ್‌ಬಿನ್ನಾಗಿ ಮಾಡುವ, ಹೀಗೆ ಹತ್ತು ಹಲವು ರೀತಿ ''ಭಕ್ತಿ'' ತೋರುವ ಪುಣ್ಯಾತ್ಮರು ಈ ಊರಿನಲ್ಲಿದ್ದಾರೆ. ಇಂಥಾ ಕುಕನೂರಿನ ದೇಗುಲಗಳು ಇಟಗಿಯ ದೇವಾಲಯ ಚಕ್ರವರ್ತಿಯೆಂಬ ದೇಗುಲಕ್ಕಿಂತ ಮಿಗಿಲಾಗಿ ಹೇಗೆ ಕಂಡಾವು ? ಜನ ಬಂದಾದರೂ ಹೇಗೆ ನೋಡಿಯಾರು ? ಸರ್ಕಾರವನ್ನ, ಅಂತೆಯೇ ಆರ್ಕಿಯಾಲಜಿ-ಮುಜರಾಯಿ ಇಲಾಖೆಗಳನ್ನು ದೂರಿಯಾದರೂ ಪ್ರಯೋಜನವೇನು ?

ಕರ್ನಾಟಕದ ಬಹಳಷ್ಟು ನಿರ್ಲಕ್ಷಿತ ಪ್ರಾಚೀನ ದೇಗುಲಗಳ ಸ್ಥಿತಿಗತಿ ಕುಕನೂರ ದೇಗುಲಗಳಿಗಿಂತ ಭಿನ್ನವಾಗೇನೂ ಇಲ್ಲ. ಎಲ್ಲ ಕಡೆಗೂ ಜನ ಪ್ರಾಚೀನ ದೇಗುಲಗಳಿಗೆ ನಡಕೊಳ್ಳುವುದು ಹೀಗೇನೆ. ಸರ್ಕಾರಿ ಕೃಪಾಪೋಷಣೆ ಉಳ್ಳವು ಮಾತ್ರ ಸ್ವಲ್ಪ ಜೀವಂತವಾಗಿವೆ. ಸರ್ಕಾರ ಕೂಡ ಜಾಗತಿಕ ಮನ್ನಣೆಯುಳ್ಳ, ಪ್ರವಾಸೋದ್ಯಮ ಆದಾಯವುಳ್ಳವನ್ನು ಮಾತ್ರ ರಕ್ಷಿಸುತ್ತಿದೆ. ಮಿಕ್ಕವನ್ನು ಮುಟ್ಟುತ್ತಲೂ ಇಲ್ಲ. ಹೀಗೆ ಜನ ಮತ್ತು ಸರ್ಕಾರ ಎರಡೂ ಕಡೆಯಿಂದ ಅಸ್ಪೃಶ್ಯವಾಗಿರುವ ಅನೇಕ ತಾಣಗಳಲ್ಲಿ ಕುಕನೂರು ಒಂದಾಗಿದೆ.

ಆದರೂ 'ಮುಟ್ಟಿ ನೋಡದೆ ಇರುವುವೆಲ್ಲಾ ಅಸ್ಪೃಶ್ಯವಲ್ಲ' ಅಲ್ಲವೇ ?

ರಾಮಲಿಂಗಪ್ಪ ಟಿ. ಬೇಗೂರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೋಲಾರ.

ಮನ ಮುಟ್ಟಿದ ಆ ಕ್ಷಣ

## ಆಗಂತುಕನ ಹೃದಯ ಶ್ರೀಮಂತಿಕೆ

ಕಳೆದ ವರ್ಷ ಬೇಸಿಗೆಯ ರಜೆಯಲ್ಲಿ ನಾವು ಉತ್ತರ ಭಾರತಕ್ಕೆ ಪ್ರವಾಸ ಹೊರಡಲು ನಿಶ್ಚಯಿಸಿದೆವು. ನಾವು ಭೇಟಿ ನೀಡುವ ತಾಣಗಳಲ್ಲಿ ಆಗ್ರಾ ಹಾಗೂ ಮಥುರಾ ಸಹ ಸೇರಿದ್ದವು. ದೆಹಲಿಗೆ ಟಿಕೇಟುಗಳಿದ್ದರೂ ಕೊನೆ ಗಳಿಗೆಯಲ್ಲಿ, ಆಗ್ರಾದಲ್ಲಿ ಇಳಿಯಲು ನಿರ್ಧರಿಸಿದೆವು. ಅಂದೇ ಆಗ್ರಾ, ಮಥುರಾ ನೋಡಿ, ರಾತ್ರಿ ದೆಹಲಿ ತಲುಪುವ ಯೋಚನೆ ನಮ್ಮದಾಗಿತ್ತು. ಆಗ್ರಾದಲ್ಲಿ ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಿದೆವು. ಸಂಜೆ ೬-೩೦ಕ್ಕೆ ತಾಜ್ ಎಕ್ಸ್‌ಪ್ರೆಸ್‌ನಲ್ಲಿ ಮಥುರಾಕ್ಕೆ ಹೋಗಲು ಟಿಕೇಟುಗಳನ್ನು ಕಾದಿರಿಸಲಾಗಿತ್ತು. ಆದರೆ ರೈಲುಗಾಡಿ ಬಂದದ್ದು ಒಂದೂ ಕಾಲು ಗಂಟೆ ತಡವಾಗಿ. ಮಥುರಾ ತಲುಪಿದಾಗ ರಾತ್ರಿ ೮.೩೦ ಗಂಟೆ. ರೈಲ್ವೆ ನಿಲ್ದಾಣದಲ್ಲಿ ವಿಚಾರಿಸಿದಾಗ, ಕೃಷ್ಣ ದೇವಾಲಯ ಆ ಸಮಯದಲ್ಲಿ ಮುಚ್ಚಿರುವುದೆಂದು ತಿಳಿಯಿತು. ರಾತ್ರಿಯನ್ನು ಮಥುರಾದಲ್ಲೇ ಕಳೆದು, ಬೆಳಗ್ಗೆ ಶ್ರೀ ಕೃಷ್ಣನ ಆಲಯಕ್ಕೆ ಭೇಟಿ ನೀಡಿ, ದೆಹಲಿಗೆ ಹೋಗಬೇಕೆಂದು ತೀರ್ಮಾನಿಸಿದೆವು.

ಇದೇ ಸಮಯದಲ್ಲಿ ಇಬ್ಬರು ಸೈಕಲ್ ರಿಕ್ಷಾದವರು ನಮ್ಮ ಬೆನ್ನ ಹಿಂದೆ ಬಿದ್ದಿದ್ದರು. ಬೆಳಗ್ಗಿನಿಂದ ವ್ಯಾಪಾರವೇ ಆಗಲಿಲ್ಲವೆಂದು, ಅತಿ ಕಡಿಮೆ ದರದಲ್ಲಿ ನಾವು ಹೋಗಬೇಕಾಗಿದ್ದ ಕೃಷ್ಣ ಆಲಯದ ಸಮೀಪ ತಲುಪಿಸುವರೆಂದು ಗೋಗರೆಯುತ್ತಿದ್ದರು. ನಮಗೂ 'ಅಯ್ಯೋ ಪಾಪ' ಎನ್ನಿಸಿ ಅವರ ವಾಹನಗಳಲ್ಲಿ ಕುಳಿತೆವು. ಸ್ವಲ್ಪ ದೂರ ಪ್ರಯಾಣಿಸಿದ ನಂತರ, ಅಡ್ಡ ರಸ್ತೆಯೊಂದರಲ್ಲಿ ಒಂದು ಲಾಡ್ಜಿನ ಬಳಿ ವಾಹನಗಳು ನಿಂತವು. ಕಾರಣ ಕೇಳಿದಾಗ, ಆ ಸಮಯದಲ್ಲಿ ದೇವಸ್ಥಾನವು ತೆರೆದಿರುವುದಿಲ್ಲವೆಂದು ತಿಳಿಸಿ, ಆ ಲಾಡ್ಜ್‌ನಲ್ಲಿ ತಂಗಬಹುದೆಂದು ಚಾಲಕ ದ್ವಯರು ತಿಳಿಸಿದರು. ಅವರ ನಿಜವಾದ ಬಣ್ಣ ಬಯಲಾಗಿತ್ತು. ಕೂಡಲೇ ಇಳಿದೆವು. ಆ ಲಾಡ್ಜ್ ಚೆನ್ನಾಗಿರಲಿಲ್ಲ, ವಾತಾವರಣ ಸೂಕ್ತವಾಗಿರಲಿಲ್ಲ. ರೂಮಿನ ಬಾಡಿಗೆಯೂ ತುಂಬ ಅಧಿಕವಾಗಿತ್ತು.

ಆ ಪ್ರದೇಶ ನಿರ್ಜನವಾಗಿತ್ತು. ರಸ್ತೆಯಲ್ಲಿ ದೀಪಗಳಿರಲಿಲ್ಲ. ವಾಹನ ಸಂಚಾರವೂ ಇರಲಿಲ್ಲ. ಗಂಟೆ ೧೦.೧೫ ಆಗಿತ್ತು. ನನ್ನ ಮಗ ಅಳಲು ಶುರುಮಾಡಿದ. ನನ್ನ ತಾಯಿ ಸುಸ್ತಾಗಿದ್ದರು. ನಮ್ಮ ಬಳಿ ಸಾಕಷ್ಟು ಹಣವಿತ್ತು. ಸಹಜವಾಗಿ ನಾವು ಆತಂಕಗೊಂಡೆವು.



ಒಬ್ಬ ರಿಕ್ಷಾದವ ನಮ್ಮನ್ನು ಹೋಟೆಲ್‌ವೊಂದರ ಬಳಿ ಬಿಡುವುದಾಗಿ ತಿಳಿಸಿದ. ಆದರೆ ಅವನು ಕುಡಿದಿದ್ದ. ನಾವು ಮುಂದುವರಿಯಲಿಲ್ಲ. ನಂತರ ಸ್ವಲ್ಪ ದೂರದಲ್ಲಿ ವಸತಿಗೃಹವೊಂದು ಇದೆಯೆಂದು ತಿಳಿದು, ಅದರತ್ತ ಪಾದ ಬೆಳೆಸಿದೆವು. ದಾರಿಯಲ್ಲಿ ಸೈಕಲ್ಲಿನಲ್ಲಿ ಸಾಗುತ್ತಿದ್ದ ಆಗಂತುಕರೊಬ್ಬರ ಬಳಿ ಆ ವಸತಿಗೃಹದ ಬಗ್ಗೆ ವಿಚಾರಿಸಿದೆವು. ಆತ ನಮ್ಮ ಜೊತೆ ಬರುವುದಾಗಿ ತಿಳಿಸಿ, ನಮ್ಮ ಕೆಲವು ಸಾಮಾನುಗಳನ್ನು ಸೈಕಲ್ಲಿನಲ್ಲಿರಿಸಿಕೊಂಡರು. ಆ ವಸತಿಗೃಹದಲ್ಲಿ ರೂಮು ಖಾಲಿಯಿರಲಿಲ್ಲ. ಒಂದು ಆಟೋವನ್ನು ಗೊತ್ತು ಮಾಡಿ ಇನ್ನೊಂದು ಪ್ರದೇಶಕ್ಕೆ ಹೋಗಲು ಚಾಲಕನಿಗೆ ತಿಳಿಸಿದರು. ಹತ್ತು ನಿಮಿಷಗಳ ಪ್ರಯಾಣದ ನಂತರ ಆಟೋ ನಿಂತಿತು. ನಾವು ಕೆಳಗಿಳಿದೆವು. ಹಿಂದಿರುಗಿ ನೋಡಿದರೆ, ಆ ಆಗಂತುಕರು ಸೈಕಲ್ಲಿನಿಂದ ಇಳಿಯುತ್ತಿದ್ದರು. ನಾವು ಈ ಸ್ಥಳಕ್ಕೆ ಹೊಸಬರಾಗಿದ್ದರಿಂದ, ಹಿಂದಿಯಲ್ಲಿ ಮಾತನಾಡಲು ಸರಿಯಾಗಿ ಬರುತ್ತಿರಲಿಲ್ಲವಾದ್ದರಿಂದ, ರಾತ್ರಿ ಸುಮಾರು ಹೊತ್ತಾಗಿದ್ದರಿಂದ ನಮಗೆ ಸೂಕ್ತವಾದ ವ್ಯವಸ್ಥೆ ಮಾಡಿ, ಮನೆಗೆ ವಾಪಸ್ಸಾಗುವರೆಂದು ತಿಳಿಸಿದರು. ಎದುರಿಗಿದ್ದ ಲಾಡ್ಜ್‌ಗೆ ಹೋಗಿ ಅವರಿಗೆ ಅದು ಸರಿ ಕಂಡಿದ್ದರಿಂದ ನಮ್ಮನ್ನೂ ಕರೆದುಕೊಂಡು ಹೋದರು. ನಾವು ಅಲ್ಲೇ ತಂಗಲು ನಿಶ್ಚಯಿಸಿದೆವು. ಆಗ ಗಂಟೆ ೧೧.೨೦ ಆಗಿತ್ತು. ನಾವು ಮನಸಾರೆ ಅವರಿಗೆ ಧನ್ಯವಾದಗಳನ್ನು ಅರ್ಪಿಸಿದೆವು. ಮಾತನಾಡುತ್ತಾ, ಅವರು ಸೈನ್ಯದಲ್ಲಿ ಕೆಲಸ ಮಾಡುತ್ತಿರುವುದಾಗಿ ತಿಳಿಸಿದರು. ನಂತರ ಮನೆಯ ಹಾದಿ ಹಿಡಿದರು.

ತಾವು ಮನೆಗೆ ಹಿಂದಿರುಗುವುದು ವಿಳಂಬವಾದರೂ ಸಂದಿಗ್ಧ ಪರಿಸ್ಥಿತಿಯಲ್ಲಿ, ಆಗಂತುಕರಾದ ನಮಗೆ ಈ ಆಪದ್ಬಾಂಧವ ಸಹಾಯ ಹಸ್ತ ನೀಡಿ ಒಬ್ಬ ನಿಜವಾದ ಯೋಧನಂತೆ ವರ್ತಿಸಿದ್ದರು. ಸದಾ ನೆನಪಿನಲ್ಲಿ ಹಸಿರಾಗಿರುವುದು ಅವರ ಹೃದಯ ಶ್ರೀಮಂತಿಕೆ.

ಮ. ಶ್ರೀ. ಮುರಳೀಕೃಷ್ಣ
ನಂ. ೧೦೦, ೨ನೇ 'ಎ' ಕ್ರಾಸ್, ಗವಿಪುರಂ ಬಡಾವಣೆ, ಬೆಂಗಳೂರು-೫೬೦ ೦೧೯

## ಅಪ್ಪಾಜಿಯ ಸೀನು

ಅಂದಿನ ದಿನ ನನಗೆ ಇನ್ನೂ ಚೆನ್ನಾಗಿ ನೆನಪಿದೆ. ಮಂಗಳೂರಲ್ಲಿ ಜರುಗಿದ ಅಖಿಲ ಭಾರತ ಅರವತ್ತಾರನೇ ಕನ್ನಡ ಸಾಹಿತ್ಯ ಸಮ್ಮೇಳನದ ಎರಡನೆ ದಿನದ ರಾತ್ರಿ. ಗೀತ-ಸಂಗೀತ-ಕುಂಚ ಕಾರ್ಯಕ್ರಮದ ರಸದೌತಣ ಸಭಿಕರ ಹೃನ್ಮನಗಳನ್ನು




ಸೆಳೆದುಕೊಂಡಿತ್ತು. ಆಗ ನನ್ನನ್ನು ಮಾತ್ರ ನನ್ನ ಹಸಿವು ಹರಿದು ತಿನ್ನುತ್ತಿತ್ತು. ನನ್ನ ಚಡಪಡಿಕೆಯನ್ನು ಶಮನಗೊಳಿಸಲು ಅಪ್ಪಾಜಿಯನ್ನು ಹುಡುಕುತ್ತಿದ್ದೆ. ಸಭೆಯಲ್ಲಿ ಕುಳಿತವರಿಗಿಂತಲೂ ಸುತ್ತುವರೆದು ಆಲಿಸುತ್ತಿದ್ದವರ ಸಂಖ್ಯೆಯೇ ಹೆಚ್ಚಾಗಿತ್ತು! ಈ ಅಭೂತಪೂರ್ವ ಸಂಗೀತಕ್ಕಿಂತ ಭೂತಹೊಕ್ಕ ನನ್ನ ಹೊಟ್ಟೆಗೇನೇ ಮಹತ್ವ ಕೊಡುವ ಸ್ಥಿತಿ ನನ್ನದಾಗಿತ್ತು. ಮಧ್ಯಾಹ್ನದ ಊಟವನ್ನು ತಪ್ಪಿಸಿಕೊಂಡಿದ್ದೇ ಇದಕ್ಕೆ ಕಾರಣ ಇರಬಹುದೇನೋ ? ಪುಸ್ತಕ ಪ್ರದರ್ಶನದಲ್ಲಿಯೇ ಅಮ್ಮ-ನಾನು ಅಪ್ಪಾಜಿಯವರಿಂದ ಕಳಚಿಕೊಂಡಿದ್ದೆವು. ರಾತ್ರಿ ಒಂಭತ್ತುವರೆ ಗಂಟೆಯಾದರೂ ಅಪ್ಪಾಜಿ ಸಿಗಲಿಲ್ಲ. ಕುಳಿತ ಕುರ್ಚಿಯಿಂದ ಮೇಲೆದ್ದು ಹುಡುಕಿದೆ. ಆದರೆ ಅಪ್ಪಾಜಿಯ ಬದಲು ಹಿಂದೆ ಕುಳಿತವರ ಬೈಗುಳಗಳೇ ನನಗೆ ದೊರೆತವು. ಮೊದಲೇ ನಾಲ್ಕೈದು ಬಾರಿ ಬೈಸಿಕೊಂಡ ನಾನು ನಿರಾಶೆಯಿಂದ ಸೋತು ಕೂತಿದ್ದೆ. ಹಸಿವು, ನಿರಾಶೆ ಎರಡೂ ನನ್ನನ್ನು ಮುದ್ದೆಗೊಳಿಸಿದ್ದವು. ಆಗ ನನಗೆ ಎರಡು ಹೆಕ್ಟೋ ಮೀಟರುಗಳಷ್ಟು ಅಂತರದಲ್ಲಿ ಸೀನಿದ ಶಬ್ದ ಕೇಳಿಸಿತು. ''ಹಾಂ ! ಅಪ್ಪಾಜಿ'' ಎಂದು ಚೀರಿ ಅವ್ವನಿಗೆ ಹೇಳಿದೆ. ಗದ್ದಲದಲ್ಲಿಯೇ ನುಸುಳಿ ಸೀನು ಕೇಳಿದತ್ತ ಧಾವಿಸಿ ಅಪ್ಪಾಜಿಯವರನ್ನು ಕಂಡುಹಿಡಿದೆ. ಅಪ್ಪಾಜಿಯವರ ಸೀನು ಯಾವಾಗಲೂ ಒಂದು ವಿಶಿಷ್ಟವೇ ಆಗಿದೆ. ಈಗಲೂ ಅಪ್ಪಾಜಿ ಸೀನಿದಾಗಲೆಲ್ಲ ಈ ನೆನಪು ನನಗೆ ಮರುಕಳಿಸುತ್ತದೆ.

ಕು. ಕವಿತಾ ಕೋರಟಕರ
ಬಿ. ಎ. ಮೊದಲ ವರ್ಷ, ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ, ಬಾಗಲಕೋಟೆ ಜಿಲ್ಲೆ

# ಆ ನೆನಪು !

ಹೌಸ್ ಸರ್ಜನ್ಸಿಯ ಮೊದಲನೇ ದಿನ ಸರ್ಜರಿ ಡಿಪಾರ್ಟ್‌ಮೆಂಟ್‌ನಿಂದ ಆರಂಭಗೊಂಡಿತ್ತು. ಆ ದಿನದ ಡ್ಯೂಟಿ ನನಗೆ ಬಂದಿತ್ತು. ರೇಬಿಸ್ (ಹುಚ್ಚು ನಾಯಿ ಕಡಿತದಿಂದ ಬರುವ ರೋಗ) ವಾರ್ಡ್‌ನಲ್ಲಿ ಒಬ್ಬ ರೋಗಿಯನ್ನು ಬೆಳಿಗ್ಗೆಯೇ ದಾಖಲು ಮಾಡಲಾಗಿತ್ತು. ಅವನ ಕಣ್ಣಿಗೆ ಗ್ಲೂಕೋಸ್ ಬಾಟಲು ಕಾಣದಂತೆ (ನೀರನ್ನು ಕಂಡಕೂಡಲೇ ರೋಗಿ ಭಯ ಬೀಳುವುದರಿಂದ) ಡ್ರಿಪ್ ಹಾಕಿ ಬರಲು ಮತ್ತು ಕೇಸ್ ಶೀಟ್ ಬರೆಯಲು ವಾರ್ಡಿಗೆ ಹೋದೆ.

ಹಾಸಿಗೆಯಲ್ಲಿದ್ದ ರೋಗಿ ಸುಮಾರು ೧೬-೧೭ ವಯಸ್ಸಿನ ಹುಡುಗ. ಹೆಸರು ನಾರಾಯಣ. ಕೈಕಾಲುಗಳಲ್ಲಿದ್ದ ಬೆವರು, ಗಂಟಲಿಂದ ಬರುತ್ತಿದ್ದ ಗೊರಗೊರ ಶಬ್ದ, ಅಶಾಂತಿಯಿಂದ ತಲೆಯಲ್ಲಾಡಿಸುತ್ತಿದ್ದ ರೀತಿ, ಭಯದಿಂದ ನೋಡುತ್ತಿದ್ದ ಕಣ್ಣುಗಳು ಎಲ್ಲವೂ ರೋಗಿ ಸಾವಿನೆಡೆಯಲ್ಲಿದ್ದಾನೆಂದು ಹೇಳುತ್ತಿದ್ದವು. (ರೇಬಿಸ್ ಬಂದ ರೋಗಿಗೆ ಸಾವು ಶತಾಂಶ. ಪ್ರಪಂಚದ ಯಾವ ಮೂಲೆಯಲ್ಲೂ ಬದುಕುಳಿದವರ ನಿದರ್ಶನವೇ ಇಲ್ಲ. ಔಷಧೋಪಚಾರ ರೋಗಿಯನ್ನು ಸಾಧ್ಯವಾದಷ್ಟು ಶಾಂತವಾಗಿರಿಸುವ ಪ್ರಯತ್ನವೇ ಹೊರತು ರೋಗ ಕಡಿಮೆ ಮಾಡುವುದಲ್ಲ). ಸಾಕಷ್ಟು ಸ್ಥಿತಿವಂತ ಮನೆಯ ಈ ಹುಡುಗ ತಂದೆ ತಾಯಿಯ ಏಕೈಕ ಸಂತಾನ. ಹುಟ್ಟಿದ್ದ ಐದು ಮಕ್ಕಳಲ್ಲಿ ನಾಲ್ಕು ಗರ್ಭದಲ್ಲಿಯೇ ತೀರಿಕೊಂಡಿದ್ದವು. ತಾಯಿ ೩ ಬಾರಿ ಸಿಸೇರಿಯನ್ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದರು. ಇವನೊಬ್ಬನೇ ಬದುಕುಳಿದ ಶಿಶುವಾಗಿದ್ದ. ನಾರಾಯಣನಿಗೆ ನಾಯಿಯೆಂದರೆ ಬಲು ಪ್ರೀತಿ. ಬೀದಿ ನಾಯಿಮರಿಗಳನ್ನೆಲ್ಲಾ ಹಿಡಿದು ತರುತ್ತಿದ್ದ. ೨೦ ದಿನಗಳ ಹಿಂದೆ ಇದೇ ರೀತಿ ಒಂದು ಮರಿಯನ್ನು ತಂದಿದ್ದ. ೩-೪ ದಿನ ಚೆನ್ನಾಗಿದ್ದ ಮರಿ ಐದನೇ ದಿನ ಹಾಲು ಹಾಕಲು ಹೋದಾಗ ರೇಗಿ ಕಚ್ಚಿತ್ತು. ಆ ದಿನವೆಲ್ಲಾ ವಿಚಿತ್ರವಾಗಿ ಆಡುತ್ತಲೇ ಮನೆಯ ಇನ್ನೂ ಇಬ್ಬರನ್ನು ಕಚ್ಚಿತು. ಕಚ್ಚುವ ಮರಿಯೆಂದು ರೇಗಿ ಎರಡೇಟು ಹಾಕಿ ಓಡಿಸಿದರು. ಕುನ್ನಿಯೆಂದು ನಿರ್ಲಕ್ಷಿಸಿ ವ್ಯಾಕ್ಸಿನ್ ಒಬ್ಬರೂ ಹಾಕಿಸಿಕೊಂಡಿರಲಿಲ್ಲ. ನಾರಾಯಣ ರೇಬಿಸ್‌ಗೆ ತುತ್ತಾದಾಗಲೇ ಪರಿಸ್ಥಿತಿಯ ತೀವ್ರತೆ ಅರಿವಾದದ್ದು ಈ ಜನಕ್ಕೆ.

ನನ್ನ ಮನಸೆಲ್ಲಾ ಕಲಕಿಹೋದದ್ದು ಅವನ ತಾಯಿಯನ್ನು ನೋಡಿದಾಗ. ದೊಡ್ಡಾಸ್ಪತ್ರೆಗೆ ಮಗನನ್ನು ಕರೆದು ತಂದಿರುವುದರಿಂದ ಬದುಕಿಯೇ ಬದುಕುತ್ತಾನೆ ಎನ್ನುವ ಮುಗ್ಧ ನಂಬಿಕೆಯಲ್ಲಿದ್ದಳು. ತಲೆಯ ಬಳಿ ಕುಳಿತು ನೇವರಿಸುತ್ತಾ ಅವನು ಉಗಿಯುವುದು, ಜೊಲ್ಲು ಸುರಿಸುವುದು ಮಾಡಿದಾಗ ಕೈಯಲ್ಲಿ ಒರೆಸುತ್ತಿದ್ದಳು. ಆ ರೀತಿ ಅವನ ಜೊಲ್ಲನ್ನು ಮುಟ್ಟಬಾರದು, ರೋಗ ಬರುವ ಸಾಧ್ಯತೆಯಿದೆ ಎಂದರೂ ಕೇಳಿರಲಿಲ್ಲ. ತಾಯಿ ತನ್ನ ಪ್ರಾಣ ಒತ್ತೆಯಿಟ್ಟಾದರೂ ಮಕ್ಕಳ ಪ್ರಾಣ ರಕ್ಷಿಸುವಳು ಎಂಬ ಮಾತಿಗೆ ಉದಾಹರಣೆಯಂತಿದ್ದಳು. ಅದೂ ಇವನೊಬ್ಬನೇ ಉಳಿದ ಸಂತಾನವಾದುದರಿಂದ ಆ ತಾಯಿ ಮಗನ ಜೊಲ್ಲು



ವಿಷಕಾರಕ ಎಂದರೆ ನಂಬುವ ಸ್ಥಿತಿಯಲ್ಲಿರಲೇ ಇಲ್ಲ. ಕೊನೆಯುಸಿರು ಎಳೆಯುವವರೆಗೂ ಅವನಿಂದ ಬೇರ್ಪಡಿಸಲಾಗಲಿಲ್ಲ. ಕೊನೆಯ ಹಂತದಲ್ಲಿ ರೋಗ ಉಲ್ಬಣಿಸಿ ಅಶಾಂತತೆಯಿಂದ ಹೊರಳಾಡುತ್ತಿದ್ದ ನಾರಾಯಣನ ತಲೆಯನ್ನು ತೊಡೆಯ ಮೇಲಿರಿಸಿಕೊಂಡು ಬದುಕಿಸಿ ಕೊಡಿ ಬದುಕಿಸಿ ಕೊಡಿ ಎಂದು ಎಲ್ಲಾ ದೇವರುಗಳನ್ನೂ, ಅಲ್ಲಿ ಸುಳಿದಾಡಿದ ವೈದ್ಯರುಗಳನ್ನು, ನರ್ಸ್‌ಗಳನ್ನು ಗೋಗರೆದು ಬೇಡುತ್ತಿದ್ದಳು. ಮೃತ್ಯುವಾಗಿ ಬಂದ ನಾಯಿಮರಿಯನ್ನು ಬೈದದ್ದು ಎಷ್ಟೋ ? ಅದೊಂದು ಹೃದಯ ವಿದ್ರಾವಕ ದೃಶ್ಯವಾಗಿತ್ತು. ಸಾವಿನ ದವಡೆಯಲ್ಲಿದ್ದ ಮಗನನ್ನು ಅವುಚಿ ಹಿಡಿದು ಜೀವದಾನ ಬೇಡಿದ ತಾಯಿ, ಅವಳ ಮುಂದೆ ನಿಸ್ಸಹಾಯಕರಾಗಿ ಕೈಚೆಲ್ಲಿ ನಿಂತ ನಾವು ವೈದ್ಯರುಗಳು, ಎಲ್ಲವೂ ನನ್ನ ಮನದಲ್ಲಿಂದಿಗೂ ಹಸುರಾಗಿವೆ. ಬೀದಿ ನಾಯಿಮರಿಗಳು ಆಗಾಗ್ಗೆ ಈ ನಾರಾಯಣನನ್ನು ನೆನಪಿಸುತ್ತಿರುತ್ತವೆ.

ಡಾ॥ ಶೈಲಜಾ, ಕೆ. ಆರ್
ಇ.ಎನ್.ಟಿ. ಸ್ಪೆಷಲಿಸ್ಟ್, ೩ನೇ ಮುಖ್ಯರಸ್ತೆ, ಕೆ. ಆರ್. ಎಕ್ಸ್‌ಟೆನ್ಷನ್, ತಿಪಟೂರು - ೫೭೨ ೨೦೨

# ಆ ಒಂದು ರಾತ್ರಿ

ಅದು ಇಂಥದೇ ಒಂದು ಡಿಸೆಂಬರ್ ರಾತ್ರಿ. ಮೈಹಿಂಡುವ ಛಳಿ. ನಾವು ಸುಮಾರು ಹನ್ನೊಂದು ಜನರಿದ್ದೆವು. ಕುಶಾಲನಗರದ ಸುತ್ತಮುತ್ತ ಹತ್ತು ದಿನಗಳ ಆರೋಗ್ಯಕ್ಕೆ ಸಂಬಂಧಪಟ್ಟ ಸರ್ವೆ ಮುಗಿಸಿ ಹೆಚ್. ಡಿ. ಕೋಟೆಗೆ ಹೊರಟಿದ್ದೆವು. ರಾತ್ರಿ ಹನ್ನೊಂದೂವರೆಯಿರಬಹುದು, ಟೆಂಪೋ ಟ್ರಾಕ್ಸ್ ಬಿರುಸಾಗಿ ಸಾಗಿತ್ತು. ನಾನು ಡ್ರೈವರ್ ಪಕ್ಕ, ನನ್ನ ಪಕ್ಕ ಕನ್ನಡ ಬಾರದ ಚೆನ್ನೈನ



ಒಬ್ಬ ಸೂಪರ್‌ವೈಸರ್. ಎಲ್ಲರ ಬಾಯಲ್ಲೂ ಅಂತಾಕ್ಷರಿ. ಖುಷಿಯೋ ಖುಷಿ. ಕತ್ತಲು ಸೀಳಿಕೊಂಡು ಹೊರಟಿದ್ದ ಜೀಪಿನ ಬೆಳಕಿಗೆ, ದೂರದಲ್ಲಿ ಯಾರೋ ಒಂದಷ್ಟು ಜನ ರಸ್ತೆ ಮಧ್ಯೆ ನಿಂತಿದ್ದು ಕಾಣಿಸಿತು. '' ಮೆಲ್ಲಗೋಗಿ ಯಾರೋ ಏನೋ! ಅಡ್ಡ ನಿಂತಿದ್ದಾರೆ'' ಎಂದೆ ಡ್ರೈವರ್‌ಗೆ. ''ಅಯ್ಯೋ ಬನ್ನಿ ಸಾರ್ ಇದು ಇದ್ದದ್ದೆ ದಿನಾಲು'' ಅಂದ ಅವನು ವೇಗದಲ್ಲೇ ಸಾಗಿ ಅವರು ಹತ್ತಿರಾದಂತೆಲ್ಲ ವೇಗ ತಗ್ಗಿಸಿದ. ಅವರು ಒಂದೆಂಟತ್ತು ಜನರಿದ್ದರು. ಚೂರೂ ಕದಲಲಿಲ್ಲ. ಗಾಡಿ ಗಕ್ಕನೆ ನಿಂತಿತು. ಅವರೆಲ್ಲಾ ನಮ್ಮ ಸುತ್ತಲೂ ಘೇರಾಯಿಸಿದರು. ನಮಗೆ ಒಳಗೊಳಗೆ ಛಳಿ, ಭಯಂಕರ ಭಯ ಮತ್ತು ಎಲ್ಲಿಲ್ಲದ ಕುತೂಹಲ. ಎಲ್ಲಕ್ಕಿಂತ ಹೆಚ್ಚಾಗಿ ಅವರೆಲ್ಲರ ಕೈಯಲ್ಲಿದ್ದ ದಪ್ಪ ದಪ್ಪ ಕಲ್ಲು ಕಂಡು ನಮ್ಮಗಳ ಜಂಘಾಬಲವೆಲ್ಲ ಕುಸಿದಿತ್ತು. ವಿಚಾರಿಸಿದಾಗ ಊರಿನ ಒಬ್ಬ ವಯಸ್ಸಾದ ಹೆಂಗಸು ವಿಷ ಕುಡಿದಿರುವುದಾಗಿಯೂ, ಆಕೆಯನ್ನು ಹೆಚ್. ಡಿ. ಕೋಟೆಗೆ ಸಾಗಿಸಲು ಸಹಾಯ ಮಾಡಬೇಕಾಗಿಯೂ ಕೇಳಿದರು. ಡ್ರೈವರ್ ಕಡ್ಡಿ ಮುರಿದಂತೆ 'ಆಗುವುದಿಲ್ಲ, ಏನೀಗ' ಎಂದ ಗಡುಸಾಗಿ. ಅಲ್ಲಿ ನಮಗೇ ಜಾಗವಿಲ್ಲದೇ ಒತ್ತರಿಸಿಕೊಂಡು ಕುಳಿತಿದ್ದೆವು. ಇನ್ನು ಅವರಿಗೆಲ್ಲಿ, 'ಆಗುವುದಿಲ್ಲ' ಎಂದ ನಮ್ಮ ಸೂಪರ್‌ವೈಸರ್. ನಾವು ಮಾತ್ರ ಸುಮ್ಮನೆ ಪಿಳಿ ಪಿಳಿ ಕಣ್ಣು ಬಿಡುತ್ತಾ ಕುಳಿತಿದ್ದೆವು. ''ಹಾಗಾದರೆ, ಅದ್ಯಾಗೋದೆರೋ ಹೋಗಿ ನೋಡುಮ'' ಅಂತೇಳಿ ಕೈಲಿರೋ ಕಲ್ಲು ಬಿಗಿಮಾಡಿ ನಿಂತರು. ನಮಗೆ ದಿಕ್ಕೇ ತೋಚಲಿಲ್ಲ. ಊರ ಬಾಗಿಲಲ್ಲಿ ಯಾರೋ ಗೋಳಿಡುತ್ತಿದ್ದರು. ಮತ್ತಷ್ಟು ಜನ ಸೇರಿದರು. ಹಾಗೂ ಹೀಗೂ ಯೋಚಿಸಿ ನಾವು ಒಬ್ಬರ ಮೇಲೊಬ್ಬರು ಕುಳಿತು ಆ ಅಜ್ಜಿ ಮತ್ತು ಮಗನಿಗೆ ಸೀಟು ಬಿಟ್ಟುಕೊಟ್ಟೆವು. ಹೆಣ ಹೊತ್ತಂತೆ ಹೊತ್ತು ತಂದು ಜೀಪಿನಲ್ಲಿ ಕೂರಿಸಿದರು. ಆಕೆಯ ಮೈಯೆಲ್ಲಾ ನೀಲಿ ಬಣ್ಣಕ್ಕೆ ತಿರುಗಿ ಎಂಥದೋ ಕೆಟ್ಟ ವಾಸನೆ ಬರುತ್ತಿತ್ತು. ಮಗ 'ಯಾಕವ್ವೋ ಹೀಗ್ಮಾಡ್ಬುಟ್ಟೆ! ನಮ್ಮವ್ವ ಕಣ್ರಪ್ಪ, ಏನೋ ಒಸಿ ಕಿತ್ತಾಟ ಆಯ್ತು, ಅಷ್ಟಕ್ಕೆ ಇಂಗ್ ಮಾಡ್ಕಬುಟ್ಟವ್ಳೆ' ಅಂತ ಗೋಳಿಡುತ್ತಿದ್ದ. ನಮ್ಮಲ್ಲಿ ಮಾತೇ ಇರಲಿಲ್ಲ. ಆಸ್ಪತ್ರೆಗೆ ಬಿಟ್ಟು ಮಾರನೆ ಬೆಳಿಗ್ಗೆ ಡ್ಯೂಟಿಗೋದಾಗ ಸುದ್ದಿ ಬಂತು, 'ಆಕೆ ಹೋಗಿಬಿಟ್ಲು'.

ಬದಲಾವಣೆ ಎಷ್ಟೇ ಆದರೂ, ಕಾಲಕ್ಕೆ ಸರಿಯಾಗಿ ಸೌಲಭ್ಯಗಳು ದೊರೆಯದಿದ್ದಾಗ ಅದರ ಹಿಂದಿನ ಶ್ರಮವೆಲ್ಲ ವ್ಯರ್ಥವೆನಿಸುತ್ತದೆ.

ಆ ಒಂದು ಘಟನೆ ನನ್ನಲ್ಲಿನ್ನೂ ನೆನ್ನೆ ಕಂಡಂತಿದೆ.

ರವಿಕುಮಾರ್ ಅಜ್ಜೀಪುರ
ನಂ. ೧೧೪೩, ೪ನೇ 'ಬಿ' ಮೇನ್, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು-೪೦

# ಸಂಸ್ಕೃತಿಯ ಅಧ್ಯಯನ: ಕೆಲವು ಪ್ರತಿಕ್ರಿಯೆಗಳು

■

**ಡಾ॥ ಎಚ್. ಎಸ್. ರಾಘವೇಂದ್ರ ರಾವ್**

**ನಾ**ನು ಮುಖ್ಯವಾಗಿ ಸಾಹಿತ್ಯದ ವಿದ್ಯಾರ್ಥಿ. ಸಂಸ್ಕೃತಿಯ ಅಧ್ಯಯನದಲ್ಲಿ ನನಗಿರುವ ಆಸಕ್ತಿಯು ಆನುಷಂಗಿಕವಾದುದು. ಆದರೆ ಕಳೆದ ಮೂವತ್ತು ವರ್ಷಗಳಲ್ಲಿ, ನನ್ನ ಕಾರ್ಯಕ್ಷೇತ್ರವಾದ ಸಾಹಿತ್ಯ ವಿಮರ್ಶೆಯಲ್ಲಿ ನಡೆದಿರುವ ಹಲವು ಬದಲಾವಣೆಗಳು, ನನ್ನಂತಹ ಅನೇಕರಿಗೆ ಸಂಸ್ಕೃತಿಯನ್ನು ಕುರಿತ ಚಿಂತನೆಯನ್ನು ಅನಿವಾರ್ಯವಾಗಿಸಿವೆ. ಈಚೆಗೆ ಒಂದು ಸಮುದಾಯದ ಸಂಸ್ಕೃತಿಯನ್ನು, ಅದರ ಚಲನಶೀಲ ನೆಲೆಗಳಲ್ಲಿ ಅಭ್ಯಾಸ ಮಾಡುವ ಒಟ್ಟು ಪ್ರಕ್ರಿಯೆಯ ಭಾಗವಾಗಿ ಮಾತ್ರ, ಸಾಹಿತ್ಯದ ಅಧ್ಯಯನವನ್ನು ಪರಿಭಾವಿಸಲಾಗುತ್ತಿದೆ. ಇದು ಅನೇಕರಲ್ಲಿ ಸಾಹಿತ್ಯದ ''ಅನನ್ಯತೆ'' ಹಾಗೂ ''ಕಲಾತ್ಮಕತೆ''ಗೆ ಉಂಟಾಗಬಹುದಾದ ''ಅಪಾಯವು'' ಆತಂಕಗಳನ್ನು ಹುಟ್ಟಿಸಿದೆ. ಸಾಹಿತ್ಯದಲ್ಲಿ ಕಲಾತ್ಮಕತೆಯ ಸ್ವರೂಪ ಹಾಗೂ ಆಕೃತಿಗೆ ಸಂಬಂಧಪಟ್ಟ ತೀರ್ಮಾನಗಳೂ ಸಂಸ್ಕೃತಿ ನಿರ್ದೇಶಿತವೇ ಆಗಿರುತ್ತವೆ. ಆದ್ದರಿಂದ ಸಾಹಿತ್ಯದ ರೂಪನಿಷ್ಠ ಅಧ್ಯಯನದ ಆಶಯ, ವಿಧಾನ ಮತ್ತು ಪರಿಕರಗಳಲ್ಲಿ, ಈ ಸಾಂಸ್ಕೃತಿಕ ಅಗತ್ಯಗಳಿಗೆ ಅನುಗುಣವಾದ ''ಮರುಹೊಂದಾಣಿಕೆ'' ಮಾಡಿಕೊಳ್ಳುವುದು ನಮ್ಮ ಇಂದಿನ ಅನಿವಾರ್ಯಗಳಲ್ಲಿ ಒಂದು.

ಸಾಹಿತ್ಯದಲ್ಲಿ, ಸಮುದಾಯದ ಬಹುಮುಖೀ ಪ್ರತಿನಿಧೀಕರಣಕ್ಕೆ, ಹಾಗೂ ಶೋಷಿತನೆಲೆಗಳ ಪರವಾದ ವಾದಮಂಡನೆಗೆ ಒತ್ತು ನೀಡಿದ ದಲಿತ ಬಂಡಾಯ ಚಳುವಳಿಯ ಆಶಯಗಳಿಗೆ ಪರ್ಯಾಯವೆಂದು ಈ ಸಂಸ್ಕೃತಿನಿಷ್ಠ ಅಧ್ಯಯನವನ್ನು ನೋಡಬೇಕೋ ಅಥವಾ ಇದು ಅಂಥ ಕಾಳಜಿಗಳ ತರ್ಕಬದ್ಧ ಮುಂದುವರಿಕೆಯೋ ಎಂಬ ಅಂಶವು ನಮ್ಮ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ. ಸಮುದಾಯದ ಸಂಸ್ಕೃತಿಯ ಮೇಲೆ ಇರುವ ವರ್ತಮಾನದ ಒತ್ತಡಗಳನ್ನು ಹಿನ್ನೆಲೆಗೆ ಸರಿಸಿ, ಅದರ ಏಕಮುಖಿಯೋ ಬಹುಮುಖಿಯೋ ಆದ ಭೂತಕಾಲದ ನೆಲೆಗಳನ್ನು ವೈಭವೀಕರಿಸುವ ಪ್ರಯತ್ನವೂ ಅಪಾಯಕಾರಿಯೆಂದೇ ತೋರುತ್ತದೆ.

ವಸ್ತುನಿಷ್ಠವೂ ನಿಷ್ಪಕ್ಷಪಾತವೂ ಆದ ಅಧ್ಯಯನವು ಸಾಧ್ಯವೆಂಬ ಭ್ರಮೆಗೆ ವಿದಾಯ ಹೇಳದೆ, ಸಂಸ್ಕೃತಿಯನ್ನು ಕುರಿತ ಅಧ್ಯಯನಗಳನ್ನು ಗ್ರಹಿಸಲು ಸಾಧ್ಯವಿಲ್ಲ. ನಾವು ಈಗ ಮಾಡುತ್ತಿರುವ ಕೆಲಸಗಳೂ ಸೇರಿದಂತೆ ಪ್ರತಿಯೊಂದು ಪ್ರಯತ್ನವೂ ನಿರ್ದಿಷ್ಟವಾದ ಹಿನ್ನೆಲೆಯಲ್ಲಿ, ಖಚಿತವಾದ ಧೋರಣೆಗಳೊಂದಿಗೆ ರೂಪಿತವಾಗಿರುತ್ತದೆ. ತಿಳಿದೋ ತಿಳಿಯದೆಯೋ ಯಾವುದೋ ಒಂದು ವ್ಯೂಹತಂತ್ರದ ಭಾಗವಾಗಿರುತ್ತದೆ. ಆದ್ದರಿಂದಲೇ ಅಧ್ಯಯನಕಾರರ ಪ್ರಾಮಾಣಿಕತೆ, ಪಾಂಡಿತ್ಯಗಳ ಬಗ್ಗೆ ಗೌರವವನ್ನಿಟ್ಟುಕೊಂಡೂ ಅವರ ಕೆಲಸವನ್ನು ವಿಮರ್ಶೆಗೆ ಒಳಪಡಿಸಲು ಸಾಧ್ಯ. ಧಾರ್ಮಿಕ ಮೂಲಭೂತವಾದ, ನಾಸ್ತಿಕ ಸುಧಾರಣಾವಾದ, ಸಮುದಾಯದ ಜೀವನ ಕ್ರಮವನ್ನು ನಿರಾಕರಿಸದ ಅವೈದಿಕ ಅನುಭಾವ, ಈಗ ಎಲ್ಲ ಕಡೆಯೂ ಏಟು ತಿನ್ನುತ್ತಿರುವ ರ್‍ಯಾಶನಲಿಸಂ ಮಾನವತಾವಾದಗಳ ಜೋಡಿ ಮುಂತಾದ ವಿರೋಧೀ ಧಾರೆಗಳ ನಡುವಿನ ವಾಗ್ವಾದಕ್ಕೆ ಭೂಮಿಕೆಯನ್ನು ದೊರಕಿಸಲೆಂದೇ ಸಂಸ್ಕೃತಿದ್ರವ್ಯದ ತಯಾರಿಕೆ ಮತ್ತು ಬಳಕೆಗಳು ನಡೆಯುತ್ತಿರುವುದು ಇಂದಿನ ಸನ್ನಿವೇಶದ ವಿಶಿಷ್ಟತೆ. ನಮ್ಮ ಅಧ್ಯಯನಗಳು ''ಆಕ್ಟಿವಿಸ್ಟ್'' ಆಗಬೇಕೋ ಅಥವಾ ಕೇವಲ ''ಅಕಡೆಮಿಕ್'' ಆಗಬೇಕೋ ಎನ್ನುವುದು ನಾವು ಎದುರಿಸುತ್ತಿರುವ ಇನ್ನೊಂದು ಬಿಕ್ಕಟ್ಟು. ಕೇವಲ ಅಕಡೆಮಿಕ್ ಆಗಿ ಹಲ್ಲು ಉಗುರುಗಳನ್ನು ಕಳೆದುಕೊಂಡ ಅಧ್ಯಯನವು ಪ್ರತಿಷ್ಠಿತಶಕ್ತಿಗಳ ''ಮುದ್ದುಮಗು'' ಆಗಿರುತ್ತದೆ. ಹಾಗೆಂದು ಮಾಧ್ಯಮಗಳಲ್ಲಿ ಮಾತ್ರ ಆಕ್ಟಿವಿಸ್ಟ್ ಆಗಿರುವ ಪ್ರತಿಭಟನೆಯ ನೆಲೆಗಳು ನಮ್ಮನ್ನು ಎಲ್ಲಿಗೂ ಕರೆದೊಯ್ಯುವುದಿಲ್ಲ. ''ರಾಜ್ಯವ್ಯವಸ್ಥೆ''ಯ ಅಂಗಗಳೇ ಆದ ವಿಶ್ವವಿದ್ಯಾಲಯಗಳಲ್ಲಿ ನಡೆದಿರುವ ಅಧ್ಯಯನಕ್ಕೆ ಸಮಾನಾಂತರವಾಗಿಯೇ ನಡೆದುಬಂದಿರುವ ಭಿನ್ನಮತೀಯ ವಿದ್ವಾಂಸರ ಧ್ವನಿಗಳು, ಈಚೆಗೆ ವಿಶ್ವವಿದ್ಯಾಲಯಗಳ ಒಳಗೆ ಜಾಗ ಪಡೆದಿರುವ ಹೊಸ ಪೀಳಿಗೆಯ ವಿದ್ವಾಂಸರ ಮನ್ನಣೆಯನ್ನು ಗಳಿಸಿರುವುದು ಇಂದಿನ ವಿಶಿಷ್ಟ ವಾಸ್ತವ. ''ಜಾನಪದ ಅಧ್ಯಯನ'', ''ಗಿರಿಜನ ಅಧ್ಯಯನ'' ಮತ್ತು ''ಸ್ತ್ರೀವಾದೀ ಚಿಂತನೆ''ಗಳ ವಕ್ತಾರರು ವಿಶ್ವವಿದ್ಯಾಲಯಗಳ ವೈದಿಕ-ಮಧ್ಯಮವರ್ಗದ ಮುಖಗಳನ್ನು ಬದಿಗೆ ಸರಿಸಿ, ಸಂಶೋಧನೆಗೆ ಹೊಸ ಆಯಾಮಗಳನ್ನು ನೀಡುತ್ತಿದ್ದಾರೆ. ಹೀಗೆ ಬದಿಗೆ ಸರಿಸಲಾದ ''ಚಿಂತನ ವಿಧಾನಗಳು'' ಹಾಗೂ ವ್ಯಕ್ತಿಗಳು, ಆ ವ್ಯವಸ್ಥೆಯ ಹೊರಗೆ ತಮ್ಮದೇ ಆದ ಸಣ್ಣ ಪುಟ್ಟ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಕೆಲಸಮಾಡುತ್ತಿರುವುದು ಇಂದಿನ ವಿಶೇಷ. ಎಂದರೆ, ಕರ್ನಾಟಕದಲ್ಲಂತೂ ನಮ್ಮ ಕಣ್ಣೆದುರಿಗೆ ಅಧ್ಯಯನದ ಪ್ರಧಾನ ಮತ್ತು ಅಧೀನ ಧಾರೆಗಳು ಅದಲುಬದಲಾಗಿಬಿಟ್ಟಿವೆ. ಕೇವಲ ಹತ್ತು ವರ್ಷಗಳ ಹಿಂದೆ ''ಮಂಟೇಸ್ವಾಮಿ ಕಾವ್ಯ''ದ ಅಥವಾ ''ಮಲೆ ಮಾದೇಶ್ವರಕಾವ್ಯ''ದ ಅಥವಾ ''ಸಿರಿ ಪಾಡ್ದನ''ದ ಹೆಸರು ಕೂಡ ಕೇಳದ ಇಂದು ಅವುಗಳನ್ನು ಹಾಡಿಹೊಗಳುತ್ತಿರುವುದು ಈ ಮಾತಿಗೆ ಸಾಕ್ಷಿಯಾಗಿದೆ. ಹೀಗೆ ಮಾಡುತ್ತಿರುವುದು ತಪ್ಪು ಎಂದಲ್ಲ. ಆದರೆ ಬದಲಾಗುತ್ತಿರುವ ಜೀವನ ಸನ್ನಿವೇಶಗಳ ಬಗ್ಗೆ ತಲೆ ಕೆಡಿಸಿಕೊಳ್ಳದ ಯಾವುದೇ ವೈಭವೀಕರಣವು ಕೇವಲ ನಾಸ್ಟಾಲ್ಜಿಯಾಕ್ಕೆ ಕಾರಣವಾಗುತ್ತದೆ. ಸಂಶೋಧನೆಯಲ್ಲಿ ಬಳಸುವ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಅರಗಿಸಿಕೊಳ್ಳದಿರುವುದರ ಫಲವಾದ ಗೊಂದಲ ಹಾಗೂ ಅನನ್ವಯಗಳ ಪರಿಣಾಮವೂ ಸ್ಪಷ್ಟವಾಗಿ ಕಂಡುಬರುತ್ತದೆ. ಸಾಹಿತ್ಯವನ್ನು ಹೊರತುಪಡಿಸಿದ ಮಾನವಿಕ ಅಧ್ಯಯನಗಳಾಗಲಿ, ಸಮಾಜಶಾಸ್ತ್ರೀಯ ಅಧ್ಯಯನಗಳಾಗಲೀ ಕರ್ನಾಟಕದ ಮಟ್ಟಿಗಂತೂ ಬಾಲ್ಯಾವಸ್ಥೆಯನ್ನೂ ತಲುಪಿಲ್ಲ. ಆ ಕ್ಷೇತ್ರಗಳ ವಿದ್ವಾಂಸರು ಕನ್ನಡವನ್ನು ತಮ್ಮ ಬರವಣಿಗೆಯ ಮಾಧ್ಯಮವಾಗಿ ಬಳಸಿಕೊಳ್ಳುವ ಮಾತಂತೂ ದೂರವೇ ಉಳಿಯಿತು. ಶಂ. ಬಾ. ಜೋಶಿ, ಕಪಟರಾಳ ಕೃಷ್ಣ, ದ. ರಾ. ಬೇಂದ್ರೆ, ಮಧುರಚೆನ್ನ ಮುಂತಾದವರ ಆಲೋಚನೆಗಳು ಕನ್ನಡದ ಗೋಡೆಗಳನ್ನು ದಾಟದೆ, ಇಲ್ಲಿಯೇ ಸಂಶೋಧನೆ ನಡೆಸುತ್ತಿರುವ ಅನ್ಯ ಶೈಕ್ಷಣಿಕ ಶಿಸ್ತುಗಳ ವಿದ್ವಾಂಸರ ಗಮನಕ್ಕೂ ಬರದೆ ಆಗಂತುಕವಾಗಿ ಉಳಿದಿವೆ.

> **ಆಧುನಿಕವಾದ ಬದುಕಿನ ಕ್ರಮಗಳನ್ನು ಅನಿವಾರ್ಯವಾಗಿಯೋ ಆಯ್ಕೆಯಿಂದಲೋ ಸ್ವೀಕರಿಸಿದಾಗ ಅದರ ಸಂಗಡವೇ ಸಂಸ್ಕೃತಿ ವಿವರಗಳೂ ಬದಲಾಗುತ್ತವೆ. ಕ್ರಮೇಣ ಸಂಸ್ಕೃತಿಯನ್ನು ಕುರಿತ ದೃಷ್ಟಿಕೋನ ಹಾಗೂ ಆಲೋಚನೆಗಳೂ ಪರಿವರ್ತಿತವಾಗುತ್ತವೆ. ಇದು ನಿಜವಾದಾಗ ನಮ್ಮ ಜೀವನಸಂಬಂಧೀ ಆಯ್ಕೆಗಳೇ ನಿರ್ಣಾಯಕವಾಗುವುದರಲ್ಲಿ ಅನುಮಾನವಿಲ್ಲ.**

ಈ ಶತಮಾನದ ಮೊದಲ ದಶಕಗಳಲ್ಲಿ ಪ್ರಾರಂಭವಾದ, ಸಂಸ್ಕೃತಿಯನ್ನು ಕುರಿತ ಸಂಶೋಧನೆಗಳಲ್ಲಿ ಎರಡು ಖಚಿತವಾದ ದಿಕ್ಕುಗಳನ್ನು ಗುರುತಿಸಬಹುದು. ಮೊದಲನೆಯದು ಚಾರಿತ್ರಿಕವಾದರೆ ಎರಡನೆಯದು ಜಾನಪದೀಯವಾದುದು. ಈ ಎರಡು ಚಲನೆಗಳ ಹಿಂದೆಯೂ ವಸಾಹತುಶಾಹಿಗೆ ತೋರಿಸಿದ ಪ್ರತಿಕ್ರಿಯೆ, ರಾಷ್ಟ್ರೀಯತಾವಾದ, ಕರ್ನಾಟಕದ ಏಕೀಕರಣ ಹೋರಾಟ ಮುಂತಾದ ಸಮಾನ ಪ್ರೇರಣೆಗಳನ್ನು ಗುರುತಿಸಬಹುದು. ಎಷ್ಟೋ ಬಾರಿ ಅದೇ ವಿದ್ವಾಂಸರು ಎರಡೂ ಬಗೆಯ ಹುಡುಕಾಟದಲ್ಲಿ ತೊಡಗಿರುತ್ತಿದ್ದರು. ಸಾಹಿತ್ಯೇತರವಾದ ದಾಖಲೆಗಳು ಅನುಪಲಬ್ಧವೊ, ಅಲಕ್ಷಿತವೋ ಆಗಿದ್ದವು. ಆದ್ದರಿಂದ ಶಾಸನಗಳೋ, ಸಾಹಿತ್ಯಕೃತಿಗಳೋ ಅಧ್ಯಯನದ ಮೂಲ ಆಕರಗಳಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ವಿಭಿನ್ನ ಧರ್ಮಗಳ ಚೌಕಟ್ಟಿನಲ್ಲಿ ರೂಪಿತವಾದ ಜೀವನಕ್ರಮಗಳ ಅಧ್ಯಯನವು ಸಮಾನ ಅಂಶಗಳ ಹುಡುಕಾಟಕ್ಕೆ, ಸಹಜೀವನಕ್ಕೆ, ಒತ್ತುಕೊಟ್ಟಂತೆಯೇ ಅಸಹಿಷ್ಣುತೆಗೂ ಒತ್ತಾಸೆ ನೀಡಿತು. ಅದರಲ್ಲೂ ಬೇರೆ ಬೇರೆ ಜೀವನಕ್ರಮಗಳಿಗೆ ''ಆಗಂತುಕ''ನಾದ ಅಧ್ಯಯನಕಾರನ ''ಸಹಜ'' - ನೈತಿಕ ಆಯ್ಕೆಗಳೂ ಕೂಡ ಸಂಸ್ಕೃತಿವಿವರಗಳ ನಡುವೆ ಮೇಲು- ಕೀಳು ಎಂಬ ಪರಿಗಣನೆಗೆ ಅವಕಾಶ ಮಾಡಿಕೊಟ್ಟವು. ಇಂಗ್ಲಿಷ್ ಸಂಶೋಧಕನಿಗೆ ಅಗ್ರಹಾರ ಎಷ್ಟು ಅಪರಿಚಿತವಾಗಿತ್ತೋ, ಬ್ರಾಹ್ಮಣ ಸಂಶೋಧಕನಿಗೆ ಹೊಲಗೇರಿಯೂ ಅಷ್ಟೇ ಅಪರಿಚಿತವಾಗಿತ್ತು. ಇಬ್ಬರೂ ತೋರಿಸಿದ್ದು ರೊಮ್ಯಾಂಟಿಕ್ ಆದರೂ ಸುಪೀರಿಯರ್ ಆದ ಪ್ರತಿಕ್ರಿಯೆಯನ್ನೇ. ಹಾಗೆ ನೋಡಿದರೆ ಇಂಥ ಜೀವನಕ್ರಮಗಳ ಹೆಚ್ಚು ನಿಕಟವೂ, ಜೀವಂತವೂ ಆದ ಪರಿಚಯವು ನಮಗೆ ಲಭಿಸುತ್ತಿರುವುದು ಜಾನಪದ ಅಧ್ಯಯನಕಾರರ ಬರವಣಿಗೆಗಿಂತ ಹೆಚ್ಚಾಗಿ ಸೃಜನಶೀಲ ಸಾಹಿತ್ಯಕೃತಿಗಳಲ್ಲಿಯೆ. ಅಲ್ಲಿಯೂ ಲೇಖಕರ ನಿಲುವುಗಳು ಖಚಿತವಾಗಿ ಕೆಲಸಮಾಡಿವೆ. ಕಾರಂತರ ಚೋಮ, ಕುವೆಂಪುರವರ ಗುತ್ತಿ-ತಿಮ್ಮಿಯರ ಜಗತ್ತು, ಶ್ರೀರಂಗರ ಕಾದಂಬರಿಯ ಬಿ. ರಾಮ/ಭರಮ, ಅನಂತಮೂರ್ತಿಯವರ 'ಭಾರತೀಪುರ'ದ ಹೆಸರಿಲ್ಲದ ಹೊಲೆಯರು, ದೇವನೂರ ಮಹಾದೇವರ ಕಾದಂಬರಿಗಳ ಸಾಕಮ್ಮ ಮತ್ತು ಸಂಗಡಿಗರ ಲೋಕ ಇವು, ಒಂದೇ ಸಂಸ್ಕೃತಿಯನ್ನು ''ಓದುವ '' ಹಲವು ಬಗೆಗಳಾಗಿ, ಕಾಲದಿಂದ ಕಾಲಕ್ಕೆ ನಮಗೆ ದೊರಕಿವೆ. ಒಂದು ಜೀವನ ಕ್ರಮಕ್ಕೆ ಒಳಗಿನವರಾಗಿ, ಹೊರಗಿನವರಾಗಿ ಅಥವಾ ಏಲಿಯನೇಟೆಡ್ ಆದವರಾಗಿ ಅದನ್ನು ಕಟ್ಟಿಕೊಡುವ ಈ ವಿಧಾನಗಳು ಸಂಸ್ಕೃತಿ ಅಧ್ಯಯನದ

ಮಾದರಿಗಳಿಂದೇ ನಾನು ತಿಳಿಯುತ್ತೇನೆ. ಮಾಸ್ತಿಯವರ ''ಕಾಕನಕೋಟೆ'' ನಾಟಕವು ಇಂಥ ಶೋಧನೆಗಳ ಸ್ವರೂಪ, ಗುಣ ಮತ್ತು ಪರಿಮಿತಿಗಳನ್ನು ತುಂಬಾ ಚೆನ್ನಾಗಿ ಕಾಣಿಸುತ್ತದೆ. ಹಾಗೆಯೇ ಅಕಡೆಮಿಕ್ ಅಧ್ಯಯನಗಳ ಆಚೆ ಇರುವ, ಈ ಶತಮಾನದುದ್ದಕ್ಕೂ ನಡೆದುಕೊಂಡೇ ಬಂದಿರುವ ಜಾನಪದ ಮತ್ತು ಜನಪ್ರಿಯ ಸಂಸ್ಕೃತಿ ಸಂಗತಿಗಳನ್ನೂ ನಾವು ಗಂಭೀರವಾಗಿ ಪರಿಗಣಿಸ ಬೇಕಾಗಿದೆ. ಅವು ಏಕಕಾಲದಲ್ಲಿ ವಿಶ್ಲೇಷಣೆಯ ಪ್ರಕ್ರಿಯೆಗಳೂ ಆಗುತ್ತವೆ. ನಂತರದ ಅಧ್ಯಯನಕಾರರಿಗೆ ಆಕರಗಳೂ ಆಗುತ್ತವೆ. ಉದಾಹರಣೆಗೆ ''ಯಕ್ಷಗಾನ'' ಅಥವಾ ''ಕಂಪನಿ ನಾಟಕ''ಗಳು ಸಂಸ್ಕೃತಿಯ ಬಗ್ಗೆ ತಾವು ಏನನ್ನೋ ಹೇಳುತ್ತಿದ್ದವು. ಅವುಗಳನ್ನು ಬಳಸಿಕೊಂಡು ನಾವು ಇನ್ನೇನನ್ನೋ ಹೇಳಬಹುದು.

ನಮ್ಮ ಸಮುದಾಯದ ಜೀವನಕ್ರಮಗಳಲ್ಲಿ ಸಂಸ್ಕೃತಿಯು ಅಸ್ತಿತ್ವದಲ್ಲಿದ್ದ ಸ್ವರೂಪ ಏನೇ ಇರಲಿ, ಅವುಗಳನ್ನು ಅಧ್ಯಯನ ಮಾಡುವ ಕ್ರಮಗಳಂತೂ ಪಾಶ್ಚಾತ್ಯ ಮಾದರಿಗಳನ್ನು ಅನುಸರಿಸುತ್ತಲೇ ಬಂದಿವೆ. ''ಸಂಸ್ಕೃತಿ ನಿರ್ದಿಷ್ಟ''ವಲ್ಲದ, ''ವ್ಯಾಲ್ಯೂ ನ್ಯೂಟ್ರಲ್'' ಅಲ್ಲದ ಈ ವಿಧಾನಗಳು ವಾಸ್ತವವನ್ನು ''ಮರುರಚನೆ'' ಮಾಡುವ ವಿಧಾನಗಳು ಕುತೂಹಲ ಕಾರಿಯಾದವು. ''ಸಂಸ್ಕೃತಿ'' ಎನ್ನುವ ಪರಿಕಲ್ಪನೆಯು ಮ್ಯಾಥ್ಯೂ ಆರ್ನಾಲ್ಡ್ ಮುಂತಾದವರ ಕಾಲದಿಂದ ಇಂದಿನ ವರೆಗೆ ಪಡೆದಿರುವ ಹೊಸ ಆಯಾಮಗಳು ಸಹಜವಾಗಿಯೇ ಈ ಅಧ್ಯಯನಗಳಲ್ಲಿ ಪ್ರತಿಫಲಿತವಾಗಿವೆ. ಲೇಖಕರ ರಾಜಕೀಯ ನಿಲುವುಗಳು ಕೂಡ ಸಂಸ್ಕೃತಿ ವಿಶ್ಲೇಷಣೆಯ ಮೇಲೆ ಪರಿಣಾಮ ಬೀರಿವೆ. ಡಿ.ವಿ.ಜಿ., ಮಾಸ್ತಿ, ದೇವುಡು ಮುಂತಾದ ಹಿರಿಯ ತಲೆಮಾರಿನ ಲೇಖಕರು, ಸಂಸ್ಕೃತಿಯನ್ನು, ಹಿಂದೂ ಧರ್ಮದ ಅತ್ಯುನ್ನತ ಮೌಲ್ಯಗಳಿಂದ ರೂಪಿತವಾದ, ಮನುಷ್ಯನ ಅಂತರಂಗದ ಸಂಸ್ಕಾರದ ಫಲವೆಂದೇ ತಿಳಿದರು. ಅವರ ಪ್ರಕಾರ ಒಬ್ಬ ಸುಸಂಸ್ಕೃತನಾದ ವ್ಯಕ್ತಿ ಇರಬಹುದೇ ವಿನಾ ಇಡೀ ಸಮುದಾಯದ ಸಮಸ್ತರೂ ಸುಸಂಸ್ಕೃತರಾಗುವುದು ಸಾಧ್ಯವಿಲ್ಲ. ಮಾಸ್ತಿಯವರ ''ವೆಂಕಟಿಗನ ಹೆಂಡತಿ'' ಕಥೆಯ ವೆಂಕಟಿಗನಾಗಲಿ, ಕಾರಂತರ ''ಮೂಕಜ್ಜಿಯ ಕನಸುಗಳು'' ಕಾದಂಬರಿಯಲ್ಲಿ ಬರುವ ಪಮ್ಮ-ದುಗ್ಗಿಯ ರಾಗಲಿ ಈ ಮಾನವಿಕ - ನೈತಿಕ ಅರ್ಥದಲ್ಲಿ ಮಾತ್ರ ಸುಸಂಸ್ಕೃತರು. ಎಂದರೆ ಒಂದು ಸಮುದಾಯದ ನಡಾವಳಿಯ ನಿಯಮಗಳನ್ನು ಅರ್ಥಮಾಡಿಕೊಳ್ಳುವ, ಅನುಸರಿಸುವ ಹಾಗೆಯೇ ಮಾನವೀಯ ಅಗತ್ಯಗಳು ಬಂದಾಗ ಅವನ್ನು ಮುರಿದು ಕಟ್ಟುವ ಕೆಲವು ಜನರ ಹಿರಿತನವನ್ನು ಇಂಥ ಅಧ್ಯಯನಗಳು ಒಪ್ಪಿಕೊಂಡವು. ಮೊದಮೊದಲು ಪಾಶ್ಚಾತ್ಯರಿಂದ ಕಲಿತ ಪಾಠಗಳನ್ನು ಆಧುನಿಕ ಮೌಲ್ಯಗಳ ಅವರಿಗೇ ಒಪ್ಪಿಸಿ, ಅವರ ಮೆಚ್ಚಿಗೆ

ಪಡೆಯುವ ವಿಧೇಯ ವಿದ್ಯಾರ್ಥಿಗಳಂತೆ ಮಾಡಲಾದ ಈ ಕೆಲಸವು ಬಹುಕಾಲ ಅದೇ ನಿಟ್ಟಿನಲ್ಲಿ ನಡೆಯಲಿಲ್ಲ. ಒಂದು ಕಡೆ, ಪಾಶ್ಚಾತ್ಯವಾದರೂ ಬ್ರಿಟಿಷ್ ಅಲ್ಲದ ಎಡಪಂಥೀಯ-ಸುಧಾರಣಾವಾದೀ ಧೋರಣೆಗಳು ಸಂಸ್ಕೃತಿಯ ಅಧ್ಯಯನದಲ್ಲಿ ಆಸಕ್ತಿ ತೋರಿಸಿದವು. ಇನ್ನೊಂದು ಕಡೆ ರಾಷ್ಟ್ರೀಯತಾವಾದವು ಕ್ರಮೇಣ ಪೆಡಸಾಗಿ, ಸಂಪ್ರದಾಯವಾದವಾಗಿ ಪರಿವರ್ತನೆ ಪಡೆಯಿತು. ಇವುಗಳಲ್ಲಿ ಮೊದಲನೆಯದು ಪ್ರಾಚೀನವಾದುದನ್ನೆಲ್ಲ ಗ್ರಾಮೀಣವಾದುದನ್ನೆಲ್ಲ ಮೂಢನಂಬಿಕೆ ಅವೈಚಾರಿಕ ಎಂದು ನಿರಾಕರಿಸ ಹೊರಟಿತು. ಮತ್ತೊಂದು ನೆಲೆಯು 'ಮೂಲ'ಗಳಿಗೆ ಹಿಂದಿರುಗುವ ಹಂಬಲದಲ್ಲಿ ಹೆಚ್ಚು ಹೆಚ್ಚು ಆಕ್ರಮಣಶೀಲವಾಯಿತು. ಅಲ್ಲಿಯ ಸಮರೂಪ ಧಾರಣೆಯ ನೆಪದಲ್ಲಿ ಮೇಲುವರ್ಗದ ಆಶಯಗಳ ವೈಭವೀಕರಣ ನಡೆಯಿತು. ಈ ಮಾತಿಗೆ ನಿದರ್ಶನವಾಗಿ ಮಾಸ್ತಿಯವರ 'ಅಂತರಗಂಗೆ' ಮತ್ತು 'ಧರ್ಮ ಸಂರಕ್ಷಣೆ' ಎಂಬ ಕೃತಿಗಳನ್ನು ಪರಿಶೀಲಿಸಬಹುದು.

ಇದೆಲ್ಲದರ ಪರಿಣಾಮವಾಗಿ, ಬಹುಸಂಸ್ಕೃತಿನಿಷ್ಠ ಸಮಾಜದ ಜೀವನಕ್ರಮಗಳಲ್ಲಿ ಬೇರುಬಿಡದ ಪ್ರಗತಿಶೀಲತೆ ಮತ್ತು ಆ ಜೀವನಕ್ರಮಗಳಿಗೆ ಪರ್ಯಾಯವಾಗಿ ವೈದಿಕ-ಪಾಶ್ಚಾತ್ಯ ಜೀವನ ವಿಧಾನವನ್ನು ಮುಂದುಮಾಡಿದ ಸಂಪ್ರದಾಯಪರತೆಗಳ ನಡುವೆ ಜನಪದ ಜೀವನಕ್ರಮಗಳು ಕ್ರಮೇಣ ಕರಗಿಹೋದವು. ಅಥವಾ ಕೇವಲ ಹೊರ ಆವರಣಕ್ಕೆ ಸೀಮಿತವಾದ ಆಚರಣೆಯಲ್ಲಿ ಮಾತ್ರ ಉಳಿದುಕೊಂಡವು. ಇಲ್ಲವೇ ಅವು ಮ್ಯೂಸಿಯಂ ಆಂಟಿಕ್‌ಗಳಾಗಿ ಬದಲಾದವು. ಆ ಕಾಲದ ಸಾಂಸ್ಕೃತಿಕ ಅಧ್ಯಯನಗಳಲ್ಲಿಯೂ ಈ ರೀತಿಯ ದ್ವಂದ್ವಗಳನ್ನು ಗುರುತಿಸಬಹುದು.

ಒಂದರ ನಂತರ ಒಂದರಂತೆ, ಮೂಡಿಬಂದ ಭಾರತೀಯ ಪುನರುಜ್ಜೀವನ ಮತ್ತು ಸ್ವಾತಂತ್ರ್ಯ ಚಳುವಳಿಗಳ ಪ್ರಧಾನ ಆಶಯಗಳು ಕರ್ನಾಟಕ ಸಂಸ್ಕೃತಿಯ ಅಧ್ಯಯನದ ಮೇಲೂ ಪರಿಣಾಮ ಬೀರಿದವೆನ್ನುವುದರಲ್ಲಿ ಅನುಮಾನವಿಲ್ಲ. ಆಗ ದಕ್ಷಿಣ ಮಹಾರಾಷ್ಟ್ರವೆನಿಸಿದ್ದ ಇಂದಿನ ಉತ್ತರ ಕರ್ನಾಟಕದಲ್ಲಿ ತಿಲಕರ ವಿಚಾರಗಳು ಮೇಲುಗೈ ಪಡೆದರೆ, ಡಿ.ವಿ.ಜಿ.ಯವರೂ ಸೇರಿದಂತೆ ಹಳೆಯ ಮೈಸೂರಿನ ಹಲವರು ''ರಾಜಭಕ್ತಿ''ಯ ಆವರಣದಲ್ಲಿಯೇ ಗೋಖಲೆಯವರ ಮಂದಗಾಮೀ ಚಿಂತನಗಳಿಂದ ಪ್ರಭಾವಿತರಾದರು. ವಿವೇಕಾನಂದ ಮತ್ತು ಗಾಂಧೀಜಿಯವರ ವಿಚಾರಗಳನ್ನು ಬಹುಮಟ್ಟಿಗೆ ಬ್ರಾಹ್ಮಣೀಕರಣಗೊಳಿಸಿ ಸ್ವೀಕರಿಸಲಾಯಿತು. ಹಲವು ಸಂಗತಿಗಳಲ್ಲಿ ನೂರಕ್ಕೆ ನೂರರಷ್ಟು ಸುಧಾರಣಾವಾದೀ ಧೋರಣೆಯನ್ನು ತಳೆದ ಕುವೆಂಪುರವರು ಕೂಡ ಏಕಘನಾಕಾರದ, ಆಧ್ಯಾತ್ಮೀಕರಣಗೊಂಡ ವಿಶ್ವವ್ಯಾಪೀ ಸಂಸ್ಕೃತಿಯೊಂದರ ಅಗತ್ಯವನ್ನು ಪ್ರತಿಪಾದಿಸುತ್ತಾರೆ. ತಮ್ಮ ಕಾದಂಬರಿಗಳಲ್ಲಿ ಚಿತ್ರಿತವಾದ ಸಮುದಾಯಗಳ ಅವಸಾನದ ಪಥವನ್ನು ಊಹಿಸಿದ ಅವರು ವಿಶ್ವಮಾನವನ ಪರಿಕಲ್ಪನೆಯ ಕಡೆಗೆ ಚಲಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ.

ಆದರೆ ಕರ್ನಾಟಕ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಮತ್ತೊಂದು ಪ್ರಧಾನ ಧಾರೆಯು ಈ ಶತಮಾನದ ಮೊದಲ ದಶಕಗಳಿಂದಲೂ ಬಹಳ ಮ್ಯೂಟೆಡ್ ಆಗಿಯಾದರೂ ಅಸ್ತಿತ್ವದಲ್ಲಿದೆ. ಅದು ಕಪಟರಾಳ ಕೃಷ್ಣರಾವ್, ಶಂ. ಬಾ. ಜೋಶಿ, ಕೆ.ವಿ. ಸುಬ್ಬಣ್ಣ, ಕೆ.ವಿ. ನಾರಾಯಣ, ಜಿ. ರಾಜಶೇಖರ, ಡಿ.ಆರ್.ನಾಗರಾಜ್, ಬಸವರಾಜ ಕಲ್ಗುಡಿ, ರಹಮತ್ ತರೀಕೆರೆ ಮುಂತಾದ ಲೇಖಕರು ಬೇರೆ ಬೇರೆ ಕಾಲ ದೇಶ ಸಂದರ್ಭಗಳಲ್ಲಿ ಮಂಡಿಸುತ್ತಾ ಬಂದಿರುವ ಚಿಂತನ ಪರಂಪರೆ. ಇವರೆಲ್ಲರನ್ನೂ ಒಟ್ಟಿಗೆ ಹಿಡಿದಿಡುವ ಸಂಗತಿಯೆಂದರೆ ಕರ್ನಾಟಕ ಸಂಸ್ಕೃತಿಯ ಬಹುಮುಖಿಯೂ ಅ-ವೈದಿಕವೂ ಆದ ನೆಲೆಗಳ ಬಗ್ಗೆ ಇವರು ತೋರಿಸಿರುವ ಆಸಕ್ತಿ ಮತ್ತು ಅವುಗಳನ್ನು ಕಾಪಾಡಿಕೊಳ್ಳಬೇಕು ಎಂಬ ಆರೋಗ್ಯಕರ ಧೋರಣೆ. ಇವರಲ್ಲಿ ಯಾರೂ ಹುಸಿ ಪ್ರಗತಿಶೀಲವಾದ ಧೋರಣೆಗಳಿಗೆ ತಮ್ಮನ್ನು ತೆತ್ತುಕೊಂಡು ಸಾಂಸ್ಕೃತಿಕ ನಿರ್ವಾತದ ಪರವಾಗಿ ವಾದಿಸುವವರಲ್ಲ. ಇವರಿಗೆ ಕರ್ನಾಟಕ ಸಂಸ್ಕೃತಿಯ ಪುನಾರಚನೆಯೆನ್ನುವುದು ವರ್ತಮಾನಕ್ಕೆ ಅತ್ಯಂತ ಪ್ರಸ್ತುತವಾದ ಸಂಗತಿಯೂ ಹೌದು. ಅಧ್ಯಯನದ ಒತ್ತು ರಾಜಕೇಂದ್ರಿತ ನೆಲೆಗಳಿಂದ ಸಮುದಾಯ ಕೇಂದ್ರಿತ ನೆಲೆಗಳ ಕಡೆಗೆ ಚಲಿಸಿದಾಗ ಹೊಸ ತಿಳಿವಳಿಕೆ ಮೂಡುತ್ತದೆ. ಆದ್ದರಿಂದಲೇ ಶಂ. ಬಾ. ಅವರ ಸೂರ್ಯ ಮತ್ತು ಚಂದ್ರ ಸಂಸ್ಕೃತಿಗಳ ಪರಿಕಲ್ಪನೆ, ಜಿ. ಎನ್. ದೇವಿ ಮತ್ತು ಡಿ. ಆರ್. ನಾಗರಾಜ ಅವರು ಮಂಡಿಸಿದ ಸಾಂಸ್ಕೃತಿಕ ವಿಸ್ಮೃತಿಯನ್ನು ಕುರಿತ ಆಲೋಚನೆಗಳು, ಬರಗೂರು ರಾಮಚಂದ್ರಪ್ಪ, ರಹಮತ್ ತರೀಕೆರೆ ಮುಂತಾದವರು ಬಳಸಿರುವ ಉಪ ಸಂಸ್ಕೃತಿ, ಪ್ರತಿಸಂಸ್ಕೃತಿ ಇತ್ಯಾದಿ ಪಾರಿಭಾಷಿಕಗಳ ಸುತ್ತಲೂ ಆಲೋಚನೆಗಳು ನಡೆಯುತ್ತಿವೆ.

ಆದರೆ ಸಮಸ್ಯೆಯಿರುವುದು ಮನುಷ್ಯನ ಸಂಸ್ಕೃತಿಗೂ ಭೌತಿಕ ಜೀವನವಿಧಾನಗಳಿಗೂ ಇರುವ ನಿಕಟವೂ ಅವಲಂಬಿತವೂ ಆದ ಸಂಬಂಧಗಳನ್ನು ಗ್ರಹಿಸದೆ ಇರುವುದರಲ್ಲಿ. ಆಧುನಿಕವಾದ ಬದುಕಿನ ಕ್ರಮಗಳನ್ನು ಅನಿವಾರ್ಯವಾಗಿಯೋ ಆಯ್ಕೆಯಿಂದಲೋ ಸ್ವೀಕರಿಸಿದಾಗ ಅದರ ಸಂಗಡವೇ ಸಂಸ್ಕೃತಿ ವಿವರಗಳೂ ಬದಲಾಗುತ್ತವೆ. ಕ್ರಮೇಣ ಸಂಸ್ಕೃತಿಯನ್ನು ಕುರಿತ ದೃಷ್ಟಿಕೋನ ಹಾಗೂ ಆಲೋಚನೆಗಳೂ ಪರಿವರ್ತಿತವಾಗುತ್ತವೆ. ಇದು ನಿಜವಾದಾಗ ನಮ್ಮ ಜೀವನಸಂಬಂಧೀ ಆಯ್ಕೆಗಳೇ ನಿರ್ಣಾಯಕವಾಗುವುದರಲ್ಲಿ ಅನುಮಾನವಿಲ್ಲ. ಇಂಥ ಸನ್ನಿವೇಶದಲ್ಲಿ ಗಾಂಧೀಜಿಯವರಿಂದ ಪ್ರಣೀತವಾದ ಜೀವನಕ್ರಮವೂ ಸಂಭವನೀಯ ಆಯ್ಕೆಯಾಗಿ ಉಳಿದಿಲ್ಲ. ವ್ಯವಸ್ಥೆಯ ಅತಿರೇಕಗಳಿಗೆ ಅದರೊಳಗಡೆಯೇ ರೂಪಿತವಾಗಬಹುದಾದ ಪ್ರತಿರೋಧಗಳು ಮಾತ್ರ ಪರ್ಯಾಯಗಳನ್ನು ನೀಡಬಹುದು. ಅದು ಯಾವುದಾದರೂ ಇರಲಿ, ಆಧುನಿಕತೆಯ ಸಂಪೂರ್ಣ ನಿರಾಕರಣೆಯಾಗಲಿ, ಎಂದೋ ಇತ್ತೆಂದು ಹೇಳಲಾಗುತ್ತಿರುವ ''ಸ್ವರ್ಣಯುಗ''ದ ಮರುಕಟ್ಟೋಣವಾಗಲಿ ಅಸಂಭವ ಹಾಗೂ ಅನಪೇಕ್ಷಣೀಯ. ವ್ಯಕ್ತಿಯಲ್ಲಾಗಲೀ, ಸಮುದಾಯದಲ್ಲಾಗಲೀ ಆ ಬಗೆಯ ತಿಳಿವಳಿಕೆಯನ್ನು ಬೆಳೆಸುವ ಸಾಮರ್ಥ್ಯವನ್ನು ಧರ್ಮ, ಭಕ್ತಿ ಅನುಭಾವಗಳು ಕಳೆದುಕೊಂಡಿವೆಯೆಂದೇ ತೋರುತ್ತದೆ. ಪರಿಣಾಮವಾಗಿ, ಹೊಸ ಸನ್ನಿವೇಶದಲ್ಲಿ ಒಡಮೂಡಿರುವ ಹೊಸ ನೈತಿಕತೆ ಮತ್ತು ಜೀವನವಿಧಾನಗಳನ್ನು ಗಮನಕ್ಕೆ ತಂದುಕೊಳ್ಳುವ ಸಿದ್ಧಾಂತಗಳು ರೂಪಿತವಾಗಬೇಕಿವೆ. ಕೊನೆಗೂ ಸಂಸ್ಕೃತಿಯ ಅಧ್ಯಯನವು ಹರಿಯುವ ನೀರಿನ ನೆಲೆಗಳನ್ನು ಹಿಡಿಯುವ ಕೆಲಸವೇ ವಿನಾ ಅಲ್ಲಿ ಏನು ಹರಿಯಬೇಕೆಂದು ತೀರ್ಮಾನಿಸುವ ಕೆಲಸ ಅಲ್ಲ.

**ಡಾ|| ಎಚ್. ಎಸ್. ರಾಘವೇಂದ್ರ ರಾವ್**
೭, 'ಶ್ರೀಮಾತಾ', ೧೫ನೇ ಕ್ರಾಸ್, ರಿಂಗ್ ರಸ್ತೆ
೫ನೇ ಫೇಸ್, ಜೆ. ಪಿ. ನಗರ
ಬೆಂಗಳೂರು - ೫೬೦ ೦೭೮

## ಬುಡಮೇಲಾಗಿ ತೆಂಗಿನಮರವೇರಿ!?

ನೇರವಾಗಿ ಮುಗಿಲೆತ್ತರಕ್ಕೆ ಬೆಳೆದು ನಿಲ್ಲುವ ತೆಂಗಿನ ಮರಗಳನ್ನು ಏರುವುದೆಂದರೆ ಸಾಹಸವೇ ಸರಿ! ಅಂಥಹುದರಲ್ಲಿ ತಲೆಕೆಳಗಾಗಿಸಿ ಕಾಲು ಮೇಲಕ್ಕೆ ಮಾಡಿ ಇದೇ ತೆಂಗಿನ ಮರ ಏರು ಎಂದರೆ ಯಾರು ತಾನೆ ಮುಂದೆ ಬಂದಾರು?

ಹೌದು, ಪ್ರಾಣಭಯದಿಂದ ಸ್ತಬ್ಧರಾಗಿಬಿಡುತ್ತಾರೆ. ಆದರೆ ಇದೇನು ಮಹಾ ಎಂದು ತಿಳಿದಿರುವ ಕೊಪ್ಪಳ ಜಿಲ್ಲೆಯ ಯಲಬುರ್ಗಾದ ತರುಣ, ಯಲ್ಲಪ್ಪ ಅಯ್ಯನಗೌಡ್ರ ಎಂತಹ ಎತ್ತರದ ತೆಂಗಿನಮರವನ್ನಾದರೂ ಬುಡ ಮೇಲಾಗಿ ಏರಿ ಮತ್ತೆ ಯಥಾರೀತಿಯಾಗಿ ಇಳಿಯುವ ವಿಚಿತ್ರವಾದ ಸಾಹಸ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದಾರೆ.

ಪ್ರಾಥಮಿಕ ಶಿಕ್ಷಣವನ್ನಷ್ಟೇ ಪಡೆದು ಈಗ ವ್ಯವಸಾಯದಲ್ಲಿಯೇ ಹೆಚ್ಚಿನ ಆಸಕ್ತಿ ಹೊಂದಿರುವ ಈ ಯುವಕ ಸ್ನೇಹಿತರು ತನ್ನನ್ನು ಹೀಗೆ ಏರಲು ಒತ್ತಾಯಿಸಿದಾಗ ನೋಡುಗರಿಗೆ ಅಚ್ಚರಿಯನ್ನುಂಟು ಮಾಡುವ ಇಂಥ ಮೇರು ಸಾಹಸವನ್ನು ತೋರುತ್ತಾರೆ.



ಚಿತ್ರ, ಬರಹ : ಎಮ್. ಎಸ್. ಶೆಟ್ಟರ್
'ವೈಭವ', ಹಳೇ ಬಜಾರ, ಯಲಬುರ್ಗಾ - ೫೮೩ ೨೩೬, ಕೊಪ್ಪಳ ಜಿಲ್ಲೆ

# ಜಾಗತೀಕರಣಗೊಳ್ಳಿ, ಬೆಳೆವಣಿಗೆ ಸಾಧಿಸಿ

## (ಒಂದು ಪ್ರಾಯೋಗಿಕ ಅನ್ವೇಷಣೆ)

ವಿಶ್ವಬ್ಯಾಂಕ್ ಹಾಗೂ ಅಂತಾರಾಷ್ಟ್ರೀಯ ಹಣಕಾಸು ನಿಧಿ (ಐ.ಎಂ.ಎಫ್.) ಸಂಸ್ಥೆಗಳು ಒಂದು ಸುಪ್ರಸಿದ್ಧ ಸಿದ್ಧಾಂತವನ್ನು ಮುಂದಿರಿಸಿವೆ. ಆ ಸಿದ್ಧಾಂತದ ಪ್ರಕಾರ, ಜಾಗತೀಕರಣವು ಅಥವಾ ದೇಶದ ಆರ್ಥಿಕತೆಯನ್ನು ವಿಶ್ವ ಆರ್ಥಿಕತೆಯೊಂದಿಗೆ ಹೆಚ್ಚುಹೆಚ್ಚಾಗಿ ಮೇಳೈಸುವುದು ಯಾವುದೇ ದೇಶದ ಆರ್ಥಿಕೋನ್ನತಿಗೆ ಅತ್ಯಂತ ಸಹಕಾರಿ ಹಾಗೂ ಪ್ರೋತ್ಸಾಹದಾಯಕ. ಐ.ಎಂ.ಎಫ್. ಸಂಸ್ಥೆಯ ಪ್ರಕಾರ,

''ಅಂತರ್ಮುಖಿ ರಕ್ಷಣಾವಾದಿ ದೃಷ್ಟಿಕೋನದ ಆರ್ಥಿಕ ನೀತಿಗಳನ್ನು (೧೯೭೦ ಹಾಗೂ ೧೯೮೦ರ ದಶಕಗಳಲ್ಲಿ ಹೆಚ್ಚಿನ ಆಫ್ರಿಕ ಹಾಗೂ ಲ್ಯಾಟಿನ ಅಮೆರಿಕನ್ ದೇಶಗಳು ಅನುಸರಿಸಿದಂಥ ನೀತಿಗಳನ್ನು) ಹೊಂದಿರುವ ಅಭಿವೃದ್ಧಿಶೀಲ ದೇಶಗಳಲ್ಲಿ ಆರ್ಥಿಕೋನ್ನತಿಯ ದರಗಳು ಅತ್ಯಲ್ಪವಾಗಿದ್ದಲ್ಲಿ ಬಹಿರ್ಮುಖಿ ಆರ್ಥಿಕ ನೀತಿಗಳನ್ನು ಅನುಸರಿಸಿದಂಥ ದೇಶಗಳು (ಪೂರ್ವಏಷ್ಯಾದಲ್ಲಿನಂಥ ದೇಶಗಳು) ಭಾರಿ ಪ್ರಗತಿ ಸಾಧಿಸಿವೆ'' (ಐ.ಎಂ.ಎಫ್. ೨೦೦೦ : ೧೩೨).

ಬಹಿರ್ಮುಖಿ ಆರ್ಥಿಕ ನೀತಿಯು ಬೆಳೆವಣಿಗೆಗೆ ಪ್ರೋತ್ಸಾಹದಾಯಕವಷ್ಟೇ ಅಲ್ಲ, ಬಡತನವನ್ನು ಕಡಿಮೆ ಮಾಡುತ್ತದೆಂದು ಸಾಧಿಸಲಾಗುತ್ತಿದೆ. ಅಂತರ್ಮುಖಿಯಾದ, ತೆರೆದಿಲ್ಲದ ಆರ್ಥಿಕತೆಯು ವಿಶ್ವವಾಣಿಜ್ಯ ವ್ಯವಹಾರಗಳಲ್ಲಿ ತನ್ನ ತುಲನಾತ್ಮಕ ಅನುಕೂಲತೆಗಳನ್ನು ಪೂರ್ಣ ಪ್ರಮಾಣದಲ್ಲಿ ಫಲಕಾರಿಯಾಗಿ ಬಳಸಿಕೊಳ್ಳಲಾರದೆ ಹೋಗುತ್ತದೆ. ಹಾಗಾಗಿ ಅದರ ಬೆಳೆವಣಿಗೆ ಕುಂಠಿತವಾಗುತ್ತದೆ. ಆಮದಾದ ಬದಲಿ-ಭಾಗಗಳಿಂದ ಚಾಲನೆಗೊಳ್ಳುವ ಕೈಗಾರಿಕೆಗಳು ಸಾಮಾನ್ಯವಾಗಿ ಹೆಚ್ಚಿನ ಬಂಡವಾಳ ತೊಡಗಿಸುವುದರಲ್ಲಿ ಆಸಕ್ತವಾಗಿರುತ್ತವೆ, ಅವು ತಮ್ಮ ಉತ್ಪಾದನಾ ಪ್ರಕ್ರಿಯೆಗಳನ್ನು ಹೆಚ್ಚಿನ ಕಾರ್ಮಿಕರಿಗೆ ಉದ್ಯೋಗ ಒದಗಿಸುವಂಥ ಹಾಗೂ ಬಡತನವನ್ನು ಕಡಿಮೆಗೊಳಿಸುವಂಥ ಕೈಗಾರಿಕೆಗಳಿಂದ ವಿಮುಖಗೊಳಿಸುತ್ತವೆ ಎಂದು ಹೇಳಲಾಗುತ್ತದೆ. ಸ್ಪರ್ಧೆ ಇಲ್ಲದಿರುವುದು ದಕ್ಷತಾಹೀನತೆಗೆ ಅವಕಾಶಮಾಡಿಕೊಡುತ್ತದೆ ಹಾಗೂ ಉತ್ಪಾದನಾ ವೆಚ್ಚಗಳನ್ನು ಹೆಚ್ಚಿಸುತ್ತದೆ (ಐ.ಎಂ.ಎಫ್. ೨೦೦೦:೧೩೨). ಇದಕ್ಕೆ ವಿರುದ್ಧವಾಗಿ ಬಹಿರ್ಮುಖಿ ಆರ್ಥಿಕತೆಯು ಅತ್ಯಾಧುನಿಕ ತಂತ್ರಕಲೆಗಳನ್ನು ತಂದುಕೊಡುವುದಲ್ಲದೆ, ಪದಾರ್ಥಗಳ ಹಾಗೂ ಸೇವಾ ಕಾರ್ಯಗಳ ಗುಣಮಟ್ಟಗಳನ್ನು ಸುಧಾರಿಸುತ್ತದೆ ಮತ್ತು ಅವು ಅತ್ಯಲ್ಪ ವೆಚ್ಚದಲ್ಲೇ ದೊರಕುವಂತೆ ಮಾಡುತ್ತದೆ. ಬಹಿರ್ಮುಖಿ ಆರ್ಥಿಕ ನೀತಿಯು ವಿಶ್ವ ಶಾಂತಿ ಸ್ಥಾಪನೆಯಲ್ಲಿ ನಮ್ಮ ಪಾತ್ರವನ್ನು ಹೆಚ್ಚಿಸುವುದರಿಂದ ನಮಗೆ ಹೆಚ್ಚಿನ ರಾಜಕೀಯ ಲಾಭಗಳೂ ದೊರಕುವಂತಾಗುತ್ತದೆ. ಎರಡು ದೇಶಗಳ ನಡುವೆ ವ್ಯಾಪಾರ ಸಂಬಂಧಗಳು ಸುಧಾರಿಸಿದಲ್ಲಿ ಅದರ ಜೊತೆಗೆ ಇತರೆಲ್ಲ ಸಂಬಂಧಗಳೂ ಸುಧಾರಿಸುತ್ತವೆ. ಆದ್ದರಿಂದಲೇ ಭಾರತವೂ ತನ್ನ ಆರ್ಥಿಕತೆಯನ್ನು ಜಾಗತಿಕ ಆರ್ಥಿಕತೆಯೊಂದಿಗೆ ಹೆಚ್ಚು ಹೆಚ್ಚಾಗಿ ಒಂದುಗೂಡಿಸುವತ್ತ ತನ್ನ ನೀತಿಯಲ್ಲಿ ಬದಲಾವಣೆ ತಂದು ತನ್ಮೂಲಕ ಆರ್ಥಿಕ ಏಳಿಗೆ ಸಾಧಿಸುವ ಹಾಗೂ ಬಡತನ ನಿರ್ಮೂಲನ ಮಾಡುವ ನಿರ್ಧಾರ ತಳೆದಿದೆ. ೧೯೯೧ರಿಂದ ಜಾರಿಗೆ ತರಲಾಗುತ್ತಿರುವ ಆರ್ಥಿಕ ಸುಧಾರಣೆಗಳಲ್ಲಿ 'ಜಾಗಿತೀಕರಣ'ವೂ ಒಂದು ಅವಿಭಾಜ್ಯ ಅಂಗವಾಗಿದೆ.

ಆದರೆ ಇದು ವಿವಾದಕ್ಕೂ ಎಡೆ ಮಾಡಿಕೊಟ್ಟಿದೆ. 'ತುಲನಾತ್ಮಕ ಲಾಭ' ಅನ್ನುವುದು ಒಂದು ಜಡ ಪ್ರಕಲ್ಪನೆ. ವಿಕಾಸಶೀಲ ದೇಶಗಳು ಪ್ರಸ್ತುತದ ಪರಿಸ್ಥಿತಿಗಳಲ್ಲಿ ಲಾಭ ತಂದುಕೊಡುವಂತಹ ಬೆಳೆವಣಿಗೆಯ ಕ್ಷೇತ್ರಗಳ ಕಡೆಗೆ ಗಮನ ನೀಡುವ ಬದಲು ಭವಿಷ್ಯತ್ತಿನಲ್ಲಿ ತುಲನಾತ್ಮಕ ಲಾಭ ತಂದುಕೊಡುವಂತಹ ಸಂಭಾವನಾ ಬೆಳವಣಿಗೆಯ ಕ್ಷೇತ್ರಗಳನ್ನು ಗುರುತು ಹಚ್ಚಿ ಅವುಗಳ ಕಡೆಗೆ ಹೆಚ್ಚಿನ ಗಮನ ನೀಡುವುದು ಅತಿ ಮುಖ್ಯ. ಇದಕ್ಕಾಗಿ ಕೊನೆಯ ಪಕ್ಷ ಆಯ್ಕೆ ಆಧಾರದ ಮೇಲಾದರೂ ಆಮದು ಆಧಾರಿತ ಬದಲಿ-ಕೈಗಾರಿಕೆಗಳನ್ನು ಸ್ಥಾಪಿಸುವುದು ಅರ್ಥಪೂರ್ಣವಾಗುತ್ತದೆ. ಅವು ಭವಿಷ್ಯತ್ತಿನಲ್ಲಿ ಲಾಭ ತಂದುಕೊಡುವಂತಹುವಾಗಬೇಕಷ್ಟೆ. ಅನಿಶ್ಚಿತ ಹಾಗೂ ಅಸ್ಥಿರ ರಾಜಕೀಯ ಪರಿಸ್ಥಿತಿಗಳಲ್ಲಿ, ವಿಶೇಷವಾಗಿ ಚೀಣಾ ಹಾಗೂ ಭಾರತದಂಥ ದೊಡ್ಡ ದೇಶಗಳಲ್ಲಿ, ಪ್ರಧಾನ ಹಾಗೂ ಮೂಲ ಕೈಗಾರಿಕೆಗಳಲ್ಲಿ ಆತ್ಮಾವಲಂಬನೆಯನ್ನು ಸಾಧಿಸುವುದು ತುಂಬ ಅಪೇಕ್ಷಣೀಯ. ಆದ್ದರಿಂದಲೇ ಆರಂಭಿಕ ಯೋಜನೆಗಳ ಅವಧಿಯಲ್ಲಿ ಆಮದು ಆಧಾರಿತ ಬದಲಿ-ಕೈಗಾರಿಕೆಗಳನ್ನು ಸ್ಥಾಪಿಸುವ ನೀತಿಯನ್ನು ಅಂಗೀಕರಿಸಲಾಯಿತು. ಅಷ್ಟೇ ಅಲ್ಲ, ವಿಕಾಸಶೀಲ ದೇಶಗಳು ಜಾಗತಿಕ ಆರ್ಥಿಕತೆಯೊಂದಿಗೆ ಒಂದುಗೊಳ್ಳಲು ಪೂರೈಸಬೇಕಾದ ಷರತ್ತುಗಳ ಬಗೆಗೂ ಸ್ವಲ್ಪ ಕಾತರತೆ ಇದ್ದಿತು. ಪ್ರಬಲ ಬಹುರಾಷ್ಟ್ರೀಯ ಕಂಪೆನಿಗಳದೇ ಮೇಲುಗೈ ಆದ ಜಾಗತಿಕ ಆರ್ಥಿಕತೆಯಲ್ಲಿ ಅಭಿವೃದ್ಧಿಶೀಲ ದೇಶಗಳೂ ಅವುಗಳ ಉತ್ಪನ್ನಗಳೂ ಸರಿಸಮನಾಗಿ ಸ್ಪರ್ಧಿಸಲಾಗದೆ ಅನೇಕ ಪ್ರತಿಕೂಲಗಳನ್ನು ಎದುರಿಸಬೇಕಾಗಿ ಬರುತ್ತದೆಂಬ ಅಂಜಿಕೆಯೂ ಇದ್ದಿತು. ಜಾಗತೀಕರಣದ ಪ್ರಕ್ರಿಯೆಯಲ್ಲಿ ಅಭಿವೃದ್ಧಿಶೀಲ ದೇಶಗಳು ನಿರಂತರವಾಗಿ ಪ್ರತಿಕೂಲ ವ್ಯಾಪಾರೀ ಷರತ್ತುಗಳನ್ನೂ ಬಹುಮಟ್ಟಿಗೆ ಶಾಶ್ವತವಾದ ಹಾಗೂ ಭಾರಿ ಪ್ರಮಾಣದ ಸಾಲಗಾರಿಕೆಯ ಪರಿಸ್ಥಿತಿಯನ್ನೂ ಎದುರಿಸಬೇಕಾಗಿ ಬರುತ್ತದೆ. ಇದು ಈ ದೇಶಗಳ ಆರ್ಥಿಕ ಬೆಳೆವಣಿಗೆಗಾಗಲೀ ಸಂಕ್ಷೇಮಕ್ಕಾಗಲೀ ಸಹಕಾರಿಯಲ್ಲ. ತುಂಬ ವಿಷಮತೆಯಿಂದ ಕೂಡಿದ ಈ ಜಗತ್ತಿನಲ್ಲಿ ಒಂದುಗೂಡಿಕೆ ಪ್ರಕ್ರಿಯೆಯು ಲಾಭಗಳ ಹಂಚಿಕೆಯಲ್ಲಿ ಅಸಮಾನತೆಯನ್ನೂ ದುರ್ಬಲ ಆರ್ಥಿಕತೆಗಳ ಮೇಲೆ ಭಾರಿ ಹೊರೆಯನ್ನೂ ಉಂಟುಮಾಡಬಹುದು (ಸತೀಶ್ ಚಂದ್ರನ್, ೨೦೦೦: ೨). ಆದ್ದರಿಂದ ಜಾಗತೀಕರಣವು ಅಭಿವೃದ್ಧಿಶೀಲ ದೇಶಗಳಲ್ಲಿನ ಬಡತನವನ್ನು ಉಲ್ಬಣಗೊಳಿಸುತ್ತದಷ್ಟೆ ಎಂದು ಅಂಜಲಾಗಿದ್ದಿತು.

ಆದರೆ ಈ ವಿವಾದವನ್ನು ಸೈದ್ಧಾಂತಿಕ ಆಧಾರಗಳ ಮೇಲಷ್ಟೆ ಪರಿಗಣಿಸಿ ಪರಿಹರಿಸುವುದು ಸರಿಹೋಗದು. ಆದ್ದರಿಂದ ಜಾಗತೀಕರಣವು ನಿಜಕ್ಕೂ ಆರ್ಥಿಕೋನ್ನತಿಗೂ ಬಡತನ ನಿರ್ಮೂಲನೆಗೂ ಸಹಕಾರಿಯೇ ಅಥವಾ ಇಲ್ಲವೇ ಎಂಬ ಪ್ರಶ್ನೆಯನ್ನು ಪ್ರಯೋಗ ಹಾಗೂ ಅನುಭವಗಳ ದೃಷ್ಟಿಯಿಂದ ಪರಿಶೀಲಿಸುವುದು ಅವಶ್ಯ.

ಬಹಿರ್ಮುಖಿ ದೃಷ್ಟಿಕೋನದ ಆರ್ಥಿಕ ನೀತಿಗೆ ಭಾರತ ಎಷ್ಟು ಮಾತ್ರವೂ ನಿದರ್ಶನವಲ್ಲವೆನ್ನಿ. ೧೯೯೦ರ ದಶಕದಲ್ಲಷ್ಟೆ ಇಲ್ಲಿ ಹಳೆಯ ಆಮದು ಆಧಾರಿತ ನೀತಿಯನ್ನು ಬಿಟ್ಟುಕೊಟ್ಟು ಬಹಿರ್ಮುಖಿ ದೃಷ್ಟಿಕೋನಕ್ಕೆ ಉತ್ತೇಜನ ನೀಡುವ ತೆರೆದ ನೀತಿಯನ್ನು ಅಂಗೀಕರಿಸಲಾಯಿತು. ಆದರೂ ೧೯೯೦ರಿಂದೀಚೆಗೆ ದೇಶದ 'ಸಮಗ್ರ ಅಂತರ್ದೇಶೀಯ ಉತ್ಪನ್ನ'ಕ್ಕೆ (ಜಿಡಿಪಿ) ಸಂಬಂಧಿಸಿದಂತೆ ಬಹುಮಟ್ಟಿಗೆ ನಿರಂತರವಾಗಿ ರಫ್ತು ಪ್ರಮಾಣ ಹೆಚ್ಚುತ್ತಿರುವ ಪ್ರವೃತ್ತಿ ಕಂಡುಬಂದಿದೆ. ವರ್ಷವರ್ಷಕ್ಕೆ ಹೋಲಿಸಿದಂತೆ ಈ ಸಂಖ್ಯೆಯಲ್ಲಿ ವ್ಯತ್ಯಾಸ ಇರಬಹುದು. ಆದರೆ ದೀರ್ಘಕಾಲೀನ ಪ್ರವೃತ್ತಿಯನ್ನು ಗಮನಿಸಿದಾಗ ಅದು ತಪ್ಪಲ್ಲವೆಂದೇ ದೃಢಪಡುತ್ತದೆ. ೧೯೫೦ರಿಂದ ೧೯೯೯ರವರೆಗೆ ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ರಫ್ತುಗಳಲ್ಲಾಗಿರುವ ಏರುಪೇರುಗಳನ್ನು ಕೆಳಗಿನ ಪಟ್ಟಿ - ೧ ಪ್ರಕಟಪಡಿಸುತ್ತದೆ. ಸ್ವಾರಸ್ಯಕರವಾದ ಅಂಶವೆಂದರೆ, ರಫ್ತುಗಳಲ್ಲಿನ ಈ ಹೆಚ್ಚಳವು, ತೊಡಗಿಸಿದ ಉತ್ಪಾದನಾ ವೆಚ್ಚಗಳಿಗಿಂತ ಹೆಚ್ಚಾಗಿದೆ. ಈ ಕಾಲಾವಧಿಯಾದ್ಯಂತ ವ್ಯಾಪಾರದ ಆಮದು-ರಫ್ತುಗಳ ಸಂತುಲನವು ದೇಶದ ಆರ್ಥಿಕತೆಗೆ ಪ್ರತಿಕೂಲವಾಗಿಯೇ ಇದ್ದಿತು. ಆದರೆ ಈ ಖೋತಾ ಸಾಪೇಕ್ಷವಾಗಿ ಕಿರಿದಾಗುತ್ತಿದೆ. ವ್ಯಾಪಾರದ ಆಮದು - ರಫ್ತು ಪ್ರಮಾಣಗಳಲ್ಲಿನ ಅಂತರ ಕೊನೆಯಪಕ್ಷ ಸಾಪೇಕ್ಷವಾಗಿ ಹೆಚ್ಚಲು ಅವಕಾಶ ನೀಡದೆಯೇ ಬಹಿರ್ಮುಖಿ ದೃಷ್ಟಿಕೋನಕ್ಕೆ ಹೆಚ್ಚಿನ ಗಮನ ನೀಡಿರುವುದು ಸಮಾಧಾನಕರ.

ಈ ಬಹಿರ್ಮುಖಿ ದೃಷ್ಟಿಕೋನ ಭಾರತಕ್ಕೆ ಬೆಳೆವಣಿಗೆ ದರ ಹೆಚ್ಚಿಸಲು ಬಡತನ ಕಡಿಮೆ ಮಾಡಲು ಎಷ್ಟರಮಟ್ಟಿಗೆ ನೆರವಾಗಿದೆ ? ಮುಂದೆ ನೀಡಿರುವ ಪಟ್ಟಿ-೧ ಸ್ವಲ್ಪ ಉತ್ತೇಜಕ ಚಿತ್ರವನ್ನೇ ನೀಡುತ್ತದೆನ್ನಿ. ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ರಫ್ತು ಪ್ರಮಾಣ ಒಂದು ಕಡೆ, ಬೆಳೆವಣಿಗೆಯ ಸಾಧನೆ ಹಾಗೂ ಬಡತನ ಕುಗ್ಗಿಕೆ ಇನ್ನೊಂದು ಕಡೆ, ಇವುಗಳ ನಡುವೆ ಬಹುಮಟ್ಟಿಗೆ ಪರಿಪೂರ್ಣವೆನ್ನಬಹುದಾದ ಹೊಂದಾಣಿಕೆ ಇದೆ. ಸಾಪೇಕ್ಷ ಪ್ರಮಾಣದಲ್ಲಿ ರಫ್ತುಗಳು ಅತ್ಯಂತ ತಳಮಟ್ಟದಲ್ಲಿದ್ದಾಗ (೧೯೬೫-೬೬ ಹಾಗೂ ೧೯೭೫-೭೬), ಬೆಳೆವಣಿಗೆಯ ದರವೂ ಅತ್ಯಂತ ತಳಮಟ್ಟದಲ್ಲಿದ್ದಿತು. ರಫ್ತು ಹೆಚ್ಚಿದಾಗ ಬೆಳೆವಣಿಗೆಯೂ ಹೆಚ್ಚಾಯಿತು. ಇದು ಬಡತನ ಕಡಿಮೆ ಮಾಡುವುದರ ಮೇಲೂ ಪ್ರಭಾವ ಬೀರಿತು. ರಫ್ತುಗಳೂ ಬೆಳೆವಣಿಗೆಯ ದರಗಳೂ

ಪ್ರೊ|| ಎಂ. ವಿ. ನಾಡಕರ್ಣಿ

ಪಟ್ಟೆ - ೧ ಭಾರತದ ಸಾಪೇಕ್ಷ ರಫ್ತು, ಬೆಳವಣಿಗೆ ಹಾಗೂ ಬಡತನಗಳ ಮಟ್ಟಗಳು

| ಕಾಲಾವಧಿ (೧) | ಜಿಡಿಪಿಯ (ಮಾರುಕಟ್ಟೆ ಬೆಲೆಗಳಲ್ಲಿ) ಶೇಕಡಾವಾರು ಲೆಕ್ಕದಲ್ಲಿ ರಫ್ತುಗಳು (ಎರಡೂ ಪ್ರಸಕ್ತ ಬೆಲೆಗಳಲ್ಲಿ) (೨) | ರಫ್ತು ಆಮದುಗಳ ನಡುವಿನ ನಿಷ್ಪತ್ತಿ (ಅಮೆರಿಕನ್ ಡಾಲರುಗಳ ಲೆಕ್ಕದಲ್ಲಿ) (೩) | ಬೆಳವಣಿಗೆ ಪ್ರವೃತ್ತಿ ಜಿಡಿಪಿಯ ವಾರ್ಷಿಕ ಶೇಕಡಾವಾರು ದರ, ಬೆಲೆಗಳು ಸ್ಥಿರವಾಗಿದ್ದಾಗ (೪) | ಬಡತನ ತಲಾ ಲೆಕ್ಕದಲ್ಲಿ ನಿಷ್ಪತ್ತಿ (%) (೫) |
|---|---|---|---|---|
| ೧೯೫೦-೫೧ರಿಂದ ೧೯೬೪-೬೫ | ೪.೫ | ೦.೬೯ | ೩.೯ | ೫೧.೮ (೧೯೫೧-೫೨ರಿಂದ ೧೯೬೪-೬೫ರವರೆಗೆ) |
| ೧೯೬೫-೬೬ರಿಂದ ೧೯೭೫-೭೬ | ೪.೦ | ೦.೭೭ | ೩.೬ | ೫೬.೭ (೧೯೬೫-೬೬ರಿಂದ ೧೯೭೩-೮೪ರವರೆಗೆ) |
| ೧೯೭೬-೭೭ರಿಂದ ೧೯೯೧-೯೨ | ೫.೫ | ೦.೮೬ | ೪.೯ | ೩೯.೦ (೧೯೭೭-೭೮ರಿಂದ ೧೯೯೧ರವರೆಗೆ) |
| ೧೯೯೨-೯೩ರಿಂದ ೧೯೯೮-೯೯ | ೮.೩ | ೦.೮೬ | ೬.೭ | ೩೬ .೭ (೧೯೯೨-೯೭) |

ಆಧಾರಗಳು : (೧) ಕಾಲಾವಧಿ - ರೇ ಮತ್ತು ಬೋಸ್ ಗೊತ್ತುಹಚ್ಚಿರುವಂತೆ (೧೯೭೭)
(೨) ಹಾಗೂ (೩) ಭಾರತ ಸರಕಾರದ ಆರ್ಥಿಕ ಸಮೀಕ್ಷೆ ೧೯೯೯-೨೦೦೦
(೪) ರೇ ಮತ್ತು ಬೋಸ್ ಹಾಗೂ ಭಾರತ ಸರಕಾರದ ಆರ್ಥಿಕ ಸಮೀಕ್ಷೆ. ೧೯೯೯-೨೦೦೦
(೫) ಸರಾಸರಿ ಲೆಕ್ಕ - ವಿಶ್ವಬ್ಯಾಂಕ್ (೨೦೦೦). ಪು. ೧೪೯

ಹೆಚ್ಚಾಗಿದ್ದಾಗ ಬಡತನದ ಮಟ್ಟ ತಗ್ಗಿದ್ದಿತು. ಆದರೆ ೧೯೯೦ರ ದಶಕದಲ್ಲಿ ರಫ್ತುಗಳು ತೀವ್ರ ಹೆಚ್ಚಿದುದನ್ನು ಗಣನೆಗೆ ತಂದುಕೊಂಡಾಗ ಬೆಳವಣಿಗೆ ದರ ಹೆಚ್ಚಳದ ಹಾಗೂ ಬಡತನ ತಗ್ಗಿಕೆಯ ಪ್ರಮಾಣ ಅಲ್ಪವೆಂದೇ ಕಂಡುಬರುತ್ತದೆ. ಸ್ಪಷ್ಟವಾಗಿಯೇ ಬೆಳವಣಿಗೆ ಹೆಚ್ಚಿಕೆ ಹಾಗೂ ಬಡತನ ತಗ್ಗಿಕೆಗಳಿಗೆ ಕಾರಣವಾದ ಇತರ ಅಂಶಗಳೂ ಇವೆಯೆನ್ನಿ.

ಅಷ್ಟೇ ಅಲ್ಲ, ರಫ್ತುಗಳನ್ನು ಹೆಚ್ಚಿಸುವುದು ಬಹಿರ್ಮುಖೀ ಹಾಗೂ ಜಾಗತೀಕರಣ ಆರ್ಥಿಕತೆಯ ಒಂದು ಮಗ್ಗುಲಷ್ಟೆ. ನಮಗೆ ತುಲನಾತ್ಮಕ ಅನುಕೂಲತೆ ಇಲ್ಲದಿರುವಂಥ ಕ್ಷೇತ್ರಗಳಲ್ಲಿ ವಸ್ತುಗಳ ಹಾಗೂ ಸೇವಾ ಕಾರ್ಯಗಳ ಆಮದಿಗೆ ಅನುಮತಿ ನೀಡುವುದು ಮತ್ತೊಂದು ಮಗ್ಗುಲು. ಸರಕುಗಳ ಹಾಗೂ ಸೇವಾ ಕಾರ್ಯಗಳ ಕೊರತೆ ಇದ್ದು ಇವಕ್ಕಾಗಿ ದೇಶದೊಳಗಿನ ಬೆಲೆಗಳು ಜಾಗತಿಕ ಬೆಲೆಗಳಿಗಿಂತ ಅತಿಯಾಗಿ ಹೆಚ್ಚಾಗಿದ್ದಾಗ ಬಳಕೆಗಾರರ ಸಂಕ್ಷೇಮ ಹೆಚ್ಚಿಸಲು ಆಮದು ಅವಶ್ಯವಾಗಬಹುದು. ಆದರೆ ಕೃಷಿ ಸರಕುಗಳಿಗೆ ಸಂಬಂಧಿಸಿ ಇಂಥ ನೀತಿಯು ಕೆಲವು ಬೆಳೆಗಾರರಿಗೆ ಕಟುತರ ಸಮಸ್ಯೆಗಳನ್ನು ಉಂಟು ಮಾಡಬಲ್ಲುದು. ಉದಾಹರಣೆಗೆ ದ್ವಿದಳ ಧಾನ್ಯಗಳು ಹಾಗೂ ಖಾದ್ಯ ತೈಲಗಳ ವಿಷಯದಲ್ಲಿ ಹೀಗೆಯೇ ಆಗಿದೆ. ದ್ವಿದಳ ಧಾನ್ಯಗಳ ಉತ್ಪಾದನೆಯಲ್ಲಿ ಕುಸಿತವಾದುದು ಬೆಲೆ ಏರುವಂತೆ ಮಾಡಿತು. ಆದರೆ ಈಚೆಗೆ ಎಣ್ಣೆ ಬೀಜಗಳ ಉತ್ಪಾದನೆ ಹೆಚ್ಚಾದರೂ ಖಾದ್ಯ ತೈಲಗಳ ಬೆಲೆಗಳು ತುಂಬ ಹೆಚ್ಚಾಗಿಯೇ ಇವೆ. ಇದನ್ನು ನಿವಾರಿಸಲು ದ್ವಿದಳ ಧಾನ್ಯಗಳನ್ನೂ ಪಾಮ್ ಎಣ್ಣೆಯನ್ನೂ ಆಮದು ಮಾಡಿಕೊಳ್ಳಲಾಯಿತು. ಫಲವಾಗಿ ಖಾದ್ಯ ತೈಲಗಳ ಮಾರಾಟ ಬೆಲೆಗಳೇಕೋ ತೀವ್ರವಾಗಿ ಕುಸಿದವು. ಆದರೆ ಸಾವಿರಾರು ಬೆಳೆಗಾರರು ಬಡತನದ ದವಡೆಗೆ ದೂಡಲ್ಪಟ್ಟರು. ಹೀಗೆ ಜಾಗತೀಕರಣವು ಒಂದು ಕಡೆ ಈ ಬೆಳೆಗಾರರನ್ನು ದುರ್ಗತಿಗೆ ತಳ್ಳಿದಲ್ಲಿ ಮತ್ತೊಂದು ಕಡೆ ನಮ್ಮ ಕೃಷಿಯ ವೈವಿಧ್ಯೀಕರಣಕ್ಕೆ ಹಾಗೂ ಮತ್ತಷ್ಟು ವಾಣಿಜ್ಯೀಕರಣಕ್ಕೆ ನೆರವು ನೀಡಿದೆ. ಇತರ ಬೆಳೆಗಳ ವಿಷಯದಲ್ಲಿ ರಫ್ತು - ಆಧಾರಿತ ನೀತಿಯು ಬೆಳೆಗಾರರಿಗೆ ಸಹಾಯಕವಾಗಿದೆ. ಇಲ್ಲೂ ಕೆಲವರು ಲಾಭ ಗಳಿಸಿದಲ್ಲಿ ಮತ್ತೆ ಕೆಲವರು ನಷ್ಟ ಅನುಭವಿಸಿದ್ದಾರೆ. ಆದರೆ ಒಬ್ಬರ ಲಾಭ ಮತ್ತೊಬ್ಬರ ನಷ್ಟದ ಪ್ರಭಾವವನ್ನು ಹೋಗಲಾಡಿಸಿಲ್ಲವೆಂಬುದು ನಿಜ. ಸ್ಪಷ್ಟವಾಗಿಯೇ, ಮೊದಲು ರೈತರು ಮಾರುಕಟ್ಟೆ ಶಕ್ತಿಗಳಿಗೆ ಕಡಿಮೆ ಈಡಾಗುವಂತೆ ಮಾಡಲು ಕ್ರಮ ಕೈಗೊಳ್ಳಬೇಕು. ಏಕೆಂದರೆ ಜಾಗತಿಕ ಬೆಲೆಗಳೇ ಸ್ಥಿರವಾದವೇನಲ್ಲ. ಹಾಗಾಗಿ, ಜಾಗತೀಕರಣವು ದೇಶಕ್ಕೂ ರೈತರಿಗೂ ನಿಷ್ಕಳಂಕ ವರದಾನವೇನೂ ಅಲ್ಲ. ಅದೇ ಹೊತ್ತಿನಲ್ಲಿ ಅದು ನಿಷ್ಕಳಂಕ ಶಾಪವೂ ಅಲ್ಲ.

ಒಟ್ಟಿನಲ್ಲಿ ನಾವು ಭಾರತದಲ್ಲಿನ ಪರಿಸ್ಥಿತಿಯನ್ನು ಗಮನಿಸಿದಾಗ, ಜಾಗತೀಕರಣವು ಇಲ್ಲಿ ಆಶಾದಾಯಕವಾದ ಹಾಗೂ ಧನಾತ್ಮಕವಾದ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ದೇಶದ ಎಲ್ಲೆಡೆಗಳಲ್ಲೂ ಎಲ್ಲ ವಲಯ ಗಳಲ್ಲೂ ಜಾಗತೀಕರಣದ ಅನುಭವ ಅತ್ಯಂತ ಆಪ್ಯಾಯನ ಕಾರಿ ಎಂದು ಹೇಳಲಾಗದಿದ್ದರೂ ಸಾಕಷ್ಟು ಉತ್ತೇಜನಕಾರಿ ಎಂದಂತೂ ಹೇಳಬಹುದು (ಭಾರತವು ತನ್ನ ಆರ್ಥಿಕತೆ ಯನ್ನು ಬಹಿರ್ಮುಖಗೊಳಿಸಿದುದರ ಫಲವಾಗಿ ನಷ್ಟವ ನ್ನೇನೂ ಅನುಭವಿಸಿಲ್ಲ. ಜಾಗತೀಕರಣದ ಫಲವಾಗಿ ಅದು ತನ್ನ ರಾಷ್ಟ್ರೀಯ ಹಿತಗಳನ್ನು ಭವಿಷ್ಯತ್ತಿನಲ್ಲಿ ಸಂರಕ್ಷಿಸಿ

ಕೊಳ್ಳಲಷ್ಟೆ ಅಲ್ಲ, ಅದರಿಂದ ಧನಾತ್ಮಕ ಪ್ರಯೋಜನ ಪಡೆದುಕೊಳ್ಳಲೂ ಸಾಧ್ಯವಾಗಿದೆ. – ಸತೀಶ್ ಚಂದ್ರ (೨೦೦೦:೩೯). ಎಷ್ಟೇ ಆಗಲಿ ಈ ದೇಶದಲ್ಲೂ 'ಪೂರ್ವ ಏಷ್ಯನ್ ಹುಲಿಗಳು' ಅನ್ನುವಂಥ ದೇಶಗಳ ಯಶಸ್ವೀ ಅನುಭವದ ಆಧಾರದ ಮೇಲಷ್ಟೇ ಜಾಗತೀಕರಣವನ್ನು ಪ್ರಾರಂಭಿಸಲಾಯಿತು.

ಮುಂದಿನ ಪಟ್ಟೆ-೨ ಕೆಲವು ದೇಶಗಳ ಆದಾಯಗಳ ಮಟ್ಟ, ಅವುಗಳ ಜಾಗತೀಕರಣ ಸೂಚ್ಯಂಕ, ಇವುಗಳ ತುಲನಾತ್ಮಕ ಚಿತ್ರಣ ನೀಡುತ್ತದೆ. ಸ್ವಾರಸ್ಯವೆಂದರೆ, ಇಲ್ಲಿ ಬಳಸ ಲಾಗಿರುವ ಎಲ್ಲ ಮೂರು ಬಹಿರ್ಮುಖ ನೀತಿಯ ಅಥವಾ ಜಾಗತೀಕರಣದ ಸೂಚ್ಯಂಕಗಳೂ ಜಿಎನ್‌ಪಿಯ (ಸಮಗ್ರ ರಾಷ್ಟ್ರೀಯ ಉತ್ಪನ್ನ) ಮಟ್ಟಕ್ಕೆ ಧನಾತ್ಮಕವಾಗಿ ಸಂಬಂಧಿಸಿವೆ. ಕಡಿಮೆ ಆದಾಯದ ದೇಶಗಳಲ್ಲಿ ಬಹಿರ್ಮುಖ ನೀತಿಯ ಮಟ್ಟವೂ ಕಡಿಮೆ. ಈ ದೇಶಗಳಲ್ಲಿ ಆದಾಯದ ಮಟ್ಟ ಹೆಚ್ಚಿದಂತೆ ಬಹಿರ್ಮುಖ ನೀತಿಯ ಮಟ್ಟವೂ ಹೆಚ್ಚಾಗಿದೆ.

೧. ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ಪದಾರ್ಥಗಳ ಪ್ರವೃತ್ತಿಗಳು (ಅಮೆರಿಕನ್ ಡಾಲರ್‌ಗೆ ಹೋಲಿಸಿದಂತೆ ಇವುಗಳ ಕೊಳ್ಳುವ ಶಕ್ತಿಗನುಗುಣವಾಗಿ); ೨. ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ಸಮಗ್ರ ಖಾಸಗಿ ಬಂಡವಾಳ ಹರಿದು ಬಂದಿರುವುದು; ೩. ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ಸಮಗ್ರ ವಿದೇಶೀ ನೇರ ಬಂಡವಾಳ ಹೂಡಿಕೆ – ಈ ಮೂರು ಅಂಶಗಳು ಬಹಿರ್ಮುಖ ನೀತಿಯ ಮಟ್ಟ ಹೆಚ್ಚಿರುವುದನ್ನು ಸೂಚಿಸುತ್ತವೆ.

ದೇಶಗಳ ಆದಾಯ ಮಟ್ಟ ಹೆಚ್ಚಿಗಿದ್ದಷ್ಟೂ ಅವುಗಳ ಅಂತರರಾಷ್ಟ್ರೀಯ ವ್ಯಾಪಾರವೂ ಹೆಚ್ಚಿದೆ ಹಾಗೂ ಅವು ಹೆಚ್ಚಿನ ಖಾಸಗಿ ಬಂಡವಾಳದ ಹರಿವನ್ನೂ ವಿದೇಶೀ ನೇರ ಬಂಡವಾಳ ಹೂಡಿಕೆಯನ್ನೂ ಆಕರ್ಷಿಸಿವೆ, ಎಂಬುದು ಮೇಲಿನ ಪಟ್ಟೆಯಿಂದ ಸ್ಪಷ್ಟವಾಗುತ್ತದೆ. ಈ ಮೂರು ಅಂಶ ಗಳಿಗೆ ಸಂಬಂಧಿಸಿದಂತೆ ಕಡಿಮೆ ಆದಾಯದ ದೇಶಗಳ ಸಾಧನೆ ತುಂಬ ಕಳಪೆ ಎಂಬುದೂ ಸ್ಪಷ್ಟವಾಗುತ್ತದೆ.

ಅಂದರೆ, ಹೆಚ್ಚು ಉನ್ನತಮಟ್ಟದ ಆದಾಯ ಗಳಿಸಲು ಬಹಿರ್ಮುಖ ಆರ್ಥಿಕ ನೀತಿ ಅವಶ್ಯ ಎಂದು ಇದರ ಅರ್ಥವೇ ? ಅಥವಾ ಬಹಿರ್ಮುಖ ಆರ್ಥಿಕ ನೀತಿಯನ್ನು ಅನುಸರಿಸಿದುದರ ಪರಿಣಾಮವಾಗಿಯೇ ಆದಾಯಗಳ ಮಟ್ಟ ಹೆಚ್ಚಿದೆ ಎಂದು ಅರ್ಥವೇ ? ಬಹಿರ್ಮುಖ ಆರ್ಥಿಕ ನೀತಿ ಆದಾಯದ ಹೆಚ್ಚಳಕ್ಕೆ ಸಹಕಾರಿ ಎಂದೇ ಹೇಳ ಬಹುದು. ಬಹಿರ್ಮುಖ ಆರ್ಥಿಕ ನೀತಿ ಅನುಸರಣೆ ಈಚೆಗೆ ಬಹುಮಟ್ಟಿಗೆ ಸಾರ್ವತ್ರಿಕವಾಗಿ ಎಲ್ಲ ದೇಶಗಳಲ್ಲೂ ಹೆಚ್ಚಿದೆ. ಆದರೆ ಬೆಳವಣಿಗೆಯ ದರದ ವಿಷಯದಲ್ಲಿ ಹೀಗೆ ಹೇಳಲಾಗು ವುದಿಲ್ಲ. ಕಡಿಮೆ-ಮಾಧ್ಯಮ ಆದಾಯ ದೇಶಗಳಲ್ಲೂ ಉನ್ನತ ಆದಾಯ ದೇಶಗಳಲ್ಲೂ ೧೯೮೦-೯೦ಕ್ಕೆ ಹೋಲಿಸಿ ದಂತೆ ೧೯೯೦-೯೮ರಲ್ಲಿ ಬೆಳವಣಿಗೆಯ ದರ ಕುಗ್ಗಿದೆ.

ಇದನ್ನು ಕಾರಣ-ಪರಿಣಾಮ ಸಂಬಂಧವನ್ನಾಗಿ ವ್ಯಾಖ್ಯಾನಿಸಬೇಕಾಗಿಲ್ಲ. ಬಂಡವಾಳ ಹರಿದು ಬರುವುದೂ ವಿದೇಶೀ ಬಂಡವಾಳದ ನೇರ ಹೂಡಿಕೆಯೂ ಬೆಳವಣಿಗೆ ದರವನ್ನು ಹೇಗೆ ಕುಗ್ಗಿಸುತ್ತವೆಂಬುದನ್ನು ಊಹಿಸುವುದೂ ಕಷ್ಟವೇ. ಅನೇಕ ಉನ್ನತ ಆದಾಯದ ದೇಶಗಳಲ್ಲಿ ಬೆಳವಣಿಗೆಯ ದರಗಳು ಕುಸಿದಿರುವುದೂ ಅಲ್ಪ-ಆದಾಯದ ದೇಶಗಳಲ್ಲಿ ಅವು ಹಿಗ್ಗಿರುವುದೂ ಈ ರೀತಿಯ

**ಪಟ್ಟಿ-೨. ಜಿಎನ್‌ಪಿ ಮಟ್ಟಕ್ಕನುಗುಣವಾಗಿ ದೇಶಗಳ ಗುಂಪುಗಳು ಹಾಗೂ ಅವುಗಳ ಜಾಗತೀಕರಣ**

| ದೇಶಗಳ ಗುಂಪುಗಳು | ಜಿಎನ್‌ಪಿ ತಲಾ ಲೆಕ್ಕದಲ್ಲಿ (ಡಾಲರ್ ಕೊಳ್ಳುವ ಶಕ್ತಿ) | ಜಿಡಿಪಿ ವಾರ್ಷಿಕ ಬೆಳವಣಿಗೆ ದರ % | | ಸರಕು ವ್ಯಾಪಾರ ಪಿಪಿಪಿ, ಜಿಡಿಪಿಯ ಶೇಕಡಾವಾರು | | ಖಾಸಗಿ ಸಮಗ್ರ ಬಂಡವಾಳದ ಹರಿವು ಪಿಪಿಪಿ, ಜಿಡಿಪಿ ಶೇಕಡಾವಾರು | | ಸಮಗ್ರ ವಿದೇಶಿ ನೇರ ಬಂಡವಾಳ ಹೂಡಿಕೆ ಪಿಪಿಪಿ, ಜಿಡಿಪಿ ಶೇಕಡಾವಾರು | |
|---|---|---|---|---|---|---|---|---|---|
| | ೧೯೯೮ | ೮೦-೯೦ | ೯೦-೯೮ | ೧೯೮೮ | ೧೯೯೮ | ೧೯೮೮ | ೧೯೯೮ | ೧೯೮೮ | ೧೯೯೮ |
| ಕಡಿಮೆ ಆದಾಯ* | ೨೧೭೦ | ೬.೫ | ೭.೪ | ೬.೮ | ೮.೩ | ೦.೭ | ೨.೦ | ೦.೨ | ೦.೯ |
| ಕಡಿಮೆ-ಮಧ್ಯಮ ಆದಾಯ | ೪೭೦೦ | ೨.೩ | -೦.೮ | ೧೧.೪ | ೧೭.೨ | ೧.೬ | ೩.೫ | ೦.೩ | ೧.೦ |
| ಮೇಲು-ಮಧ್ಯಮ ಆದಾಯ | ೮೦೨೦ | ೨.೮ | ೩.೯ | ೧೪.೫ | ೨೬.೪ | ೩.೯ | ೮.೮ | ೦.೫ | ೨.೨ |
| ಉನ್ನತ ಆದಾಯ | ೨೩೪೨೦ | ೩.೧ | ೨.೩ | ೨೮.೩ | ೩೮.೩ | ೯.೯ | ೨೨.೩ | ೨.೬ | ೫.೭ |
| ಜಾಗತಿಕ | ೬೩೦೦ | ೩.೨ | ೨.೫ | ೨೧.೨ | ೨೮.೩ | ೬.೯ | ೧೪.೫ | ೧.೭ | ೩.೮ |

* ಭಾರತ ಹಾಗೂ ಚೀಣಾವನ್ನೂ ಒಳಗೊಂಡು. ಆಕರ : ವಿಶ್ವಬ್ಯಾಂಕ್ - ಜಾಗತಿಕ ಬೆಳವಣಿಗೆ ಸೂಚ್ಯಂಕಗಳು - ೨೦೦೦, ವಾಷಿಂಗ್ಟನ್.

ಋಣಾತ್ಮಕ ಚಿಂತನೆಗೆ ದಾರಿ ಮಾಡಿಕೊಟ್ಟಿವೆ. ಪಟ್ಟಿ-೨ ತೋರಿಸುವಂತೆ ಇದೀಗ ಅಲ್ಪ-ಆದಾಯ ದೇಶಗಳಲ್ಲಿ ಬೆಳವಣಿಗೆ ದರಗಳು ಮಧ್ಯಮ ಹಾಗೂ ಉನ್ನತ ಆದಾಯ ದೇಶಗಳಲ್ಲಿರುವುದಕ್ಕಿಂತ ಹೆಚ್ಚಾಗಿದ್ದರೂ ಅಂತಿಮವಾಗಿ ಎಲ್ಲ ದೇಶಗಳಲ್ಲೂ ತಲಾ-ಆದಾಯ ಮಟ್ಟಗಳು ಹೆಚ್ಚು ಕಡಿಮೆ ಸರಿಸಮಾನವಾಗಲಿರುವುವೆಂದು ಆಶಿಸಬಹುದಾಗಿದೆ. ಆದರೆ ದುರದೃಷ್ಟವೆಂದರೆ ಖಾಸಗಿ ಬಂಡವಾಳದ ಹರಿವೂ ವಿದೇಶೀ ನೇರ ಹೂಡಿಕೆಯೂ ಪ್ರಧಾನವಾಗಿ ಉನ್ನತ ಆದಾಯ ದೇಶಗಳತ್ತವೇ ಮುಖ ಮಾಡಿಕೊಂಡಿವೆ. ಇದು ತುಂಬ ನಿರಾಶಾದಾಯಕ. ಏಕೆಂದರೆ ಖಾಸಗಿ ಬಂಡವಾಳದ ಹರಿವೂ ವಿದೇಶೀ ನೇರ ಹೂಡಿಕೆಯೂ ಅಲ್ಪ ಆದಾಯ ದೇಶಗಳಿಗೆ ನೆರವಾಗಬೇಕೆಂಬುದು ಕೊನೆಯ ಪಕ್ಷ ತಾತ್ವಿಕವಾಗಿಯಾದರೂ ಎಲ್ಲರ ನಿರೀಕ್ಷೆ. ಅವು ನ್ಯಾಯವಾಗಿ ಅಲ್ಪ-ಆದಾಯ ದೇಶಗಳಿಗೆ ಬಂಡವಾಳ ಕೊರತೆಯನ್ನು ಗೃಹ ಉಳಿತಾಯದ ಅಸಮರ್ಪಕತೆಯನ್ನು ನೀಗಿಸಿಕೊಳ್ಳಲು ನೆರವಾಗಬೇಕು, ಯಂತ್ರ ತಾಂತ್ರಿಕತೆಯನ್ನು ಶ್ರೀಮಂತ ದೇಶಗಳಿಂದ ಬಡ ದೇಶಗಳಿಗೆ ವರ್ಗಾಯಿಸಿ ಅವುಗಳ ಬೆಳವಣಿಗೆಯ ದರ ಹೆಚ್ಚಲು ನೆರವಾಗಬೇಕು. ಇದರಿಂದ ಬಡ ದೇಶಗಳೂ ಜಾಗತಿಕ ವ್ಯಾಪಾರದಲ್ಲಿ ತಮ್ಮ ಅನುಕೂಲತೆಗಳನ್ನು ಸುಧಾರಿಸಿಕೊಳ್ಳುವಂತಾಗಬೇಕು. ಆದರೆ ಇದು ಹೀಗಾಗದೆ ಬಂಡವಾಳದ ಹರಿವು ಉನ್ನತ-ಆದಾಯ ದೇಶಗಳ ನಡುವೆಯೇ ಜರುಗುತ್ತಿದೆ. ಹಾಗಾಗಿ ಅಲ್ಪ-ಆದಾಯ ದೇಶಗಳು ತಮ್ಮ ಸರಕಾರಗಳ ಹಾಗೂ ವಿಶ್ವ ಬ್ಯಾಂಕಿನ ನೆರವನ್ನು ಸದಾ ಅವಲಂಬಿಸಿರುವಂತಾಗಿದೆ.

ಬಹಿರ್ಮುಖ ಆರ್ಥಿಕ ನೀತಿಯು ಬೆಳವಣಿಗೆ ದರಗಳು ಹೆಚ್ಚಲು ನೆರವಾಗದಿದ್ದರೆ ಹೋಗಲಿ, ಬಡತನ ನಿರ್ಮೂಲನಕ್ಕಾದರೂ ನೆರವಾಗಿದೆಯೇ ? ಬಡತನವನ್ನು ಅಳೆಯುವುದು ಹೇಗೆ ? ೧೯೮೦ರಲ್ಲಿ ವಿಶ್ವಬ್ಯಾಂಕ್ ಪ್ರಕಟಿಸಿದ ಸೂಚ್ಯಾಂಕಗಳ ಪ್ರಕಾರ, ಜನರ ಆದಾಯ ದಿನಕ್ಕೆ ಒಂದು ಅಮೆರಿಕನ್ ಡಾಲರಿಗಿಂತ ಕಡಿಮೆ ಇದ್ದರೆ ಅದನ್ನು ಬಡತನದ ರೇಖೆ ಎಂದು ಪರಿಗಣಿಸಬಹುದು. ಆದರೆ ಇದೂ ದೇಶಗಳ ಜನಸಂಖ್ಯೆಯ ಮೇಲೆ ಆಧಾರಗೊಂಡಿರುತ್ತದೆ. ಹಾಗಾಗಿ ಇದು ದೇಶದಿಂದ ದೇಶಕ್ಕೆ ಬೇರೆ ಬೇರೆಯಾಗಿರುತ್ತದೆ ಮತ್ತು ಹೋಲಿಕೆ ಕಷ್ಟಸಾಧ್ಯ. ಆದರೆ ಕಾರಣ-ಪರಿಣಾಮಗಳ ನಡುವಿನ ಅನ್ಯೋನ್ಯ ಸಂಬಂಧ ಏನು ಹೇಳುತ್ತದೆಂದರೆ, ಒಂದೋ ಬಡತನ ಕಡಿಮೆಯಾಗುವುದು ಬಹಿರ್ಮುಖ ಆರ್ಥಿಕ ನೀತಿಗೆ ನೆರವಾಗುತ್ತದೆ, ಇಲ್ಲವೆ ಬಹಿರ್ಮುಖ ಆರ್ಥಿಕ ನೀತಿಯು ಬಡತನ ನಿರ್ಮೂಲನಕ್ಕೆ ನೆರವಾಗುತ್ತದೆ. ಈ ಬಹಿರ್ಮುಖ ಆರ್ಥಿಕ ನೀತಿಯ ಪರಿಣಾಮವನ್ನು ಸಾಮಾನ್ಯವಾಗಿ ದೇಶದ ಜಿಡಿಪಿಗೆ ಹೋಲಿಸಿದಂತೆ ಸರಕು ವ್ಯಾಪಾರದ ಪ್ರಮಾಣದಿಂದ ಅಳೆಯಲಾಗುತ್ತದೆ.

**ಪಟ್ಟಿ - ೩ಎ ಹೆಚ್ಚು ಬಡತನ, ಹೆಚ್ಚು ವ್ಯಾಪಾರ ಇರುವ ದೇಶಗಳು**

| ದೇಶ | ಬಡತನ | ವ್ಯಾಪಾರ |
|---|---|---|
| ೧. ಮಾಲಿ | ೭೨.೮ | ೧೪.೯ |
| ೨. ಜಾಂಬಿಯ | ೭೨.೬ | ೩೫.೪ |
| ೩. ನೈಜೀರಿಯ | ೭೦.೨ | ೧೯.೮ |
| ೪. ನೈಜರ್ | ೬೧.೪ | ೧೨.೩ |
| ೫. ಬುರ್ಕಿನ-ಫಾಸೊ | ೬೧.೨ | ೯.೮ |
| ೬. ಮಡಗಾಸ್ಕರ್ | ೬೦.೨ | ೯.೨ |
| ೭. ಹೊಂಡುರಾಸ್ | ೪೦.೫ | ೨೪.೨ |
| ೮. ಗ್ವಾಟೆಮಾಲ | ೩೯.೮ | ೧೫.೦ |
| ೯. ಮೊಜಾಂಬಿಕ್ | ೩೭.೯ | ೯.೮ |
| ೧೦. ಜಿಂಬಾಬ್ವೆ | ೩೬.೬ | ೧೪.೭ |
| ೧೧. ಪಾಕಿಸ್ತಾನ | ೩೧.೦ | ೮.೮ |
| ೧೨. ಕೆನ್ಯಾ | ೨೬.೫ | ೧೬.೧ |
| ೧೩. ಸೆನೆಗಲ್ | ೨೬.೩ | ೧೯.೦ |
| ೧೪. ಎಲ್ ಸಾಲ್ವೊಡಾರ್ | ೨೫.೩ | ೧೮.೩ |

ಆದರೆ ಇದು ಮತ್ತಷ್ಟು ಪರಿಶೀಲನಾರ್ಹ. ಬಡತನ ಹೆಚ್ಚಿರುವ ದೇಶಗಳನ್ನು ತೆಗೆದುಕೊಂಡಾಗ ಅವುಗಳಲ್ಲಿ ಹೆಚ್ಚಿನವು ಸರಾಸರಿಗಿಂತ ಹೆಚ್ಚು ವ್ಯಾಪಾರ ಹೊಂದಿರುವುದನ್ನು ಕಾಣುತ್ತೇವೆ. ಪಟ್ಟಿ-೩ ಇದನ್ನು ಸ್ಪಷ್ಟಪಡಿಸುತ್ತದೆ.

ಎಲ್ಲ ದೇಶಗಳನ್ನೂ ಒಟ್ಟಿಗೆ ತೆಗೆದುಕೊಂಡಾಗ ಬಡತನ ಹಾಗೂ ಅಂತಾರಾಷ್ಟ್ರೀಯ ವ್ಯಾಪಾರ ಪ್ರಮಾಣಗಳ ನಡುವಿನ ಅನ್ಯೋನ್ಯ ಸಂಬಂಧದಲ್ಲಿ ಋಣಾತ್ಮಕತೆ ಕಂಡು ಬರುತ್ತದೆ, ಏಕೆಂದರೆ ಅವುಗಳಲ್ಲಿ ಉನ್ನತ-ಆದಾಯ ದೇಶಗಳೂ ಸೇರಿರುತ್ತವೆ. ಈ ದೇಶಗಳು ಬಹುಮಟ್ಟಿಗೆ ಬಹುರ್ಮುಖಿಯಾಗಿದ್ದು ಉನ್ನತ ಅಂತಾರಾಷ್ಟ್ರೀಯ ವ್ಯಾಪಾರ ಹಾಗೂ ಕಡಿಮೆ ಬಡತನದಿಂದ ಕೂಡಿರುತ್ತವೆ. ಅಂತಾರಾಷ್ಟ್ರೀಯ ವ್ಯಾಪಾರವು ಬಡತನವನ್ನು ಹೋಗಲಾಡಿಸುತ್ತದೆ ಎಂದು ಅವುಗಳ ನಡುವಿನ ಅನ್ಯೋನ್ಯ ಸಂಬಂಧ ಸಾಧಿಸಲಾರದೆ ಹೋದರೆ, ಅಂತಾರಾಷ್ಟ್ರೀಯ ವ್ಯಾಪಾರವು ಬಡತನವನ್ನು ಉಲ್ಬಣಗೊಳಿಸುತ್ತದೆ ಎಂದೂ ಮೇಲಿನ ಪಟ್ಟಿ-೩ ಸಾಧಿಸಲಾರದು; ಏಕೆಂದರೆ, ಕಡಿಮೆ ಅಂತಾರಾಷ್ಟ್ರೀಯ ವ್ಯಾಪಾರವುಳ್ಳ ಇಥಿಯೋಪಿಯಾ ಮತ್ತು ದಕ್ಷಿಣ ಏಷ್ಯ ದೇಶಗಳಲ್ಲಿನ ಬಡತನಕ್ಕೆ ಅದು ಕಾರಣ ನೀಡದು. ವ್ಯಾಪಾರ ಷರತ್ತುಗಳು ಪ್ರತಿಕೂಲವಾಗಿದ್ದಲ್ಲಿ ರಫ್ತು ಕೈಗಾರಿಕೆಗಳು ಸಾಕಷ್ಟು ನೌಕರಿ ಹಾಗೂ ಬಡಜನರಿಗೆ ಆದಾಯ ಉಂಟುಮಾಡಿಕೊಡದಿದ್ದಲ್ಲಿ ಅಥವಾ ಅವು ತುಂಬ ಕಡಿಮೆ ವರಮಾನದ ನೌಕರಿ ಒದಗಿಸಿ ವ್ಯಾಪಾರದ ಲಾಭಗಳನ್ನೆಲ್ಲ ಶ್ರೀಮಂತರೇ ದೋಚುವಂತೆ ಮಾಡಿದ್ದಲ್ಲಿ, ಅಂತಾರಾಷ್ಟ್ರೀಯ ವ್ಯಾಪಾರ ಉನ್ನತಮಟ್ಟದಲ್ಲಿದ್ದರೂ ಅದು ಬಡತನವನ್ನು ಉಲ್ಬಣಗೊಳಿಸುತ್ತದಷ್ಟೆ ಎಂದು ಪಟ್ಟಿ -೩ಎ ತೋರಿಸಿಕೊಡುತ್ತದೆ. ಆದ್ದರಿಂದ ನಿಜವಾದ ಪರಿಣಾಮ ತಿಳಿಯಲು ಬಿಡಿ ದೇಶದ ಅಧ್ಯಯನ ಅವಶ್ಯ.

**ಪಟ್ಟಿ - ೩ ಬಿ. ಹೆಚ್ಚು ಬಡತನ, ಕಮ್ಮಿ ವ್ಯಾಪಾರ ಇರುವ ದೇಶಗಳು**

| ದೇಶ | ಬಡತನ | ವ್ಯಾಪಾರ |
|---|---|---|
| ೧. ಭಾರತ | ೪೪.೨ | ೩.೬ |
| ೨. ನೇಪಾಳ | ೩೭.೭ | ೬.೨ |
| ೩. ಉಗಾಂಡ | ೩೬.೭ | ೭.೪ |
| ೪. ಇಥಿಯೋಪಿಯ | ೩೧.೩ | ೫.೨ |
| ೫. ಬಾಂಗ್ಲಾದೇಶ | ೨೯.೧ | ೫.೬ |

ಕಡಿಮೆ ಬಡತನ (ಶೇ. ೬ಕ್ಕೂ ಕಡಿಮೆ) ಹಾಗೂ ಜಿಡಿಪಿಗೆ ಹೋಲಿಸಿದಂತೆ ಅಲ್ಪ ಅಂತಾರಾಷ್ಟ್ರೀಯ ವ್ಯಾಪಾರ ಹೊಂದಿರುವ ದೇಶಗಳೂ ಅಭಿವೃದ್ಧಿಶೀಲ ದೇಶಗಳ ನಡುವೆ ಇವೆ. ಅವು: ಬೇಲರೂಸ್, ಬ್ರೆಜಿಲ್, ಕಜಾಖಸ್ತಾನ ಹಾಗೂ ಉಕ್ರೈನ್. ಆದರೆ ಕಡಿಮೆ ಅಥವಾ ಶೂನ್ಯ ಬಡತನ ಹಾಗೂ ಉನ್ನತ ಅಂತಾರಾಷ್ಟ್ರೀಯ ವ್ಯಾಪಾರವುಳ್ಳ ದೇಶಗಳ ಸಂಖ್ಯೆಯೇ ಅಧಿಕ. ಅವು ಉನ್ನತ ಆದಾಯ ಅಥವಾ ಮೇಲು-ಮಧ್ಯಮ ಆದಾಯದ ದೇಶಗಳು.

ಇನ್ನು ಬಡತನ ಹಾಗೂ ಬಹಿರ್ಮುಖ ಆರ್ಥಿಕ ನೀತಿ ಇಲ್ಲವೆ, ಜಾಗತೀಕರಣಗಳ ನಡುವಿನ ಸಂಬಂಧ ಏನು ಅನ್ನುವುದನ್ನು ಗಮನಿಸುವುದು ಸ್ವಾರಸ್ಯಕರ. ಶ್ರೀಮಂತ ದೇಶಗಳನ್ನೂ ಒಳಗೊಂಡಂತೆ ಎಲ್ಲ ದೇಶಗಳನ್ನೂ ಒಟ್ಟಿಗೇ ಪರಿಗಣಿಸಿದಾಗ, ಬಡತನ-ಜಾಗತೀಕರಣಗಳ ನಡುವಿನ ಅನ್ಯೋನ್ಯ ಸಂಬಂಧವು ಬಡತನ ಅಂತಾರಾಷ್ಟ್ರೀಯ

ವ್ಯಾಪಾರಗಳ ನಡುವಿನ (ನಾವು ಮೇಲೆ ಕಂಡು ಕೊಂಡಂಥ) ಸಂಬಂಧದಂತೆಯೇ ಇರುತ್ತದೆ. ಖಾಸಗಿ ಬಂಡವಾಳವು ಕಡಿಮೆ ಬಡತನ ಹಾಗೂ ಉನ್ನತ ಆದಾಯ ಗಳಿರುವ ದೇಶಗಳಿಗಷ್ಟೆ ಹೆಚ್ಚಾಗಿ ಹರಿದುಹೋಗುತ್ತದೆ. ಹಾಗಾಗಿ ಬಡತನ ನಿರ್ಮೂಲನದಲ್ಲಿ ಅದರ ಪಾತ್ರ ನಿಕೃಷ್ಟ ಎಂದೇ ಅದು ಸೂಚಿಸುತ್ತದೆ.

ಈ ಅನ್ಯೋನ್ಯ ಸಂಬಂಧಗಳನ್ನು ಪುನರ್ ತನಿಖೆ ಮಾಡಲು ತಲಾ ಆದಾಯ ಅಮೆರಿಕದ ೧೦,೦೦೦ ಡಾಲರುಗಳಿಗೂ ಹೆಚ್ಚಿರುವಂಥ ಉನ್ನತ ಆದಾಯದ ದೇಶಗಳನ್ನು ಹೊರಗಿರಿಸಿ ಅಧ್ಯಯನ ನಡೆಸಲಾಯಿತು. ೧೯೮೦ರ ದಶಕದ ಮೊದಲರ್ಧದಲ್ಲಿದ್ದ ಬಡತನ ಪ್ರಮಾಣ ಹಾಗೂ ೧೯೯೮ರಲ್ಲಿ ಬಹಿರ್ಮುಖ ನೀತಿಯ ಮೂರು ಸೂಚ್ಯಂಕಗಳಲ್ಲಿ ಒಂದೊಂದರ ಪ್ರಮಾಣ – ಇವುಗಳ ನಡುವಿನ ಅನ್ಯೋನ್ಯ ಸಂಬಂಧ ಸಂಖ್ಯಾಶಾಸ್ತ್ರ ರೀತ್ಯಾ ಎಷ್ಟು ಮಾತ್ರವೂ ಮಹತ್ವದ್ದಲ್ಲ ಎಂದೇ ಈ ಅಧ್ಯಯನದಿಂದ ಕಂಡುಬಂದಿತು. ಉನ್ನತ ಆದಾಯದ ದೇಶಗಳನ್ನು ವೀಕ್ಷಣೆಯಿಂದ ಹೊರತುಪಡಿಸಿದಾಗಲಷ್ಟೆ ಬಹಿರ್ಮುಖ ನೀತಿಯ ಮೂರು ಅಂಶಗಳಲ್ಲಿ – ಅಂತಾರಾಷ್ಟ್ರೀಯ ವ್ಯಾಪಾರ, ಸಮಗ್ರ ಖಾಸಗಿ ಬಂಡವಾಳ ಹರಿವು ಹಾಗೂ ಸಮಗ್ರ ವಿದೇಶೀ ನೇರ ಹೂಡಿಕೆ (ಇವೆಲ್ಲವೂ ಜಿಡಿಪಿಗೆ ಸಂಬಂಧಿಸಿದಂತೆ)ಗಳಲ್ಲಿ – ಯಾವುದೊಂದೂ ಬಡತನ ಪ್ರಮಾಣದ ಮೇಲೆ ಅದನ್ನು ಹೆಚ್ಚಿಸುವಂತೆ/ಕಡಿಮೆ ಮಾಡುವಂತೆ ಯಾವುದೇ ಗಮನಾರ್ಹ ರೀತಿಯಲ್ಲಿ ಪ್ರಭಾವ ಬೀರುವುದಿಲ್ಲವೆಂದೇ ಕಂಡುಬಂದಿತು.

ವಿಶ್ವವ್ಯಾಪಾರದಲ್ಲಿ ಯಶಸ್ಸು ಸಾಧಿಸಿರುವಂತಹ ದೇಶಗಳೊಂದಿಗೆ ಹೋಲಿಸಿದಾಗ ಭಾರತದ ಸ್ಥಿತಿಗತಿಗಳೇನು ? ಕೆಳಗೆ ನೀಡಿರುವ ಪಟ್ಟಿ - ೪ ಇದನ್ನು ಸ್ಪಷ್ಟಪಡಿಸುತ್ತದೆ. ಇದರಲ್ಲಿ ಭಾರತದೊಂದಿಗೆ ಪ್ರಾರಂಭಿಸಿ ಈ ದೇಶಗಳನ್ನು ಅವುಗಳ ತಲಾ ಆದಾಯದ ಏರುಗತಿಗೆ ಅನುಗುಣವಾಗಿ ಪಟ್ಟಿ ಮಾಡಲಾಗಿದೆ. ಇದು ಬಡತನದ ಇಳಿಗತಿಗನುಗುಣವಾಗಿಯೂ ಇದೆ. ಚೀಣಾವು ತನ್ನ ಹಾಗೂ ಮುಂದುವರಿದ ರಾಷ್ಟ್ರಗಳ ನಡುವಿನ ತಲಾ ಆದಾಯದ ಅಂತರವನ್ನು ತಗ್ಗಿಸುವುದರಲ್ಲಿ ಭಾರತಕ್ಕಿಂತ ತುಂಬ ಮುಂದಿದೆ. ಇದನ್ನು ಆ ದೇಶ ಉನ್ನತ ಬೆಳವಣಿಗೆ ದರಗಳ ಮೂಲಕವೂ ಹೆಚ್ಚುಹೆಚ್ಚಿನ ಬಹಿರ್ಮುಖ ಆರ್ಥಿಕ ನೀತಿಯ ಮೂಲಕವೂ ಸಾಧಿಸಿದೆ. ಇದು ಅದರ ಬಡತನ ಮಟ್ಟವನ್ನೂ ಗಣನೀಯವಾಗಿ ತಗ್ಗಿಸಿದೆ. ಈ ನಿಟ್ಟಿನಲ್ಲಿ ದಕ್ಷಿಣ ಕೊರಿಯ ಚೀಣಕ್ಕಿಂತಲೂ ತುಂಬ ಮುಂದಿದೆ. ಅದು ಬಹಿರ್ಮುಖ ಆರ್ಥಿಕ ನೀತಿಯ ಮೂಲಕ ತನ್ನ ದೇಶದ ಬಡತನವನ್ನು ಸಂಪೂರ್ಣವಾಗಿ ತೊಡೆದು ಹಾಕಿದೆ. ಜಪಾನ್ ಹಾಗೂ ಅಮೆರಿಕಗಳಂತೂ ಈ ನಿಟ್ಟಿನಲ್ಲಿ ಯಶಸ್ಸು ಸಾಧಿಸಿದ ಜ್ವಲಂತ ನಿದರ್ಶನಗಳಾಗಿವೆ.

ಹೀಗೆ ಅನುಭವಾತ್ಮಕ ದೃಶ್ಯ ಸಂಕೀರ್ಣ ವಾದುದಾಗಿದೆ. ಕ್ರೋಡೀಕರಿಸಿ ಹೀಗೆ ಹೇಳಬಹುದಾಗಿದೆ: ಭಾರತವು ಸ್ವಾತಂತ್ರ್ಯಾನಂತರದ ಅರ್ಧ ಶತಮಾನ ಕಾಲದಲ್ಲಿ ತನ್ನ ಅಂತಾರಾಷ್ಟ್ರೀಯ ವ್ಯಾಪಾರವನ್ನು ಗಣನೀಯವಾಗಿ ಹೆಚ್ಚಿಸಿಕೊಂಡಿದೆ. ಇದರಿಂದ ದೇಶದ ಬೆಳವಣಿಗೆಯ ದರಗಳೂ ಹೆಚ್ಚಿವೆ. ಆಮದಿಗೆ ಸಂಬಂಧಿಸಿದಂತೆ ರಫ್ತಿನ ಪ್ರಮಾಣ ಹೆಚ್ಚಿದೆ. ಬಡತನ ಕುಗ್ಗಿದೆ. ಆದರೂ ೧೯೮೦ರ ದಶಕದಲ್ಲಿ ಅಂತಾರಾಷ್ಟ್ರೀಯ ವ್ಯಾಪಾರ ಪ್ರಮಾಣ ಹೆಚ್ಚಿದರೂ ಬಡತನದ ಇಳಿತ ಮಾತ್ರ ಕಡಿಮೆಯೇ ಆಗಿದ್ದಿತು. ದೇಶ-ದೇಶಗಳ ನಡುವೆ ಹೋಲಿಸಿ ನೋಡಿದಾಗ, ತಲಾ ಆದಾಯದ ಮಟ್ಟ ಹೆಚ್ಚಿದಷ್ಟೂ ಬಹಿರ್ಮುಖ ಆರ್ಥಿಕ ನೀತಿಯೂ (ಅದರೆಲ್ಲ ಮೂರು ಅಂಶಗಳಲ್ಲಿ – ಅಂತಾರಾಷ್ಟ್ರೀಯ ವ್ಯಾಪಾರ ಪ್ರಮಾಣ, ಸಮಗ್ರ ಖಾಸಗಿ ಬಂಡವಾಳ ಹರಿವು ಹಾಗೂ ಸಮಗ್ರ ವಿದೇಶೀ ನೇರ ಹೂಡಿಕೆ (ಎಫ್‌ಡಿಐ), ಈ ಮೂರು ಅಂಶಗಳಲ್ಲಿ) ಹೆಚ್ಚಾಗಿರುವುದು ಕಂಡುಬರುತ್ತದೆ. ಆದರೂ ತಲಾ ಜಿಎನ್‌ಪಿ (ಸಮಗ್ರ ಅಂತರ್ದೇಶೀಯ ಉತ್ಪನ್ನ) ಮಟ್ಟ, ಜಿಎನ್‌ಪಿಯ ಬೆಳವಣಿಗೆಗೂ ಮೀರಿ ವ್ಯಾಪಾರದ ಹೆಚ್ಚಳ – ಇವುಗಳ ನಡುವಿನ ಅನ್ಯೋನ್ಯತೆ ಅಂಕಿ ಅಂಶ ರೀತ್ಯಾ ಅಷ್ಟು ಗಮನಾರ್ಹವಾಗಿರಲಿಲ್ಲ. ಬಹಿರ್ಮುಖ ಆರ್ಥಿಕ ನೀತಿಯು ಪ್ರಧಾನವಾಗಿ ವಿಕಸಿತ ದೇಶಗಳ ಲಕ್ಷಣ ವಾಗಿದ್ದರೂ, ದಕ್ಷಿಣ ಕೊರಿಯ ಹಾಗೂ ಚೀಣಾ ದೇಶಗಳು ಬಹಿರ್ಮುಖ ಆರ್ಥಿಕ ನೀತಿಯನ್ನು ಹೆಚ್ಚು ಹೆಚ್ಚಾಗಿ ಆಚರಿಸುವ ಮೂಲಕ ಅಥವಾ ತಮ್ಮ ಆರ್ಥಿಕತೆಗಳನ್ನು ಬಾಹ್ಯ ಜಗತ್ತಿಗೆ ತೆರೆದಿರಿಸುವ ಮೂಲಕ ಉತ್ತಮ ಯಶಸ್ಸು ಸಾಧಿಸಿವೆ. ಆದರೂ ಬಹಿರ್ಮುಖ ಆರ್ಥಿಕ ನೀತಿಯು ಬೆಳವಣಿಗೆಯ ದರಗಳ ಉತ್ತೇಜನಕ್ಕೆ ಸಾಕಷ್ಟು ಪುರಾವೆ ಒದಗಿಸಿಲ್ಲ. ಏಕೆಂದರೆ ಬಂಡವಾಳದ ಹರಿವು ಹೆಚ್ಚಾಗಿ ವಿಕಸಿತ ದೇಶಗಳ ನಡುವೆಯೇ ಆಗಿದೆಯಷ್ಟೇ ಹೊರತು ವಿಕಾಸಶೀಲ ದೇಶಗಳಿಗೆ ಹರಿದು ಅವುಗಳ ಬೆಳವಣಿಗೆಗೆ ನೆರವಾಗಿಲ್ಲ. ಇದೇ ಕಾರಣಕ್ಕಾಗಿ ಬಹಿರ್ಮುಖ ಆರ್ಥಿಕ ನೀತಿಯು ವಿಕಾಸಶೀಲ ದೇಶಗಳಲ್ಲಿ ಬಡತನ

ನಿರ್ಮೂಲನಕ್ಕೂ ನೆರವಾಗಿಲ್ಲ. ಹೆಚ್ಚು ಬಡತನ - ಕಡಿಮೆ ವ್ಯಾಪಾರ ಹಾಗೂ ಕಡಿಮೆ ಬಡತನ - ಕಡಿಮೆ ವ್ಯಾಪಾರ ಇರುವ ದೇಶಗಳಿಗಿಂತ ಹೆಚ್ಚು ಬಡತನ - ಹೆಚ್ಚು ವ್ಯಾಪಾರ ಇರುವ ದೇಶಗಳ ಸಂಖ್ಯೆಯೇ ಅಧಿಕವಾಗಿದೆ. ಬಹಿರ್ಮುಖ ಆರ್ಥಿಕ ನೀತಿಯು ಬಡತನ ನಿರ್ಮೂಲನಕ್ಕೆ ನೆರವಾಗಿದೆ ಅನ್ನುವುದಕ್ಕೆ – ಶ್ರೀಮಂತ ದೇಶಗಳನ್ನು ಹೊರತುಪಡಿಸಿ – ಸಾಕ್ಷ್ಯಾಧಾರವಿಲ್ಲ. ಆದರೆ ದಕ್ಷಿಣ ಕೊರಿಯ, ಚೀಣಾ ಮತ್ತು ಭಾರತವೂ ಸಹ ಬಹಿರ್ಮುಖ ಆರ್ಥಿಕ ನೀತಿಯಿಂದ ಕಾಲಕ್ರಮೇಣ ಲಾಭಗಳಿಸಿವೆ ಎಂದಂತೂ ಹೇಳಬಹುದು.

ಬಂಡವಾಳವು ವಿಕಾಸಶೀಲ ದೇಶಗಳಿಗೆ ಹರಿದುಬಂದು ಅವುಗಳ ಅಡಿರಚನೆ ಹಾಗೂ ತಂತ್ರಜ್ಞಾನಗಳನ್ನು ಸುಧಾರಿಸಿದಾಗಲಷ್ಟೆ ಬಹಿರ್ಮುಖ ಆರ್ಥಿಕ ನೀತಿಯು ಅನುಕೂಲ ಪ್ರಭಾವ ಬೀರಬಲ್ಲುದು. ಮೇಲೆ ತಿಳಿಸಿದಂತೆ, ಭಾರತದ ಅನುಭವ ನಿರುತ್ಸಾಹದಾಯಕವಾಗೇನಿಲ್ಲ. ಆದರೂ ಪ್ರತಿಯೊಂದೂ ದೇಶವು ಬಹಿರ್ಮುಖ ಆರ್ಥಿಕ ನೀತಿಯನ್ನು ತನಗೆ ಹೆಚ್ಚು ಅನುಕೂಲವಾಗುವ ತನ್ನದೇ ಆದ ರೀತಿಯಲ್ಲಿ ಆಚರಣೆಗೆ ತರಬೇಕೆಂದೇ ಕಂಡುಬರುತ್ತದೆ.

ವಿಕಾಸಶೀಲ ದೇಶಗಳು ಹೆಚ್ಚು ಎಚ್ಚರಿಕೆ ವಹಿಸಿ, ವಿದೇಶೀ ನೇರ ಹೂಡಿಕೆಗೆ ನಿರಾಸಕ್ತಿ ತೋರದೆಯೇ ಬಂಡವಾಳದ ಸಟ್ಟಾತ್ಮಕ ಹರಿವನ್ನು ಕ್ರಮಬದ್ಧವನ್ನಾಗಿ ಮಾಡುವುದನ್ನು ಕಲಿಯಬೇಕು. ವಿಕಸಿತ ದೇಶಗಳೂ ತಮ್ಮ ಸರದಿಯಲ್ಲಿ ವಿಕಾಸಶೀಲ ದೇಶಗಳ ಬಗೆಗೆ ನ್ಯಾಯೋಚಿತವಾಗಿ ವರ್ತಿಸಬೇಕು, ಆ ದೇಶಗಳು ವಿಶ್ವ ವ್ಯಾಪಾರದಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸುವುದಕ್ಕೆ ಉತ್ತೇಜನ ನೀಡಬೇಕು. ವಿಕಸಿತ ದೇಶಗಳು ವಿಕಾಸಶೀಲ ದೇಶಗಳಿಂದ ಬರುತ್ತಿರುವ ಆಮದುಗಳನ್ನು ಪರಿಸರದ ಹಾಗೂ ಶ್ರಮಿಕ ಸ್ಥಿತಿಗತಿಗಳ ಹೆಸರಿನಲ್ಲಿ ನಿರ್ಬಂಧಗೊಳಿಸುವುದು ತೀರ ಅನುಚಿತ. ಈಗ ವಿಕಾಸಗೊಂಡಿರುವ ಈ ದೇಶಗಳೂ ತಮ್ಮ ಆರ್ಥಿಕ ಇತಿಹಾಸದ ಆರಂಭ ಘಟ್ಟಗಳಲ್ಲಿ ಈ ಎರಡೂ ಅಂಶಗಳನ್ನು – ಪರಿಸರ ಹಾಗೂ ಶ್ರಮಿಕ ಪರಿಸ್ಥಿತಿಗಳನ್ನು – ಸಂಪೂರ್ಣವಾಗಿ ನಿರ್ಲಕ್ಷಿಸಿಯೇ ಮುಂದೆ ಬಂದವೆಂಬುದನ್ನು ಮರೆಯಕೂಡದು. ವಿಕಾಸಶೀಲ ದೇಶಗಳಲ್ಲಿನ ಪರಿಸರದ ಹಾಗೂ ಶ್ರಮಿಕ ಪರಿಸ್ಥಿತಿಗಳ ಅಂಶಗಳನ್ನು ವ್ಯಾಪಾರದೊಂದಿಗೆ ಬೆರಕೆ ಮಾಡದೆ ಬೇರೆಯಾಗಿಯೇ ಪರಿಗಣಿಸಬೇಕು.

ಯಂತ್ರ ತಾಂತ್ರಿಕ ಮುನ್ನಡೆಯಂತೆ ಜಾಗತೀಕರಣವೂ ನಿಚ್ಚಳ ವರದಾನವೇನೂ ಅಲ್ಲ. ಕೆಲವರಿಗೆ ಅದು ನೆರವಾಗಬಹುದು, ಅನೇಕರಿಗೆ ಹಾನಿಯನ್ನೂ ಉಂಟುಮಾಡಬಹುದು. ಹಾನಿಗೊಳಗಾದ ದೇಶಗಳ ಬಗೆಗೆ ಕಾಳಜಿ ವಹಿಸಬೇಕು. ಆದರೂ ಕಾಲಕ್ರಮೇಣ ಜಾಗತೀಕರಣವೂ ಯಂತ್ರ ತಾಂತ್ರಿಕ ಮುನ್ನಡೆಯಂತೆ ಅನೇಕರಿಗೆ ಅಥವಾ ಎಲ್ಲರಿಗೂ ಲಾಭದಾಯಕವಾಗಬಹುದು. ಎಲ್ಲಕ್ಕೂ ಮಿಗಿಲಾಗಿ ಅದು ವಿಶ್ವಶಾಂತಿ ಹಾಗೂ ಸಂಕ್ಷೇಮಕ್ಕೆ ಸಹಕಾರಿ.

**ಪಟ್ಟಿ - ೪ ಕೆಲವು ಆಸಕ್ತ ದೇಶಗಳೊಂದಿಗೆ ಹೋಲಿಸಿದಂತೆ ಭಾರತದ ಸ್ಥಾನಮಾನ**

| | ಭಾರತ | ಚೀಣಾ | ದಕ್ಷಿಣ ಕೊರಿಯ | ಜಪಾನ್ | ಅಮೆರಿಕ |
|---|---|---|---|---|---|
| **೧. ಜಿಎನ್‌ಪಿ ತಲಾ ಪ್ರಮಾಣ. ಅಮೆರಿಕದ ಡಾಲರ್ ಲೆಕ್ಕದಲ್ಲಿ. ೧೯೯೮ರಲ್ಲಿ** | | | | | |
| | ೨,೦೬೧ | ೩,೦೫೧ | ೧೩,೨೮೬ | ೨೩,೫೯೨ | ೨೯,೨೪೦ |
| **೨. ಜಿಡಿಪಿ ವಾರ್ಷಿಕ ಬೆಳವಣಿಗೆ (ನೈಜ). ೧೯೯೦-೯೮ (%)** | | | | | |
| | ೬.೧ | ೧೧.೨ | ೬.೧ | ೧.೫ | ೩.೨ |
| **೩. ದಿನಕ್ಕೆ ತಲಾ ಅಮೆರಿಕದ ೧ ಡಾಲರ್ ಲೆಕ್ಕದಲ್ಲಿ (%)** ಬಡತನ ರೇಖೆಗೂ ಕೆಳಗಿರುವ ಜನ ಪ್ರಮಾಣ. ೧೯೯೦ ದಶಕದ ಪ್ರಥಮಾರ್ಧ. | | | | | |
| | ೪೪.೨ | ೧೮.೫ | ಅಲಭ್ಯ | ಬಹುಶಃ ೦,೦೦..... | |
| **೪. ಸರಕು ವ್ಯಾಪಾರ, ಜಿಡಿಪಿಯ ಶೇಕಡಾವಾರು.** | | | | | |
| ೧೯೮೮ | ೩.೩ | ೬.೩ | ೩೪.೮ | ೨೦.೪ | ೧೪.೫ |
| ೧೯೯೮ | ೩.೯ | ೮.೩ | ೩೫.೬ | ೨೧.೩ | ೧೯.೯ |
| **೫. ನೈಜ ಜಿಡಿಪಿ ಬೆಳವಣಿಗೆಯನ್ನು ಕಳೆದಂತೆ ನೈಜ ವ್ಯಾಪಾರದಲ್ಲಿ ಬೆಳವಣಿಗೆ.** ೧೯೮೮ರಿಂದ ೧೯೯೮ರವರೆಗೆ ಶೇಕಡಾವಾರು | | | | | |
| | ೪.೫೩.೫ | ೫.೩ | ೩.೫ | ೫.೩ | |
| **೬. ಜಿಡಿಪಿಯ ಶೇಕಡಾವಾರು ಲೆಕ್ಕದಲ್ಲಿ ಸಮಗ್ರ ಖಾಸಗಿ ಬಂಡವಾಳದ ಹರಿವು.** | | | | | |
| ೧೯೮೮ | ೦.೨ | ೦.೬ | ೩.೩ | ೭.೪ | ೬.೯ |
| ೧೯೯೮ | ೦.೯ | ೨.೩ | ೧೩.೨ | ೨೦.೭ | ೧೦.೩ |

ಆಕರ : ವಿಶ್ವಬ್ಯಾಂಕ್ ಜಾಗತಿಕ ಬೆಳವಣಿಗೆ ಸೂಚ್ಯಂಕಗಳು, ೨೦೦೦, ವಾಷಿಂಗ್ಟನ್.

**ಪ್ರೊ॥ ಎಂ. ವಿ. ನಾಡಕರ್ಣಿ**
ಉಪಕುಲಪತಿ, ಗುಲಬರ್ಗಾ ವಿಶ್ವವಿದ್ಯಾಲಯ

## ಬದುಕು

ಸುಖದ ಕನಸು ಕಟ್ಟುತ್ತಿರಬೇಕು; ಒಡೆದೊಗುತ್ತಿರಬೇಕು.
ಜಟಕಾ ಬಂಡಿ ಅಲ್ಲ ಜೀವ ಎಳೆದು ಬಿಡುವ ಬಂಡಿ
ನೆನಪುಗಳಾಳದಲಿ ಸಾವು ಬಂದಿತೆ; ನಾಳೆ ಎಂಬುದ ಕಾಯದೆ,
ಮುಗಿಲಲ್ಲಿ ಕಪ್ಪಾಗಿ ಮೊಳೆತು ಘಟಿಸಿ ಫಲ ನೀಡಿತು; ದಕ್ಕಿತು.
ನೆಲದ ಸಿರಿಗೆ ಬಣ್ಣ ಮಣ್ಣೊಳಗೆ ಗುಬ್ಬಚ್ಚಿ ಎದೆ ಬಡಿತ
ಹೆಣ್ಣು ಗಂಡಿನ ಆಪ್ತತೆ; ವಸಂತದ ಆಸೆ; ಋತುಗಾನಕ್ಕೆ ತೆರೆದು
ತೊಡೆ ಕಣಿವೆಗಳಲ್ಲಿ ಕಾಮದ ಹೆಡೆಯಾಡಿದಾಗ: ಮನ ಹೂವಾಸನೆ
ಮುಖಾಮುಖಿ ಕೊನೆ ಇರದ ಸಂಘರ್ಷ ಹೊರಗೆ ಒಳಗೆ
ಬಿಡಿಸುತ್ತಾರೆ ಸಿಕ್ಕು; ಮತ್ತೆ ಇನ್ನಷ್ಟು ಹೊಕ್ಕು ಒಳಗೆ
ಹೊರುವುದೇ ಹೇಗೆ ಆಳಪಾತಾಳದ ಭಾರ
ಮೌನದ ಕಣಿವೆ ದಾಟಿ ಆರವತ್ತರ ಸಂಜೆಗೆ ಎದೆಯ ಮೀಟಿ
ಮುತ್ತುಗದ ಹೂವ ಮುತ್ತು ಪೋಣಿಸಿ ಎಣಿಸಿ ಜಡೆಯಲ್ಲಿರಿಸಿ



ಕರುಳು ಒಡಲಿನ ಜೀವ ಭಾವ ಮೆರವಣಿಗೆ
ಜೀವನ ಹರಕು ಮುರುಕು ತರಕಾರಿ ಹಚ್ಚಿದ ಹಾಗೆ
ತೋಳಿಗೆ ಬಲ ನೀಡಿದ್ದೊ: ಪಡೆದಿದ್ದೊ ; ತಿಳಿಯದೆ ಮಾಡಿದ್ದೊ
ಈ ಮೂರ್ಖ ಆಕಾಶ ನನ್ನಾಚೆ ಕಾಲದ್ದು ಕೂಡಿಸಿದ ಬಸಿರು
ಎಲ್ಲೋ ಸಾಂತ್ವನ ಕಂಪನ ಜಿನುಗುತ್ತಿದೆ ರಕ್ತವಾಗಿ ಕುಡಿವ ಬಸಿರಿಗೆ
ಈ ನೆಲಕೆ ಗರ್ಭಪಾತದ ಹಾಡು ಬೆಟ್ಟಗುಡ್ಡಗಳ ಬಡಿದಾಟ
ಮೌನ ವ್ಯರ್ಥ ಅವಕಾಶಗಳಲಿ ಉರಿವ ಕೋಮಲ ಮೈ
ತಿದಿಯೂದುವುದು ದಿನದಿನವೂ; ಎದೆ ಎದೆಗೆ: ಎದೆ ಬೆಸುಗೆ ಕಾಲ ಕಾಲಕ್ಕೆ
ಚಿಂತೆಯ ಸಂತೆ; ಸಂತೋಷವಿಲ್ಲ. ಮುಸುಕು ಹಾಕಿದ ಮೊಕ
ಕೂಗಲು ನಾಚಿ ಕೂತಿವೆ ಬಾಡಿದ ಹೂವ ಮುಡಿದ
ಸತ್ತು ಪರ ಸೇರಿದವರು: ಬದುಕಿ ಉಸಿರಾಡದವರು
ಇಡುವ ಪ್ರತಿ ಹೆಜ್ಜೆಗೆ ಪ್ರತಿ ಉಸಿರಿದೆ; ಬದುಕು ಅರ್ಥವಾಗುತ್ತದೆ
ಅನುಭವ ಹೊಸದು, ಶೂನ್ಯ ಕಳೆಯುತ್ತಾ ವಯಸ್ಸು ಕೂಡುತ್ತಾ...

**ಗಂಗಾರಾಂ ಚಂಡಾಳ**
ಎಲ್-೧೬, ೩ನೇ ಹಂತ, ಕುವೆಂಪುನಗರ, ಮೈಸೂರು -೫೭೦ ೦೨೩



# ಕನ್ನಡ ಪುಸ್ತಕ ಪ್ರಾಧಿಕಾರ

ಹಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೬೬೭೪೧೩೮, ಫ್ಯಾಕ್ಸ್ : ೬೬೦೩೮೧೨

## ಪ್ರಾಧಿಕಾರದ ಕೆಲವು ಪ್ರಕಟಣೆಗಳು

| ಜನಪ್ರಿಯ ಪುಸ್ತಕ ಮಾಲೆ | ಬೆಲೆ |
|---|---|
| ೧. ಅಪೂರ್ಣ ವರ್ತಮಾನ ಕಾಲ | ೧೪.೦೦ |
| ೨. ಆನ್ವಯಿಕ ಜಾನಪದ | ೧೬.೦೦ |
| ೩. ಭಾರತೀಯ ಚಿತ್ರಕಲೆ | ೪೦.೦೦ |
| ೪. ಕನ್ನಡ-ಕನ್ನಡಿಗ-ಕರ್ನಾಟಕ | ೪೦.೦೦ |
| ೫. ಆಯ್ದ ಕವಿತೆಗಳು(ಡಾ. ಸಿದ್ದಲಿಂಗಯ್ಯ) | ೨೦.೦೦ |
| ೬. ಸಾಹಿತ್ಯ ಮತ್ತು ರಾಜಕಾರಣ | ೫೫.೦೦ |
| ೭. ಹೆತ್ತೊಡಲು | ೫೦.೦೦ |
| ೮. ಹೊಸತು-ಹೊಸತು | ೧೧೦.೦೦ |
| ೯. ಕನ್ನಡ ಸಿನಿಮಾ ಇತಿಹಾಸ ಪುಟಗಳಲ್ಲಿ | ೨೭೫.೦೦ |
| ೧೦. ಭುಜಂಗಯ್ಯನ ದಶಾವತಾರಗಳು | ೮೫.೦೦ |
| ೧೧. ಕರ್ಣಾಟ ಭಾರತ ಕಥಾಮಂಜರಿ | ೯೦.೦೦ |
| ೧೨. ಸಟೀಕಿನ ಶಬ್ದಮಂಜರಿ ಕೋಶ | ೧೧೦.೦೦ |
| ೧೩. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ | ೭೦.೦೦ |
| ೧೪. ಶ್ರೀವತ್ಸ ನಿಘಂಟು | ೭೦.೦೦ |
| ೧೫. ಪ್ರೊ॥ ಬಿ. ಕೃಷ್ಣಪ್ಪನವರ ಚಿಂತನಗಳು ಮತ್ತು ಬರಹಗಳು | ೫೦.೦೦ |
| ೧೬. ಬೆಳ್ದಿಂಗಪ್ಪನ ಪೂಜೆ | ೧೮.೦೦ |
| ೧೭. ಕನ್ನಡ ಸಾಹಿತ್ಯ ಸಮೀಕ್ಷೆ | ೪೫.೦೦ |
| ೧೮. ಡಾ॥ ಶಂ. ಬಾ. ಜೋಶಿಯವರ ಸಮಗ್ರ ಸಂಪುಟಗಳು (೬ ಸಂಪುಟ) | ೭೫೦.೦೦ |
| ೧೯. ಕಾವ್ಯಾನಂದರ ಆಯ್ದ ಕವಿತೆಗಳು | ೬೦.೦೦ |
| ೨೦. ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ | ೭೦.೦೦ |
| ೨೧. ದೊಡ್ಡರಂಗೇಗೌಡರ ಆಯ್ದ ಕವಿತೆಗಳು | ೬೦.೦೦ |
| ೨೨. ಹೊಸಗನ್ನಡ ಅರುಣೋದಯ | ೨೦೦.೦೦ |
| ೨೩. ಶಿವಪ್ರಕಾಶರ ಆಯ್ದ ಕವಿತೆಗಳು | ೬೦.೦೦ |
| ೨೪. ಪ್ರೊ॥ ಕೆ. ಎಸ್. ನಿಸಾರ್ ಅಹಮದ್ ಅವರ ಪ್ರಾತಿನಿಧಿಕ ಕವಿತೆಗಳು | ೧೦೦.೦೦ |
| ೨೫. ಡಾ॥ ಎ. ವೆಂಕಟಸುಬ್ಬಯ್ಯನವರ ಸಂಶೋಧನ ಲೇಖನಗಳು | ೧೨೦.೦೦ |
| ೨೬. ವಚನ ಭಾರತ | ೭೦.೦೦ |
| **ಜಾಗತಿಕ ಚಿಂತಕರ ಮಾಲೆ** | |
| ೧. ಕೌಟಿಲ್ಯ | ೨೫.೦೦ |
| ೨. ಲೋಕ ಚಾರ್ವಾಕ | ೨೫.೦೦ |
| ೩. ಶ್ರೀ ಅರವಿಂದರು | ೨೫.೦೦ |
| ೪. ನಾರಾಯಣ ಗುರು | ೨೫.೦೦ |
| ೫. ಗುರುನಾನಕ್ | ೨೫.೦೦ |
| **ಪಂಪ ಪ್ರಶಸ್ತಿ ಮಾಲೆ** | |
| ೧. ಶ್ರೀ ರಾಮಾಯಣ ದರ್ಶನಂ | ೪೦.೦೦ |
| ೨. ಸುವರ್ಣಪುತ್ಥಳಿ | ೧೫.೦೦ |
| ೩. ಶ್ರೀ ಹರಿಚರಿತೆ | ೧೫.೦೦ |
| ೪. ಪಂಪನ ಸಮಸ್ತ ಭಾರತ ಕಥಾಮೃತ | ೧೫.೦೦ |

| ಮೂಲಭೂತ ಶೈಕ್ಷಣಿಕ ಮಾಲೆ | ಬೆಲೆ |
|---|---|
| ೧. ಸೌರಶಕ್ತಿ | ೨೬.೦೦ |
| ೨. ರತ್ನಗಳು | ೧೮.೦೦ |
| ೩. ಕುಟುಂಬ | ೧೨.೦೦ |
| ೪. ಜನಸಂಖ್ಯೆ : ಒಂದು ಅಧ್ಯಯನ | ೨೦.೦೦ |
| ೫. ಭಾರತದ ವ್ಯಾವಹಾರಿಕ ಕಾನೂನುಗಳ ಪರಿಚಯ | ೪೬.೦೦ |
| **ಮಕ್ಕಳ ಪುಸ್ತಕ ಮಾಲೆ** | |
| ೧. ಸಂತಮ್ಮಣ್ಣ | ೨೦೦.೦೦ |
| ೨. ಪಾತಾಳದಲ್ಲಿ ಪಾಪಚ್ಚಿ | ೩೫.೦೦ |
| ೩. ಗ್ರಿಂ ಸಹೋದರರ ಕಿನ್ನರ ಕಥೆಗಳು-೧,೨,೩ | ೨೧೦.೦೦ |
| **ವಿಜ್ಞಾನ ದೀಪಮಾಲೆ** | |
| ೧. ಗೆಲಿಲಿಯೊ | ೨೬.೦೦ |
| ೨. ರಾಬರ್ಟ್ ಕಾಕ್ | ೨೪.೦೦ |
| ೩. ಲೂಯಿ ಪಾಶ್ಚರ್ | ೨೪.೦೦ |
| ೪. ಸುಶ್ರುತ | ೪೫.೦೦ |
| ೫. ನೀಲ್ಸ್ ಬೋರ್ | ೬೦.೦೦ |
| **ನೊಬೆಲ್ ಪುರಸ್ಕೃತ ಮಾಲೆ** | |
| ೧. ಆಕ್ಟೇವಿಯಾ ಪಾಜ್ | ೨೬.೦೦ |
| ೨. ಐಸಾಕ್ ಬಾಶವಿಕ್ ಸಿಂಗರ್ | ೩೬.೦೦ |
| ೩. ಮಾರಿಸ್ ಮೇತರ್‌ಲಿಂಕ್ | ೩೧.೦೦ |
| ೪. ಹರ್ಮನ್ ಹೇಸ್ | ೩೨.೦೦ |
| ೫. ಗೇಬ್ರಿಯಲ್ ಗಾರ್ಸಿಯಾ ಮಾರ್ಕ್ವಿಜ್ | ೩೬.೦೦ |
| ೬. ಬೋರಿಸ್ ಪಾಸ್ತರ್‌ನಾಕ್ | ೩೪.೦೦ |
| **ಜಾನಪದ ಮಾಲೆ** | |
| ೧. ಜಾನಪದ ಸಾಂಸ್ಕೃತಿಕ ಆಯಾಮಗಳು | ೬೦.೦೦ |
| ೨. ಮಲೆನಾಡ ವೈಷ್ಣವ ಒಕ್ಕಲಿಗರ ಸಂಸ್ಕೃತಿ | ೧೦೦.೦೦ |
| ೩. ಜಾನಪದ ಹಾಲುಮತ ಮಹಾಕಾವ್ಯ | ೨೨೦.೦೦ |
| ೪. ಉಜ್ಜನಿ ಚೌಡಮ್ಮ | ೭೦.೦೦ |
| ೫. ಜಾನಪದ ಕೈಪಿಡಿ | ೧೦೦.೦೦ |
| **ಗ್ರಾಮ ಸಂಸ್ಕೃತಿ ಮಾಲೆ** | |
| ೧. ಗ್ರಾಮೀಣ ಉಡುಗೆ ತೊಡುಗೆಗಳು | ೬೦.೦೦ |
| ೨. ಕೊಪ್ಪಳ ಜಿಲ್ಲೆಯ ಜಾತ್ರೆಗಳು | ೪೦.೦೦ |
| ೩. ಮಂಡ್ಯ ಜಿಲ್ಲೆಯ ಜಾತ್ರೆಗಳು | ೪೫.೦೦ |
| **ಅನುವಾದ ಮಾಲೆ** | |
| ೧. ಸಂತಾನಿಕ (ಎಮಿಲಿ ಡಿಕಿನ್‌ಸನ್ ಅವರ ನೂರ ಹದಿನಾಲ್ಕು ಕವನಗಳು) | ೨೫.೦೦ |
| ೨. ಬರ್ಕ್‌ವೈಟ್ ಕಂಡ ಭಾರತ | ೫೦.೦೦ |
| ೩. ಡಾ॥ ವಿ. ಆರ್. ನಾರ್ಲ ಅವರ ವೈಚಾರಿಕ ಬರಹಗಳು | ೨೫.೦೦ |
| ೪. ಮೈಸೂರಿನ ಚಾಮುಂಡೇಶ್ವರಿ ದೇವಸ್ಥಾನ | ೨೫.೦೦ |
| ೫. ಕಲೇವಾಲ-ಜನಪದ ಮಹಾಕಾವ್ಯ | ೭೦-೦೦ |
| **ಜ್ಞಾನಪೀಠ ಪ್ರಶಸ್ತಿ ಮಾಲೆ** | |
| ೧. ವಿಶ್ವಂಭರಾ | ೪೫-೦೦ |

*ಕೊಳ್ಳುವವರಿಗೆ ಸೂಚನೆ*

ರಿಯಾಯಿತಿ : ಪಂಪ ಪ್ರಶಸ್ತಿ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಕಗಳಿಗೆ ರಿಯಾಯಿತಿ ಇರುವುದಿಲ್ಲ. ವಚನ ಭಾರತ, ಕರ್ಣಾಟ ಭಾರತ ಕಂಥಾಮಂಜರಿ - ಕೃತಿಗಳಿಗೆ ೧೦% ರಿಯಾಯಿತಿ ಇರುತ್ತದೆ. ಶಂಬಾ ಜೋಶಿಯವರ ಸಮಗ್ರ ಸಂಪುಟಗಳಿಗೆ (೬ ಸಂಪುಟ) ೨೦%. ಉಳಿದೆಲ್ಲ ಪ್ರಕಟಣೆಗಳಿಗೆ ೫೦% ರಿಯಾಯಿತಿ ಇರುತ್ತದೆ. ಈ ರಿಯಾಯಿತಿ ಆಗಸ್ಟ್ ೨೦೦೨ರವರೆಗೆ ಮಾತ್ರ.

ಶ್ರೀ ಬಲವಂತರಾವ್ ಪಾಟೀಲ್
ಆಡಳಿತಾಧಿಕಾರಿಗಳು

ಪ್ರೊ॥ ಮಲ್ಲೇಪುರಂ ಜಿ. ವೆಂಕಟೇಶ
ಅಧ್ಯಕ್ಷರು



# ಆತ್ಮಹತ್ಯೆಯ ಅಂತಾರಾಷ್ಟ್ರೀಯ ವೃತ್ತಾಂತ

ಕೆ. ಸತ್ಯನಾರಾಯಣ

*"..... To have lived and died as one had been born: unnecessary and unaccounted."*

*V. S. Naipaul*

**ಎ**ಪ್ಪತ್ತೆಂಟು ಆತ್ಮಹತ್ಯೆ ಮಾಡಿಕೊಳ್ಳುವ ವಯಸ್ಸಲ್ಲ ಅನ್ನುವುದು ಲೋಕವೆಲ್ಲ ಒಪ್ಪುವ ಮಾತು. ಆದರೂ ಮಂಡ್ಯದ ಚಿಕ್ಕ ಆನೆಕೆರೆ ಬೀದಿಯ ಕೊನೆ ಜಗುಲಿ ಮನೆಯಲ್ಲಿ ಕಪ್ಪಣ್ಣ ಇಲಿ ಪಾಷಾಣ ತಗೊಂಡೇ ಸತ್ತದ್ದು. ಸಾಯೋಕೆ ಮುಂಚೆ ಸಂಕಟ ತಡೀಲಾರದೆ ಮತ್ತೆ ಬದುಕಬೇಕು ಅಂತ ಆಸೆಯಾಗಿಬಿಟ್ಟರೆ ಅನ್ನುವ ಭಯಕ್ಕೆ ತನ್ನ ಕೈ ಕಾಲನ್ನು ತಾನೇ ಮಂಚದ ಕಾಲಿಗೆ ಕಟ್ಟಿಕೊಂಡುಬಿಟ್ಟಿದ್ದ. ಜೊತೆಗೆ ಮೋಡಿ ಅಕ್ಷರದಲ್ಲಿ ಒಂದು ನೋಟ್ ಬೇರೆ.

ನನ್ನ ಸಾವಿಗೆ ನಾನೇ ಕಾರಣ. ಬೇರೆ ಯಾರೂ ಅಲ್ಲ. ಮೂವತ್ತು ವರ್ಷದ ಹಿಂದೆ ನನ್ನ ಕೊನೆ ತಮ್ಮ ಕಿಟ್ಟಣ್ಣ ಆತ್ಮಹತ್ಯೆ ಮಾಡಿಕೊಳ್ಳೋಕೆ ನಾವೆಲ್ಲ ಅಣ್ಣ ತಮ್ಮಂದಿರು ಕೂಡ ಕಾರಣ. ಹಿರೀ ಮಗನಾಗಿ ನಾನೇ ಹೆಚ್ಚು ಕಾರಣ. ಅವನು ಬದುಕಿದ್ದಾಗ ಆಗಾಗ್ಗೆ ತಗೊಂಡಿದ್ದ ಕೈಸಾಲ ಎರಡೂವರೆ ಸಾವಿರಕ್ಕೂ ಹೆಚ್ಚು. ಕಿಟ್ಟಣ್ಣ ಕೇಳಿದರೂ ಕೊಟ್ಟಿರಲಿಲ್ಲ. ಸತ್ತ ಮೇಲೂ ನಾನಾಗಿ ನಾನೇ ವಾಪಸ್ ಕೊಡಲಿಲ್ಲ. ಎಷ್ಟೋ ಜನ ನೆಂಟರಿಷ್ಟರು ಹೀಗೇ ಮಾಡಿರ ಬಹುದು. ನಾನು ಹಾಗೆ ಮಾಡಬಾರದಿತ್ತು. ದೇವರು ತಕ್ಕ ಶಿಕ್ಷೆ ಕೊಟ್ಟಿದ್ದಾನೆ. ಮಗಳು ಚಿಕ್ಕ ವಯಸ್ಸಿಗೆ ವಿಧವೆಯಾಗಿಬಿಟ್ಟಳು. ಬದುಕಿದ್ದಾಗಲೂ, ಸತ್ತ ಮೇಲೂ ನಾನು ಅವನಿಗೆ ಅನ್ಯಾಯ ಮಾಡಿದೆ. ನನ್ನಂತವರು ಈ ಭೂಮಿ ಮೇಲೆ ಇರಬಾರದು.

ಆತ್ಮಹತ್ಯೆ ಮಾಡಿಕೊಳ್ಳದೇ ಹೋಗಿದ್ದರೂ ಇನ್ನು ಮೂರುನಾಲ್ಕು ವರ್ಷ ಬದುಕ ಬಹುದಿತ್ತೇನೋ ಅಷ್ಟೆ. ಹುಟ್ಟಿನಿಂದ ಬಂದ ಗೂರಲು ರೋಗ. ಮಕ್ಕಳು ಸೊಸೆಯಂದಿರು ಇವನನ್ನು ಕ್ಯಾರೆ ಅನ್ನದೆ ದೂರದೂರುಗಳಲ್ಲಿ ಇದ್ದುದರಿಂದ ಸರಿಯಾದ ಪಥ್ಯ, ಆರೈಕೆಯಿಲ್ಲದೆ ಸಕ್ಕರೆ ತೊಂದರೆ ಉಲ್ಬಣಿಸಿ ಚರ್ಮದ ರೋಗ, ಮೈಯೆಲ್ಲಾ ಕಪ್ಪಗೆ ತಿರುಗತಾಯಿತ್ತು. ಜೊತೆಗೆ ರಕ್ತದೊತ್ತಡ. ಇದೆಲ್ಲ ಸೇರಿಸಿಕೊಂಡು ಕಾಲಾನುಕ್ರಮದಲ್ಲಿ ಅವನು ಸಹಜವಾಗಿಯೇ ಸತ್ತಿದ್ದರೂ ಯಾರಿಗೂ ಗೊತ್ತಾಗುತ್ತಿರಲಿಲ್ಲ. ಈಗ ಬದುಕಿರು ವಾಗಲೂ ಅಷ್ಟೇ; ಕಪ್ಪಣ್ಣ ಅಂದರೆ ಆ ಬೀದಿಯಲ್ಲಿ ಯಾರಿಗೂ ಗೊತ್ತಾಗೋಲ್ಲ. ಒಬ್ಬ ಮುದುಕ ಯಾವಾಗಲೂ ಬನಿಯನ್ ಪಂಚೆಯಲ್ಲೇ ಓಡಾಡುತ್ತಲ್ಲ, ಮೈಮೇಲೆ ಶರಟು, ಶಲ್ಯವಿಲ್ಲದೆ, ಕಾಲೆಳೆದುಕೊಂಡು ಹೋಗಿ ಜನಾರ್ದನ ಗುಡಿ ಪ್ರಾಂಗಣದಲ್ಲಿ ಹಗಲೆಲ್ಲ ಕೂತಿರುತ್ತಲ್ಲ, ಯಾವಾಗ ಅಂದರೆ ಆವಾಗ ಯಾರ ಮನೆ ಜಗುಲಿ ಎಂದರೆ ಅವರ ಮನೆ ಜಗುಲಿ ಮೆಟ್ಟಿಲ ಮೇಲೆ ಪೆದ್ದು ಪೆದ್ದಾಗಿ ನಗತಾ ಕೂತಿರುತ್ತಲ್ಲ, ಆ ಮುದುಕ ಅಂತ ಗುರುತು ಹೇಳಿದರೇ ಗೊತ್ತಾಗೋದು.

ಕಪ್ಪಣ್ಣನ ಆತ್ಮಹತ್ಯೆಗೆ ಕಾರಣವಾದ ಮೂವತ್ತು ವರ್ಷಗಳ ಹಿಂದಿನ ಆತ್ಮಹತ್ಯೆಯ ಒಡೆಯ ಕಿಟ್ಟಣ್ಣ – ಇವನ ಕೊನೆಯ ತಮ್ಮ. ಮಧ್ಯೆ ಇನ್ನೂ ಮೂರು ಜನ ತಮ್ಮಂದಿರು. ಕಿಟ್ಟಣ್ಣಿಗೆ ಆರೋ, ಏಳೋ ವರ್ಷವಾಗಿದ್ದಾಗ ಇವರೆಲ್ಲರ ಅಪ್ಪ ಕ್ಷಯದಿಂದ ಗೋತಾ ಹೊಡೆದಿದ್ದ. ಅಪ್ಪ ಇಲ್ಲದ ಮಕ್ಕಳನ್ನು ಅಂಕೆ ಶಿಕ್ಷೆಯಲ್ಲಿ ಬೆಳೆಸೋಕೆ ಸಾವಿತ್ರಮ್ಮ ಬಹಳ ಕಷ್ಟಪಡಬೇಕಾಯಿತು. ಮಕ್ಕಳು ಅವಳ ಭಯಕ್ಕೋ, ದೈವಭಕ್ತಿಗೋ ಅಂತೂ ಬಗ್ಗಿ ಏಳನೇ ಸಲಕ್ಕೋ, ಎಂಟನೇ ಸಲಕ್ಕೋ ಮೆಟ್ರಿಕ್‌ನ ಇಪಿಎಸ್ ಗ್ರೇಡ್‌ನಲ್ಲಿ ಪಾಸು ಮಾಡಿಕೊಂಡು ಒಂದು ದಾರಿಗೆ ಬಿದ್ದದ್ದು ಅರ್ಧ ನಿಜ ಮಾತ್ರ. ಒಂದಿಬ್ಬರು ಮಕ್ಕಳಿಗೆ ಹೆಂಗಸರ ಚಾಳಿಯೂ, ಇನ್ನೊಂದಿಬ್ಬರಿಗೆ ಸಣ್ಣ ಪುಟ್ಟ ಕಳ್ಳತನಗಳ ವಿದ್ಯೆಯೂ ಕೂಡ ಮೈಗೆ ಹತ್ತಿತ್ತು. ಇಷ್ಟಾಗಿಯೂ ಸಾವಿತ್ರಮ್ಮನ ಮುತುವರ್ಜಿ ಇಲ್ಲದೇ ಹೋಗಿದ್ದರೆ, ಕಂಡ ಕಂಡವರದೆಲ್ಲ ಕೈಕಾಲು ಹಿಡಿದೇ ಹೋಗಿದ್ರೆ, ಇವರಿಗೆಲ್ಲ ಕೆಲಸ ಸಿಗೋದಾಗಲಿ, ಕೆಲಸ ಸಿಕ್ಕಿದರೂ ಸುಮಾರಾದ ಮನೆತನಗಳ ಹೆಣ್ಣು ಮಕ್ಕಳಾಗಲೀ ಕುದುರತಿರಲಿಲ್ಲ. ಸಾವಿತ್ರಮ್ಮನೇ ಮಕ್ಕಳ ಜಾತಕನೆಲ್ಲ ಉಡಿತುಂಬ ತುಂಬಿಕೊಂಡು, ನನ್ನ ಮಕ್ಕಳಿಗೆ ಹೆಣ್ಣು ಕೊಡಿ, ಅವರನ್ನು ಸರಿಯಾಗಿ ಬಾಳಿಸ್ತೀನಿ ಅಂತ ಮದ್ದೂರು, ಕೆಸ್ತೂರು, ಕೌಡ್ಲೆ, ದುರ್ಗ ಸೀಮೆಗಳನ್ನೆಲ್ಲ ಸುತ್ತಿ ಸೊಸೆಯರನ್ನು ಕುದುರಿಸಿದಳು. ಸಂಸಾರದ ಹಳಿಗಳಿಗೆ ಹಾಕಿ ಮೊಮ್ಮಕ್ಕಳ ಮುಂಜಿ, ಮೈನೆರೆಯೋದನ್ನೆಲ್ಲಾ ನೋಡಿದರೂ ಸಂತೋಷ ಮಾತ್ರ ಸಿಗಲಿಲ್ಲ. ತಾಯಿ ಸೇವೇನ ಈ ಮಗ ಮಾಡಲಿ ಅಂತ ಆ ಮಗ, ಆ ಮಗ ಮಾಡಲಿ ಅಂತ ಈ ಮಗ ಅನ್ನುವ ಪೈಪೋಟಿಯಲ್ಲಿ ಮುದುಕಿ ಇಟ್ಟಾಡಿ ಹೋಗಿ ಯಾರಿಗೂ ಬೇಡವಾಗಿದ್ದ ತನ್ನ ಕಂತೆಯನ್ನು ಬಿಸಾಕಿ ಭೂಮಿಶಾಲಿ ಮಾಡಿತು. ಬಡತನದಲ್ಲಿ ಬೆಳೆದದ್ದಕ್ಕೋ, ಅಂಕೆ ಶಿಸ್ತು ಇಲ್ಲದ್ದಕ್ಕೋ, ಚೂರುಪಾರು ಕಾಸುಕಂಡದ್ದಕ್ಕೋ, ಮಕ್ಕಳಲ್ಲಿ ಒಗ್ಗಟ್ಟೂ ಇರಲಿಲ್ಲ. ಪ್ರೀತಿ ಮಮಕಾರನೂ ಇರಲಿಲ್ಲ. ಸ್ವಂತ ಅಪ್ಪ ಅಮ್ಮನ ತಿಥಿಗೂ ಕೂಡ ಎಲ್ಲ ಮಕ್ಕಳು ಒಟ್ಟಿಗೆ ಸೇರುತ್ತಿರಲಿಲ್ಲ. ಏನೋ ಜಗಳ, ಏನೋ ಕ್ಯಾತೆ, ಏನೋ ವೈಮನಸ್ಸು, ಒಟ್ಟಿನಲ್ಲಿ ಪಿತೃಗಳಿಗೆ ಅರೆಕೊರೆ ಪಿಂಡ.

ಮುದುಕಿ ತಲೆಮಾರು ಕಳೆದ ಮೇಲಂತೂ ಹೇಳೋರು ಕೇಳೋರು ಯಾರೂ ಇಲ್ಲದೆ ಮಕ್ಕಳು ಇನ್ನೂ ಹಳ್ಳಕ್ಕೆ, ಇನ್ನಿಲ್ಲದ ಪೈಪೋಟಿಗೆ, ವೈಮನಸ್ಸಿಗೆ ಬಿದ್ದವು. ಇದಕ್ಕೆ ವಾರವಾರಗಿತ್ತಿಯರ ಚಿತಾವಣೆಯು, ನಸಗುಣಿತನವು, ಕೂಡ ಸೇರಿಕೊಂಡಿತು. ಇದೆಲ್ಲದರ

ಲಾಭನಷ್ಟ ಬೇರೆ ಬೇರೆ ಮಕ್ಕಳಿಗೆ ಬೇರೆ ರೀತಿಯಾದರೂ ಆತ್ಮಹತ್ಯೆ ಹಂತ ತಲುಪಿದ್ದು ಮೊದಲು ಕಿಟ್ಟಣ್ಣ ಮಾತ್ರವೇ.

ಕಿಟ್ಟಣ್ಣ ಕೂಡ ಉಳಿದವರಂತೆಯೇ ಆರನೇ ಸಲಕ್ಕೋ, ಎಂಟನೇ ಸಲಕ್ಕೋ ಮೆಟ್ರಿಕ್ ದಡ ತಲುಪಿದೋನು. ಓದುತ್ತಿದ್ದಾಗಲೇ ಬಸ್ ಏಜೆಂಟ್ ಕೆಲಸ ಮಾಡಿ ಪುಡಿಗಾಸಿನ ರುಚಿ, ಹೋಟೆಲ್, ಸಿನೆಮಾ ಸುಖ ಕಂಡೋನು. ಸಿಲ್ಕ್ ಜುಬ್ಬ, ಒಂದೆಳೆ ಸರವನ್ನು ಮೈಗೆ ಕಾಣಿಸಿದೋನು. ಹೆಂಗಸರ ತರಹ ಕೈ ಉಗುರಿಗೆ ಕೆಂಪುಬಣ್ಣ ಹಾಕ್ಕೊತ್ತಿದ್ದೋನು. ಮನೆ ಪಾಠಕ್ಕೆ ಹೋಗುತ್ತಿದ್ದ ಲೆಕ್ಕದ ಮೇಷ್ಟ್ರು ಮಗಳು ಕಮಲಳನ್ನೇ ಮದುವೆಯಾಗೋದು ಅಂತ ಊರ ತುಂಬೆಲ್ಲ ಡಂಗುರ ಸಾರಿದೋನು. ಕಮಲಳ ಅಣ್ಣ ಒಬ್ಬ ಅಮಲ್ದಾರ್ ಆಗಿದ್ರಿಂದ ಇವನ ಬಡಾಯಿಯ ಬೇಳೆ ಬೇಯಲಿಲ್ಲ. ಆದರೇನಂತೆ ಕಮಲ ಅಲ್ಲದೇ ಹೋದ್ರೆ ಗಿರಿಜ ಅಂತ ರೆವಿನ್ಯೂ ಇನ್‌ಸ್ಪೆಕ್ಟರ್ ಮಗಳನ್ನೇ ಮದುವೆಯಾಗಿ ನಮ್ಮ ಮಾವ ಗೆಜೆಟೆಡ್ ಅಧಿಕಾರಿ ಅಂತ ಪ್ರಾಂತ್ಯಕ್ಕೆಲ್ಲಾ ಸುಳ್ಳು ಹೇಳಿದೋನು.

ಮಾವನ ಶಿಫಾರಸ್ಸೋ, ಹೆಂಡತಿ ಕೈ ಗುಣವೋ, ಇವನದೇ ದುರಾದೃಷ್ಟವೋ, ಕಿಟ್ಟಣ್ಣನಿಗೆ ಸಕ್ಕರೆ, ಸೀಮೆ ಎಣ್ಣೆ, ಅಕ್ಕಿ, ಗೊಬ್ಬರವೆಲ್ಲ ಮಾರೋ ಸೊಸೈಟಿಯಲ್ಲಿ ಬಿಲ್ ಗುಮಾಸ್ತ ಕೆಲಸ ಸಿಕ್ಕಿತು. ಆವಾಗೆಲ್ಲ ಇಲ್ಲ ಯುದ್ಧ, ಇಲ್ಲ ಬರ. ಒಂದಲ್ಲ ಒಂದು ಕಾರಣಕ್ಕೆ ಕಾಳಸಂತೆ. ಜಿಲ್ಲಾ ಕೇಂದ್ರದಲ್ಲಿ ಇವರ ಸೊಸೈಟಿಗೆಂದು ಕೊಟ್ಟ ಮಾಲನ್ನು ಅಲ್ಲೇ ಯಾವುದಾದರೂ ಹೋಟೆಲಿನವರಿಗೋ, ದಿನಸಿ ಅಂಗಡಿ ಶೆಟ್ಟರಿಗೋ ದುರಾಸೆ ಲಾಭಕ್ಕೆ ಮಾರಿ ಇವನೂ, ಸೊಸೈಟಿ ಆಡಳಿತಗಾರರೂ ಹಂಚಕೋತಿದ್ರು. ಬರೇ ಹಣ ಸೇರಿದ್ರೆ ಮುಗೀತಾ ? ಇದೆ ಅಂತ ಮೆರೆಸಿ ಕೂಡ ತೋರಿಸಬೇಕಲ್ಲ. ಮೊದಲೇ ಸಿಲ್ಕ್ ಜುಬ್ಬ, ಒಂದೆಳೆ ಸರ ಕಂಡಿದ್ದೋನು. ಈಗ ಹರಳುಂಗುರ ಬಂತು. ಸ್ಕೂಟರ್ ಬಂತು. ಮೊದ ಮೊದಲು ಮಂಡ್ಯ, ಮೈಸೂರಿಗೆ ಹೋಗಿ ಟ್ಯಾಕೀಸಿನಲ್ಲಿ ಸಿನೆಮಾ ನೋಡಿಕೊಂಡು ಬರೋನು. ಆಮೇಲೆ ಇಸ್ಪೀಟ್, ರೇಸ್‌ಗೆ ಬಡ್ತಿಯಾಯಿತು. ಇಷ್ಟೇ ಆಗಿದ್ದರೆ ಹಾಗೋ ಹೀಗೋ ತೂಗಿಸಿಕೊಂಡು ಗೆದ್ದೇ ಬಿಡುತ್ತಿದ್ದ ಅಂತಾ ಕಾಣುತ್ತೆ. ಹೋಬಳಿ ಮಟ್ಟದ ಚೀಟಿ ವ್ಯವಹಾರ ನಡೆಸೋಕೆ ಶುರು ಮಾಡಿದ. ಇವನದೇ ಅಂತ ದುಡ್ಡಿಲ್ಲದೇ ಹೋದ್ರು ದುಡ್ಡು ಯಾವಾಗಲೂ ಆ ಕೈಯಿಂದ ಈ ಕೈಯಿಗೆ ಓಡಾಡುತಾ ಒಂದು ತರ ಸುಖ ಕೊಡತಾಯಿತ್ತು. ಇವನ ಕಡತ, ದಫ್ತರ ಲೆದರ್‌ಬ್ಯಾಗಿನಲ್ಲಿ ಹಿಡಕೊಂಡು ಓಡಾಡೋಕ್ಕೆ ಒಬ್ಬ ಪೂಟು ಲಾಯರು. ಮದ್ದೂರಾಸ್ಪತ್ರೆಯ ಮಲೆಯಾಳಿ ನರ್ಸ್ ಎಲ್ಲವೂ, ಎಲ್ಲರೂ ಆಗಲೇ ಒದಗಿ ಬಂದದ್ದು. ಕಿಟ್ಟಣ್ಣನ ಶ್ರೀಮತಿ ನಾಗರತ್ನ ಮಾತ್ರ ಇದ್ಯಾವುದರ ಪರಿವೆಯೂ ಇಲ್ಲದೆ ತಾನಾಯಿತು, ತನ್ನ ಮಂಗಳಗೌರಿ ವ್ರತವಾಯಿತು, ಲಲಿತಾ ಸಹಸ್ರನಾಮವಾಯಿತು ಅಂತಾ ಗಂಡ ಮಾಡಿಸಿಕೊಟ್ಟ ವಜ್ರದ ಓಲೆ, ವಂಕಿ, ಅವಲಕ್ಕಿ ಸರವೆಲ್ಲ ಹಾಕಿಕೊಂಡು, ಇವನೇ ಬಹು ಭಯ ಭಕ್ತಿಯಿಂದ ಮಾಡಿಸತಾಯಿದ್ದ ಸತ್ಯನಾರಾಯಣ ವ್ರತಗಳಲ್ಲಿ ಸುಖ ಕಾಣುತಾ ಇದ್ದಳು ಅಂತಾ ಕಾಣುತ್ತೆ. ಇವನ ಹಿಂದೆ, ಇವನ ಪೂಟುಲಾಯರಿ ಹಿಂದೆ ಮಣಭಾರ ಒಡವೆ, ದೊಡ್ಡ ರೇಶ್ಮೆ ಸೀರೆ ಸಮೇತ ಮದುವೆ - ಮುಂಜಿಗಳಿಗೆಲ್ಲ ಬರುತ್ತಿದ್ದ ಆಕೆ ಮುಖ ನೋಡಿಯೇ ಅವಳೆಷ್ಟು ಸುಖವಾಗಿದ್ದಳು, ದುಃಖವಾಗಿದ್ದಳು ಅಂತ ಯಾರಿಗೂ ನಿಗದಿ ಮಾಡಿ ಹೇಳೋಕೆ ಆಗುತ್ತಿರಲಿಲ್ಲವೇನೋ.

ಪ್ರೈಮರಿ ಸ್ಕೂಲ್ ಮೇಷ್ಟ್ರು, ಕಾನ್‌ಸ್ಟೇಬಲ್‌ಗಿರಿಗಳನ್ನು ಮಾಡತಾ ಅಹನ್ಯಹನಿ ಕಾಲಕ್ಷೇಪ ಮಾಡಿಕೊಂಡಿದ್ದ ಕಿಟ್ಟಣ್ಣನ ಅಣ್ಣಂದಿರಿಗೆ, ಅದಕ್ಕಿಂತ ಹೆಚ್ಚಾಗಿ ಅವರುಗಳ ಹೆಂಡಂದಿರಿಗೆ ಇವನ ಶೋಕಿ, ಗತ್ತು, ಧಾಂದೂಂತನನ ಒಪ್ಪಿಕೊಳ್ಳೋಕೆ, ಸಹಿಸಿ ಕೊಳ್ಳೋಕೆ ಕಷ್ಟವಾಗೋದು. ಇತರೆ ನೆಂಟರಿಷ್ಟರ ಜೊತೆ ಸೇರಿಕೊಂಡು ಅವರು ಕೂಡ ಇವನನ್ನು ಆಡಿಕೊಳ್ಳೋರು, ಕರಬೋರು. ಆದರೆ ಒಬ್ಬೊಬ್ಬರು ಗುಟ್ಟಾಗಿ ಹೋಗಿ ಸಾಲ ಕೇಳೋರು. ಸಾಮಾನು ಸರಂಜಾಮುಗಳನ್ನು ಅವನ ಸೊಸೈಟಿಯಿಂದಲೇ ಮುಫತ್ತಾಗಿ ಪಡೆಯೋರು. ಕಾಲಕ್ರಮೇಣ ಸಾಲದ, ಸಹಾಯದ ಒತ್ತಾಸೆಯ ಭಾರ ಕಡಿಮೆಯಾದಂತೆ ಇದನ್ನೆಲ್ಲ ವಾಪಸ್ ಕೊಡೋದಿರಲಿ, ಅವನೇನು ಬಿಟ್ಟಿ ಕೊಡುತಾನಾ, ಎಲ್ಲ ಅವರಿವರದು, ಕಳ್ಳ ಸಂಪಾದನೆ, ಮೇಲು ಸಂಪಾದನೆ, ಯಾಕೆ ಹಿಂತಿರುಗಿಸಬೇಕು, ಅನ್ನುವ ಭಂಡವಾದದ ಮಾತುಗಳ ಮುತ್ತನ್ನು ಉದುರಿಸೋದು. ಕಿಟ್ಟಣ್ಣನೂ ವಿಚಿತ್ರ ವ್ಯಕ್ತಿ. ಇವರು ನೆರವು ಕೇಳಿದಾಗ ಇಲ್ಲವೆಂದು ಹಂಗಿಸಿ ತಾರತಮ್ಯ ಮಾಡಿ, ಇವರೆಲ್ಲ ತನ್ನನ್ನು ಅಂಗಲಾಚು ವಂತಹ ಸ್ಥಿತಿಯಲ್ಲಿರುವುದಕ್ಕೆ ಖುಷಿಪಟ್ಟು, ಹೆಂಡತಿ ಮಕ್ಕಳೆದುರಿಗೆ ತನ್ನ ಹಮ್ಮು ಬಿಮ್ಮುಗಳನ್ನೆಲ್ಲ ಪ್ರದರ್ಶಿಸಿ ಕೊನೆಗೂ ಅಂತೂ ನೆರವಾಗೋನು. ಅಲ್ಲಿ ಇಲ್ಲಿ ಸಮಯ ಸಂದರ್ಭ ನೋಡಿ ಹಗುರವಾಗಿ ಮಾತಾಡೋನು. ಅಣ್ಣಂದಿರುಗಳೇನು ಕಡಿಮೆಯೇ. ಅನುಜನಾದ ಕಿಟ್ಟಣ್ಣ ಏನೇನು ಸಹಾಯ ಮಾಡಿಲ್ಲವೆಂದರು. ಇಲ್ಲ ನಾಲ್ಕಾಣೆ ಕೊಟ್ಟು ರೂಪಾಯಿ ಕೊಟ್ಟಿದೀನಿ ಅಂತ ಮೆಹರ್‌ಬಾನಿ ಮಾತಾಡತಾನೆ ಅಂತ ಇವರೇ ಹಂಗಿಸಿದರು. ಕೊಟ್ಟರೇನಂತೆ ಕಳ್ಳ ಸಂಪಾದನೆ ದುಡ್ಡಲ್ಲವಾ ಅಂತ ಷರಾ ಎಳೆಯೋಕೆ ನೋಡಿದರು. ಈ ಹಂಗಿಸುವಿಕೆ, ಷರಾಗಳ ನಡುವೆಯೇ ಅಣ್ಣಂದಿರ ಮನೆಗಳಿಗೆ ರೇಡಿಯೋ ಬಂತು, ರ್‍ಯಾಲಿ

## ಈ ಲೋಕ

ಈ ಅರಮನೆಗಳ, ಈ ಗದ್ದುಗೆಗಳ, ಈ ಕಿರೀಟಗಳ ಲೋಕ
ಈ ಮಾನವನ ಶತ್ರು, ಸಮಾಜಗಳ ಲೋಕ
ಈ ದೌಲತ್ತು - ದಾಹಿ ರಿವಾಜುಗಳ ಲೋಕ
ಈ ಲೋಕವೇ ನನಗೆ ದೊರೆತರೇನು ಸುಖ ?

ದೇಹ ದೇಹವೂ ಜರ್ಜರಿತ, ಆತ್ಮಗಳೂ ತೃಷಿತ
ನೋಟಗಳಲ್ಲಿ ಅಶಾಂತಿ, ಹೃದಯಗಳಲ್ಲಿ ಶೋಕ
ಇದು ಜೀವಂತ ಜಗವೋ ಅಥವಾ ಭಯದ ಪ್ರತೀಕ
ಈ ಲೋಕವೇ ನನಗೆ ದೊರೆತರೇನು ಸುಖ ?

ಇಲ್ಲಿ ಮಾನವ ಕೇವಲ ಸೂತ್ರದ ಗೊಂಬೆ
ಇದು ಸತ್ತವರನ್ನು ಪೂಜಿಸುವವರ ಸಂತೆ
ಇಲ್ಲಿ ಬದುಕಿಗಿಂತಲೂ ಅಗ್ಗದ ಸಾವು ಆಕರ್ಷಕ
ಈ ಲೋಕವೇ ನನಗೆ ದೊರೆತರೇನು ಸುಖ ?

ಯುವಕ ಅಲೆದಾಡುತ್ತಾನೆ ದುರಾಚಾರಿಯಾಗಿ
ಯುವತಿ ಬಿಕರಿಯಾಗುವಳು ಸಂತೆಯ ಸರಕಾಗಿ
ಪ್ರಣಯವೂ ನಡೆಯುವುದಿಲ್ಲಿ ವ್ಯಾಪಾರವಾಗಿ
ಈ ಲೋಕವೇ ನನಗೆ ದೊರೆತರೇನು ಸುಖ ?

ಇದೆಂತಹ ಲೋಕ ? ಇಲ್ಲಿ ಮಾನವತೆಗೆ ನೆಲೆಯಿಲ್ಲ
ಇಲ್ಲಿ ವಿಶ್ವಾಸವೇನೂ ಅಲ್ಲ, ಸ್ನೇಹಕ್ಕೆ ಬೆಲೆಯಿಲ್ಲ
ಇಲ್ಲಿ ಪ್ರೀತಿ ವಾತ್ಸಲ್ಯಗಳನು ಗುರುತಿಸುವವರಿಲ್ಲ
ಈ ಲೋಕವೇ ನನಗೆ ದೊರೆತರೇನು ಸುಖ ?

ಸುಟ್ಟುಬಿಡಿ ಇದನ್ನು, ಊದಿ ಹಾಕಿರಿ ಈ ಜಗವ
ದೂಡಿಬಿಡಿ ಆಚೆ ನನ್ನ ಎದುರಿನಿಂದ ಈ ಜಗವ
ಇದು ನಿಮ್ಮದು, ನೀವೇ ನಿಭಾಯಿಸಿರಿ ಈ ಜಗವ
ಈ ಲೋಕವೇ ನನಗೆ ದೊರೆತರೇನು ಸುಖ ?



ಉರ್ದು ಮೂಲ : ಸಾಹಿರ್ ಲುಧಿಯಾನ್ವಿ
ಕನ್ನಡಕ್ಕೆ : ಅಬ್ದುಲ್ ಮಜೀದ್ ಖಾನ್
ರಾಜಾಜಿ ನಗರ, ಬೆಂಗಳೂರು-೫೬೦ ೦೧೦

ಸೈಕಲ್ ಕೂಡ. ಕುರ್ಚಿ ಮಂಚದ್ದು ಕರೀಮರದ್ದರ ಜೊತೆಗೆ ಅತ್ತಿಗೆಯರಿಗೂ ಕಾಸಿನ ಸರ, ರೇಷ್ಮೆ ಸೀರೆ.

ಇಷ್ಟೆಲ್ಲದರ ಮಧ್ಯೆನೂ ಕಿಟ್ಟಣ್ಣನ ಆಳ-ಅಗಲ ಯಾರಿಗೂ ಇಷ್ಟೇ ಅಂತ ತಿಳಿಯಲಿಲ್ಲ. ಅವನ ಗತ್ತು ಓಡಾಟವನ್ನು ಮಾತ್ರವೇ ಕಂಡವರಿಗೆ ಇವನೇನು ಕಂಟ್ರಾಕ್ಟರ್ರೋ, ಎಮ್ಮೆಲ್ಲೆನೋ ಅಂತಾನೂ ಅನಿಸಿರಬಹುದು. ಆದರೆ ಕಿಟ್ಟಣ್ಣನ ಆಳ-ಅಗಲವೆಲ್ಲ ಜನ ಊಹಿಸಿದಷ್ಟು ಮಜಬೂತಾಗಿರದೆ ತಳ ಒಡೆದ ದೋಣಿಯಾಗಿತ್ತು ಅಂತ ಗೊತ್ತಾದದ್ದು ಬೆಂಗಳೂರಿಂದ ಹೊರಡುವ ಪ್ರಜಾವಾಣಿ ಪತ್ರಿಕೆ ಒಂದು ದಿನ ಇದ್ದಕ್ಕಿದ್ದಂತೆ ಆರನೇ ಪುಟದಲ್ಲಿ ಟೂರಿಸ್ಟ್ ಹೋಟೆಲಿನಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದನ್ನು ಬಾಕ್ಸ್ ಸುದ್ದಿಯಾಗಿ ಪ್ರಕಟಿಸಿದಾಗ. ಆವಾಗೆಲ್ಲ ಆತ್ಮಹತ್ಯೆಗಳ ಸಂಖ್ಯೆ ಹೀಗೆ ಬಾಕ್ಸ್ ಸುದ್ದಿಯಾಗುವಷ್ಟು ಕಡಿಮೆಯಿದ್ದಿರಬೇಕು.

ಇರಲಿ, ಮಂಡ್ಯ ಸೀಮೆಯುದ್ದಕ್ಕೂ ಹರಡಿಕೊಂಡಿದ್ದ ಅಣ್ಣಂದಿರು ಎನಿಸಿಕೊಂಡ ಕುಳಸ್ಥರಲ್ಲಿ ಒಮ್ಮತವೇ ಮೂಡಲಿಲ್ಲ. ಬೆಂಗಳೂರಿಗೆ ಯಾರು ಹೋಗಬೇಕು, ಹಣ ಹೇಗೆ ತರಬೇಕು ಅನ್ನುವುದರ ಬಗ್ಗೆ. ಹೆಂಡಂದಿರ ಸಮ್ಮಿತ ಬೇರೆ. ಎಲ್ಲದಕ್ಕೂ ನೀವೇ ಮೇಲು ಬೀಳಬೇಡಿ, ಉಳಿದವರೂ ಅಣ್ಣಂದಿರೇ ತಾನೇ. ಎಲ್ಲರೂ ಎಷ್ಟು ಮಾಡತಾರೋ ಅಷ್ಟು ಮಾಡಿ. ಹೆಚ್ಚು ಬೇಡ. ಕಡಮೇನು ಬೇಡ. ಈ ಮತ್ಸರದ ಮಹಿಮೆಯಲ್ಲಿ ಕಿಟ್ಟಣ್ಣ ಹೆಣವಾದದ್ದಕ್ಕೂ, ಆ ಹೆಣ ದಫನ್ ಆಗೋದಕ್ಕೂ ಹತ್ತಿರ ಹತ್ತಿರ ಎರಡು ದಿನವಾಗಿ ಹೆಣ ಬಾತುಕೊಂಡಿತ್ತು. ಅಷ್ಟೇ. ಆಮೇಲೆ ಅಳೆದು ಸುರಿದು ತಿಥಿ ಮಾಡಿ ಮುಗಿಸಿದರೆ ಹೊರತು ನಾಗರತ್ನನ್ನ ಆಗಲೀ ಅವಳ ಮೂರು ಮಕ್ಕಳನ್ನಾಗಲೀ ಇಟ್ಟುಕೊಂಡು ಸಾಕೋಕೆ ಯಾರೂ ಮುಂದೆ ಬರಲಿಲ್ಲ. ಇಷ್ಟು ಹೊತ್ತಿಗೆ ನಾಗರತ್ನನ ಅಪ್ಪನೂ ಸತ್ತು ಅಮ್ಮ ಬೆಂಗಳೂರಲ್ಲಿದ್ದ ಮಗನ ಮನೆಗೆ ಹೋಗಿ ಸೇರಿಕೊಂಡು ಸೊಸೆ ಜೊತೆ ಕೂಡಿಬರದೆ ಕೆಲಸದಾಳಿನಂತೆ ಇದ್ದಳಂತೆ. ಆಮೇಲಾಮೇಲೆ ಗೊತ್ತಾದಂತೆ ಚೀಟಿ ವ್ಯವಹಾರದಲ್ಲಿ ಮಾತ್ರ ಕೈ ಸುಟ್ಟು ಕೊಂಡಿದ್ದಲ್ಲದೆ ಗುಳುಂ ಅನ್ನಿಸಿದ್ದ ಸೊಸೈಟಿ ಬಾಬ್ತು ತಕ್ಷಣವೇ ತುಂಬದೇ ಹೋದರೆ ಕಂಬಿ ಹಿಂದಕ್ಕೆ ಕಳಿಸ್ತೀವಿ ಅಂತ ಆಡಿಟ್‌ನೋರು ಭಯ ಹುಟ್ಟಿಸಿದ್ದಕ್ಕೆ ಅಂತೇ ಕಿಟ್ಟಣ್ಣ ಪ್ರಜಾವಾಣಿ ಪತ್ರಿಕೆಯಲ್ಲಿ ಸುದ್ದಿಯಾದ್ದು.

ಇತರೆ ಸಾಲಗಾರರು ಕೂಡ ಅಣ್ಣಂದಿರುಗಳ ಮನೆಗೆ ಎಡತಾಕಿದರು. ಅಯ್ಯೋ, ನಾವು ಹುಟ್ಟಾ ಅಣ್ಣ ತಮ್ಮಂದಿರೇ ಹೊರತು ಹಾಗೆ ಆಸ್ತಿಪಾಸ್ತಿ ಜೊತೆ ಬಂದು ಪಾಲು ಪಡಿವಾರ ಮಾಡಿಕೊಂಡೋರಲ್ಲ. ಕಿಟ್ಟಣ್ಣ ಅನುಕೂಲವಾಗಿದ್ದದ್ದು ನಿಜವಾದ್ರು, ಇದು ಯಾವತ್ತಿದ್ರು ಸೀದು ಹೋಗೋ ದೋಸೇನೆ ಅಂತ ನಮಗೆ ಗೊತ್ತಿದ್ರಿಂದ ಅವನ ತಂಟೆಗೆ ಹೋದೋರಲ್ಲ ನಾವು ಅಂತ ಕೈ ತೊಳೆದುಕೊಂಡರು. ತುಂಬಾ ತಕರಾರು ಮಾಡಿದವರಿಗೆ ಇನ್ನೊಬ್ಬ ಸಹೋದರನ ಕಡೆಗೆ ಕೈ ತೋರಿಸೋರು. ಕೊನೆಗೂ ನಿಗದಿಯಾದದ್ದೆಂದರೆ ನಾಗರತ್ನ, ಮಕ್ಕಳು ವಾಸವಾಗಿದ್ದ ಮನೆ ಬಿಕರಿಯಾದ್ದು ಮತ್ತು ಆಕೆ ಗುಳೆ ಎತ್ತಿಕೊಂಡು ನಮ್ಮ ದೊಡ್ಡಪ್ಪನ ಹತ್ತಿರ ಹೋಗ್ತೀನಿ ಅಂತ ನಾಗಮಂಗಲಕ್ಕೆ ಹೋದದ್ದು. ಅಲ್ಲಿ ದೊಡ್ಡಪ್ಪನು ಇರಲಿಲ್ಲ, ಧಡಿಯಪ್ಪನೂ ಇರಲಿಲ್ಲ. ನಾಗರತ್ನ ಬಾಲ್ಯ ಕಳೆದ ಊರು ಅದು ಅಷ್ಟೆ. ಅಲ್ಲಿ ಮೊದಲು ಅವರಿವರ ಮನೆ ಕೆಲಸ ಮಾಡಿಕೊಂಡು ಮಕ್ಕಳನ್ನು ಸಾಕೋಕೆ ನೋಡಿ ಕೈ ಹತ್ತದೆ ಆ ಊರಿನ ಟೀಚರ್ ಟ್ರೈನಿಂಗ್ ಕಾಲೇಜಿಗೆ ಬರುತ್ತಿದ್ದವರಿಗೆ ಊಟ ತಿಂಡಿ ಮಾಡಿ ಹಾಕೋಕೆ ಶುರು ಮಾಡಿ, ಹಾಗೆ ಊಟ ತಿಂಡಿಗೆ ಬರುತ್ತಿದ್ದವರ ಪೈಕಿ ನರಸಿಂಹಯ್ಯ ಅನ್ನುವವನೇ ಕಾರಣವಾಗಿ ಇವಳು ಪ್ರೈವೇಟ್‌ನಲ್ಲಿ ಮೆಟ್ರಿಕ್, ಆಮೇಲೆ ಟಿಸಿಹೆಚ್‌ನು ಮಾಡ ಕೊಂಡು ಕದಬಳ್ಳಿ ಸ್ಕೂಲಲ್ಲಿ ಮೇಷ್ಟ್ರಾದಳಂತೆ: ಇಷ್ಟೆಲ್ಲ ಆಗೋದ್ರೊಳಗೆ ಮೊದಲನೆ ಮಗ ಕೈ ಹತ್ತದೆ ಮನೆ ಬಿಟ್ಟು ಹೋದವನು ಇನ್ನೂ ಪತ್ತೆಯಾಗಿಲ್ಲ. ಉಳಿದೆರಡವು ಮಾತ್ರ ಅಮ್ಮನೇ ಮೇಷ್ಟ್ರಾದ್ದಕ್ಕೋ ಇಲ್ಲ ಟೀಚರ್ ಟ್ರೈನಿಂಗ್‌ಗೆ ಬಂದೋರಿಗೆ ಊಟ ಹಾಕಿದ್ದಕ್ಕೋ ವಿದ್ಯೆನ ಚೆನ್ನಾಗಿ ಅರಗಿಸಿಕೊಂಡು ಮಂಡ್ಯ, ಮೈಸೂರು, ಬೆಂಗಳೂರುಗಳಲ್ಲಿ ಓದಿದ್ದನ್ನೇ ಓದಿ ಓದಿ ಅಮೆರಿಕಾದ ಕಡೆಗೆ ಇನ್ನಷ್ಟು ಓದೋಕೆ, ಆಮೇಲೆ ಕೆಲಸಕ್ಕೆ ಅದಾದ ಮೇಲೆ ಮದುವೆಗೆ ಅಂತ ಅಲ್ಲೇ ನಿಂತರಂತೆ. ರವಿನ್ಯೂ ಇನ್‌ಸ್ಪೆಕ್ಟರ್ ಮಗಳಾಗಿ ಹುಟ್ಟಿ, ಬಾಳೆಗುಡಾಣದಲ್ಲಿ ಬೆಳೆದು ನವಾಬಿ ಶೈಲಿಯ ಕಿಟ್ಟಣ್ಣನನ್ನು ಮದುವೆಯಾಗಿ, ವ್ರತ ಪಾರಾಯಣ ಮಾಡಿ, ವಿಧವೆಯಾಗಿ, ಮುಸುರೆ ಕೆಲಸ ಮಾಡಿ, ಊಟ, ತಿಂಡಿನ ಕ್ರಯ ಮಾಡಿ, ಕೊನೆಗೆ ಮೇಡಂ ಕೂಡ ಆದ ನಾಗರತ್ನನು ಒಂದು ದಿನ ಇದ್ದಕ್ಕಿದ್ದಂತೆ ನಾಗಮಂಗಲದ ಕೊಳದ ಬೀದಿಯಿಂದ ನಾಪತ್ತೆಯಾದಳು. ಮಕ್ಕಳು ಆಸರೆಯಾಗಿ ನಿಲ್ಲದೇ ಹೋದ್ರಿಂದ ಬೇಸರವಾಗಿ ದೇಶಾಂತರ ಹೋದಳೆಂದು ಕೆಲವರು, ನರಸಿಂಹಯ್ಯನ ಎರಡನೇ ಹೆಂಡತಿಯಾಗಿ ಕುಣಿಗಲ್ ಸೇರಿಕೊಂಡಳು ಅಂತ ಹಲವರು. ಇದೆಲ್ಲ ಅಂತ ಕಂತೆಯ ಕತೆಯಾದರೆ ನಿಜವಾದ್ದು ಮಾತ್ರ ಏನೆಂದರೆ ಉಳಿದ ಅಣ್ಣಂದಿರೆಲ್ಲ ಕಾಲಾನುಕ್ರಮದಲ್ಲಿ ತಮಗೊಬ್ಬ ಕಿಟ್ಟಣ್ಣ ಅನ್ನುವ ತಮ್ಮ




ಇದ್ದ ಅವನ ಸಂಸಾರ ಇನ್ನೂ ಇದೆ ಅನ್ನುವುದನ್ನು ಮರೆತದ್ದು ಮತ್ತು ಅವರವರ ಸಂಸಾರಗಳು ಬೆಳೆದು ದಶದಿಕ್ಕುಗಳಿಗೆ ಹರಡಿ, ಮಕ್ಕಳ ಸ್ವಾರ್ಥದ ಬದುಕಿನಲ್ಲಿ, ಪ್ರಗತಿಯ ಆಸೆಯಲ್ಲಿ, ಹಿಂದಿನ ತಲೆಮಾರಿನವರಿಗೆ ಕಿಂಚಿತ್ತೂ ಕಿಮ್ಮತ್ತಿಲ್ಲದೆ ಕಪ್ಪಣ್ಣ ಇಳಿವಯಸ್ಸಿನಲ್ಲಿ ಒಂಟಿಯಾಗಿ ಕಾಲ ಕಳೆಯಬೇಕಾದ್ದು.

*    *    *

೨

ಕಾಗದವಿಲ್ಲದೆ ಪತ್ರವಿಲ್ಲದೆ, ಪ್ರಜಾವಾಣಿ ಅಂತಹ ಪತ್ರಿಕೆಯಲ್ಲಿರಲಿ ಸ್ಥಳೀಯ ಪತ್ರಿಕೆಗಳಲ್ಲಿ ಕೂಡ ಸುದ್ದಿಯಾಗದೇ ಹೋದ ಕಪ್ಪಣ್ಣನ ಆತ್ಮಹತ್ಯೆಯ ಸಂಗತಿ ಮಾತ್ರ ಕಿಟ್ಟಣ್ಣನ ಮಗ ಕುಮಾರನ್ನ ಅಮೆರಿಕಾದಲ್ಲಿ ಸೇರಿಯೇಬಿಟ್ಟಿತ್ತು. ಕಪ್ಪಣ್ಣನ ಆತ್ಮ ಇನ್ನೂ ಪ್ರೇತಾವಸ್ಥೆಯಲ್ಲೇ ಇದ್ದಾಗ ತಕ್ಷಣವೇ ಅಲ್ಲದೆಹೋದರೂ ಕಪ್ಪಣ್ಣನ ದೇಹ ಇನ್ನೂ ಸೂಕ್ಷ್ಮ ಶರೀರಿಯಾಗಿ ಮಂಡ್ಯದ ಫಾಸಲೆಯಲ್ಲೇ ಮಾಸಿಕ, ಗೀಸಿಕ ಮಾಡಿಸ್ಕೊಂಡು ಅಡ್ಡಾಡತಾ ಇದ್ದಾಗಲೇ ಕುಮಾರ ಭಾರತಕ್ಕೆ ಬಂದಿಳಿದು ಮಂಡ್ಯದ ಕಡೆಗೂ ಬಂದ. ವರ್ಷಾನುಗಟ್ಟಲೆ ಕಾಲ ದಾಯಾದಿಗಳ ಸಂಪರ್ಕ ಇಲ್ಲದೇನೇ ಹೋಗಿದ್ದರೂ ಯಾರ್‍ಯಾರು ಯಾವ ಊರಿನಲ್ಲಿ ಓಣಿಯಲ್ಲಿ ಇದ್ದು ಏನೇನು ಮಾಡ್ತಾ ಇದಾರೆ ಅನ್ನುವುದನ್ನೆಲ್ಲ ಚಿತ್ರಗುಪ್ತನಂತೆ ಸಂಗ್ರಹಿಸಿಟ್ಟುಕೊಂಡಿದ್ದ ಕುಮಾರ ಎಲ್ಲರ ಮನೆಗೂ ಹೋದ. ನೋಡಿ, ನೋಡಿ ನಿಮ್ಮಗಳ ಮೋಸ ತಟವಟದಿಂದಲೇ ನಮ್ಮಪ್ಪ ಆ ಕಾಲದಲ್ಲೇ ಬೆಂಗಳೂರಿನಂತಹ ಊರಿಗೆ ಹೋಗಿ ಆತ್ಮಹತ್ಯೆ ಮಾಡಿಕೊಂಡದ್ದು. ಎಲ್ಲರೂ ಉದ್ಯೋಗಕ್ಕೆ ಬೆಂಗಳೂರಿಗೆ, ವಿದ್ಯೆಗೆ ಮೈಸೂರಿಗೆ ಅಂತ ಹೋದರೆ ನಮ್ಮ ಮನೆತನ ಆತ್ಮಹತ್ಯೆಗೆ ಹೋಗಬೇಕಾಯಿತು ನಿಮ್ಮಗಳಿಂದ. ನಿಮ್ಮ ಮನೆಯಲ್ಲಿರುವ ರತ್ನಗಂಬಳಿ ನಮ್ಮಪ್ಪ ಕೊಡಿಸಿದ್ದು, ರೇಡಿಯೋ ಕಂತಿನ ಸಾಲದ ಮೇಲೆ ಅವನೇ ಕೊಡಿಸಿದ್ದು. ಮಗಳ ಮದುವೆಗೆ ಒಡವೆ ಮಾಡಿಸಿಕೊಟ್ಟವರು ಯಾರು, ಸೈಟು ಬಾಬ್ತು ಅವನೇ ಅಲ್ಲವೆ ಕಟ್ಟಿದ್ದು. ಕಪ್ಪಣ್ಣ ದೊಡ್ಡಪ್ಪನೇ ಇದನ್ನೆಲ್ಲ ಸಾಯೋವಾಗ ಒಪ್ಪಿಕೊಂಡಿದಾನೆ. ನೀವೂ ಕೂಡ ಒಪ್ಪಿಕೊಂಡು ಎಲ್ಲ ಬಾಬ್ತನ್ನು ಈಗಲಾದರೂ ವಾಪಸ್ ಕೊಡಿ ಅಂತ ಜುಲುಮೆ ಮಾಡತಾ ಕಂಡಕಂಡವರಿಗೆಲ್ಲ ಒಪ್ಪಿಸಿದ. ಹೀಗೆ ಜುಲುಮೆ ಮಾಡ್ತಾ ಮಾಡ್ತಾ ಊರೂರು ತಿರುಗತಾಯಿದ್ದಾಗ ಒಬ್ಬ ದಾಯಾದಿ ಮನೇನಲ್ಲಿ ಇವರಪ್ಪ ಕೊಡಿಸಿದ್ದ ಸ್ಟೂಲಿನ ಮೇಲೆ ಕುಳಿತಿದ್ದಾಗ, ಅದರ ಕಾಲು ಸವೆದುಹೋಗಿದ್ದು ಇವನು ಬಿದ್ದುಹೋದದ್ದೇ ಸುದ್ದಿಯಾಗಿತ್ತು. ಕುಮಾರನ ದೊಡ್ಡಪ್ಪಂದಿರು, ಅವರ ಮಕ್ಕಳೆಲ್ಲ ಇವನ ಸಮಕ್ಕೂ ನಿಂತು, ಜುಲುಮೆಗೆಲ್ಲ ಒಂದು ಚೂರೂ ಬಗ್ಗದೆ, ನಿನ್ನೆ ಮೊನ್ನೆ ಸಾಲ ಸೋಲದ ವ್ಯವಹಾರ ಮಾಡಿದ್ದವರಂತೆ, ಇಲ್ಲ ಇಲ್ಲ ನಿಮ್ಮಪ್ಪ ಹಲಾಲಕೋರ ಅದಕ್ಕೇ ವಿಷ ತಗೊಂಡು ಸತ್ತ. ನಮಗೊಂದು ಪೈಸೇನೂ ಕೊಟ್ಟಿಲ್ಲ ಅಂತ ಉಗಿಯೋದೊಂದು ಕಡಮೆ ಮಾತ್ರ ಮಾಡಿ ಅಮೆರಿಕಾಕ್ಕೆ ಅಟ್ಟಿದರಂತೆ. ಇವನದು ಆಯಿತು, ಇನ್ನು ಇವನ ತಂಗಿ ವಸಂತ ಅನ್ನುವ ರಂಭೆ ಯಾವಾಗ ಬಂದು ಇಳೀತಾಳೋ ಅಂತ ಅವರವರಲ್ಲೇ ಆಡಿಕೊಂಡರಂತೆ.

ದಾಯಾದಿಗಳ ಹತ್ತಿರ ಒಂದೇ ಒಂದು ದಮ್ಮಡಿ ಕೂಡ ಪೀಕಿಸಿಕೊಳ್ಳಲಾರದೆ ಹೋದ ಕುಮಾರನಿಗೆ ಮತ್ತೂ ಒಂದು ಬಾಬ್ತಿನಲ್ಲಿ ಕೂಡ ಬಂದ ದಾರಿಗೆ ಸುಂಕ ಸಿಕ್ಕಿರಲಿಲ್ಲ. ಹಾಗೆ ಸಿಕ್ಕಿದ್ದರೆ ಈ ದಾಯಾದಿ ಒಳಜಗಳಗಳ ಒಳಸುಳಿಗಳ ಆತ್ಮವೃತ್ತಾಂತದ ಅಗತ್ಯವೇ ಇರತಿರಲಿಲ್ಲ. ಕುಮಾರ ಅವರ ತಾಯಿ ನಾಗರತ್ನನ ಹುಡುಕಿಕೊಂಡು ಊರೂರೆಲ್ಲ ಅಲೀಬೇಕಾಯಿತು.

ಸ್ವಂತ ತಾಯಿಯನ್ನು ಕೂಡ ನೋಡಿ ಹದಿನೈದು ಹದಿನೆಂಟು ವರ್ಷಗಳ ಮೇಲಾಗಿ

ಹೋಗಿತ್ತು. ಮೊದಲೆಲ್ಲ ಅವನ ಜೊತೇಲೇ ಇದ್ದು ಓದಿ ಕೆಲಸ ಪಡೆದಿದ್ದ ತಂಗಿ ವಸಂತ ನೀಗ್ರೋ ಒಬ್ಬನನ್ನು ಮದುವೆಯಾಗಿ ಅದು ದಡ ಸೇರದೆ ಸಿಂಗಪೂರ್‌ಗೆ ಹೋಗಿ ಸೇರಿಕೊಂಡಿದ್ದಳು. ಅವಳಿಗಂತು ತಾಯಿಯನ್ನು ನೋಡುವ ಆಸೆಯೇ ಇರಲಿಲ್ಲ. ನಮ್ಮದು ದುರಾದೃಷ್ಟದ, ಪ್ರೀತಿಯೆ ಇಲ್ಲದ, ಕೈ ಸುಟ್ಟುಕೊಂಡವರ ಹಿನ್ನೆಲೆ ಕುಮಾರ. ಚಿಕ್ಕಂದಿನಲ್ಲಿ ನಾವು ಕಂಡಿದ್ದು ಪ್ರೀತಿಯೇ ಇಲ್ಲದ ಜಗತ್ತನ್ನು, ದಾಯಾದಿ ಜಗಳ, ಮತ್ಸರ ವ್ಯಸನಗಳ ಮಹಾಭಾರತವನ್ನು. ಪ್ರೀತಿಯನ್ನೇ ಪಡೆಯದವರಿಗೆ ಮುಂದೆ ಇನ್ನೊಬ್ಬರನ್ನೂ ಪ್ರೀತಿಸೋಕೆ, ಇನ್ನೊಬ್ಬರು ಪ್ರೀತಿಸಿದಾಗ ಒಪ್ಪಿಕೊಳ್ಳೋಕೆ ತುಂಬಾ ಕಷ್ಟ. ಅವರಿವರದು ಇರಲಿ, ಸ್ವಂತ ಅಮ್ಮನ ಸಂದರ್ಭ ಕೂಡ ನಮ್ಮಗಳಿಗೆ ಸರಿಯಾಗಿ ತಿಳಿಯದೇ ಅವಳಿಂದಲೂ ದೂರವಾದೆವು.

ವಸಂತಳದು - ಕುಮಾರನದು ಎರಡೇ ಕ್ಲಾಸುಗಳ ಅಂತರ ಸ್ಕೂಲಿನಲ್ಲಿ. ಮನೆ ಕೆಲಸ ಮಾಡಕೊಂಡು ಮಕ್ಕಳನ್ನು ಸಾಕುತ್ತಿದ್ದ ತಾಯಿ ಇದ್ದಕ್ಕಿದ್ದಂತೆ ಪ್ರೈವೇಟ್‌ನಲ್ಲಿ ಮೆಟ್ರಿಕ್ ಮಾಡತೀನಿ, ಟೀಚರ್ ಟ್ರೈನಿಂಗ್ ಮಾಡತೀನಿ ಅಂತ ಹೊರಟರೆ ನಾಗಮಂಗಲದಂತ ಊರು ಒಪ್ಪ ಬೇಕಲ್ಲ. ಗಂಡ ಇಲ್ಲ. ಜೊತೆಗೆ ನರಸಿಂಹಯ್ಯನಂತಹ ಗಂಡಸಿನ ಕುಮ್ಮಕ್ಕು ಬೇರೆ. ನಾನಾ ರೀತಿಯ ವಿಶ್ಲೇಷಣೆ. ಅಭಿಪ್ರಾಯಗಳ ಸಂತೆ. ಯಾರೂ ಹೋಗಿ ನಾಗರತ್ನನಿಗೆ ನೇರವಾಗಿ ಹೇಳತಿರಲಿಲ್ಲ. ದೊಡ್ಡವರು ಆಡಿದ ಮಾತಿನ ಎಳೆನೇ ಹಿಡಿದು ಇವರ ಸಹಪಾಠಿಗಳು ಮೇಷ್ಟ್ರುಗಳು ರೇಗಿಸೋರು, ಕಿಚಾಯಿಸೋರು. ಮೊದಲೇ ತಂದೆಯಿಲ್ಲದ ಮಕ್ಕಳು ಬೇರೆ. ಮೇಲಾಗಿ ನರಸಿಂಹಯ್ಯ ಕೂಡ ಆಗಾಗ್ಗೆ ಮನೆಗೆ ಬರೋನು. ಗಂಟೆಗಟ್ಟಲೆ ನಾಗರತ್ನನ ಹತ್ತಿರ ಹರಟೋನು. ನೋಟ್‌ಬುಕ್ ಒಂದರಿಂದ ತಾನು ಪ್ರತಿದಿನ ಬೆಳಿಗ್ಗೆ ಬರೆಯುತ್ತಿದ್ದ ಮುಂಜಾವಿನ ಚಿಂತನೆಗಳನ್ನು ಓದಿ ವಿವರಿಸೋನು. ಇದನ್ನೆಲ್ಲ ನೋಡಿದರೆ ಮಕ್ಕಳಿಗೆ ಊರವರೆಲ್ಲ ಹೇಳೋದು ನಿಜ ಅನ್ನಿಸೋದು. ಅಮ್ಮನನ್ನು ಹೇಳುವ ಹಾಗಿಲ್ಲ, ಕೇಳುವ ಹಾಗೂ ಇಲ್ಲ. ತಮ್ಮ ತಮ್ಮಲ್ಲೇ ಮಾತಾಡಿಕೊಂಡು ಅವಮಾನ ಪಡೋರು, ಸಂಕಟ ಪಡೋರು, ಕೊರಗೋರು. ತಾಯಿ-ಮಕ್ಕಳಿಗೆ ಮನಸ್ಸಿನ ದೂರ. ಆ ದೂರ ಹೆಚ್ಚಾಗುವ ಹಾಗೆ ನಾಗರತ್ನನಿಗೆ ಕದಬಳ್ಳಿಯಲ್ಲಿ ಸ್ಕೂಲು ಕೆಲಸ. ಅಲ್ಲಿಗೂ ನರಸಿಂಹಯ್ಯ ಬಂದು ಹೋಗ್ತಾನೆ ಅಂತ ಸುದ್ದಿ. ಒಂದು ಸಲ ನರಸಿಂಹಯ್ಯ ಕುಮಾರನ ಮೈಸೂರು ಹಾಸ್ಟಲು ಹತ್ತಿರನು ಹೊರಟುಹೋಗಿದ್ದ ಯೋಗಕ್ಷೇಮ ವಿಚಾರಿಸೋಕೆ ಅಂತಾ. ಕುಮಾರನೆ ಮುಖ ಕೊಟ್ಟು ಮಾತಾಡಿಸಿರಲಿಲ್ಲ. ಆಮೇಲೆ ನಾಗರತ್ನನ ಸಂಪರ್ಕ ಇನ್ನೂ ತಪ್ಪಿಹೋಯಿತು. ಕೊನೆಗೆ ಅಣ್ಣ-ತಂಗಿ ಒಬ್ಬರಿಗೊಬ್ಬರಿಗೆ ಆಸರೆಯಾಗಿ ಓದಿ ಬರೆದು ಮಾಡಿ ದೂರದ ದೇಶಕ್ಕೆ ಹೋಗಿ ಉದ್ಯೋಗದ ಸಂಸಾರದ ಪರ್ವ ಪ್ರಾರಂಭಿಸಿದರು.

ಎಂಟು ವರ್ಷಕ್ಕೆ ನನ್ನ ಮಗ ದಂಟೆಂಬಂತೆ ಕುಮಾರನಿಗೂ ಮೂವತ್ತೈದು ವರ್ಷವಾಗಿ, ಸಂಸಾರದ ಏರುಪೇರುಗಳು, ಗಂಡು-ಹೆಣ್ಣು ಸಂಬಂಧದ ಆಳ - ಅಗಲ, ನಿರರ್ಥಕತೆ ಎಲ್ಲವೂ ಸ್ವಾನುಭವದಿಂದ ತಿಳೀತಾ ತಿಳೀತಾ ತನ್ನ ತಾಯಿಯ ಜೀವನದ ನಿಜ ಏನು ಅಂತ ಅರಿಯುವ ತವಕ ವಾಯಿತು. ಆ ತವಕದಲ್ಲಿ ಪ್ರೀತಿಗಿಂತ ಹೆಚ್ಚಾಗಿ ಹಿನ್ನೋಟ ದಲ್ಲಿ ಸತ್ಯವನ್ನು, ವಸ್ತುಸ್ಥಿತಿಯನ್ನೂ ಸರಿಯಾಗಿಯೇ ಗ್ರಹಿಸಿಬಿಡಬಹುದೆಂಬ ನಂಬಿಕೆಯೇ ಹೆಚ್ಚಾಗಿತ್ತು.

ಕಪ್ಪಣ್ಣ ದೊಡ್ಡಪ್ಪನೂ, ಉಳಿದ ದೊಡ್ಡಪ್ಪಂದಿರು ಎಲ್ಲರೂ ಅಪ್ಪನಂತೆಯೇ. ಕಾಸಿನ ಆಸೆ, ಹೆಂಗಸರ ಶೋಕಿ, ಎಡಬಿಡಂಗಿ ಜೀವನ ಎಲ್ಲದರಲ್ಲೂ. ಆದರೂ ನಮ್ಮಪ್ಪನಿಗೆ ಮಾತ್ರ ಯಾಕೆ ಎಲ್ಲವನ್ನೂ ಅತಿಗೆ ತಗೊಂಡು ಹೋಗಿ ಆತ್ಮಹತ್ಯೆ ತಲುಪಬೇಕು ಅಂತ ಅನಿಸಿತು. ಅಥವಾ ಅವನಿಗೆ ಅದೆಲ್ಲ ಅತಿ ಎನಿಸಲಿಲ್ಲವೆ, ಹಣದ ಓಡಾಟ, ಹಣ ಹೆಚ್ಚಾಗಿದ್ದಾಗ ಸಿಗುವ ಸ್ನೇಹಿತರು ಕೊಟ್ಟ ಪ್ರೋತ್ಸಾಹದಿಂದ ಹೀಗಾಯಿತೆ? ಹೋಗಲಿ ಆ ಅತಿಯಲ್ಲಿ ಅವನಿಗೆ ಏನಾದರೂ ಕಂಡು ಬೇಸರವಾಗಿ ಆತ್ಮಹತ್ಯೆಗೆ ಹೋದನೆ? ಮಲಯಾಳಿ ನರ್ಸ್ ನಳಿನಿ ಮೂಲಕನು ಒಬ್ಬ ಮಗ ಇದ್ದನಂತಲ್ಲ ಅವನಿಗೆ. ಅವನು ಈಗ ಏನಾಗಿದಾನೋ, ಎಲ್ಲಿದಾನೋ, ಅವನಿಗೆ ಅಪ್ಪನ ಬಗ್ಗೆ ಏನನಿಸುತ್ತಿರುತ್ತೋ? ಈಗ ಇಷ್ಟು ವರ್ಷವಾದ ಮೇಲೆ ಕಪ್ಪಣ್ಣ ದೊಡ್ಡಪ್ಪ ಈ ಕಾರಣ ಕೊಟ್ಟು ಆತ್ಮಹತ್ಯೆ ಮಾಡಿಕೊಂಡದ್ದು ನಮ್ಮ ಅಪ್ಪನಿಗೆ ಹೇಗಾದರೂ ಸರಿಯೇ ತಿಳಿಯುವುದು ಸಾಧ್ಯವಾಗಿದ್ದರೆ ಅದೆಷ್ಟು ಚೆನ್ನಾಗಿತ್ತು. ಹಾಗೆ ತಿಳಿಯಲಿ ಅನ್ನುವ ಕಾರಣಕ್ಕೆ ದೊಡ್ಡಪ್ಪ ಆತ್ಮಹತ್ಯೆ ಮಾಡಿಕೊಂಡಿರಬೇಕು.

ಹಾಡು ಹಸೆ, ವ್ರತ ನೇಮಗಳಲ್ಲೇ ಮುಳುಗಿ ಅಪ್ಪನ ದರ್ಪದ ನೆರಳಲ್ಲೇ ಇದ್ದ ಅಮ್ಮನ ಜೊತೆ ನಾವಿದ್ದರೂ ಅವಳು ಯಾವಾಗ ವಿದ್ಯೆಯ, ಉದ್ಯೋಗದ ಆಸೆಗೆ

ಹೊರಳಿಕೊಂಡಳು: ನಮ್ಮ ಕಣ್ಣೆದುರಿಗೇ ಸದಾ ಕಾಲ ಇದ್ದರೂ ಕೆಲವರು ನಮ್ಮಿಂದ ಬೇರೆಯಾಗುವುದು ಮತ್ತೆ ಯಾವುದೋ ಮಗ್ಗುಲಿಗೆ ಹೊರಳಿಕೊಳ್ಳುವುದು ನಮಗೆ ಗೊತ್ತಾಗುವುದೇ ಇಲ್ಲವಲ್ಲ. ಹಾಗೆ ನಮಗೆ ಗೊತ್ತಾಗುವ, ತಿಳಿಯುವ ಶಕ್ತಿ ಇರುವುದಿಲ್ಲವೆಂದೇ ಅವರು ಹೊರಳಿ ಕೊಳ್ಳುತ್ತಾರೇನೋ. ಆಗೆಲ್ಲ ನರಸಿಂಹಯ್ಯ ಸಿಹಿ ಸಿಹಿ ಮಾತಿನ ಮೊದ್ದು ಮನುಷ್ಯನಾಗಿ ಕಾಣ್ತಿದ್ದ. ಟೀಚರ್ ಟ್ರೈನಿಂಗ್‌ಗೆ ಬಂದಾಗಲೇ ಆತ ತುಂಬು ಸಂಸಾರಿಯಂತೆ. ಆ ಸಂಸಾರದಲ್ಲಿ ಸಿಕ್ಕದೇ ಇದ್ದದ್ದು ಅಮ್ಮನ ಹತ್ತಿರ ಏನು ಕಂಡ ? ಯಾಕೆ ಅವಳನ್ನು ಹೊರಳಿಸಿದ, ಯಾಕೆ ಅಮ್ಮ ತೆರೆದುಕೊಂಡಳು. ಬಾಲ್ಯವೆಲ್ಲ ಹೀಗೆ ಪ್ರಶ್ನೆಗಳಾಗಿ, ಒಗಟುಗಳಾಗಿ ಮೆರವಣಿಗೆಗೆ ಬರೋದು. ಮನಸ್ಸು ಒಮ್ಮೊಮ್ಮೆ ಅಮ್ಮನಿಗೆ - ನರಸಿಂಹಯ್ಯನಿಗೆ ದೈಹಿಕ ಸಂಬಂಧವನ್ನೂ ಕಲ್ಪಿಸಿಕೊಳ್ಳೋದು. ಆ ಕಲ್ಪನೆಗೇ ಭಯವಾಗೋದು. ಇಷ್ಟೊಂದು ವರ್ಷಗಳ ನಂತರದಲ್ಲಿ ಅಂತಹ ಸಂಬಂಧದ ಬಗ್ಗೆ ಯೋಚಿಸೋದು ಕೂಡ ಅಪ್ರಸ್ತುತ ಅಂತನೂ ಹಿಂದೆಯೇ ಹೊಳೆಯೋದು.

ನೆನಪುಗಳೇ ಹಾಗೆ. ಸುಮ್ಮನೆ ಒತ್ತಿಕೊಂಡು ಬರುತ್ತವೆ. ಅವುಗಳು ಹುಟ್ಟಿಸುವ ಯಾವ ಆಸೆಯನ್ನೂ ದಡ ತಲುಪಿಸುವುದಿಲ್ಲ. ಅಪ್ಪನ ಋಣದ ಬಾಬ್ತು ದೊಡ್ಡಪ್ಪಂದಿರಿಂದ ವಾಪಸ್ ಸಿಗುವುದಿರಲಿ, ಮೂವತ್ತು ನಲವತ್ತು ವರ್ಷಗಳ ಕಾಲದ ಜಗಿತದಲ್ಲೂ ಕಹಿ, ಒಗರು ಕಳೆದುಕೊಳ್ಳದ ಸಣ್ಣತನ ದಾಯಾದಿ ಮತ್ಸರ ಕುಮಾರನನ್ನು ಕಂಗಾಲಾಗಿಸಿತು. ಎಷ್ಟೆಂದರೆ ತಾನೂ ಕೂಡ ಇದೆಲ್ಲದರ ಒಂದು ಭಾಗವಾಗಿಹೋಗಿದ್ದೇನೆ ಎಂಬುದೇ ತಿಳಿಯದಷ್ಟು.

ಅಮ್ಮನನ್ನು ಹುಡುಕಿಕೊಂಡು ನಾಗಮಂಗಲಕ್ಕೆ ಹೋದ. ಕೋಟದ ಬೀದಿ ಕೊನೆಯಲ್ಲಿ ಗಂಗರಸರ ಕಾಲದಿಂದಲೂ ನಿಂತಿರುವ ತೇರಿನ ಪಕ್ಕದ ಜಗುಲಿ ಮನೆಯಲ್ಲಿ ಅಲ್ಲವೇ ಇವರಿದ್ದುದ್ದು. ಆ ಮನೆಯ ಬದಲು ಈಗ ಅಲ್ಲೊಂದು ಸ್ಟೇಷನರಿ ಅಂಗಡಿ ಇತ್ತು. ತಾವೆಲ್ಲ ಅಲ್ಲಿ ಕೆಲ ವರ್ಷ ಇದ್ದದ್ದು ಯಾರಿಗೂ ಸ್ಪಷ್ಟವಾಗಿ ನೆನಪೂ ಕೂಡ ಇರಲಿಲ್ಲ. ಇವನೇ ನೆನಪಿಸಿದಾಗ ಹೌದಲ್ಲವೇ ಅಂದರು. ಹಾಗೆ ಹೌದಲ್ಲವೇ ಅಂತ ಕೇಳಿದವರ ಮುಖದಲ್ಲೂ ಕೂಡ ನಾಗರತ್ನನ ಹೆಸರು ಹೇಳಿದ ತಕ್ಷಣ ಅಷ್ಟೊಂದು ವರ್ಷಗಳ ನಂತರವೂ ವ್ಯಂಗ್ಯದ ನಗೆಯ ಎಳೆಯೊಂದು ಮೂಡಿತು. ಅಂತಹ ನಗೆ ನೋಡಿ ಇವನೇ ತಲೆ ತಗ್ಗಿಸಿದ. ಕದಬಳ್ಳಿಗೆ ಹೋಗಿ ವಿಚಾರಿಸಿದರೆ ನಾಗರತ್ನ ಯಾವುದೋ ಕಾಲದಲ್ಲಿ ಸ್ಕೂಲು ಬಿಟ್ಟಿದ್ದು ತಿಳೀತು. ಗಟ್ಟಿ ಮನಸ್ಸು ಮಾಡಿ ಕುಣಿಗಲ್‌ಗೆ ಹೋದರೆ ಅಲ್ಲಿ ನರಸಿಂಹಯ್ಯನೇ ಸತ್ತು ನಾಲ್ಕು ವರ್ಷಗಳಾಗಿತ್ತು. ಇದೆಲ್ಲ ಸೇರಿ ಕುಮಾರನ ತವಕ ಹೆಚ್ಚಿ ತಾವು ತಾಯಿ ಮಕ್ಕಳು ಪರಸ್ಪರ ತೊರೆದು ಕೊಂಡದ್ದು, ದೂರವಾದ್ದು ಯಾವಾಗ ಯಾವಾಗ ಅಂತ ಆದಿಕ್ಷಣದ ನಿಗದಿ ಮಾಡಿಕೊಳ್ಳೋಕೆ ಹಾತೊರೆದ.

ಹೀಗೆ ಅಲೆದಾಡುತಾ, ವಿಚಾರಿಸುತಾ ಕೊನೆಗೆ ನಾಗರತ್ನ ಬೇರೆಲ್ಲೂ ಹೋಗಿರದೆ ಮಂಡ್ಯದಲ್ಲೇ ಇರುವುದಾಗಿ ತಿಳಿಯಿತು. ಮಾರವಾಡಿ ಸಂಘದವರು ನಡೆಸುವ ಗುಲಾಬ್ ಚಂದ್ ಕಿವುಡು-ಮೂಗು ಮಕ್ಕಳ ಸ್ಕೂಲಿನಲ್ಲಿ ಸಂಜ್ಞೆ ಮೂಲಕ ಪಾಠ ಹೇಳಿಕೊಡುವುದನ್ನು ಕಲಿತುಕೊಳ್ಳುತ್ತಾ ಅಲ್ಲೇ ಮೇಡಮ್ಮಾಗಿ ವಾರ್ಡನ್ ಆಗಿ ಅವರ ಹಾಸ್ಟೆಲಿನಲ್ಲೇ ಇದ್ದುಬಿಟ್ಟಿದ್ದಳು. ಮಂಡ್ಯಕ್ಕೇ ಸಾಹುಕಾರರಾದ ಗುಲಾಬ್ ಚಂದ್‌ರ ಗಂಡುಮಕ್ಕಳಿಗೆ ಹುಟ್ಟಿನಿಂದ ಮಾತಾಡುವ ಶಕ್ತಿಯೇ ಇರಲಿಲ್ಲ. ಸಾಹುಕಾರಿಕೇನ ಮುಂದಾಗಿಟ್ಟು ಕೊಂಡು ತಂಪಾದ ಮನೆಯಿಂದ ಚಂದದ ಸೊಸೆಯರನ್ನು ತಂದಿದ್ದರು. ಮಕ್ಕಳು-ಸೊಸೆಯಂದಿರಿಗೆ ವಂಶ ಮುಂದುವರೆಸುವ ಧೈರ್ಯವೇ ಬಂದಿರಲಿಲ್ಲ. ಕೊನೆಗೆ ಗುಲಾಬ್ ಚಂದರೇ ಧೈರ್ಯಮಾಡಿ ಕಿವುಡು-ಮೂಗ ಮಕ್ಕಳ ಸ್ಕೂಲು ತೆರೆದಿದ್ದರು.

ನಾಗರತ್ನನ ಪತ್ತೆ ತಿಳಿದ ಮೇಲೆ ಕುಮಾರನಿಗೆ ಅವಳನ್ನು ನೋಡುವ ಧೈರ್ಯವೇ ಹಿಂಗಿಹೋಯಿತು. ತಾಯಿಯ ಹತ್ತಿರ ಏನು ಹೇಳಬೇಕು, ಹೇಳಬಾರದು ಎಂಬುದು ಹೊಳೆಯೋಕೆ ಕಷ್ಟವಾಯಿತು. ತಾನು ವಸಂತ ಸೇರಿ ಗೋಳು ಹುಯ್ದುಕೊಳ್ಳುತ್ತಿದ್ದುದು, ಅವಮಾನಪಡುತ್ತಿದ್ದುದು ಎಲ್ಲವೂ ತಪ್ಪಾಯಿತೆಂದು ಹೇಳಬಹುದೇ, ಅದು ತಾವು ತಿಳಿಯದೆ ಮಾಡಿದ ತಪ್ಪೆಂದು ಈಗ, ಇಂದು ವಿವರಿಸ ಬಹುದೆ ? ವಸಂತಳ ನಿಗ್ರೋ ಮದುವೆ, ಡೈವೋರ್ಸ್, ತಂದೆ-ತಾಯಿ ಬಂಧು ಮಿತ್ರರ ಪ್ರೀತಿ ಒತ್ತಾಸೆಯೇ ಇಲ್ಲದೆ ಬೆಳೆದ ತಮ್ಮ ಮೇಲೆ ಆಗಿರುವ ಪರಿಣಾಮದ ಕತೆ ಹೇಳ ಬಹುದೇ. ಕಪ್ಪಣ್ಣ ದೊಡ್ಡಪ್ಪನ ಆತ್ಮಹತ್ಯೆ, ಇವಳಿರುವ ಹಾಸ್ಟಲಿನಿಂದ ಮೂರು ಬೀದಿ ಆಚೆಯಲ್ಲಿ ಜರುಗಿದ್ದು. ನಾನು ಈಗ ಇಲ್ಲಿಗೆ ಬಂದಿರುವುದೆಲ್ಲ ಅಮ್ಮನಿಗೆ ತಿಳಿದಿರುತ್ತದೆಯೆ. ಅಮ್ಮನ ಇಷ್ಟು ದಿನಗಳ ಏಕಾಂತದ ನೆನಪಿನಲ್ಲಿ ಮಕ್ಕಳಾದ ನಮ್ಮ ಸ್ಥಾನ ಎಷ್ಟಿರಬಹುದು ? ಎಲ್ಲೆಲ್ಲೋ ಏಕೇಕೋ ಹರಡಿ ಹೋಗಿರುವ ನಾವೆಲ್ಲರೂ ಈ ಭೂಮಿಯ ಮೇಲಿದ್ದೇವೆ ಎನ್ನುವುದು ಮಾತ್ರವೇ ಇಂದು ನಮ್ಮನ್ನು ಬಂಧಿಸುವ ತಂತುವಾಗಿದೆಯೆ ?

ಕುಮಾರ ನಾಗರತ್ನಮ್ಮನ ಹಾಸ್ಟೆಲ್ ರೂಮಿಗೆ ಹೋದಾಗ ಆಕೆ ರವಿಕೆ ಬಿಗಿಯಾಗಿಬಿಟ್ಟಿದೆಯೆಂದು ಹೊಲಿಗೆಯನ್ನು ಬಿಡಿಸುತ್ತಾ ಕೂತಿದ್ದಳು. ಈ ಸ್ಕೂಲಿಗೆ ಸೇರಿದ ಮೇಲೆ ಕಿವುಡು-ಮೂಗ ಮಕ್ಕಳಿಗೆ ಪಾಠ ಹೇಳುವ ಪರಿಪಾಠದಲ್ಲಿ ಅವಳಿಗೆ ಮಾತಾಡುವ ಅಭ್ಯಾಸವೇ ಕಡಮೆಯಾಗ್ತಾಯಿತ್ತು. ಕುಮಾರನನ್ನು ನೋಡಿದ ತಕ್ಷಣ ರವಿಕೆಯನ್ನು ಹಾಗೆ ನೆಲದ ಮೇಲೆ ಹಾಕಿ ತಟಕ್ಕನೆ ಎದ್ದು ನಿಂತುಕೊಂಡರೂ ಮಾತೇ ಹೊರಟಿರಲಿಲ್ಲ. ಕುಮಾರನೊಳಗೆ ಮಥಿಸುತ್ತಿದ್ದ ಮಾತುಗಳು ಕೂಡ ಹಾಗೇ ಒಳಗಡೆಯೇ ಉಳಿದುಬಿಟ್ಟವು.

ಹಾಸ್ಟಲಿನ ಅಡಿಗೆ ಮನೆಯಿಂದಲೇ ಒಂದು ಲೋಟ ಹಾಲು ಕೊಡಿಸಿದ್ದು. ಇಬ್ಬರೂ ಕಷ್ಟಪಟ್ಟು ಮಾತಾಡಿಕೊಂಡ ಔಪಚಾರಿಕ ಮಾತುಗಳು ಎಲ್ಲವೂ ಸೇರಿ ಒಂದು ಎಂಟು-ಹತ್ತು ನಿಮಿಷ ಕಳೆದಿರಬೇಕು ಅಷ್ಟೆ. ಏಕೆಂದರೆ ದೂರದ ಅಮೆರಿಕದಲ್ಲಿ ಈ ಭೇಟಿಯನ್ನು ಮತ್ತೆ ಮತ್ತೆ ನೆನಪಿಸಿ ಕೊಳ್ಳಲು ಕುಮಾರ ಪ್ರಯತ್ನಿಸುವಾಗ ಯಾವ ಮಾತು, ಯಾವ ಭಾವಗಳು ನೆನಪಿಗೆ ಬರುವುದಿಲ್ಲ. ಬಾಲ್ಯದಲ್ಲಿ ಪಡೆಯಲಾಗದ್ದನ್ನು ಮತ್ತೆ ಇನ್ನೆಂದು ಪಡೆಯೋಕ್ಕೆ ಆಗೋಲ್ಲವೆಂಬ ಭಾವ – ಪ್ರತಿಸಲ ನೆನಪು ಸೋತಾಗಲೂ ಹುಟ್ಟುವ ಭಾವ – ಎಷ್ಟು ಔಚಿತ್ಯದ್ದೆಂದು ಕೂಡ ಅವನಿಗೆ ಖಾತರಿಯಾಗಿಲ್ಲ. ನಿಗದಿಯಾದ ಸಂಗತಿಯೆಂದರೆ ಈ ಎಲ್ಲ ಓಡಾಟ-ಆಲೋಚನೆಗಳ ನಡುವೆಯೂ ಕುಮಾರನ ಹೆಂಡತಿ ಮಾಧವಿ – ಎರಡನೆ ಮಗುವಿಗೆ ಗರ್ಭಿಣಿಯಾದದ್ದು.

ಕೆ. ಸತ್ಯನಾರಾಯಣ
೫೦೩/೧, ಸೆಂಟ್ರಲ್ ರೆವಿನ್ಯೂ ಕ್ವಾರ್ಟರ್ಸ್,೧೫ನೇ ಮುಖ್ಯರಸ್ತೆ,
ಅಣ್ಣಾನಗರ, ಚೆನ್ನೈ - ೬೦೦೦೪೦

## ಕೇಳು

ಎಂದೋ ಮಿತಿಯ ಅರಿತಿರಬೇಕೆಂದವರು
ಇಂದೇಕೆ ಇದನರಿಯಲಿಲ್ಲ

ವಿವರಿಸಿ
ನೊಂದರೆ ನೇವರಿಸಿ
ಮುನಿದರೆ ರಮಿಸಿ
ಒಳಗೊಂಡರೆ ಹೊಲೆ ಹೇಗೆ
ರುಜುಪಡಿಸಲು ಕೇಳಿದ್ದಲ್ಲ
ಅಂತಾದರೂ ಸರಿಯೇ
ಸಂಗವೆಂದರೆ ಸುಮ್ಮನಲ್ಲ
ತೆಪ್ಪಗಿನ ತ್ಯಾಗವಲ್ಲ
ಮೋಹ ಮಾಯೆಯ ಬೆಳಕು
ಸಂತೆಯ ಸೊನ್ನೆ ಇನ್ನೂ ಸಿದ್ಧಿಸಿಲ್ಲ
ಸತ್ಯ ತೋರುವುದೇ ಎದೆ ತೆರೆದು ಅರಳುವುದು
''ಮಾತು ಹೊಲೆ ಎನದಿರು...''

ಕನಕ, ಹಾ. ಮ.
ಡಿ-೪೦೯, ಇನ್‌ಲ್ಯಾಕ್ಸ್ ಪಾರ್ಕ್, ಯರಿ ರೋಡ್,
ವರ್ಸೋವ, ಪಶ್ಚಿಮ ಅಂಧೇರಿ, ಮುಂಬೈ-೬೧





Allama Prabhu Patil Nelogi
President

# ZILLA PANCHAYAT

## GULBARGA

### High Light of Major Achievements During the last 18 months

## WELFARE SCHEMES OF GOVERNMENT:

| | | | |
|---|---|---|---|
| **A.** | **SOCIAL WELFARE** | | |
| | 1) | No. of Hostel Building taken up | 10 |
| | 2) | Scholarship awarded (1st std. to PUC) | 1,24,285 |
| | 3) | Sewing machines distributed | 62 |
| | 4) | No. of SC families benefited under SCP in Various Deptl Programmes | 1,539 |
| | 5) | No. of ST families benefited under TSP in Various Deptl Programmes | 586 |
| **B.** | **SC/ST CORPORATION** | | |
| | 1) | No. of Ganga Kalyana Schemes Completed | 71 |
| | 2) | Individual; B.W. Schemes Completed | 89 |
| **C.** | **BACKWARD CLASSES & MINORITIES** | | |
| | 1) | No. of Hostel Building Constructed | 5 |
| | 2) | No. of Sewing Machines Supplied to beneficiaries | 56 |
| | 3) | Scholarship awarded to No. of Students | 23,820 |
| | 4) | No. of beneficiaries benefited under Mangal Bhagya Schemes | 64 |
| **D.** | **B. C. M. CORPORATION:** | | |
| | 1) | KMDC. | *Beneficiaries* |
| | | a) Swavalambana Margin Money & Subsidy Scheme | 353 |
| | | b) Direct Loan Scheme | 111 |
| | | c) Training schemes : Computer, Motor driving & Zari Embroidery | 365 |
| | | d) Ganga Kalyana Scheme (18 units) | 61 |
| | 2) | K.B.C.D.C. | |
| | | a) Chaitanya Margin money and subsidy scheme | 301 |
| | | b) Chaitanya Direct Loan Scheme | 90 |
| | | c) Training schemes : Computer & Motor Driving | 52 |
| | | d) Ganga Kalyan Scheme | 47 |
| | 3) | WOMEN AND CHILD | |
| | | 1) No. of SHGs Group formed under "Sthree Shakti" Programme | 3,495 |
| | | 2) No. of SHGs Group formed under "Mahila Arthika Swavalamban" | 90 |
| | | 3) No. of Women availed Subsidy under "Mane Belaku" | 60 |
| | | 4) No. of Women availed Subsidy under "UDYOGINE" | 28 |
| | | 5) No. of Women undergone Computer Training | 130 |

**AND**

*Major Schemes underway to meet the basic needs of the Downtrodden –*

*Education, Road Building, Bridges, Drinking Water, Housing, Wage Employment Programme, Health, Electrification, Etc.,*

# ಬೆಸ್ತರ ದಾರಿದೀಪಗಳು

■ ಡಾ|| ಬಿ. ಎಸ್. ಶೈಲಜಾ

ಎಲ್ಲೆಲ್ಲೂ ಸಮತಟ್ಟಾದ ನೆಲ. ಗುಡ್ಡ ಬೆಟ್ಟಗಳೇ ಇಲ್ಲ. ಮರಳು ಮಿಶ್ರಿತ ಜೇಡಿಮಣ್ಣಿನ ನೆಲ. ಅಲ್ಲೊಂದು ಇಲ್ಲೊಂದು ಕುರುಚಲು ಗಿಡಗಳು. ಅರ್ಧಗಂಟೆ ನಡೆದರೆ ಸಮುದ್ರ. ಅಲ್ಲಿ ಹತ್ತಿಪ್ಪತ್ತು ಗುಡಿಸಲುಗಳು. ಹಿಂದಿರುಗಿ ಮತ್ತೊಮ್ಮೆ ಅರ್ಧಗಂಟೆ ನಡೆದರೆ ಪುನಃ ಸಮುದ್ರ. ಅಲ್ಲಲ್ಲಿ ಗುಡಿಸಲುಗಳು. ಸಂಜೆ ಆಯಿತೆಂದರೆ ಚಟುವಟಿಕೆ ಆರಂಭ. ಬಲೆಗಳನ್ನು ಹೊತ್ತು ದೋಣಿಗೆ ಹಾರುವ ಬೆಸ್ತರು. ದೋಣಿಗಳ ಹಾಯಿಪಟ ದೂರ ಸಾಗುತ್ತದೆ. ಮಬ್ಬುಗತ್ತಲಲ್ಲೂ ಚುಕ್ಕೆಗಳಂತೆ ಕಾಣತೊಡಗುತ್ತವೆ. ಕತ್ತಲು ಗಾಢವಾದಂತೆ ಆಕಾಶದ ಚುಕ್ಕೆಗಳೊಡನೆ ಬೆರೆತು ಹೋಗುತ್ತವೆ. ಎಲ್ಲೆಲ್ಲೂ ಚುಕ್ಕೆಗಳದೇ ಸಾಮ್ರಾಜ್ಯ.

ದೋಣಿಯಲ್ಲಿ ಕುಳಿತ ಬೆಸ್ತನಿಗೆ ಕತ್ತಲಲ್ಲೇ ಮೀನಿನ ಅಳತೆ ಸಿಗುತ್ತದೆ. ಸಾಕು ಎನಿಸಿದಾಗ ಮನೆಗೆ ಹಿಂದಿರುಗುವ ತವಕ. ಎಲ್ಲಿದೆ ಮನೆ ? ಸುತ್ತಲೂ ನೀರು. ಅವನ ಬಳಿ ಇರುವ ದೀಪ ಮೀನೆಣಿಕೆಗೆ ಸಾಕು. ನೀರ ಮಧ್ಯೆ ಅವನಿಗೆ ದಾರಿ ಕಾಣುವುದು ಹೇಗೆ ?

ಬೆಸ್ತ ಯಾರನ್ನೂ ಸಮಯ ಕೇಳಲಾರ; ದಾರಿಯನ್ನು ಕೇಳಲಾರ. ತಲೆ ಎತ್ತಿ ನೋಡಿದರೆ ಸಾಕು. ಅವನ ದಾರಿ ತೋರುವ ದೀಪಗಳು ಅಲ್ಲಿವೆ. – ಅಗೋ ಅಲ್ಲಿದೆ ''ತಕ್ಕಡಿ''; ಇಲ್ಲಿದೆ ''ತೂಗುದೀಪ''– ಆ ದಿಕ್ಕಿಗೆ ಹೊರಟರಾಯಿತು, ಮನೆ ಸಿಗುತ್ತದೆ.

ಇದು ಎರಡು ಸಾವಿರ ವರ್ಷಗಳ ಹಿಂದಿನ ಜೀವನ ಚಿತ್ರಣ; ಬಹುಶಃ ಲಕ್ಷದ್ವೀಪಗಳಲ್ಲೊಂದು ದ್ವೀಪದ್ದಿರಬಹುದು ಎಂದು ನಿಮಗನ್ನಿಸಬಹುದು. ನಿಮ್ಮ ಊಹೆ ತಪ್ಪು. ಈ ವರದಿ ಪ್ರಕಟವಾಗಿದ್ದುದು ಜನವರಿ ೨೦೦೧ರಲ್ಲಿ - 'ಮರ್ಕ್ಯುರಿ' ಎಂಬ ಹೆಸರಿನ ಖಗೋಳ ವೈಜ್ಞಾನಿಕ ಪತ್ರಿಕೆಯಲ್ಲಿ. ಈಗಲೂ ನಡೆಯುತ್ತಿರುವ ಜೀವನ ಶೈಲಿಯ ಚಿತ್ರಣ ಇದು.

ನಾಗರಿಕ ಜಗತ್ತಿನ ಆಟಾಟೋಪಗಳಿಂದ ದೂರ ಉಳಿದಿರುವ ಎರಡು ದ್ವೀಪಗಳಿವೆ, ಮೆಡಿಟರೇನಿಯನ್ ಸಮುದ್ರದಲ್ಲಿ. ಚೆರ್‌ಗುಯಿ ಮತ್ತು ಘಾರ್ಬಿ ಎಂಬ ಈ ಎರಡೂ ದ್ವೀಪಗಳಿಗೆ ಒಟ್ಟಾಗಿ ಕೆರ್ಕೆನ್ನಾಹ್ ದ್ವೀಪಗಳು ಎಂಬ ಹೆಸರಿದೆ. ಭೂಪಟ ತೆಗೆದು ಹುಡುಕಿದರೆ ಸಿಗಲಾರದು. ಎರಡು ಚುಕ್ಕೆಗಳು ಕಾಣಬಹುದು. ಆಫ್ರಿಕಾದ ಟ್ಯುನೀಸಿಯದಿಂದ ೨೫ ಕಿ.ಮೀ. ದೂರದಲ್ಲಿವೆ. ಎರಡೂ ದ್ವೀಪಗಳ ಒಟ್ಟು ಜನಸಂಖ್ಯೆ ೧೪,೦೦೦. ದಡದುದ್ದಕ್ಕೂ ಅಲ್ಲಲ್ಲೇ ಗುಡಿಸಲುಗಳ ಗುಂಪನ್ನು ಹಳ್ಳಿ ಎಂದು ಕರೆಯಲು ಸಾಧ್ಯವಾದರೆ – ಹತ್ತು-ಹದಿನೈದು ಇವೆ ಎನ್ನಬಹುದು. ಸಮೀಪದ ನಗರ ಎಂದರೆ ಟ್ಯುನೀಸಿಯಾದ ಸ್ಫಾಕ್ಸ್ (Sfax). ಅಲ್ಲಿಗೊಂದು ಚಿಕ್ಕ ಹಡಗು ನಿತ್ಯವೂ ಓಡಾಡುವುದರಿಂದ ಮೀನುಗಳ ಸಾಗಾಣಿಕೆ ನಡೆಯುತ್ತದೆ. ಬೆಸ್ತರ ಜೀವನ ಸಾಗುತ್ತದೆ.

ಈಗ ಕೆಲವು ವರ್ಷಗಳ ಹಿಂದೆ ವಿದ್ಯುತ್ ಪ್ರವೇಶಿಸಿದ ಮೇಲೆ ಒಂದೋ ಎರಡೋ ವಿದ್ಯುದ್ದೀಪಗಳಿವೆ. ಆದರೂ ಬೆಸ್ತರಿಗೆ ಅವುಗಳು ಬೇಕಿಲ್ಲ.

ಕೆರ್ಕೆನ್ನಾಹ್ ಪದದ ಮೂಲ ಹುಡುಕಲು ಸಮಾಜ ವಿಜ್ಞಾನಿಗಳು ಪ್ರಯತ್ನಿಸಿದ್ದಾರೆ. ಅವರ ಅಧ್ಯಯನದಿಂದ ತಿಳಿಯುವ ಅಂಶವೆಂದರೆ ಎರಡು ಸಾವಿರ ವರ್ಷಗಳಿಂದ ಇಲ್ಲಿ ಬಗೆಬಗೆಯ ಸಂಸ್ಕೃತಿಗಳು ಆಳ್ವಿಕೆ ನಡೆಸಿವೆ; ಪ್ರಭಾವ ಬೀರಿವೆ. ಫಿನೀಷಿಯನ್ನರು, ರೋಮನ್ನರು, ಅರಬ್ಬರು, ಫ್ರೆಂಚರು ಎಲ್ಲರೂ ಇಲ್ಲಿ ಕಾಲಿಟ್ಟು ಹೋಗಿದ್ದಾರೆ. ಆದರೆ




ತೊಂಬತ್ತು ಲಕ್ಷ ಲಂಚ ತಿಂದವನನ್ನು
ಈಚೆಗೆ ಹಿಡಿದುಹಾಕಿದರಂತೆ !
''ವರ್ಷದ ಮೇಲೆ ಹಿಡಿದು ಹಾಕಿದ್ದರೆ
ಕೋಟಿ ಕೊಡ್ತಿದ್ದಲ್ಲ'' ಸಿಕ್ಕಿಕೊಂಡವನ ಚಿಂತೆ

ಇಲ್ಲೇ ಉಳಿಯಲು ಯಾವ ಆಕರ್ಷಣೆಯೂ ಇಲ್ಲವಾದ್ದರಿಂದಲೋ ಏನೋ ಸ್ಥಳೀಯರು ಮಾತ್ರವೇ ಉಳಿದುಕೊಂಡಿದ್ದಾರೆ. ಅವರ ಸ್ವಂತಿಕೆಯನ್ನೂ ಕಾಪಾಡಿಕೊಂಡಿದ್ದಾರೆ. ಅವರ ಸಂಸ್ಕೃತಿಯ ಮೂಲವನ್ನು ನಿರ್ದಿಷ್ಟವಾಗಿ ಗುರುತಿಸುವುದು ಸಾಧ್ಯವಾಗಿಲ್ಲ.

ತಮ್ಮ ಅನುಕೂಲಕ್ಕೆ ಅಗತ್ಯವಾದ ದಾರಿದೀಪಗಳನ್ನು ಅವರು ಗುರ್ತಿಸಿಕೊಳ್ಳುವುದರಲ್ಲಿಯೂ ಅವರ ಸ್ವಂತಿಕೆ ಎದ್ದು ಕಾಣುತ್ತದೆ. ಅತಿ ಮುಖ್ಯವಾದ ದಿಕ್ಸೂಚಿ, ಸ್ಕಿಯಾ - ಇದು ಧ್ರುವ ನಕ್ಷತ್ರದ ಹೆಸರು. ಉತ್ತರ ದಿಕ್ಕನ್ನು ಸೂಚಿಸುವ ನಕ್ಷತ್ರ ಇದು. ಮುಂದಿನ ಮುಖ್ಯ ಹೆಗ್ಗುರುತು ಚಂದ್ರ. ಇದು ದಿಕ್ಸೂಚಿಯೂ ಹೌದು, ಗಡಿಯಾರವೂ ಹೌದು. ಇಂದಿನ ನಾಗರಿಕರಿಗೆ ಚಂದ್ರ, ಪಠ್ಯಪುಸ್ತಕಗಳಲ್ಲಿ ಮಾತ್ರ ಅವಶ್ಯವಾಗಿ ಕಂಡುಬರುವ ಹೆಸರು. ಆದರೆ ಇಲ್ಲಿಯ ಜನರು ಚಂದ್ರನ ಉದಯ, ಅಸ್ತಮಾನಗಳನ್ನು ನಿಮಿಷಗಳ ನಿಖರತೆಗೆ ಬಾಯಿಮಾತಿನ ಲೆಕ್ಕ ಹಾಕಿ ಹೇಳಬಲ್ಲರು. ರಾತ್ರಿಯಲ್ಲಿ ಸಮಯ ಎಷ್ಟಾಗಿದೆ ಎಂದು ಅಂದಾಜು ಮಾಡುವುದು, ಅಲ್ಲದೆ ಭರತ-ಇಳಿತಗಳ ಸಮಯದ ಲೆಕ್ಕ, ಇಷ್ಟು ಮಾತ್ರವಲ್ಲದೆ ದಿಕ್ಕುಗಳನ್ನು ಗುರುತಿಸಲೂ ಚಂದ್ರನನ್ನು ಬಳಸುತ್ತಾರೆ. ನೆತ್ತಿಯ ಮೇಲೆ ಅರ್ಧಚಂದ್ರ ಕಂಡಾಗ ಅದರ ಆಕಾರದಿಂದಲೇ ಪೂರ್ವ, ಪಶ್ಚಿಮಗಳನ್ನು ಗುರುತಿಸುತ್ತಾರೆ. (ಇದು ಹೇಗೆ ಸಾಧ್ಯ ? ಪ್ರಯತ್ನಿಸಿ ನೋಡಿ).

ಗ್ರಹಗಳೂ ಇವರಿಗೆ ಸುಪರಿಚಿತ. ಪ್ರತಿ ರಾತ್ರಿಯೂ ಅವುಗಳ ಚಲನೆಯನ್ನು ಗಮನಿಸುವುದರಿಂದ ಅವುಗಳ ಸಹಾಯದಿಂದ ಸಮಯ ಹೇಳುವುದೂ ಸಾಧ್ಯವಿದೆ. ಈ ಬಾಯಿಲೆಕ್ಕವನ್ನು ಇವರು ಸಲೀಸಾಗಿ ಮಾಡಬಲ್ಲರು. ಇನ್ನು ಸಂಜೆ, ಮುಂಜಾವುಗಳಲ್ಲಿ ಮಾತ್ರ ಕಾಣುವ ಬುಧ ಮತ್ತು ಶುಕ್ರಗಳು ಇವರಿಗೆ ''ಅಲಾರಂ'' ! ಸನಿಹದ ದೊಡ್ಡ ಪಟ್ಟಣಕ್ಕೆ (ಸ್ಫಾಕ್ಸ್) ಹೊರಡುವ ಸಮಯವನ್ನು ಈ 'ಅಲಾರಂ'ಗಳಿಂದಲೇ ನಿರ್ಧರಿಸಿಕೊಳ್ಳುತ್ತಾರೆ. ಚಳಿಗಾಲದಲ್ಲಿ ಇಬ್ಬನಿ ಆವರಿಸಿದಾಗ ನಕ್ಷತ್ರಗಳು ಕಾಣದಿದ್ದರೂ ಪ್ರಕಾಶಮಾನವಾದ ಶುಕ್ರಗ್ರಹವಂತೂ ಕಾಣುತ್ತದೆ.

ನಕ್ಷತ್ರಗಳ ಸಹಾಯದಿಂದಲೇ ಐದು ನಿಮಿಷ ಆಗಿದೆ, ಹತ್ತು ನಿಮಿಷ ಆಗಿದೆ - ಹೀಗೆ ಸಣ್ಣ ಅವಧಿಗಳನ್ನೂ ಲೆಕ್ಕ ಹಾಕಬಹುದು. ಇದು ಹೇಗೆ ? ಇದನ್ನು ಪ್ರಾಯೋಗಿಕವಾಗಿಯೇ ಬಳಸುವ ಜಾಣರು ಇವರು. ಉದಾಹರಣೆಗೆ ಒರೈಯನ್ ನಕ್ಷತ್ರಪುಂಜದ ಒರೈಯನ್ ಸೊಂಟಪಟ್ಟಿಯ ಮೂರು ನಕ್ಷತ್ರಗಳನ್ನು ತೆಗೆದುಕೊಳ್ಳೋಣ. ಮೊದಲನೆಯದು ಉದಯಿಸಿದ ೫ ನಿಮಿಷದ ತರುವಾಯ ಎರಡನೆಯದು ಉದಯಿಸುತ್ತದೆ; ಅದಾದ ೫ ನಿಮಿಷಕ್ಕೆ ಮೂರನೆಯದು ಹೀಗೆ. - ಹೀಗೆ ಅವರು ಪೂರ್ವದ ಅಂಚನ್ನು ಗಮನಿಸಿ, ಬೇರೆ ಬೇರೆ ನಕ್ಷತ್ರಗಳ ಉದಯ ಸಮಯಗಳನ್ನು ಗಮನಿಸಿ, ಅವಧಿಯನ್ನು ಲೆಕ್ಕ ಹಾಕುತ್ತಾರೆ. ಸ್ಥಳೀಯ ಸಾಗರತಳದ ಅಂದಾಜು ತಿಳಿದಿರುವುದರಿಂದ, ಎಷ್ಟು ದೂರ ಒಂದು ದಿಕ್ಕಿನಲ್ಲಿ ಚಲಿಸಿ ಆಮೇಲೆ ಇನ್ನೊಂದು ದಿಕ್ಕಿಗೆ ತಿರುಗಬೇಕು ಎಂಬ ಲೆಕ್ಕವನ್ನೂ ನಕ್ಷತ್ರಗಳ ಸಹಾಯದಿಂದಲೇ ಮಾಡಿಕೊಳ್ಳುತ್ತಾರೆ. ಯಾವ ಯಾವ ನಕ್ಷತ್ರಪುಂಜಗಳು ಎಷ್ಟೆಷ್ಟು ಹೊತ್ತಿಗೆ ಉದಯಿಸುತ್ತವೆ ಎಂಬುದಂತೂ ಪ್ರತಿಯೊಬ್ಬರಿಗೂ ಗೊತ್ತು. ಒರೈಯನ್ ನಕ್ಷತ್ರಪುಂಜಕ್ಕೆ ಇವರಿಟ್ಟಿರುವ ಹೆಸರು ''ತಕ್ಕಡಿ''. - ಈ

# ಕೋರ್ಟಿನಲ್ಲಿ ಗಾಂಧಿ

ಬರಿ ಮೈಯ ಮೂಳೆ ಚಕ್ಕಳವ ಆವರಿಸಿದ ಸ್ವದೇಶಿ ಚಾದರ
ಚಳಿಯಲ್ಲೂ ಸುತ್ತುತ್ತಿರುವ ಫ್ಯಾನಿನಡಿ ತಲ್ಲಣಿಸಿದ ಬೋಳು
ನೆತ್ತಿಯ, ಅಲ್ಲಲ್ಲಿ ಹರಿದ ಚಿತ್ರದ ಗಾಂಧೀಜಿಗೆ ಮುರುಕಲು ಫ್ರೇಮು

ಚದುರಿದ ಬಿಳಿ ಮೀಸೆಯಡಿಯ ಬೊಚ್ಚು ಬಾಯಿಯ
ಅಮಾಯಕ ಕಿರು ನಗುವಿಗೆ ಮಾಸಿದ ಪ್ಲಾಸ್ಟಿಕ್ಕಿನ ಹಾರ
ಕೆಳಗೊಂದು ಹತ್ತದ ಟ್ಯೂಬ್ ಲೈಟು

ಸಾಕ್ಷಿಕಟ್ಟೆಯ ಅಧೀನತೆ, ನ್ಯಾಯದ ಅಧಿಕಾರದ
ಕೆಂಪು ಪಟ್ಟಿ , ಕಪ್ಪು ಕೋಟಿನ ಕುರ್ಚಿಗಳು,
ಪಳೆಯುಳಿಕೆಯಾದ ನೀಲಿ ರೆಕ್ಸೀನಿನ ಟೇಬಲ್ಲು

ನಡೆಯದ ಗಡಿಯಾರ, ಹರಿದ ಕೊಳಕು ಪರದೆಗಳ
ಕಿಟಕಿಗಳು, ತುಕ್ಕು ಹಿಡಿದ ಲಟ ಲಟ ಬೀರುಗಳು
ಮಧ್ಯೆ ಉಸಿರುಗಟ್ಟಿ ಬಿಕ್ಕುವ ಫೈಲುಗಳು

ಗಂಡ ಹೆಂಡತಿಯ ಸಾನಿಧ್ಯದ ಬಿರುಕು ಭೂಕಂಪಗಳು
ಆಪ್ತ ಮಕ್ಕಳ ರಕ್ತದೋಕುಳಿಯ ನಿರ್ಲಜ್ಜ ಪ್ರತಾಪಗಳು;
ನಿರಪರಾಧಿ ಚಾಕು ಚೂರಿ ಮೇಲೆ ಆರೋಪ ಪಟ್ಟಿಯು.

ದೇವರ ಹೆಸರಲಿ ಸತ್ಯದ ಮೇಲೆ ಪ್ರಮಾಣ !
ಸಾಪೇಕ್ಷ ಸತ್ಯವೋ ಅಲ್ಲ ಪರಮ ಸತ್ಯದ
ಸಾಕ್ಷಾತ್ಕಾರವೋ

ಶೋಧನೆಯ ಹಾದಿಯಲಿ ತನಗೆ
ತೋರಿದ ಬೆಳಕಲಿ ಕೋಲು
ಹಿಡಿದು ನಡೆದ ಅರೆಬೆತ್ತಲೆ ಫಕೀರ

ಫೈಲುಗಳ ಹಿಡಿದು ನಡೆದಿರಬಹುದು,
ಆರೋಪಿಯಾಗಿ ಕಟಕಟೆಯಲಿ ನಿಂತಾಗ
ನ್ಯಾಯಪೀಠವೇ ಶಿರಬಾಗಿರಬಹುದು

ಚಲನೆ ಕಳೆದು ಬಂದಿಯಾಗಿ ಚೌಕಟ್ಟಿನಲಿ
ಪ್ರತಿ ಕೋಣೆಯಲಿ ನೇತಾಡಿದಾಗ ಮೊಳೆಯಲಿ
ಎಲ್ಲಿದೆ ನಿಮ್ಮಯ ಸತ್ಯಾಗ್ರಹ ಎಂದರೆ



ನ್ಯಾಯ ದಂಡದಡಿಯಲಿ ನಡೆಯುವುದ ನೋಡದೆ
ನೋಟವೆಂದೆಂದಿಗೂ ಕಿಟಕಿಯಾಚೆ
ಬಾಗಿಲಿನಾಚೆ, ದಿಗಂತದೆಡೆ ಎನ್ನಬೇಕೆ.

**ಬಾನು ಮುಸ್ತಾಕ್**
ವಕೀಲರು, ೪೩೪೮, ವಲ್ಲಭಭಾಯಿ ರಸ್ತೆ, ಹಾಸನ-೫೭೩ ೨೦೧

ಹೆಸರು ಹೇಗೆ ಬಂದಿತು ಎಂಬುದರ ಬಗ್ಗೆ ಚರಿತ್ರಕಾರರು ತಲೆಕೆಡಿಸಿಕೊಂಡಿದ್ದಾರೆ. ಬಾಬಿಲೋನಿಯನ್ನರಾಗಲೀ ಅರಬ್ಬರಾಗಲೀ ಈ ಹೆಸರನ್ನು ಬಳಸಿಲ್ಲ. ಖಗೋಳಜ್ಞರಿಗೆ ಇಲ್ಲೊಂದು ವಿಶೇಷ ಕಾಣುತ್ತದೆ. ಖಗೋಳವನ್ನು ಅರ್ಧ ಭಾಗ ಮಾಡಲು ಸಮಭಾಜಕ ವೃತ್ತವೊಂದನ್ನು ಕಲ್ಪಿಸಿಕೊಳ್ಳೋಣ. ಇದು ಓರೈಯನ್ ಸೊಂಟಪಟ್ಟಿಯ ಮೇಲೆ ಸರಿಯಾಗಿ ಹಾದುಹೋಗುತ್ತದೆ. ಅಂದರೆ ನಕ್ಷತ್ರಪುಂಜದ ಎರಡು ಅರ್ಧಗಳು ಎರಡು ಖಗೋಳಾರ್ಧಗಳಿಗೆ ಸೇರುತ್ತವೆ. ಈ ಕಾರಣದಿಂದ ಇದಕ್ಕೆ ತಕ್ಕಡಿ ಎಂದು ಹೆಸರಿಸಿರಬಹುದೇ ?

ಉಳಿದ ಹೆಸರುಗಳ ಮೂಲವನ್ನು ಹುಡುಕುವುದೂ ಕಷ್ಟದ ಕೆಲಸವೇ. ವೃಷಭರಾಶಿಯ ಸುಂದರ ನಕ್ಷತ್ರಗುಚ್ಛ ಕೃತ್ತಿಕಾ. ಇದನ್ನು ಅರಬ್ಬರು ಅಲ್-ತುರೈಯಾ ಎಂದು ಕರೆದರು. ಅದರ ಅರ್ಥ ವಜ್ರಗಳ ಗುಂಪು ಎಂದು. ಗ್ರೀಕರು ಪ್ಲೈಯಡಿಸ್ ಎಂದರು. ಆದರೆ ಕೆರ್ಕಿನ್ನಾಹ್‌ನ ಜನ ಅದನ್ನು ತೂಗುದೀಪ ಎಂದು ಕರೆಯುತ್ತಾರೆ. ಆಕಾಶಗಂಗೆ ಗ್ಯಾಲಕ್ಸಿಗೆ ಅರಬ್ಬರು ದರ್ಬ್ ಅಲ್ ತಬ್ಬಾನಾ ಎಂದು ಕರೆಯುತ್ತಾರೆ. ಅದರ ಅರ್ಥ ''ಒಣಹುಲ್ಲಿನ ಹಾದಿ'' ಎಂದು. ಇದಕ್ಕೊಂದು ಕಥೆಯೂ ಇದೆ. ಕಳ್ಳನೊಬ್ಬ ಒಣಹುಲ್ಲನ್ನು ಕದ್ದು ಒಯ್ದನಂತೆ. ಆಗ ಅವನ ದಾರಿಯುದ್ದಕ್ಕೂ ಹುಲ್ಲು ಉದುರುವ ಹಾಗೆ ಅಲ್ಲಾಹ್ ಮಾಡಿದನಂತೆ. ಕಳ್ಳತನ ಪತ್ತೆಯಾಗಿಬಿಟ್ಟಿತಂತೆ. ಈ ಹುಲ್ಲು ಉದುರಿದ ಹಾದಿಯೇ ಆಕಾಶದಲ್ಲಿ ಕಾಣುತ್ತಿದೆಯಂತೆ. ಕೆರ್ಕಿನ್ನಾಹ್‌ನಲ್ಲಿ ಈ ಹೆಸರಿನ ಜೊತೆಗೆ ''ಹಾಲು ಹಾದಿ'' ಎಂಬ ಹೆಸರೂ ಪರಿಚಿತವಾಗಿದೆ. ಇದು ಯುರೋಪಿಯನ್ ಪ್ರಭಾವ ಇರಬಹುದು.

ಚಂದ್ರನ ಬಗ್ಗೆ ವಿಶ್ವದಾದ್ಯಂತ ವೈವಿಧ್ಯಪೂರ್ಣ ಕತೆಗಳಿವೆ. ನಮ್ಮಲ್ಲಿ ಜಾತಕದ ಕತೆಗಳಲ್ಲಿ ಮೊಲವೊಂದು ಅಲ್ಲಿ ಸ್ಥಾನ ಸಿಕ್ಕಿದೆ. ಕೆರ್ಕಿನ್ನಾಹ್‌ನಲ್ಲಿಯ ಜನ ಕಾಣುವುದು ಚಂದ್ರನ ಮೇಲೆ ಕುಳಿತ ಹೆಂಗಸೊಬ್ಬಳನ್ನು, ಅವಳ ಮಡಿಲಲ್ಲಿ ಒಂದು ಮಗುವನ್ನೂ ಕಲ್ಪಿಸಿಕೊಂಡಿದ್ದಾರೆ. ಇದಕ್ಕೊಂದು ಕಥೆ ಪ್ರಚಲಿತವಿದೆ. ಬಡ ಹೆಂಗಸೊಬ್ಬಳಿದ್ದಳಂತೆ. ಅವಳಿಗೊಂದು ಮಗುವಾಯಿತು. ಅದನ್ನು ಶುದ್ಧಿ ಮಾಡಿ, ಒರೆಸಲು ತುಣುಕು ಬಟ್ಟೆಯೂ ಸಿಗಲಿಲ್ಲವಂತೆ. ಅಲ್ಲಾಹ್‌ನನ್ನು ಪ್ರಾರ್ಥಿಸಿಕೊಂಡಳು. ಕರುಣೆಯಿಂದ ಅಲ್ಲಾಹ್ ಹೊಸದಾದ ಬಟ್ಟೆಯೊಂದನ್ನು ಕರುಣಿಸಿದ. ಅದು ಅತ್ಯಂತ ನಯವಾಗಿ, ನುಣುಪಾಗಿತ್ತು. ಅದನ್ನು ಮಗುವಿಗೆ ಬಳಸಲು ಆಕೆ ಇಷ್ಟಪಡಲಿಲ್ಲ. ಮುಚ್ಚಿಟ್ಟುಕೊಂಡು ಮತ್ತೆ ಗೋಗರೆದಳು. ಅಲ್ಲಾಹ್ ಮತ್ತೊಮ್ಮೆ ಬಟ್ಟೆ ಕರುಣಿಸಿದ. ಈ ಬಾರಿ ಕಳುಹಿಸಿದ ಬಟ್ಟೆಯೂ ಅಂತಹುದೇ. ಈ ದುಬಾರಿ ಬಟ್ಟೆಯನ್ನು ಮಾರಿ ದುಡ್ಡು ಮಾಡಿಕೊಳ್ಳಬಹುದೆಂಬ ದುರಾಸೆಯಿಂದ ಆಕೆ ಅದನ್ನೂ ಮುಚ್ಚಿಟ್ಟುಕೊಂಡಳು. ಮತ್ತೆ ಗೋಗರೆದಾಗ ಅಲ್ಲಾಹ್ ಬ್ರೆಡ್ ತುಣುಕನ್ನು ಕರುಣಿಸಿದ. ಆಕೆ ಅದರಿಂದಲೇ ಮಗುವನ್ನು ಒರೆಸಿದಾಗ, ಅಲ್ಲಾಹ್‌ಗೆ ಸಿಟ್ಟು ಬಂದಿತು. ಮಗುವಿನೊಂದಿಗೆ ಆಕೆಯನ್ನು ಎಳೆದೊಯ್ದು ಚಂದ್ರನ ಮೇಲೆ ಕೂಡಿಸಿದ. ಆಕೆ ಇನ್ನೂ ಅಲ್ಲೇ ಸಿಕ್ಕಿಹಾಕಿಕೊಂಡಿದ್ದಾಳೆ. ಇದು ಕಥೆ. ಚಂದ್ರನ ವಿವಿಧ ಆಕಾರಗಳನ್ನು ಗುರುತಿಸಲು ಈ ಕತೆಯನ್ನು ಬಳಸಿ ಕೆರ್ಕನ್ನಾಹ್ ಜನರು ''ಮಗು ಕಂಡಿತು,'' ''ತಾಯಿ ಕಾಣುತ್ತಿದ್ದಾಳೆ'' - ಹೀಗೆ ಗುರುತಿಸುತ್ತಾರೆ.

ನಾಗರಿಕತೆಯಿಂದ ಹೆಚ್ಚಿನ ಪ್ರಭಾವಕ್ಕೊಳಗಾಗದೆ ತಮ್ಮದೇ ಸಂಸ್ಕೃತಿಯನ್ನು ಕಾಪಾಡಿಕೊಂಡು ತಮಗೆ ಅಗತ್ಯವಾದಂತೆ ಖಗೋಳಜ್ಞಾನವನ್ನು ಬೆಳೆಸಿಕೊಂಡು ಬಂದಿರುವುದು ಕೆರ್ಕಿನ್ನಾಹ್‌ನ ವಿಶೇಷ. ಇದೇ ಬಗೆಯ ಬೆಳವಣಿಗೆ ಎಲ್ಲ ಜನಾಂಗಗಳಲ್ಲಿಯೂ ಉಂಟಾಯಿತು. ಆದರೆ ಕ್ರಮೇಣ ಖಗೋಳದತ್ತ ಆಸಕ್ತಿ ಕಡಿಮೆಯಾಯಿತು. ಕತ್ತೆತ್ತಿ ನೋಡುವುದಕ್ಕೂ ಪುರುಸೊತ್ತು ಮತ್ತು ಅವಶ್ಯಕತೆ ಇಲ್ಲದಂತಾಯಿತು. ಆದರೆ ಕೆರ್ಕಿನ್ನಾಹ್‌ನಲ್ಲಿ ಇಂದಿಗೂ ಅದು ಬಳಕೆಯಲ್ಲಿರುವುದೇ ವಿಶೇಷ. ಗಡಿಯಾರವೇ ಇಲ್ಲದಾಗ ಹೇಗಿದ್ದಿತು ಎಂದು ತಿಳಿಯಲು ಅಲ್ಲಿಗೊಂದು ಭೇಟಿ ನೀಡಿದರೆ ಸಾಕು. ಖಗೋಳದ ದಾರಿದೀಪಗಳ ಪ್ರಾಯೋಗಿಕ ಪರಿಚಯ ಮತ್ತು ಪ್ರಾತ್ಯಕ್ಷಿಕೆ ಅಲ್ಲಿ ದಿನಂಪ್ರತಿ ನಡೆಯುತ್ತಿರುತ್ತದೆ.

■ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು

# ಜಾಗತಿಕ ಮಾರುಕಟ್ಟೆ ಸುಳಿ ದಲಿತ ರೈತ ಹಾಗೂ ಜೈವಿಕ ವೈವಿಧ್ಯತೆ

**ಪ್ರೊ॥ ಬಿ. ಎ. ವೆಂಕಟರಾವ್**

**ಜಾ**ಗತೀಕರಣ ಅಥವಾ ಗ್ಲೋಬಲೈಜೇಷನ್ ನಾವು ಪದೇ ಪದೇ ಕೇಳುತ್ತಿರುವ ಮಾತು. ಗ್ಲೋಬ್ ಅಂದರೆ ಗುಂಡಾಗಿರುವ ವಸ್ತು. ಭೂಗೋಳ, ಅದರ ಚರಿತ್ರೆ ಪ್ರಾಥಮಿಕ ಶಾಲಾ ಕಲಿಕೆಯಿಂದ ನಮ್ಮೊಟ್ಟಿಗೆ ಬಂದದ್ದು. ಪರಂಪರಾನುಗತವಾಗಿ ಜಗತ್ತು, ಅದಕ್ಕೊಬ್ಬ ಅವ್ಯಕ್ತ ನಾಯಕ ಅಥವಾ ಶಕ್ತಿ ಕುರಿತು ಮನುಷ್ಯನ ಚಿಂತನೆ ನಡೆಯುತ್ತಲೇ ಬಂದಿದೆ. ವ್ಯಾಪಕವಾದ ಭೂಮ್ಯೆಮೇಲಿನ ಬಯಲು, ಗಿಡಮರ, ತೋಟತುಡಿಕೆ, ಬೆಟ್ಟಗುಡ್ಡ, ಕಾಡು, ಅದರೊಟ್ಟಿನ ವನ್ಯ ಪ್ರಾಣಿಗಳು, ಹಳ್ಳ, ತೊರೆ, ನದಿ, ಕೆರೆಕಟ್ಟೆ, ಸರೋವರ, ಸಮುದ್ರ ಹೀಗೆ ವಿಸ್ತಾರವಾದ ಜಲಾವೃತ್ತ ಪ್ರದೇಶ ಹಾಗೂ ಅದನ್ನವಲಂಬಿಸಿರುವ ಜಲಚರ, ಮೇಲ್ಮೈ ಗಾಳಿ, ಬೆಳಕು ಇವೆಲ್ಲ ಒಟ್ಟಾಗಿ ಕಾಣುವ ಕಲ್ಪನೆ ಜಗತ್ತು. ಇಲ್ಲಿ, ಮಾನವ ತನಗಿಂತ ಮೊದಲೇ ಉದಯವಾದ ಅತಿ ಸೂಕ್ಷ್ಮಜೀವಿಗಳು ಸೇರಿದಂತೆ ಅಸಂಖ್ಯಾತ ಪ್ರಾಣಿ ಸಮೂಹದಲ್ಲಿ ಒಂದಾದ ಜೀವ ವಿಕಾಸದ ಒಂದು ಅಂಶ. ಈ ಜಗತ್ತಿನ ಒಂದೊಂದು ಅಂಶವೂ ಬೇರೆ, ವೈಶಿಷ್ಟ್ಯಪೂರ್ಣ, ಒಟ್ಟಿನಲ್ಲಿ ಮೂಲತಃ ಒಂದೇ. ಎಲ್ಲ ಮಾನವ ನಾಗರಿಕತೆಗಳಲ್ಲೂ ಬುದ್ಧಿ ಜೀವಿಗಳು ತರ್ಕಬದ್ಧ ಚಿಂತನೆಯಿಂದ ಈ ಸತ್ಯವನ್ನು ಕಂಡು ಕೊಳ್ಳುವತ್ತ ಪ್ರಯತ್ನ ನಡೆಸುತ್ತಾ ಬಂದಿದ್ದಾರೆ. ಆದರೂ ಜಾತಿ, ಮತ, ಬಣ್ಣ, ಪ್ರದೇಶ, ಎಲ್ಲಕ್ಕಿಂತಲೂ ಮಿಗಿಲಾಗಿ ಸಂಪತ್ತಾನುಕೂಲಗಳ ಕಾರಣದಿಂದ ದ್ವೇಷಾಸೂಯೆ, ಘರ್ಷಣೆ, ಯುದ್ಧ-ಹೋರಾಟಗಳು ಅನಿವಾರ್ಯವೋ ಎಂಬಂತೆ, ಪುರಾಣ, ಪುಣ್ಯಕತೆ, ಕಾವ್ಯ-ನಾಟಕ, ಚರಿತ್ರೆಯಲ್ಲಿ ವೈಭವೀಕೃತ ರೂಪದಲ್ಲಿ ಚಿತ್ರತವಾಗಿವೆ.

**ಮಾನವ ಬೆಳೆದುಬಂದ ದಾರಿ**

ಕಾಡು ಮನುಷ್ಯ ಮನುಷ್ಯನಾಗುವ ಹಾದಿ ಹತ್ತಾರು ಸಾವಿರ ವರ್ಷ ಹಿಡಿದಿರಬೇಕು. ನಿಜ, ಎಲ್ಲ ಪ್ರಾಣಿಗಳಲ್ಲೂ ಒಂದು ಬಗೆಯ, ಒಂದು ಮಟ್ಟದ ಸಂಘಜೀವನ ಸಾಮಾನ್ಯ. ಆದಿಮಾನವ ಕೂಡ ಒಟ್ಟು ಒಟ್ಟಾಗಿ ಕೂಡಿ ಬಾಳಿ ಪ್ರಕೃತಿ ವೈಪರೀತ್ಯ, ದುಷ್ಟ ಮೃಗಗಳಿಂದ ಧಾಳಿ, ಶತ್ರುಗಳ ಗುಂಪುಗಳಿಂದ ಹಾನಿ ಇವುಗಳನ್ನೆದುರಿಸುತ್ತಿದ್ದ. ನಾಶದ ಅಂಚಿನಲ್ಲಿ ಇರುವ ಬುಡಕಟ್ಟು ಜನಾಂಗಗಳ ಬದುಕಿನ ಅಧ್ಯಯನದಿಂದ ಇದು ತಿಳಿದುಬರುತ್ತದೆ. ದೈತ್ಯ ದೈಹಿಕ ಬಲಪ್ರಯೋಗದಿಂದ ಕೆಲವು ಮಹಾತ್ವಾಕಾಂಕ್ಷಿಗಳು ಏಕಸ್ವಾಮ್ಯದ ಪಾಳೇಗಾರಿಕೆ ಸಂಸ್ಕೃತಿಗೆ ದಾರಿ ಮಾಡಿಕೊಟ್ಟರು. ಕುಟುಂಬದಂತಿದ್ದ ಬುಡಕಟ್ಟಿನ ಕೃಷಿ ಭೂಮಿ ಮತ್ತಿತರ ಸಂಪತ್ತು, ಮುಖ್ಯಸ್ಥನದಾಯಿತು. ಉಳಿದವರೆಲ್ಲ ಅವನ ಆಣತಿಯಲ್ಲಿ ದುಡಿಯುವ ಜೀತದಾಳುಗಳಾದರು.

ಹಳ್ಳಿ, ಊರು, ಪಟ್ಟಣ, ಕೋಟೆ-ಕೊತ್ತಲಗಳ ನಾಗರಿಕತೆ ಮುಂದಿನ ಹಂತ. ಈ ವ್ಯವಸ್ಥೆ ಇನ್ನೂ ಸಂಘಟಿತವಾಗಿ ರಾಜ್ಯಗಳಾದವು. ಅವು ಒಳಗೊಂಡ ಚಕ್ರಾಧಿಪತ್ಯಗಳಾದವು. ಏತನ್ಮಧ್ಯೆ ಜನಜೀವನ ರೀತಿ, ಸಂಪತ್ಸಾಧನಗಳ ಬಳಕೆ, ಅಂದರೆ, ವ್ಯವಸಾಯ ಹಾಗೂ ಕೈಗಾರಿಕೆಗಳ ಬೆಳವಣಿಗೆ, ಪ್ರತ್ಯೇಕತೆಗೆ ದಾರಿ ಮಾಡಿಕೊಟ್ಟಿತ್ತು. ಇದು ನನ್ನದು, ನಮ್ಮದು, ರಾಜ್ಯದ್ದು ಎಂಬ ಸ್ವಾಮ್ಯ ಮನೋಭಾವ ಹುಟ್ಟಿ ಬೆಳೆದು ಆಳವಾಗಿ ಬೇರೂರಿತು. ಇಂದು ಅದಕ್ಕಾಗಿ ಎಲ್ಲ ಹಂತಗಳಲ್ಲೂ ಉಳ್ಳವರು, ಇಲ್ಲದವರು, ಬಡವರು, ಬಲ್ಲಿದರು, ಶಕ್ತರು, ಅಶಕ್ತರುಗಳ ಮಧ್ಯೆ ಸಮತೆ, ಅಸಮಾನತೆ, ವ್ಯಕ್ತಿ ಕುಟುಂಬ ಸಮಾಜಗಳ ವೈಷಮ್ಯ, ಹೋರಾಟ ಚರಿತ್ರೆಯ ವಸ್ತು.

**ಮಾರುಕಟ್ಟೆ ವ್ಯವಸ್ಥೆ**

ಎಲ್ಲೋ ಹೊಲಗದ್ದೆಗಳಲ್ಲಿ ಬೆಳೆದ ದವಸ ಧಾನ್ಯ, ಕಾರ್ಖಾನೆಗಳಲ್ಲಿ ತಯಾರಾದ ಬಟ್ಟೆ ಬರೆ ಇನ್ನಿತರ ಜೀವನಾವಶ್ಯಕ ವಸ್ತುಗಳು ಅದನ್ನು ಬಳಸುವವರಿಗೆ ತಲುಪಿಸುವ ಪ್ರಕ್ರಿಯೆ ವ್ಯವಸ್ಥೆಯೇ ಮಾರುಕಟ್ಟೆ. ಮೊದ ಮೊದಲಲ್ಲಿ ಇದು ಸರಳವಾಗಿ ವಸ್ತುಗಳ ವಿನಿಮಯ ಮುಯ್ಯಿ ಕೊಡುವುದರ ಮೂಲಕ ನಡೆಯುತ್ತಿತ್ತು. ಕ್ರಮೇಣ ಇದೇ ಕೆಲಸ ಮಾಡುವ ವರ್ಗ ಅಥವಾ ವೈಶ್ಯ ವ್ಯವಸ್ಥೆ ಹುಟ್ಟಿಕೊಂಡಿತು. ಉತ್ಪಾದಿಸುವವರಿಂದ ಸಂಗ್ರಹಿಸಿ ಬಳಸುವವರಿಗೆ ತಲುಪಿಸುವುದೇ ಇವರ ಉದ್ಯೋಗ. ಯಾವುದೇ ವಸ್ತು ಉತ್ಪನ್ನ ಬಳಸಲು ಸಿದ್ಧವಾಗಲು ಅದಕ್ಕೆ ಬೇಕಾಗುವ ದೈಹಿಕ ಶ್ರಮ, ಜಾಣತನ ಇವೆಲ್ಲವುಗಳನ್ನಾಧರಿಸಿ ಸಾಮಗ್ರಿಗಳ ಬೆಲೆ ನಿರ್ಧರಿಸಲಾಗುತ್ತಿತ್ತು. ವಸ್ತುಗಳ ಬೆಲೆ ಮಾನದಂಡಕ್ಕೆ ನಾಣ್ಯ ವ್ಯವಸ್ಥೆ ಬಂದಿತು. ಈ ವಸ್ತು ಚಲಾವಣೆ ಅರ್ಥಾತ್ ವ್ಯಾಪಾರ, ಸಮಾಜದ ಅವಶ್ಯ ಉದ್ಯೋಗ ಮಾರ್ಗ ಎಂಬುದಾದ ಮೇಲೆ ಅದರಲ್ಲಿ ತೊಡಗಿರುವವರ ಜೀವನ ನಿರ್ವಹಣೆಗೆ ಅವಶ್ಯಕವಾದ ಸಾಮಾನು ಸರಬರಾಜು ಬೇಕು. ಒಂದು ವಸ್ತುವಿಗೆ ಶ್ರಮವೂ ಸೇರಿದಂತೆ ಈ ಉದ್ಯೋಗಸ್ಥ ವ್ಯಕ್ತಿಗೆ ನ್ಯಾಯವಾಗಿ ಸಲ್ಲಬೇಕಾದ ಪ್ರತಿಫಲ, ಇದೇ ಲಾಭ. ಕಡಿಮೆ ಬೆಲೆಗೆ ಕೊಂಡು ಅಡ್ಡಾದಿಡ್ಡಿ ಬೆಲೆಗೆ ಮಾರಿದರೆ ಅದು ದುರ್ಲಾಭ. ಹೀಗೆ ಶೇಖರವಾದ ದೊಡ್ಡ ಕಪ್ಪು ಹಣ, ಸಮಾಜದ ಶತ್ರು. ಪ್ರಜಾಪ್ರಭುತ್ವ, ನಿರಂಕುಶ ರಾಜಾಧಿಕಾರ, ಸೇನೆ, ಯಾವುದೇ ಆಡಳಿತವಿರಲಿ ಅವುಗಳ ದುಷ್ಕೃತ್ಯಗಳಿಗೆ ಈ ದುಡ್ಡು ಶಾಮೀಲಾಗಿ ಪ್ರಜಾಹಿತಕ್ಕೆ ಮಾರಕವಾಗುವುದು ಶತಃಸಿದ್ಧ.

**ವಸಾಹತುಶಾಹಿ ಮಾರುಕಟ್ಟೆ**

16-17ನೇ ಶತಮಾನದಲ್ಲಿ ಯೂರೋಪಿನ ದೇಶಗಳಲ್ಲಿ ಜಮೀನುದಾರಿಶಾಹಿ ಹಿಂದಾಗಿ ಭೂಮಾಲಿಕ ಹಿತಾಸಕ್ತಿಗಳಿಂದಲೇ ಕೈಗಾರಿಕೆಗಳ ಚಟುವಟಿಕೆ ಪ್ರಾರಂಭವಾಯಿತು. ಭೂಮಿಯನ್ನಾಧರಿಸಿದ್ದ ದೇಶದ ಉತ್ಪಾದಕತೆ ಕಾರ್ಖಾನೆಯಲ್ಲಿ ತಯಾರಿಸಬಹುದಾದ ವಸ್ತುಗಳತ್ತ ಹೊರಳಿತು. ಜಮೀನುದಾರರಲ್ಲಿ ಜೀತದಾಳಾಗಿದ್ದ ವ್ಯಕ್ತಿಗಳೇ, ಕಾರ್ಖಾನೆಯಲ್ಲಿ ಕೂಲಿಗಳಾದರು. ಈ ಬಗೆಯ ಕೆಲಸಗಾರರು ತಮ್ಮ ಸ್ಥಾನಮಾನಗಳ ಸುಧಾರಣೆ ಬಗ್ಗೆ ಮಾಲಿಕರೊಡನೆ ಸೆಣಸಾಡುವ ಧೈರ್ಯ ಸಂಘಟನೆಗೆ ಅವಕಾಶ ಉಂಟಾಯಿತು. ಇದು ವಿಶ್ವದ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಈ ಕಾರಣದಿಂದ ಇದನ್ನು ಕೈಗಾರಿಕಾ ಕ್ರಾಂತಿ ಎನ್ನುತ್ತಾರೆ. ಕೈಗಾರಿಕೆಗಳು ಬೆಳೆದಂತೆ ಹೆಚ್ಚಾದ ಉತ್ಪನ್ನಗಳಿಗೆ ಲಾಭದಾಯಕವಾದ ಮಾರುಕಟ್ಟೆ ಕಂಡುಕೊಳ್ಳುವುದು ಅನಿವಾರ್ಯವಾಯಿತು. ಉದ್ಯಮಿಗಳ ದೃಷ್ಟಿ ಹೊರದೇಶ, ಅದರಲ್ಲೂ ಕೈಗಾರಿಕಾಯುಗ ಕಾಣದ ಪೌರ್ವಾತ್ಯ ದೇಶಗಳ ಕಡೆಗೆ ಹರಿಯಿತು.

ಯೂರೋಪಿನ ವಿವಿಧ ದೇಶದವರು ವ್ಯಾಪಾರ ಅವಕಾಶ ಹುಡುಕಿಕೊಂಡು ಹಡುಗುಗಳಲ್ಲಿ ಸರಕು ಹಾಕಿಕೊಂಡು ಸಮುದ್ರ ದಾಟಿ ಇಂಡಿಯಕ್ಕೆ ಬಂದಿದ್ದು ಆಗಲೇ. ಹೀಗೆ ಬಂದವರಲ್ಲಿ ಇಂಗ್ಲಿಷರು, ಫ್ರೆಂಚರು, ಪೋರ್ಚುಗೀಸರು ಪ್ರಮುಖರು. ದೆಹಲಿಯ ರಾಜರಿಂದ ರಹದಾರಿ ಪಡೆದು ದೇಶದ ತೀರ ಪ್ರದೇಶದ ಆಯಕಟ್ಟಿನ ಸ್ಥಳಗಳಲ್ಲಿ, ಮುಖ್ಯವಾಗಿ ಕಲ್ಕತ್ತ, ಬೊಂಬಾಯಿ, ಮದರಾಸುಗಳಲ್ಲಿ ಮಳಿಗೆಗಳನ್ನು ಸ್ಥಾಪಿಸಿದರು. ಸ್ವರಕ್ಷಣೆಗಾಗಿ ಕೋಟೆ-ಕೊತ್ತಲ-ಸೈನ್ಯ ಕಟ್ಟಿಕೊಂಡರು. ಮಾರುಕಟ್ಟೆ ಅವಕಾಶಕ್ಕಾಗಿ ಅವರುಗಳಲ್ಲೇ ಕಚ್ಚಾಟ-ಯುದ್ಧಗಳಾದವು. ಸ್ಥಳೀಯ ರಾಜರುಗಳ ಅಂತಃಕಲಹಗಳ ಸನ್ನಿವೇಶವನ್ನು ದುರುಪಯೋಗಪಡಿಸಿಕೊಂಡು ಯುದ್ಧಗಳಲ್ಲಿ ಭಾಗಿಗಳಾಗಿ ಈ ವಿದೇಶಿಯರು ರಾಜ್ಯಾಧಿಕಾರ ಪ್ರಾರಂಭಿಸಿದರು. ಕೊನೆಗೆ ಭದ್ರವಾಗಿ ಉಳಿದ ಇಂಗ್ಲಿಷ್ ಮೂಲದ ಈಸ್ಟ್ ಇಂಡಿಯಾ ಕಂಪನಿಯವರು ದೇಶವನ್ನೆಲ್ಲಾ ಆಕ್ರಮಿಸಿಕೊಂಡು ನೆಲೆಯೂರಿದರು. ಅವರ ದುರಾಡಳಿತ ತಾಳದ ದೇಶೀಯರು 1857ರಲ್ಲಿ ಪ್ರಬಲ ದಂಗೆ ಎದ್ದರು. ತತ್ಫಲ ಆಗ ಇಂಗ್ಲೆಂಡ್ ರಾಣಿಯಾಗಿದ್ದ ವಿಕ್ಟೋರಿಯಾ ನೇರವಾಗಿ ಇಂಡಿಯಾದ ಆಡಳಿತದ ಹೊಣೆ ಒಪ್ಪಿಕೊಂಡಳು. ಒಂದು ಬಗೆಯ ಸುಭದ್ರ ಆಳ್ವಿಕೆ ಒದಗಿದ್ದರೂ ದೇಶದ ವಾಣಿಜ್ಯ ಮಾರುಕಟ್ಟೆ ಸಂಸ್ಕೃತಿ ಇಂಗ್ಲೆಂಡಿನ ಕಪಿಮುಷ್ಟಿಗೆ ಸಿಕ್ಕಿ ನಲುಗಿಹೋಯಿತು. ಕೈಗಾರಿಕಾ ಬೆಳವಣಿಗೆ ಪ್ರಾರಂಭದಲ್ಲೇ ಇಲ್ಲ. 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದರೂ ಆರ್ಥಿಕ, ಸಾಂಸ್ಕೃತಿಕ ಪ್ರಗತಿ ಕನಸಾಗಿಯೇ ಉಳಿದಿದೆ. ದೇಶ 1-2 ಶತಮಾನದಷ್ಟು ಹಿಂದೆ ಬಿದ್ದಿದೆ.

ಮುಖ್ಯವಾಗಿ ದೇಶವಿಭಜನೆಯಿಂದ ಹಾಗೂ ಉತ್ಕೃಷ್ಟ ಗೋಧಿ, ಅಕ್ಕಿ ಬೆಳೆ ಭಾಗಗಳಾದ ಪಂಜಾಬ್, ಬಂಗಾಳ, ಪಾಕಿಸ್ತಾನಕ್ಕೆ ಹೋಯಿತು. ಉತ್ಕಟ ಆಹಾರ ಕೊರತೆ ಕಾಣಿಸುತ್ತಾ ಬಂತು. 1960ರಲ್ಲಿ ಆಮದಿಸಿದ ಆಹಾರ

ಧಾನ್ಯದತ್ತ ಅವಲಂಬನೆ ಪ್ರಾರಂಭವಾಯಿತು. ವ್ಯವಸಾಯದ ಕಡೆ ಸರ್ಕಾರದ ಗಮನ ತೀವ್ರವಾಯಿತು. 1970-80ರ ಹೈಬ್ರಿಡ್ ಯುಗದಲ್ಲಿ ಒಂದು ಮಟ್ಟದ ಆಹಾರ ಸ್ವಪರಿಪೂರ್ಣತೆ ಉಂಟಾಯಿತು. 1950ರಲ್ಲಿ 50 ದಶಲಕ್ಷ ಟನ್ ಇದ್ದ ಉತ್ಪಾದನೆ ಇಂದು ಸುಮಾರು 200 ದಶಲಕ್ಷ, ಅಲ್ಲದೆ 40 ದಶಲಕ್ಷ ಕಾಪು ಧಾನ್ಯ ಕೊಳ್ಳುವ ಸಾಮರ್ಥ್ಯವಿಲ್ಲದ 30-40 ಕೋಟಿ ಕಡು ಬಡವರು, ಇದು ನಮ್ಮ ವಿಪರ್ಯಾಸ. ಇದಲ್ಲದೆ ಹೈಬ್ರಿಡ್ ತಳಿಗಳಿಂದ ಉತ್ಪಾದನೆ ಹೆಚ್ಚಳ ಆಗದ ಸ್ಥಿತಿ. ಈ ಕಾರಣಗಳಿಂದ ಜಿ. ಡಿ. ಪಿ. ಅಥವಾ ಬೆಳವಣಿಗೆ ಗತಿಯಲ್ಲಿ ಹಿನ್ನಡೆ. ಇತರ ಪರಿಣಾಮಕಾರಿ ಪದ್ಧತಿಗಳನ್ನು ಹುಡುಕುವ ಪ್ರಯತ್ನ. ಜೈವಿಕ ವೈವಿಧ್ಯತೆಯಿಂದ ಕೃಷಿ ಉತ್ಪನ್ನದತ್ತ ದೃಷ್ಟಿ ಹರಿಯುತ್ತಿದೆ. ಈ ದಿಸೆಯಲ್ಲಿ ಕಾರ್ಯಸಾಧ್ಯ ಪರಿಣಾಮಕಾರಿ ಕೃಷಿ ಸಂಶೋಧನೆ ಹಾಗೂ ವಿಸ್ತರಣೆ ನಮಗಿರುವ ದಾರಿ.

**ಜಾಗತಿಕ ಮಾರುಕಟ್ಟೆ**

1914-18ರ ಭೀಕರ ಮೊದಲ ಜಾಗತಿಕ ಯುದ್ಧದ ಫಲವಾಗಿ ಅಂಥ ಯುದ್ಧ ತಪ್ಪಿಸಿ ಸಾಮರಸ್ಯ ಮೂಡಿಸಲು 'ಲೀಗ್ ಆಫ್ ನೇಷನ್ಸ್' ಎಂಬ ಪಾಶ್ಚಾತ್ಯ ಪ್ರಭಾವಿತ ಜಾಗತಿಕ ಸಂಸ್ಥೆ ಅಸ್ತಿತ್ವಕ್ಕೆ ಬಂತು. ಅದು ಪರಿಣಾಮಕಾರಿಯಾಗದೆ 1939-45ರ ಎರಡನೇ ಮಹಾಯುದ್ಧ ನಡೆಯಿತು. ಹಿಂದೆಂದೂ ಕಾಣದ ವಿಧ್ವಂಸಕ ಕೃತ್ಯ ಸಾಗಿಹೋಯಿತು. ವಿಜ್ಞಾನಿಗಳು ಕಂಡುಕೊಂಡ ಅಪಾರ ಪರಮಾಣು ಶಕ್ತಿ ಆಯುಧವಾಗಿ ಬಳಕೆಯಾಯಿತು. ಜಗತ್ತಿನ ಬಹುತೇಕ ರಾಷ್ಟ್ರಗಳ ಆಹಾರ, ಆರ್ಥಿಕ, ಸಾಮಾಜಿಕ, ಆರೋಗ್ಯ ಸಂಸ್ಥೆಗಳು ಹಣಕಾಸು ವಾಣಿಜ್ಯ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಮತ್ತು 1970ರಲ್ಲಿ ವಿಶ್ವ ಮಾರುಕಟ್ಟೆ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಇವೆಲ್ಲವುಗಳ ಧ್ಯೇಯ ಉದಾತ್ತ. ಆದರೂ ಸಾಮಾಜಿಕ ಆರ್ಥಿಕವಾಗಿ ಅಭಿವೃದ್ಧಿ ಹೊಂದುತ್ತಿರುವ ಹಾಗೂ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ನಡುವಿನ ಕಂದರ ಬೆಳೆಯುತ್ತಲೇ ಇದೆ. ವಿಶ್ವ ಮಾರುಕಟ್ಟೆ ನಿಯಮಾವಳಿಗಳು ಭಾರತದಂಥ ಅಭಿವೃದ್ಧಿಶೀಲ ದೇಶಗಳಿಗೆ ಮಾರಕ. ಭಾರತವೂ ಈ ನಿಯಮಗಳಿಗೆ ಬದ್ಧ. ಜಾಗತಿಕ ಮುಕ್ತ ಮಾರುಕಟ್ಟೆ ಅದರ ಮುಖ್ಯ ಅಂಶ. ಅದರಂತೆ ಯಾವುದೇ ಹೊರದೇಶದಿಂದ ಆಮದು ತಡೆಯಲು ಸಾಧ್ಯವಿಲ್ಲ. ಅಮೆರಿಕಾ ಜಪಾನ್ ಮುಂತಾದ ದೇಶಗಳು ಅತ್ಯಾಧುನಿಕ ತಂತ್ರಜ್ಞಾನ ಅಳವಡಿಕೆಯಿಂದ ಅಗ್ಗವಾಗಿ ಸರಕುಗಳನ್ನು ತಯಾರಿಸಿ ನಮ್ಮ ಮಾರುಕಟ್ಟೆಗೆ ಹೇರಬಹುದು.



ವ್ಯವಸಾಯೋತ್ಪನ್ನಗಳ ಕಥೆಯೂ ಇದೇ. ಅವುಗಳೊಡನೆ ಸ್ಪರ್ಧಿಸಿ ನಮ್ಮ ಕೃಷಿ ಹಾಗೂ ಕೈಗಾರಿಕೆ ಬದುಕುವುದು ಕಷ್ಟ. ಈ ಬಿಸಿ ಆಗಲೇ ಸಾಕಷ್ಟು ತಟ್ಟಿದೆ. ಸಣ್ಣ ಕೈಗಾರಿಕೋದ್ಯಮಗಳಲ್ಲಿ ಬಹುಪಾಲು ಸಂಕಷ್ಟದ ದವಡೆಯಲ್ಲಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಇನ್ನೊಂದು ಮಾರಕ ನಿಯಮ ಬುದ್ಧಿಜೀವಿ ಆಸ್ತಿಸ್ವಾಮ್ಯ ಹಕ್ಕು. ನಮ್ಮಲ್ಲಿ ಸಮೃದ್ಧವಾಗಿರುವ ಅಪರೂಪದ ಸಸ್ಯಗಳ ಸಂಸ್ಕರಣೆಯಿಂದ ಔಷಧಿ ತಯಾರಿಕೆ, ಸ್ವಾಮ್ಯ, ಸರ್ಪಗಂಧಿ ಬೇವು, ಹೊಂಗೆ ಇಂಥಹವುಗಳಿಂದ ಔಷಧಿ ತಯಾರಿಕೆ ಅವಕಾಶ ನಮ್ಮ ಕೈ ತಪ್ಪಿದೆ. ಅರಶಿನದ ಮೇಲೆ ಅಮೆರಿಕಾ ಕಂಪೆನಿ ಸ್ಥಾಪಿಸಿದ್ದ ಸ್ವಾಮ್ಯದಿಂದ ಪಾರಾಗುವುದೇ ಒಂದು ದೊಡ್ಡ ಪ್ರಯಾಸವಾಯಿತು.

ನಮ್ಮದು ಪ್ರಕೃತಿ ಸಂಪತ್ತಿನಲ್ಲಿ ಸಮೃದ್ಧ ದೇಶ. ಸಾಕಷ್ಟು ಹಿಂಗಾರು ಮುಂಗಾರು ಮಳೆ, ಜೀವನದಿ, ವರ್ಷದುದ್ದಕ್ಕೂ ಒಂದಲ್ಲ ಒಂದು ಬೆಳೆ ತೆಗೆಯಬಲ್ಲ ಹವಾಮಾನ, ಮಣ್ಣು, ಶ್ರದ್ಧಾವಂತ ಶ್ರಮ ಸಹಿಷ್ಣು ರೈತರು. ಆದರೂ, ತುಂಡು ಭೂಮಿಗಳನ್ನವಲಂಬಿಸಿದ ಕೋಟ್ಯಾಂತರ ಗ್ರಾಮೀಣ ಜನ ಬಡವರು, ಕಡು ಬಡವರು, ಸ್ವಾಭಿಮಾನಿಗಳು, ಸೂಕ್ಷ್ಮಗ್ರಾಹಿಗಳು. ಈ ಕಾರಣದಿಂದ ಅವರಲ್ಲಿ ವಿಶ್ವ ಮಾರುಕಟ್ಟೆ ಕಲ್ಪನೆಯಲ್ಲಿನ ಗುಣಾವಗುಣಗಳ ಸಮಸ್ಯೆ ಗುರುತಿಸಿ ಎದುರಿಸಲು ಬೇಕಾದ ವಸ್ತುನಿಷ್ಠ ಅರಿವನ್ನು ಮೂಡಿಸುವ ಕೆಲಸ ಕಷ್ಟವಾಗಲಾರದು. ಜಾಗತೀಕರಣ ಚಿಂತನೆ ವ್ಯಕ್ತಿಯ ಮಾನಸಿಕ ವೈಶಾಲ್ಯವೃದ್ಧಿಯತ್ತ ಒಂದು ಹೆಜ್ಜೆ. ಸಂವಹನ ತಂತ್ರಜ್ಞಾನದ ಬೆಳವಣಿಗೆಯಿಂದ ಎಲ್ಲೆಲ್ಲೂ ಜನರ ತಿಳಿವಳಿಕೆ, ಪರಿಜ್ಞಾನ ನಾಗಾಲೋಟದಿಂದ ಬೆಳೆಯುತ್ತಿದೆ. ಉದಾಹರಣೆಗಾಗಿ - ಟೆಲಿವಿಷನ್ ಮೂಲಕ ಇರಾಕಿನಲ್ಲಿ ಕಂಡ ಕ್ರೌರ್ಯ, ಎಲ್ಲೆಲ್ಲೂ ತಾಂಡವವಾಡುತ್ತಿರುವ ಭಯೋತ್ಪಾದಕತೆಯ ಅಮಾನುಷತೆ, ಕಾರ್ಗಿಲ್ ಯುದ್ಧದ ಭೀಕರತೆ, ಈಗತಾನೇ ಮುಗಿಯುತ್ತಾ ಬಂದಿರುವ ಅಫ್ಘಾನಿಸ್ತಾನದಲ್ಲಿ ಮದ್ದು ಗುಂಡುಗಳ ಆರ್ಭಟ, ಸಾವು ನೋವು ಸಾಮಾನ್ಯ ಮನುಷ್ಯನನ್ನು ದಿಗ್ಭ್ರಮೆಗೊಳಿಸುತ್ತದೆ. ಇವೆಲ್ಲ ಅಮಾನುಷೀಯ, ಬೇಡದ್ದು ಎನ್ನುವ ಭಾವನೆ ಬಲವಾಗುತ್ತೆ. ಇದರ ಜೊತೆಯಲ್ಲಿಯೇ ತಮ್ಮ ತಮ್ಮ ಸಾಮಾನು ಮಾರಲು ಟೆಲಿವಿಷನ್ ಮಾಧ್ಯಮದಲ್ಲಿ ತೋರಿಸುವ ದೃಶ್ಯತಂತ್ರಗಳು ಅಸಹ್ಯಕರ. ಪ್ರತಿಯಾಗಿ ಪರಿಸರದ ಮೇಲಿನ ಘೋರ ಹಾನಿ ಬಗ್ಗೆ ತೋರಿಸುವ ದೃಶ್ಯ ಚಿತ್ರಗಳು ಉಪಯೋಗವೆನ್ನಿಸುತ್ತದೆ. ವಿಶ್ವ ಮಾರುಕಟ್ಟೆ ಜನರ ಮನಸ್ಸನ್ನು, ಹೃದಯವನ್ನು ಹತ್ತಿರಕ್ಕೆ ತರುವುದಾದರೆ ಅದು ಬೇಕು. ಅಲ್ಲದೆ, ಮುಂದುವರೆದ ದೇಶ ಗುಂಪುಗಳ ಪಟ್ಟಭದ್ರ ಹಿತಾಸಕ್ತಿ ವೃದ್ಧಿಗಾದರೆ, ನಾವು, ಅದರಲ್ಲೂ ಹೀನಾಯ ಬಡತನದಲ್ಲಿರುವ ರೈತ, ಕಾರ್ಮಿಕ ವರ್ಗ, ಒಪ್ಪಿರುವ ಒಪ್ಪಂದದಿಂದ ಹೊರಗಾಗದೆ, ಉಳಿದು ಹೇಗೆ ಬದುಕಿ ಬಾಳಬಹುದು ಎಂಬುದರ ಕ್ರಮಗಳ ಬಗ್ಗೆ ಗಂಭೀರವಾಗಿ ಚಿಂತಿಸುವುದು ಅನಿವಾರ್ಯ.

**ಜೈವಿಕ ವೈವಿಧ್ಯತೆ**

ತಾಂತ್ರಿಕ ಭಾಷೆಯಲ್ಲಿ ಹೇಳುವುದಾದರೆ ಬಯೋ - ಡೈವರ್ಸಿಟಿ, ಅರ್ಥಾತ್ ಜೈವಿಕ ವೈವಿಧ್ಯತೆ ಭೂಮಿಯ ಮೇಲಿನ ಅಸಂಖ್ಯಾತ ಪ್ರಾಣಿ ಜೀವಿಗಳಲ್ಲಿ ಕಂಡುಬರುವ ಬಗೆ ಬಗೆಯ ಪ್ರಭೇದ ಹಾಗೂ ಅವುಗಳಲ್ಲಿನ ಸೂಕ್ಷ್ಮ ಬದಲಾವಣೆಗಳು. ಯಾವುದೇ ಸಸ್ಯ ಪ್ರಾಣಿ ಜೀವಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಒಂದೊಂದಕ್ಕೂ ವಿಶಿಷ್ಟ ವ್ಯತ್ಯಾಸಗಳು ವೇದ್ಯವಾಗುತ್ತವೆ. ಅವಳಿಗಳಲ್ಲೂ ಇದು ನಿಜ. ಈ ಎಲ್ಲ ವೈವಿಧ್ಯತೆಗೂ ಕಾರಣ ಜೀನ್ ಅಥವಾ ಅನುವಂಶಿಕವಾಗಿ ಒಂದು ಅಣುವಿನ ರಚನೆಯಲ್ಲಿನ ವ್ಯತ್ಯಾಸ, ವೈಶಿಷ್ಟ್ಯ. ಇದು ಜೀವ ಜಗತ್ತಿನ ಸ್ವಾಭಾವಿಕ ಗುಣ. ದಿನ ನಿತ್ಯ ಕಾಣುವ ಹಣ್ಣು ಹಂಪಲು, ತರಕಾರಿ, ಕೋಳಿ, ಕುರಿ, ಮೇಕೆ, ಹಸು, ಕುದುರೆಗಳಲ್ಲಿ, ಬಗೆ ಬಗೆಯ ದವಸಧಾನ್ಯ, ಗಿಡ, ಮರ, ವೈವಿಧ್ಯಮಯ. ಕೆಲವು ನಶಿಸಿಹೋಗುತ್ತವೆ. ಹೊಸದು ಬೆಳೆಯುತ್ತೆ, ಇದು ಅವ್ಯಾಹತ ಪ್ರಕ್ರಿಯೆ. ಜೈವಿಕ ಜಗತ್ತು ಬೆಳೆಯುವ ವಿಧಾನ. ನಾವು ಅದರೊಡನೆ ಹಾಗೆಯೇ ತಾನೇ ಕಟ್ಟಿಕೊಂಡ ಸಮಾಜದ ಏರುಪೇರುಗಳೊಡನೆ ಸಾಗಬೇಕು.

**ದಲಿತ ರೈತ**

ಭಾರತದ ಜನಸಂಖ್ಯೆ 100 ಕೋಟಿ. 33 ಕೋಟಿ ಹೆಕ್ಟೇರ್ ಭೂವಿಸ್ತಾರದಲ್ಲಿ 14 ಕೋಟಿ ಉಳುಮೆಯಾಗಿದೆ. ಅದು 10 ಕೋಟಿಗೂ ಹೆಚ್ಚು ಭೂ ಹಿಡುವಳಿಗಳಾಗಿ ಹಂಚಿ ಹೋಗಿದೆ. ಅದರಲ್ಲಿ $^1/_2$, 1, 2 ಹೆಕ್ಟೇರ್ ಗಾತ್ರದವುಗಳು. 80 ಕೋಟಿ, ಅವನ್ನು ನಂಬಿ ಜೀವಿಸುವ ಜನ, ರೈತ - ಕೃಷಿ ಕೂಲಿ, ಬಡಗಿ, ಕಂಬಾರ ಕಮ್ಮಾರರಂಥವರು ಅವರ ಕುಟುಂಬ ಎಲ್ಲಸೇರಿ 70 ಕೋಟಿ, ಅಪಾರ ಜನಸ್ತೋಮ. ಚಾಣಾಕ್ಷತನದ ಭೂ ಸುಧಾರಣೆ ಕಾನೂನು, ಅಭಿವೃದ್ಧಿ ಯೋಜನೆ ಇಂತಹವುಗಳಿಂದ ಬಂದ ಭಾಗ್ಯ, ಒಟ್ಟು ಉಳುಮೆಯಾದ ಭೂ ವಿಸ್ತೀರ್ಣ ಮುಕ್ಕಾಲು ಪಾಲು ಮೇಲ್ವರ್ಗದ ಧಣಿಗಳದ್ದು. ಉಳಿದ ಕಾಲುಭಾಗ ಚೂರು ಕೋರೆ ಭೂ ಹಿಡುವಳಿ ದಲಿತನದ್ದು. ಬೆಳಕಾಲದಲ್ಲಿ ಬರುವ

60-80 ಸೆಂ. ಮೀ. ಮಳೆ ಗಾತ್ರದಲ್ಲಿ ಹರವಿನಲ್ಲಿ ಎರ್ರಾ ಬಿರ್ರಿ. ಇಂಥ ದಿಬ್ಬದ ಹೊಲಗಳಲ್ಲಿ ಜೈವಿಕ ವೈವಿಧ್ಯತೆ ಕ್ರಮಗಳ ಅಳವಡಿಕೆಯಿಂದ ಅವುಗಳ ಸರ್ವತೋಮುಖ ಉತ್ಪಾದಕತೆ ಹಾಗೂ ಉತ್ಪನ್ನ ಸುಧಾರಣೆ ನಮ್ಮ ಮುಂದಿರುವ ಸವಾಲು.

**ಮಾರುಕಟ್ಟೆ ಸುಳಿಯೆದುರು ಬದುಕಲು ಜೈವಿಕ ವೈವಿಧ್ಯತೆ**

ಅಕ್ಕಡಿ, ಅಂದರೆ ರಾಗಿ-ಜೋಳ ಮುಖ್ಯ ಬೆಳೆಗಳೊಟ್ಟಿಗೆ ಅವರೆ, ತೊಗರಿ, ಅಲಸಂದೆ, ಹುರುಳಿ, ಮೇವಿನ ಜೋಳ, ಹುಚ್ಚೆಳ್ಳು, ಹರಳುಗಳಂಥ ಮಿಶ್ರ ಇಲ್ಲವೇ ಕಾಲಾನುಕೂಲ ವಿದ್ದಲ್ಲಿ ಪರ್ಯಾಯ ಬೆಳೆ, ನಮ್ಮಲ್ಲಿ ಅನೂಚಾನವಾಗಿ ಬಂದಿರುವ ರೂಢಿ. ಹಾಗೆಯೇ ಜಾನುವಾರು ಸಾಕಣೆ ರೈತನ ಬದುಕಿನ ಅವಿಭಾಜ್ಯ ಅಂಗ. ಅವನ ಜೈವಿಕ ಕೃಷಿ ವೈವಿಧ್ಯತೆಯ ಪ್ರಜ್ಞೆಗೆ ಜ್ವಲಂತ ನಿದರ್ಶನ. ಇದು ಅವನು ತನಗೆ ಅಗತ್ಯವಾದ ಎಲ್ಲ ಬಗೆಯ ಬೆಳೆಗಳಿಂದ ಕೂಡಿದ ಸತ್ವಪೂರ್ಣ ಆಹಾರ, ದನಕ್ಕೆ ಮೇವು, ಮಣ್ಣಿನ ಫಲ ಮತ್ತು ನೀರು ರಕ್ಷಣೆ ನಿರಾಯಾಸವಾಗಿ ಒದಗಿಸಿಕೊಳ್ಳುತಿದ್ದ ರೀತಿ. ಹಾಗೆಯೇ ಪ್ರತಿ ಹೊಲದ ಅಂಚು ಮೂಲೆ ಗಳಲ್ಲಿ ಉಪಯುಕ್ತ ಹಲಸು, ಹುಣಿಸೆ, ಮಾವುಗಳಂಥ ಮರಗಳು ಇದ್ದೇ ಇರುತ್ತಿದ್ದವು. ಕಳೆದ 60-70ವರ್ಷಗಳಲ್ಲಿ ಕೇವಲ ಕಾಳು ಉತ್ಪನ್ನ ಕೃಷಿಗೆ ಒತ್ತುಕೊಟ್ಟ ಆಧುನಿಕ ರಾಸಾಯನಿಕ ಗೊಬ್ಬರ-ಕೀಟ ರೋಗನಾಶಕ ಕೃಷಿಯ ಕಾರಣದಿಂದ, ಬಳಕೆಯಲ್ಲಿದ್ದ ಆರೋಗ್ಯಪೂರ್ಣ ರೈತನ ಶೈಲಿ ಹಿಂದಾಯಿತು. ಇತ್ತೀಚಿನ ದಶಕಗಳಲ್ಲಿ ಕೃಷಿಯ ಬಗ್ಗೆ ವೈಜ್ಞಾನಿಕ ಅಧ್ಯಯನ ಗಳಲ್ಲಿ ಕಂಡುಕೊಂಡಿರುವ ಉಪಯುಕ್ತ ಜ್ಞಾನವನ್ನು ಅಳವಡಿಸಿಕೊಂಡ ರೈತನು ಕಾಲಾನು ಕಾಲದಿಂದ ರೂಢಿಸಿಕೊಂಡಿದ್ದ ಬಯೋಡೈವರ್ಸಿಟಿ ಕೃಷಿಗೆ ಹೊಸ ಆಯಾಮ ಅಗತ್ಯ. ನಾವು ಪರಿಶೀಲಿಸಿದ ಜನಪರಿಚಿತ ಸಮ್ಮಿಶ್ರ ಬೇಸಾಯ ಇನ್ನೂ ಹೆಚ್ಚು ಹುರುಪು, ಹುಮ್ಮಸ್ಸಿನ ವ್ಯವಸ್ಥಿತ ಕ್ರಮ ರೂಪದಲ್ಲಿ ಅನುಸರಣೆಯಾಗಬೇಕಾಗುತ್ತದೆ. ಈ ಕ್ರಮದಲ್ಲಿ ಪ್ರಧಾನವಾದವುಗಳೆಂದರೆ ರೈತ ಜಮೀನಿನ ತನ್ನ ಸ್ವಾಮ್ಯದ ಕುರುಹಾಗಿ ಬೇಲಿ ನಿರ್ಮಾಣಕ್ಕೆ ಆದ್ಯತೆ, ಅದು ಸಹಜವಾಗಿ ಹಸಿರು ಬೇಲಿ ಆಗಲೇಬೇಕು. ಹೊಲದ ಅಂಚಿನಲ್ಲಿ, ಮೂಲೆಗಳಲ್ಲಿ , ಸ್ಥಳೀಯ ಹವಾಮಾನ ಹಾಗೂ ರೈತನ ವೈಯಕ್ತಿಕ ಅನುಕೂಲಾನಾ-ನುಕೂಲಗಳಿಗೆ ಹೊಂದುವಂತೆ, ಹಲಸು, ಹುಣಿಸೆ, ಬೇವು, ಹೊಂಗೆ, ಮಾವಿನಂಥ ಆರ್ಥಿಕ ಮರಗಳು ಅಸ್ತಿತ್ವಕ್ಕೆ ಬರಬೇಕು. ಪ್ರಸ್ತುತ ಕಳೆ ಕಸ ಹುಳ ಹುಪ್ಪಟೆಗಳಿಂದ ಮಾರಕವಾಗಿರುವ ಮುಖ್ಯ ಬದು, ಅಡ್ಡ ಬದು, ಕಾಂಟರೂ ಸಾಲು, ಇಲ್ಲೆಲ್ಲ ಶೀಘ್ರವಾಗಿ ಸಮೃದ್ಧವಾಗಿ ಬೆಳೆಯುವ ಗ್ಲಿರಿಸೀಡಿಯಾ, ಸೀಪಿಯಂ, ಸೂಬಾಬುಲ್, ಅಗಸೆ, ನುಗ್ಗೆಯಂಥಹ, ಮೇವು, ಸೊಪ್ಪು , ಸೌದೆ, ಸಣ್ಣನಾಟ ಒದಗಿಸುವ ಬಹು ಉಪಯೋಗಿ ಗಿಡಗಳ ಸ್ಥಾಪನೆ ಕಡ್ಡಾಯ ಅವಶ್ಯ. ರೈತನ ಸಂಸಾರ ಅವಶ್ಯಕತೆಗಳನ್ನು ಪೂರೈಸುವುದಲ್ಲದೆ ಇವುಗಳು ಹಸಿರು ಮೇವು, ಕೋಳಿ, ಕುರಿ, ಮೊಲ ಸಾಕಣೆ, ಹೈನುಗಾರಿಕೆ ಉದ್ಯಮಕ್ಕೆ ಅನುವಾಗುತ್ತವೆ. ಸಗಣಿ ಗಂಜಲದಿಂದ ಮಣ್ಣಿಗೆ ಉತ್ಕೃಷ್ಟ ಗೊಬ್ಬರ ಸಿಗುತ್ತದೆ. ಗಿಡ ಮರಗಳ ತಂಪು ಉದುರೆಲೆ ಅವುಗಳ ಬೇರು ಜಾಲ ಮಣ್ಣಿನ ಸಂರಕ್ಷಣೆ ಗುಣಮಟ್ಟ ಹೆಚ್ಚುತ್ತದೆ. ಹೊಲದ ಎಲ್ಲ ಗಿಡಮರಗಳನ್ನು ಆಗಾಗ ಸವರಿ ಹತೋಟಿಯಲ್ಲಿಡುವುದು ಅವಶ್ಯಕ.

ಒಂದು ನೆಲಬಾವಿ ಅನುಕೂಲ ಮಾಡಿಕೊಂಡು ಅಷ್ಟಿಷ್ಟು ಸರಳ ಸಣ್ಣ ಪುಟ್ಟ ತರಕಾರಿ ಹಣ್ಣು- ಹೂವು, ಕರಿಬೇವು, ಪುದೀನ, ದೊಡ್ಡಪತ್ರೆ ಗೃಹ ಉಪಯೋಗಿ ಔಷಧಿ ಬೆಳೆಗಳನ್ನು ಬೆಳೆದುಕೊಳ್ಳಬಹುದು. ವರ್ಷದುದ್ದಕ್ಕೂ ಹಚ್ಚ ಹಸಿರು, ದಿನನಿತ್ಯ ಕೈತುಂಬ ಕೆಲಸ, ಆದಾಯ ತರುವ ಹೊಲ, ಅದರಲ್ಲಿ ಒಂದು ವಸತಿ, ರೈತನ ಆಸಕ್ತಿ ಅಲ್ಲಿ ಕೇಂದ್ರೀಕೃತವಾಗಿ ಹಳ್ಳಿಗಾಡಿನ ಬದುಕು ಹರ್ಷದಾಯಕವಾಗುತ್ತೆ. ಆಡಳಿತದ ನೆರವು, ಇಚ್ಛಾಶಕ್ತಿ ಸೇರಿದರೆ ಸಣ್ಣ ಪುಟ್ಟ ಎಲೆಕ್ಟ್ರಿಕ್ ಎಲೆಕ್ಟ್ರಾನಿಕ್ ಬಿಡಿ ವಸ್ತುಗಳ ಕೇಂದ್ರವಾಗುವುದು ಸುಲಭ. ಬಾಹ್ಯ ನೆರವನ್ನಪೇಕ್ಷಿಸದ ರೈತನ ಸಮ್ಮಿಶ್ರ ಬೇಸಾಯ ಪದ್ಧತಿಗೆ 'ಆಗ್ರೋಫಾರೆಸ್ಟ್ರಿ ಕೃಷಿ ವಿಧಾನ' ಎಂದು ಕರೆಯುತ್ತಾರೆ. ಇದರ ಬಗ್ಗೆ ಅಂತಾರಾಷ್ಟ್ರೀಯ ಸಂಸ್ಥೆಗಳಲ್ಲಿ ಸಾಕಷ್ಟು ಪರಿಶೀಲನೆಗಳು ನಡೆದಿವೆ. ಪ್ರಜಾಬಾಹುಳ್ಯವುಳ್ಳ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸೂಕ್ತ ಎಂದು ಪರಿಗಣಿತ ವಾಗಿದೆ. ಸಣ್ಣ ರೈತನ ಬದುಕಿನ ಈ ಬಗೆಯ ಸುಧಾರಣೆಯಿಂದ ಗಾಂಧೀಜಿಯವರ ಅಂತ್ಯೋದಯ ಕಲ್ಪನೆ ಸಾಕಾರವಾಗುತ್ತದೆ. ದಿಕ್ಕು ದೆಸೆಯಿಲ್ಲದೆ ತೊಳಲುತ್ತಿರುವ ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮ ಅರ್ಥಪೂರ್ಣವಾಗಬಲ್ಲದು. ಕೊಳ್ಳುವ ಅಗತ್ಯ ಅಷ್ಟಿಲ್ಲದ ಸ್ವಾವಲಂಬಿ ರೈತ, ಮಾರುಕಟ್ಟೆಯ ಸುಳಿಯ ಹೊರಗುಳಿದು ನೆಮ್ಮದಿಯಿಂದ ಬದುಕುವುದು ಸಾಧ್ಯ.

ಪ್ರೊ॥ ಬ. ವಿ. ವೆಂಕಟರಾವ್
೭೮, ೩ನೇ ಕ್ರಾಸ್, ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯



## ಪ್ರವರಾ

ಮೊದಲು
ಪ್ರವರಾ ಬಲು ಜೋರಿನಿಂದ ಹರಿಯುತ್ತಿದ್ದಳಂತೆ
ಅಡೆತಡೆಯಿಲ್ಲದೆ ಭೋರ್ಗರೆಯುತ್ತಾ
ಸುಳಿದಲ್ಲೆಲ್ಲಾ ಹಸಿರು ಮುಟ್ಟಿಸುತ್ತಾ
ಬಂಡೆಗಳ ಮಿದು ಮಾಡುತ್ತಾ
ಋತುಗಳಿಗೆ ಒಡ್ಡಿಕೊಳ್ಳುತ್ತಾ

ಈಗ
ಅಣೆಕಟ್ಟು ಎಬ್ಬಿಸಿದ ಮೇಲೆ
ಅವಳ ಗತಿ ಬದಲಾಯಿಸಿದೆ
ಜನಕ್ಕೆ ತುಂಬಾ ಅನುಕೂಲ
ವಿದ್ಯುಚ್ಛಕ್ತಿ ನೀರಾವರಿ ಇತ್ಯಾದಿ.
ಅಣೆಕಟ್ಟಿನಿಂದೀಚೆಗೆ
ಜನರ ಮನರಂಜನೆಗಾಗಿ ಸಿನೆಮಾ ಶೂಟಿಂಗ್‌ಗಳಿಗಾಗಿ
ಅಂದಚೆಂದದ ತೋಟಗಳು ಕುಲುಕುಲು ಕಾರಂಜಿಗಳು
ಸಣ್ಣಪುಟ್ಟ ಝರಿಗಳು
ಬೇಸಿಗೆ ರಜದಲ್ಲಿ ಅಮ್ಮ ಅಪ್ಪನೊಂದಿಗೆ ಬಂದ
ಕೆಂಪು ಬೂಟುಗಳೊಳಗಿರುವ ಪುಟಾಣಿಗಳು
ಇವುಗಳಲ್ಲಿ ಕಾಗದದ ದೋಣಿಗಳನ್ನು ಬಿಟ್ಟು
ಚಪ್ಪಾಳೆ ತಟ್ಟಿ ಕಿಲಕಿಲ ನಗುತ್ತವೆ.

ಕೆಲವೊಮ್ಮೆ ಈ ದೋಣಿಗಳು
ನದಿಯ ಹಾಸಿನಲ್ಲಿ ಹರಡಿಹೋಗಿರುವ
ಕರಿಮಣಿಗಳಿಗೆ ಸಿಕ್ಕು
ಒದ್ದೆ ಚಿಂದಿಯಾಗಿ ನುಚ್ಚುನೂರಾಗುವುದೂ ಉಂಟು.

ಉಮಾ [redacted]
ಎಫ್-೧೦೪, ಆದರ್ಶ ಹಿಲ್, ದಯಾನಂದ ಸಾಗರ ಕಾಲೇಜಿನ ಎದುರು,
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು - ೫೬೦ ೦೭೮

# ಬ್ರಾಹ್ಮಣರ ಹುಡುಗಿ



**ಕೋ**ಸಲದ ಕಾಡ ಸೆರಗಿನೊಳಿಹುದೀ ಹಳ್ಳಿ -
ಥೂನ ಎಂಬ ಶುಭನಾಮದ ಅಗ್ರಹಾರವಿದು;
ಊರು-ಕೇರಿಗಳ ಮೈಲಿಗೆಯ ಕಡುಭಯದಲ್ಲಿ
ಕೂಪ ಮಂಡೂಕದೊಲು ವಿಪ್ರಕುಲ ಬಾಳಿಹುದು !
ತ್ರಿಕರಣಗಳೊಳಗೆಲ್ಲ ಯುಗಯುಗದ ಮತಮೌಢ್ಯ-
ಜೊತೆಗೆ ಅಹಮೇವ ಪಂಡಿತರೆಂಬ ಹಿರಿಜಾಡ್ಯ;
ಹಚ್ಚುತ್ತ ಬ್ರಹ್ಮಜ್ಞಾನಕ್ಕೆಲ್ಲ ಕ್ರೂರಾರ್ಥ
ಮಣಮಣಿಪ ಲೋಕಹಿತ ಮಂತ್ರದೊಳಗೂ ಸ್ವಾರ್ಥ !
ಮನದಿ ತುಂಬಿದೆ ಸ್ವಂತ ಮುಕ್ತಿ ಲಾಲಸೆಯಮಲು
ಇದಕಿವರ ಜಪ-ತಪಾನುಷ್ಠಾನ ಪೂಜೆಗಳು !
ಪೂರ್ವಕರ್ಮದ ಘೋರ ಸಿದ್ಧಾಂತವಾದಗಳು:
ಸ್ವರ್ಗ-ನರಕಗಳೆರಡು ಇವರವೇ ಸೃಷ್ಟಿಗಳು;
- ಇಂತು ಭ್ರಮೆಗಳ ಹೊದ್ದು ವ್ಯರ್ಥ ಬದುಕುತಲಿಹರು:
ಅದಕೆ ನಾನೆಂಬೆ ಇವರಲ್ಲ ನಿಜ ಬ್ರಾಹ್ಮಣರು.

* * *

**ಅಂ**ದು ಮಂಗಳವಾರ; ಬಿರುಗಾಳಿ ವೇಗದೊಳೆ
ಹಬ್ಬಿ ಹರಡಿತು ಸುದ್ದಿ - ಬುದ್ಧ ದೇವನು ನಾಳೆ
ಅಗ್ರಹಾರಕೆ ಬರುವ, ಸಂಧ್ಯೆಯಾಗುವ ಮುನ್ನ !
ದಿಗಿಲುಗೊಳಿಸಿತು ವಾರ್ತೆ, ಭೂಸುರೋತ್ತಮರನ್ನ -
"ಎರಡು ದಿನ ಕಳೆವನಿತರೊಳೆ ಸಮಣ ಗೌತಮನು
ನಮ್ಮ ದಿವಿಜತ್ವವನೆ ದಿಕ್ಕೇಡಿಗೊಳಿಸುವನು,
ಮಂಕು ಬೂದಿಯನೂದಿ ನಾಸ್ತಿಕರ ಮಾಡುವನು;
ನಮ್ಮ ಆಣತಿಯಂತೆ ಸುರಿಯುತಿದೆ ಜಗದಿ ಮಳೆ-
ಸಸ್ಯ ಶಾಮಲೆ ಪೃಥುವಿ: ಎಲ್ಲೆಲ್ಲೂ ಸುಗ್ಗಿ ಕಳೆ !
ದೇವನೇ ಸೃಷ್ಟಿಸಿದ ವರ್ಣಭೇದಗಳೆಲ್ಲ
ಹಸಿಸುಳ್ಳು, ನಂಬದಿರಿ ಎಂದು ಬೊಗಳುವ ಖುಲ್ಲ !"

* * *

**ಚ**ಚ್ಚರದಿ ಸಭೆಗೂಡಿದರು ಅಗ್ರಹಾರಿಗರು
ಆರ್ಷೇಯ ಧರ್ಮರಕ್ಷಣೆಗಿದೋ ಒಮ್ಮನರು-
ಈ ನಾಸ್ತಿಕನು ಗ್ರಾಮದೊಳಗಡಿಯನಿಡದಂತೆ
ಅಷ್ಟ ದಿಗ್ಬಂಧನವ ಮಾಡಿದರು ವಿಧಿಯಂತೆ,
ರಣ ಉಗ್ರ, ಶಾಪಗಳ ಹಾಕಿದರು ಓರಂತೆ -
ನಾಯ ಸಾವನೆ ಸಾಯಬೇಕಂತೆ ಈ ಭಂತೆ !

* * *

**ಬೆ**ಳಗಾಯ್ತು ; ನದಿ ತಟದಿ ದೋಣಿಗಳ ಸುಳಿವಿಲ್ಲ ,
ಮುರಿದು ಮುಳುಗಿವೆ ನೋಡು - ನಿಂತ ಸೇತುಗಳೆಲ್ಲ !
ನಡೆವ ಹಾದಿಯ ತುಂಬ ನಿಮಿರಿರಲು ವಿಷಮುಳ್ಳೆ
ಬೀದಿಗಳ ಅಂಗಳಕೆ ಮುಸುರೆ-ಗಂಜಳದ ಚಳೆ,
ತುಂಬಿರಲು ಕಡ್ಡಿ-ಕಸ ಊರ ಬಾವಿಗಳಲ್ಲಿ
ವಿಷಮೆಕ್ಕಿ ಕಹಿಬೇವು ನಿಂತ ನೀರುಗಳಲ್ಲಿ ,
ಗುಡಿ-ಛತ್ರಗಳಿಗೆಲ್ಲ ಜಡಿದಿಹವು ಬೀಗಗಳು !
ನುಸುಳಿ ಒಳಬಂದರೇನಂತೆ ಪಾಖಂಡಿಗಳು -
ಕೇಳಿರಿದೊ ಕಟ್ಟಾಜ್ಞೆ : ತಿರುಪೆ ಕಪ್ಪರಕಾರು
ನೀಡಲಾಗದು ಜೋಕೆ ಅನ್ನ-ನೀರಿನ ಭಿಕ್ಷೆ
ತಪ್ಪಿದಡೆ ಉಪವಾಸ ಸಾವನಪ್ಪುವ ಶಿಕ್ಷೆ.

* * *

**ಬೇ**ಸಿಗೆಯ ಧಗೆಯಲ್ಲಿ ದಿನದೊಡಲು ಬೆಂದಿತ್ತು
ಪಡುಗಡಲ ತಂಪ ಬಯಸುತ ಹೊತ್ತು ಸರಿದಿತ್ತು;
ಎಲ್ಲ ತಡೆಗಳ ದಾಟ ಬಂದನೆಂತೀ ಬುದ್ಧ
ವೈರಕ್ಕೆ ಪ್ರೀತಿಯೇ ಮದ್ದೆಂಬ ಗುರಿಬದ್ಧ !
ಎನಿತೊ ದೂರವ ನಡೆದು ದೇಹ ಬಳಲಿರೆ ಬೆವೆತು,
ಕಲ್ಲು - ಮುಳ್ಳನು ತುಳಿದು ಕಾಲು ಬಾತಿವೆ ಸೋತು;
ವಿಶ್ರಮಿಸಿದನು ಬುದ್ಧ ಕೆಲದ ಮರದಡಿಯಲ್ಲಿ
ಕುಳಿತಿತ್ತೆ ಸ್ಥವಿರಗಣ ನೆರೆಯ ನೆರಳುಗಳಲ್ಲಿ ;
ಗಂಟಲೊಣಗಿದೆ ಪೂರ್ತಿ, ನೀರಿಲ್ಲ ಹತ್ತಿರದಿ !
ಇನ್ನೆಂತು ಮಾಡುವುದು - ಎಂಬ ಯೋಚನೆ ಮುಖದಿ,
ಅನಿತರಲೆ ಬಂದರಲ್ಲಿಗೆ ಊರ ನಾರಿಯರು
ಮನೆಸೇರೆ ನೀರಕೊಡ ತಲೆ ಮೇಲೆ ಹೊತ್ತಿಹರು;
ಭಿಕ್ಷುಗಳ ಕಂಡವರೆ ನಿಂತರಚ್ಚರಿಯಲ್ಲಿ
ಹಿರಿಯರಾಣತಿ ನೆನೆದು ಬೆದರುತೋಡಿದರೆಲ್ಲ !
ಅವರೊಳೊಬ್ಬಳು ಬಾಲೆ ನಿಂತಳಲ್ಲಿಯೆ ತಡೆದು-
ಪಥಿಕರಾಯಸ ತಿಳಿದು ಅವಳ ಮನ ಮರುಗಿದುದು;
"ಬುದ್ಧನೀತನೆ ನಿಜವು - ಲೇಸ ಸೂಸುವ ಕಣ್ಣು
ಪ್ರೀತಿ ತುಂಬಿದೆ ಮೊಗದಿ, ದ್ವೇಷಿಪುದೆ ಇವನನ್ನು ?
ಅನ್ನ ನೀಡುವ ಭಾಗ್ಯ ತೊತ್ತಾದ ನನಗೆಲ್ಲಿ -
ನೀರನಾದರು ನೀಡಿ ತೃಷೆಯ ತಣಿಸುವೆನಿಲ್ಲಿ;
ಶಾಸ್ತ್ರಗೀಸ್ತ್ರಗಳೆನ್ನ ಉಪವಾಸ ಕೊಲ್ಲಿಸಲಿ
ಜನ್ಮ ಸಾರ್ಥಕವಹುದು - ಪಾಪ ಬಂದರು ಬರಲಿ,
ಕಟುಕರೀ ಅಗ್ರಹಾರದ ಹಂಗು ಸಾಕೆನಗೆ."
ಕೊಡವನಿಳುಹುತ ಹುಡುಗಿ ನಮಿಸುತ್ತ ಮುನಿವರಗೆ
ಉಪಚರಿಸಿ ದಾಹ ನೀಗಿದಳು ನಮ್ರತೆಯಿಂದ
ಭಿಕ್ಷು ಬಂಧುಗಳ ತೃಷೆ ತಣಿಸಿದಳು ಮುದದಿಂದ;
ಬುದ್ಧ ಕೇಳಿದ - "ಮಗಳೇ, ನಿನ್ನ ಪರಿಚಯ ಹೇಳು."
"ಅಗ್ರಹಾರದ ಹಿರಿಯ ಸೂರಿಗಳ ಮನೆಯಾಳು,
ಅವರದೇ ಕುಲದವಳು, ತಬ್ಬಲಿಯು ನಾ ತಂದೆ,
ಎನ್ನವರ ಕ್ಷಮಿಸಿ ಅರಿವಿನ ಪಥವಿಡಿಸು ಇಂದೆ."
ಜಪತಪಗಳನೆ ನಾಚಿಸುವ ಮಧುರ ಮೃದು ವಚನ,
ಕಲ್ಲು ಕರಗಿಪ ವಿನಯ, ಪುಳಕಿತವು ಭಿಕ್ಷುಮನ;
ಎಂಥ ಮಾನವ ಧರ್ಮ ! ಹರಸಿದನು ಕರುಣಾಳು-
"ಆಗು ನೀನೆಲೆ ಮಗಳೆ ನಿರ್ವಾಣ ಭಾಜನಳು."

* * *

**ನ**ಡೆದಿರಲು ಬೀಳ್ಕೊಂಡು ಧರ್ಮಯೋಧರ ದಂಡು
ಹೇಳಿದನು ಬುದ್ಧಮುನಿ - "ಇವಳ ಪ್ರೀತಿಯನುಂಡು
ಧನ್ಯರಾದೆವು ನಾವು; ಹೆರರ ಮನೆಯಾಳಾಗಿ
ಬದುಕಿಯೂ ಬಾಳಿಹಳು ತನ್ನೊಡತಿ ತಾನಾಗಿ !"

* * *

**ಸು**ದ್ದಿ ತಲ್ಪಲು ಒಡನೆ ಅವಳ ಮುದಿ ಒಡೆಯನಿಗೆ
ರೋಷ ಉಕ್ಕಿತು ಕುದಿದು, ಹಿಡಿದು ಹೊರಟನು ಬಡಿಗೆ,
ರಾಗಕ್ಕೆ ಸಮನಾದ ಅಗ್ನಿ ಎಂಬುವುದುಂಟೆ ?
ದ್ವೇಷಕ್ಕೆ ಸಮನಾದ ಪಾಪ ಕರ್ಮಗಳುಂಟೆ ?
ಕಂಡುದೊಂದೇ ತಡವು ಬೀಸಿದನು ಬಡಿಗೆಯನು
ಕೆಡೆನುಡಿವ ನಾಲಗೆಯ ಕ್ರೋಧಕೆಣೆಯಿಹುದೇನು !
ಎಲ್ಲವನು ಸಹಿಸಿದಳು - ಕೋಪ ತಾಪಗಳಿಲ್ಲ !
ತಲೆಯೊಡೆದು ನೆಲಕಚ್ಚಿ ತಾನಸುವಳಿದಳಲ್ಲ -
ಮಾನವತೆ ಮೆರೆದುದಕೆ ಹತಳಾದಳೀ ಕಂದ !
ಸುದ್ದಿ ಕೇಳಿದ ಬುದ್ಧ ಶವದ ಬಳಿಗೈತಂದ !

* * *

**ಭೂ**ತಹಿತೆ ಭೃತ್ಯಳಿಗೆ ಭಿಕ್ಷುಗಳು ನಮಿಸಿದರು
ಚಿತೆಗಿತ್ತು , ಧರ್ಮಕ್ಕೆ ಶರಣೆಂದು ತೆರಳಿದರು;
ಅಗ್ರಹಾರವ ಹೊಕ್ಕು ಭಿಕ್ಷು ವೃಂದದ ಸಹಿತ
ನಿರ್ಭೀತ ಅರಹಂತ ಧರ್ಮದರಿವನ್ನಿತ್ತ;
ನಡೆದ, ಮುನ್ನಡೆದ ಸತ್ಯವ್ರತಿ ತಥಾಗತ-
ಮನುಕುಲದಿ ಸತ್ಕಾರ್ಯ ಶ್ರೇಷ್ಠನೀತ !

**ಮುದೇನೂರ ಸಂಗಣ್ಣ**
ಚಿಗಟೇರಿ-೫೮೩ ೧೨೭, ಹರಪನಹಳ್ಳಿ, ದಾವಣಗೆರೆ ಜಿಲ್ಲೆ

# ಭಾರತೀಯ ನಾಗರಿಕತೆ: ವಿ. ಎಸ್. ನಯಪಾಲರ ದೃಷ್ಟಿಯಲ್ಲಿ

ಭಾರತೀಯ ಮೂಲದ ವಿದ್ಯಾಧರ ಸೂರಜಪ್ರಸಾದ ನಯಪಾಲರಿಗೆ ನೊಬೆಲ್ ಪ್ರಶಸ್ತಿ ಬಂದಾಗ ಈ ಗೌರವ ಸಹಜವಾಗಿಯೇ ಭಾರತೀಯರಿಗೆ ಅಭಿಮಾನದ ಮತ್ತು ಸಂತೋಷದ ಸಂಗತಿಯಾಯಿತು. ಸ್ವತಃ ನಯಪಾಲರು ಕೂಡ ತಾವು ನೆಲೆಸಿದ ದೇಶವಾದ ಇಂಗ್ಲೆಂಡ್ ಜೊತೆಗೆ ಭಾರತವನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡರು. ಆದರೆ ಭಾರತದೊಡನೆ ಅವರ ಸಂಬಂಧ ಹಲವಾರು ಕಾರಣಗಳಿಂದಾಗಿ ಸಮಸ್ಯಾತ್ಮಕವಾಗಿ ಪರಿಣಮಿಸಿದೆ. ಅವರೇ ಹೇಳಿದ ಹಾಗೆ, ''ಭಾರತ ನನ್ನ ಮಟ್ಟಿಗೆ ಸುಲಭ ದೇಶವಲ್ಲ, ಅದು ನನ್ನ ಮನೆಯಲ್ಲ, ಆಗಲಾರದು. ಆದರೂ ಅದನ್ನು ನಿರಾಕರಿಸುವುದು ಅಥವಾ ಅದರಿಂದ ನಿರ್ಲಿಪ್ತವಾಗಿರುವುದು ನನಗೆ ಸಾಧ್ಯವಿಲ್ಲ.'' (W.C.-ix). ತಮ್ಮ ಮನೆತನದ ಮೂಲ ಭಾರತದಲ್ಲಿದೆ ಎನ್ನುವುದು ನಯಪಾಲರಿಗೆ ಮರೆಯಲಾಗದ ಘಟನೆ. ಅವರ ಅಜ್ಜ ಉತ್ತರ ಪ್ರದೇಶದ ಹಳ್ಳಿಯೊಂದರಿಂದ ಟ್ರಿನಿಡಾಡಿಗೆ ವಲಸೆ ಹೋಗಿದ್ದರು. ವಾರಾಣಾಸಿಯಲ್ಲಿ ವಿದ್ಯೆ ಕಲಿತ ಬ್ರಾಹ್ಮಣನಾದ ಈ ಅಜ್ಜ ಐದು ವರ್ಷಗಳ ಜೀತದ ಕರಾರಿನ ಮೇಲೆ ದೇಶಭ್ರಷ್ಟನಾದುದು ಹಾಗೂ ಇದರಿಂದಾಗಿ ತಮ್ಮ ಮನೆತನ ಭಾರತದಿಂದ ದೂರವಾದುದು ನಯಪಾಲರಿಗೆ ಕ್ರೋಧ ಹಾಗೂ ನಾಚಿಕೆಯ ವಿಷಯವಾಗಿತ್ತು. ಟ್ರಿನಿಡಾಡಿನೊಂದಿಗೆ ಅವರು ಎಂದೂ ಆತ್ಮೀಯ ಸಂಬಂಧ ಬೆಳೆಸಲೇ ಇಲ್ಲ. ಆದರೆ ಭಾರತ ಅವರ ಬಾಲ್ಯದ ಹಿನ್ನೆಲೆಯಾಗಿ ಉಳಿದುಕೊಂಡರೂ ಅದು ಕಾಲದ ತೆರೆಯ ಹಿಂದೆ ಸರಿದುಹೋದ ಕತ್ತಲೆಯ ಕ್ಷೇತ್ರವಾಗಿ ಅವರನ್ನು ಯಾವಾಗಲೂ ಕಾಡುತ್ತಲೇ ಇತ್ತು. ಕಳೆದ ನಲ್ವತ್ತು ವರ್ಷಗಳಲ್ಲಿ ಈ ಕತ್ತಲೆಯನ್ನು ಭೇದಿಸಿ ಭಾರತವನ್ನು ಅದರ ನಿಜ ಹಾಗೂ ವಾಸ್ತವ ಸ್ವರೂಪದಲ್ಲಿ ಅರಿತುಕೊಳ್ಳಲು ಅವರು ಸತತವಾಗಿ ಪ್ರಯತ್ನಿಸಿದ್ದಾರೆ. An Area of Darkness (1964), India: A Wounded Civilisation (1977) ಹಾಗೂ India: A Million Mutinies Now(1990) ಈ ಪ್ರಯತ್ನದ ಫಲಗಳು. ಈ ಪುಸ್ತಕಗಳನ್ನಲ್ಲದೆ ನಯಪಾಲರು ಭಾರತಕ್ಕೆ ಸಂಬಂಧಿಸಿದಂತೆ ಹಲವಾರು ಲೇಖನಗಳನ್ನು ಪತ್ರಿಕೆಗಳಿಗಾಗಿ ಬರೆದಿದ್ದಾರೆ. ಇವುಗಳಲ್ಲಿ ಕೆಲವು The Over - crowded Barracoon ಮತ್ತು ಉಳಿದ ಪುಸ್ತಕಗಳಲ್ಲಿ ದೊರೆಯುತ್ತವೆ. ನಯಪಾಲರ ಅಭಿಪ್ರಾಯ, ಧೋರಣೆ ಹಾಗೂ ರೀತಿಗಳನ್ನು ವಿರೋಧಿಸುವವರೂ ಕೂಡ – ಇವರ ಸಂಖ್ಯೆ ಭಾರತದಲ್ಲಿಯೂ ಕಡಿಮೆ ಇಲ್ಲ – ಒಂದು ಮಾತನ್ನು ಅವಶ್ಯವಾಗಿ ಒಪ್ಪಬೇಕಾಗುತ್ತದೆ. ಅದೆಂದರೆ ಅವರಷ್ಟು ವಿಸ್ತಾರವಾಗಿ, ಗಂಭೀರವಾಗಿ ಹಾಗೂ ಆಳವಾಗಿ ಭಾರತದ ಸಮಾಜ ಹಾಗೂ ಸಂಸ್ಕೃತಿಗಳನ್ನು ವಿಮರ್ಶಿಸಿದವರು ಸಮಕಾಲೀನರಲ್ಲಂತೂ ಅತ್ಯಂತ ವಿರಳ. ಉದಾಹರಣೆಗೆ, ಇ. ಎಮ್. ಫೋರ್ಸ್ಟರ್ ಹಾಗೂ ಗುಂಟರ್ ಗ್ರಾಸ್‌ರ ಬರೆಹಗಳನ್ನು ನೋಡಬಹುದು. ಈ ಮಾತಿಗೆ ಬಹುಶಃ ನೀರದ ಚೌಧರಿಯವರು ಮಾತ್ರ ಅಪವಾದವಾಗಬಲ್ಲರು.

ಭಾರತವನ್ನು ಕುರಿತು ನಯಪಾಲರು ನಡೆಸಿದ ಚಿಂತನೆಯನ್ನು ಯಥಾರ್ಥವಾಗಿ ಅರಿತುಕೊಳ್ಳಲು ಅವರ ಮೂರೂ ಪ್ರವಾಸ ಗ್ರಂಥಗಳನ್ನು ಒಟ್ಟಿಗೆ ನೋಡಬೇಕಾಗುತ್ತದೆ. ಯಾಕೆಂದರೆ, ಈ ಚಿಂತನೆಯ ಸ್ವರೂಪವೇ ವಿಕಾಸದ್ದಾಗಿದೆ. ನಯಪಾಲರೇ ಹೇಳಿರುವ ಹಾಗೆ (Sunday Express, 14-10-2001) ಅವರ ಮೊದಲನೆಯ ಪುಸ್ತಕ (An Area of Darkness) ದಲ್ಲಿ ಭಾವನೆಗಳೇ ಮುಖ್ಯ. ತಾವು ಭಾರತದಲ್ಲಿ ಅನುಭವಿಸಿದ ಮಾನಸಿಕ ಆಘಾತ ಹಾಗೂ ಯಾತನೆಗಳೇ ಈ ಪುಸ್ತಕದ ಹಿಂದಿವೆ ಎಂದು ಅವರು ಹೇಳಿದ್ದಾರೆ. ಭಾರತಕ್ಕೆ ಬರುವಾಗಲೇ ತಮ್ಮ ಮನಸ್ಸಿನಲ್ಲಿ ಹೆದರಿಕೆ ತುಂಬಿದ್ದಿತು, ತಾವು ಭಾರತಕ್ಕೆ ಒಬ್ಬ ವಿದೇಶೀ ಪ್ರವಾಸಿಯಾಗಿ ಬರದೆ ಭಾರತೀಯನೆಂದೇ ಈ ದೇಶವನ್ನು ಪ್ರವೇಶಿಸಿದ್ದೆ ಎಂದು ಅವರು ವಿವರಿಸಿದ್ದಾರೆ. ಆದರೆ ಮೊದಲ ಭೇಟಿಯಲ್ಲಿ ಇಲ್ಲಿ ಒಂದು ವರ್ಷ ಕಳೆದ ನಂತರ ಭಾರತ ಎಂದಿಗೂ ತನ್ನ ದೇಶವಾಗಲಾರದು ಎನ್ನುವ ನಿರ್ಧಾರಕ್ಕೆ ಅವರು ಬಂದರು. ''ಭಾರತ ತನ್ನ ಜೀವನವನ್ನು ಎರಡು ಭಾಗಗಳಾಗಿ ಒಡೆಯಿತು'' ಎಂದು ಅವರು ತಮ್ಮ ಈ ಮೊದಲ ಪುಸ್ತಕದ ಕೊನೆಯಲ್ಲಿ ವಿಷಾದದಿಂದ ನುಡಿದಿದ್ದಾರೆ. ಅವರ ಎರಡನೆಯ ಪುಸ್ತಕ (India : A Wounded Civilisation) ದಲ್ಲಿ ಭಾರತೀಯ ನಾಗರಿಕತೆಯ ಬಗ್ಗೆ ತಮ್ಮ ವಿಚಾರಗಳಿವೆ ಎಂದು ವಿವರಿಸಿದ್ದಾರೆ. ಈ ಪುಸ್ತಕ ಎಷ್ಟು ಕಹಿಯಾಗಿದೆಯೆಂದರೆ ಅದರ ಪ್ರತಿಯೊಂದನ್ನು ನನಗೆ ಕಳಿಸಿದ



ನನ್ನ ಆಫ್ರಿಕನ್ ಲೇಖಕ ಮಿತ್ರ ಪೀಟರ್ ನಾಜರೆತ್ ''ಒಬ್ಬ ಭಾರತೀಯನಿಗೆ ಈ ಪುಸ್ತಕವನ್ನು ಕಳಿಸಲು ನನಗೆ ನೋವಾಗುತ್ತಿದೆ'' ಎಂದು ಬರೆದರು. ''ಭಾರತೀಯ ನಾಗರಿಕತೆ ಒಂದು ಗಾಯಗೊಂಡು ನರಳುತ್ತಿರುವ ನಾಗರಿಕತೆ. ಅದು ಎಷ್ಟು ಬೇಗನೆ ನಾಶವಾಗುತ್ತದೆಯೋ ಅಷ್ಟು ಈ ದೇಶಕ್ಕೆ ಒಳ್ಳೆಯದು'' ಎನ್ನುವ ಸಂಪೂರ್ಣ ನಿರಾಶೆಯ ನಿರ್ಧಾರಕ್ಕೆ ಈ ಪುಸ್ತಕ ಬರುತ್ತದೆ. ೧೯೬೭ರಲ್ಲಿ ಬರೆದ ಲೇಖನವೊಂದರಲ್ಲಿ ''ಈ ನಿರಾಶೆ ನೋಡುವವನ ಕಣ್ಣುಗಳಲ್ಲಿದೆಯೇ ಹೊರತು ಅವನು ನೋಡುವ ಜನರಲ್ಲಿಲ್ಲ'' ಎಂಬ ಎಚ್ಚರದ ಮಾತನ್ನು ಅವರು ಹೇಳಿದರಾದರೂ ಅದು ಈ ಪುಸ್ತಕವನ್ನು ಬರೆಯುವ ವೇಳೆಯಲ್ಲಿ ಅವರನ್ನು ಕಾಯಲಿಲ್ಲ. ಆದರೆ, ತಮ್ಮ ಮೂರನೆಯ ಪುಸ್ತಕ (India : A Million Mutinies Now) ವನ್ನು ಬರೆಯುವ ವೇಳೆಗೆ ಅವರು ತಮ್ಮ ವೈಯಕ್ತಿಕ ಆತಂಕಗಳನ್ನು ಮೀರಿ ವಸ್ತುನಿಷ್ಠತೆಯನ್ನು ಸಾಧಿಸಿದ್ದರು. ''ಇದು ನನ್ನ ಸಂಚಾರದಲ್ಲಿ ಭೆಟ್ಟಿಯಾದ ಹಾಗೂ ಕಂಡುಹಿಡಿದ ಜನರ ಬಗ್ಗೆ ಬರೆದ ಪುಸ್ತಕ'' ಎನ್ನುವ ಅವರ ಹೇಳಿಕೆ ಈ ಬದಲಾವಣೆಯನ್ನು ಸೂಚಿಸುತ್ತದೆ. ಮೊದಲಿನ ಎರಡು ಪುಸ್ತಕಗಳಲ್ಲಿಯೇ ಅವರು ಭೆಟ್ಟಿಯಾದ ವ್ಯಕ್ತಿಗಳ, ವಿಚಾರಗಳ, ಅನುಭವದ ಪ್ರಸ್ತಾಪವಿದೆ. ಆದರೆ ಇದರ ಉದ್ದೇಶ ತಮ್ಮ ಸ್ವಂತದ ಭಾವನೆ ಹಾಗೂ ವಿಚಾರಗಳಿಗೆ ಸಮರ್ಥನೆ ದೊರೆಕಿಸುವುದಕ್ಕೆ ಸೀಮಿತವಾಗಿದ್ದಿತು. ಈ ಪುಸ್ತಕಕ್ಕೂ ಅವರ ಮೊದಲಿನ ಪುಸ್ತಕಕ್ಕೂ ಸುಮಾರು ಮೂವ್ವತ್ತು ವರ್ಷಗಳ ಅಂತರವಿದೆಯೆನ್ನುವುದನ್ನು ಮರೆಯುವಂತಿಲ್ಲ. ಜಗತ್ತಿನ ಅನೇಕ ಪ್ರದೇಶಗಳಲ್ಲಿ ಸಂಚರಿಸಿ ಸಾಕಷ್ಟು ಅನುಭವ ಹೊಂದಿದ ನಯಪಾಲರಿಗೆ ಈ ಸಂಚಾರಗಳನ್ನು ಯಾವ ರೀತಿ ಬಳಸಬೇಕು ಎನ್ನುವುದರ ಯಥಾರ್ಥ ಕಲ್ಪನೆ ಈ ವೇಳೆಗೆ ಲಭ್ಯವಾಗಿದ್ದಿತು. India : A Million Mutinies Nowದಲ್ಲಿ ಬರುವ ಹೇಳಿಕೆಯೊಂದರಲ್ಲಿ ಈ ಮಾತಿಗೆ ಸಮರ್ಥನೆ ದೊರೆಯುತ್ತದೆ. ''ಇಂಥ ಪ್ರವಾಸಗಳಲ್ಲಿ ಯಥಾರ್ಥ ತಿಳುವಳಿಕೆ ಸಾವಕಾಶವಾಗಿ ದೊರಕುತ್ತದೆ. ಪ್ರವಾಸಿಗ ಕೇಳುವ ದನಿಗಳು ಅವನಾಗಿಯೇ ಆಯ್ದುಕೊಂಡಿರಬಹುದು ಇಲ್ಲವೆ, ಕೆಲವೊಂದು ವಿಷಯಗಳನ್ನು ಅವನು ಗೃಹೀತವಾಗಿಟ್ಟುಕೊಂಡೇ ಹೊರಡಬಹುದು''. (MM - 243). ನಯಪಾಲರ ವಿಚಾರ ಹಾಗೂ ನಿರ್ಣಯಗಳನ್ನು ಪ್ರಶ್ನಿಸುವಾಗ ಅವರ ಪುಸ್ತಕಗಳ ಹಿನ್ನೆಲೆ, ಸಂದರ್ಭ ಹಾಗೂ ವಿಧಾನಗಳನ್ನು ನಾವು ಅವಶ್ಯವಾಗಿ ನೆನಪಿನಲ್ಲಿಡಬೇಕಾಗುತ್ತದೆ.

ತಮ್ಮ ಪ್ರವಾಸ ಗ್ರಂಥಗಳಿಗಾಗಿ (ಇವುಗಳಲ್ಲಿ ಕರೀಬಿಯನ್ ದೇಶಗಳನ್ನು ಕುರಿತ The Middle Passage, ಇಸ್ಲಾಮಿಕ್ ದೇಶಗಳನ್ನು ಕುರಿತ Among Believers ಹಾಗೂ Beyond Belief ಮೊದಲಾದ ಗ್ರಂಥಗಳೂ ಸೇರಿವೆ) ನಯಪಾಲರು ತಮ್ಮದೇ ಆದ

■ ಪ್ರೊ॥ ಜಿ. ಎಸ್. ಆಮೂರ

ರಚನಾವಿಧಾನಗಳನ್ನು ರೂಪಿಸಿಕೊಂಡಿದ್ದಾರೆ. ಇವುಗಳನ್ನು ಗಮನಿಸಿದರೆ ಅವರು ಯಾವುದೇ ಒಂದು ನಿರ್ಣಯಕ್ಕೆ ಬರಲು ಎಷ್ಟು ಎಚ್ಚರ ವಹಿಸುತ್ತಾರೆ ಎನ್ನುವುದರ ಅರಿವಾಗುತ್ತದೆ. ಮೊದಲನೆಯದಾಗಿ, ಶ್ರೀ ಪಿ. ವೆಂಕಟೇಶ್ವರನ್ ಹೇಳಿದ ಹಾಗೆ ''ಅವರು ತಾವು ಸ್ವತಃ ನೋಡದ ಅಥವಾ ಕೇಳದ ಯಾವ ವಿಷಯಗಳ ಬಗ್ಗೆಯೂ ಬರೆಯುವುದಿಲ್ಲ''. ಭಾರತದ ಬಗ್ಗೆ ಅವರು ತಮ್ಮ ಮೊದಲ ಪುಸ್ತಕ ಬರೆಯುವ ಮೊದಲು ಒಂದು ವರ್ಷ ಈ ದೇಶದಲ್ಲಿ ಕಳೆದರು ಹಾಗೂ ಇದೇ ವಿಧಾನವನ್ನೇ ಅವರು ನಂತರದ ಪುಸ್ತಕಗಳ ವಿಷಯದಲ್ಲಿಯೂ ಅನುಸರಿಸಿದರು. ಎರಡನೆಯದಾಗಿ, ಅವರು ತಮಗೆ ಉಪಯುಕ್ತವೆನಿಸುವ ದಾಖಲೆಗಳನ್ನು ತಮ್ಮ ಬರವಣಿಗೆಯಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಇವು ಕಾದಂಬರಿಗಳಾಗಿರಬಹುದು (ಉದಾಹರಣೆಗೆ, ಮನೋಹರ ಮಾಳಗಾವಕರರ The Princes, An Area of Darknessದಲ್ಲಿ, ಯು. ಆರ್. ಅನಂತಮೂರ್ತಿಯವರ ಸಂಸ್ಕಾರ, India : A Wounded Civilisationದಲ್ಲಿ); ಪ್ರವಾಸ ಸಾಹಿತ್ಯವಾಗಿರಬಹುದು (ರಸಲ್‌ನ Diary, India : A Million Mutiniesನಲ್ಲಿದ್ದಂತೆ); ಅಥವಾ ಸುಧೀರ ಕಾಕರ್‌ರಂಥ ಮನೋವಿಜ್ಞಾನಿಗಳ ಶೋಧಗಳಾಗಿರಬಹುದು. ಮೂರನೆಯದಾಗಿ, ಅವರು ಮೇಲು ಕೀಳೆನ್ನದೆ ಎಲ್ಲ ವರ್ಗಗಳ ಜನರೊಡನೆ ಬೆರೆತು ಅವರ ವಿಚಾರಗಳನ್ನು ನೇರವಾಗಿ ಸಂಗ್ರಹಿಸುತ್ತಾರೆ. ಹಾಗೂ ಕೊನೆಯದಾಗಿ, ಬೇರೆ ನಾಗರಿಕತೆಗಳ ಬಗೆಗಿನ ತಮ್ಮ ಜ್ಞಾನವನ್ನು ಅವರು ಧಾರಾಳವಾಗಿ ಬಳಸಿಕೊಳ್ಳುತ್ತಾರೆ. ಭಾರತದ ಬಗ್ಗೆ ಬರೆಯುವಾಗ ಅವರು ಟ್ರಿನಿಡಾಡಿನ ತಮ್ಮ ಅನುಭವವನ್ನು ಮೇಲಿಂದ ಮೇಲೆ ನೆನಪಿಸಿಕೊಳ್ಳುವುದನ್ನು ಇಲ್ಲಿ ನೆನೆಯಬಹುದು. ಭಾರತೀಯ ಸಮಾಜವನ್ನು ನೋಡುವ ಅವರ ದೃಷ್ಟಿ– ಮೊದಲಿನ ಎರಡು ಪುಸ್ತಕಗಳ ಮಟ್ಟಿಗಂತೂ– ಕಮ್ಯೂ ತನ್ನ The Rebelದ ಪ್ರಥಮ ಅಧ್ಯಾಯದಲ್ಲಿ ವಿವರಿಸುವ ಸಮಾಜದ ಕಲ್ಪನೆಯಿಂದ ಪ್ರಭಾವಿತವಾದಂತಿದೆ. ಈ ಸಮಾಜವನ್ನು ಕಮ್ಯೂ ಸರಿಯಾಗಿ ನೋಡಲು ಕಲಿಯದ, ತನ್ನನ್ನೇ ಸರಿಯಾಗಿ ಅರ್ಥಮಾಡಿಕೊಳ್ಳದ, ಪ್ರಶ್ನೆಗಳನ್ನು ಕೇಳದ ಹಾಗೂ ಬಂಡಾಯವೆಂದರೇನೆನ್ನುವುದನ್ನೇ ತಿಳಿಯದ ಸಮಾಜವೆಂದು ವರ್ಣಿಸಿದ್ದಾನೆ. ಕಮ್ಯೂನ ಈ ಕಲ್ಪನೆ ಭಾರತವನ್ನು ಉಳಿದ ಎಲ್ಲ ದೇಶಗಳಿಂದಲೂ ಪ್ರತ್ಯೇಕಿಸುತ್ತದೆ ಎನ್ನುವುದು ಪ್ರಾರಂಭದಲ್ಲಂತೂ ನಯಪಾಲರ ದೃಢವಾದ ನಂಬಿಕೆಯಾಗಿತ್ತು. ಆದರೆ ಭಾರತದಲ್ಲಿ ಸಮಾಜ ಚಲನಶೀಲವಾದುದನ್ನು ಗಮನಿಸಿದನಂತರ ಅವರು ತಮ್ಮ ಅಭಿಪ್ರಾಯವನ್ನು ಬದಲಿಸಿಕೊಂಡರು.

ಭಾರತೀಯ ನಾಗರಿಕತೆಯನ್ನು ಕುರಿತ ನಯಪಾಲರ ಚಿಂತನೆಯಲ್ಲಿ ಕೆಲವೊಂದು ವಿಚಾರಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತವೆ. ಅವುಗಳಲ್ಲಿ ಮುಖ್ಯವಾದುವುಗಳನ್ನು ಇಲ್ಲಿ ಚರ್ಚೆಗಾಗಿ ಎತ್ತಿಕೊಳ್ಳಬಹುದೆಂದು ತೋರುತ್ತದೆ.

೧. ಕಮ್ಯೂನ ಭಾಷೆಯನ್ನೇ ಬಳಸುತ್ತ ನಯಪಾಲ್ ಭಾರತೀಯರು ಸಾಮೂಹಿಕ ಅಂಧತ್ವದಿಂದ ಬಳಲುತ್ತಿದ್ದಾರೆ ಎಂದು ಆಪಾದಿಸಿದ್ದಾರೆ. (AD: ೩೩). ಅವರ ಅಭಿಪ್ರಾಯದಲ್ಲಿ ಈ ರೋಗ ಭಾರತಕ್ಕೆ ಮಾತ್ರ ವಿಶಿಷ್ಟವಾದದ್ದು (AD : ೧೮೩). ಈ ಅಂಧತ್ವದ ಮೂಲಕವಾಗಿಯೇ ಭಾರತೀಯರು ಇತಿಹಾಸವನ್ನು ನಿರ್ಲಕ್ಷಿಸುತ್ತಾರೆ ಹಾಗೂ ಸಮಕಾಲೀನ ಸಮಸ್ಯೆಗಳಿಂದ ಮುಖ ತಿರುಗಿಸುತ್ತಾರೆ ಎಂದು ಅವರು ವಾದಿಸುತ್ತಾರೆ. ನಯಪಾಲರ ಅಭಿಪ್ರಾಯದಲ್ಲಿ, ಗಾಂಧೀಜಿ ಮಾತ್ರ ಈ ಮಾತಿಗೆ ಅಪವಾದವಾಗಿದ್ದರು, ಆದರೆ ಅವರ 'ನೇರದೃಷ್ಟಿ' (Direct vision) ಭಾರತೀಯ ಮೂಲದ್ದಾಗಿರದೆ ಪಶ್ಚಿಮದ ಪ್ರಭಾವದಿಂದ ಬಂದುದಾಗಿತ್ತು. ಭಾರತೀಯರು ಅನುಭವವನ್ನು ಸ್ವೀಕರಿಸುವ ವಿಧಾನದಲ್ಲಿಯೇ ಈ ಸಮಸ್ಯೆಯ ಮೂಲವಿದೆಯೆಂದು ನಯಪಾಲ ಹೇಳುತ್ತಾರೆ. ನೇರದೃಷ್ಟಿಯ ಅಭಾವ ಹಾಗೂ ವಾಸ್ತವದಿಂದ ಹಿಂಜರಿಕೆಗಳನ್ನು ಈ ವಿಧಾನದ ಪರಿಣಾಮಗಳೆಂದು ಅವರು ಗುರುತಿಸುತ್ತಾರೆ. ಭಾರತೀಯರು ಬಾಹ್ಯಜಗತ್ತನ್ನು ಅದರ ಸಂಪೂರ್ಣತೆಯಲ್ಲಿ ಗ್ರಹಿಸದೆ ತಮ್ಮ ಆಂತರಿಕ ಜಗತ್ತಿಗೆ ಅದು ಹೊಂದಿದ ಸಂಬಂಧಕ್ಕೆ ಸೀಮಿತವಾಗಿ ಗ್ರಹಿಸುವುದರಿಂದ ಮನುಷ್ಯ ಮನುಷ್ಯರ ಸಂಬಂಧಗಳು ಅವರಿಗೆ ಗೌಣವಾಗುತ್ತವೆ ಹಾಗೂ ಅವರು ಒಂದು ವಿಶಾಲವಾದ ಮಾನವೀಯ ಸಂಬಂಧಗಳ ಕಲ್ಪನೆಯಿಂದ ವಂಚಿತರಾಗುತ್ತಾರೆ ಎಂದು ನಯಪಾಲ ತಮ್ಮ ವಾದವನ್ನು ಮುಂದುವರಿಸುತ್ತಾರೆ. (MM: ೩೯೫). ಸಾಮೂಹಿಕ ಅಂಧತ್ವದ ಇನ್ನೊಂದು ದುಷ್ಪರಿಣಾಮವೆಂದರೆ ಮನುಷ್ಯರು ಹೊಸ ವಿಚಾರಗಳನ್ನು ಬೆಳೆಸಿಕೊಳ್ಳುವ ಶಕ್ತಿಯನ್ನೇ ಕಳೆದುಕೊಳ್ಳುತ್ತಾರೆ. ಯಾಕೆಂದರೆ ನೇರ ದೃಷ್ಟಿಯಿಂದ ಮಾತ್ರ ಹೊಸ ವಿಚಾರಗಳು ಹುಟ್ಟಿಕೊಳ್ಳಬಲ್ಲವು. ತಮ್ಮ ವಾದದ ಸಮರ್ಥನೆಗೆ ನಯಪಾಲರು ಗೀತೆಯನ್ನು ಉದಾಹರಿಸುತ್ತಾರೆ ಹಾಗೂ ಸುಧೀರ ಕಾಕರ್ ಅವರ Under-developed egoದ ಸಿದ್ಧಾಂತವನ್ನು ಬಳಸಿಕೊಳ್ಳುತ್ತಾರೆ.

೨. ಭಾರತೀಯರ ಬಗ್ಗೆ ನಯಪಾಲ್ ಮಾಡುವ ಇನ್ನೊಂದು ಮಹತ್ವದ ಆರೋಪವೆಂದರೆ ಅವರು ಅನುಕರಣಶೀಲರೆನ್ನುವುದು. ''ಭಾರತೀಯರಷ್ಟು ಅನುಕರಣ ಸಾಮರ್ಥ್ಯ ಹೊಂದಿದ ಬೇರೆ ಜನ ದೊರೆಯಲಾರರು''(೫೭). ಕಟ್ಟಡಗಳು, ರೈಲ್ವೆ, ಆಡಳಿತ ಪದ್ಧತಿ, ಬೌದ್ಧಿಕ ಶಿಸ್ತುಗಳು, ಸೈನ್ಯ, ಸಂಸ್ಥೆಗಳು, ಕಾದಂಬರಿಯಂಥ ಸಾಹಿತ್ಯ ಪ್ರಕಾರಗಳು– ಇವೆಲ್ಲವೂ ಪಾಶ್ಚಾತ್ಯರ ಅನುಕರಣೆಯ ಫಲಗಳಾಗಿಯೆ ಭಾರತೀಯರಿಗೆ ದೊರಕಿವೆ ಎಂಬ ಅಭಿಪ್ರಾಯವನ್ನು ತಮ್ಮ ಪುಸ್ತಕಗಳಲ್ಲಿ ನಯಪಾಲ್ ಮತ್ತೆ ಮತ್ತೆ ಪುನರುಚ್ಚರಿಸಿದ್ದಾರೆ. ೧೮೫೭ರ ಬಂಡಾಯದ ನಂತರದ ೧೩೦ ವರ್ಷಗಳಲ್ಲಿ ಭಾರತೀಯರಲ್ಲಿ ಸ್ವಾತಂತ್ರ್ಯದ ಹಂಬಲ ಬೆಳೆದಿದೆ ಎನ್ನುವುದನ್ನು ನಯಪಾಲ್ ಒಪ್ಪಿಕೊಳ್ಳುತ್ತಾರೆ (MM: ೫೧೭). ಆದರೆ ಭಾರತ ಹಾಗೂ ಬ್ರಿಟನ್‌ಗಳ ಮುಖಾಮುಖಿ ಅಪೂರ್ಣವಾಗಿಯೇ ಉಳಿದದ್ದು, ನೀರದ ಚೌಧರಿಯವರಂತೆ, ಅವರಿಗೂ ವಿಷಾದದ ಸಂಗತಿಯಾಗಿದೆ: ''ಈ ಮುಖಾಮುಖಿ ಎರಡು ವಿಧವಾದ ಭ್ರಮೆಯಲ್ಲಿ ಕೊನೆಗೊಂಡಿತು. ಭಾರತೀಯರು ದೊರಕಿಸಿದ ಹೊಸ ಅರಿವಿನಿಂದಾಗಿ ಹಿಮ್ಮುಖವಾಗಿ ನಡೆಯುವುದು ಅವರಿಗೆ ಅಸಾಧ್ಯವೆನಿಸಿದೆ. ಆದರೆ ಭಾರತೀಯರ ಬಗ್ಗೆ ಅವರಲ್ಲಿರುವ ಮೋಹ ಅವರನ್ನು ಮುನ್ನಡೆಯಲೂ ಕೊಡುವುದಿಲ್ಲ'' (AD: 216). ಅವರು ಬಯಸುವ ಸಾಂಸ್ಕೃತಿಕ ಸಮನ್ವಯ ದಾನವಾಗಿ ಬಂದ ಆದರ್ಶವಾಗಿದೆಯೆ ಹೊರತು ವಾಸ್ತವಿಕ ಸಾಧನೆಯಲ್ಲ, ಭಾರತೀಯರಲ್ಲಿ ಜೀವಂತ ಸಂಪ್ರದಾಯಗಳೇ ಇಲ್ಲವೆನ್ನುವುದಕ್ಕೆ ಅವರ ವಾಸ್ತುಶಿಲ್ಪಗಳೇ ಉದಾಹರಣೆಗಳಾಗಿವೆ, ಎಂದು ಹೇಳಿ ನಯಪಾಲ್ ತಮ್ಮ ವಾದವನ್ನು ಮುಂದುವರಿಸುತ್ತಾರೆ (WC : 123).

೩. ನಯಪಾಲರ ಆಸ್ಥೆಯನ್ನು ಕೆರಳಿಸಿದ ಇನ್ನೊಂದು ವಿಷಯ ಭಾರತದ ಜಾತಿ ವ್ಯವಸ್ಥೆ. ಜಾತಿ ಎಂಬ ಪದವನ್ನು ಅವರು ಎಲಿಜಬೀತನ್ ಇಂಗ್ಲಿಷ್ ಮೂಲದ "Degree" ಎಂಬ ಪದಕ್ಕೆ ಪರ್ಯಾಯವಾಗಿಯೂ ಬಳಸುತ್ತಾರೆ: ''ಜಾತಿ ಭಾರತೀಯರಲ್ಲಿ ರಕ್ತಗತವಾದ ವಿಚಾರ. ಯಾವ ಭಾರತೀಯನೂ ತನ್ನ ಮೂಲಸ್ಥಾನದಿಂದ ದೂರ ಉಳಿಯಲು ಬಯಸುವುದಿಲ್ಲ'' (AD: 55). ಭಾರತೀಯರ ಸಾಹಸಹೀನತೆಗೆ ಜಾತಿ ವ್ಯವಸ್ಥೆಯೇ ಕಾರಣ ಎಂದು ಅವರು ಅಭಿಪ್ರಾಯಪಡುತ್ತಾರೆ. ಜಾತಿ ಮನುಷ್ಯರನ್ನು ಅವರವರ ವಿಶಿಷ್ಟ ಕಾರ್ಯಗಳಿಗೆ ಬಂಧಿಸಿಡುತ್ತದೆ ಹಾಗೂ ಅವರ ಕ್ರಿಯಾ ಸ್ವಾತಂತ್ರ್ಯವನ್ನು ಮೊಟಕುಗೊಳಿಸುತ್ತದೆ ಎನ್ನುವುದು ನಯಪಾಲರ ಒಂದು ನಿಲುವು. ''ಪ್ರಾರಂಭದಲ್ಲಿ ಜಾತಿವ್ಯವಸ್ಥೆ ಗ್ರಾಮೀಣ ಸಮಾಜದಲ್ಲಿ ಶ್ರಮವಿಭಜನೆಯ ಮೂಲಕ ಉಪಯುಕ್ತವೆನಿಸಿದುದು ನಿಜ. ಆದರೆ ಅದು ಈಗ ಕಾರ್ಯ ಹಾಗೂ ಸಾಮಾಜಿಕ ಹೊಣೆ, ಸ್ಥಾನ ಹಾಗೂ ಕರ್ತವ್ಯಗಳ ನಡುವೆ ಬಿರುಕು ತಲೆದೋರುವುದಕ್ಕೆ ಕಾರಣವಾಗಿದೆ. ಅದು ದಕ್ಷತೆಯನ್ನು ಕಳೆದುಕೊಂಡಿದೆಯಷ್ಟೆ ಅಲ್ಲದೆ ಮಾರಕವಾಗಿಯೂ ಪರಿಣಮಿಸಿದೆ. ಪ್ರಗತಿಯ ಎಲ್ಲ ಯೋಜನೆಗಳನ್ನು ದಿಕ್ಕುಗೆಡಿಸುವ ಮನೋಧರ್ಮವನ್ನು ಅದು ಸೃಷ್ಟಿಸಿದೆ. ಭಾರತೀಯರಲ್ಲಿ ಎದ್ದು ಕಾಣುವ ವಾಕ್ ಚಾಪಲ್ಯ ಹಾಗೂ ಸಾಂಕೇತಿಕತೆಗೆ ಸೀಮಿತವಾದ ಕ್ರಿಯೆಗಳಿಗೆ ಈ ವ್ಯವಸ್ಥೆಯೇ ಕಾರಣವಾಗಿದೆ''. (AD: 78). ಆದರೆ, ಜಾತಿವ್ಯವಸ್ಥೆಯ ಬಗ್ಗೆ ನಯಪಾಲರ ಧೋರಣೆ ಏಕಮುಖವಾಗಿಲ್ಲ. ಜಾತಿವ್ಯವಸ್ಥೆ ಭಾರತದಲ್ಲಿ ಅವ್ಯವಸ್ಥೆಯ ಮೇಲೆ ನಿಯಂತ್ರಣ ಸಾಧಿಸಿ ಏಕತೆಯನ್ನು ಉಳಿಸಿಕೊಂಡು ಬಂದಿದೆ ಎಂದು ಹೇಳಿ ಈ ವ್ಯವಸ್ಥೆಗೆ ಒಂದು ಐತಿಹಾಸಿಕ ಸಮರ್ಥನೆಯನ್ನು ಅವರು ಒದಗಿಸಿದ್ದಾರೆ (OB: 66, MM: 208). ೧೯೯೭ರಲ್ಲಿ ಬರೆದ ಲೇಖನವೊಂದರಲ್ಲಿ ಜಾತಿಪದ್ಧತಿಯನ್ನು ಒಂದು support system ಎಂದು ಕರೆದುದನ್ನೂ ಇಲ್ಲಿ ನೆನೆಯಬಹುದು. (*India Today* : Aug 8, 1997).

೪. ಭಾರತೀಯರ ಇತಿಹಾಸದ ಕಲ್ಪನೆ ಹಾಗೂ ಅವರು ತಮ್ಮ ಇತಿಹಾಸವನ್ನು ನೋಡುವ ದೃಷ್ಟಿಗಳನ್ನು ನಯಪಾಲ್ ತೀವ್ರ ಟೀಕೆಗೆ ಒಳಪಡಿಸಿದ್ದಾರೆ. ''ಭಾರತೀಯರು ತಮ್ಮ ಇತಿಹಾಸಕ್ಕೆ



ಕೊಡುವ ವ್ಯಾಖ್ಯಾನಗಳು ಅವರ ಇತಿಹಾಸದಷ್ಟೇ ನೋವಿನಿಂದ ತುಂಬಿವೆ'' ಎಂದು ಹೇಳುತ್ತ ಅವರು ಕೆ. ಎಮ್. ಮುನಷಿ ಮೊದಲಾದವರ ಉದಾಹರಣೆಗಳನ್ನು ಕೊಡುತ್ತಾರೆ. ಭಾರತದ ಇತಿಹಾಸ ಸೋಲು, ನಾಶಗಳ ಇತಿಹಾಸವಾದರೂ ಭಾರತೀಯರು ಮಾತ್ರ ತಮ್ಮ ಪೂರ್ವಜರು ಸಾಧಿಸದೇ ಇದ್ದದ್ದು ಯಾವುದೂ ಇಲ್ಲ ಎನ್ನುವ ರೀತಿಯಲ್ಲಿ ಬರೆಯುತ್ತಾರೆ ಎಂದು ನಯಪಾಲ್ ತಮ್ಮ ಖೇದವನ್ನು ವ್ಯಕ್ತಪಡಿಸುತ್ತಾರೆ (AD: 200). ಹಿಂದೊಮ್ಮೆ ಇಂಡಿಯಾ ಸಮಗ್ರತೆಯನ್ನು ಸಾಧಿಸಿರಬಹುದಾದರೂ ಅದು ಇಂದು ಕಳೆದುಹೋಗಿದೆ ಎಂದು ಅವರು ಹಳಹಳಿಸುತ್ತಾರೆ. ಭವಿಷ್ಯದ ಬಗ್ಗೆ ಭಾರತೀಯರು ಹೊಂದಿರುವ ಭರವಸೆ (ಉದಾ : ಆರ್. ಕೆ. ನಾರಾಯಣರ "India will go on" ಎಂಬ ಹೇಳಿಕೆ)ಯನ್ನು ಅವರು ಸಂಶಯದಿಂದಲೇ ನೋಡುತ್ತಾರೆ: ''ಭೂತಕಾಲದ ಮೇಲು ಮೇಲಿನ ನೋಟ ಹಾಗೂ ಭಾರತಕ್ಕೆ ಎಂದೂ ನಾಶವಿಲ್ಲ ಎಂಬ ಭಾವುಕ ನಂಬುಗೆಗಳ ಪರಿಣಾಮವಾಗಿ, ಮುಂದೆ ಬರಬಹುದಾದ ಸೋಲು ಹಾಗೂ ನಾಶಗಳ ಬಗ್ಗೆ ಹೆದರಿಕೆಯ ಬದಲು ಒಂದು ವಿಧವಾದ ನಿರ್ಲಕ್ಷ್ಯ ಭಾವ ಬೆಳೆದುಬರುತ್ತದೆ. ಭಾರತ ಹೇಗೋ ತನ್ನನ್ನು ತಾನೇ ರಕ್ಷಿಸಿಕೊಳ್ಳುತ್ತದೆ ಎಂಬ ನಂಬುಗೆಯಿಂದಾಗಿ ವೈಯಕ್ತಿಕ ಹೊಣೆಗಾರಿಕೆಯ ಕಲ್ಪನೆಯೇ ಇಲ್ಲದಾಗುತ್ತದೆ'' ಎಂದು ಅವರು ದೂರುತ್ತಾರೆ (WC: 17). ಭಾರತೀಯರ ಸದ್ಯದ ಜೀವನ ಎಷ್ಟೇ ಅಸ್ವಚ್ಛ ಹಾಗೂ ಭ್ರಷ್ಟವಾಗಿದ್ದರೂ ಅವರು ವಿಚಾರಶೂನ್ಯತೆಯಿಂದ ಶುದ್ಧತೆಯ ಹಾಗೂ ಸಂಪೂರ್ಣತೆಯ ಭ್ರಮಾಲೋಕದಲ್ಲಿಯೇ ವಿಹರಿಸುತ್ತಾರೆ ಎನ್ನುವುದಕ್ಕೆ ಭಾರತೀಯರಿಗೆ ಅತ್ಯಂತ ಪ್ರಿಯವಾದ ರಾಮರಾಜ್ಯದ ಕನಸನ್ನು ನಯಪಾಲ್ ಉದಾಹರಿಸುತ್ತಾರೆ (WC: 154). ''ಭಾರತ ಇತಿಹಾಸದ ಬಗ್ಗೆ ತಾನಿಟ್ಟುಕೊಂಡ ಕಲ್ಪನೆಯನ್ನೇ ಬೆನ್ನಟ್ಟುವವರೆಗೆ ಅದು ಈ ಇತಿಹಾಸದ ಮೇಲೆ ಪ್ರಭುತ್ವ ಸಾಧಿಸಲಾರದು ಮತ್ತು ಅದರಿಂದ ಲಾಭ ಪಡೆಯಲಾರದು. ಇತಿಹಾಸದ ಮೇಲೆ ಪ್ರಭುತ್ವ ದೊರಕಿಸುವ ಸಾಧನೆಗಳೆಂದರೆ ಅದರ ಬಗ್ಗೆ ತಿಳಿವು ಹಾಗೂ ಶೋಧ. ಇದಕ್ಕೆ ಬೇಕಾದ ಶಿಸ್ತು ಬೌದ್ಧಿಕ ಶಿಸ್ತು, ಆಧ್ಯಾತ್ಮಿಕ ಸಾಧನೆಯಲ್ಲ'' ಎಂಬ ನಿರ್ಣಯಕ್ಕೆ ಅವರು ಬರುತ್ತಾರೆ (WC : 191).

೫. ಭಾರತೀಯ ನಾಗರಿಕತೆ ಎದುರಿಸುತ್ತಿರುವ ಸಂಕಟ (crisis)ದ ಬಗ್ಗೆ ತಮ್ಮ India : A Wounded Civilisationದಲ್ಲಿ ನಯಪಾಲ್ ವಿವರವಾಗಿ ಚರ್ಚಿಸಿದ್ದಾರೆ. ಈ ವಿಷಯದಲ್ಲಿ ಅವರ ಮುಖ್ಯ ನಿರ್ಣಯ ಹೀಗಿದೆ: ''ಭಾರತ ಎದುರಿಸುತ್ತಿರುವ ಸಂಕಟ ಕೇವಲ ರಾಜಕೀಯ ಅಥವಾ ಆರ್ಥಿಕ ಸಂಕಟವಲ್ಲ. ವಿಶಾಲವಾದ ಅರ್ಥದಲ್ಲಿ ಅದೊಂದು ಗಾಯಗೊಂಡ ಹಳೆಯ ನಾಗರಿಕತೆಗೆ ಒದಗಿದ ಸಂಕಟ. ಈ ನಾಗರಿಕತೆಗೆ ಈಗ ತನ್ನ ಕೊರತೆಗಳ ಅರಿವಿದೆ. ಆದರೆ ಚಲನೆಗೆ ಬೇಕಾದ ಬೌದ್ಧಿಕ ಸಾಮರ್ಥ್ಯವನ್ನು ಅದು ಇನ್ನೂ ಗಳಿಸಿಕೊಳ್ಳಬೇಕಾಗಿದೆ'' (WC: 9,10). ಇಡೀ ಜಗತ್ತೇ ಪರಿವರ್ತನೆಯ ಹಾದಿಯಲ್ಲಿರುವಾಗ ಭಾರತವೊಂದೇ ನಿಶ್ಚಲವಾಗಿರುವುದು ನಯಪಾಲರಲ್ಲಿ ದಿಗ್ಭ್ರಮೆ ಹುಟ್ಟಿಸುತ್ತದೆ: ''ಭಾರತಕ್ಕೆ ಮರಳಿ ಬರುವುದೆಂದರೆ ಆಳದಲ್ಲಿಯ ಒಂದು ಸೃಷ್ಟಿಕ್ರಮಕ್ಕೆ ಮರಳಿದಂತೆ. ಇಲ್ಲಿ ಎಲ್ಲವೂ ಸ್ಥಿರ, ಶುದ್ಧ, ಸುರಕ್ಷಿತ. ನಿದ್ರೆಯಲ್ಲಿ ನಡೆದಾಡುವ ಒಬ್ಬ ಹೆಂಗಸಿನಂತೆ ಭಾರತ ಎರಡು ವಿರುದ್ಧ ಜಗತ್ತುಗಳ ನಡುವೆ ಚಲಿಸುತ್ತಿದೆ.'' (WS: 80). India : A Wounded Civilisationದ ಕೊನೆಯಲ್ಲಿ ಭಾರತದ ಬಗೆಗಿನ ಅವರ ನಿರಾಶಾವಾದ ತನ್ನ ಚರಮಸೀಮೆಯನ್ನು ತಲುಪುತ್ತದೆ: ''ಭಾರತದ ಸಂಕಟ ರಾಜಕೀಯ ಸಂಕಟ ಮಾತ್ರವಲ್ಲ... ಅದು ಕೇವಲ ಆರ್ಥಿಕ ಸಂಕಟವೂ ಅಲ್ಲ. ಇವು ಇವುಗಳನ್ನು ಮೀರಿದ ಇನ್ನೂ ಹೆಚ್ಚು ಗಂಭೀರವಾದ ಸಂಕಟದ ಚಿಹ್ನೆಗಳು ಮಾತ್ರ. ಭಾರತೀಯ ನಾಗರಿಕತೆ ಒಂದು ಕೊಳೆಯುತ್ತಿರುವ ನಾಗರಿಕತೆ, ಉಳಿದಿರುವ ಒಂದೇ ಒಂದು ಆಸೆಯೆಂದರೆ ಈ ಪ್ರಕ್ರಿಯೆ ಇನ್ನೂ ಹೆಚ್ಚು ತೀವ್ರವಾದೀತು ಎನ್ನುವುದು.'' (WC:191).

೬. ಆದರೆ, ಸುದೈವದಿಂದ ೧೯೭೭ರಲ್ಲಿ ಬರೆದ ಈ ಮಾತು ಭಾರತದ ಬಗ್ಗೆ ನಯಪಾಲರು ಬರೆದ ಕೊನೆಯ ಮಾತಾಗಲಿಲ್ಲ. ೧೯೯೦ರಲ್ಲಿ ಪ್ರಕಟವಾದ ಅವರ India : A Million Mutinies Now ಭಾರತದಲ್ಲಿ ನಡೆದ ಪ್ರಗತಿಪರ ಬದಲಾವಣೆಗಳನ್ನು ದಾಖಲಿಸುವುದಕ್ಕಾಗಿಯೇ ಮೀಸಲಾಗಿದೆ. ಮೊದಲಿನ ಎರಡು ಪುಸ್ತಕಗಳ ನಿರಾಶೆಯ ಕತ್ತಲಲ್ಲಿಯೂ ಕೂಡ ಇಂಥ ಬದಲಾವಣೆಯ ಬೆಳಕಿನ ತುಣುಕುಗಳು ಅಲ್ಲಲ್ಲಿ ಕಾಣಿಸಿಕೊಂಡಿದ್ದವು. ಉದಾಹರಣೆಗೆ, An Area Of Darknessದಲ್ಲಿ ಗಾಂಧೀಜಿ ಕುರಿತು ನಯಪಾಲ್ ಹೇಳುವ ಮಾತುಗಳು ಬೇರೆ ಭಾರತೀಯರಲ್ಲಿರದ ನೇರ ದೃಷ್ಟಿ ಮತ್ತು ಜನಾಂಗೀಯ ಕಲ್ಪನೆ (Racial

Sense)ಗಳನ್ನು ಗಾಂಧೀಜಿ ಹೊಂದಿದ್ದರು ಎಂದು ಹೇಳಿ ಅವರನ್ನು ನಯಪಾಲ್ ಪ್ರಶಂಸಿಸಿದ್ದಾರೆ (WC: 167). ಗಾಂಧೀಜಿಯವರ ನೇರ ದೃಷ್ಟಿ ಪಶ್ಚಿಮದ ಬಳುವಳಿಯೆಂದು ನಯಪಾಲ್ ಹೇಳುತ್ತಾರೆ. ಆದರೆ ಈ ದೃಷ್ಟಿಯಿಂದ ಭಾರತೀಯರಿಗೆ ಆದ ಲಾಭವನ್ನು ಗುರುತಿಸಲು ಮರೆಯುವುದಿಲ್ಲ (AD: 73). ಗಾಂಧೀಜಿಯವರ "self absorption" ನಯಪಾಲರಿಗೆ ಭಾರತೀಯ ಅಂಶವಾಗಿ ಕಾಣುತ್ತದೆ ಹಾಗೂ ಅವರು ಅದನ್ನು ಟೀಕಿಸಿದ್ದಾರೆ. [ಈ ಟೀಕೆ ಕೆಲವರಿಗಾದರೂ ಅಸಮರ್ಪಕವೆಂದು ತೋರಬಹುದು. ಉದಾಹರಣೆಗೆ, ತಮ್ಮ ಆತ್ಮಚರಿತ್ರೆಯಲ್ಲಿ ಆಫ್ರಿಕನ್‌ರನ್ನು ಉಲ್ಲೇಖಿಸದಿರುವುದು ಒಂದು ಕೊರತೆಯೆಂದು ನಯಪಾಲರಿಗೆ ತೋರುತ್ತದೆ. ಆದರೆ ಶ್ಯಾಮ ಬೆನಗಲ್ ತೋರಿಸಿದಂತೆ, ಗಾಂಧೀಜಿಯವರು ಆಫ್ರಿಕನ್‌ರನ್ನು ಅಲಕ್ಷಿಸಿರಲಿಲ್ಲವೆನ್ನುವುದಕ್ಕೆ Satyagraha In South Africa ಸಾಕ್ಷಿಯಾಗಿದೆ (Gentleman February 1998 ; 28)]. ಭಾರತದಲ್ಲಿ ನಡೆದ ಪರಿವರ್ತನೆಯನ್ನು ಕುರಿತು India : A Wounded Civilisation ದಲ್ಲಿಯೂ ಸಕಾರಾತ್ಮಕ ಅಂಶಗಳಿವೆ. ಎಮರ್ಜನ್ಸಿಯ ನಂತರದ ಭಾರತದಲ್ಲಿ ನಡೆದ ಬದಲಾವಣೆಯನ್ನನುಲಕ್ಷಿಸಿ ನಯಪಾಲ್ ಹೇಳಿದ ಮಾತುಗಳಿವು : ''ಸ್ವಾತಂತ್ರ್ಯ ಹಾಗೂ ಆರ್ಥಿಕ ಬೆಳವಣಿಗೆ, ಅರಾಜಕತೆ ಮತ್ತು ನಂಬಿಕೆಗಳನ್ನು ಕಳೆದುಕೊಳ್ಳುವುದರ ಪರಿಣಾಮವಾಗಿ ಭಾರತ ತೋರಿಕೆಯ ಸ್ಥೈರ್ಯದ ಹಿಂದೆ ಅಡಗಿದ ತನ್ನ ಸಂಕಟಗಳನ್ನು ಹಾಗೂ ಕ್ರೌರ್ಯಗಳನ್ನು ಅರಿತುಕೊಳ್ಳುತ್ತಿದೆ. ಈಗ ಈ ದೇಶದಲ್ಲಿ ಕೇವಲ ಬದುಕಿ ಇರುವುದರಲ್ಲಿ ಜನ ತೃಪ್ತಿಪಡೆಯುತ್ತಿಲ್ಲ. ಹಳೆಯ ಸಮತೋಲನ ತಪ್ಪಿಹೋಗಿ ಈಗ ಎಲ್ಲ ಕಡೆಗೆ ಅವ್ಯವಸ್ಥೆ ಇದೆ. ಆದರೆ ಈ ಅವ್ಯವಸ್ಥೆಯೊಳಗಿನಿಂದ ಹಿಂದೂ ವ್ಯವಸ್ಥೆಯ ಮುರಿದು ಬೀಳುವಿಕೆಯಿಂದ ಮತ್ತು ನಿರಾಕರಣೆಯ ಚೈತನ್ಯದಿಂದ ಭಾರತ ಹೊಸ ದೃಷ್ಟಿ ಹಾಗೂ ಹೊಸ ಭಾವನೆಗಳನ್ನು ದೊರಕಿಸಲು ಪ್ರಯತ್ನಿಸುತ್ತಿದೆ . (WC : 44-45). ಈ ದೃಷ್ಟಿಯಿಂದ ವಿಜಯ ತೆಂಡೂಲಕರರ ಸಖಾರಾಮ ಬೈಂಡರ್‌ದ ನಾಯಕನ ಬಂಡಾಯ, ಶಿವಸೇನೆಯ ಸೇವಾ ಪ್ರವೃತ್ತಿಗಳು ನಯಪಾಲರಿಗೆ ಮಹತ್ವದ ಬೆಳೆವಣಿಗೆಗಳಾಗಿ ಕಂಡುಬರುತ್ತವೆ. ''ಎಚ್ಚರಿಕೆಯ ಗಂಟೆಯನ್ನು ಬಾರಿಸಲಾಗಿದೆ. ಸಾವಿರಾರು ಜನ ಈಗ ಎದ್ದು ನಡೆಯುತ್ತಿದ್ದಾರೆ'' ಎಂದು ಹೇಳಿ ಈ ಕ್ರಾಂತಿಯನ್ನು ಅವರು ಗುರುತಿಸುತ್ತಾರೆ.

೭. ಭಾರತದ ಬಗ್ಗೆ ಇದುವರೆಗೆ ನಯಪಾಲರು ಬರೆದ ಪುಸ್ತಕಗಳಲ್ಲಿ ಕೊನೆಯದಾದ India : A Million Mutinies Now ದಲ್ಲಿ ಈ ಬೆಳವಣಿಗೆಗಳೇ ಕೇಂದ್ರಸ್ಥಾನದಲ್ಲಿವೆ. ಇವುಗಳಲ್ಲಿ ನಯಪಾಲರಿಗೆ ಅತ್ಯಂತ ಮಹತ್ವದ್ದೆನಿಸಿದ್ದು ದಲಿತರಲ್ಲಿರುವ ಪರಿವರ್ತನೆ. ''ಅವರೀಗ ಕೇವಲ ಅಮೂರ್ತ ವಿಚಾರವಾಗಿ ಉಳಿದಿಲ್ಲ ಎಂದು ಹೇಳಿ ಅವರು ಈ ಪರಿವರ್ತನೆಯನ್ನು ಗುರುತಿಸುತ್ತಾರೆ. ನಿರಾಕರಣೆಯನ್ನು ನಿರಾಕರಿಸುವ ಮೂಲಕ ದಲಿತರು ಈ ಪರಿವರ್ತನೆಗೆ ಚಾಲನೆ ಕೊಟ್ಟಿದ್ದಾರೆ'' ಎಂದು ಅವರು ಹೇಳುತ್ತಾರೆ (MM : 116). ಪ್ರಸಿದ್ಧ ಮರಾಠಿ ಕವಿ ನಾಮದೇವ ಢಸಾಳ ಈ ಸಾಧನೆಯ ಶ್ರೇಯಸ್ಸನ್ನು ಡಾ. ಅಂಬೇಡ್ಕರರಿಗೆ ಕೊಡುತ್ತಾರೆ: ''ನಮ್ಮನ್ನು ಪಶುಗಳಂತೆ ನಡೆಯಿಸಿಕೊಳ್ಳುವ ಕಾಲವೊಂದಿತ್ತು. ಈಗ ನಾವು




ಮನುಷ್ಯರಂತೆ ಬದುಕುತ್ತಿದ್ದೇವೆ. ಇದಕ್ಕೆ ಕಾರಣರಾದವರು ಅಂಬೇಡ್ಕರರು." (MM: 119). ಸಂಪ್ರದಾಯಸ್ಥರಲ್ಲೂ ಕೂಡ ಈಗ ಮಹತ್ತರ ಬದಲಾವಣೆಗಳಾಗಿವೆ. ಜೈನರ ಪರವಾಗಿ ಮಾತನಾಡುತ್ತ ಸ್ಟಾಕ್ ಬ್ರೋಕರ್ ಯುವಕ ಪಾಪು ತಾವೀಗ ಧರ್ಮಕ್ಕಿಂತ ಹೆಚ್ಚಾಗಿ ಸಮಾಜ ಸೇವೆಯ ಬಗ್ಗೆ ಚಿಂತಿಸುತ್ತೇವೆ ಎಂದು ಹೇಳುತ್ತಾನೆ. (MM: 15). ಶಿವಸೇನೆಯ ಪ್ರಸ್ತಾಪವನ್ನು India : A Wounded Civilisation ದಲ್ಲಿಯೇ ನಯಪಾಲರು ಮಾಡಿದ್ದರು. ಅವರ ಹೊಸ ಪುಸ್ತಕದಲ್ಲಿ ಶಿವಸೇನೆಯ ಕಾರ್ಯದ ಬಗ್ಗೆ ವಿಸ್ತಾರವಾದ ಚರ್ಚೆಯಿದೆ. ಪಾಟೀಲ್, ರಾವೋಟಿ, ಘಾಟೆಯಂಥವರು ಪರಿಸ್ಥಿತಿಯನ್ನು ಎದುರಿಸಿ ಶಿವಸೇನೆಯಲ್ಲಿ ಮಹತ್ವದ ಸ್ಥಾನ ಗಳಿಸಿದುದು ನಯಪಾಲರಿಗೆ ಉತ್ತಮ ಸಾಧನೆಯಾಗಿ ಕಾಣುತ್ತದೆ. ಈ ನಾಯಕರ ಜೀವನವನ್ನು ಅವರು ಹಂತಹಂತವಾಗಿ ವಿವರಿಸುತ್ತಾರೆ. ಅಲ್ಪಸಂಖ್ಯಾತರ ಬದುಕನ್ನು ಅವರು ಒಳಹೊಕ್ಕು ನೋಡುತ್ತಾರೆ. ಅನ್ವರನಂಥವರಿಗೆ ಅವರ ಧಾರ್ಮಿಕ ನಂಬುಗೆಗಳು ಜೀವನದ ಸೂತ್ರವಾಗಿರುವುದನ್ನು ಅವರು ಸೂಕ್ಷ್ಮವಾಗಿ ಗಮನಿಸುತ್ತಾರೆ. ರಶೀದನಂಥ ಕೆಲವರು ಗತವೈಭವದ ವಿಷಾದದಲ್ಲಿ ಮುಳುಗಿದ್ದರೂ ಆಮೀರ್, ಪರ್ವಿನ್‌ರಂಥ ಬೇರೆಯವರು ಭಾರತೀಯ ಪ್ರಜಾಪ್ರಭುತ್ವದಲ್ಲಿ ಯಶಸ್ವಿಯಾಗಿ ಪಾಲುಗೊಂಡಿರುವುದನ್ನೂ ಅವರು ದಾಖಲಿಸುತ್ತಾರೆ. ಇವರೆಲ್ಲರ ಬದುಕಿನಲ್ಲಿಯೂ ಮೇಲು ನೋಟಕ್ಕೆ ದೊರಕದ ರಹಸ್ಯಗಳಿವೆ ಎನ್ನುವುದು ಅವರ ಗಮನಕ್ಕೆ ಬರುತ್ತದೆ (MM : 22). ಡಾ. ಶ್ರೀನಿವಾಸನ್, ಶ್ರೀ ಸುಬ್ರಮಣ್ಯನ್, ಪ್ರವಸ್ ಮೊದಲಾದ ವಿಜ್ಞಾನಿಗಳು ಸಾಂಪ್ರದಾಯಿಕ ಮನೆತನಗಳಲ್ಲಿ ಹುಟ್ಟಿ ಬೆಳೆದರೂ ಅವರು ವಿಜ್ಞಾನ, ತಂತ್ರಜ್ಞಾನಗಳಲ್ಲಿ ಸಾಧಿಸಿದ ಮೇಲ್ಮೆಯ ರಹಸ್ಯವನ್ನು ಶೋಧಿಸುತ್ತಾ ನಯಪಾಲ್ ಇದು ಹಳೆಯ ವಿದ್ಯೆ ಹೊಸವಿದ್ಯೆಯಾಗಿ ಪರಿವರ್ತಿತವಾದುದರ ಉದಾಹರಣೆಯೆಂದು ಕಂಡುಹಿಡಿಯುತ್ತಾರೆ. ತಮಿಳುನಾಡಿನ ದ್ರಾವಿಡ ಚಳುವಳಿಯೂ ಅವರನ್ನು ಬಲವಾಗಿ ಆಕರ್ಷಿಸುತ್ತದೆ. ಪೆರಿಯಾರ್‌ರ ವೈದಿಕ ಸಂಸ್ಕೃತಿಯ ನಿರಾಕರಣೆ, ಅವರ Self Respect ಚಳುವಳಿ ಅವರನ್ನು ಬಲವಾಗಿ ಪ್ರಭಾವಿಸುತ್ತವೆ. ಶಿಖ್ ಸಮುದಾಯದ ಸಮಸ್ಯೆಗಳ ವಿವರವಾದ ಚರ್ಚೆಯು ಈ ಪುಸ್ತಕದಲ್ಲಿದೆ. ದೇಶದ ವಿಭಜನೆಯ ದುರಂತಕ್ಕೆ ಸಿಕ್ಕು ಘಾಸಿಯಾದರೂ ಶಿಖ್‌ರು ಮತ್ತೆ ಚೇತರಿಸಿಕೊಂಡು ತಮ್ಮ ಕ್ರಿಯಾಶಕ್ತಿಯ ಮೂಲಕ ಭಾರತದ ಅಭಿವೃದ್ಧಿಯಲ್ಲಿ ಪಾಲುಗೊಳ್ಳುತ್ತಿರುವುದು ನಯಪಾಲರ ಮೆಚ್ಚುಗೆ ಗಳಿಸುತ್ತದೆ. ಹೀಗೆಂದಾಗ, ಈ ಎಲ್ಲ ಹೊಸ ಚಳುವಳಿಗಳಲ್ಲಿರುವ ಅತಿರೇಕದ ಅಂಶಗಳನ್ನು ಅವರು ಗಮನಿಸುವುದಿಲ್ಲವೆಂದೇನೂ ತಿಳಿಯಬಾರದು. ಆದರೆ ಈ ಅತಿರೇಕಗಳನ್ನೊಳಗೊಂಡೂ ಅವು ಪ್ರಗತಿಯ ಚಿನ್ಹೆಗಳಾಗಿವೆ ಎಂದು ಅವರಿಗೆ ಸೂಚಿಸುವುದಿದೆ: ''ಭಾರತಕ್ಕೆ ಬಂದ ಚೈತನ್ಯದ ಬಿಡುಗಡೆ ಕೇವಲ ಬಿಡುಗಡೆಯಾಗಿಲ್ಲ. ಅದು ಹಂತ ಹಂತವಾಗಿ ಹಬ್ಬಿದ ಯಾತನೆ ಮತ್ತು ಕ್ರೌರ್ಯಗಳನ್ನು ಅಲುಗಾಡಿಸುವ ಶಕ್ತಿಯಾಗಿಯೂ ಬಂದಿದೆ. ಅದು ಈಗ ಕ್ರೋಧ ಹಾಗೂ ಬಂಡಾಯದ ರೂಪ ತಳೆದಿದೆ. ಭಾರತ ಈಗ ಸಹಸ್ರಾರು ಚಿಕ್ಕ ಬಂಡಾಯಗಳ ದೇಶವಾಗಿದೆ.'' (MM: 517).

''ಅಪ್ರಿಯವಾದ ಸತ್ಯಗಳನ್ನು ಹೇಳುವವರೂ, ಕೇಳುವವರೂ ದುರ್ಲಭರಾಗಿರುತ್ತಾರೆ'' ಎಂಬ ಹಳೆಯ ಹೇಳಿಕೆಯೊಂದಿದೆ. ಈ ಮಾತು ನಯಪಾಲರಿಗೆ ಅನ್ವಯಿಸಿದಂತೆ ಅವರ ಭಾರತೀಯ ಓದುಗರಿಗೂ ಅನ್ವಯಿಸುತ್ತದೆ. An Area of Darkness ಪ್ರಕಟವಾದ ಹೊಸತರಲ್ಲಿ ಪ್ರಸಿದ್ಧ ಕವಿ ನಿಸ್ಸಿಮ್ ಇಜಿಕೇಲ್ 'Naipaul's India and Mine' ಎಂಬ ಲೇಖನವೊಂದನ್ನು ಬರೆದರು. ಈ ಲೇಖನದಲ್ಲಿ ಅವರು ಪ್ರಶ್ನಿಸಿರುವುದು ಭಾರತದ ಬಗ್ಗೆ ನಯಪಾಲ್ ಕೊಡುವ ನಿರ್ಣಯಗಳನ್ನಲ್ಲ, ಅವರ ವಿಧಾನಗಳನ್ನು. ''ನಯಪಾಲ್‌ರೊಡನೆ ನನ್ನ ಜಗಳವಿರುವುದರ ಕಾರಣವೆಂದರೆ ಅವರು ಬಹಳಷ್ಟು ಸಲ ನಿರ್ಲಿಪ್ತತೆಯಿಂದ ಹಾಗೂ ನಿಷ್ಕಾಳಜಿಯಿಂದ ಬರೆದಿರುವುದು.'' (Jussawalla : *New Writing in India*, 74). ನಯಪಾಲರ ಮೂರೂ ಪುಸ್ತಕಗಳನ್ನು ಓದಿದ ನಂತರ ಇಜಿಕೇಲ್‌ರ ಈ ಅಭಿಪ್ರಾಯವನ್ನು ಒಪ್ಪುವುದು ಕಠಿಣ. ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಪುಸ್ತಕಗಳಲ್ಲಿ ನಯಪಾಲರು ಭಾರತದ ಬಗ್ಗೆ ಬರೆಯುವುದರ ಜೊತೆಗೆಯೇ ತಮ್ಮ ಬಗ್ಗೆ, ಟ್ರಿನಿಡಾಡದ ಪರಿಸ್ಥಿತಿಯ ಬಗೆಗೂ ಬರೆದಿದ್ದಾರೆನ್ನುವುದು ಹೊಳೆಯದಿರದು. ಉದಾಹರಣೆಗೆ, ಭಾರತೀಯ ಮೂಲದ ಮಾಯಾವಾದ ತಮ್ಮನ್ನು ಎಷ್ಟರಮಟ್ಟಿಗೆ ಪ್ರಭಾವಿಸಿದೆ ಎನ್ನುವುದರ ಬಗ್ಗೆ ಅವರು ಹೇಳುವುದನ್ನು ಗಮನಿಸಬೇಕು. ಇದೂ ಅಲ್ಲದೆ, ಭಾರತದ ಬಗ್ಗೆ ಬರೆದಷ್ಟೇ ನಿಷ್ಠುರವಾಗಿ ಅವರು ಉಳಿದ ಸಂಸ್ಕೃತಿಗಳ ಬಗೆಗೂ – ಉದಾ: ಇಸ್ಲಾಮ್ ರಾಷ್ಟ್ರಗಳ ಬಗ್ಗೆ – ಬರೆದಿದ್ದಾರೆ. ಭಾರತವನ್ನು ಪಾಶ್ಚಾತ್ಯ ಮೌಲ್ಯಗಳ ಪರಿಪ್ರೇಕ್ಷದಲ್ಲಿ – ಎಂದರೆ order, achievement, human association ಇಂಥ ಮೌಲ್ಯಗಳ ಪರಿಪ್ರೇಕ್ಷದಲ್ಲಿ – ಮಾತ್ರ ನೋಡಿದುದರ ಪರಿಣಾಮವಾಗಿ ಅವರ ವಿಶ್ಲೇಷಣೆ ಅಪೂರ್ಣವೆನಿಸಬಹುದು, ಕೆಲವೊಂದು ನಿರ್ಣಯಗಳು ಅವಸರದವೆಂದೆನಿಸಬಹುದು. ಆದರೆ ಅವರ ಪುಸ್ತಕಗಳನ್ನು ನಿರ್ಲಕ್ಷಿಸುವುದರಿಂದ ಹಾನಿಯಾಗುವುದು ಅವರಿಗಲ್ಲ, ಭಾರತೀಯರಿಗೆ ಎನ್ನುವ ಸತ್ಯವನ್ನು ಅಲ್ಲಗಳೆಯಲಾಗುವುದಿಲ್ಲ.

ಪ್ರೊ|| ಜಿ. ಎಸ್. ಆಮೂರ
೬೪೧, ೭ನೇ ಮೇನ್, ೧೪ನೇ ಕ್ರಾಸ್, ೩ನೇ ಫೇಸ್
ಜೆ. ಪಿ. ನಗರ, ಬೆಂಗಳೂರು-೫೬೦೦೭೮.

# ಆದರ್ಶ ಸಮಾಜ ನಿರ್ಮಾಣದ ಹಂಬಲದಲ್ಲಿ

# ಮಾಲಾ



*ಮಲಯಶ್ರೀ ಹಶ್ಮಿ ಅವರೊಂದಿಗೆ ಸಂದರ್ಶಕಿ ಡಾ|| ಎನ್. ಗಾಯತ್ರಿ*

**ನ**ವೆಂಬರ್ ತಿಂಗಳ ಕೊನೆಯ ವಾರ. ಮೈಸೂರಿನಲ್ಲಿ 'ಅಕ್ಕ' ನಾಟಕೋತ್ಸವ. ದೆಹಲಿಯ ಜನನಾಟ್ಯ ಮಂಚ್ ತಂಡದಿಂದ 'ವೋ ಬೋಲ್ ಉಠೀ' ಬೀದಿ ನಾಟಕ ಪ್ರದರ್ಶನ ನಡೆದಿತ್ತು. ಮೂರು ಕಥಾಗುಚ್ಛವನ್ನೊಳಗೊಂಡ ಈ ನಾಟಕದಲ್ಲಿ ಮೊದಲು ಮನೆಗೆಲಸದ ಹುಡುಗಿಯ ನೋವಿನ ಕತೆ, ನಂತರ ವಿವಾಹದ ವ್ಯೂಹದಲ್ಲಿ ಸಿಲುಕಿದ ಮಗಳ ಕತೆ, ನಂತರ ಕಾರ್ಮಿಕ ಸಂಘಟನೆಯಲ್ಲಿ ಮೂಲಭೂತ ಹಕ್ಕಿಗಾಗಿ ಹೋರಾಡುವ ಮಹಿಳೆಯ ಕತೆ ಬಿಚ್ಚಿಕೊಂಡಿತ್ತು. ವಿವಿಧ ಹಂತಗಳಲ್ಲಿ, ವಿವಿಧ ಸ್ಥಳಗಳಲ್ಲಿ, ವಿವಿಧ ವಯೋಮಿತಿಗಳಲ್ಲಿ, ಹೆಣ್ಣು ದಮನಕ್ಕೆ ಒಳಗಾಗುವುದನ್ನು ಬಿತ್ತರಿಸುವ ನಾಟಕವಿದು. ಆದರೆ ಇಲ್ಲಿ ಹೆಣ್ಣು ಆ ನೋವಿನಲ್ಲೂ ಅಸಹಾಯಕಳಾಗದೆ ಪ್ರತಿಭಟನೆಯ ಧ್ವನಿಯಾಗುತ್ತಾಳೆ, ಇತರರನ್ನೂ ಧ್ವನಿಯಾಗುವಂತೆ ಪ್ರೇರೇಪಿಸುತ್ತಾಳೆ. ಈ ನಾಟಕದ ಮುಖ್ಯ ನಟಿಯಾಗಿದ್ದ ಮಲಯಶ್ರೀ ಹಶ್ಮಿ ನಾಟಕದ ಧ್ವನಿಗೆ ಪ್ರೇಕ್ಷಕರೂ ಧ್ವನಿ ಕೂಡಿಸುವಂತೆ, ಅವರೂ ನಾಟಕದಲ್ಲಿ ಭಾಗಿಯಾಗುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾರೆ.

ಈ ನಾಟಕದ ಗುಂಗಿನಲ್ಲೇ ಬೆಂಗಳೂರಿಗೆ ಬಂದಾಗ ಮಲಯಶ್ರೀಯವರೊಡನೆ ಮಾತನಾಡಬೇಕೆನಿಸಿತ್ತು. ಬೆಂಗಳೂರಿನಲ್ಲಿ ಅವರ ಗೆಳತಿಯ ಮನೆಯಲ್ಲಿ ತಂಗಿದ್ದ ಮಲಯಶ್ರೀಯವರನ್ನು ವಿಶೇಷವಾಗಿ 'ಹೊಸತು'ವಿಗೆ ಸಂದರ್ಶಿಸಲೆಂದು ಹೋದೆ. ರಾಜಕೀಯ ಪ್ರಜ್ಞೆಯಿಂದ ಸಮಾಜವನ್ನು ಚಿಕಿತ್ಸಕ ದೃಷ್ಟಿಯಿಂದ ಬಿಂಬಿಸುವ ಜನನಾಟ್ಯ ಮಂಚದ ಕಲಾವಿದೆಯಾದ ಮಲಯಶ್ರೀಯವರ ಬದುಕಿನ ವಿವರಗಳನ್ನು ತಿಳಿಯುವ ಕುತೂಹಲದಿಂದ ಪ್ರಶ್ನಿಸಿದೆ. ತಾನು ರಂಗದ ಮೇಲೆ ಅಭಿನಯಿಸುವ ಹೆಣ್ಣಿನ ಸಂಕಷ್ಟಗಳನ್ನು ತನ್ನ ಖಾಸಗಿ ಬದುಕಿನಲ್ಲಿ ಹೆಚ್ಚು ಅನುಭವಿಸಿಯೇ ಇಲ್ಲ. ತನ್ನದೇನೂ ಹೋರಾಟದ ಬದುಕಲ್ಲ. ಆ ವಿಷಯದಲ್ಲಿ ತಾನು ಅದೃಷ್ಟವಂತೆ ಎಂದುಕೊಳ್ಳುವ ಮಲಯಶ್ರೀ ತನ್ನ ಅದೃಷ್ಟಕ್ಕೆ ಕಾರಣರಾದ ತಂದೆ, ತಾಯಿಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡರು.

''ನನ್ನ ತಂದೆ ಜೆ. ಸಿ. ರಾಯ್ ಮೂಲತಃ ಬಂಗಾಳಿಯಾದರೂ ಎಂದೂ ಬಂಗಾಲದಲ್ಲಿದ್ದಿಲ್ಲ. ಲಾಹೋರ್‌ನಿಂದ ನಿರಾಶ್ರಿತರಾಗಿ ದೆಹಲಿಗೆ ಬಂದವರು. ರಿಸರ್ವ್ ಬ್ಯಾಂಕಿನಲ್ಲಿ ಉದ್ಯೋಗಿಯಾಗಿದ್ದರು. ಅಲ್ಲೂ ಕಾರ್ಮಿಕ ಸಂಘಟನೆಯಲ್ಲಿ ಸಕ್ರಿಯ ಭಾಗವಹಿಸುವಿಕೆ. ಕಮ್ಯುನಿಸ್ಟ್ ಪಕ್ಷದ ಸದಸ್ಯರೂ ಆಗಿದ್ದರು. ಪ್ರಗತಿಪರ ಮನೋಭಾವವುಳ್ಳ ನನ್ನಪ್ಪ ಕಾರ್ಯಕರ್ತರಾಗಿ ತುಂಬಾ ಜನಾನುರಾಗಿಯಾಗಿದ್ದರು. ಚಿಕ್ಕಂದಿನಿಂದ ನಾನು ಎಲ್ಲರಿಗೂ 'ದಾದಾ'ರ ಮಗಳೆಂದೇ ಪರಿಚಿತಳು. ನನ್ನ ತಾಯಿ ಅಪರ್ಣಾ ರಾಯ್ ತಂದೆಯಂತೆಯೇ ಚಟುವಟಿಕೆಯ ಬುಗ್ಗೆಯಾಗಿದ್ದರು. ಇನ್‌ಕಂಟ್ಯಾಕ್ಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಅಮ್ಮ ಅಂದಿನ 'ಇಪ್ಟಾ'ದಲ್ಲಿ ಕೆಲಸ ಮಾಡುತ್ತಿದ್ದರು. ಇಂತಹ ಬಿಡುವಿಲ್ಲದ ಅಮ್ಮನೂ ನನಗಾಗಿ ಸಾಕಷ್ಟು ಸಮಯ ಕೊಡುತ್ತಿದ್ದರು. ಚಿಕ್ಕಂದಿನಲ್ಲಿ ಅಮ್ಮನೊಡನೆ ಇಪ್ಟಾ ಕಛೇರಿಗೆ ಹೋಗುತ್ತಿದ್ದೆ. ನಾಟಕದ ರಿಹರ್ಸಲ್ ವೀಕ್ಷಿಸಿ ಆನಂದಪಡುತ್ತಿದ್ದೆ. ಹೀಗೆ ಅಮ್ಮನ ಆಫೀಸಿಗೆ ಹೋಗುವುದೊಂದು ಬಿಟ್ಟು ಅವಳ ಎಲ್ಲಾ ಕೆಲಸ, ಕಾರ್ಯಗಳ ನಡುವೆ ನಾನು ಜೊತೆಗಿರುತ್ತಿದ್ದೆ. ನಾಸ್ತಿಕಳಾದ ಅಮ್ಮ ಎಂದೂ ಅವಳ ವಿಚಾರಗಳನ್ನು ನನ್ನ ಮೇಲೆ ಹೇರಿದ್ದಿಲ್ಲ. ಪುಸ್ತಕ ಹುಳುವಾಗಿದ್ದ ಅವಳು ಆ ರೋಗವನ್ನು ನನಗೂ ಹತ್ತಿಸಿದಳು. ಎಲ್ಲಾ ಬಗೆಯ ಪುಸ್ತಕಗಳನ್ನೂ ಓದುತ್ತಿದ್ದೆ. ಚಿಕ್ಕ ವಯಸ್ಸಿಗೇ ಸಾಕಷ್ಟು ಪುಸ್ತಕಗಳನ್ನು ಓದುವ ಅವಕಾಶ ಸಿಕ್ಕಿತು. ಕಾಲೇಜಿಗೆ ಹೋದರೂ ಕೊನೆಯ ವರ್ಷ ಪರೀಕ್ಷೆ ಬರೆಯದ್ದರಿಂದ ಪದವಿ ಸಿಕ್ಕಲಿಲ್ಲ. ಆದರೆ ಅಪ್ಪ, ಅಮ್ಮ ಏನೂ ಅನ್ನಲಿಲ್ಲ. ಆದರೆ ಈಗ ಅನ್ನಿಸುತ್ತೆ ನನ್ನಪ್ಪ, ಅಮ್ಮ ಎಂತಹ ಮೇರು ವ್ಯಕ್ತಿಗಳು ಅಂತ. ನನ್ನ ಬದುಕಿನ ನಿರ್ಧಾರದ ಬಗ್ಗೆ ಅವರಿಗೆ ಗೌರವವಿತ್ತು. ನನ್ನ ಸಾಮರ್ಥ್ಯದ ಬಗ್ಗೆ ಅವರಿಗೆ ವಿಶ್ವಾಸವಿತ್ತು.''

ಅಪರೂಪದ ತಂದೆ-ತಾಯಿಗಳ ಮಗಳಾಗಿ ಮಲಯಶ್ರೀ, ಎಲ್ಲರ ಬಾಯಲ್ಲಿ ಮಾಲಾ ಎಂದೆನಿಸಿಕೊಂಡರು. ವಿದ್ಯಾರ್ಥಿ ದೆಸೆಯಲ್ಲೇ ವಿದ್ಯಾರ್ಥಿ ಫೆಡರೇಷನ್‌ನ ನಾಯಕಿಯಾಗಿ ಹರಿತವಾದ ರಾಜಕೀಯ ಪ್ರಜ್ಞೆ ಮೆರೆದವರು; ನಂತರ ಇಪ್ಟಾದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಚಿಕ್ಕ ವಯಸ್ಸಿನಲ್ಲೇ ಸ್ವತಂತ್ರ ವ್ಯಕ್ತಿತ್ವ

■ **ಡಾ|| ಎನ್. ಗಾಯತ್ರಿ**

ಬೆಳೆಸಿಕೊಂಡವರು. ಹೀಗಾಗಿ ಕಾಲೇಜು ಮುಗಿದ ನಂತರ ದೂರದ ಕರ್ನಾಟಕದ ಕೋಲಾರ ಜಿಲ್ಲೆಯಲ್ಲಿ ಡೇವಿಡ್ ಹಾರ್ಸ್‌ಬರೋ ನಡೆಸುತ್ತಿದ್ದ 'ನೀಲ್ ಬಾಗ್ ಸ್ಕೂಲ್'ನಲ್ಲಿ ಶಿಕ್ಷಕ ತರಬೇತಿ ಪಡೆಯಲು ಬಂದರು. ಹಳ್ಳಿಯ ಮಕ್ಕಳಿಗೆ ಇಲ್ಲಿ ನೀಡುತ್ತಿದ್ದ ಅನೌಪಚಾರಿಕ ಶಿಕ್ಷಣದ ರೀತಿಯನ್ನು ಎರಡು ವರ್ಷ ಕಲಿತು ವಾಪಸ್ಸು ದೆಹಲಿಗೆ ಹೋದರೂ ಅಲ್ಲಿ ಮತ್ತೆ ಬೇರೊಂದು ಶಿಕ್ಷಣ ತರಬೇತಿಯನ್ನು ಪಡೆಯಲೇಬೇಕಾಯಿತು. ಈ ಎಲ್ಲಾ ನಿರ್ಧಾರಗಳಿಗೆ ತಂದೆ-ತಾಯಿಗಳ ಸಂಪೂರ್ಣ ಬೆಂಬಲ.

ಬಾಳ ಸಂಗಾತಿಯನ್ನು ಆರಿಸಿಕೊಳ್ಳುವಾಗಲೂ ಮಾಲಾ ಸಂಪೂರ್ಣ ಸ್ವತಂತ್ರಳು. ಇಪ್ಟಾದಲ್ಲಿದ್ದು ಜನನಾಟ್ಯ ಮಂಚ್‌ನ್ನು ೧೯೭೩ರಲ್ಲಿ ಆರಂಭಿಸಿದ ಸಫ್ದರ್ ಹಶ್ಮಿಯೊಂದಿಗೆ ಕೆಲಸ ಮಾಡಿದ್ದರು. ಮಾಲಾಗೆ ಸಂಗಾತಿಯಾದ ಸಫ್ದರ್ ಮಾಲಾಳ ತಂದೆ-ತಾಯಿಗಳಿಗೂ ಕಣ್ಮಣಿಯಾದರು. ೧೯೭೯ರಲ್ಲಿ ಸಫ್ದರ್‌ನನ್ನು ಮದುವೆಯಾದ ಮಾಲಾ ತಂದೆ-ತಾಯಿಗಳೊಂದಿಗೆ ವಾಸಿಸುತ್ತಿದ್ದು ಸಂಪೂರ್ಣವಾಗಿ ರಂಗ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರಿಬ್ಬರೂ ಒಟ್ಟಾಗಿ ಕಂಡ ಜನನಾಟ್ಯ ಮಂಚ್ (ಜನಮ್)ನ ಹಲವಾರು ಭವಿಷ್ಯದ ಕನಸುಗಳು ನನಸಾಗುವ ಮುಂಚೆಯೇ ೧೯೮೯ರಲ್ಲಿ ಸಫ್ದರ್ ಹಶ್ಮಿಗೆ ರಂಗಭೂಮಿಯ ವೇದಿಕೆಯೇ ಸಾವಿನ ವೇದಿಕೆಯೂ ಆದದ್ದೊಂದು ದುರಂತ.

೧೯೮೯ರಲ್ಲಿ 'ಹಲ್ಲಾ ಬೋಲ್' ನಾಟಕವನ್ನು ಜನನಾಟ್ಯ ಮಂಚ್ ಅಭಿನಯಿಸುತ್ತಿದ್ದಾಗ ಕಾಂಗ್ರೆಸ್ ಬೆಂಬಲಿತ ಗೂಂಡಾಗಳಿಂದ ನಾಟಕದ ನಟರ ಮೇಲೆ ಹಲ್ಲೆಯಾಯಿತು. ಈ ಹಲ್ಲೆಯಲ್ಲಿ ಜನಮ್‌ನ ಸಂಚಾಲಕ ಸಫ್ದರ್ ಹಶ್ಮಿ ಹಲ್ಲೆಗೊಳಗಾದದ್ದು, ನಂತರ ಸಾವನ್ನಪ್ಪಿದ್ದು

ಈಗ ಚರಿತ್ರೆಯ ವಿಷಯ. ಈ ಪ್ರಕರಣದ ಬಗ್ಗೆ ಮಲಯಶ್ರೀಯವರನ್ನು ಪ್ರಶ್ನಿಸಿದಾಗ :

**ಮಾಲಾ** : ೮೮ರ ಅಕ್ಟೋಬರ್‌ನಲ್ಲಿ 'ಚಕ್ಕಾ ಜಾಮ್' ಎನ್ನುವ ನಾಟಕವನ್ನು ಆಡಿದ್ದೆವು. ಅದು ಕಾರ್ಮಿಕರ ಮುಷ್ಕರವನ್ನು ಕುರಿತಾಗಿತ್ತು. ಅದೇ ನವೆಂಬರ್‌ನಲ್ಲಿ ಸಿಐಟಿಯು ನೇತೃತ್ವದಲ್ಲಿ ಏಳು ದಿನಗಳ ಮುಷ್ಕರ ನಡೆದಿತ್ತು. ಮುಷ್ಕರ ಯಶಸ್ವಿಯಾಗಿತ್ತು. ಮುಷ್ಕರದ ನಂತರ 'ಚಕ್ಕಾ ಜಾಮ್' ನಾಟಕವನ್ನೇ ಸ್ವಲ್ಪ ಬದಲಾವಣೆ ಮಾಡಿ 'ಹಲ್ಲಾ ಬೋಲ್' ಎಂದು ಹೆಸರಿಟ್ಟು ಅಭಿನಯಿಸುತ್ತಿದ್ದೆವು. ಅದು ೧೯೮೯ರ ಜನವರಿ ಮೊದಲ ದಿನ. ಘಜಿಯಾಬಾದ್‌ನಲ್ಲಿ ನಾಟಕ ನಡೆಯುತ್ತಿತ್ತು. ನಾಟಕದ ಮಧ್ಯೆ ಕಾಂಗ್ರೆಸ್ ಬೆಂಬಲಿತ ಗೂಂಡಾಗಳು ನುಗ್ಗಿದರು. ಅಲ್ಲಿದ್ದವರನ್ನೆಲ್ಲಾ ಹೊಡೆಯುತ್ತಾ ನಾಟಕದ ಪ್ರದರ್ಶನಕ್ಕೆ ಅಡ್ಡಿ ಮಾಡಿದರು. ಚಾಕು, ಚೂರಿ, ದೊಣ್ಣೆ, ಲಾಠಿಗಳಿಂದ ಸಿದ್ಧರಾಗಿ ಬಂದಿದ್ದರು. ಕಾರ್ಮಿಕ ನಾಯಕರಿಗೂ ಚೆನ್ನಾಗಿ ಏಟು ಬಿತ್ತು. ತಲೆ ಒಡೆಯಿತು. ಕಾಲು ಮುರಿಯಿತು. ರಾಮ್ ಬಹದ್ದೂರ್ ಎಂಬೊಬ್ಬ ಕಾರ್ಮಿಕ ಹೊಡೆತದಿಂದಾಗಿ ಸತ್ತ. ಮತ್ತೊಬ್ಬನಿಗೆ



ಇಂದಿಗೂ ತಲೆಯಲ್ಲಿ ಗಂಭೀರವಾದ ಗಾಯಗಳಾಗಿವೆ. ಸಫ್ದರ್‌ಗೆ ಲಾಠಿಯಿಂದ ತಲೆಗೆ ಚೆನ್ನಾಗಿ ಹೊಡೆದಿದ್ದರು. ಆಸ್ಪತ್ರೆಯಲ್ಲಿ ಜನವರಿ ೨ರಂದು ಅವರು ಕೊನೆಯುಸಿರೆಳೆದರು. ೩ರಂದು ಅವರ ಅಂತ್ಯಸಂಸ್ಕಾರವಾಯಿತು. ೪ರಂದು ನಾವು ಮತ್ತೆ ಅದೇ ಜಾಗಕ್ಕೆ ಬಂದು ನಾಟಕವನ್ನು ಮತ್ತೆ ಆಡಿ ಪೂರ್ಣಗೊಳಿಸಿದೆವು.

**ಹೊಸತು** : ಹಾಗಾದರೆ ಈ ಹಲ್ಲೆ ಕಾರ್ಮಿಕ ಸಂಘಟನೆಯ ಕಾರಣಕ್ಕಾಗಿ ಆದದ್ದು ಎನ್ನುವಿರಾ ?

**ಮಾಲಾ** : ಹೌದು. ನಮ್ಮ ಮೇಲೆ ಹಲ್ಲೆ ಮಾಡಿದವರಿಗೆ ಜನಮ್ ಮೇಲೆ ಹಲ್ಲೆ ಮಾಡುವುದಕ್ಕಿಂತ ಮುಷ್ಕರ ಮಾಡಿದ ಕಾರ್ಮಿಕರ ಮೇಲೆ ಸಿಟ್ಟಿತ್ತು. ಆಡಳಿತಾರೂಢ ಕಾಂಗ್ರೆಸ್‌ಗೆ ಕಾರ್ಮಿಕರನ್ನು, ಅವರ ಸಂಘಟನೆಗಳನ್ನು, ಹತ್ತಿಕ್ಕುವ ಒಂದು ಕ್ರಮವಾಗಿ ಈ ಹಲ್ಲೆ ನಡೆಯಿತು. ಪ್ರತಿವರ್ಷ ಜನವರಿ ಒಂದರಂದು ನಾವು ಅದೇ ಜಾಗಕ್ಕೆ ಹೋಗಿ ಕಾರ್ಮಿಕ ಸಂಘಟನೆಗಳೊಡನೆ ಸೇರಿ ಒಂದು ಸಭೆಯನ್ನು ಮಾಡಿ ನಾಟಕ ಆಡಿ ಕಾರ್ಯಕ್ರಮವನ್ನು ನಡೆಸುತ್ತೇವೆ. ಕಾರ್ಮಿಕರೆಲ್ಲಾ ಅರ್ಧದಿನ ರಜೆ ತೆಗೆದುಕೊಂಡು ಬಂದು ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾರೆ. ಕಲಾವಿದರು ಮತ್ತು ಕಾರ್ಮಿಕರು ಒಟ್ಟಾಗಿ ಸೇರಿ ಮಾಡುವ ಈ ಕಾರ್ಯಕ್ರಮ ಹುತಾತ್ಮ ಸಫ್ದರ್‌ನ ನೆನಪಿನಲ್ಲಿ ಮಾಡಿದರೂ ಅದಕ್ಕೆ ಹೆಚ್ಚಿನ ಅರ್ಥ

*೧೯೭೮ರ ಸಮಯ. ನವೆಂಬರ್ ತಿಂಗಳಲ್ಲಿ ದೆಹಲಿಯಲ್ಲಿ ಔದ್ಯೋಗಿಕ ಮಸೂದೆಯನ್ನು ವಿರೋಧಿಸಿ ಸಮಾವೇಶವೊಂದು ನಡೆದಿತ್ತು. ಎಲ್ಲಾ ಕಾರ್ಮಿಕ ಸಂಘಟನೆಗಳನ್ನೊಳಗೊಂಡ ಅಖಿಲ ಭಾರತ ಮಟ್ಟದ ಈ ಸಮಾವೇಶದಲ್ಲಿ ೭೫೦೦ ಪ್ರತಿನಿಧಿಗಳು ಭಾಗವಹಿಸಿದ್ದರು. ನವೆಂಬರ್ ೨ರಂದು ನಡೆದ ಬೃಹತ್ ರ್‍ಯಾಲಿಯಲ್ಲಿ ಒಂದು ಲಕ್ಷ ಕಾರ್ಮಿಕರು ಭಾಗವಹಿಸಿದ್ದರು. ಈ ಸಮಾವೇಶದಲ್ಲಿ ೧೫ ನಿಮಿಷಗಳ ಒಂದು ಬೀದಿ ನಾಟಕವನ್ನು ಆಡಲಾಯಿತು. ಜನನಾಟ್ಯ ಮಂಚ್ ಅಭಿನಯಿಸಿದ ಈ ನಾಟಕದ ಹೆಸರು 'ಮೆಶೀನ್.' ಈ ನಾಟಕ ಅಲ್ಲಿದ್ದ ಪ್ರತಿಯೊಬ್ಬರ ಮನಸ್ಸನ್ನೂ ಗೆದ್ದಿತು. ನಾಟಕದ ಪರಿಣಾಮದಿಂದ ರೋಮಾಂಚನಗೊಂಡ ಪ್ರೇಕ್ಷಕರು ಕುಣಿದು ಕುಪ್ಪಳಿಸಿದರು. ನಟರನ್ನು ಎತ್ತಿ ಮೆರೆಸಿದರು. 'ಈ ಜನ ಎಲ್ಲಿದ್ದರು ? ಇದೆಂಥ ನಾಟಕ ? ನಾವು ಎರಡು ದಿನದಿಂದ ಕುಳಿತು ಚರ್ಚಿಸಿದ್ದನ್ನು ಹದಿನೈದು ನಿಮಿಷಗಳಲ್ಲಿ ಕಲಾತ್ಮಕವಾಗಿ ಹೇಳಿಬಿಟ್ಟ ಈ ಮಾಧ್ಯಮ ಎಂತಹುದು ?' ಎಂದು ನಿಬ್ಬೆರಗಾದರು. ಪ್ರೇಕ್ಷಕರಿಗಷ್ಟೇ ಅಲ್ಲ , ನಟರಿಗೂ ಇದೊಂದು ಅದ್ಭುತವಾದ ಅನುಭವವಾಗಿತ್ತು. ಅಲ್ಲಿಯವರೆಗೂ ಪ್ರೊಸೀನಿಯಂ ನಾಟಕಗಳನ್ನೇ ಮಾಡುತ್ತಿದ್ದ 'ಜನಮ್' ಕಾರ್ಮಿಕರಿಗಾಗಿ 'ಮೆಶೀನ್' ನಾಟಕ ಆಡುವುದರ ಮೂಲಕ ಬೀದಿ ನಾಟಕದ ವಿಶ್ವಕ್ಕೆ ಕಾಲಿಟ್ಟಿತು. ''ಈ ನಾಟಕದ ಅನುಭವ ಜನನಾಟ್ಯ ಮಂಚ್‌ನ ಚರಿತ್ರೆಯ ಒಂದು ಪ್ರಮುಖ ಮೈಲಿಗಲ್ಲು. ಅಷ್ಟೇ ಅಲ್ಲ , ನಟರಾದ ನಮ್ಮೆಲ್ಲರ ಬದುಕಿನ ಮಹತ್ವದ ತಿರುವೂ ಕೂಡ'' ಎಂದು ತಮ್ಮ ಅನುಭವವನ್ನು ಹಂಚಿಕೊಳ್ಳುತ್ತಾರೆ, ಮಲಯಶ್ರೀ.*

*ಇಪ್ಟಾದಲ್ಲಿ ಸಕ್ರಿಯವಾಗಿದ್ದ ಕೆಲವು ನಟರು ಸೈದ್ಧಾಂತಿಕ ಕಾರಣಕ್ಕಾಗಿ ಅದನ್ನು ಬಿಟ್ಟುಬಂದು ಕಟ್ಟಿದ್ದು ಜನನಾಟ್ಯ ಮಂಚ್. ೧೯೭೩ರಲ್ಲಿ ಆರಂಭವಾದ ಈ ನಾಟಕ ಸಂಸ್ಥೆ ದೆಹಲಿಗಷ್ಟೇ ಸೀಮಿತವಾದದ್ದು. ತುರ್ತು ಪರಿಸ್ಥಿತಿಯಲ್ಲಿ 'ಬಕ್ರಿ' ನಾಟಕವನ್ನು ಆಡಿ ಜನಮ್ ಚರಿತ್ರೆ ನಿರ್ಮಿಸಿತು. ಕಾರ್ಮಿಕ ವರ್ಗ ಮತ್ತು ಕೆಳ ಮಧ್ಯಮ ವರ್ಗದ ಪ್ರೇಕ್ಷಕರಿಗೆಂದೇ ಮೊದಲು ನಾಟಕಗಳನ್ನಾರಂಭಿಸಿದ 'ಜನಮ್' ತುರ್ತು ಪರಿಸ್ಥಿತಿ ಮುಗಿದ ನಂತರ ಕೆಲಕಾಲ ಒಂದೆರಡು ನಾಟಕಗಳನ್ನು ಮಾಡುವಷ್ಟಕ್ಕೆ ತೃಪ್ತಿಪಟ್ಟುಕೊಂಡಿತು; ಅತ್ಯಂತ ದುಬಾರಿಯಾದ ಪ್ರೊಸೀನಿಯಂ ನಾಟಕಗಳನ್ನು ಆಡುವುದನ್ನು ಬಿಟ್ಟು ಬೀದಿ ನಾಟಕಗಳನ್ನು ಆಡಲು ಪ್ರಾರಂಭಿಸಿತು. ಅದರ ಮೊದಲ ಪ್ರಯತ್ನವೇ 'ಮೆಶೀನ್.' ಮೆಶೀನ್‌ನ ಯಶಸ್ಸಿನ ನಂತರ ಮತ್ತೆ ಹಿಂತಿರುಗಿ ನೋಡಲೇ ಇಲ್ಲ. ಜನಸಾಮಾನ್ಯರ ದೈನಂದಿನ ಸಮಸ್ಯೆಗಳನ್ನೇ ಆಧರಿಸಿದ ವಸ್ತುವುಳ್ಳ ನಾಟಕಗಳೇ ಸಾಲುಸಾಲಾಗಿ ಪ್ರದರ್ಶಿಸಲ್ಪಟ್ಟವು. ಈ ಸಾಲಿನಲ್ಲಿ ಹತ್ಯಾರೆ, ಔರತ್, ರಾಜಾ ■ ಬಾಜಾ...... ಹೀಗೆ ಪ್ರದರ್ಶನ ನಡೆದಿತ್ತು. ತನ್ನದೇ ಪ್ರೇಕ್ಷಕ ವರ್ಗವನ್ನು ಸೃಷ್ಟಿಸಿಕೊಂಡು ಬೆಳೆಯುತ್ತಾ ಹೊರಟ ಜನಮ್ ನಂತರ ಕೆಲವು ಪ್ರಮುಖ ಪ್ರೊಸೀನಿಯಂ ನಾಟಕಗಳನ್ನೂ ಪ್ರದರ್ಶಿಸಿತು. ಇದರಿಂದಾಗಿ ಎಂಟು ಹತ್ತು ಸದಸ್ಯರಿದ್ದ ಜನಮ್‌ನ ಸಂಖ್ಯೆಯು ಬೆಳೆಯಿತು. 'ಮೋತಿರಾಂ ■ ಸತ್ಯಾಗ್ರಹ್', ಜಿ. ಬಿ. ದೇಶಪಾಂಡೆಯವರು ರಚಿಸಿದ 'ಸತ್ಯಶೋಧ್', ಬ್ರೆಕ್ಟ್‌ನ 'ತಾಯಿ' , 'ಏಕ್ ಔರತ್', 'ಹಿತೋಪಿಯಾ ಬೇಟಿ', 'ಹಮ್ ಯಹೀ ರಹೇಂಗೇ' – ಇವು ಜನಮ್‌ನ ಪ್ರಮುಖ ನಾಟಕಗಳು. ಇತ್ತೀಚೆಗಷ್ಟೇ ಚಿತ್ತಗಾಂಗ್ ಶಸ್ತ್ರಾಗಾರದ ಮೇಲಿನ ಆಕ್ರಮಣದ ವಸ್ತುವನ್ನಾಧರಿಸಿದ 'ಅಜಾದಿ ಮೇ ಜಸ್‌ದಕ್ ದೀ' ನಾಟಕವನ್ನು ಪ್ರದರ್ಶಿಸಲಾಯಿತು. ಈ ಎಲ್ಲ ನಾಟಕಗಳು ಹರಿತವಾದ ರಾಜಕೀಯ ಪ್ರಜ್ಞೆಯಿಂದ ಸಮಾಜವನ್ನು, ಚರಿತ್ರೆಯನ್ನು ಟೀಕಿಸುವ, ಶೋಧಿಸುವ ಪ್ರಕ್ರಿಯೆಗಳೇ ಆಗಿವೆ. ತಮ್ಮದನ್ನು 'ರಾಜಕೀಯ ರಂಗಭೂಮಿ'ಯೆಂದೇ ಕರೆದುಕೊಳ್ಳುವ ಜನಮ್ ೧೯೯೩ರಿಂದ 'ನುಕ್ಕಡ್' ಎಂಬ ತ್ರೈಮಾಸಿಕ ಪತ್ರಿಕೆಯನ್ನು ತರುತ್ತಿದೆ. ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳೆರಡರಲ್ಲೂ ಲೇಖನಗಳನ್ನೊಳಗೊಂಡ ಈ ಪತ್ರಿಕೆ ವಿಶೇಷವಾಗಿ ರಂಗಭೂಮಿಗೆ ಸಂಬಂಧಿಸಿದ್ದು. 'ಜನಮ್' ವರ್ಷಕ್ಕೆ ೨೫೦ರಿಂದ ೩೦೦ ಪ್ರದರ್ಶನಗಳನ್ನು ಕೊಡುತ್ತದೆ. ಪ್ರತಿ ಪ್ರದರ್ಶನದ ನಂತರ ಪ್ರೇಕ್ಷಕರಿಂದಲೇ ಸಂಗ್ರಹಿಸುವ ಹಣ ಜನಮ್‌ನ ಮುಖ್ಯ ಆದಾಯ. ಕಾರ್ಮಿಕರ ನಡುವೆ, ಜನಸಾಮಾನ್ಯರ ನಡುವೆ ನಾಟಕ ಮಾಡುವ ಜನಮ್‌ಗೆ ತನ್ನ ಪ್ರೇಕ್ಷಕರ ಬಗ್ಗೆ ಖಚಿತ ಅಭಿಪ್ರಾಯವಿದೆ. 'ಜನಮ್' ಜನರ ನಾಟಕರಂಗವಾಗಿದೆ. ರಾಕೇಶ್ ಸಕ್ಸೇನಾ, ಮನೀಶ್ ಮನೋಜ್, ಸಫ್ದರ್ ಹಷ್ಮಿ , ಮಲಯಶ್ರೀ – ಮುಂತಾದವರು ಇದರ ಸಂಚಾಲಕರಾಗಿ ಕಾರ್ಯ ನಿರ್ವಹಿಸಿದ್ದಾರೆ.*

ಇದೆ. ಪ್ರತಿಭಟಿಸುವ ಹಕ್ಕು, ನಮ್ಮನ್ನು ನಾವು ಸಮರ್ಥಿಸಿಕೊಳ್ಳುವ ಹಕ್ಕು ಯಾರೂ ಕಿತ್ತುಕೊಳ್ಳಲಾರರು, ಎಂಬುದನ್ನು ನಾವು ಒತ್ತಿ ಹೇಳುತ್ತೇವೆ.

**ಹೊ** : ಈ ಘಟನೆಯ ನಂತರ 'ಜನಮ್'ನಲ್ಲಿ ಬಿರುಕುಂಟಾಯಿತೇ ? ಕೆಲವರು ಸಂಸ್ಥೆಯಿಂದ ಹೊರಹೋದರೆಂದು ಪತ್ರಿಕೆಯಲ್ಲಿ ಓದಿದ್ದೆ.

**ಮಾಲಾ** : ಇದು ಸಂಘಟನೆಯ ಬಿರುಕು ಎಂದು ನಾನು ಭಾವಿಸುವುದಿಲ್ಲ. ಹಶ್ಮಿಯ ಸಾವಿನ ನಂತರ ನಮ್ಮ ಸಂಸ್ಥೆಗೆ ಒಂದು ಪೆಟ್ಟು ಬಿದ್ದದ್ದು ನಿಜ. ಹಲವಾರು ಕನಸುಗಳನ್ನು ಹೊತ್ತು ಹಗಲಿರುಳು ಅದಕ್ಕಾಗಿ ಶ್ರಮಿಸುತ್ತಿದ್ದ ಜನಮ್‌ನ ಉಸಿರಾಗಿ ಕಾರ್ಯ ನಿರ್ವಹಿಸುತ್ತಿದ್ದ ಹಶ್ಮಿಯ ಸಾವಿನಿಂದ ನಾವೆಲ್ಲ ಚೇತರಿಸಿಕೊಳ್ಳುವುದಕ್ಕೆ ಸ್ವಲ್ಪ ಕಾಲವೇ ಬೇಕಾಯಿತು. ಆ ನಂತರ ನಾನು ಜನಮ್‌ನ ಸಂಚಾಲಕಳಾದೆ. ಮೂರು ವರ್ಷಗಳ ನಂತರ ನಡೆದ ಘಟನೆಯಿದು. ಜನಮ್‌ನ ನಾಲ್ಕೈದು ಸದಸ್ಯರು ನಮಗ್ಯಾರಿಗೂ ಏನೂ ಹೇಳದೆ ಸಂಸ್ಥೆಯಿಂದ ಹೊರನಡೆದರು. ಪತ್ರಿಕೆಯ ಮೂಲಕ ಮಾತನಾಡಲು ಆರಂಭಿಸಿದರು. ಇದುವರೆಗೂ ಅವರು ಬಿಟ್ಟದ್ದು ಏಕೆಂದು ನಮಗೇ ಸ್ಪಷ್ಟವಾಗಿ ತಿಳಿದಿಲ್ಲ. ಆದರೆ ಈ ಎಲ್ಲ ಅಡೆತಡೆಗಳನ್ನು ದಾಟಿ ಜನಮ್‌ಗೆ ಬೆಳೆಯಲು ಸಾಧ್ಯವಾಗಿದೆ. ಸಂಸ್ಥೆ ಎಷ್ಟಾದರೂ ಜನರಿಗೆ ಸೇರಿದ್ದಲ್ಲವೆ ?

**ಹೊ** : ಈಗಿನ ನಿಮ್ಮ ಕಾರ್ಯಕ್ರಮಗಳೇನು ?

**ಮಾಲಾ** : ನಾವು ಜನರತ್ತಲೇ ಹೋಗಿ ಪ್ರೊಸೀನಿಯಂ ನಾಟಕಗಳನ್ನೂ ಬೀದಿ ನಾಟಕಗಳನ್ನೂ ಆಡುತ್ತಿದ್ದೇವೆ. 'ಸಫ್ದರ್ ಮಂಚ್' ಸಂಚಾರಿ ರಂಗವನ್ನಾಗಿ ಮಾಡಿಕೊಂಡು ಜನರ ನಾಟಕಗಳನ್ನಾಡುತ್ತಿದ್ದೇವೆ. ಪ್ರತಿವರ್ಷ ಒಂದು ಪ್ರೊಸೀನಿಯಂ ನಾಟಕ, ಎರಡು – ಮೂರು ಬೀದಿ ನಾಟಕಗಳನ್ನಾಡುತ್ತಿದ್ದೇವೆ. ವರ್ಷಕ್ಕೊಮ್ಮೆ ಜನವರಿ ೧ರಂದು ಘಜಿಯಾಬಾದ್‌ನಲ್ಲಿ ಸಫ್ದರ್ ಸ್ಮಾರಕ ಕಾರ್ಯಕ್ರಮ ನಡೆಸುತ್ತೇವೆ.



*"ಪೋ ಬೋಲ್ ಉಠೀ' ಬೀದಿ ನಾಟಕದ ಒಂದು ದೃಶ್ಯ*

**ಹೊ** : ನಿಮ್ಮ ಸಂಸ್ಥೆಯಲ್ಲಿರುವ ಎಲ್ಲ ನಟರೂ ರಾಜಕೀಯ ನಿಲುವುಗಳನ್ನುಳ್ಳವರಾ ?

**ಮಾಲಾ** : ನಮ್ಮದು ರಾಜಕೀಯ ರಂಗಭೂಮಿಯಾದರೂ ಪಕ್ಷದ ಸಂಘಟನೆಯಲ್ಲ. ನಾಟಕ ಕಲೆಗೆಂದೇ ಆಕರ್ಷಿತರಾದ ಸದಸ್ಯರು ನಮ್ಮಲ್ಲಿಗೆ ಬರುತ್ತಾರೆ. ಬಂದ ಮೇಲೆ ನಮ್ಮ ಕಾರ್ಯಕ್ರಮಗಳಲ್ಲಿರುವ ಸಾಮಾಜಿಕ ಬದ್ಧತೆಯಿಂದ ಆಕರ್ಷಿತರಾಗಿ ಇಲ್ಲಿ ಉಳಿಯುತ್ತಾರೆ; ಪ್ರಭಾವಿತರಾಗಿ ಬದಲಾಗುತ್ತಾರೆ. ಮತ್ತೆ ಕೆಲವರು ಸಾಕೆನಿಸಿದಾಗ ಬಿಟ್ಟು ಹೋಗಲೂಬಹುದು. ಆದರೆ ನಾವು ಕೆಲವರು ಮಾತ್ರ ಪಾರ್ಟಿ ಸದಸ್ಯರಿರಬಹುದು ಅಷ್ಟೇ. ಆದರೆ ನಾವು ಮಾಡುವ ಕೆಲಸಕ್ಕೆ ನಿರ್ದಿಷ್ಟ ರಾಜಕೀಯ ನಿಲುವಂತೂ ಇದ್ದೇ ಇರುತ್ತದೆ.

**ಹೊ** : ಮಹಿಳೆಯನ್ನು ಸಶಕ್ತಗೊಳಿಸುವಲ್ಲಿ ನಿಮ್ಮ ಸಂಸ್ಥೆಯ ಮಹಿಳಾಪರ ನಿಲುವೇನು ?

**ಮಾಲಾ** : ನಾವು ಮಹಿಳೆಯರದೇ ವಸ್ತುವನ್ನಾಗುಳ್ಳ ನಾಟಕಗಳನ್ನು ಆಡುತ್ತೇವೆ. ಅಲ್ಲದೆ ನಮ್ಮ ನಾಟಕಗಳಲ್ಲಿ ಮಹಿಳಾಪರ ಅಂಶಗಳೂ ಹೆಚ್ಚಾಗಿ ಇರುವಂತೆ ನೋಡಿಕೊಳ್ಳುತ್ತೇವೆ. ಹಾಗೆಂದರೆ ಸಮಾಜವನ್ನು ನೋಡುವ ದೃಷ್ಟಿಕೋನಕ್ಕೆ ಲಿಂಗಸೂಕ್ಷ್ಮತೆಯನ್ನು ನಾವು ಅನ್ವಯಿಸುತ್ತೇವೆ. ಆದರೆ ಇಲ್ಲಿ ಮುಖ್ಯ ಪ್ರಶ್ನೆ : ನಮ್ಮ ನಾಟಕವನ್ನು ನೋಡುವುದರಿಂದ, ಇಲ್ಲವೇ ಮಾಡುವುದರಿಂದ ಸಮಾಜ ಬದಲಾಯಿಸಬಹುದು ಎಂಬ ಭ್ರಮೆ ನಮಗಿಲ್ಲ. ಹೊಸ ಮೌಲ್ಯಗಳನ್ನು ಬಿತ್ತುವ ಕೆಲಸವಷ್ಟೇ ನಾವು ಮಾಡುವುದು.

**ಹೊ** : ನಿಮ್ಮದು 'ರಾಜಕೀಯ ರಂಗಭೂಮಿ' ಎಂದಿರಿ. ಹಾಗಾದರೆ ನಿಮ್ಮಂತಹ ಸಂಸ್ಥೆಗೆ ಸಾಮಾಜಿಕ ಬದಲಾವಣೆಯಲ್ಲಿನ ಪಾತ್ರ ಎಂಥದು ?

**ಮಾಲಾ** : ಹೌದು, ನಮಗೊಂದು ರಾಜಕೀಯ ನಿಲುವಿದೆ. ಈಗ ಜಾಗತೀಕರಣದ ಹಿನ್ನೆಲೆಯಲ್ಲಿ ಬಹಳಷ್ಟು ಬದಲಾವಣೆಗಳು ಕ್ಷಿಪ್ರವಾಗಿ ಆಗುತ್ತಿವೆ. ಮಹಿಳೆಗೂ ಹಲವಾರು ಅವಕಾಶಗಳು ಸಾರ್ವಜನಿಕರಂಗದಲ್ಲಿ ದೊರಕುತ್ತಿವೆ, ನಿಜ. ಆದರೆ ಹಿಂದಿಗಿಂತ ಇಂದು ಅವಳು ಹೆಚ್ಚು ಹೆಚ್ಚು ಮಾರುಕಟ್ಟೆಯ ವಸ್ತುವಾಗುತ್ತಿದ್ದಾಳೆ. ಮುಖ್ಯವಾಗಿ ನಮ್ಮನ್ನೆಲ್ಲಾ ಮಾರುಕಟ್ಟೆ ಸಂಸ್ಕೃತಿ ಆವರಿಸುತ್ತಿದೆ. ಇದೇ ನಮ್ಮ ಸಾಂಸ್ಕೃತಿಕ ರಂಗವನ್ನು ಆಕ್ರಮಿಸುತ್ತಿದೆ. ಇಂತಹ ಸಂದರ್ಭದಲ್ಲಿ ಜನನಾಟ್ಯ ಮಂಚ್‌ದ ಜವಾಬ್ದಾರಿ ಜಾಸ್ತಿ. ಈ ಸಮಾಜದ ಕೊಳಕು ಮೌಲ್ಯಗಳನ್ನು ನಾಟಕ ಎತ್ತಿ ತೋರಿಸುತ್ತೆ, ಅಷ್ಟೆ. ಆದರೆ ಹೋರಾಟಗಳು ಬದುಕಿನಲ್ಲಿ, ಸಮಾಜದಲ್ಲಿ ನಿರಂತರವಾಗಿ ನಡೆಯುತ್ತಲೇ ಇರಬೇಕು. ಆಗಷ್ಟೇ ಹೊಸ ಸಮಾಜ, ಉತ್ತಮ ಸಮಾಜ ಬರಬಲ್ಲುದು. ಇಂತಹ ಸಮಾಜ ಬರುತ್ತದೆಂದು ನಾವು ಕಾದು ಕುಳಿತುಕೊಳ್ಳುವುದಕ್ಕಾಗುವುದಿಲ್ಲ. ಅಂತಹ ಆರೋಗ್ಯಕರ ಸಮಾಜದ ಸ್ವರೂಪ ಹೇಗಿರಬೇಕು, ಅಲ್ಲಿನ ಮೌಲ್ಯಗಳೇನು ಎಂಬ ಕನಸನ್ನು ಬಿಂಬಿಸುವ ಹಾಗೂ ಅಂತಹ ಕನಸಿಗೆ ಹಂಬಲಿಸುವ ಕೆಲಸವನ್ನು ನಾಟಕ ಮಾಡುತ್ತದೆ, ಮಾಡಬೇಕು.


ಡಾ॥ ಎನ್. ಗಾಯತ್ರಿ,
೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ, ಬೆಂಗಳೂರು-೫೬೦ ೦೮೫



# ವಿಜ್ಞಾನದ ಪ್ರಕ್ರಿಯೆ : ಕೆಲವು ಹೊಳವುಗಳು

ಕುತೂಹಲವನ್ನು ತಣಿಸಬಲ್ಲ ತಿಳಿವು ಹಾಗೂ ಸ್ವಹಿತಕ್ಕಾಗಿ ಪರಿಸರದ ನಿಯಂತ್ರಣ - ಈ ಒತ್ತಾಸೆಗಳಿಗೊಳಗಾಗಿ ಜಗತ್ತಿನಾದ್ಯಂತ ಮನುಷ್ಯರು ಪ್ರಯೋಗಗಳನ್ನು, ವೀಕ್ಷಣೆಗಳನ್ನು ನಡೆಸುತ್ತಾ ಬಂದಿದ್ದಾರೆ. ಪ್ರಯೋಗ ಮತ್ತು ವೀಕ್ಷಣೆಗಳು ಹೊಸ ಪರಿಕಲ್ಪನೆಗಳಿಗೆ ಎಡೆ ಮಾಡಿವೆ. ಹೊಸ ಪರಿಕಲ್ಪನೆಗಳು ಬೇರೆಯೇ ಪ್ರಯೋಗ ಮತ್ತು ವೀಕ್ಷಣೆಗಳಿಗೆ ದಾರಿ ಮಾಡಿವೆ. ವೈಯಕ್ತಿಕ ಪೂರ್ವಾಗ್ರಹಗಳನ್ನು ಮೀರಿ ವಸ್ತುಗಳನ್ನಾಗಲೀ ವಿದ್ಯಮಾನಗಳನ್ನಾಗಲೀ ಅವು ಹೇಗಿರುತ್ತವೋ ಹಾಗೆ ಕಾಣುವುದು ಈ ಚಟುವಟಿಕೆಗಳ ಮುಖ್ಯ ಉದ್ದೇಶ. ಇಂಥ ವಸ್ತುನಿಷ್ಠತೆ ಮತ್ತು ಸ್ವೀಕಾರಾರ್ಹತೆಗಳಿಂದ ಪೋಷಣೆಗೊಂಡು ವಾಸ್ತವತೆಯನ್ನು ಅರಿಯಲೆಂದು ಮನುಷ್ಯ ನಡೆಸುವ ಪ್ರಯತ್ನಗಳ ಸರಣಿಯನ್ನೇ ವಿಜ್ಞಾನದ ಪ್ರಕ್ರಿಯೆ - ವೈಜ್ಞಾನಿಕ ಪ್ರಕ್ರಿಯೆ ಎಂದಿಟ್ಟುಕೊಳ್ಳಬಹುದು.

ಇಂಥ ಪ್ರಕ್ರಿಯೆಯಲ್ಲಿ ಪಾಲುಗೊಳ್ಳಲು ವ್ಯಕ್ತಿಯೊಬ್ಬ ಸೀಮಿತ ಕಾಲಾವಧಿಯಲ್ಲಾದರೂ ಮೈಗೂಡಿಸಿಕೊಳ್ಳಬೇಕಾದ ಮನೋಭಾವ ಮತ್ತು ವೀಕ್ಷಣೆ-ವಿಶ್ಲೇಷಣೆ-ಅನುಮಿತಿ-ಊಹನ-ಪ್ರಯೋಗಗಳೇ ಮೊದಲಾದ ಉಪಹಂತಗಳನ್ನು ಒಳಗೊಂಡು ಕಾಲಾಂತರದಲ್ಲಿ ಶಿಷ್ಟವಾಗತೊಡಗಿದ ವಿಧಾನ – ಇವೆರಡೂ ಇಂದು ಸಾಕಷ್ಟು ಚರ್ಚೆಗೊಳಗಾಗಿವೆ.

ಎಲ್ಲರೂ ನೋಡುವುದನ್ನೇ ನೋಡಿದರೂ ಯಾರೂ

ಪ್ರೊ।। ಡಿ. ಆರ್. ಬಳೂರಗಿ

ಅದುವರೆಗೆ ಯೋಚಿಸದ ಹಾಗೆ ಯೋಚಿಸುವುದರಲ್ಲಿ ವಿಜ್ಞಾನ ಪ್ರಕ್ರಿಯೆಯ ಸೆಲೆ ಅಡಗಿದೆ. ಮರದಿಂದ ಸೇಬು ಬಿದ್ದುದನ್ನ ಕಂಡ ನ್ಯೂಟನ್ನನು ಅದೇಕೆ ಮೇಲೆ ಹೋಗಲಿಲ್ಲ ಎಂಬ ಪ್ರಶ್ನೆ ಕಾಡಿದ ಕತೆಯನ್ನು ನಾವು ಕೇಳಿದ್ದೇವೆ. ಎಲ್ಲ ಮನುಷ್ಯರೂ ಬೆಳಕಿನಲ್ಲಿ ತೊಯ್ಯುಕೊಂಡಿರುತ್ತಾರೆ. ಬೆಳಕಿನೊಂದಿಗೆ ಅದರದೇ ವೇಗದಲ್ಲಿ ಸಾಗಿದರೆ ಪ್ರಪಂಚ ಹೇಗೆ ಕಾಣಬಹುದೆಂಬ ಕಲ್ಪನೆ ಹುಟ್ಟಿ ಮರುಕಳಿಸಿದ್ದು ಐನ್‌ಸ್ಟೈನ್‌ನಲ್ಲಿ ಮಾತ್ರ. ಹೀಗೆ ನಾವು ಅಂದುಕೊಳ್ಳುವುದಕ್ಕೆ ಕಾರಣ - ಅವರು ಸರಿಯಾಗಿ ಸಜ್ಜುಗೊಂಡು ತಮ್ಮ ಪ್ರಶ್ನೆಗಳಿಗೆ ಉತ್ತರಗಳನ್ನು ಸೃಷ್ಟಿಸಿ ಹೆಚ್ಚಿನ ಜನ ಒಪ್ಪುವಂಥ ವಿವರಣೆಯನ್ನು ನೀಡಿದ್ದು.

ವಿಭಿನ್ನವಾಗಿ ಯೋಚಿಸಿದರೂ ವಿಭಿನ್ನರು ಒಪ್ಪುವಂತೆ ಮಾಡಲಾಗದ ಪರಿಸ್ಥಿತಿಗಳು ಅನೇಕ ಇವೆ. ಸುಮಾರು ನಲುವತ್ತು ವರ್ಷಗಳ ಹಿಂದೆ ನನ್ನ ಹುಟ್ಟೂರಲ್ಲಿ ಸ್ವಲ್ಪ ತಾಂತ್ರಿಕ ಶಿಕ್ಷಣವನ್ನು ಪಡೆದ ಕೃಷಿಕರೊಬ್ಬರಿದ್ದರು. ಕೃಷಿಯಲ್ಲೇ ನಿರತರಾಗಿದ್ದರೂ ಮೆಷಿನು, ಎಂಜಿನುಗಳ ಬಗೆಗಿನ ಆಸಕ್ತಿಯನ್ನು ಅವರು ಬಿಟ್ಟಿರಲಿಲ್ಲ. ಮನೆಯಲ್ಲೇ ಲೇಥ್‌ನಂಥ ಯಂತ್ರ ಹತಾರಗಳನ್ನಿಟ್ಟುಕೊಂಡಿದ್ದರು. ಡೀಸೆಲ್ ಚಾಲಿತ ಪಂಪಿನಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಿ ಸೀಮೆ ಎಣ್ಣೆಯಲ್ಲಿ ಅದನ್ನು ನಡೆಸಿದ್ದರು. ಡೀಸೆಲ್ ಮತ್ತು ಸೀಮೆ ಎಣ್ಣೆಗಳಿಂದ ಪಂಪು ನಡೆಸಿದಾಗ ಕಾರ್ಯಕ್ಷಮತೆ, ಖರ್ಚು ಮೊದಲಾದುವನ್ನು ಅನ್ಯೋನ್ಯ ಹೋಲಿಸುವ ದತ್ತಾಂಶಗಳನ್ನು ಸಿದ್ಧಪಡಿಸಿದ್ದರು. ತಾಲೂಕು ಮಟ್ಟದ ಅಧಿಕಾರಿಗಳಿಂದ ಹಿಡಿದು ಜಿಲ್ಲೆ, ರಾಜ್ಯ, ಅಷ್ಟೇಕೆ ರಾಷ್ಟ್ರಮಟ್ಟದ ನಾಯಕರೆನಿಸಿದ ಲಾಲಬಹದೂರ ಶಾಸ್ತ್ರಿ, ಕಾಮರಾಜ ನಾಡಾರಂಥವರ ಮುಂದೆ ಅವರು ಪ್ರದರ್ಶನ ಏರ್ಪಡಿಸಿದರು. ತಾನು ನಡೆಸಿದ ತಾಂತ್ರಿಕ ಬದಲಾವಣೆಯಿಂದ ಸಮಾಜಕ್ಕೆ ಒಟ್ಟು ಲಾಭವಾಗುತ್ತದೆ ಎಂಬುದು ಅವರ ಮಂಡನೆ. ತಮ್ಮ ಮಂಡನೆ ಸರಿಯೇ ತಪ್ಪೇ ಎಂಬುದನ್ನು ಸರಕಾರ ಅಥವಾ ಸಂಸ್ಥೆಗಳಿಂದ ದೃಢೀಕರಿಸಲು ಅವರು ಭಾರೀ ಪ್ರಯತ್ನ ನಡೆಸಿದರು. ಆದರೆ ಯಶಸ್ವಿಯಾಗಲಿಲ್ಲ.

ಮತ್ತೊಬ್ಬ ಮಿತ್ರರು, ಕೊಳವೆಯಲ್ಲಿ ಕೆಳಮುಖವಾಗಿ ನೀರು ಚಲಿಸುವಾಗ ಅದನ್ನು ವಿರೋಧಿಸುವ ಬಲವಿದೆಯೆಂಬ ಭಾವನೆಗೆ ಒಳಗಾದರು. ಈ ಭಾವನೆಯನ್ನೇ ಆಧಾರವಾಗಿಟ್ಟುಕೊಂಡು ವೇಗ, ಬಲ, ಶಕ್ತಿಯಂಥ ಪರಿಕಲ್ಪನೆಗಳನ್ನು ಬೆಸೆಯುವ ತಮ್ಮದೇ ಚಿತ್ರಣವನ್ನು ಮುಂದಿಡಲು ಪ್ರಯತ್ನಿಸಿದರು. ಅವರ ವೀಕ್ಷಣೆಗಳು ವಿಶ್ವಾಸಾರ್ಹವಾಗಿದ್ದರೂ ವಿವರಣೆಯನ್ನು ಸಮರ್ಥವಾಗಿ ಅನುಮೋದಿಸುವವರೂ ಇರಲಿಲ್ಲ, ವಿರೋಧಿಸುವವರೂ ಇರಲಿಲ್ಲ. ಅವರು ಪ್ರಯೋಗಗಳಿಗೂ ಪ್ರಕಟಣೆಗಳಿಗೂ ಅಧಿಕಾಧಿಕವಾಗಿ ವ್ಯಯಿಸಿದರೂ ಸ್ವೀಕಾರಾರ್ಹತೆಯನ್ನು ಗಳಿಸುವಲ್ಲಿ ಯಶಸ್ವಿಯಾಗಲಿಲ್ಲ.

೧೯೯೪ರಿಂದ ಎರಡು-ಮೂರು ವರ್ಷ ಸುದ್ದಿ, ಪ್ರದರ್ಶನ, ಪ್ರಯೋಗಗಳ ಸುಳಿಯಲ್ಲಿದ್ದು ಪ್ರತಿಷ್ಠಿತ 'ನೇಚರ್' ಪತ್ರಿಕೆಯಲ್ಲೂ ವರದಿಗಾಗಿ ಜಾಗ ಗಿಟ್ಟಿಸಿದ, ಅನೇಕ ರಾಜಕೀಯ ಮುಂದಾಳುಗಳಿಂದಲೂ ಕೆಲವು ವಿಜ್ಞಾನ ನಿರ್ವಹಣಾಕಾರರಿಂದಲೂ ಹೇಗೆಹೇಗೋ ಅಲ್ಪಕಾಲ ಪ್ರೋತ್ಸಾಹಕ್ಕೊಳಗಾದ ರಾಮರ್ ಪಿಳ್ಳೆಯವರ ಮೂಲಿಕಾ ತೈಲಕ್ಕೂ, ಮೇಲಿನ ಉದಾಹರಣೆಗಳಿಗೂ ಒಂದು ವ್ಯತ್ಯಾಸವಿದೆ. ರಾಮರ್‌ರಷ್ಟು ಪ್ರಚಾರ ಗಿಟ್ಟಿಸಲು ನನ್ನ ಕೃಷಿಕ ಮಿತ್ರರಿಗೆ ಸಾಧ್ಯವಾಗಲಿಲ್ಲ, ರಾಮರ್‌ರಷ್ಟು ಅಪ್ರಾಮಾಣಿಕರೂ ಅವರಾಗಿರಲಿಲ್ಲ, ರಾಮರ್ ಪಿಳ್ಳೆ ಸಂಶೋಧನೆಯ ಗೌಪ್ಯವೂ ಅವರ ಕೆಲಸದಲ್ಲಿರಲಿಲ್ಲ. ವಿಜ್ಞಾನ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಬೇಕಾದ ಮೂಲ ದ್ರವ್ಯ – ಮಾನಸಿಕ ಸಿದ್ಧತೆ – ಅವರಲ್ಲಿದ್ದರೂ ೨೦ನೇ ಶತಮಾನದಲ್ಲಿ ಕರಗತ ಮಾಡಿಕೊಳ್ಳಬೇಕಾದ ಕನಿಷ್ಠ ಮಾಹಿತಿ, ಪೂರ್ವ ತಿಳಿವಳಿಕೆ, ಅಭಿವ್ಯಕ್ತಿ ಸಾಮರ್ಥ್ಯ ಸಾಕಾಗಲಿಲ್ಲ. ಅವರಲ್ಲಿರುವ ಕರಡು ಪ್ರತಿಭೆಯನ್ನು ಗುರುತಿಸಿ ಅಥವಾ ಪ್ರತಿಭೆಯಿಲ್ಲದಿದ್ದರೆ ಹಾಗಾದರೂ ತಿಳಿಯಹೇಳುವ ವ್ಯವಸ್ಥೆಯೂ ನಮ್ಮಲ್ಲಿರಲಿಲ್ಲ. ರಾಮರ್ ಪಿಳ್ಳೆಯ ಸಂಶೋಧನೆಯ ಸತ್ಯಾಸತ್ಯತೆಯನ್ನು ತಿಳಿಯಲು ವಾಸ್ತವವಾಗಿ ಎರಡು ಮೂರು ವರ್ಷಗಳ ಕಾಲ ಬೇಕಾಗಿರಲಿಲ್ಲ. ವಿಜ್ಞಾನ ಸಂಶೋಧನೆಯಲ್ಲಿ ಕಾಳು-ಜಳ್ಳುಗಳನ್ನು ಪ್ರತ್ಯೇಕಿಸಬಲ್ಲ, ಕಾಳುಗಳಿದ್ದರೆ ಹೆಕ್ಕಿ

ತೋರಿಸಬಲ್ಲ, ವ್ಯವಸ್ಥೆ ಪಕ್ವವಾಗಿಲ್ಲದಿರುವುದೇ ಇದಕ್ಕೆ ಕಾರಣ. ಹಾಗೆಯೇ ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಗಳಲ್ಲಿ ದುಡಿಯಲು ಯೋಗ್ಯವಾದ ವ್ಯಕ್ತಿತ್ವವಿದ್ದರೂ ಯುಕ್ತ ಶಿಕ್ಷಣ ಅಥವಾ ತರಬೇತಿಯ ಅಭಾವದಿಂದ ವ್ಯರ್ಥವಾಗುವ ಮಾನವ ಸಂಪನ್ಮೂಲದ ಕಡೆಗೆ ಮೇಲೆ ನಮೂದಿಸಿದ ಇಬ್ಬರು ಮಿತ್ರರ ವೃತ್ತಾಂತ ಗಮನ ಸೆಳೆಯುತ್ತದೆ.

೧೯೧೦-೧೨ರ ವೇಳೆ ಆವಿಷ್ಕರಿಸಲ್ಪಟ್ಟ ಪಿಲ್ಟ್‌ಡೌನ್ ಮನುಷ್ಯನ ಕಪಾಲ-ದವಡೆ-ಹಲ್ಲುಗಳ ಫಾಸಿಲುಗಳು ಮುಂದೆ ಸುಮಾರು ನಾಲ್ಕು ದಶಕಗಳ ಕಾಲ ಮಾನವ ವಿಕಾಸದ ವಿದ್ವತ್ಪೂರ್ಣ ಚರ್ಚೆಗೆ ವಸ್ತುಗಳಾದುವು. ಈ ಮಧ್ಯೆ ವಿವಿಧ ತಾಣಗಳಿಂದ ಸಿಕ್ಕಿದ ಪ್ರಾಚೀನ ಮನುಷ್ಯನ ಫಾಸಿಲುಗಳು ಮಾನವ ವಿಕಾಸದ ಬೇರೆಯೇ ಜಾಡನ್ನು ಸೂಚಿಸಿದಾಗ ಪಿಲ್ಟ್‌ಡೌನ್ ಫಾಸಿಲುಗಳನ್ನು ಹೆಚ್ಚು ಸೂಕ್ಷ್ಮವಾಗಿಯೂ, ಅತ್ಯಾಸಕ್ತಿಯಿಂದ ವಿವರವಾಗಿಯೂ ಮರುಪರೀಕ್ಷಿಸಿದರು. 'ಕಪಾಲ ಸುಮಾರು ೬೦೦ ವರ್ಷ ಹಿಂದಿನ ಮನುಷ್ಯನದ್ದು. ದವಡೆ-ಹಲ್ಲುಗಳು ಒರಾಂಗ್ ಉಟನ್ ವಾನರದ್ದು, ರಾಸಾಯನಿಕ ಕ್ರಿಯೆ ಮತ್ತು ಕರಕೌಶಲದಿಂದ ತಯಾರಾಗಿ ಮೋಸಗೊಳಿಸಿದ ಅವಶೇಷಗಳವು ಎಂದು ಅನಂತರ ತಿಳಿಯಿತು. ವೈಜ್ಞಾನಿಕ ಪ್ರಕ್ರಿಯೆಯ ಹಾದಿಯನ್ನು ತಾತ್ಕಾಲಿಕವಾಗಿಯಾದರೂ ತಪ್ಪಿಸಿದ ಈ ಮೋಸಕ್ಕೆ ಪ್ರೇರಕವಾದ ಕಾರಣಗಳೂ ಸುಲಭವಾಗಿ ತಿಳಿಯಲಿಲ್ಲ. ಬ್ರಿಟಿಷ್ ಮ್ಯೂಸಿಯಂನ ಪೇಲಿಯಂಟಾಲಜಿ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ಮಾರ್ಟಿನ್ ಎ. ಸಿ. ಹಿಂಟನ್ ಎಂಬಾತ ತನ್ನ ಸಂಬಳದ ಬಗ್ಗೆ ತಕರಾರು ತೆಗೆದ ಮೇಲಧಿಕಾರಿಯ ಮೇಲಿನ ಅತೃಪ್ತಿಯಿಂದ ಈ ಮೋಸವನ್ನು ಸೃಷ್ಟಿಸಿರಬಹುದೆಂಬ ಗುಮಾನಿಗೆ ಈಗಲೇನೋ ಬಂದಿದ್ದಾರೆ.

೧೯೮೦ರ ದಶಕದಲ್ಲಿ ಅಮೆರಿಕದ ಇಬ್ಬರು ಸಂಶೋಧಕರು, ಮಿಲಿಯನ್‌ಗಟ್ಟಲೆ ಡಿಗ್ರಿ ಉಷ್ಣತೆಯಲ್ಲಿ ನಡೆಯುವ ಹೈಡ್ರೊಜನ್ ಸಮ್ಮಿಲನ ಎಂಬ ನ್ಯೂಕ್ಲಿಯರ್ ಕ್ರಿಯೆಯನ್ನು ಸಾಮಾನ್ಯ ಉಷ್ಣತೆಯಲ್ಲಿ ನಡೆಸಬಹುದೆಂದು ಪ್ರಚಾರ ಮಾಡಿದರು. ಅನಿರೀಕ್ಷಿತ ಎನ್ನಬಹುದಾಗಿದ್ದ ಈ 'ಶೀತ ಸಮ್ಮಿಲನ'ದ ಸಿಂಧುತ್ವದ ಬಗ್ಗೆ ಭಾಭಾ ಪರಮಾಣು ಸಂಶೋಧನಾ ಕೇಂದ್ರದ ನಿರ್ದೇಶಕರೂ ಸಕಾರಾತ್ಮಕವಾಗಿಯೇ ಸ್ಪಂದಿಸಿದ್ದರು. ಆದರೆ ಗೊಂದಲಕಾರಿಯಾದ ಈ ಕಲ್ಪಿತ ವಿದ್ಯಮಾನವು ಸ್ವೀಕಾರಾರ್ಹತೆಯ ಒರೆಯಲ್ಲಿ ಸೋತು ಸುದ್ದಿಯಿಲ್ಲದೆ ಹೋಯಿತು.

ಸೋವಿಯತ್ ಯೂನಿಯನ್‌ನಲ್ಲಿ ಲೈಸೆಂಕೊ ೧೯೪೮-೧೯೬೪ರ ಅವಧಿಯಲ್ಲಿ ತಳಿ ವಿಜ್ಞಾನ ಸಂಬಂಧವಾಗಿ ಮಂಡಿಸಿದ ವಾದಗಳು ಪ್ರಪಂಚದ ಇತರ ಕಡೆಗಳಲ್ಲಿ ಕಂಡುಬಂದ ಸಂಶೋಧನಾ ಫಲಿತಾಂಶಗಳಿಗೆ ವಿರುದ್ಧವಾಗಿದ್ದವು. ಮುಂದೆ ಅವನ ಪ್ರಯೋಗ ಫಲಿತಾಂಶಗಳು ವಿಮರ್ಶೆಗೊಳಗಾಗಿ ನಿಷ್ಫಲವೆನಿಸಿದವು.

ಹೀಗೆ ಮೋಸ, ಖ್ಯಾತಿ, ಅಧಿಕಾರಗಳ ನೆರಳಿನಲ್ಲಿ ವಿಜ್ಞಾನದ ಪ್ರಕ್ರಿಯೆ ದಿಕ್ಕುಗೆಟ್ಟಂತೆ ಕಂಡುಬಂದರೂ, ಅದರಲ್ಲಿರುವ ಸ್ವದೋಷ ನಿವಾರಣ ಗುಣದಿಂದ ಮತ್ತೆ ದಾರಿಗೆ ಬರುವ ಸಾಧ್ಯತೆ ಇರುವುದನ್ನು ಕಾಣುತ್ತೇವೆ. ಮೇಲಿನಂಥ ಸನ್ನಿವೇಶಗಳಿಗಿಂತ ಹೆಚ್ಚಾಗಿ ವಿಜ್ಞಾನದ ಪ್ರಕ್ರಿಯೆಯನ್ನು ದಿಕ್ಕು ತಪ್ಪಿಸುವಂತೆ ಮಾಡುವುದು ಮಾರುಕಟ್ಟೆ ಅವಲಂಬಿತವಾದ ಖಾಸಗೀ ವಲಯದ ಸಂಶೋಧನೆಗಳು. ಎಣ್ಣೆ, ಹೊಗೆಸೊಪ್ಪು, ಕಾಫಿ, ಗುಟಕ - ಇವುಗಳ ಸೇವನೆಗೆ ಒಳಗಾಗುವ ಜನರ ಸಂಖ್ಯೆಗೂ ಮಾರುಕಟ್ಟೆಯಲ್ಲಿ ಅವು ಜನಪ್ರಿಯವಾಗುವುದಕ್ಕೂ ನಿಕಟ ಸಂಬಂಧವಿದೆ. ಅವುಗಳ ಬಗ್ಗೆ ವ್ಯವಹರಿಸುವ ಕಂಪನಿಗಳು ಪೂರ್ವಾಗ್ರಹ ಪೀಡಿತ ಸಂಶೋಧನಾ ಫಲಿತಾಂಶಗಳು ಬರುವಂತೆ ಮಾಡಬಹುದು. ಇಂಥ ಬೆಳವಣಿಗೆ ಕೇವಲ ವಿಜ್ಞಾನದ ಪ್ರಕ್ರಿಯೆಯ ಮೇಲಷ್ಟೇ ಅಲ್ಲದೆ ಸಮಾಜದ

ಒಟ್ಟು ಆರೋಗ್ಯದ ಮೇಲೂ ಪರಿಣಾಮ ಬೀರಬಲ್ಲುದು.

ಯಾವುದೇ ದೇಶದಲ್ಲಿ 'ವಿಜ್ಞಾನದ ಹವ' ಚೇತೋಹಾರಿಯಾಗಿದ್ದರೆ ಮಾತ್ರವೇ ವಿಜ್ಞಾನ ಸಂಶೋಧನೆಯನ್ನೊಳಗೊಂಡ ಚಟುವಟಿಕೆಗಳಲ್ಲಿ ಲವಲವಿಕೆ ಇರಬಲ್ಲದು. ನಮ್ಮ ದೇಶದಲ್ಲಿ ಪರಮಾಣು ವಿಜ್ಞಾನ, ವ್ಯೋಮದಂಥ ಕೆಲವು ಕ್ಷೇತ್ರಗಳಲ್ಲಿ ಇದನ್ನು ಗುರುತಿಸಬಲ್ಲೆವಾದರೂ ಮೂಲಭೂತ ಸಂಶೋಧನೆಯ ಹಲವು ಕ್ಷೇತ್ರಗಳಲ್ಲಿ ಅದಿಲ್ಲದಿರುವುದನ್ನೂ ಅದಕ್ಕೆ ಕಾರಣಗಳನ್ನೂ ಅನೇಕ ಹಿರಿಯ, ಅನುಭವಶಾಲಿ ವಿಜ್ಞಾನಿಗಳು ವ್ಯಕ್ತಪಡಿಸಿದ್ದಾರೆ. ಅವನ್ನು ಹೀಗೆ ಸಂಕ್ಷಿಪ್ತವಾಗಿ ಪಟ್ಟಿ ಮಾಡಬಹುದು: ಕಳೆದ ಒಂದು ದಶಕದಲ್ಲಿ ಸಂಶೋಧನಾ ವಿದ್ಯಾರ್ಥಿಗಳ ಸಂಖ್ಯೆಯೂ ಗುಣಮಟ್ಟವೂ ಇಳಿಮುಖವಾಗಿರುವುದು, ಸ್ನಾತಕ ಮಟ್ಟದಲ್ಲೂ ವಿಜ್ಞಾನವನ್ನು ಅಧ್ಯಯನ ವಿಷಯವನ್ನಾಗಿ ಆರಿಸುವವರು ಕಡಿಮೆಯಾಗುತ್ತಿರುವುದು, ಪ್ರತಿಭಾಶಾಲಿ ಕಿರಿಯರೂ ವಿಜ್ಞಾನದ ಬದಲು -ವ್ಯಾಪಾರ-ವಾಣಿಜ್ಯ-ವೈದ್ಯಕೀಯ-ಎಂಜಿನಿಯರಿಂಗ್ ಅಧ್ಯಯನವನ್ನು ಕೈಗೊಳ್ಳುವುದು ಎಲ್ಲರಿಗೂ ತಿಳಿದೇ ಇದೆ. ಬ್ರಿಟಿಷರು ಭಾರತದಿಂದ ತೊಲಗಿ ಅರ್ಧ ಶತಮಾನವೇ ಕಳೆದರೂ ರಾಷ್ಟ್ರದ ವಿಜ್ಞಾನ ನಿರ್ವಹಣೆಯಲ್ಲಿ ಅಧಿಕಾರಶಾಹಿ ಮನೋಭಾವ ಮಾಯವಾಗಿಲ್ಲ. (ಹಿರಿಯ ವಿಜ್ಞಾನಿ ಸತ್ಯೇಂದ್ರನಾಥ ಬೋಸರು ಒಮ್ಮೆ ಒಬ್ಬ ವಿಜ್ಞಾನಿ ಯಾವುದೋ ಅಧಿಕಾರಿಯ ಭೇಟಿಗಾಗಿ ಕಾದು ಕುಳಿತುದನ್ನು ನೊಬೆಲ್ ಪಾರಿತೋಷಕ ವಿಜ್ಞಾನಿ ಚಂದ್ರಶೇಖರ್ ಕಂಡು ಮರುಗಿದ್ದರು.) ಉಪಕರಣ ತಯಾರಿ ಮತ್ತು ಅಭಿವರ್ಧನೆಯ ಬಗ್ಗೆ ನಮ್ಮ ದೇಶದಲ್ಲಿ ನಿರ್ಲಕ್ಷ್ಯವಿದೆ. ಸಮಾಜದಲ್ಲಿ ವಿಜ್ಞಾನದ ಪಾತ್ರ ಏನೆಂಬುದರ ಬಗ್ಗೆ ಹೆಚ್ಚಿನ ವಿಜ್ಞಾನಿಗಳಿಗೆ ಅರಿವಿಲ್ಲ. ಅದರ ಬಗ್ಗೆ ಚಿಂತೆಯೂ ಇಲ್ಲ. ಈಗಾಗಲೇ ನಡೆದ ಯುಕ್ತ ಸಂಶೋಧನೆಗಳ ಫಲ ಗ್ರಾಮೀಣ ಪ್ರದೇಶಗಳಿಗೆ ದಕ್ಕಿಲ್ಲ. ಆದ್ಯತೆಗಳನ್ನು ನಿರ್ಧರಿಸುವಾಗ ಮೇಲುಸ್ತರದ ವಿಜ್ಞಾನಿಗಳ ಆಸೆ, ಅವಶ್ಯಕತೆಗಳೇ ಆದ್ಯತೆಗಳು ಹೊರತು ಇಲ್ಲಿನ ಸಮಸ್ಯೆಗಳಲ್ಲ. ಪ್ರಶಸ್ತಿ - ಗೌರವ - ಸರಕಾರಿ ಗ್ರಾಂಟುಗಳು ತಪ್ಪಿ ಹೋಗಬಹುದೆಂಬ ಭಯದಿಂದ ವೈಜ್ಞಾನಿಕ ವಿಷಯಗಳಲ್ಲಿ ಭಿನ್ನಮತ ವ್ಯಕ್ತಪಡಿಸಲಾಗದ ದೈನ್ಯತೆಯೇ ಭಾರತೀಯ ಸಭ್ಯತೆಯೆಂಬಂತೆ ಪ್ರಕಟವಾಗುತ್ತಿದೆ. ವಿಜ್ಞಾನವನ್ನು ಇಂಥ ವರ್ತನೆ ಪೋಷಿಸುವುದಿಲ್ಲ. (ಜೆ. ಬಿ. ಎಸ್. ಹಾಲ್ಡೇನ್ ಹೇಳಿದ್ದಾರೆ-'ವೈಜ್ಞಾನಿಕ ಸಭೆಗಳಲ್ಲಿ ನನ್ನ ಭಾರತೀಯ ಸ್ನೇಹಿತರು ಪರಸ್ಪರ ಟೀಕಿಸದಷ್ಟು ಸಭ್ಯರಾಗಿದ್ದರು. ಯೂರೋಪಿನಲ್ಲಿ ನಾವು ಸಾಮಾನ್ಯವಾಗಿ ಕಿರಿಯರ ಸಂಶೋಧನೆ ಬಗ್ಗೆ ಮೆದುವಾಗಿರುತ್ತೇವೆ. ಆದರೆ ಹೆಸರಾಂತ ವ್ಯಕ್ತಿಗಳ ಸಂಶೋಧನೆಗಳನ್ನು ಕಟುವಾಗಿ ವಿಮರ್ಶಿಸುತ್ತೇವೆ.') ಅಂತಃಪ್ರಜ್ಞೆ, ನೈಪುಣ್ಯ, ಆಸಕ್ತಿಗಳಿಗನುಗುಣವಾಗಿ ಮುಕ್ತ ವಾತಾವರಣದಲ್ಲಿ ಸಮಕಾಲೀನ ಮಹತ್ವ ವಿಷಯಗಳಲ್ಲಿ ಸಂಶೋಧನೆ ನಡೆಸಲು ವಿಶ್ವವಿದ್ಯಾಲಯಗಳಲ್ಲಿ ಸಾಧ್ಯ. ಆರ್ಥಿಕ ಸಹಾಯದ ಕೊರತೆ, ರಾಷ್ಟ್ರೀಯ ಪ್ರಯೋಗಾಲಯಗಳಿಗೆ ವಿಜ್ಞಾನಿಗಳ ವಲಸೆ, ಡಾಕ್ಟರೇಟ್ ಡಿಗ್ರಿಗಳಿಗಾಗಿ ಬರುವ ವಿದ್ಯಾರ್ಥಿಗಳ ಕನಿಷ್ಠ ಅವಶ್ಯತೆಗಳ ಪೂರೈಕೆಗಷ್ಟೇ ಗಮನ – ಇವುಗಳಿಂದ ಉದ್ದೇಶಪೂರಿತ ಯೋಜನೆಗಳು ಇಲ್ಲಿ ಹೆಚ್ಚಾಗಿಲ್ಲ. ಗುಣೋತ್ಕರ್ಷವನ್ನು ಹೆಚ್ಚಿಸಬಲ್ಲ ಸೌಲಭ್ಯ, ಪ್ರೋತ್ಸಾಹಗಳು ಕಡಿಮೆ. ಮೂರು




ನೋಡೇ ಇವನ ಕನ್ನಡಾಭಿಮಾನ! ಎ.ಬಿ.ಸಿ.ಡಿ-ಯನ್ನೂ ಕನ್ನಡದಲ್ಲೇ ಬರೆದಿದ್ದಾನೆ !!

ವರ್ಷಗಳ ಹಿಂದೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಪ್ರದೀಪ್ ಕೆ. ಬೋಸ್ ಅವರು ೧೧೦ ಕೋಟಿ ವರ್ಷಗಳ ಹಿಂದಿನ ಫಾಸಿಲುಗಳನ್ನು ಆವಿಷ್ಕರಿಸಿದ ಸುದ್ದಿ ಪ್ರಕಟವಾಯಿತು. ಅದರೊಂದಿಗೆ ಅವರು ಸಂಶೋಧನೆ ನಡೆಸುತ್ತಿದ್ದ ಸ್ಥಿತಿಗಳ ಮೇಲೂ ಬೆಳಕು ಬಿತ್ತು. ಮೂಲಭೂತ ಸೌಲಭ್ಯದ ಕೊರತೆಯೊಂದಿಗೆ ಕಂಪ್ಯೂಟರ್-ಇಂಟರ್ನೆಟ್‌ನಂಥ ಆಧುನಿಕ ಸೌಲಭ್ಯಗಳು ಅವರಿಗಿರಲಿಲ್ಲ. ವಿಶ್ವವಿದ್ಯಾಲಯ ಮತ್ತು ಉಚ್ಚ ಶಿಕ್ಷಣ - ಸಂಶೋಧನಾ ಸಂಸ್ಥೆಗಳ 'ಆರೋಗ್ಯ ತಪಾಸಣೆ' ಆಗಿಂದಾಗ ಆಗದಿರುವುದೇ ಇಂಥ ಸ್ಥಿತಿಯನ್ನು ಉಂಟುಮಾಡಿದೆ. ಪಾಶ್ಚಾತ್ಯರೊಂದಿಗೆ ನಾವು ಆಧುನಿಕ ಸಂಶೋಧನಾ ಕ್ಷೇತ್ರದಲ್ಲಿ ಸ್ಪರ್ಧಿಸುವ ಗುಂಗಿನಲ್ಲಿರುತ್ತೇವೆ. ಆದರೆ ಬಹಳ ಶ್ರೇಷ್ಠ ಸಂಸ್ಥೆಗಳಲ್ಲೂ ಪಾಶ್ಚಾತ್ಯ ಪ್ರಯೋಗ ಶಾಲೆಗಳಲ್ಲಿರುವ ಸಂಶೋಧನಾ ಸೌಲಭ್ಯಗಳಿಲ್ಲ. ಈ ಕೊರತೆಯನ್ನು ನೀಗಲು ಚೀನ-ಜಪಾನುಗಳಲ್ಲಿ ತೆಗೆದುಕೊಂಡಂತೆ ನಮ್ಮಲ್ಲಿ ಕ್ರಮಗಳನ್ನು ತೆಗೆದುಕೊಳ್ಳುವ ಚಿಹ್ನೆಗಳೂ ಕಾಣುತ್ತಾ ಇಲ್ಲ. (ಸಿ. ವಿ. ರಾಮನ್ ತಮ್ಮ ಪ್ರಮುಖ ಸಂಶೋಧನೆಯನ್ನು ನಡೆಸುತ್ತಿದ್ದಾಗ ಉಪಯೋಗಿಸಿಕೊಂಡಿದ್ದ ಸೌಲಭ್ಯಗಳು ಅಂದು ಜಗತ್ತಿನ ಇತರ ಭಾಗಗಳಿಗೆ ಹೋಲಿಸಿದಾಗ ಕಳಪೆ ಮಟ್ಟದ್ದಾಗಿರಲಿಲ್ಲ). ಆದ್ದರಿಂದಲೇ ಗಣಿತ, ಸಂಖ್ಯಾಶಾಸ್ತ್ರ (ಸ್ಟ್ಯಾಟಿಸ್ಟಿಕ್ಸ್) ನಂಥ ಕ್ಷೇತ್ರಗಳಲ್ಲಿ ನಮ್ಮ ಸಂಶೋಧನಾ ಸಂಸ್ಥೆಗಳು ಸಾಧಿಸಿದ ಯಶಸ್ಸು ಪ್ರಯೋಗ - ಸಿದ್ಧಾಂತಗಳೆರಡೂ ಒಟ್ಟೊಟ್ಟಾಗಿ ಮುಂದುವರಿಯಬೇಕಾದ ರಸಾಯನ ವಿಜ್ಞಾನ, ಭೌತ ವಿಜ್ಞಾನದಂಥ ಕ್ಷೇತ್ರಗಳಲ್ಲಿ ಕಂಡುಬರುವುದಿಲ್ಲ. ಪಾರಂಪರಿಕ ಕೃಷಿಕ್ಷೇತ್ರದಲ್ಲಿ ತಳ ಊರಿದ್ದ ಜೋಡಿದಾರಿಕೆಯಿಂದಾಗಿ ಮಾನಸಿಕ ನಿಲುವುಗಳ ಮೇಲೆ ಉಂಟಾದ ಪ್ರಭಾವವೋ ಏನೋ – ನೇಮಕ, ಬಡ್ತಿ, ಅಷ್ಟೇ ಏಕೆ ವೈಜ್ಞಾನಿಕ ನಿರ್ಧಾರಗಳೂ ಅರ್ಹತೆಗಿಂತ ಹೆಚ್ಚಾಗಿ ವಿಧೇಯತೆಯನ್ನು ಅವಲಂಬಿಸಿವೆ. (ಭಾಭಾ ಪರಮಾಣು ಸಂಶೋಧನಾ ಕೇಂದ್ರದಲ್ಲಿ ಮಾತ್ರ ತಂಡದ ಸದಸ್ಯರಾಗಿ ಕೆಲಸ ಮಾಡುವವರಿಗೂ ಪ್ರಾಶಸ್ತ್ಯ ಕೊಡಲು ಪ್ರಯತ್ನಿಸಿದ್ದಾರೆ – ವಸಾಹತು ಆಡಳಿತದಲ್ಲಿದ್ದುದಕ್ಕಿಂತ ಭಿನ್ನವಾಗಿ). ಪಾಶ್ಚಾತ್ಯ ದೇಶಗಳು ಗುರುತಿಸಿದ ಸಂಶೋಧನೆಯ ಸೀಮಾ ಕ್ಷೇತ್ರಗಳನ್ನು ನಾವು ಅನುಮೋದಿಸಬೇಕಾಗಿಲ್ಲ. (ಉದಾಹರಣೆಗೆ, ಸೋಂಕು ರೋಗಗಳು ಮತ್ತು ಜನಸಂಖ್ಯಾ ಸ್ಫೋಟ ನಮ್ಮ ದೇಶದ ಮುಖ್ಯ ಸಮಸ್ಯೆಗಳಲ್ಲಿ ಎರಡು. ಆದರೆ ಸೋಂಕು ರೋಗಗಳ ಸಂಶೋಧನೆಗೆ ಪಾಶ್ಚಾತ್ಯ ಆದ್ಯತೆಯಿಲ್ಲ. ಸಮಸ್ಯೆಯೇ ಸಂಶೋಧನಾ ನಾಯಕತ್ವವನ್ನು ಒದಗಿಸಬಲ್ಲುದೆಂಬುದಕ್ಕೆ ಪೋಲಿಯೊ ವ್ಯಾಕ್ಸಿನ್ ತಯಾರಿ ಒಂದು ಉದಾಹರಣೆ. ೭೦ ವರ್ಷಗಳ ಹಿಂದೆ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಹತ್ತರಲ್ಲಿ ಒಬ್ಬರಂತೆ ಪೋಲಿಯೊ ವೈರಸ್‌ನಿಂದ ಬಾಧಿತರಾದಾಗ ಆದ್ಯತೆಯ ಮೇರೆಗೆ ಕೈಗೊಂಡ ಸಂಶೋಧನೆಯಿಂದ ಹದಿನೈದು ವರ್ಷಗಳಲ್ಲಿ ಎರಡು ವ್ಯಾಕ್ಸೀನುಗಳನ್ನು ಉತ್ಪಾದಿಸಲು ಸಾಧ್ಯವಾಯಿತು). ನಮ್ಮ ಅನುಕೂಲತೆಗಳನ್ನು ಗುರುತಿಸಿ ಅವುಗಳ ಮೇಲೆ ಗಮನ ಹರಿಸುವುದು ಲಾಭದಾಯಕವಾಗಬಹುದು. (೩,೫೦೦ ಮೀಟರ್ ಎತ್ತರದ ಲ್ಹಾಸದಲ್ಲಿ ವಿಕಿರಣ ಸಂಶೋಧನೆಗಾಗಿ ಚೀನ ಪ್ರಯೋಗಾಲಯವನ್ನು ಕಟ್ಟಿದೆ - ಉನ್ನತ ಗಿರಿಶೃಂಗಗಳು ಚೀಣಕ್ಕಿರುವ ಸಹಜ ಅನುಕೂಲತೆ. ಅತ್ಯುನ್ನತ ಶಕ್ತಿಯ ಗಾಮಕಿರಣ ಸಂಶೋಧನೆ ಇಲ್ಲಿ ನಡೆಯುತ್ತಿದೆ. ಇದರಲ್ಲಿ ಅಮೆರಿಕದ ಸಹಯೋಗವೂ ಇದೆ. ಕೋಲಾರದ ಚಿನ್ನದ ಗಣಿಗಳಲ್ಲಿ ಹಿಂದೆ ನಡೆಯುತ್ತಿದ್ದ ಸಂಶೋಧನೆಗಳು ಭಾರತವನ್ನು ಮುಂಚೂಣಿಗೆ ದೂಡಿದ್ದವು. ಈಗ ಅವನ್ನು ನಿಲ್ಲಿಸಲಾಗಿದೆ, ಅವುಗಳೊಂದಿಗೆ ಬರಬಹುದಾದ ಸಹಯೋಗಗಳು ತಪ್ಪಿವೆ.)

ಇಂದು ನಮ್ಮೆಲ್ಲರ ಮನಸ್ಸಿನ ಮೇಲೆ ವಿಜ್ಞಾನ-ತಂತ್ರಜ್ಞಾನಗಳ ಪರಿಣಾಮ ಎಷ್ಟಿದೆಯೆಂದರೆ ಆಧಾರರಹಿತ ನಂಬಿಕೆಗಳಿಗೂ ಆಧಾರವಾಗಿ 'ಏನೋ ವಿಜ್ಞಾನ' ಇದೆ ಎಂದುಕೊಳ್ಳಲು ಮನಸ್ಸು ಹವಣಿಸುತ್ತದೆ.

ಹಾಗೆಯೇ ಕೇವಲ ವೈಯಕ್ತಿಕ ನೆಲೆಯಲ್ಲಿ ಖಾಸಗಿಯಾಗಿ ಸರಿ ಎನಿಸುವ ವಾದವನ್ನೋ ತೀರ್ಮಾನವನ್ನೋ ಅಗ್ಗಳಿಕೆಯಿಂದ ಸಾರಲು 'ವೈಜ್ಞಾನಿಕ ' ಎಂಬ ವಿಶೇಷಣವನ್ನು ಬಳಸುವುದು ಸಾಮಾನ್ಯವಾಗಿದೆ. ಯಾವುದೇ ರಾಜಕೀಯ ಅಥವಾ ಧಾರ್ಮಿಕ ಭಾಷಣಗಳಲ್ಲೇ ಆಗಲಿ 'ವೈಜ್ಞಾನಿಕ'ವನ್ನು ಉಚ್ಚರಿಸದಿದ್ದರೆ ಭೂಷಣ ಎನಿಸುವುದಿಲ್ಲ! ಭೌತಿಕವಾಗಿ ವಿಕಿರಣ ಪದಾರ್ಥಗಳಲ್ಲಿ ಸೂಕ್ಷ್ಮಮಟ್ಟದಲ್ಲಿ ಕಂಡುಬರುವ ಕಣ-ತರಂಗಗಳ ದ್ವೈತವನ್ನು ತತ್ವಜ್ಞಾನ-ಅಧ್ಯಾತ್ಮಕ್ಕೆ ಸಂಬಂಧಿಸುವುದು, ಹೈಸನ್‌ಬರ್ಗ್‌ನ ಅನಿಶ್ಚಿತತಾ ತತ್ವವನ್ನು ನಿತ್ಯಜೀವನದ ಅನಿಶ್ಚಿತತೆಗೆ ಹೋಲಿಸುವುದು, 'ಕೇಯಾಸ್' ವಿದ್ಯಮಾನವನ್ನು ಪ್ರಾರ್ಥನೆಯಿಂದ ಉಂಟಾಗಬಹುದಾದ ಪರಿಣಾಮಗಳನ್ನು ಬಳಸಲು ಉಪಯೋಗಿಸುವುದು – ಇವೆಲ್ಲ ವಸ್ತುನಿಷ್ಠವಾದ ರುಜುವಾತುಗಳಿಲ್ಲದಾಗ ವಿಜ್ಞಾನದ ಮಿತಿಗಳನ್ನು ಲಂಬಿಸಿ ಮನಸ್ಸಿನ ಸಮಾಧಾನಕ್ಕಾಗಿ ಮಾಡುವ ಪ್ರಯತ್ನಗಳಾಗುತ್ತವೆ. ವಿಜ್ಞಾನದ ಪ್ರಕ್ರಿಯೆಗೆ ಸಹಾಯಕವಾಗುವ ಬದಲು ಇವು ಗೊಂದಲವನ್ನೇ ನಿರ್ಮಿಸಬಹುದು.

ಅತೀಂದ್ರಿಯ ಗ್ರಹಣ – ದೃಷ್ಟಿ – ಯೋಚನೆ, ಗ್ರಹಸ್ಥಾನಗಳ ಪರಿಣಾಮ, ಕನಸುಗಳು ಸೂಚಿಸುವ ಭವಿಷ್ಯ, ಬೀಳುವ ಹೂವಿನ [illegible] ಸಿಗುವ ಅಭಯ. ಇಂಥ ಎಷ್ಟೆಷ್ಟೋ ನಂಬಿಕೆಗಳನ್ನು ಬಿಟ್ಟುಬಿಡಬೇಕೆಂದು ಬಾಯಲ್ಲಿ ಹೇಳಿದರೂ ಅನೇಕರಿಗೆ

ಮನಸ್ಸಿನಿಂದ ಬಿಟ್ಟುಕೊಡಲಾಗುವುದಿಲ್ಲ. ಜೀವನದ ದುಮ್ಮಾನ, ಅಭದ್ರತೆಗಳ ನಡುವೆ ಏನೋ ಸ್ವಲ್ಪ ಹಿತ, ಧೈರ್ಯ ಮತ್ತು ಮಾನಸಿಕವಾಗಿ ಮುದ ನೀಡುವ ಭಾವಗಳನ್ನು ಬಿಡುವುದು ಕಷ್ಟ ತಾನೆ? ಆದರೆ ಯಾವುದೇ ಕಾರಣದಿಂದಾದರೂ ಅಂಥ ಭಾವ ಅಥವಾ ನಂಬಿಕೆಗೆ ತಳಹದಿ ಇಲ್ಲವೆಂದು ತಿಳಿದುಬಂದಾಗ (ಇಂಥ ಸನ್ನಿವೇಶಗಳು ಜೀವನದಲ್ಲಿ ಸ್ವಲ್ಪವೇನಲ್ಲ) ವ್ಯಕ್ತಿಯೊಬ್ಬ ಅನಿಶ್ಚಿತತೆಗೆ ತಳ್ಳಲ್ಪಟ್ಟು ಪಡುವ ಯಾತನೆ ಸ್ವಲ್ಪವೇನಲ್ಲ. ನಂಬಿಕೆಯನ್ನು ಕಳೆಕೊಂಡ ಮೇಲೆ ಉಳಿಯುವ 'ಖಾಲಿತನ'ವನ್ನು ಎದುರಿಸಲೂ ಸುಲಭವಲ್ಲ. ಆದರೆ ವಿಜ್ಞಾನದ . ಪ್ರಕ್ರಿಯೆಯಲ್ಲಿ ಪಾಲುಗೊಳ್ಳುವವರಿಗೆ ಯಾವುದೇ ತೀರ್ಮಾನಕ್ಕೆ ಬರುವ ಹಾಗೂ ಅಂಥ ತೀರ್ಮಾನ ಬದಲಾಗುವ ಪ್ರಕ್ರಿಯೆಯ ಬಗ್ಗೆ 'ನಿಶ್ಚಿತತೆ' ಇದೆಯಷ್ಟೆ ಹೊರತು ಆ ತೀರ್ಮಾನದ ಬಗೆಗಲ್ಲ.

ಪರಮಾಣು ಶಕ್ತಿಯಂಥ ಹೊಸ ಶಕ್ತಿರೂಪ, ಪ್ಲಾಸ್ಟಿಕ್‌ನಂಥ ಸಂಶ್ಲೇಷಿತ ಪದಾರ್ಥ, ಜೀನೋಮ್‌ನಂಥ ಜೀವ ರಾಸಾಯನಿಕ ಸಂಶೋಧನೆ, ಇಲೆಕ್ಟ್ರಾನಿಕ್ ಕಾರ್ಯತಂತ್ರ, ಸಂವಹನದ ಹೊಸದಾರಿ, ಮಾಹಿತಿ ಸಿದ್ಧಾಂತ ಮತ್ತು ಸೈಬರ್ನೆಟಿಕ್ಸ್ - ಇವೆಲ್ಲ ತಾಂತ್ರಿಕ ಬೆಳವಣಿಗೆಗಳಿಗೆ ಸಂವಾದಿಯಾಗಿ ಆಧುನಿಕ ವಿಜ್ಞಾನದ ಪರಿಕಲ್ಪನಾತ್ಮಕ ಅಭಿವರ್ಧನೆಗಳಿವೆ. ಹಿಂದೆ ಅನೇಕ ಬಾರಿ ವಿಜ್ಞಾನವನ್ನು 'ವ್ಯವಸ್ಥಿತವಾದ ಲೋಕಜ್ಞಾನ' ಎಂದು ಸರಳವಾಗಿ (ಆದರೆ ಸ್ಥೂಲವಾಗಿ) ನಿರೂಪಿಸುತ್ತಿದ್ದುದುಂಟು. ಆದರೆ ಹಾಗೆ ಕರೆಯದಿರುವಷ್ಟರ ಮಟ್ಟಿಗೆ ಅದು ಈಗ ಮುಂದುವರಿದಿದೆ. ವಿಜ್ಞಾನದ ಆಧಾರ ಕಲ್ಪನೆಗಳು ಸೃಜನಶೀಲ ಮನಸ್ಸಿನಿಂದ ಹುಟ್ಟುವ ಬಹಳ ಅಮೂರ್ತವಾದ ಪ್ರತೀಕಾತ್ಮಕ ರೂಪಗಳಾಗಿ ಬರುತ್ತಿವೆ. (ಒಮ್ಮೆ ವೂಲ್ಫ್‌ಗಾಂಗ್ ಪೌಲಿ ಎಂಬ ಸೈದ್ಧಾಂತಿಕ ಭೌತ ವಿಜ್ಞಾನಿ ಏಕೀಕೃತ ಕ್ಷೇತ್ರ ಸಿದ್ಧಾಂತದ ಬಗ್ಗೆ ಭಾಷಣ ನೀಡಿದಾಗ ಪರಮಾಣು ಮಾದರಿಯನ್ನು ಮುಂದಿಟ್ಟ ನೀಲ್ಸ್ ಬೋರ್ ಸಭೆಯಲ್ಲಿದ್ದರು. ಪೌಲಿಯವರ ಸಿದ್ಧಾಂತದ ಬಗ್ಗೆ ಅಭಿಪ್ರಾಯ ಕೇಳಿದಾಗ ಬೋರ್ ಉತ್ತರಿಸಿದ್ದರು: 'ಇದು ಹುಚ್ಚು ಸಿದ್ಧಾಂತ ಎಂಬುದರಲ್ಲಿ ಸಂಶಯವಿಲ್ಲ. ನಿಜವಾಗುವಷ್ಟೂ ಹುಚ್ಚಿನದೆ?- ಎಂಬುದೇ ಪ್ರಶ್ನೆ). ಪ್ರಕೃತಿಯ ನಿಯಮಗಳು ಸ್ಥಿರ, ವ್ಯತ್ಯಯರಹಿತ ಎಂದಷ್ಟೇ ಆಗಿರದೆ ಸಂಖ್ಯಾಶಾಸ್ತ್ರೀಯವಾಗಿ ಸಂಭವನೀಯತೆ ಪರಿಕಲ್ಪನೆಗಳನ್ನು ಒಳಗೊಂಡಿವೆ. ಇದರಿಂದಾಗಿ ವಿಜ್ಞಾನದ ಪ್ರಕ್ರಿಯೆ ಆಯ್ದ ಕೆಲವರ ಪಾಲಿಗೆ ಮಾತ್ರ ಎಂಬ ಭಾವನೆ ಬಲಗೊಳ್ಳುವ ಸಾಧ್ಯತೆ ಇದೆ. ಇಂಥ ಪ್ರವೃತ್ತಿಯಿಂದ ವಿಜ್ಞಾನದ ಪ್ರಕ್ರಿಯೆಯನ್ನು ಮೆಚ್ಚುವ ಜನರ ಸಂಖ್ಯೆ ಇಳಿಮುಖವಾಗಬಾರದು. ಹೀಗಾಗದಂತೆ ನೋಡುವುದೇ ಒಂದು ಪಂಥಾಹ್ವಾನ. ಏಕೆಂದರೆ ಮಾನವ ಆಸಕ್ತಿಯ ಬೇರುಗಳಿಲ್ಲದಿದ್ದರೆ ವಿಜ್ಞಾನದ ಅಧ್ಯಯನ ಪ್ರಕ್ರಿಯೆಗಳಿಗೆ ಬೇಕಾದ ಸ್ಫೂರ್ತಿ ಮತ್ತು ಸೃಜನಶೀಲತೆಯ ಮೂಲಗಳೂ ಬರಡಾಗಬಹುದು.


ಪ್ರೊ|| ಡಿ. ಆರ್. ಬಳೂರಗಿ
ಪ್ಲಾಟ್ ನಂ. ೨೦೬/ಬಿ, ರಾಣಿ ಚೆನ್ನಮ್ಮ ನಗರ,
ಧಾರವಾಡ-೫೮೦೦೦೧




## ಹೇಗೆ ಮರೆಯಲಿ ಹೇಳು

'ನನ್ನ ಮರೆತು ಬಿಡು'
ಎಂದರೆ-
ಹೇಗೆ ಮರೆಯಲಿ ಹೇಳು ನಿನ್ನ ನಾನು
ಮರೆತು – ಮತ್ತೇಗೆ ಬರೆಯಲಿ

ನಿನ್ನೆ, ಇಂದು ನಾಳೆಗಳ ಕುರಿತು ಕವನವನು
ಸೂರ್ಯ ಮರೆತರೆ ಹೇಗೆ ಬಾನು ಬುವಿಯನ್ನು
ಬುವಿ ಮರೆತರೆ ಹೇಗೆ ಸೂರ್ಯ ಚಂದಿರರನ್ನು

ನನಗಲ್ಲ – ನಿನಗಲ್ಲ
ಇಲ್ಲಿರುವ ಎಲ್ಲರಿಗೂ ಬೇಕು
ನಾ ಬರೆವ ಕವಿತೆಗೂ
ನೀ ನಡೆವ ದಾರಿಗೂ-ಬೇಕು
ಭೂತ
ಭೂತದೊಂದಿಗೆ ವರ್ತಮಾನ
ಭವಿಷ್ಯತ್ತಿನ ಕಾಲಮಾನ

ಭೂತವೆಂದರೆ ಬರೀ ಭೂತವೂ ಅಲ್ಲ
ಭೂತವೆಂದರೆ-
ಇರುವಿಕೆಯ ನೆರಳು
ಅದು ಹೇಗೆ ಆಗುವುದು ಭಯದ ಕಾಡು
ಅಲ್ಲುಂಟು ಮೊಲ, ಗಿಳಿ, ಆನೆ, ಹುಲಿ
ಜೀವರಾಶಿಗಳ ದಂಡು
ಭೂಮಿ ಇರುವುದೇ ದುಂಡು

ಕಾಡಿದರೆ ಭೂತ
ಹುಟ್ಟುವುದು ವರ್ತಮಾನಕೆ ಧಾತು
ಭವಿಷ್ಯತ್ತಿಗೆ ಹೇತು
ಒಂದರಳೆಯಲಿ ಒಂದು
ಬಿಟ್ಟಾಗ ಬೇರು
ರೆಂಬೆ-ಕೊಂಬೆಯ ತುಂಬ
ಚಿಗುರುವುವು ಹೂ ಹಸಿರು
ಆ ಹಸಿರು ವನದಲ್ಲಿ
ನಾಳೆ ನಾಡಿದ್ದರ ಕಸರತ್ತು
ಇದು ಬದುಕು ಪ್ರೀತಿಸಿ
ಬೆಳೆದವರ ಬೆಳೆವವರ ಹಕೀಕತ್ತು.

'ನನ್ನ ಮರೆತು ಬಿಡು'
ಎಂದರೆ -
ಹೇಗೆ ಮರೆಯಲಿ ಹೇಳು
ನಾಳೆ ನಾಡಿದ್ದರ ಕನಸುಗಳನು
ಸುಂದರ ಮನಸುಗಳನು
ಮರ,
ಮರೆತರೆ ಹೇಗೆ ಬೇರನ್ನು
ಚಾಚಿದ ಚಿಗುರನ್ನು


ಸತ್ಯಾನಂದ ಪಾತ್ರೋಟ
ಹೊಸ ಬಡಾವಣೆ, ಕಾರಿಹಳ್ಳ, ಬಾಗಲಕೋಟೆ-೫೮೭ ೧೦೧

# ತಲೆಬಾನು ರಾಜ್ಯದಲ್ಲಿ ತ್ರಿಮೂರ್ತಿಗಳು

ಡಾ|| ಜಿ. ಎಸ್. ಪಾಲಾಕ್ಷ



ತಲೆಬಾನು ಏಷಿಯ ಖಂಡದಲ್ಲಿನ ಒಂದು ರಾಜ್ಯ. ಇದು ಇನ್ನೂ ೧೦ನೇ ಶತಮಾನದಿಂದ ಮುಂದುವರಿದಿಲ್ಲ. ಇಲ್ಲಿ ದರೋಡೆ, ಕೊಲೆ, ಹಿಂಸಾಚಾರ, ಭಯೋತ್ಪಾದನೆ ಇನ್ನೂ ಮುಂದುವರಿದಿವೆ. ಇತ್ತೀಚೆಗೆ ಇಲ್ಲಿ ಘೋರ ಯುದ್ಧ ವಾಗುತ್ತಿದ್ದು, ಈ ರಾಜ್ಯದಲ್ಲಿ ಹಲವು ಭಾರತೀಯರು ಕಷ್ಟನಷ್ಟಕ್ಕೆ ಒಳಗಾಗಿದ್ದಾರೆ. ಇವರನ್ನು ಉಪಾಯದಿಂದ ಅಪಾಯವಾಗದಂತೆ ಹೊರಕ್ಕೆ ತರುವುದು ಹೇಗೆ ? ಇವರೂ ನಮ್ಮವರು ತಾನೇ ? ಎಲ್ಲರೂ ಸುಮ್ಮನಿದ್ದಾರೆಂದು ತಾವೂ ಸುಮ್ಮನೆ ಕೈಕಟ್ಟಿ ಕುಳಿತುಕೊಂಡರೆ ಸಮಸ್ಯೆಗೆ ಪರಿಹಾರವೇನು ? ಪರಿಹಾರವೆಲ್ಲಿದೆ ? ಪರಿಹಾರ ಒದಗಿಸುವ ಬಗೆ ಹೇಗೆ ? ಪರಿಹಾರದ ಮಾರ್ಗವೇನು ? ಯಾವ ರೀತಿ ? ಪರಿಹಾರ ಸೂಚಿಸುವವರು ಯಾರು ? ಪರಿಹಾರ ಜಾರಿಗೆ ತರುವವರು ಯಾರು ? ಪ್ರಶ್ನೆಗಳು ಒಂದೇ ? ಎರಡೇ ? ಸಾವಿರಾರು. ತಲೆಯಲ್ಲಿರುವ ಕೂದಲಿನಷ್ಟು ಅಸಂಖ್ಯಾತ ಪ್ರಶ್ನೆಗಳು. (ನನ್ನಂತಹ ಬೋಳು ತಲೆಯವರ ಕೂದಲು ಲೆಕ್ಕ ಹಾಕುವ ಹಾಗಿಲ್ಲ). ಈ ಜಟಿಲ ಸಮಸ್ಯೆಯ ಪರಿಹಾರಕ್ಕಾಗಿ ಆ ದಿನ ತ್ರಿಮೂರ್ತಿಗಳು ದೇವಲೋಕದಲ್ಲಿ ಸಭೆ ಸೇರಿದ್ದರು.

''ಬ್ರಹ್ಮ, ನೀನು ಎಲ್ಲರಿಗೂ ಸ್ವಲ್ಪವಾದರೂ ಬುದ್ಧಿ ಕೊಟ್ಟೆ. ಆದರೆ ಈ ತಲೆಬಾನು ರಾಜ್ಯದವರನ್ನು ಏಕೆ ಮರೆತೆ ?'' ವಿಷ್ಣು ಕೇಳಿದ.

''ಎಲ್ಲೋ ಏನೋ ಎಡವಟ್ಟಾಗಿರಬಹುದು.'' ಬ್ರಹ್ಮ ಹೇಳಿದ.

''ನನ್ನ ಮೂರನೇ ಕಣ್ಣು ಬಿಟ್ಟು ಈ ದೇಶವನ್ನೇ ನಾಶ ಮಾಡಿಬಿಡಲೇ?'' ಎಂದ ಶಿವ ಕೋಪಿಷ್ಟ.

''ಅಪ್ಪ ಶಿವು, ಇದು ಸಿಟ್ಟಿಗೆ ಸಮಯವಲ್ಲ. ಉಪಾಯದಿಂದ ಕೆಲಸ ಪೂರೈಸಬೇಕು. ಮಾಡಿದ ಪಾಪ ಅವರಿಗೆ ಎನ್ನುವ ಹಾಗೆ ನಾವು ಯಾರ ಬಗ್ಗೆಯೂ ನಿಂದನೆ ಮಾಡಬಾರದು.'' ಬ್ರಹ್ಮ ಸಮಾಧಾನಪಡಿಸಿದ.

''ಮುಂದೆ ಹೇಗೆ ?'' ಶಿವ ಕೇಳಿದ.

ಅಷ್ಟರಲ್ಲಿ ''ನಾರಾಯಣ, ನಾರಾಯಣ'' ಎಂದು ನಾರದ ಅದೇ ಪುರಾತನ ಕಾಲದ ತಂಬೂರಿಯ ತಂತಿ ಎಳೆಯುತ್ತಾ ಬಂದ. ''ಬನ್ನಿ ನಾರದರೆ, ನಿಮ್ಮನ್ನು ನಾವೇ ಕರೆಸಬೇಕೆಂದಿದ್ದೆವು.'' ವಿಷ್ಣುಗೆ ಏನೋ ಒಂದು ಥರ ಸಮಾಧಾನ.

''ನಿಮ್ಮ ಮನದಿಂಗಿತ ಅರಿತು ಬಂದೆ. ಹೇಳು ನನ್ನಿಂದ ಏನಾಗಬೇಕು ?'' ಮುಖದಲ್ಲಿ ಸದಾ ಮಂದಹಾಸ ನಾರದನಿಗೆ. ತ್ರಿಮೂರ್ತಿಗಳ ಕಷ್ಟ ಅವನಿಗೇನು ಅರ್ಥವಾಗಬೇಕು ?

''ತಲೆಬಾನು ರಾಜ್ಯದ ವಿಷಯ ಹೇಳು. ನೀನು ತ್ರಿಲೋಕ ಜ್ಞಾನಿ, ನಿನಗೆ ಗೊತ್ತಿಲ್ಲದ ವಿಷಯವೇ ಇಲ್ಲ.'' ಬ್ರಹ್ಮ ಪುಸಲಾಯಿಸಿದ. ಗಂಟಲು ಸರಿಪಡಿಸಿಕೊಂಡು, ಒಮ್ಮೆ ಕೆಮ್ಮಿ ಮಹರ್ಷಿ ಹೇಳಿದ,

''ತ್ರಿಮೂರ್ತಿಗಳೇ, ಕೇಳಿ, ಅದು ಬೆಟ್ಟ ಗುಡ್ಡ ಮತ್ತು ಮರುಭೂಮಿಯ ರಾಜ್ಯ. ಅಲ್ಲಿ ತಲೆಬಾನು ಸರ್ಕಾರವಿರುವುದರಿಂದ ಅದಕ್ಕೆ ತಲೆಬಾನು ರಾಜ್ಯ ಎನ್ನುತ್ತಾರೆ. ಬಹುತೇಕ ಜನರು ಅವಿದ್ಯಾವಂತರು. ಕುರಿ ಸಾಕಾಣಿಕೆ, ಕತ್ತೆ ಮೇಲೆ ಸವಾರಿ ಮಾಡುವುದನ್ನು ಅಲ್ಲಿ ಕಾಣಬಹುದು. ಅಲ್ಲಿ ಸ್ತ್ರೀಯರಿಗೆ ಸ್ವಾತಂತ್ರ್ಯವಿಲ್ಲ. ಜನ ಅತಿ ಕ್ರೂರಿಗಳು. ಈಗ ಅಲ್ಲಿ ಭೀಕರ ಯುದ್ಧ ನಡೆಯುತ್ತಿದೆ.'' ''ಹತ್ತಿ, ಶೇಂಗ, ಜೋಳ ಅಲ್ಲಿ ಬೆಳೆಯುತ್ತಿವೆಯೆ ?'' ಶಿವ ಕೇಳಿದ. ''ಎಲ್ಲಿಯ ಹತ್ತಿ, ಜೋಳ, ಶೇಂಗ. ಅಲ್ಲಿ ಬೆಳೆಯುವುದು ಅಫೀಮು ಮಾತ್ರ. ಬೆಳೆದು ಪಾಶ್ಚಿಮಾತ್ಯ ದೇಶಗಳಿಗೆ ರಫ್ತು ಮಾಡಿ ಹಣ ಸಂಪಾದಿಸುವುದೊಂದೇ ಅವರ ಕೆಲಸ.''

''ಅದೇನೋ ಯುದ್ಧವೆಂದೆಯಲ್ಲ. ಅದು ನಮ್ಮ ಗಮನಕ್ಕೂ ಬಂದಿದೆ. ಅದರ ಬಗ್ಗೆ ಹೆಚ್ಚು ಹೇಳು ?'' ವಿಷ್ಣು.

''ಅಮೆರಿಕ ಮತ್ತು ಇಂಗ್ಲೆಂಡ್ ಒಂದು ಕಡೆ, ತಲೆಬಾನು ಒಂದು ಕಡೆ. ಪ್ರತಿದಿನ ತಲೆಬಾನಿನ ಮೇಲೆ ಅದರ ಶತ್ರುಗಳು ಪಟಾಕಿ ಹಾರಿಸುತ್ತಾರೆ. ಅವು ಎಂತಹ ಪಟಾಕಿಗಳೆಂದರೆ ಅದರಿಂದ ಭೂಮಿ ತಲ್ಲಣಗೊಳ್ಳುತ್ತದೆ. ಗುಡ್ಡ ಬೆಟ್ಟ ಕುಸಿದುಬೀಳುತ್ತವೆ. ಈ ಪಟಾಕಿಗಳು ಜನರನ್ನು ಕೊಲ್ಲುತ್ತವೆ. ಇಂತಹ ಪಟಾಕಿಗಳನ್ನು ನಾನು ನೋಡೇ ಇಲ್ಲ. ಪ್ರಾಣ ಉಳಿಸಿಕೊಳ್ಳಲು ಪ್ರಜೆಗಳು ಪಕ್ಕದ ದೇಶಗಳಿಗೆ ತಾನು ಮುಂದೆ, ನಾನು ಮುಂದೆ ಎಂದು ನುಗ್ಗುತ್ತಿದ್ದಾರೆ. ಇದುವರೆಗೂ ಯಾವ ದೀಪಾವಳಿ ಹಬ್ಬದಲ್ಲೂ ಈ ರೀತಿ ಪಟಾಕಿ ಸುಟ್ಟಿರುವುದನ್ನು ನಾವ್ಯಾರೂ ನೋಡೇ ಇಲ್ಲ.''

''ತಲೆಬಾನು ರಾಜ್ಯದಲ್ಲಿ ಭಾರತೀಯರು ಇದ್ದಾರಂತೆ , ಹೌದೆ ?''

''ಅಹುದಹುದು, ಸ್ವಲ್ಪ ಸಂಖ್ಯೆಯಲ್ಲಿದ್ದಾರೆ.''

''ಪಾಪ, ಅವರ ಪಾಡು ಏನೋ ?''

''ನನಗೂ ಅವರ ಬಗ್ಗೆ ಅಷ್ಟು ಗೊತ್ತಿಲ್ಲ.''

''ಅವರನ್ನು ನಾವು ಉಪಾಯದಿಂದ ಭಾರತಕ್ಕೆ ಕರೆತರುವುದು ನಮ್ಮ ಇಮ್ಮಿಡಿಯೆಟ್ ಮಿಷನ್.''

''ಒಳ್ಳೆಯದು, ಅದನ್ನು ಮಾಡಲು ಯಾರಿಂದಲೂ ಆಗದು. ನೀವು ಮೂವರೂ ಹೋಗಬೇಕು.''

''ನೀನೂ ಬಾ.'' ಬ್ರಹ್ಮ ಆಮಂತ್ರಣ ಕೊಟ್ಟ.

''ಅಯ್ಯೋ ! ನಾನೂ ನಿಮ್ಮ ಜೊತೆ ಬರುತ್ತಿದ್ದೆ. ಆದರೆ ನನಗೆ ಜರೂರು ಕೆಲಸವಿದೆ. ಸದ್ಯಕ್ಕೆ ನೀವು ಮೂವರೂ ಹೋಗಿಬನ್ನಿ. ಮುಂದಿನ ಸಲ ನಾನು ಖಂಡಿತ ಬರುತ್ತೇನೆ.'' ಋಷಿ ಸಬೂಬು ಹೇಳಿ ಅಲ್ಲಿಂದ ಕಂಬಿಕಿತ್ತ.

ಆ ದಿನವೆಲ್ಲ ವಿಶ್ರಾಂತಿ ತೆಗೆದುಕೊಂಡ ತ್ರಿಮೂರ್ತಿಗಳು ಮರುದಿನ ಮೊದಲನೇ ಬಸ್ಸಿನಲ್ಲಿ ತಲೆಬಾನು ರಾಜ್ಯ ತಲುಪಿದರು. ಮನೆಗಳು ಯುದ್ಧದ ಪ್ರಯುಕ್ತ ನೆಲಸಮವಾಗಿದ್ದವು. ನೀರು, ಆಹಾರದ ಕೊರತೆ ಯಥೇಚ್ಛವಾಗಿತ್ತು. ಎಲ್ಲೆಂದರಲ್ಲಿ ಧೂಳು. ಆದರೂ ಅಲ್ಲಿನ ಜನತೆ ಧೈರ್ಯವಾಗಿದ್ದರು. ಏನೂ ಆಗಿಲ್ಲವೆನ್ನುವ ಹಾಗೆ, ಪ್ರಾರಬ್ಧ ಪ್ರತಿದಿನ ಇದ್ದದ್ದೇ ಎನ್ನುವ ಹಾಗಿದ್ದರು. ಇವರ ಧೈರ್ಯ ತ್ರಿಮೂರ್ತಿಗಳಿಗೆ ಮೆಚ್ಚುಗೆ ತಂದಿತು. ಗಂಡಸರೆಂದರೆ ಹೀಗಿರಬೇಕು, ಇವರು ಸಿಂಹದ ಮರಿಗಳು ಎಂದು ಯೋಚಿಸಿದರು. ಸಿಂಹದ ಮರಿ ನೆನಪಿಗೆ ಬಂದ

ತಕ್ಷಣ 'ಸಿಂಹದ ಮರಿ ಸೈನ್ಯ'ದ ನಾಯಕ ಶಿವರಾಜಕುಮಾರ್ ಸಹ ನೆನಪಿಗೆ ಬಂದರು. ಮುಗಿಲಲ್ಲಿ ದೊಡ್ಡ ಶಬ್ದವಾಯಿತು. ಕತ್ತೆತ್ತಿ ನೋಡಿದರು. ಅನೇಕ ಉಕ್ಕಿನ ಹದ್ದುಗಳು ಅತಿ ವೇಗವಾಗಿ ಹಾರಾಡುತ್ತಿದ್ದವು. ಇವರಿಗೆ ಆಶ್ಚರ್ಯ ! ಇಂತಹ ಹದ್ದುಗಳನ್ನು ಇವರು ಎಂದೂ ನೋಡಿರಲಿಲ್ಲ. ಮೇಲೆ ನೋಡುತ್ತ ನಿಂತಿರುವಾಗ ಹದ್ದುಗಳ ಹೊಟ್ಟೆಯಿಂದ ಅನೇಕ ಉಕ್ಕಿನ ತುಂಡುಗಳು ಮನೆಗಳ ಮೇಲೆ ಬಿದ್ದು ತಕ್ಷಣ ಮನೆ ಹತ್ತಿ ಉರಿದವು. ಮತ್ತೊಮ್ಮೆ ಆಶ್ಚರ್ಯ !! ಹತ್ತಿರವಿದ್ದ ಬೆಟ್ಟದ ಮೇಲೆ ಹತ್ತಿದರು. ದೃಶ್ಯ ಅಮೋಘವಾಗಿರುತ್ತದೆಂದು. ಮತ್ತೊಂದು ಹದ್ದುಗಳ ತಂಡ, ಮತ್ತೊಮ್ಮೆ ಕಬ್ಬಿಣದ ತುಂಡುಗಳ ಮಳೆ. ಒಂದು ತುಂಡು ಇವರ ಹತ್ತಿರವೇ ಬಿದ್ದು ಭೂಮಿ ನಡುಗಿತು. ಬೆಂಕಿ ಬೆರೆತ ದೂಳು ಆಕಾಶದತ್ತ ಸಾಗರದಂತೆ ನುಗ್ಗಿತು. ಈಗ ತ್ರಿಮೂರ್ತಿಗಳು ಭಯ ಪಟ್ಟರು. ನಾರದನ ಎಚ್ಚರಿಕೆಯನ್ನು ನೆನಪಿಸಿಕೊಳ್ಳದೆ ಇರಲಿಲ್ಲ. ಓಡುತ್ತಾ ಪಕ್ಕದ ಊರು ಸೇರಿದರು. ರಾತ್ರಿಯಾಗಿತ್ತು, ಬರಿದಾದ ಒಂದು ಮುರುಕು ಮನೆಯಲ್ಲಿ ತಂಗಿದರು. ಮನೆಯಲ್ಲಿ ಯಾರೂ ಇಲ್ಲದಿದ್ದುದು ಇವರಿಗೆ ಅನುಕೂಲವೇ ಆಗಿತ್ತು. ರಾತ್ರಿ ಅತಿಯಾದ ಬಿರುಗಾಳಿ ಯಿಂದ ಮರುಭೂಮಿಯ ಮರಳು ಇವರ ಮೂಗು, ಬಾಯಿ, ಕಣ್ಣುಗಳಲ್ಲಿ ನುಸುಳಿದವು. ಆದರೂ ಧೈರ್ಯ ಗೆಡಲಿಲ್ಲ, ಬಂದ ಕೆಲಸ ಪೂರೈಸುವುದು ಮುಖ್ಯವಾಗಿತ್ತು. ಬೆಳಗ್ಗೆ ಎದ್ದಾಗ ಪಟಾಕಿಗಳ ಸದ್ದಿರಲಿಲ್ಲ. ಮೇಲೆ ನೋಡಿದರು. ಉಕ್ಕಿನ ಹದ್ದುಗಳಲ್ಲದೆ ಮಾಮೂಲು ಹದ್ದು ಹಾರಾಡುತ್ತಿದ್ದವು. ತ್ರಿಮೂರ್ತಿಗಳು ಮಾಮೂಲು ನಾಪಿತನಿಗೆ ಟೈಫಾಯ್ಡ್ ಜ್ವರ ಬಂದುದ್ದರಿಂದ ಹೇರ್‌ಕಟ್ ಇಲ್ಲದೆ ಕೂದಲು ಭುಜದವರೆಗೆ ಬಂದಿತ್ತು. ಅದನ್ನು ಹಾಗೇ ಬಿಡಲು ಇವರೇನು ಭೂಲೋಕದ ಹಿಪ್ಪಿಗಳೇ ? ಕ್ಷೌರಿಕನ ಬೇಟೆಗೆ ಬೀದಿ ಬೀದಿ ಅಲೆದಾಡಿದರು. ಎಲ್ಲೂ ಕ್ಷೌರಿಕನ ಅಂಗಡಿ ಕಂಡುಬರಲಿಲ್ಲ, ಒಬ್ಬನನ್ನು ವಿಚಾರಿಸಿದರು. ಉತ್ತರ ಬಂತು. 'ತಲೆಬಾನು ರಾಜ್ಯದಲ್ಲಿ ಕ್ಷೌರಿಕರಿಲ್ಲವೇ ಇಲ್ಲ. ಕಾರಣ ಈ ರಾಜ್ಯದ ಪ್ರಜೆಗಳು ತಲೆಗೂದಲು ಮುಖಕ್ಷೌರ ಮಾಡಿಸಿಕೊಳ್ಳಬಾರದೆಂದು ದೊಡ್ಡವರಿಂದ ಹುಕುಂ ಆಗಿದೆ. ನೀ ಯಾರೋ ನನಗೆ ಗೊತ್ತಿಲ್ಲ. ನಿಮಗೆ ಸದ್ಯದಲ್ಲಿ ತೊಂದರೆಯಾಗಬಹುದು' ಎನ್ನುತ್ತಿದ್ದಂತೆ ಎಲ್ಲಿಂದಲೋ ಏಳೆಂಟು ಜನ ಇವರತ್ತ ಧಾವಿಸಿ ಬಂದರು. ಅವರಲ್ಲಿ ಎಂಬತ್ತು ವರ್ಷದ ಮುದುಕನಿಂದ ಹತ್ತು ವರ್ಷದ ಮಗುವಿನ ತನಕ ವಯಸ್ಸಿನವರಿದ್ದರು. ಎಲ್ಲರ ಕೈಲೂ ಕೋವಿ ಇತ್ತು.

''ನೀವು ಯಾರು ?'' ಮುದುಕನೊಬ್ಬ ಕೇಳಿದ.

''ನಾವು ತ್ರಿಮೂರ್ತಿಗಳು.''

''ಯಾವ ತಿರುಮೂರ್ತಿಗಳು?''

''ನಿಮಗೆ ತಿಳಿಯದೆ ?''

''ಬಾಯಿ ಮುಚ್ಚಿ ಕೇಳಿ, ನಾವು ಧಾರ್ಮಿಕ ಸೈನಿಕರು, ನಿಮ್ಮ ಗಡ್ಡ ಮೀಸೆ ಎಲ್ಲಿ ?''

''ನಾವು ಪ್ರತಿದಿನ ಶೇವ್ ಮಾಡಿಕೊಳ್ಳುತ್ತೇವೆ.''

''ನಿಮ್ಮನ್ನು ದೇಶದ್ರೋಹಿಗಳೆಂದು ಪರಿಗಣಿಸ ಲಾಗುತ್ತದೆ. ನಿಮ್ಮನ್ನು ದಸ್ತಗಿರಿ ಮಾಡುತ್ತಿದ್ದೇವೆ.''

''ಛಾರ್ಜಸ್ ಏನು ?''

''ಮುಖದ ಮೇಲೆ ಕೂದಲಿಲ್ಲದಿರುವುದು ಮತ್ತು ಕೂದಲು ಚೆನ್ನಾಗಿ ಕತ್ತರಿಸಿಕೊಳ್ಳಲು ಈಗ ಹಜಾಮನನ್ನು ಹುಡುಕುತ್ತಿರುವುದು. ಜೊತೆಗೆ ಅದಿರಲಿ, ಇಲ್ಲಿ ನಿಮ್ಮ ಕೈಗಳಲ್ಲಿರುವುದೇನು ?'' ಹೊತ್ತ ಬಂದೂಕಿಗಿಂತ ಗಿಡ್ಡನಿದ್ದ ಹುಡುಗ ಕೇಳಿದ.

''ಇವು ನಮ್ಮ ಅಸ್ತ್ರಗಳು. ತ್ರಿಶೂಲ, ಶಂಕು, ಚಕ್ರ.''

ಹುಡುಗ ಸೈನಿಕ ತನಗೆ ಆಟಕ್ಕೆ ಅವು ಬೇಕೇ ಬೇಕೆಂದು ಮುದುಕ ನಾಯಕನ ಅಪ್ಪಣೆ ಪಡೆದು ತನ್ನ ವಶಪಡಿಸಿಕೊಂಡ. ತ್ರಿಮೂರ್ತಿಗಳು ನಿರ್ವಸ್ತ್ರರಾದರು. ಇವರನ್ನು ಒಂದು ಬೆಟ್ಟದ ತಳದಲ್ಲಿರುವ ಗುಹೆಯಲ್ಲಿ ದಸ್ತಗಿರಿ ಮಾಡಿಟ್ಟರು. ಯಾರನ್ನೋ ಬಿಡಿಸಿಕೊಂಡು ಬರಲು ಹೋದ ಇವರೇ ಖೈದಿಗಳಾದರು. ರಾತ್ರಿ ಎಲ್ಲರೂ ಮಲಗಿರುವ ಸಮಯವನ್ನು ಸದುಪಯೋಗಪಡಿಸಿಕೊಂಡ ಶಿವ ತನ್ನ ಮೊಬೈಲ್‌ನಿಂದ ಮಗನಿಗೆ ಫೋನ್ ಮಾಡಿದ. ಅತ್ತ ಕಡೆಯಿಂದ 'ಹಲೋ' ಎಂದ ತಕ್ಷಣ ಮೊಬೈಲ್‌ನಲ್ಲಿ ಪಿಸು ಮಾತಾಡಿದ, ''ಮಗು ಗಣಪ, ವಿಘ್ನೇಶ, ವಿಜ್ಜು, ನಾವು ಈಗ ತೊಂದರೆಯಲ್ಲಿದ್ದೇವೆ ನಮಗೆ ನಿನ್ನ ಸಹಾಯ ಅಗತ್ಯವಾಗಿ ಬೇಕಾಗಿದೆ.''

''ಯೋಚಿಸಬೇಡಿ ಡ್ಯಾಡಿ, ನಾನೀಗಲೇ ಬರುತ್ತಿದ್ದೇನೆ.''

ಗಣಪತಿ ತಲೆಬಾನು ರಾಜ್ಯ ಪ್ರವೇಶಿಸಿದ. ಅದೇ ಸಮಯಕ್ಕೆ ಸರಿಯಾಗಿ ಬಾಂಬ್ ಹಾಕುತ್ತಿದ್ದ ದೇಶಗಳವರೇ ಊಟದ ಪೊಟ್ಟಣ ಸಹ ಆಕಾಶದಿಂದ ಭೂಮಿಗೆ ಎಸೆಯುತ್ತಿದ್ದರು. ಜನಗಳು ಅವನ್ನು ಹಸಿದಿದ್ದರೂ ಮುಟ್ಟಲಿಲ್ಲ, ಕಾರಣ ಕೇಳಲು, ಅವರು 'ಏನು ಹೇಳುವುದು ? ಅವನ್ನು ತಿನ್ನಲು ಮನಸ್ಸಿಲ್ಲ. ಅದಕ್ಕೇನು ಖಾರ, ಉಪ್ಪು ಏನೂ ಇಲ್ಲ' ಎಂದರು. ತನ್ನ ಜೋಳಿಗೆಯಿಂದ ಗಣಪತಿ ಖಾರ, ಉಪ್ಪು, ತಿನಿಸುಗಳ ಮೇಲೆ ಚಿಮುಕಿಸಿದ. ಎಲ್ಲರೂ ಊಟ ಸವಿದು ಸಂತೃಪ್ತರಾದರು. ಜನಗಳ ಮನ ಗೆದ್ದ ಗಣಪತಿಗೆ ತ್ರಿಮೂರ್ತಿಗಳನ್ನು ಪತ್ತೆಹಚ್ಚುವುದು ಕಷ್ಟವಾಗಲಿಲ್ಲ. ಗುಹೆ ನುಗ್ಗಿ 'ಹಾಯ್ ಡ್ಯಾಡ್' ಎಂದು ತಂದೆಗೂ 'ಹಲೋ ಅಂಕಲ್' ಎಂದು ಇತರರಿಗೂ ವಂದಿಸಿದ. ಉಪ್ಪು ಖಾರ ಕೊಟ್ಟು ತ್ರಿಮೂರ್ತಿಗಳ ಅಸ್ತ್ರಗಳನ್ನು ವಶಪಡಿಸಿಕೊಂಡ. ಭಾರತದ ಬುಡಕಟ್ಟಿನ ಸರ್ದಾರಜಿ 'ನಿತ್ರಾಣ ಸಿಂಗ'ನ ಸಹಕಾರದಿಂದ ಭಾರತದವರನ್ನೆಲ್ಲಾ ಒಟ್ಟು ಮಾಡಿಕೊಂಡು, ತ್ರಿಮೂರ್ತಿಗಳೂ ಸೇರಿದಂತೆ ಭಾರತಕ್ಕೆ ಕ್ಷೇಮವಾಗಿ ವಾಪಸಾದ.

ತ್ರಿಮೂರ್ತಿಗಳಿಗೆ ಒಂದೂ ಅರ್ಥವಾಗಲಿಲ್ಲ. ಗಣಪನನ್ನು ಕೇಳಿದರು : ''ಗಣಪ, ಮಗು, ತಲೆಬಾನು ರಾಜ್ಯದಲ್ಲಿ ಕೂದಲು ಕತ್ತರಿಸಿಕೊಳ್ಳಬಾರದೆಂದು ಯಾಕೆ ಸರ್ಕಾರ ಅಪ್ಪಣೆ ಮಾಡಿದೆ ?''

''ತಲೆಗೂದಲೇನು ? ಉಗುರನ್ನೂ ಕತ್ತರಿಸಿಕೊಳ್ಳ ಬಾರದೆಂದು ಸರ್ಕಾರದ ಅಪ್ಪಣೆ ಇದೆ. ಸರಿಯಾದ ಕಾರಣ ನನಗೆ ತಿಳಿಯದು. ಆದರೆ ಊಹಿಸಬಲ್ಲೆ. ಇವು ಪ್ರಜೆಯ ವೈಯಕ್ತಿಕ ಆಸ್ತಿಯಾದುದರಿಂದ ಅವುಗಳನ್ನು ಕಳೆದುಕೊಳ್ಳದೆ ಕಾಪಾಡಿಕೊಳ್ಳಬೇಕೆಂಬುದಿರಬೇಕು.''

''ನನಗೂ ಹಾಗೇ ಅನ್ನಿಸುತ್ತದೆ.'' ತ್ರಿಮೂರ್ತಿಗಳು ಒಟ್ಟನಲ್ಲಿ ತಮ್ಮ ಅಭಿಪ್ರಾಯ ತಿಳಿಸಿದರು. ಈಗ ಅವರಿಗೆ ನೆನಪು ಬಂತು. ತಲೆಬಾನು ರಾಜ್ಯದ ಪ್ರಜೆಗಳ ಉಗುರುಗಳು ಬಾಚಿಯಂತೆ ಇರುವುದನ್ನು ತಾವು ನೋಡಿದ್ದು.

ತಲೆ ಬಾಗಿದರೂ ತಲೆಬಾನು ರಾಜ್ಯಕ್ಕೆ ಕಾಲಿಡಬಾರದೆಂದು ನಾರದ ತ್ರಿಮೂರ್ತಿಗಳಿಗೆ ಸಲಹೆ ಕೊಟ್ಟ. ಎಲ್ಲರೂ ಗಣಪನನ್ನು ಹೊಗಳುವವರೇ.

''ಗಣಪತೀ ಕಿ ಜೈ !''

ಡಾ|| ಜಿ. ಎಸ್. ಪಾಲಾಕ್ಷ
ಮನೋರೋಗ ತಜ್ಞ, ಎಚ್. ಎ. ಎಲ್. ಆಸ್ಪತ್ರೆ
ಬೆಂಗಳೂರು - ೫೬೦ ೦೧೭

# ಬಿತ್ತನೆ

ಬದುಕಿನ ಬೇಗುದಿಯ ಧಗೆಗೆ
ಒಣಗಿ ಒಳಗೊಳಗೇ ಒರಟಾಗಿ
ಗಾರುಗಾರಾಗಿ ಬಿರುಕು ಬಿಡುತ
ಬಿಡಿಬಿಡಿಯಾಗಿ ಮೂಲಬಂಧವ
ಹರಿದು ಪುಡಿಪುಡಿಯಾಗಿ
ಧೂಳಾಗಲು ಧೈರ್ಯ ಸಾಲದೆ
ಏದುಸಿರು ಬಿಡುವ ಹಂತದಲ್ಲಿದ್ದ
ಪುಟ್ಟ ಪುಟ್ಟ ಆಸೆ ಹೊತ್ತ
ಪುಟಾಣಿ ಕನಸುಗಳು

ಆಗಸದಲ್ಲೆಲ್ಲೊ ಆಡಿದವು
ಓಡಿದವು ಕಾರ್ಮೋಡದ
ಕುದುರೆಗಳು - ಆಡುತ್ತ
ಓಡುತ್ತ ಚದುರುತ್ತ ಗುಡುಗುತ್ತ
ಮಿಂಚು ಗೊಂಚಲು ನೀರಾಗಿ
ಸುರಿಯಿತು ಮುಸಲಧಾರೆ
ನವಿರಾಗಿ ನಕ್ಕು ಬದುಕಿನ
ಸುಳುಹಾಗಿ ಸುರಿದ
ಶ್ರಾವಣದ ಸೋನೆ–

ಮುಂಗಾರ ಸಂಗೀತಕ್ಕೆ ತನಿ
ಮೇಘರಾಜನ ಧ್ವನಿ
ತಂಪು ತಂಪಾಗಿ ತೊಟ್ಟಿಕ್ಕಿದ
ಶ್ರಾವಣದ ಹನಿ

ಒಮ್ಮೆಲೇ ಭೋರೆಂದು
ಸುರಿಯದೆ ನಡುನಡುವೆ
ಜಟಿಜಿಟಿ ಜಿನುಗಿನ ಜಿಪುಣತನ
ಮಣ್ಣೊಂದಿಗೆ ಮುಗಿಲ ಹೊಸತನ

ವರ್ಷಾಸೋನೆಗೆ ನೆನೆದು ನಗುವ
ಹಸಿರ-ವರ್ತಮಾನದ ಉಸಿರ
ಭವಿಷ್ಯ ಬದುಕಿನ ಬಸಿರೊಂದಿಗೆ
ಬೆಸೆವ ಬಿತ್ತನೆಯ ಕಾಲ

ಸಲಿಲಧಾರೆಯ ಹೀರಿ
ಪುಷ್ಟಿಯಾಗುವ ಪುಟಿದು
ಹಾರುವ ಕಿಲಕಿಲನೆ ನಗುವ
ಕಲರವ ಮಾಡುವ
ಕಣ್‌ಕಣ್ ಬಿಟ್ಟು ಕಥೆ ಹೇಳುವ
ಕಾವ್ಯ ಹಾಡುವ
ಹೊಕ್ಕುಳ ಹೊಂಡಕ್ಕೆ ಕಚಗುಳಿಯಿಡುವ

ಕಳ್ಳ ಕನಸುಗಳು –
ಹರಿದು ಹಂಚಿ ಹೋದವುಗಳೆಲ್ಲ
ಮತ್ತೆ ಒಂದಾಗಿ ಒತ್ತಾಗಿ



ಹೊಸ ಬಿತ್ತನೆಗೆ ಬಿಚ್ಚಿಕೊಳ್ಳುವ
ಹದ ಶ್ರಾವಣದ ಮುದ

ಒದ್ದಾಟ ಗುದ್ದಾಟ
ಜೀವಸೃಷ್ಟಿಯ ಆಟ
ನೋವ ಮರೆಸುವ ಹೂಟ
ಹಸಿರು ಹಚ್ಚಡದ ಮರೆ
ಯಲ್ಲಿ ಸೆಜ್ಜೆಮನೆಯ
ವಧುವಂತೆ ಲಜ್ಜೆಯಿಂದ
ನಗುವ ತುಂಟಾಟ
ಒಣಗಿ ಬಾಡಿದ ಭಾವಲಹರಿಯ
ಒದ್ದೆ ಹೆಜ್ಜೆಯ ಓಡಾಟ
ಶ್ರಾವಣದ ನೋಟ

ಶ್ರಾವಣದ ಭಾರಕ್ಕೆ ಬಾಗಿತ್ತು
ಮರದ ಶಿರ - ಹೊತ್ತು ಹೂಭಾರ

ಗೆಲ್ಲುಗೆಲ್ಲಿನ ಗಲ್ಲದಲ್ಲೂ ಪಲ್ಲವಿಸಿ
ಬಿತ್ತುತ್ತ ಪ್ರೀತಿ ಪ್ರೇಮದ ಭಾವ
ಬಿರಿದಿತ್ತು ಬೋಗನ್‌ವಿಲ್ಲಾ

ಅಲ್ಲಲ್ಲಿ ಹಸಿರು ಬೇಲಿಗಳಲ್ಲಿ
ಹುಲ್ಲು ಹಾಸುಗಳಲ್ಲಿ
ಕಲ್ಲು ಹೃದಯದಲ್ಲೂ
ಕವಿತೆ ಮೂಡಿಸಿ ಕಿಸಕ್ಕನೆ
ನಗುತಿತ್ತು ಮಲ್ಲಿಗೆ
ಜೊತೆಗೆ ಸಂಪಿಗೆ
ಸೇವಂತಿಗೆ ಜಾಜಿ-ಸಡಿಲವಾಗುವ
ಸಂಬಂಧಗಳೊಂದಿಗೆ ರಾಜಿ –
ಸಪ್ತಪದಿ ತುಳಿದು ಸಂಗಾತಿಯಾದೆ
ಸಾಂಗತ್ಯಕ್ಕೊಂದು ಸ್ವಪ್ನನೆಯ
ಶಿಶುವಾಗಿ ಬಂತದೊ ನೋಡು
ಶ್ರಾವಣ-

ನೀರು ನೀರಾಗಿ - ನೇರಾಗಿ ಸೇರಿ
ಕೆರೆಕಟ್ಟೆ ಬಾವಿಗಳ ಬಡಿದು
ಬರಸಿಡಿಲಾಗಿ ಬಂಜರು ನೆಲವ
ಬಂತು ನೆರೆಕಾಲ - ಸೊಕ್ಕಿನ
ನೀರಿನ ಸಿರಿಕಾಲ - ಶ್ರಾವಣದ ಕಾಲ

ಬದುಕ ಹಸನಿಸಿ ಹಸೆಮಣೆಗೆ
ಕರೆದು ಹಸ್ತಲಾಘವ ಕೊಟ್ಟು
ಸುಂದರ ಸ್ವಪ್ನ ಕುಟೀರ ಕಟ್ಟುವ
ಹುಚ್ಚು ಹರಯದ ಕಾಲ

ಆದರೂ ಒಮ್ಮೊಮ್ಮೆ ಭರವಸೆಯ
ಹುಸಿಗೊಳಿಸುವ ಬಿಸಿಲ ಝಳ
ಮಂಕಾದ ಹೃದಯಕ್ಕೆ ಜೊಂಪು
ಹತ್ತಿಸಿ - ಹಾಸಿಗೆಗೆ ನೂಕಿ
ಹೊಸಿಲ ಹೊರಗೇ ನಿಂತುಬಿಡುವ
ಕಳವಳ - ಹಸನಾಗಿಲ್ಲ ಬಿತ್ತನೆಗೆ ಕಾಲ

ಶ್ರಾವಣದ ಶತ್ರುಗಳ ಕೋವಿಯ
ಬಾಯಿಂದ ಸುರಿದ ಬೆಂಕಿಯ ಮಳೆ
ಚರಂಡಿಯಲ್ಲಿ ಮೇರೆ ಮೀರಿದ ನೆರೆ
ಗಡಿಯಿಂದೀಚೆ ಹರಿದ ಕಣ್ಣೀರ
ಹೊಳೆ –

ಗಡಿಯಾಚೆ ಮಿಂಚಿದ ಭೂತ
ಗಡಿಯೊಳಗೆ ಗುಡುಗಿ
ಸುರಿದ ಅಗ್ನಿಯ ಮಳೆ
ಯಾವ ಆಷಾಢಭೂತಿ
ಭ್ರೂಣದ ಬಿತ್ತನೆಗೊ

ವಿಜಯಲಕ್ಷ್ಮಿ ಶ್ಯಾನುಭೋಗ್
ಗ್ರೀನ್‌ಫೀಲ್ಡ್, ರಾಮದಾಸನಗರ ಅಂಚೆ.
ಕಾಸರಗೋಡು-೬೭೧೧೨೫, ಕೇರಳ

# ಆ ಎರಡು ರೂಪಾಯಿ

**ಕ**ಡಲೇಗಿಡ ಮಾರುವ ದಶರಥನನ್ನು ನಾನು ಹುಡುಕ ತೊಡಗಿ ತಿಂಗಳುಗಳೇ ಕಳೆದವು. ಅವನನ್ನು ನಾನು ಹುಡುಕುತ್ತಿರುವುದು ಅವನಿಂದ ಮತ್ತೆ ಕಡಲೇಗಿಡ ಕೊಳ್ಳಲಿಕ್ಕೆ ಅಲ್ಲ; ಅವನ್ನು ಬೇರೆಯವರಿಂದ ಕೊಳ್ಳಲೂ ಬಹುದು. ಹಾಲಿನ ಗೌಳಿ ಮುಂಗಡ ತೆಗೆದುಕೊಂಡು ಪರಾರಿಯಾದಂತೆ ಪಾಪ, ದಶರಥನೇನೂ ನನಗೆ ಮೋಸ ಮಾಡಿ ಓಡಿಹೋಗಿಲ್ಲ. ಹಾಗೆ ನೋಡಿದರೆ ನಾನೇ ಅವನಿಗೆ ಮೋಸ ಮಾಡಿದೆನೆಂದು ಹೇಳಬಹುದು. ಆದರೆ ಅವನಿಗೆ ನಾನು ನಿಜವಾಗಿಯೂ ಮೋಸ ಮಾಡಿಲ್ಲ. ಮೋಸ ಮಾಡುವ ವಿಚಾರವೂ ನನ್ನ ತಲೆಯಲ್ಲಿಲ್ಲ. ನಾನು ಅಷ್ಟು ಉದ್ದ ನೀರಿನವನು ಅಲ್ಲವೇ ಅಲ್ಲ! ಮೋಸವನ್ನೇ ಮಾಡಬೇಕೆಂದರೆ ಕಡಲೇಗಿಡ ಮಾರಿ ಹೊಟ್ಟೆ ತುಂಬಿ ಕೊಳ್ಳುವ ಆ ಬಡವನಿಗೆ ಯಾಕೆ ಮೋಸ ಮಾಡಬೇಕು? ಅದೂ ಎರಡು ರೂಪಾಯಿಯ ಸಲುವಾಗಿ?

ಅದೇನಾಯಿತೆಂದರೆ, ಅಂದು ಬಹುಶಃ ಅಮಾವಾಸ್ಯೆ ಇರಬಹುದು. ಯಾಕೆಂದರೆ ನನ್ನ ಶ್ರೀಮತಿ ಹೇಳುವಂತೆ ನಾನು ಹುಣ್ಣಿಮೆಗೊಮ್ಮೆ, ಅಮಾವಾಸ್ಯೆಗೊಮ್ಮೆ ಮಾತ್ರ ಸಾಯಂಕಾಲ walking ಹೋಗುವುದು. ಅಂದು ಹುಣ್ಣಿಮೆ ಇರಲಿಲ್ಲ, ಆದಕ್ಕೇ ಅಮಾವಾಸ್ಯೆ ಇರಬಹುದು ಎಂದೆ. ನಾನು ಅಂದು ಸಾಯಂಕಾಲ ನಮ್ಮ ಊರಿನಲ್ಲಿರುವ ಗಾರ್ಡನ್ ಕಡೆಗೆ ತಿರುಗಾಡಲು ಹೋಗಿದ್ದೆ. ನಮ್ಮೂರ ಗಾರ್ಡನ್ ಬೆಂಗಳೂರಿನ ಕಬ್ಬನ್ ಪಾರ್ಕನಂಥದೇನಲ್ಲ. ಅದರ ಬಗ್ಗೆ ಬರೆದರೆ ಅದೇ ಒಂದು ಪ್ರಬಂಧವಾಗ ಬಹುದು; ಸುಮ್ಮನೆ ಹೆಸರಿಗೊಂದು ಗಾರ್ಡನ್. ನಮ್ಮ ಊರಿನ ನಿವೃತ್ತರಲ್ಲಿ ಹಲವರು ಅಲ್ಲಿ ಮುಂಜಾನೆ ಮತ್ತು ಸಾಯಂಕಾಲ ಕುಳಿತು ಹರಟೆ ಹೊಡೆದು ವೇಳೆ ಕಳೆಯುತ್ತಾರೆ. ನಾನೂ ನಿವೃತ್ತನೇ; ಆದರೆ ನಾನು ಅವರ ಹರಟೆಯ ಗುಂಪಿನಲ್ಲಿ ಸೇರಿಲ್ಲ. ಅಲ್ಲೇ ಎರಡು ಮೂರು ಸುತ್ತು ಹಾಕಿಬಿಟ್ಟು ನೇರವಾಗಿ ಮನೆಗೆ ಬರುವುದು ನನ್ನ ರೂಢಿ.

ಅಂದು ಏನಾಯಿತೆಂದರೆ ಅಲ್ಲಿರುವ ಚಿಕ್ಕ ನಾಲೆಯ ಕಟ್ಟೆಯ ಮೇಲೆ ಒಬ್ಬ ಕಡಲೇಗಿಡಗಳನ್ನು ಮಾರುತ್ತ ಕುಳಿತಿದ್ದ. ಸಮೀಪ ಹೋಗಿ ನೋಡಿದೆ. ಕಾಳು ತುಂಬಿದ್ದರೂ ಇನ್ನೂ ಬಲಿತಿರದ ಹಸಿರು ಹಸಿರಾದ ಎಳೆಯ ಕಡಲೆಯ ಬುಡ್ಡಿಗಳು. ನನ್ನನ್ನು ಕಂಡಕೂಡಲೇ ಅವನು, ''ತಗೋರಿ ಸಾಬರ ತಾಜಾ ಸುಲಗಾಯಿ'' ಎಂದ. ಅವು ನಿಜವಾಗಿಯೂ ಚೆನ್ನಾಗಿದ್ದವು. ನನ್ನ ಪುಟ್ಟ ಮೊಮ್ಮಗಳಿಗೆ ಕಡಲೇಗಿಡ ಬಲು ಪ್ರೀತಿ. ಮನೆಯ ಮುಂದೆ ಮಾರಲು ಬಂದ ಬಲಿತ ಮತ್ತು ಬಾಡಿಹೋದುವುಗಳನ್ನೇ ತಿನ್ನುವ ಅವಳಿಗೆ ಇವನ್ನು ಒಯ್ದು ಕೊಟ್ಟು surprise ಮಾಡೋಣ ಎನ್ನಿಸಿ, ''ಎರಡು ರೂಪಾಯಿಯ ಗಿಡ ಕೊಡಪಾ'' ಎಂದೆ. ಅವನಿಂದ ಕಡಲೇಗಿಡ ತೆಗೆದುಕೊಂಡು ಜೇಬಿನಲ್ಲಿದ್ದ ಐದರ ನೋಟನ್ನು ಕೊಟ್ಟೆ. ''ಚಿಲ್ಲರೆ ಇಲ್ಲರಿ ಸಾಬರೇ'' ಎಂದ. ನನ್ನ ಹತ್ತಿರವೂ ಇರಲಿಲ್ಲ. ''ಐದು ರೂಪಾಯ ಕಾಯಿ ಒಯ್ಯಿರಿ. ಛಲೋ ಅವ ನೋಡ್ರಿ'' ಎಂದ. ''ಹೌದು, ಛಲೋ ಅದವಪ್ಪಾ. ಆದರ ನಮ್ಮ ಮನ್ಯಾಗ ನನ್ನ ಮೊಮ್ಮಗಳು ಮಾತ್ರ ತಿನ್ನಾಕೆ. ಅಷ್ಟು ಒಯ್ದು ಏನು ಮಾಡೋದು?'' ಎಂದೆ. ''ಹಂಗಾದ್ರ ನಾಳೆ ಎರಡು ರೂಪಾಯಿ ತಂದುಕೊಡ್ರಿ'' ಎಂದ.

ಅವನಿಂದ ಉದ್ದರಿ ಕಡಲೇಗಿಡ ತರಲಿಕ್ಕೆ ನನಗೆ ಸಂಕೋಚ ಎನ್ನಿಸಿತು. ಆದರೆ ಅವನೇ ಹೇಳುತ್ತಿರುವಾಗ ಮರುದಿನ ಅವನ ಎರಡು ರೂಪಾಯಿ ಒಯ್ದು ಕೊಟ್ಟರಾಯಿತು ಎಂದುಕೊಂಡು, ಕಡಲೇಗಿಡ ತೆಗೆದು ಕೊಂಡೆ. ಅವನ ಹೆಸರು ದಶರಥನೆಂದೂ ಅವನು ದಿನಾಲು ಅದೇ ಕಟ್ಟೆಯ ಮೇಲೆ ಕೂಡ್ರುವನೆಂದೂ ತಿಳಿದು ಕೊಂಡು ಮನೆಗೆ ಬಂದೆ. ನನ್ನ ಪುಟ್ಟ ಮೊಮ್ಮಗಳಿಗೆ ತನ್ನ ತಾತ ತಂದ ಕಡಲೇಗಿಡಗಳನ್ನು ಕಂಡು ನಿಜವಾಗಿಯೂ ಸಂತೋಷವಾಯಿತು. ನಾನು ಕೇಳದೆ ಇದ್ದರೂ ಅವಳು ನನಗೊಂದು ಸಿಹಿಯಾದ ಪಪ್ಪೀ ಕೊಟ್ಟಳು. ನನ್ನ ಶ್ರೀಮತಿ ಮಾತ್ರ, ನಾನು ಕಡಲೇಗಿಡ ತಂದುದನ್ನು ಕಂಡು, ''ಈ ಹೊತ್ತು ಸೂರ್ಯ ಯಾವ ಕಡಿಗಿ ಹುಟ್ಟಿದ್ದ!'' ಎಂದು ಉದ್ಗಾರ ತೆಗೆದಳು. ಪಾಪ, ಅವಳದೇನೂ ತಪ್ಪಿಲ್ಲ. ಯಾಕೆಂದರೆ ನಾನು ಪೇಟೆಗೆ ಹೋಗಿ ಸಾಮಾನು ತರುವುದನ್ನು ಬಿಟ್ಟು ಅನೇಕ ವರ್ಷಗಳಾಗಿದ್ದವು.

ಹುಣ್ಣಿಮೆಯ ಮರುದಿನವೇ ಹುಣ್ಣಿಮೆಯಾಗಲಿ ಅಮಾವಾಸ್ಯೆಯಾಗಲಿ ಬರುವುದಿಲ್ಲ. ಅದೇ ನನ್ನ ತೊಂದರೆಗೆಲ್ಲ ಮೂಲಕಾರಣವಾಯಿತು! ನಾನು ವಾಕಿಂಗ್ ವಿಷಯದಲ್ಲಿ regularly irregular ಎಂದು ಒಪ್ಪಿಕೊಂಡೇ ಬಿಟ್ಟಿದ್ದೇನಲ್ಲ ಅದು ಹಾಗೇ ಆಯಿತು. ಕಡಲೇಗಿಡ ತಂದ ಮರುದಿನ ನಾನು ವಾಕಿಂಗ್‌ಗೆ ಹೋಗಲೇ ಇಲ್ಲ. ಎರಡು ಮೂರು ದಿನಗಳ ನಂತರ ಒಂದು ಸಾಯಂಕಾಲ, ನಾನು ಉದ್ದರಿ ಕಡಲೇಗಿಡ ತಂದದ್ದು ಒಮ್ಮೆಲೇ ನೆನಪಾಯಿತು. ನೆನಪಾದ ಕೂಡಲೇ ಶರ್ಟಿನ ಕಿಸೆಯಲ್ಲಿ ಎರಡು ರೂಪಾಯಿಯ ನಾಣ್ಯವನ್ನು ಇಟ್ಟುಕೊಂಡು ಗಾರ್ಡನ್ ಕಡೆಗೆ ಧಾವಿಸಿದೆ. ಅದು ನನ್ನ ಎಂದಿನ walking ಆಗಿರಲಿಲ್ಲ; ಅಕ್ಷರಶಃ running ಆಗಿತ್ತು. ಆದರೇನು, ಧಾವಿಸಿಹೋದ ನನಗೆ ಅಲ್ಲಿ ನಿರಾಸೆ ಕಾದಿತ್ತು. ಆ ನಾಲೆಯ ಕಟ್ಟೆಯ ಮೇಲೆ ಆ ಕಡಲೇಗಿಡ ಮಾರುವ ದಶರಥ ಮಹಾರಾಜ ಆಸೀನನಾಗಿರಲಿಲ್ಲ! ದಿನಾಲೂ ಅಲ್ಲೇ ಕುಳಿತಿರುತ್ತೇನೆ ಎಂದು ಹೇಳಿದ ಅವನು ಕಾಣದೇ ಯಾವ ಕಟ್ಟೆಯ ಮೇಲೆ ಕುಳಿತಿರಬಹುದು? ಎಂದು ನಾನು ಗಾರ್ಡನ್ನಿನ ಸುತ್ತೆಲ್ಲ ತಿರುಗಾಡಿ ಅವನನ್ನು ಹುಡುಕಿದೆ. ಅವನು ಎಲ್ಲಿಯೂ ಕಾಣಲಿಲ್ಲ. ಆ ದಿವಸ ಬಹುಶಃ ಬೇಗ ಮಾರಾಟ ಮಾಡಿ ಮನೆಗೆ ಹೋಗಿರಬಹುದು. ''ನಾಳೆ ನಾನೇ ಬೇಗ ಬಂದು ಅವನ ಎರಡು ರೂಪಾಯಿ ಕೊಡಬೇಕು'' ಎಂದುಕೊಂಡು ಮನೆಗೆ ಮರಳಿದೆ.

ಮರುದಿನ ಮಾತ್ರ ನಾನು ನೆನಪಿಟ್ಟುಕೊಂಡೇ ಗಾರ್ಡನ್ ಕಡೆಗೆ ಹೋದೆ. ಆದರೆ ಆ ದಿನವೂ ಅವನು ಕಾಣಬಾರದೆ? '' ಅರೇ ಈ ಮಹಾರಾಯ ಎಲ್ಲಿಹೋದ? ದಿನಾಲೂ ಇಲ್ಲೇ ಕೂತು ಕಡಲೇಗಿಡ ಮಾರುತ್ತೇನೆ ಎಂದವ, ಎರಡೂ ದಿನ ಬಂದಿಲ್ಲವಲ್ಲ!'' ಎಂದುಕೊಳ್ಳುತ್ತಲೇ ಮನೆ ಸೇರಿದೆ. ಮರುದಿನವೇಕೆ, ಅದರ ಮರುದಿನವೂ ಅವನು ಕೂಡ್ರುವ ಕಟ್ಟೆಯನ್ನು ಕಂಡು ಬಂದೆ; ಆದರೆ ಅವನು ಮಾತ್ರ ಕಾಣಲಿಲ್ಲ. ಅದರ ಮರುದಿನ ಮಾತ್ರ ಗಾರ್ಡನ್ ಪ್ರವೇಶ ಮಾಡುತ್ತಿರುವಂತೆಯೇ ಆ ಕಟ್ಟೆಯ ಮೇಲೆ ನನಗೆ ದಶರಥನ ದರುಶನವಾಯಿತು. ನಾನು ತುಸು ಬೇಗ ಬೇಗ ನಡೆದು ಆ ಕಟ್ಟೆಯ ಸಮೀಪ ಹೋಗುತ್ತಿರುವಂತೆಯೇ ನನಗೆ ನಿರಾಸೆ ಕಾದಿತ್ತು. ಅಲ್ಲಿ ಕುಳಿತವನು ದಶರಥ ನಾಗಿರಲಿಲ್ಲ. ಬೇರೆ ಯಾರೋ ಒಬ್ಬ ಹೊಸಬ ಕಡಲೇಗಿಡ ಮಾರುತ್ತ ಕುಳಿತಿದ್ದ. ನನ್ನನ್ನು ಕಂಡು ಅವನು ''ಸುಲಗಾಯಿ ತಗೋರಿ ಸಾಬ್ರ, ಛಂದ ಅದಾವು'' ಎಂದ. ನನಗೆ ಅವನ ಸುಲಗಾಯಿ ಕಡೆಗೆ ಲಕ್ಷವೇ ಇರಲಿಲ್ಲ. ನಾನು, ''ಅಲ್ಲಪಾ, ಇಲ್ಲಿ ದಶರಥ ಅಂತ ಒಬ್ಬಾವ ಸುಲಗಾಯಿ ಮಾರುವ ಕೂಡುತ್ತಿದ್ದನಲ್ಲ'' ಎಂದು ಕೇಳಿದೆ. ಅವನು, ''ಯಾರೊ ನನಗೆ ಗೊತ್ತಿಲ್ಲರೀ.. ಯಾಕರಿ? ಅವ ಏನರೆ ನಿಮ್ಮ ರೊಕ್ಕ ಕೊಡೋದಿತ್ತಾ ಏನ್ರಿ?'' ಎಂದು ಕೇಳಿದ. ''ಛೇ, ಹಂಗೇನು ಇಲ್ಲಪ್ಪ'' ಎಂದು ಹೇಳಿ ಮುಂದೆ ನಡೆದೆ. ತುಸು ದೂರದಲ್ಲಿ ಚಿಕ್ಕ ಝೂ ಹತ್ತಿರ ಇದ್ದಂಥಾ ಸೇಂಗಾ, ಐಸ್ ಕ್ರೀಂ ಗಾಡೀವಾಲಾಗಳನ್ನು ಕೇಳಿನೋಡಿದೆ. ಒಬ್ಬ ತನಗೆ ಗೊತ್ತಿಲ್ಲ ಎಂದರೆ, ಇನ್ನೊಬ್ಬ ''ಹೋದ ವಾರ ಒಬ್ಬಾವ ನಾಕಾರು ದಿವಸ ಬಂದಿದ್ದ, ಅವ ಯಾರೋ ಏನೊ'' ತುಸು ನಿಕೃಷ್ಟವಾಗಿ ಉತ್ತರಿಸಿದ. ತಾನು ಅಲ್ಲಿ ಕಾಯಂ ವ್ಯವಹಾರ ಮಾಡುವವನು ಎಂಬ ಧಿಮಾಕು ಅವನ ಮಾತಿನಲ್ಲಿ ಒಡೆದು ಕಾಣುತ್ತಿತ್ತು. ಅವನ ಮಾತಿನಿಂದ ನನ್ನ ಮನಸ್ಸು ಯಾಕೋ ವಿನಾಕಾರಣ ಖಿನ್ನವಾಯಿತು. ನಾನು ಸುಮ್ಮನೆ ಮನೆಯ ದಾರಿ ಹಿಡಿದೆ. ದಶರಥನಿಗೆ ಕೊಡಬೇಕೆಂದು ನನ್ನ ಶರ್ಟಿನ ಕಿಸೆಯಲ್ಲಿ ಇಟ್ಟುಕೊಂಡಿದ್ದ ಆ ಎರಡು ರೂಪಾಯಿ ನಾಣ್ಯ ಮಾತ್ರ ಹೆಜ್ಜೆಗೊಮ್ಮೆ ನನ್ನ ಎದೆಗೆ ಒದೆಯುತ್ತಲೇ ಇತ್ತು!

''ದಿನಾಲು ಬರುತ್ತೇನೆ ಎಂದಿದ್ದ ದಶರಥ ಬರುವುದನ್ನು ಯಾಕೆ ಬಿಟ್ಟಿರಬಹುದು?'' ಎಂಬ ಯೋಚನೆ ನನ್ನ ತಲೆಯಲ್ಲಿ ಕೊರೆಯತೊಡಗಿತು. ''ಅವನಿಗೇನಾದರೂ ಆಗಿರಲಿಕ್ಕಿಲ್ಲವಲ್ಲ; ಅಂದರೆ ಜ್ವರಗಿರ? ಛೇ, ಅವನು ಗಟ್ಟಿಮುಟ್ಟ ಕಲ್ಲಿನಂತಿದ್ದ. ಅವನಿಗೇನಾಗುತ್ತದೆ?... ಊರಲ್ಲಿ ದಿನಾಲು ಅಪಘಾತದ ಸುದ್ದಿ ಕೇಳುತ್ತೇವೆ...! ಛೇ ಛೇ ಶಾಂತಂ ಪಾಪಂ! ಬಹುಶಃ ಅವನು ಸ್ಥಳವನ್ನು ಬದಲಿಸಿರಬಹುದು. ಒಳ್ಳೇ ವ್ಯಾಪಾರವಾಗುವ ಬೇರೆ ಯಾವುದಾದರೂ ಕಟ್ಟೆಯನ್ನು ಹುಡಿಕಿಕೊಂಡಿರಬಹುದು. ಶಾಲೆಗಳ ಎದುರುಗಡೆ, ಇಂಟರ್‌ವಲ್ ಸಮಯದಲ್ಲಿ ಚೆನ್ನಾಗಿ ವ್ಯಾಪಾರ ಗಿಟ್ಟಿಸುವ ಅನೇಕ ಹಾಕರಗಳನ್ನು (hawker) ನೋಡುತೇವೆ.'' ಈ ವಿಚಾರ ಬಂದದ್ದೇ ತಡ, ನಾನು ಮರುದಿನವೇ ಅನೇಕ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನು ನನ್ನ 'ಲೂನಾ'ದ ಮೇಲೆ ಸುತ್ತು ಹಾಕಿ ಬಂದೆ. ಆದರೂ ಎಲ್ಲಾ ಶಾಲೆಗಳನ್ನು ಹುಡುಕಿ ಅವುಗಳ ಬಿಡುವಿನ ವೇಳೆಯನ್ನು ಗೊತ್ತುಹಚ್ಚಿ ಅದೇ ಸಮಯಕ್ಕೆ ಅಲ್ಲಿ ಹೋಗಲು ನನ್ನಿಂದ ಸಾಧ್ಯವಾಗಲಿಲ್ಲ.

ಕೊನೆಗೊಂದು ಉಪಾಯ ಹೊಳೆಯಿತು. ಬೆಳಗಿನ ವೇಳೆ ಕಾಯಿಪಲ್ಯ ಹರಾಜು ನಡೆಯುವ ಸ್ಥಳದಲ್ಲಿ ಕಡಲೇಗಿಡ ಕೊಳ್ಳಲು ಅವನು ಬಂದೇ ಬಂದಿರುತ್ತಾನೆ. ಅಲ್ಲಿ ಹೋಗಿ ಹುಡುಕಿದರೆ ಸಿಕ್ಕೇ ಸಿಗುತ್ತಾನೆ

ಡಾ|| ಕೃಷ್ಣಮೂರ್ತಿ ಕಿತ್ತೂರ

ಎಂದುಕೊಂಡು ಅಲ್ಲಿಯೂ ಹೋದೆ. ಆ ಸೂಪರ್ ಮಾರ್ಕೆಟು ಫಿಶ್ ಮಾರ್ಕೆಟಿ|ಂತ ಭಯಂಕರವಾಗಿತ್ತು. ಅಲ್ಲಿ ಹೋಗುವುದೇ ಒಂದು ಕಠಿಣ ಶಿಕ್ಷೆ ಎನ್ನುವಂತಿತ್ತು. ಅಲ್ಲಿಯ ಗದ್ದಲ, ಚೀರಾಟ, ಕೊಳಚೆ, ಕೊಳೆತ ತರಕಾರಿಯ ದುರ್ಗಂಧ-ಇವೆಲ್ಲವನ್ನೂ ಸಹಿಸಿಕೊಂಡರೂ ಉಪಯೋಗವಾಗಲಿಲ್ಲ. ಅಲ್ಲಿ ಎಷ್ಟು ಹುಡುಕಿದರೂ ಅವನು ಕಾಣಲಿಲ್ಲ. ಅಲ್ಲಿಂದ ಹೊರಗೆ ಬರುವಾಗ ಮಾತ್ರ ನನಗೆ ನಿಜವಾಗಿಯೂ ಆ ದಶರಥನ ಮೇಲೆ ಬ್ರಹ್ಮಾಂಡ ಕೋಪ ಬಂದಿತ್ತು! ಆ ಕೋಪ ಬಹಳ ಹೊತ್ತು ಉಳಿಯಲಿಲ್ಲ. ಯಾಕೆಂದರೆ ಅದರಲ್ಲಿ ಅವನದೇನೂ ತಪ್ಪಿಲ್ಲ ಎಂದು ನನಗೇ ಗೊತ್ತಿತ್ತಲ್ಲ! ''ಚಿಲ್ಲರೆ ಇಲ್ಲ, ಮರುದಿನ ಎರಡು ರೂಪಾಯಿ ತಂದುಕೊಡ್ರಿ'' ಎಂದದ್ದು ಅವನ ತಪ್ಪೇ? ಅಲ್ಲದೆ ಅವನು ಮರುದಿನ ■ ಕಟ್ಟೆಯ ಮೇಲೆ ಕುಳಿತುಕೊಂಡು ನನ್ನ ದಾರೀ ಕಾದಿಲ್ಲ ಎಂದು ಹೇಗೆ ಹೇಳುವುದು? ನಾನು ಆ ''ಮರುದಿನ '' ಗಾರ್ಡನ್ನಿಗೆ ಹೋಗಿದ್ದರೆ ಅವನ ಚಿಲ್ಲರೆ ಎರಡು ರೂಪಾಯಿ ಕೊಟ್ಟು ನಿಶ್ಚಿಂತನಾಗುತ್ತಿದ್ದೆ. ಅಲ್ಲರೀ, ಏಕಾದಶಿಯ ಮರುದಿನವೇ ಮತ್ತೆ ಏಕಾದಶಿ ಎಂದು ಬರೆದು ಸಾತ್ವಿಕ ವ್ರತಸ್ಥರನ್ನು ಎರೆಡೆರಡು ದಿವಸ ಉಪವಾಸ ಕೆಡವುವ ಈ ಪಂಚಾಂಗ ಕರ್ತರು, ಅಮಾವಾಸ್ಯೆಯ ಮರುದಿನವೇ ಮತ್ತೆ ಅಮಾವಾಸ್ಯೆ ಎಂದೋ, ಇಲ್ಲವೇ ಹುಣ್ಣಿಮೆ ಎಂದೋ ಬರೆದರೆ - ಇವರದೇನು ಗಂಟು ಹೋಗುತ್ತದೆ? ಇವರು ಬರೆಯದಿದ್ದರೇನಾಯಿತು ? ಆ ಸುಲಗಾಯಿ ದಶರಥ ಎರಡು ರೂಪಾಯಿ ಉದ್ದರಿಯನ್ನು ನನ್ನ ಖಾತೆಯಲ್ಲಿ ಬರೆದು ನಾನು ದಿನಾಲು ವಾಕಿಂಗ್ ಹೋಗುವಂತೆ ಮಾಡಿಬಿಟ್ಟಿದ್ದ!

ಹೆಚ್ಚು ಕಡಿಮೆ ಎಂಟು-ಹತ್ತು ದಿನಗಳವರೆಗೆ ನಾನು ದಿನಾಲು ಸಾಯಂಕಾಲ ವಾಕಿಂಗ್ ಹೋಗುವುದನ್ನು ಗಮನಿಸಿದ ನನ್ನ ಸೊಸೆ ಒಂದು ದಿನ, ''ಯಾಕ್ರೀ ಅಣ್ಣಾ, ನಿಮ್ಮ ವಾಕಿಂಗು ಬಹಳೇ regular ಆಗೇದಲ್ಲಾ!'' ಎಂದು ಮುಗುಳುನಗುತ್ತ ಕೇಳಿದಳು. ನನ್ನ ನಿಯಮಿತ ವಾಕಿಂಗದಿಂದ ಒಳಗೇ ಸಂತೋಷವಾಗಿದ್ದರೂ, ನನ್ನ ಶ್ರೀಮತಿ ''ಹಂಗ ಅನ್ನಬ್ಯಾಡವಾ, ಅವರೇನು ಮನಸುಖರಾಯರು! ಬೇಕಾದರ ಹೋದರು ಇಲ್ಲಾಂದರ ಬಿಟ್ಟರು. ಅದೇನು ಕಾರಣಾನೋ ಹೋಗಲಿಕ್ಕೆ ಹತ್ಯಾರ ಹೋಗಲಿ!'' ಎಂದು ಷರಾ ಬರೆದಳು.

ಈಗ ಮಾತ್ರ ನಾನು ಅನಿವಾರ್ಯವಾಗಿ ನನ್ನ ನಿಯಮಿತ ವಾಕಿಂಗದ ಹಿಂದೆ ಇರುವ ದಶರಥನ ಎರಡು ರೂಪಾಯಿಯ ಉದ್ದರಿಯನ್ನು, ಅವನನ್ನು ಹುಡುಕಿ ಅವನ ಹಂಗಿನಿಂದ ಮುಕ್ತನಾಗಲು ನಾನು ಪಟ್ಟ ಶ್ರಮವನ್ನು ತುಸು ವಿವರವಾಗಿಯೇ ಹೇಳಿದೆ. ಅದೇ ತಪ್ಪಾಯಿತು; ಯಾಕೆಂದರೆ ನನ್ನ ಮಾತು ಮುಗಿಯುವ ಮೊದಲೇ ಮನೆಯಲ್ಲಿ ಪ್ರತಿಯೊಬ್ಬರೂ ತಲೆಗೊಂದು ಮಾತು, ತಲೆಗೊಂದು ವಿಚಾರ, ಉಪದೇಶಗಳ ಸುರಿಮಳೆಯನ್ನೇ ಸುರಿಸಿದರು. ಅವರ ಎಲ್ಲ ಮಾತಿನ ಸಾರವೆಂದರೆ, ಅವನ ಎರಡು ರೂಪಾಯಿಯ ಸಲುವಾಗಿ ನಾನು ಇಷ್ಟು ತಲೆಕೆಡಿಸಿ ಕೊಳ್ಳುವ ಅವಶ್ಯಕತೆ ಇರಲಿಲ್ಲ. ಇಷ್ಟು ಶ್ರಮವಹಿಸಿ ಹುಡುಕುತ್ತ ಅಡ್ಡಾಡಬೇಕಾಗಿರಲಿಲ್ಲ, ಮೊದಲೇ ನನ್ನ ಪ್ರಕೃತಿ ಆರಾಮ ಇರುವುದಿಲ್ಲ, ಎರಡು ರೂಪಾಯಿ ಏನು ಮಹಾ? ಇತ್ಯಾದಿ ಇತ್ಯಾದಿ.

ಎರಡು ರೂಪಾಯಿ ನಮಗೆ ಮಹಾ ಇರಲಿಕ್ಕಿಲ್ಲ. ಆದರೆ ಶ್ರಮವಹಿಸಿ ಇಡೀ ದಿನ ದುಡಿದು ಹೊಟ್ಟೆ



ತುಂಬಿಕೊಳ್ಳುವ ಅವನಿಗೆ ಎರಡು ರೂಪಾಯಿ ಕೂಡ ಮಹತ್ವದ್ದೇ ಅಲ್ಲವೇ? ಅಥವಾ ಅವನಿಗೂ ಅಷ್ಟು ಮಹತ್ವದ್ದಲ್ಲ ಎಂದರೂ ಅವನ ಎರಡು ರೂಪಾಯಿಯನ್ನು ನಾನು ಮುಳುಗಿಸಿದೆ ಎಂದು ನನ್ನ ತಲೆಯಲ್ಲಿ ಸದಾ ಕೊರೆಯುತ್ತದೆಯಲ್ಲಾ! ಅದಕ್ಕೇ ನಾನು ಅವನನ್ನು ಹುಡುಕಲು ಅಷ್ಟು ಅಲೆದದ್ದು. ಅಖಂಡ ೪೫ ವರ್ಷ ನನ್ನನ್ನು ನೋಡುತ್ತ ಬಂದ ನನ್ನ ಶ್ರೀಮತಿ ನನ್ನ ಪಾಪ ಪ್ರಜ್ಞೆಯ ತೊಳಲಾಟವನ್ನು ಬಹುಶಃ ಗುರುತಿಸಿದಳು. ಅವಳು ಒಂದು ದಿನ, ''ಆ ಬಡವನ ರೂಪಾಯಿ ಕೊಟ್ಟಿಲ್ಲ ಅಂತ ನಿಮ್ಮ ತಲಿಯೊಳಗ ಅಷ್ಟು ತ್ರಾಸಾಗತಿದ್ದರೆ, ನಾಳೆ ಯಾರರೆ ಬಡವರಿಗೆ ದಾನ ಮಾಡಿಬಿಡ್ರಿ. ಇಲ್ಲಾಂದರ ರಾಮದೇವರ ಗುಡಿಯೊಳಗ ಹಾಕಿಬಿಡ್ರಿ. ಅಂದರ ಮನಸ್ಸಿಗೆ ಸಮಾಧಾನ ಆಗತದೆ'' ಎಂದಳು.

ಅವಳು ತನ್ನ ರೀತಿಯಲ್ಲಿ ಉಚಿತ ಸಲಹೆಯನ್ನೇ ಕೊಟ್ಟಿದ್ದಳು. ಬಡವರಿಗೆ ದಾನ ಮಾಡಬೇಕೆಂದರೆ ಕಡಲೇ ಗಿಡ ಮಾರಿ ಹೊಟ್ಟೆ ತುಂಬಿಕೊಳ್ಳುವ ■ ದಶರಥನೇನು ಶ್ರೀಮಂತನೆ? ಇನ್ನು ಗುಡಿಯಲ್ಲಿ ಕುಳಿತ ದೇವರಿಗೆ ಅರ್ಪಿಸಿದರೆ, ಈ ರಾಮಚಂದ್ರ ಆ ದಶರಥನಿಗೆ ಒಯ್ದು ಮುಟ್ಟಿಸುತ್ತಾನೆಂಬ ಭರವಸೆಯೇನು? ಇಷ್ಟಾಗಿ ಕೆಲಸವನ್ನು ಮಾಡಲಿಕ್ಕೆ ಅವನೇನು ಪೋಸ್ಟ್‌ಮನ್ನನೆ ? ಈಗ ಎಲ್ಲಾ ಪೋಸ್ಟ್‌ಮನ್ನರನ್ನು ನಂಬುವಂತೆಯೂ ಇಲ್ಲ. ದಯಾಳು ಸರಕಾರದವರು ಕಡುಬಡವರಿಗೆ, ವೃದ್ಧರಿಗೆ, ಸ್ವಾತಂತ್ರ್ಯ ಯೋಧರಿಗೆ ಕಳಿಸಿಕೊಡುವ ಎಂ. ಓ. ಹಣವನ್ನು ಕೆಲವು ಚಿಲ್ಲರೆ ಬುದ್ಧಿಯ ಪೋಸ್ಟಮನ್ನರು ಎತ್ತಿಹಾಕುತ್ತಾರೆಂದು ಆಗಾಗ ಪೇಪರಿನಲ್ಲಿ ಓದುತ್ತೇವೆ. ಹಾಗಿರುವಾಗ ಈ ಪರಮ ಪೋಸ್ಟಮನ್ನ ಇಂಥ ಹಣವನ್ನು ಎತ್ತಿಹಾಕಿ ತನಗೆ ಬೆಳ್ಳಿಯ ರಥವನ್ನೋ ಬಂಗಾರದ ಕಿರೀಟವನ್ನೋ ಮಾಡಿಸಿ ಕೊಳ್ಳುವುದಿಲ್ಲ ಎನ್ನುವ ಗ್ಯಾರಂಟೀ ಏನು?... ಹೀಗೆಲ್ಲ ವಿಚಾರ ಮಾಡುತ್ತೇನೆಂದೇ ನನ್ನ ಶ್ರೀಮತಿ ನನ್ನನ್ನು ನಾಸ್ತಿಕ ಎಂದು ಕರೆಯುತ್ತಾಳೆ. ಅದಕ್ಕೇ ಅವಳ ಮಾತನ್ನು ತೆಗೆದು ಹಾಕಲಿಲ್ಲ. ''ಒಳ್ಳೇದು'' ಎಂಬಂತೆ ಗೋಣುಹಾಕಿ ಸಮ್ಮತಿ ಸೂಚಿಸಿದೆ. ಅದಕ್ಕೆ ಅವಳು ''ನೀವು ಸುಮ್ಮಸುಮ್ಮನೆ ಕವಲೆತ್ತಿನಂತೆ ಗೋಣು ಹಾಕಬೇಡಿರಿ. ಖರೇನ ನಾ ಹೇಳಿಧಾಂಗ ಮಾಡಿ ನಿಶ್ಚಿಂತ ಆಗಿರಿ'' ಎಂದಳು.

ನಮಗೆಲ್ಲ ಆತ್ಮೀಯರಾದ ಮಿತ್ರರೊಬ್ಬರು ಮರುದಿನ

ನಮ್ಮ ಮನೆಗೆ ಬಂದಿದ್ದರು. ಅವರು ಡಿ. ಎಸ್. ಪಿ. ಆಗಿ ನಿವೃತ್ತರಾದವರು. ಅವರಿಗೆ ನನ್ನ ಶ್ರೀಮತಿ ಆ ಕಡಲೇ ಗಿಡದವನ ಕಥೆಯನ್ನು, ಇನ್ನೂ ಕೊರಗುತಿರುವ ನನ್ನ ಮನಸ್ಥಿತಿಯನ್ನೂ ವಿವರಿಸಿ ಹೇಳಿದಳು. ಅವರು ಒಂದು ಕ್ಷಣ ವಿಚಾರಮಾಡಿ ನನ್ನ ಸಮಸ್ಯೆಗೆ ಕಾರಣನಾದ ಆ ದಶರಥನ ಚಹರಾ ಪಟ್ಟಿಯನ್ನು ಕೇಳಿದರು. ''ಅವನು ನೋಡಲು ಹೇಗಿದ್ದ, ಕುಳ್ಳನೇ ಎತ್ತರವಾಗಿದ್ದನೇ, ಲಡ್ಡಮುದ್ದನಾಗಿದ್ದನೇ, ಕೂದಲನ್ನು ಉದ್ದವಾಗಿ ಬೆಳೆಸಿದ್ದನೇ, ಪಾಯಜಾಮಾ ಪ್ಯಾಂಟು ಏನು ತೊಟ್ಟಿದ್ದ?..'' ಎಂದೆಲ್ಲ ಉಸಿರು ಬಿಡದೆ ಕೇಳಿದರು. ನಿವೃತ್ತರಾಗಿದ್ದರೂ ಪೋಲೀಸು ಬುದ್ಧಿ ಇನ್ನೂ ಚುರುಕಾಗಿರುವ ನನ್ನ ಮಿತ್ರರು ಕೇಳಿದ ಎಲ್ಲಾ ಮಾಹಿತಿಯನ್ನು ಕೊಟ್ಟಿದ್ದರೆ, ಅವರು ಖಂಡಿತವಾಗಿಯೂ ಆ ದಶರಥನನ್ನು ಹುಡುಕಿ ತಂದು ನನ್ನ ಮುಂದೆ ನಿಲ್ಲಿಸುತ್ತಿದ್ದರು ಎನ್ನುವಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ! ಆದರೆ ಶರ್ಲಾಕ್ ಹೋಮ್ಸನಂಥ ಕಣ್ಣುಗಳನ್ನಾಗಲಿ ಪತ್ತೇದಾರಿ ಚುರುಕು ಬುದ್ಧಿಯನ್ನಾಗಲಿ ನಾನು ಪಡೆದಿಲ್ಲವಲ್ಲ! ಅವನ ಮುಖ ನೋಡಿದ್ದೆ ; ಆದರೆ ಅವನ ಮೂಗು ಮೊಂಡಾಗಿತ್ತೊ ಚೂಪಾಗಿತ್ತೊ ಎಂದು ಕೂಡ ನಾನು ಹೇಳಲಾರೆ. ಆದರೆ ಅವನಿಗೆ ಕ್ರಕಚದಂತಗಳಿದ್ದುವೆಂದು ಮಾತ್ರ ನನಗೆ ಗೊತ್ತು. ಅದು ಹೇಗೆಂದರೆ, ನಾನು ಅವನ ಹೆಸರನ್ನು ಕೇಳಿದ್ದೆನಲ್ಲ, ಅದಕ್ಕೆ ಅವನು ''ದಸ್ರತ್ರೀ'' ಎಂದಿದ್ದ. ಏನೂ ಅರ್ಥವಾಗಲಿಲ್ಲ.

''ಏನೆಂದಿ''? ಎಂದು ನಾನು ಕೇಳಿದ್ದಕ್ಕೆ ಅವನು ಮತ್ತೇ ಅದೇ ಧ್ವನಿ ತೆಗೆದಿದ್ದ.

''ಏನೆಂದಿ? ಹಜರತ್ ?'' ಎಂದು ನಾನು ಮತ್ತೆ ಕೇಳಿದಾಗ,

''ದಸ್ರತ್ ರೀ ದಸ್ರತ್'' ಎಂದು ಗಟ್ಟಿಯಾಗಿ ಹೇಳಿದ್ದ.

''ದಶರಥನ?'' ಎಂದಾಗ ''ಹೌಂದ್ರರೀ ಸಾಬರ'' ಎಂದು, ಹಲ್ಲು ಕಿರಿದಾಗ ಅವನ ಕರಗಸದಂಥ ಹಲ್ಲುಗಳು ನನ್ನ ಕಣ್ಣಲ್ಲಿ ನಟ್ಟಿದ್ದವು !

ದಶರಥನ ಬಗ್ಗೆ ಯಾವ ಮಾಹಿತಿಯನ್ನೂ ಕೊಡಲಾರದ ನನ್ನನ್ನು ಕುರಿತು, ''ಹಾಗಾದರೆ ನೀವು ಅವನನ್ನು ಹುಡುಕುವುದು ಕಷ್ಟ, ಹೋಗಲಿ ಬಿಡ್ರಿ. ಹೋದ ಜನ್ಮದಲ್ಲಿ ಅವ ಏನೋ ನಿಮ್ಮ ಋಣ ತಿಂದಿರಬಹುದು. ಅದನ್ನು ಮರೆತು ಬಿಡ್ರಿ'' ಎಂದು ನನ್ನ ಸ್ನೇಹಿತರು ಉಪದೇಶ ಮಾಡಿದರು. ಈ ಜನ್ಮದ ಋಣದ ಲೆಕ್ಕವೇ ಗೊತ್ತಿಲ್ಲದ ನಾನು ಹೋದ ಜನ್ಮದ ಬಗ್ಗೆ ಏನು ಹೇಳಲಿ.

ಜೀವನದಲ್ಲಿ ಸಾಲವನ್ನು ತಂದೇ ಆಗಲಿ, ಕೊಟ್ಟೇ ಆಗಲಿ ನನಗೆ ಹೆಚ್ಚಿನ ಅನುಭವ ಇಲ್ಲವೆಂದೇ ಹೇಳಬೇಕು. ನಮ್ಮ ಹಿರಿಯರು ನಮಗೆ ಕಲಿಸಿದ ''ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು'' ಎಂಬ ಪಾಠವನ್ನು ನಾನು ಚಾಚೂ ತಪ್ಪದೆ ಪಾಲಿಸಿದ್ದೇನೆ. ಹಾಗೆ ನನ್ನ ನೌಕರಿಯ ಆರಂಭದ ದಿನಗಳಲ್ಲಿ ಕಾಳಿನ ಅಂಗಡಿಯಿಂದ ನಾನು ಉದ್ದರಿ ತರುತ್ತಿದ್ದೆ. ಆದರೆ ಅಂಗಡಿಯವನ ಬಾಕಿಯನ್ನು ಪ್ರತಿ ತಿಂಗಳ ಒಂದನೆಯ ತಾರೀಖಿನಂದು, ಅವನು ಬರೆದಿಟ್ಟ ಲೆಕ್ಕದ ಪ್ರಕಾರವೇ ತೀರಿಸಿದ್ದೇನೆ. ನನಗೆ ನೆನಪು ಇರುವಂತೆ ಯಾರ ಒಂದು ಪೈಸೆಯನ್ನೂ ನಾನು ಮುಳುಗಿಸಿಲ್ಲ. ಆದರೆ ಈಗ ಎರಡು ರೂಪಾಯಿಯ ಕಡಲೇಗಿಡವನ್ನು ಉದ್ದರಿ ತಂದು ಕೆಟ್ಟೆನಲ್ಲ ಎಂಬ ಕೊರಗು ಆವರಿಸಿಬಿಟ್ಟಿದೆ. ''ಎರಡು




ಕುವೆಂಪು ಮೆಚ್ಚಿದ ಆ ಮಲೆನಾಡು
ಈಗ ನೋಡಿದರೆ ಬರಿ ಬೋಡು
ಪ್ರಕೃತಿ ಅಳುವಳು ಮುಸಮುಸ
ಕಾರಣ ? ರಾಜಕಾರಣಿಯೇ ಗರಗಸ !

ರೂಪಾಯಿಗೆ ಯಾಕ ಅಷ್ಟು ವಿಚಾರ ಮಾಡತೀರಿ? ಅವನು ಸಿಕ್ಕರೆ ಕೊಡಿರಿ, ಇಲ್ಲಾಂದರ ಮರೆತುಬಿಡಿರಿ'' ಎಂದು Friendly ಉಪದೇಶ ಕೇಳಿಕೇಳಿ ನನಗೆ ಸಾಕಾಗಿದೆ. ಏನು, ಎರಡು ರೂಪಾಯಿಯನ್ನು ನಾನು ಮುಳುಗಿಸಿದೆನೆಂದೇ ದಶರಥ ತಿಳಿದಿರಬಹುದೇ? ಎಂಬ ವಿಚಾರ ನನ್ನ ತಲೆಯಲ್ಲಿ ಸುಳಿದಾಗ ಬಹಳೇ ಕೆಡಕೆನಿಸುತ್ತದೆ. ಕಲಿತವರೆಲ್ಲರೂ ಠಕ್ಕರೇ ಎಂದು ಅವನು ತಿಳಿದುಕೊಂಡನೋ ಏನೊ! ಅಥವಾ ನಾನು ಕೊಡಬೇಕಾಗಿದ್ದ ಎರಡು ರೂಪಾಯಿಗಳ ವಿಚಾರವನ್ನು ಅವನು ಮರೆತಿರಲೂ ಬಹುದು. ಅದೂ ಅಸಂಭವವಲ್ಲ. ಆದರೆ ಅದನ್ನು ಮರೆಯಲು ನನಗೆ ಮಾತ್ರ ಆಗಲೊಲ್ಲವಾಗಿದೆ!

ಮಧ್ಯರಾತ್ರಿ ಕೆಲವು ಸಲ ಒಮ್ಮೆಲೇ ಎಚ್ಚರಾಗಿ ಬಿಡುತ್ತದೆ. ''ಇಳಿ ವಯಸ್ಸಿನಲ್ಲಿ ಇದು ಸರ್ವೇಸಾಮಾನ್ಯ'' ಎಂದು ವೈದ್ಯರು ಹೇಳುತ್ತಾರೆ. ಆದರೆ ಒಮ್ಮೆ ಎಚ್ಚರಾದರೆ ಮತ್ತೆ ಬೇಗ ನಿದ್ರೆಯೇ ಬರುವುದಿಲ್ಲ. ಆಗ ಎಷ್ಟು ಮರೆಯಬೇಕೆಂದರೂ ದಶರಥನ ಆ ಕ್ರಕಚದಂತಗಳು ನನ್ನ ಕಣ್ಣ ಮುಂದೆ ಕಾಣಿಸಿಕೊಳ್ಳುತ್ತವೆ ! ಮುಂದೆ ನನಗೆ ಬರಬಹುದಾಗಿದ್ದ ನಿದ್ರೆ ಪೂರ್ಣ ಹಾರಿ ಹೋಗಿಬಿಡುತ್ತದೆ.

ನನ್ನ ಮೂಕ ಕೊರಗನ್ನು ಗಮನಿಸುತ್ತಿದ್ದ ನನ್ನ ಶ್ರೀಮತಿ ''ಸಣ್ಣ ಸಣ್ಣ ಮಾತಿಗೆ ಹೀಂಗ ತಲಿ ಕೆಡಿಸಿಕೊಂಡೇ ನೀವು ಆ ದರಿದ್ರ ಬಿ.ಪಿ. ತಂದುಕೊಂಡ್ರಿ. ಸ್ವಲ್ಪ ನಿಶ್ಚಿಂತ ಇರಲಿಕ್ಕೆ ಕಲಿಬಾರದ?'' ಎಂದು ಹಲುಬಿದಳು. ಈ ವಯಸ್ಸಿನಲ್ಲಿ ಇನ್ನು ಏನೇನು ಕಲಿಯಬೇಕು? ಅದಕ್ಕಿಂತ ಬಿ.ಪಿ. ಗುಳಿಗೆಗಳ ಜೊತೆಗೆ ನಿದ್ದೆಯ ಗುಳಿಗೆಗಳನ್ನು ನುಂಗುವದೇ ಸುಲಭ ಎನ್ನಿಸಿತು.

ಒಮ್ಮೊಮ್ಮೆ ನನ್ನ ಈ ಎಲ್ಲಾ ತೊಂದರೆಗೆ ಸರಕಾರದವರೇ ಕಾರಣ ಎನ್ನಿಸಿತು. ನಮ್ಮ ಸರಕಾರ ನೋಟುಗಳನ್ನು ನಮ್ಮ ಸ್ವದೇಶದಲ್ಲಿ ಹೀಗೆ ಮುದ್ರಿಸುವುದಲ್ಲದೆ ಪರದೇಶಗಳಲ್ಲಿಯೂ ಮುದ್ರಿಸಿ ತರಿಸುತ್ತದೆಯಂತೆ ! Imported ವಸ್ತುಗಳ ಮೋಹ ನಮಗೆ ಹೆಚ್ಚಲ್ಲವೆ? ತರಿಸಿಕೊಳ್ಳಲಿ, ಆ ಬಗ್ಗೆ ನನ್ನ ತಕರಾರಿಲ್ಲ. ಆದರೆ ನೂರರ, ಐನೂರರ ನೋಟುಗಳಂತೆ ಒಂದರ ಎರಡರ ನೋಟುಗಳನ್ನು ಮುದ್ರಿಸಿ ತರಿಸಿದರೆ ಇವರ ಗಂಟೇನು ಖರ್ಚಾಗುತ್ತದೆ? ಸಾಮಾನ್ಯ ಜನರಿಗೆ ನಿತ್ಯಜೀವನದಲ್ಲಿ ಇಂಥ ನೋಟುಗಳ ಅವಶ್ಯಕತೆಯೇ ಹೆಚ್ಚೆಂದು ಸರಕಾರಕ್ಕೆ ಏಕೆ ತಿಳಿಯುವುದಿಲ್ಲ? ಅಥವಾ ಪೈಸೆಗಳು ಬೆಲೆಯನ್ನು ಕಳೆದುಕೊಂಡು ಈಗ ಚಲಾವಣೆಯಿಂದ ಕಾಣೆಯಾದಂತೆ, ಈ ಚಿಲ್ಲರೆ ನೋಟುಗಳ ಹಣೆಬರಹವೂ ಹಾಗೇ ಆಗಬಹುದೆಂದು ಸರಕಾರಕ್ಕೆ ತಿಳಿದಿರಬಹುದೆ? ಸರಕಾರಕ್ಕೆ ಇರಬಹುದಾದ ಈ ಅತೀಂದ್ರಿಯ ದಿವ್ಯದೃಷ್ಟಿ ಇಲ್ಲದ ನನ್ನಂಥ ದಡ್ಡರು ಎರಡು-ಮೂರು ರೂಪಾಯಿಯ ವ್ಯಾಪಾರ ಮಾಡಿ ಪೇಚಾಡುತ್ತೇವೆ.

ಇಲ್ಲಿ ಯಾರನ್ನೂ ದೂಷಿಸಿ ಪ್ರಯೋಜನವಿಲ್ಲ. ಇದೆಲ್ಲ ಸ್ವಯಂಕೃತ ಅಪರಾಧವೇ ಸರಿ. ಯಾಕೆಂದರೆ ಚಿಲ್ಲರೆ ಇಲ್ಲದಿರುವುದು ಆ ದಶರಥನ ತಪ್ಪಂತೂ ಅಲ್ಲ. ಅವನು ಹೇಳಿದಂತೆ ನಾನು ಸುಮ್ಮನೆ ಐದು ರೂಪಾಯಿಯ ಕಡಲೇಗಿಡ ತಂದುಬಿಟ್ಟಿದ್ದರೆ ಒಣ ರಗಳೆಯೇ ಇರುತ್ತಿರಲಿಲ್ಲ. ಅಥವಾ ಮರುದಿನವೇ ಹೋಗಿ ಅವನ ರೂಪಾಯಿ ಕೊಟ್ಟು ಬಂದಿದ್ದರೂ ಆಗುತ್ತಿತ್ತು. ಅದೂ ಇಲ್ಲವಾದರೆ, ಎರಡು ರೂಪಾಯಿಯ ಉದ್ದರಿಯನ್ನು ನನ್ನ ಮೇಲೆ ಇಟ್ಟುಕೊಳ್ಳುವ ಬದಲು, ಅವನಿಗೇ ಐದರ ನೋಟು ಕೊಟ್ಟು ''ನಾಳೆ ನಾನು ಬಂದಾಗ ನೀನೇ ಮೂರು ರೂಪಾಯಿ ಕೊಡು'' ಎಂದು ಹೇಳಿ ನೋಟನ್ನು ಅವನ ಮುಖದ ಮೇಲೆ ಎಸೆದು ಬಂದಿದ್ದರೆ? ಅವನೇ ನನ್ನನ್ನು ಹುಡುಕುತ್ತ ಕಾಲಲ್ಲಿಯ ಚಪ್ಪಲಿ ಹರಿದುಕೊಳ್ಳುತ್ತಿದ್ದ. ಈ ವಿಚಾರ, ಅಂದರೆ ಅವನು ನನ್ನನ್ನು ಹುಡುಕುತ್ತ, ತೇಕುತ್ತ ತಿರುಗುವ ದೃಶ್ಯವನ್ನು ಕಲ್ಪಿಸಿಕೊಂಡರೆ ನನ್ನ ಎಲ್ಲಾ ಆಯಾಸ ಪರಿಹಾರವಾದಂತೆ ಭಾಸವಾಗುತ್ತದೆ! ಆದರೆ ನನಗೆ ಗೊತ್ತು, ಅವನೇನೂ ನನ್ನನ್ನು ಹುಡುಕುತ್ತ ಹೋಗುವ ಗೋಜಿಗೆ ಬೀಳುತ್ತಿರಲಿಲ್ಲ. ಯಾಕೆಂದರೆ ಅವನಿಗೇನು ನನ್ನಂತೆ ಬೇರೆ ಕೆಲಸವಿಲ್ಲವೆ? ಬಹುಶಃ ಆಗ ಕೂಡ ನಾನೇ ಅವನನ್ನು ಹುಡುಕುತ್ತ ತಿರುಗುತ್ತಿದ್ದೆ. ಸುಮ್ಮನೆ ಮೂರು ರೂಪಾಯಿ ಕಳೆದುಕೊಂಡೆ ಎಂಬ ವಿಚಾರದ ಹುಳ ನನ್ನ ತಲೆಯಲ್ಲಿ ಕೊರೆಯುತ್ತಿತ್ತೊ ಏನೊ? ನನಗೆ ಮೂರು ರೂಪಾಯಿ ಅಷ್ಟು ಮುಖ್ಯವಲ್ಲ. ಆದರೆ ಅದನ್ನು ಕೂಡ ಈ ತಲೆ ಮರೆಯಬೇಕಲ್ಲ ! ಆದರೂ ಆ ಕೊರಗು, ಈ ಅಪರಾಧೀ ಪ್ರಜ್ಞೆಗಿಂತ ಹೆಚ್ಚು ಸಹ್ಯವಾಗುತ್ತಿತ್ತೊ ಏನೋ!

ಇದೆಲ್ಲ 'ರೆ' ರಾಜ್ಯದ ಮಾತಾಯಿತು. ಈಗ ಮಾತ್ರ ನಾನು ಎರಡು ರೂಪಾಯಿ ನಾಣ್ಯವನ್ನು ಕಿಸೆಯಲ್ಲಿ ಇಟ್ಟುಕೊಂಡೇ 'ಚಿಲಿಪಿಲಿ ಎಂದೋಡುವ ಗಿಳಿಗಳಿರಾ, ನೀವು ಕಾಣಿರೇ ನೀವು ಕಾಣಿರೇ' ಎಂದು ಅವನನ್ನು ಇನ್ನೂ ಹುಡುಕುತ್ತಲೇ ಇದ್ದೇನೆ. ನಿಮ್ಮಲ್ಲಿ ಯಾರಾದರೂ ಪುಣ್ಯವಂತರಿಗೆ ಆ ಕ್ರಕಚದಂತ ದಶರಥ ಕಂಡರೆ, ನೀವು ಅವನನ್ನು ನಿಮ್ಮ ಸ್ಕೂಟರ ಮೇಲಾಗಲಿ ಆಟೋರಿಕ್ಷಾದಲ್ಲಾಗಲಿ ಅಥವಾ ಟ್ಯಾಕ್ಸಿಯಲ್ಲೇ ಆಗಲಿ ಹಾಕಿಕೊಂಡು, ದಯವಿಟ್ಟು ನನ್ನ ಕಡೆಗೆ ಕರೆತನ್ನಿರಿ. ನಿಮ್ಮ ಖರ್ಚನ್ನೆಲ್ಲಾ ಕೊಟ್ಟು, ಮೇಲೆ ನಿಮಗೆ ಒಂದು ಕಪ್ಪು ಬಿಸಿಬಿಸಿ ಚಹಾ ಕುಡಿಸಿ ಕಳಿಸುತ್ತೇನೆ.

**ಡಾ. ಕೃಷ್ಣಮೂರ್ತಿ ಕಿತ್ತೂರ**
'ಚಂದ್ರಿಕಾ', ವಿಠಲನಗರ, ಗುಲಬರ್ಗಾ - ೫೮೫೧೦೩




# ಮುಳುಗುವ ಭಯದಲ್ಲೂ ಬದುಕುವ ಛಲ

**ಈ** ದ್ವೀಪಗಳಲ್ಲಿ ಒಂದೇ ಒಂದು ಬೆಟ್ಟವಿಲ್ಲ, ಕಣಿವೆಯಿಲ್ಲ, ನದಿಯಿಲ್ಲ, ಧಾನ್ಯ ಬೆಳೆಯುವುದಿಲ್ಲ, ಒಂದು ಕಾಡುಮೃಗವಿಲ್ಲ. ಹಣೆಗೆ ಹಚ್ಚಿಕೊಳ್ಳುವೆ ಎಂದರೆ ಚಿಟಿಕೆ ಧೂಳು ಸಿಗುವುದಿಲ್ಲ. ತೇದು ಕುಡಿಯುತ್ತೇನೆ ಎಂದರೆ ಕಲ್ಲುಹರಳು ಸಿಗುವುದಿಲ್ಲ. ನೇಣು ಹಾಕಿ

**ಡಾ|| ರಹಮತ್ ತರೀಕೆರೆ**

ಕೊಳ್ಳುತ್ತೇನೆ ಎಂದರೂ ಸರಿಯಾದ ಮರದ ಕೊಂಬೆ ಕೂಡ ಇಲ್ಲ. ಇವೆ ಇವೆ ಎಂದರೆ ಅವು ಎರಡೇ ವಸ್ತು - ನೀಲ ಕಡಲು ಮತ್ತು ಹುಚ್ಚುಚ್ಚಾಗಿ ಬೆಳೆದಿರುವ ತೆಂಗಿನಕಾಡು. ಇಷ್ಟೊಂದು ಇಲ್ಲಗಳ ನಾಡಿನಲ್ಲಿ ಜನ ಹ್ಯಾಗಾದರೂ ಬದುಕಿದ್ದಾರೊ ಎಂಬ ಉದ್ಗಾರ ಲಕ್ಷದ್ವೀಪಗಳಿಗೆ ಕಾಲಿಟ್ಟೊಡನೆ ಬರುತ್ತದೆ.

ಲಕ್ಷದ್ವೀಪಗಳಿಗೆ ಈ ಹೆಸರು ಯಾಕೆ ಬಂತೋ ಏನೊ? ಅವು ಲಕ್ಷಾಂತರವೇನೂ ಇಲ್ಲ. ಇರುವುದು ಮೂವತ್ತಾರೇ. ಅವುಗಳ ಚರಿತ್ರೆ ಮಾತ್ರ ಲಕ್ಷಾಂತರ ವರುಷಗಳಷ್ಟು ಹಿಂದಕ್ಕೆ ಎಳೆದುಕೊಂಡು ಹೋಗುತ್ತದೆ. ಮೊದಲಿಗೆ ಹೇಳುವುದಾದರೆ, ಇವು ಅಂಡಮಾನಿನಂತೆ ಸಹಜದ್ವೀಪಗಳೇ ಅಲ್ಲ; ಅಂಡಮಾನು ನಮ್ಮಿಂದ ಸಾವಿರಾರು ಕಿ. ಮೀ. ದೂರವಿದ್ದರೂ ಅದು ನಮ್ಮಂತೆ ಕಲ್ಲು ಮಣ್ಣು ಸಸ್ಯಪ್ರಾಣಿ ಪಕ್ಷಿಗಳನ್ನುಳ್ಳ ದ್ವೀಪ. ಲಕ್ಷದ್ವೀಪಗಳು, ಹವಳದಿಬ್ಬ (Atoll)ಗಳು. 'ವಿನಾಶಕಾರಿ' ಎಂದು ನಾವೆಲ್ಲ ತಿಳಿದಿರುವ ಜ್ವಾಲಾಮುಖಿ, ಇವನ್ನು ಹಡೆದ ತಾಯಿ. ಅಂದರೆ ಸಾಗರದೊಳಗಿಂದ ಜ್ವಾಲಾಮುಖಿಗಳೆದ್ದು, ಲಾವಾರಸ ಮೇಲಕ್ಕೆ ಚಿಮ್ಮಿ, ಬಂಡೆಯುಂಟಾಗಿ, ಅದರ ಮೇಲೆ ಹವಳಜೀವಿಗಳು ನೆಲೆಸತೊಡಗಿದವು; ಅವು ಸತ್ತ ಮೇಲೆ ಅಸ್ಥಿಗಳು ಕಾಂಕ್ರೀಟಿನಂತೆ ಗಟ್ಟಿಯಾಗಿ ಬಂಡೆಯ ಸುತ್ತ ದಂಡೆ ನಿರ್ಮಾಣವಾದವು. ಆ ದಂಡೆಯೊಳಗೆ ಒಂದು ವಿಶಾಲವಾದ ಕಡಲಸರೋವರ ಉಂಟಾಯಿತು. ಅದರ ಮೇಲೆ ಅಲೆಯ ಹೊಡೆತಕ್ಕೆ ಹವಳದ ಅಸ್ಥಿಗಳು ನುಚ್ಚಾಗಿ, ಮರಳಿನಂತೆ ದಿಬ್ಬದ ಮೇಲೆ ಹಾಸಾಗಿಹರಡಿ, ಈ ದ್ವೀಪಗಳಾದವು. ಈ ಕೆಲಸಕ್ಕೆ ಮಿಲಿಯಾಂತರ ವರುಷ ಹಿಡಿದಿದೆ. ಈ ಅರ್ಥದಲ್ಲಿ, ಲಕ್ಷದ್ವೀಪಗಳೆಂದರೆ ಹವಳ ಜೀವಿಗಳ ಮಸಣದ ಮೇಲೆ ಮೂಡಿದ ನಾಡು. ಎಂತಲೇ ಇಲ್ಲಿ ಕಲ್ಲು ಮಣ್ಣುಗಳಿಲ್ಲ. ಒಂದುವೇಳೆ ಸಣ್ಣಕಲ್ಲ ಚೂರೊಂದು ಸಿಕ್ಕರೆ, ಅದು ಖಂಡಿತ ಮೇನ್ ಲ್ಯಾಂಡಿನಿಂದ ಹೋಗಿದ್ದು.

ನೆಲದಾಳದ ಬೆಂಕಿಯುಂಡೆಗಳಿಂದ ಶುರುವಾದ ಚರಿತ್ರೆ, ಈಗ ಸಸ್ಯಶ್ಯಾಮಲೆಯಾಗಿ, ತೆಂಗಿನಸೀಮೆಯ ವರ್ತಮಾನ ವಾಗಿದೆ; ಇದರ ಮೇಲೆ ಶತಮಾನಗಳಿಂದ ಜನ ನೆಲೆಸಿದ್ದಾರೆ. ಹವಳದ ಎಲುವು ಕಪ್ಪೆಚಿಪ್ಪುಗಳಿಂದ ಕೂಡಿ ಕಡ್ಲೆಮಿಠಾಯಿಯಂತಿರುವ ಈ ನೆಲದಲ್ಲಿ ಮೊಳಕಾಲು ಮಟ್ಟ ತೋಡಿದರೆ ಸಾಕು, ಎಳೆನೀರಿನಂತಹ ಜಲವುಕ್ಕಿ ಬರುತ್ತದೆ. ಅರಬಸ್ಥಾನದಿಂದ ಚೀನಾಕ್ಕೆ ಹೋಗುವ ಹಾದಿಯಲ್ಲಿ ತಂಗುದಾಣದಂತಿರುವ ಈ ದ್ವೀಪಗಳಲ್ಲಿ, ಜನ ಒಂದು ಕಾಲಕ್ಕೆ ಹಡಗಿನ ನಾವಿಕರಿಗೆ ಕುಡಿಯುವ ಜಲವನ್ನು ಮಾರಾಟ ಮಾಡುತ್ತಿದ್ದರಂತೆ.

**ಲಕ್ಷದ್ವೀಪ ನೋಡುವ ಆಸೆ**

ಬಂಗಾಳ ಕೊಲ್ಲಿಯಲ್ಲಿರುವ ಅಂಡಮಾನನ್ನು ನೋಡಿ ಬಂದಮೇಲೆ, ಅರಬ್ಬಿ ಸಮುದ್ರದೊಳಗಿರುವ ಈ ದ್ವೀಪಗಳನ್ನೂ ನೋಡಿಬಿಡಬೇಕು ಎಂಬ ಚೂಲು ಶುರುವಾಗಿತ್ತು. ಆದರೆ ಅಂಡಮಾನಿಗೆ ಹೋದಂತೆ ಲಕ್ಷ ದ್ವೀಪಗಳಿಗೆ ಮನಸ್ಸಿಗೆ ಬಂದಾಗ ಹಡಗು ಹತ್ತಿ ಹೋಗುವಂತಿಲ್ಲ. ಇವು ನಿರ್ಬಂಧಿತ ದ್ವೀಪಗಳು. ಹೊರಗಿನಿಂದ ಇಲ್ಲಿಗೆ ಹೊಸಬರು ಬರಲು ಅನುಮತಿ ಬೇಕು. ಇವಕ್ಕೆ ವಲಸೆ ತಾಳಿಕೊಳ್ಳುವ ಶಕ್ತಿಯಿಲ್ಲದ್ದರಿಂದಲೋ, ಹತ್ತಿರದ ಶ್ರೀಲಂಕೆ ಅಥವಾ ಮಾಲ್ದೀವ್ಸಿನಿಂದ ಯಾರಾದರೂ ನುಸುಳಬಹುದು ಎಂಬ ಕಾರಣ ದಿಂದಲೋ ಈ ನಿಷೇಧ. ಹೀಗಾಗಿ ಒಂದೋ ಈ ದ್ವೀಪ ದಲ್ಲಿರುವ ಯಾರಾದರೂ ನಮ್ಮನ್ನು ಅತಿಥಿಯಾಗಿ ಕರೆಸಿ ಕೊಳ್ಳಬೇಕು, ಇಲ್ಲವೇ ಲಕ್ಷದ್ವೀಪದ ಪ್ರವಾಸೋದ್ಯಮ ದವರು ಕರೆದುಕೊಂಡು ಹೋಗಬೇಕು. ಬೇರೆ ದಾರಿಯೇ ಇಲ್ಲ. ಲಕ್ಷದ್ವೀಪ ಆಡಳಿತದ 'ಸೊಸೈಟಿ ಫಾರ್ ಪ್ರಮೋಷನ್ ಆಫ್ ನೇಚರ್ ಟೂರಿಸಮ್ ಅಂಡ್ ಸ್ಪೋರ್ಟ್ಸ್' ಎಂಬ ಸಂಸ್ಥೆ, ಈ ದ್ವೀಪ ಪ್ರವಾಸವನ್ನು ಏರ್ಪಡಿಸುತ್ತದೆ. ಐದುದಿನದ ಈ ಪ್ರವಾಸದಲ್ಲಿ ಕವರಟ್ಟಿ, ಕಲ್ಪನಿ, ಮಿನಿ ಕಾಯ್ ಎಂಬ ಮೂರು ದ್ವೀಪಗಳನ್ನು ತೋರಿಸುತ್ತಾರೆ. ರಾತ್ರಿಯೆಲ್ಲ ಹಡಗಿನಲ್ಲಿ ಪಯಣ. ದಿನವೆಲ್ಲ ದ್ವೀಪಗಳಲ್ಲಿ ಇರುವುದು. ಮತ್ತೆ ಸಂಜೆಯಾದೊಡನೆ ಹಡಗು ಹತ್ತಿ ಕೊಂಡು ಮುಂದಿನ ದ್ವೀಪಕ್ಕೆ ಹೋಗುವುದು - ಹೀಗಿತ್ತು ವ್ಯವಸ್ಥೆ. ಅಂಡಮಾನಿಗೆ ನಾವು ಮಕ್ಕಳನ್ನು ಬಿಟ್ಟು ಹೋಗಿದ್ದೆವು. ಆ ತಪ್ಪನ್ನು ಈ ಸಲ ತಿದ್ದಿಕೊಂಡಿದ್ದರಿಂದ ಮಕ್ಕಳೂ ಬಂದಿದ್ದವು. ಭಾರತದ ಬೇರೆ ಬೇರೆ ರಾಜ್ಯಗಳಿಂದ ಬಂದ ನೂರುಜನ ಪ್ರವಾಸಿಗರು ನಾವು. ಬೆರಗಿನ ಸಂಗತಿಯೆಂದರೆ ೮೦ ವರುಷದ ಒಂದು ಬೆಂಗಾಲಿ ಅಜ್ಜಿ ತನ್ನ ಮೊಮ್ಮಗಳ ಜತೆ ಬಂದದ್ದು.

ನಮ್ಮ ಹಡಗಿನ ಹೆಸರು ಟಿಪ್ಪು ಸುಲ್ತಾನ. ಲಕ್ಷ ದ್ವೀಪಗಳು ಟಿಪ್ಪು ಕಾಲದಲ್ಲಿ ಮೈಸೂರು ರಾಜ್ಯದ ಭಾಗವಾಗಿದ್ದವು ಎಂದೋ ಏನೋ ಈ ಹೆಸರನ್ನು ಇಡಲಾಗಿದೆ. ಕರ್ನಾಟಕದಿಂದ ಹೋದವರಿಗೆ ಕನ್ನಡಿಗನೊಬ್ಬನ ಹೆಸರಲ್ಲಿರುವ ಹಡಗಲ್ಲಿ ಹೋಗುವುದು, ಕೆಎಸ್‌ಆರ್‌ಟಿಸಿ ಬಸ್ಸಿನಂತೆ ಹಡಗೇ ನಮ್ಮದು ಎಂಬ ಆಪ್ತಭಾವ ತರುತ್ತದೆ. ಜನವಾಸ ಇರುವ ಹತ್ತು ದ್ವೀಪದ ಜನರಿಗಾಗಿಯೇ ಇರುವ ಈ ಹಡಗನ್ನು ಪ್ರವಾಸೋದ್ಯಮಕ್ಕೂ ಬಳಸಲಾಗುತ್ತಿದೆ. ಟಿಪ್ಪು ಸುಲ್ತಾನ ಆಧುನಿಕವಾದ ಸುಸಜ್ಜಿತವಾದ ಹಡಗು. ಬಿರುಗಾಳಿ ಮಳೆಗಳಲ್ಲೂ ಚಲಿಸುವ ಸರ್ವಋತು ಹಡಗು. ಇದನ್ನು ಎಲ್ಲಿ ತಯಾರಿಸಲಾಯಿತು ಎಂದು ಕೇಳಿದ್ದಕ್ಕೆ ''ಗ್ರೀಸಿನಲ್ಲಿ'' ಎಂದು ಕಪ್ತಾನ ಜಾಕೋಬ್ ಹೇಳಿದರು. ಗ್ರೀಕರು ಎಂದೊಡನೆ ಮನಸ್ಸು ಇಲಿಯಡ್ ಒಡಿಸ್ಸಿ ಕಾವ್ಯಗಳತ್ತ ನೆಗೆಯಿತು. ಹಡಗು ಕಟ್ಟಿ ಸಮುದ್ರಪಯಣ ಮಾಡುವ ನೂರಾರು ವೀರರ ಕಥನಗಳವು. ಹಡಗು, ಸಮುದ್ರಗಳನ್ನು ತೆಗೆದರೆ ಗ್ರೀಕರ ಪುರಾಣಗಳೇ ಇಲ್ಲ. ಮಂಗಳೂರಿನವರಾದ ಜಾಕೋಬ್, ನಾವು ಚಾಲನಾ ಕೋಣೆಗೆ ಹೋಗಿ ಕೇಳುತ್ತಿದ್ದ ತರಲೆ ಪ್ರಶ್ನೆಗಳಿಗೆಲ್ಲ ಸಹನೆ ಯಿಂದ ಉತ್ತರಿಸುತ್ತಿದ್ದರು. ಕನ್ನಡದಲ್ಲಿ ಉತ್ತರ ಸಿಗುತ್ತಿತ್ತು ಎಂಬ ಕಾರಣಕ್ಕೂ ನಾವು ಅವರನ್ನು ಪೀಡಿಸುತ್ತಿದ್ದೆವು. ಹಡಗಿನ ರೆಸ್ಟೋರೆಂಟಂತೂ ಕನ್ನಡಜಿಲ್ಲೆಯ ಬಂಟರದು. ಅವರು ಶತಮಾನಗಳಿಂದ ಹಡಗಿನಲ್ಲಿದ್ದವರಂತೆ ತೋರುತ್ತಿತ್ತು.

ಕೊಚ್ಚಿಯ ಬಂದರಿನಲ್ಲಿರುವ ಲಕ್ಷದ್ವೀಪ ಆಡಳಿತ ಕಛೇರಿಯಲ್ಲಿ ಟಿಕೇಟು ಗುರುತಿನಚೀಟಿ ಇತ್ಯಾದಿ ಸಂಗ್ರಹಿಸಿಕೊಂಡು, ಬೆಳ್ಳಗೆ ಕೊಕ್ಕರೆಯಂತೆ ಹೊಳೆಯುತ್ತಿದ್ದ ಟಿಪ್ಪು ಸುಲ್ತಾನ ಏರುವಾಗಲೇ ಅನಿಸಿತು - ನಾವು ಹೋಗುತ್ತಿರುವುದು ಇನ್ನೊಂದು ಕೇರಳದಂತಹ ನಾಡಿಗೆ




'ಪುಸ್ತಕ ಪ್ರಕಾಶನ' ಕನ್ನಡ ಪ್ರಕಾಶನ ಕ್ಷೇತ್ರದಲ್ಲಿ ಒಂದು ಅಸದೃಶ ಸಾಹಸ. ವಸ್ತು, ವಿಷಯ, ಪುಸ್ತಕದ ಕಾಗದ, ರಕ್ಷಾಪುಟ ವಿನ್ಯಾಸ, ಶ್ರೇಷ್ಠ ಮುದ್ರಣ, ಓದುಗರಿಗೆ ವಿಚಾರ ತಲುಪಿಸುವ ಗದ್ಯಶೈಲಿ, ಪ್ರತಿಯೊಂದರಲ್ಲೂ ಜಗತ್ತಿನ ಅತ್ಯುತ್ತಮ ಪ್ರಕಾಶನಗಳಿಗೆ ಸರಿಗಟ್ಟುವ ಸಾಧನೆ ಮಾಡಬೇಕೆಂಬ ನಿರ್ಧಾರದಿಂದ ನಾಡಿನ ಅಗ್ರಮಾನ್ಯ ಲೇಖಕರ, ಕಲಾವಿದರ, ತಂತ್ರಜ್ಞರ, ಮುದ್ರಕರ ಅವಿರತ ಶ್ರಮ, ಸಾಧನೆ, ಸಹಕಾರಗಳೊಂದಿಗೆ ಹೊರಟಿರುವ ಸಾಹಸ. ನೆನಪಿರಲಿ 'ಪುಸ್ತಕ ಪ್ರಕಾಶನ' ಕೇವಲ ಪುಸ್ತಕಗಳನ್ನು ಬಿಕರಿ ಮಾಡುವ ವ್ಯಾಪಾರಿ ಸಂಸ್ಥೆಯಲ್ಲ. ಅದೊಂದು ಗುರಿ ಮತ್ತು ಆದರ್ಶಗಳನ್ನುಳ್ಳ ಉದ್ದೇಶಪೂರ್ವಕ ಸಾಹಸ.

## ಪುಸ್ತಕಗಳ ಪಟ್ಟಿ

ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ

1. ಕರ್ವಾಲೋ 66-00
2. ಕಿರಗೂರಿನ ಗಯ್ಯಾಳಿಗಳು 60-00
3. ಚಿದಂಬರ ರಹಸ್ಯ 81-00
4. ಪರಿಸರ ಕತೆ 60-00
5. ಸಹಜ ಕೃಷಿ 36-00
6. ಮಿಸ್ಸಿಂಗ್ ಲಿಂಕ್ 60-00
7. ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ 72-00
8. ಜುಗಾರಿ ಕ್ರಾಸ್ 81-00
9. ಏರೋಪ್ಲೇನ್ ಚಿಟ್ಟೆ ಹಾಗೂ ಇತರ ಕತೆಗಳು 43-00
10. ಫ್ಲೈಯಿಂಗ್ ಸಾಸರ್ಸ್ ಭಾಗ-1,2 ತಲಾ 45-00
11. ಕಾಡಿನ ಕತೆಗಳು 1,2,3,4 ತಲಾ 45-00
12. ಮಿಂಚುಳ್ಳಿ 72-00
13. ಹೆಜ್ಜೆ ಮೂಡದ ಹಾದಿ 57-00
14. ಹಕ್ಕಿ ಪುಕ್ಕ 260-00
15. ರುದ್ರಪ್ರಯಾಗದ ಭಯಾನಕ ನರಭಕ್ಷಕ 72-00
16. ಅಣ್ಣನ ನೆನಪು 96-00
17. ಅಬಚೂರಿನ ಪೋಸ್ಟಾಫೀಸು 50-00
18. ಹುಲಿಯೂರಿನ ಸರಹದ್ದು ಮತ್ತು ನಿಗೂಢ ಮನುಷ್ಯರು 60-00

ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಶ್ರೀ ಪ್ರದೀಪ ಕೆಂಜಿಗೆ

19. ವಿಸ್ಮಯ 1, 2, 3 ತಲಾ 45-00

ಶ್ರೀ ಪ್ರದೀಪ ಕೆಂಜಿಗೆ

20. ಬರ್ಮುಡಾ ಟ್ರ್ಯಾಂಗಲ್ 43-00
21. ಅದ್ಭುತ ಯಾನ 60-00

ಶ್ರೀ ಕೃಪಾಕರ ಸೇನಾನಿ

22. ಸೆರೆಯಲ್ಲಿ ಕಳೆದ 14 ದಿನಗಳು 93-00

ಶ್ರೀ ಚಿದಾನಂದ

23. ಒಂದೇ ದಿನದಲ್ಲಿ ಕಂಪ್ಯೂಟರ್ ಕಲಿಯಿರಿ 45-00

ಶ್ರೀ ಚದುರಂಗ

24. ಹೆಜ್ಜಾಲ 104-00
25. ಮೃಗಯಾ 42-00

ಶ್ರೀ ಎಂ. ಶಿವಕುಮಾರ್

26. ಸೈಕಲ್ ವಾಲ 40-00
27. ಯೋಗಿ ಮತ್ತು ಅಪ್ಸರೆ 66-00

ಶ್ರೀ ಶ್ರೀಕೃಷ್ಣ ಆಲನಹಳ್ಳಿ

28. ಗೋಡೆ 66-00

ಶ್ರೀ ಜಿ. ಪಿ. ಬಸವರಾಜು

29. ಭೂಕಂಪದ ಅಂತರಂಗ 40-00

ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರು

30. ಅಚ್ಚಗನ್ನಡ ನುಡಿಕೋಶ 360-00

ಶ್ರೀ ನರೇಂದ್ರ ರೈ ದೇರ್ಲ

31. ಸಾವಯವ ಕೃಷಿ 36-00

ಶ್ರೀ ಪೂರ್ಣಚಂದ್ರ ತೇಜಸ್ವಿ, ಶ್ರೀ ಬೆಳವಾಡಿ

32. ನಡೆಯುವ ಕಡ್ಡಿ ಹಾರುವ ಎಲೆ 45-00

**ಶ್ರೀ ಪೂರ್ಣಚಂದ್ರ ತೇಜಸ್ವಿಯವರ ಮಿಲನಿಯಂ ಸರಣಿಯ ಹದಿನಾರು ಪುಸ್ತಕಗಳು (ಒಟ್ಟು ರೂ. 720-00)**

**ಲಾರಾ ಇಂಗಲ್ಸ್ ವೈಲ್ಡರ್‌ರವರ ಒಂಬತ್ತು ಜನಪ್ರಿಯ ಕಾದಂಬರಿಗಳು (ಒಟ್ಟು ರೂ.636-00)**

**ಅರಣ್ಯ ಪಾಲಕ ಶ್ರೀ ಕೆ. ಎಂ. ಚಿಣ್ಣಪ್ಪನವರ ಆತ್ಮಕತೆ 'ಕಾಡಿನೊಳಗೊಂದು ಜೀವ' 3 ಭಾಗಗಳಲ್ಲಿ ತಲಾ ರೂ. 45.**

ವಿವರಗಳಿಗೆ

**ಪುಸ್ತಕ ಪ್ರಕಾಶನ**

91, 9ನೇ ಮೇನ್, ಸರಸ್ವತಿಪುರಂ, ಮೈಸೂರು-570 009

ಫೋನ್ : 0821-545774 bnsrama@blr.vsnl.net.in

ಪೋಸ್ಟ್ ಮುಖಾಂತರ ವ್ಯವಹರಿಸುವವರಿಗೆ

**ಪುಸ್ತಕ ಪ್ರಕಾಶನ**

ಪೋಸ್ಟ್ ಬಾಕ್ಸ್ 58, ಮೂಡಿಗೆರೆ

ಚಿಕ್ಕಮಗಳೂರು ಜಿಲ್ಲೆ-577132 ptejasvi@blr.vsnl.net.in

ಎಂದು. ಮಾಪ್ಲಾ ಮುಸ್ಲಿಮರೇ ಹಡಗಿನ ತುಂಬ ಹತ್ತಿ ಕೊಂಡರು. ಲಕ್ಷದ್ವೀಪಗಳಲ್ಲಿ ನೂರಕ್ಕೆ ತೊಂಬತ್ತು ಜನ ಮುಸ್ಲಿಮರು. ಲಕ್ಷದ್ವೀಪ ಮತ್ತು ಕೇರಳದ ಮಾಪ್ಲಾಗಳಿಗೆ ಇಸ್ಲಾಂ, ಅರಬ್ಬರಿಂದಲೇ ಬಂದಿದ್ದು. ಇವರಿಗೆ ಇಸ್ಲಾಂ ಪರಿಚಯಿಸಿದ ಅರಬದ ಸಂತ ಉಬೇದುಲ್ಲಾನ ದರ್ಗಾ, ಅಂದ್ರೋತ್ ದ್ವೀಪದಲ್ಲಿದೆ. ಈಗಲೂ ಇವರ ಸಾಂಸ್ಕೃತಿಕ ಸಂಬಂಧ ಅರಬಸ್ಥಾನದ ಜತೆಗೆ ಹೆಚ್ಚು. ಜಾನಪದವೂ ಅರಬ್ ಪುರಾಣ ಚರಿತ್ರೆಗಳಿಂದ ತುಂಬಿವೆ. ಹೀಗಾಗಿ ದ್ವೀಪಗಳಲ್ಲಿ ಅಡ್ಡಾಡುವಾಗ ಮಲಬಾರಿನ ಕಿನಾರೆಯೇ ಮುರಿದು ಚೂರಾಗಿ ಇಲ್ಲಿ ತೇಲಿಬಂದಿವೆ ಎಂದು ಭಾಸವಾಗುತ್ತದೆ.

**ತೆಂಗಿನ ಕಾಡು ಮತ್ತು ಆಡು**

ಈ ಹವಳದಿಬ್ಬಗಳ ಮೇಲೆ ಅದ್ಯಾವ ರುಚಿ ಕಂಡಿದೆಯೋ, ತೆಂಗು ಇಲ್ಲಿ ಮನಸೋ ಇಚ್ಛೆಯಾಗಿ ಪಾರ್ಥೇನಿಯಂ ಕಳೆಯಂತೆ ಬೆಳೆದಿದೆ. ಇದೊಂದು ತೆಂಗಿನ ಸರ್ವಾಧಿಕಾರದ ನಾಡು. ಹಡಗಿನಿಂದ ದ್ವೀಪಗಳನ್ನು ನೋಡುವಾಗ ಊರು ಮನೆ ಜನ ಏನೂ ಕಾಣುವುದಿಲ್ಲ, ಬರೀ ತೆಂಗುಹಸಿರಿನ ಕುಪ್ಪೆ. ಅದರೊಳಗೆ ರಾಕೆಟ್ಟು ನೆಟ್ಟಂತೆ ಲೈಟ್ ಹೌಸ್ ಇಷ್ಟೇ ಕಾಣುವುದು. ದ್ವೀಪದ ಒಳಗೆ ಕಾಲಿಟ್ಟರೆ ಸೂರ್ಯರಶ್ಮಿ ನೆಲಕ್ಕೆ ತಾಗದ ನೆರಳು. ಆ ನೆರಳಿನೊಳಗೆ ಹೊಕ್ಕರೆ ರಸ್ತೆ ಮನೆ ಜನ ಎಲ್ಲಾ ನಿಧಾನವಾಗಿ ಪ್ರತ್ಯಕ್ಷವಾಗುತ್ತವೆ. ದ್ವೀಪಗಳಲ್ಲಿ ಅಡ್ಡಾಡುವಾಗ ಮೊದಲಿಗೆ ಸೆಳೆವ ದೃಶ್ಯಗಳು ಎರಡು, ಮೊದಲನೆಯದು ತೆಂಗಿನಕಾಯಿಗಳ ಅಧಃಪತನ. ಇಲ್ಲಿ ತೆಂಗಿನಕಾಯಿಗಳು ಕಸಕ್ಕಿಂತ ಕಡೆಯಾಗಿ ಎಲ್ಲಿ ಬೇಕಲ್ಲಿ ಬಿದ್ದಿವೆ. ಮರದೊಡೆಯರು ಬೇಕಾದಾಗ ಅವನ್ನು ಆರಿಸಿ ಕುಪ್ಪೆಹಾಕಿ ಸುಲಿಸಿ ಕೊಬ್ಬರಿ ಮಾಡುತ್ತಾರೆಂದು ಗೊತ್ತಾಯಿತು. ಈ ಒಡೆಯರು ತಂತಮ್ಮ ತೋಟ ಎಂದು ಬೇಲಿಗಳನ್ನು ಕಟ್ಟಿಲ್ಲ. 'ಬೇಲಿ' ಇದ್ದದ್ದು ಕೊಬ್ಬರಿ ಒಣಗಿಸುವ ಮನೆಗಳಿಗೆ ಮಾತ್ರ. ಕಾಗೆಗಳಿಂದ ಕೊಬ್ಬರಿ ಉಳಿಸಲು ಕಡಲ ದಂಡೆಗೆ ಕೊಬ್ಬರಿ ಮನೆಗಳನ್ನು ಕಟ್ಟಿಸುತ್ತ ಬಲೆ ಕಟ್ಟಿದ್ದರು. ದೀಪಾವಳಿಯಲ್ಲಿ ಸಾಲಾಗಿ ದೀಪಗಳಿಟ್ಟಂತೆ ಕೊಬ್ಬರಿ ಬಟ್ಟಲುಗಳು. ಎರಡನೆಯ ದೃಶ್ಯ - ತೆಂಗಿನ ಮರಗಳ ಕೆಳಗೆ ಕಟ್ಟಿಹಾಕಿರುವ ಆಡುಗಳದ್ದು. ಈ ದ್ವೀಪಗಳಲ್ಲಿ ನಾವು ಕಂಡ ಏಕೈಕ ನಾಗಾಲಿನ ಪ್ರಾಣಿ ಎಂದರೆ ಇದೇ. ಇವು ನಮ್ಮ ಆಡುಗಳಂತೆ ಎತ್ತರವಿಲ್ಲ. ಜಗ್ಗುವ ಕೆಚ್ಚಲಿನ ಗಿಡ್ಡತಳಿಯವು. ಇಂಥ ಆಡುಗಳನ್ನು ಕೇರಳದಲ್ಲೂ ಕಂಡಿದ್ದೆವು. ನನಗೆ ತಟ್ಟನೆ ನನ್ನ ಮೆಚ್ಚಿನ ಲೇಖಕ ವೈಕಂ ಬಶೀರರ 'ಪಾತುಮ್ಮಳ ಆಡು' ಕತೆ ನೆನಪಿಗೆ ಬಂತು. ಅಲ್ಲಿ ಆಡು ಮನೆತುಂಬ ಸುತ್ತಾಡುತ್ತಾ ಅದು ಇದು ಮುರಿದು ಇಡೀ ಕುಟುಂಬದಲ್ಲಿ ಜಗಳ ಹಚ್ಚುತ್ತದೆ. ಆದರೆ ಇಲ್ಲಿ ಅದನ್ನು ಕಡ್ಡಾಯವಾಗಿ ಕಟ್ಟಿ ಮುಂದೆ ತೆಂಗಿನ ಗರಿ ಕಡಿದುಹಾಕಿದ್ದರು. ಆಡು ಒಂದುಕಡೆ ಒಂದರಗಳಿಗೆ ನಿಲ್ಲುವಂತಹದ್ದಲ್ಲ. ದಿನವೊಂದಕ್ಕೆ ಸಾವಿರ ಜಾತಿಯ ಗಿಡಗಳಿಗೆ ಬಾಯಿಹಾಕಿ ಎಲೆ ತಿನ್ನುವ ಪ್ರಾಣಿ. ಆದರಿಲ್ಲಿ ಸಿಗುವ ಏಕೈಕ ಹಸಿರಾದ ತೆಂಗಿನಗರಿಯನ್ನು ಕಡಿಯುತ್ತ ಕೈದಿಗಳಂತೆ ತೆಂಗಿನಮರಕ್ಕೆ ಕಟ್ಟಿಸಿಕೊಂಡಿತ್ತು. ಗರಿಯ ಹಸುರನ್ನು ಬಿಡಿಬಿಡಿಸಿ ತಿಂದು, ತೆಂಗಿನಕಡ್ಡಿಗಳನ್ನು ಮೀನಿನ ಅಸ್ಥಿಪಂಜರದಂತೆ ಮಾಡಿತ್ತು. ಹುಲ್ಲು ಬೆಳೆಯದ ಇಲ್ಲಿ ಹಸು ಎಮ್ಮೆಗಳಿರುವುದು ಕಷ್ಟ. ಹೀಗಾಗಿ ಹಾಲಿಗೆ ಮಾಂಸಕ್ಕೆ ಈ ಆಡೇ ಗತಿ ಇರಬೇಕು.

**ನೀಲಿರಸದ ಸರೋವರಗಳು**

ಲಕ್ಷದ್ವೀಪದ ವಿಶೇಷವೆಂದರೆ ಯಾವ ದ್ವೀಪಕ್ಕೂ ಬಂದರಿಲ್ಲ. ಇದಕ್ಕೂ ಕಾರಣ ದ್ವೀಪಗಳ ರಚನೆಯೆ. ದ್ವೀಪಗಳ ದಡಕ್ಕೆ ನಮ್ಮ ಉಳ್ಳಾಲದಲ್ಲಿರುವಂತೆ ತೆರೆದ ಕಡಲಿಂದ ಅಲೆಗಳು ಬಂದು ಅಪ್ಪಳಿಸುವುದಿಲ್ಲ. ದ್ವೀಪಕ್ಕೂ ತೆರೆದ ಕಡಲಿಗೂ ಕಡಲಿನ ನೀರು ತುಳುಕಿ ಬಂದು ನಿಂತು ನಿರ್ಮಾಣವಾಗಿರುವ ಭಾರೀ 'ಸರೋವರ'ಗಳು (Lagoon) ಇವೆಯಷ್ಟೆ. ಈ ಸರೋವರಕ್ಕೂ ಕಡಲಿಗೂ ನಡುವೆ ಸುಣ್ಣದಂಶವುಳ್ಳ ಹವಳದ ಅಸ್ಥಿಗಳು ಸಾವಿರಾರು ವರುಷಗಳಿಂದ ಒಂದಕ್ಕೊಂದು ಬೆಸೆದುಕೊಂಡು, ಕಬ್ಬಿಣ ರಸದಿಂದ ಎರಕ ಹೊಯ್ದಂತಹ ದಂಡೆ ನಿರ್ಮಾಣವಾಗಿದೆ. ಅದು ಮುಳುಗಿದ ಆನೆಯ ಬೆನ್ನೆಲುಬಿನಂತೆ ಸರೋವರದ ಸುತ್ತಲೂ ಇದೆ. ಅದರ ಮೇಲೆ ನಡೆಯಹೋದರೆ ಕಾಲುಗಳೆಲ್ಲ ಕೊಯ್ದಂತಾಗುತ್ತದೆ. ಅದರ ಪರಿಧಿಯೊಳಗೆ ಮೈಲಿಗಟ್ಟಲೆ ಉದ್ದ ಅಗಲ ಇರುವ ಈ ಕಡಲ ಸರೋವರಗಳಲ್ಲಿ, ಪಾಪಿಗಳಲ್ಲ, ಪುಣ್ಯವಂತರು ಹೊಕ್ಕರೂ ನೀರು ಮೊಳಕಾಲುದ್ದವೆ. ಬಹಳ ಎಂದರೆ ಆಳುದ್ದ. ಅಲೆಗಳ ಹೊಯ್ದಾಟವಿಲ್ಲದ ಈ ಸರೋವರಗಳು ಬೆಸ್ತರ ದೋಣಿ ನಿಲುಗಡೆಗೆ ಹೇಳಿಮಾಡಿಸಿದಂತೆ ಇವೆ. ಕಳ್ಳಭಟ್ಟಿಯಂತೆ ಶುದ್ಧವಿರುವ ಇದರ ನೀರಿನ ತುಂಬ ಹವಳಗಳು ಹಾಗೂ ಹವಳಮೀನುಗಳು ಇವೆ. ಇಲ್ಲಿರುವ ಎಲ್ಲ ತೆಂಗಿನ ಮರಗಳ ನೀರಾ ಇಳಿಸಿದರೆ ಈ ಸರೋವರವೆಲ್ಲ ನೀರಾವರವಾದೀತು. ಲಕ್ಷದ್ವೀಪಗಳ ಇಡೀ ಚೆಲುವು ಇರುವುದು ನೀಲಿರಸ ಮಡುಗಟ್ಟಿದಂತಹ ಈ ಸರೋವರಗಳಲ್ಲಿ; ಈ ನೀಲಿಗೆ ಅಂಚುಕಟ್ಟಿದಂತೆ ಬೆಳ್ಳನೆ ಅಕ್ಕಿ ಹಿಟ್ಟಿನಂತಹ ಕೋರಲ್ ಹುಡಿಯ ಬೀಚು. ಅದರ ಪಕ್ಕ ಹಸಿರು ಸುರಿವ ತೆಂಗಿನ ಸೆರಗು.

**ದಡಕ್ಕೆ ಬಾರದ ಹಡಗು**

ಹೀಗಾಗಿ ದ್ವೀಪದವರೆಗೆ ಹಡಗು ಹೋಗುವುದಿಲ್ಲ. ಐದಾರು ಕಿಮೀ ದೂರದಲ್ಲೆ ಆಳ ಕಡಲಿನಲ್ಲಿ ನಿಂತುಬಿಡುತ್ತದೆ. ಹಡಗಿಂದ ಸಣ್ಣದೋಣಿಗಳಿಗೆ ಇಳಿದೇ ದ್ವೀಪದ ಜೆಟ್ಟಿಗಳಿಗೆ ಹೋಗಬೇಕು. ಹಡಗು ಬಂದೊಡನೆ ಜನರನ್ನು ಸಾಮಾನನ್ನು ಇಳಿಸಿಕೊಳ್ಳಲು ರೈಲು ಬಂದರೆ ಹಮಾಲಿಗಳು ಮುತ್ತಿಕೊಳ್ಳುವಂತೆ ದೋಣಿಗಳು ಮುತ್ತಿಕೊಳ್ಳುತ್ತವೆ. ಹಡಗಿನಿಂದ ದೋಣಿಗಳಿಗೆ ಇಳಿದು ಹತ್ತುವ ಕೆಲಸವು ಒಂದು ರೋಮಾಂಚಕ ಅನುಭವ. ಹಡಗನ್ನು ಲಂಗರು ಹಾಕಿ ನಿಲ್ಲಿಸಿ ಕೆಳಹಂತದಲ್ಲಿ ನೀರಿನ ಮಟ್ಟಕ್ಕೆ ಇರುವ ಬಾಗಿಲನ್ನು ತೆರೆದು, ಅಲ್ಲಿಂದ ಜನರನ್ನು ದೋಣಿಗೆ ಇಳಿಸಲಾಗುತ್ತದೆ. ಕೈಹಿಡಿದು ಇಳಿಸುವುದಕ್ಕೆ ಕೆಳಗೆ ದೋಣಿಯಲ್ಲಿ ಇಬ್ಬರು, ಮೇಲೆ ಹಡಗಿನಲ್ಲಿಬ್ಬರು. ಹೆಚ್ಚುಕಮ್ಮಿಯಾದರೂ ಹಡುಗು ದೋಣಿಗಳ ನಡುವಿನ ನೀರಿಗೆ ಬೀಳುವುದು ಖಂಡಿತ. ಇದು ಇಲ್ಲಿ ಮಾಡಲೇಬೇಕಾದ ಸರ್ಕಸ್ಸು ಅಥವಾ ಇಲ್ಲಿನ ಬದುಕಿನ ಸಹಜ ಲಯ. ಮುಸ್ಲಿಂ ಹೆಂಗಸರಾದರೂ ಪರಪುರುಷರ ಕೈಮುಟ್ಟಿಸಿಕೊಳ್ಳ ಬೇಕಲ್ಲಾ ಎಂದು ಹಿಂಜರಿದದ್ದು ಕಾಣೆ. ಹಾಗೆಲ್ಲ ಹಿಂಜರಿದು ನಖರಾ ಮಾಡಿದರೆ ಪ್ರಾಣ ಹೋಗುತ್ತದೆ. ಪರಿಸ್ಥಿತಿಯ ಒತ್ತಾಯ ಸಾಮಾಜಿಕ ನಂಬಿಕೆಗಳನ್ನು ಹೇಗೆ ಬದಲಾಯಿಸ ಬಲ್ಲದು ಎಂಬುದಕ್ಕೆ ಈ ಸರ್ಕಸ್ಸು ಒಳ್ಳೆ ನಿದರ್ಶನ.

ಒಮ್ಮೆ ಹಡಗಿನಿಂದ ದೋಣಿಗೆ ಸಾಮಾನು ಇಳಿಸುವಾಗ ಒಂದು ಚೀಲದ ಗಂಟು ಕಡಲಿಗೆ ಬಿದ್ದುಹೋಯಿತು. ನೀರು ಪಾರದರ್ಶಕವಾಗಿರುವುದರಿಂದ ಗಂಟು ಸಮುದ್ರದ ಆಳದವರೆಗೆ ಹೋಗುವ ತನಕ ಕಂಡಿತು. ಯಾರೂ ಅದನ್ನು ಉಳಿಸಲು ಯತ್ನಿಸಲಿಲ್ಲ. ಅದು ಆಗದ ಕೆಲಸ ಕೂಡ. ಲಗೇಜಿನವನು ಮಾತ್ರ ಲಬೋಲಬೊ ಅನ್ನುತ್ತಿದ್ದ. ಅದು




ಹಲಸಿನಹಣ್ಣಂತೆ. ಕೊಚ್ಚಿಯ ಹಡಗು ಕಟ್ಟೆಯಲ್ಲಿ ನೂರಾರು ಹಲಸಿನಕಾಯಿಗಳು, ಬಾಣಂತಿಯರು ತಲೆಗೆ ಬಟ್ಟೆಕಟ್ಟಿಕೊಂಡಂತೆ, ಕೆಳಗೂ ಮೇಲೂ ಅಡಕೆ ಹಾಳೆಗಳಲ್ಲಿ ಪ್ಯಾಕಾಗಿ ಕುಳಿತಿದ್ದನ್ನು ಗಮನಿಸಿದ್ದೆವು. ತೆಂಗು ಬಿಟ್ಟರೆ ಬೇರೆ ಮರಗಳೇ ಇಲ್ಲದ (ಅಲ್ಲಲ್ಲಿ ಬಾಳೆ, ಪಪ್ಪಾಯಿಗಳಿದ್ದರೂ ಅವು ಲೆಕ್ಕಕ್ಕಿಲ್ಲ ) ನಾಡಿಗೆ ಹಲಸು, ಗಣ್ಯಅತಿಥಿಯಂತೆ ಗಮ್ಮತ್ತಿನಿಂದ ಬಂದಿತ್ತು. ಪಾಪ, ಈ ಹಣ್ಣು ಯಾವ ಹೊಟ್ಟೆ ಸೇರಬೇಕಿತ್ತೊ, ತನ್ನ ಪ್ರಯಾಣದ ಕೊನೆಯನ್ನು ಮುಟ್ಟಲೇ ಇಲ್ಲ.

ಕಡಲು ಬಿರುಸಾದಾಗ, ದೋಣಿಯ ಅಂಚು ಹಡಗಿನ ಕೆಳಬಾಗಿಲ ಸಮೀಪಕ್ಕೆ ಬರಗೊಡದಷ್ಟು ಅಲೆಗಳ ಕುದಿತ ಭೀಕರವಾಗಿರುತ್ತದೆ. ಆಗ ಕಡಲ ಹೆಣ ಕಾಯಲೇಬೇಕು. ಕವರಟ್ಟಿಯಲ್ಲಿ ಹಡಗು ಹತ್ತುವಾಗ ಇಂಥಹ ಅಲೆಗಳ ಅಬ್ಬರ ಎಲ್ಲರನ್ನು ಆತಂಕದಲ್ಲಿ ಕೆಡವಿತು. ಹಡಗಿನ ಮೈ ಬಳಿಗೆ ಯಾವ ದೋಣಿಗೂ ಸುಳಿಯಲಾಗಲಿಲ್ಲ. ದುಡುಕಿ ಹತ್ತಿರ ಹೋದರೆ ಹೊಯ್ದಾಟದಲ್ಲಿ ಹಡಗಿನ ಗೋಡೆಗೆ ಬಡಿದ ಮರದದೋಣಿ ನುಚ್ಚು ನೂರಾಗುತ್ತದೆ. ನಮ್ಮ ಗುಂಪಿನಲ್ಲಿ ನನ್ನ ಸಹೋದ್ಯೋಗಿ ಡಾ. ಉಷಾ ಅವರ ಮಾವನವರು ಇದ್ದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ದೊಡ್ಡ ಅಧಿಕಾರಿ ಆಗಿದ್ದ ಅವರು ಮಹಾ ಆಸ್ತಿಕರು. ತಮಗೆ ಜಲಕಂಟಕವಿದೆಯೆಂದು ಜ್ಯೋತಿಷಿಗಳು ಹೇಳಿದ್ದಾರೆಂದೂ ತಾವು ಈ ಪ್ರವಾಸಕ್ಕೆ ಬರಬಾರದಿತ್ತು ಎಂತಲೂ, ಈ ಮಕ್ಕಳ ಕಾಟಕ್ಕೆ ಬಂದಿದ್ದೇನೆ ಎಂತಲೂ ನನ್ನೊಬ್ಬನ ಕಿವಿಯಲ್ಲಿ ಆಗಾಗ್ಗೆ ಹೇಳುತ್ತಿದ್ದರು. 'ಅದನ್ನೆಲ್ಲ ನಂಬಿದೀರಲ್ಲ ಸಾರ್ ನೀವು?' ಎಂದು ನಾನು ತಮಾಷೆ ಮಾಡುತ್ತಿದ್ದೆ. ಅವರು ತರಗೆಲೆಯಂತೆ ತೂಗಾಡುತ್ತಿದ್ದ ದೋಣಿಯಲ್ಲಿ ಮೂಕವಾಗಿ ಕೂತು 'ಈ ಸಲ ಖಂಡಿತ ನನ್ನ ಕತೆ ಮುಗಿಯಿತು' ಎಂಬಂತೆ ನನ್ನ ಮುಖ ನೋಡಿದರು - ಎಲ್ಲರಿಗೂ ಲಕ್ಷದ್ವೀಪದ ಹುಗಲುಹಚ್ಚಿ ಎಳೆತಂದ ಪಾಪಿ ನೀನು

ಎಂಬಂತೆ. ಹಡಗಿನ ಮೇಲಿಂದ ನಾವಿಕರ ಕೂಗುಗಳು, ದೋಣಿ ಮುಳುಗದಂತೆ ಹರಸಾಹಸ ಮಾಡುತ್ತಿದ್ದ ದೋಣಿಕಾರರ ಆತಂಕ, ದೋಣಿಯೊಳಗಿನ ಜೀವಗಳು ಜೀವ ಬಿಗಿಹಿಡಿದು ಕೂತುಬಿಟ್ಟವು. ಅಸಹಾಯಕರಾಗುವುದು ಬಿಟ್ಟರೆ ಬೇರೇನು ಮಾಡಲು ಸಾಧ್ಯ? ಆದರೆ ಬಹಳ ಹೊತ್ತಿನ ಬಳಿಕ ಅಲೆಗಳು ಶಾಂತವಾಗಿ, ಜಲಕಂಟಕ ವಿಧಿಸಿದ್ದ ಜ್ಯೋತಿಷಿಯ ವಾಣಿಯನ್ನು ಸುಳ್ಳುಮಾಡಿದವು. ಬಂಗಾಳಿ ಅಜ್ಜಿ ಮಾತ್ರ ನಿರಾಳವಾಗಿ ಕೂತು ಹಡಗಿಗೆ ದಾಟಿಬಂತು.

**ಕಡಲೊಳಗೆ ಜೀವರಾಶಿ**

ಹಡಗಿನಿಂದ ದೋಣಿಗಿಳಿವಾಗ ಆಳವಾದ ಕಪ್ಪು ಕಡಲು. ಅದನ್ನು ದಾಟಿ ದ್ವೀಪಗಳಿಗೆ ಹೋಗುವ ದಾರಿಯಲ್ಲಿ, ಆಳವಿಲ್ಲದ ನೀಲ ಸರೋವರ ಹಾಯಲೇಬೇಕು. ಈ ಸರಸ್ಸಿಗೆ ಪ್ರವೇಶ ಮಾಡಿದೊಡನೆ, ನೀರು ನಾಟಕೀಯವಾಗಿ ಬದಲಾಗಿಬಿಡುತ್ತದೆ. ಇದು ನೀರತಳದಲ್ಲಿರುವ ಬಿಳಿಯ ಕೋರಲ್ ಹುಡಿಯೂ ಮೇಲೆ ಸುರಿವ ಸೂರ್ಯನ ಬೆಳಕೂ ಮಾಡುವ ಮಾಯಾಜಾಲ. ನೀಲಿ ಹಸುರಿನ ಈ ನೀರದೃಶ್ಯ ಎಷ್ಟು ನೋಡಿದರೂ ಮನ ತಣಿಯದು. ಬೇರೆಬೇರೆ ಆಳ ಬಂದಂತೆ ನೀರು ಬೇರೆ ಬೇರೆ ವರ್ಣಗಳಲ್ಲಿ ಕಾಣುತ್ತದೆ. ಇಡೀ ಸರೋವರವನ್ನು ದಡದ ಮೇಲಿಂದ ಎತ್ತರದಲ್ಲಿ ನಿಂತು ನೋಡಿದರೆ ನೀರು ಬಗೆಬಗೆಯ ಬಣ್ಣಗಳಲ್ಲಿ ವರ್ಣಚಿತ್ರ ಬರೆದಂತೆ ಕಾಣುತ್ತದೆ. ನಾವು ಭಾರತದಲ್ಲೇ ಅತ್ಯಂತ ಹಳೆಯ ಲೈಟ್ ಹೌಸ್‌ಗಳಲ್ಲಿ ಒಂದಾದ ಮಿನಿಕಾಯದ ಲೈಟ್‌ಹೌಸಿನ ಮೇಲಿಂದ ನೋಡಿದೆವು. ಅದೊಂದು ಮೋಹಕವಾದ ದೃಶ್ಯ. ಲಕ್ಷದ್ವೀಪಗಳು ತಮ್ಮ ಹವಳಗಳಿಗಾಗಿ ಪ್ರಸಿದ್ಧವಾಗಿವೆ. ನಮ್ಮ ಟೂರ್ ಪ್ಯಾಕೇಜಿನ ಹೆಸರು ಕೂಡ 'ಕೋರಲ್ ರೀಫ್'. ಆದರೂ ಅಂಡಮಾನಿನಂತೆ ಹವಳಗಳನ್ನು ನೋಡಲು ಆಗಲಿಲ್ಲ. ಕಾರಣ ಕವರಟ್ಟಿಯಲ್ಲಿದ್ದ ಹೆಚ್ಚಿನ ಹವಳಗಳು ಸತ್ತಿದ್ದವು. ನೀರಿನೊಳಗೆ ನೂರಾರು ಬಣ್ಣಗಳಿಂದ ಅದ್ಭುತಲೋಕ ನಿರ್ಮಿಸುವ ಅವು, ಮಣ್ಣು ತಿಂದು ಮಾಸಲು ಬಣ್ಣಕ್ಕೆ ತಿರುಗಿದ ಎಲುಬು ರಾಶಿಯಂತೆ ಬಿದ್ದಿದ್ದವು. ಯಾಕೆಂದು ಕೇಳಲು 'ಗ್ಲೋಬಲ್ ವಾರ್ಮಿಂಗ್' ಎಂದು ಹೇಳಲಾಯಿತು. ಹಾಗಾದರೆ ಅಂಡಮಾನಿನಲ್ಲಿ ಯಾಕೆ ಹವಳಗಳು ಸತ್ತಿಲ್ಲವೋ? ಸದ್ಯ ಕೋರಲ್ಲುಗಳು ಸತ್ತರೂ ಕೋರಲ್ಲುಗಳಲ್ಲೆ ವಾಸಿಸುವ ಸಾವಿರ ಬಣ್ಣದ ಮೀನುಗಳು ಮಾತ್ರ ಜೀವಂತವಾಗಿವೆ. ಗಾಜುತಳದ ಈ ದೋಣಿಗಳಲ್ಲಿ ಬಣ್ಣಬಣ್ಣದ ಮೀನುಗಳನ್ನು ನೋಡಬಹುದು. ಆದರೆ ಲೈಫ್ ಜಾಕೆಟ್ ಕಟ್ಟಿಕೊಂಡು ಸ್ನೋರ್ಕಲಿಂಗ್ ಮುಖವಾಡ ಧರಿಸಿ ತೇಲುತೇಲುತ್ತಾ ನಾವೇ ನೋಡುವುದರಲ್ಲಿ ಸಿಗುವ ಅನುಭವವೇ ಬೇರೆ. ಮುಖವಾಡದ ಗಾಜು ನೀರಿನಲ್ಲಿ ಭೀತಿ ಹುಟ್ಟಿಸುವ ಆಳವನ್ನುಂಟುಮಾಡುತ್ತದೆ. ನಮ್ಮ ದೇಹದ ಕೆಳಗೆ ಅಕ್ಕಪಕ್ಕ ಬಗೆಬಗೆಯ ಮೀನುಗಳು ಪ್ರತ್ಯಕ್ಷವಾಗಿ ಜೀವ ಝಲ್ಲೆನ್ನುತ್ತದೆ. ಈಜುಬಾರದವರು ಮೊಣಕಾಲುದ್ದ ನೀರಿರುವ ಕಡೆ ಕೋರಲ್ಲುಗಳನ್ನೂ, ಮೀನುಗಳನ್ನೂ ತಿರುಗಾಡಿ ನೋಡಬಹುದು. ಅಂತಹದೊಂದು ಸರೋವರ ಕಲ್ಪೇನಿಯಲ್ಲಿ ಇದೆ. ಆದರೆ ಈ ಕಡಲ ಕೊಳಗಳಲ್ಲಿ ತಿರುಗಾಡಿ ಹವಳಗಳನ್ನೂ ಮೀನುಗಳನ್ನೂ ನೋಡಲು ಬಿಡುವುದು ಅವೈಜ್ಞಾನಿಕ. ಮೀನುಗಳಂತೆ ಈಜಿ ತಪ್ಪಿಸಿಕೊಳ್ಳಲಾಗದ ಅನೇಕ ಜೀವಿಗಳು ನೆಲದ ಮೇಲೆ ಸುಮ್ಮನೆ ಮಲಗಿರುತ್ತವೆ. ಅದರಲ್ಲಿ ಕಡಲಸೌತೆ ಎಂಬ ಮೃದ್ವಂಗಿ ಜೀವಿಯೂ ಒಂದು. ಅಂಡಮಾನಿನಲ್ಲಿ ಅಪರೂಪಕ್ಕೆ ಕಾಣುವ ಇವು ಇಲ್ಲಿ ರಾಶಿರಾಶಿಯಾಗಿ ಇವೆ. ಕಡಲಜೀವಿಗಳ ಬಗ್ಗೆ ಸೂಕ್ಷ್ಮತೆಯಿಲ್ಲದ ಅನೇಕ ಪ್ರವಾಸಿಗರು ವಾಟರ್ ವರ್ಲ್ಡ್‌ಗಳ ನೀರಾಟಕ್ಕೆ ಬಂದವರಂತೆ ಕುಣಿದಾಡುತ್ತಾರೆ. ಅವು ಕಾಲ್ತುಳಿತಕ್ಕೆ ಸಿಕ್ಕು ನಲುಗುತ್ತವೆ.

ಮಕ್ಕಳಿಗೆ ನೀರಲ್ಲಿ ಮುಳುಗಿಕೊಂಡು ಕಡಲಜೀವಿಗಳನ್ನು ನೋಡುವ ರುಚಿ ಹತ್ತಿದರೆ ಹೊರಗೆ ಬರುವುದೇ ಇಲ್ಲ. ನಾನೂ ನನ್ನ ಮಗಳು ಶಮಾ, ಲೈಫ್ ಜಾಕೆಟ್ಟನ್ನೂ ಮುಳುಗುಮುಖವಾಡವನ್ನೂ ಧರಿಸಿ ಈಜುತ್ತಾ ಬಹುದೂರದವರೆಗೆ ಕಡಲಕೊಳವನ್ನು ದಾಟಿ ಓಪನ್ ಸೀ ಬರುವತನಕ ಹವಳಗಳನ್ನೂ ಮೀನುಗಳನ್ನೂ ನೋಡುತ್ತಾ ಹೋದೆವು. ಒಂದು ಕಡೆಯಂತೂ ನೀರಕುದುರೆ ಸಣ್ಣ ಗೂಡೊಳಕ್ಕೆ ಹೋಗುವುದು, ಮೇಲೆ ಬಂದು ಮಿಣಮಿಣ




ಬೀಚಿ ಬಂದ್ರು ತಿಂಮನ್ನ ತಂದ್ರು
ಎಲ್ಲಾರ್ಗೂನು ಒದ್ರು
''ಬೆಳೆಸಿಕೊಳ್ರಯ್ಯ ಹಾಸ್ಯದ ಬಳ್ಳಿ
ನಮ್ಮೂರ್ ಹುರುಪಿನ ಹಳ್ಳಿ''

ಮೈ ಅಲಗಿಸುವುದು ಮಾಡಿ ತಮಾಷೆ ಮಾಡುತ್ತಿತ್ತು. ಸ್ಕೂಬಾಡೈವಿಂಗ್ ಮಾಡಿದರೆ ಇದಕ್ಕಿಂತಲೂ ಭಿನ್ನವಾದ ಅನುಭವವಾಗುತ್ತದೆ. ಕವರಟ್ಟಿಯಲ್ಲಿ ಡೈವಿಂಗ್ ಸೌಲಭ್ಯವಿದೆ. ಆದರೆ ಮಹಾ ಅವಸರದ ಈ ಟ್ರಿಪ್ಪಿನಲ್ಲಿ ಇದನ್ನೆಲ್ಲಾ ಅನುಭವಿಸಲು ಸಾಧ್ಯವೇ ಆಗುವುದಿಲ್ಲ.

ಕಲ್ಪೆಟ್ಟಾದಲ್ಲಿರುವ ಮರೀನ್ ಮ್ಯೂಸಿಯಂ ಅತ್ಯಂತ ಪ್ರಸಿದ್ಧವಾದುದು. ಲಕ್ಷದ್ವೀಪದ ಕಡಲಿನೊಳಗಿನ ಚರಿತ್ರೆಯನ್ನೇ ತೆರೆದಿಡುವಂತೆ ಅದನ್ನು ರೂಪಿಸಲಾಗಿದೆ. ಲಕ್ಷದ್ವೀಪದಲ್ಲಿ ಹಿಡಿಯಲಾದ ಭಾರೀ ತಿಮಿಂಗಿಲ, ಶಾರ್ಕುಗಳ ಅಸ್ಥಿಪಂಜರಗಳೆಲ್ಲ ಅಲ್ಲಿವೆ. ಲಕ್ಷದ್ವೀಪದ ಕಡಲು ಶಾರ್ಕ್‌ಮೀನುಗಳಿಗೆ ಪ್ರಸಿದ್ಧ. ಮ್ಯೂಸಿಯಮ್ಮಿನಲ್ಲಿ ಒಂದು ಭಾರೀ ಕೊಳ ಕಟ್ಟಿಸಿ ಶಾರ್ಕ್ ಮರಿಗಳನ್ನು ಬಿಟ್ಟಿದ್ದರು. ಅವು ಏರ್‌ಪೋರ್ಟುಗಳಲ್ಲಿ ತಿರುಗುವ ವಿಮಾನಗಳಂತೆ ಗಂಭೀರವಾಗಿ ಓಡಾಡಿಕೊಂಡಿದ್ದವು. ಬೃಹದಾಕಾರ ಬೆಳೆಯುವ ಇವನ್ನು ಎಷ್ಟು ದಿನ ಅಂತ ಕೊಳಗಳಲ್ಲಿ ಇಟ್ಟಾರು? ಒಂದು ದಿನ ಕಡಲಿಗೆ ಬಿಡಲೇಬೇಕು.

**ಮಿನಿಕಾಯ್**

ಲಕ್ಷದ್ವೀಪಗಳಲ್ಲಿ ಸರ್ವವ್ಯಾಪಿಯಾಗಿರುವ ಮಾಪ್ಲಾ ಸಂಸ್ಕೃತಿಗೆ ಭಿನ್ನವಾದ ದ್ವೀಪವೆಂದರೆ ಮಿನಿಕಾಯ್. ಅದು ಲಕ್ಷ ದ್ವೀಪಗಳಲ್ಲೇ ಬಹುದೂರವಿದೆ - ಕೊಚ್ಚಿಯಿಂದ ನಾನೂರು ನಾಟಿಕಲ್ ಕಿಮೀ ಪಯಣ. ವಾಸ್ತವದಲ್ಲಿ ನಮ್ಮ ಪ್ರವಾಸ ಶುರುವಾಗುವುದೆ ಮಿನಿಕಾಯದಿಂದ. ಇಲ್ಲಿಂದ ಜನರನ್ನು ಇಳಿಸುತ್ತ ಹತ್ತಿಸಿಕೊಳ್ಳುತ್ತ, ದ್ವೀಪಗಳನ್ನು ಸುತ್ತುತ್ತ ಹಡಗು ಐದನೇ ದಿನಕ್ಕೆ ಕೊಚ್ಚಿಗೆ ಮರಳುತ್ತದೆ. ಮಿನಿಕಾಯದಲ್ಲಿರುವುದು ಮಾಲ್ದೀವಿ ಸಂಸ್ಕೃತಿ. ಮಾಲ್ದೀವ್ಸ್ ದೇಶ ಇಲ್ಲಿಗೆ ೭೦-೮೦ ಮೈಲಿ. ಮಿನಿಕಾಯನ್ನು ಭಾರತವು ಯಾವತ್ತೋ ವಶಪಡಿಸಿಕೊಂಡಿದೆ. ಭಾಷಿಕವಾಗಿ ಸಾಂಸ್ಕೃತಿಕವಾಗಿ ಮಾಲ್ದೀವಿನ ಜತೆ ಗಾಢ ಸಂಬಂಧ ಇದ್ದರೂ, ಮಿನಿಕಾಯಕ್ಕೆ ಅದೀಗ ಪರದೇಶ. ನಾನಿದ್ದವನು ''ನೋಡಿ, ರಾಜಕೀಯವಾಗಿ ಬಲಿಷ್ಠರಾದವರು ಪರನಾಡುಗಳನ್ನು ಆಕ್ರಮಿಸಿಕೊಂಡರೆ, ಅವುಗಳ ಸಾಂಸ್ಕೃತಿಕ ಬೇರುಗಳಿಂದ ಕತ್ತರಿಸಿದಂತೆ ಆಗುತ್ತದೆ'' ಎಂದು ಥಿಯರಿ ಗೊಣಗಿದೆ. ನಮ್ಮ ಹಡಗಿನಲ್ಲಿ ಹನಿಮೂನಿಗೆಂದು ಬಂದಿದ್ದ ಕನ್ನಡಿಗ ತರುಣನು (ಆತ ದಕ್ಷಿಣ ಕನ್ನಡಿಗ ತಂದೆ ಮಲೆಯಾಳಿ ತಾಯಿಯ ಮಗ. ಈತ ಇಡೀ ಹಡಗಿನಲ್ಲಿ ಎಲ್ಲರನ್ನೂ ಅವರವರ ಭಾಷೆಯಲ್ಲೇ ಮಾತಾಡಿಸುತ್ತ ಬಹಳ ಜನಪ್ರಿಯನಾಗಿದ್ದನು.) ತಟ್ಟನೆ ''ರೀ ಸ್ವಾಮಿ, ಇಂಡಿಯಾದಲ್ಲಿ ಇರುವುದು ಮಿನಿಕಾಯದವರ ಅದೃಷ್ಟ. ಇವರಿಗೆ ಇಲ್ಲಿ ಇಷ್ಟಾದರೂ ಸೌಲಭ್ಯ ಸಿಕ್ಕಿದೆ. ಮಾಲ್ದೀವಿನಲ್ಲಿದ್ದರೆ ನಾಯಿಪಾಡಾಗಿರುತ್ತಿತ್ತು'' ಎಂದು ಹೇಳಿದ ಅವನ ಮಾತಲ್ಲಿ ನಿಜವಿರಬಹುದು. ಭಾರತ ಸರಕಾರವು ಈ ದ್ವೀಪಗಳಿಗೆ ಅನೇಕ ಬಗೆಯ ಸೌಲಭ್ಯ ಒದಗಿಸಿದೆ. ರಾತ್ರಿಯಾದೊಡನೆ ಕತ್ತಲಲ್ಲಿ ಮುಳುಗುವ ದ್ವೀಪಗಳಿಗೆ ಡೀಸಲ್ ಚಾಲಿತ ವಿದ್ಯುತ್ ಸ್ಥಾವರ ಸ್ಥಾಪಿಸಿ ಬೆಳಕು ಕೊಟ್ಟಿದೆ. ಇಲ್ಲಿ ಒಳ್ಳೆ ಶಾಲೆಗಳಿವೆ. ನನಗಂತೂ ಇಲ್ಲಿ ಬಡತನ ಎಂಬುದು ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಮಾಲ್ದೀವ್ಸ್ ಎಂತಹ ಸಣ್ಣ ಮತ್ತು ದುರ್ಬಲ ದೇಶವೆಂದರೆ, ಒಂದು ಸಲ ಕೆಲವೇ ಜನ ಪುಂಡರು ದೋಣಿಯಲ್ಲಿ ಹೋಗಿ ಅದರ ರಾಜಧಾನಿ ಮಾಲೆಯನ್ನೇ ವಶಪಡಿಸಿಕೊಂಡಿದ್ದರು. ಆಗ ಭಾರತವು ತನ್ನ ಸೇನೆ ಕಳಿಸಿ ಮುಕ್ತಗೊಳಿಸಿದ್ದನ್ನು ಟೀವಿಯಲ್ಲಿ ನೋಡಿದ್ದೆವು. ಇದೆಲ್ಲ ನಿಜ ಆದರೂ, ಒಂದು ಸಮುದಾಯಕ್ಕೆ 'ಅದು ಯಾವ ದೇಶದಲ್ಲಿದ್ದರೆ ಒಳ್ಳೆಯದು' ಎಂದು ಮತ್ತೊಬ್ಬರು ನಿರ್ಧರಿಸುವುದು ಒಂದು ವಿಚಿತ್ರ ಅಹಂಕಾರ. ದುರ್ಬಲರಿಗೆ ಯಾವುದು ಒಳ್ಳೆಯದು ಎಂಬುದನ್ನು ಅಧಿಕಾರಸ್ಥರು, ವಿಜೇತರು ಯಾವತ್ತೂ ಮಾಡುತ್ತ ಬಂದಿದ್ದಾರೆ. ಇಲ್ಲೆ ಮಾಲ್ದೀವಿನ ಕೊಂಚ ಕೆಳಗೆ, ಅರಬ್ಬಿಸಮುದ್ರದಲ್ಲಿ, ಡಿಯಾಗೋ ಗಾರ್ಸಿಯಾ ಎಂಬ ದ್ವೀಪದಲ್ಲಿ ಬೀಡುಬಿಟ್ಟಿರುವ ಅಮೆರಿಕಾ, ಸಾವಿರಾರು ಸೈನಿಕ ವಿಮಾನ ಹಡಗುಗಳನ್ನಿಟ್ಟುಕೊಂಡು ಮಾಡುತ್ತಿರುವುದು ಇದೇ ಕೆಲಸ ತಾನೆ?

ಮಿನಿಕಾಯದ ಭಾಷೆ ಮಹಾಲಿ. ಭಾರತದ ಅತಿ ಅಲ್ಪಸಂಖ್ಯಾತ ಭಾಷೆಗಳಲ್ಲಿ ಇದು ಒಂದು. ಆದರೂ ಸರಕಾರವು ಮಹಾಲಿಯಲ್ಲೆ ಆಡಳಿತ ನಡೆಸುತ್ತದೆ. ಅಲ್ಲಿನ

ಬೋರ್ಡುಗಳಲ್ಲಿದ್ದ ಮಹಾಲಿ ಲಿಪಿ, ಮಕ್ಕಳು ಆಟಕ್ಕೆ ಬಳೆ ಚೂರು ಜೋಡಿಸಿಕೊಂಡಂತೆ ವಿಚಿತ್ರವಾಗಿತ್ತು. ಭಾರತದ ಅಥವಾ ಕೇರಳದ ಮುಸ್ಲಿಮರ ಯಾವ ನಡಾವಳಿಯೂ ಮಹಾಲಿ ಮುಸ್ಲಿಮರಲ್ಲಿಲ್ಲ. ಮಹಾಲಿ ಸಂಸ್ಕೃತಿಯು ಶ್ರೀಲಂಕೆಯಿಂದ ಹೋದ ಬೌದ್ಧ ಧರ್ಮ, ಅರಬರ ಇಸ್ಲಾಮಿ ಹಾಗೂ ಕೇರಳದಿಂದ ಹೋದ ವಿಭಿನ್ನ ಹಿಂದುಜಾತಿಗಳ ಸಂಕರವಾಗಿದೆ. ಮಿನಿಕಾಯದಲ್ಲಿ ಅಪರೂಪದ ಬೌದ್ಧವಿಗ್ರಹಗಳು ಸಿಕ್ಕಿವೆ. ಮಾಲ್ದೀವ್ಸ್ ದ್ವೀಪವನ್ನಾಳುತ್ತಿದ್ದ ಬೌದ್ಧ ದೊರೆಯು ಇಸ್ಲಾಮನ್ನು ಸ್ವೀಕರಿಸಿದ ಮೇಲೆ, ಇಡೀ ದ್ವೀಪಗಳು ಇಸ್ಲಾಮಿಕರಣ ಗೊಂಡವಂತೆ. ಆದರೂ ಅವುಗಳ ಬೌದ್ಧ ನೆನಪನ್ನು ಬಿಟ್ಟು ಕೊಟ್ಟಿಲ್ಲ. ಮಹಾಲಿ ಹೆಸರುಗಳಲ್ಲಿ ಅದು ಉಳಿದುಕೊಂಡಿದೆ. ಅವರ ಪಂಗಡದ ಹೆಸರುಗಳಲ್ಲಿ 'ಬೋಧ' ಎಂಬ ಶಬ್ದವಿದೆ. ಅವರ ನಾಯಕನ ಹೆಸರು 'ಬೋಧುದಾತ'. ನಮಗೆ ಪರಿಚಯವಾದ ಗೆಳತಿಯ ಹೆಸರು ಸುನಿಧಾ.

**ಮಿನಿಕಾಯದ ಜ್ವಾಲಾಮುಖಿ**

ಸುನಿಧಾ - ಮಿನಿಕಾಯದ ಮೇಲೆ ಬಹಳ ಸಂಗತಿಗಳನ್ನು ತಿಳಿಸಿದಳು. ಅವಳು ಪರಿಚಯವಾದ ಸಂದರ್ಭವೂ ವಿಚಿತ್ರ. ಮಿನಿಕಾಯದಿಂದ ಲಕ್ಷದ್ವೀಪದ ರಾಜಧಾನಿ ಕವರಟ್ಟಿಗೆ ಹಡಗು ಹೊರಟಿತ್ತು. ಕವರಟ್ಟಿ, ಕದಮತ್, ಅಂದ್ರೋತ್, ಅಗಟ್ಟಿ ಕೊನೆಯಲ್ಲಿ ಕೊಚ್ಚಿಗೆ ಹೋಗುವ ಜನ ಹತ್ತಿದರು. ಹಡಗು ಹೊರಟಕೂಡಲೆ, ಪ್ರಯಾಣಿಕರಿಗೂ ಹಡಗಿನ ಅಧಿಕಾರಿಗಳಿಗೂ ಜಗಳ ಶುರುವಾಯಿತು. ಜಗಳದಲ್ಲಿ ಒಬ್ಬ ತರುಣಿಯ ದನಿ ಜೋರಾಗಿತ್ತು. ಅವಳು ಬುರಖಾ ಹಾಕಿರಲಿಲ್ಲ. ತನ್ನ ದುಂಡನೆಯ ಬೆಳ್ಳನೆಯ ಚಂದ್ರಮುಖಕ್ಕೆ, ಅಂಚು ಕಟ್ಟಿದಂತೆ ಕಪ್ಪುತಟ್ಟನ್ನು ಸುತ್ತಲೂ ಸುತ್ತಿಕೊಂಡಿದ್ದಳು. ಅವಳ ಇಂಗ್ಲೀಷು, ಧೈರ್ಯ, ಅನ್ಯಾಯ ಪ್ರತಿಭಟಿಸುವ ಗುಣ ಚಕಿತಗೊಳಿಸಿದವು. ಅವಳು ಜಗಳ ಮುಗಿಸಿ, ಡೆಕ್ಕಿನ ಕಂಬಿಯ ಬಳಿ ಬಂದು, ಕಡಲ ಕಡೆ ನೋಡುತ್ತ ನಿಂತಳು. ಕೋಪದಿಂದ ಮುಖ ಇನ್ನೂ ಧುಮುಗುಡುತ್ತಿತ್ತು. ಹಕ್ಕು ಪ್ರಜ್ಞೆಯುಳ್ಳ ಒಬ್ಬ ಆಧುನಿಕ ಮುಸ್ಲಿಮ್ ತರುಣಿಯನ್ನು ಕಂಡು ನನಗೆ ಸಂತೋಷವಾಯಿತು. ಧೈರ್ಯಮಾಡಿ ಬಳಿ ಹೋಗಿ ''ಕ್ಷಮಿಸಿ, ನೀವು ಹಡಗಿನವರ ಜತೆ ಜಗಳ ಮಾಡಿದಿರಲ್ಲ, ಯಾಕೆಂದು ಕೇಳಬಹುದೆ?''ಎಂದೆ. ಅವಳ ಕೋಪ ಕಡಿಮೆಯಾಗಿದ್ದರೂ, ಹೊಗೆಯಾಟ ನಿಂತಿರಲಿಲ್ಲ. ನಾನು ಕರ್ನಾಟಕದವನು ಎಂದು ಗೊತ್ತಾದ ಮೇಲೆ ಅವಳಿಗೆ ಆಪ್ತತೆ ಬಂದಿತು. ಸುನಿಧಾ ಮೈಸೂರು ಮುಕ್ತ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ಸಾಹಿತ್ಯ ತಕ್ಕೊಂಡು ಬಿ.ಎ. ಮಾಡುತ್ತಿದ್ದಳು. ಅವಳು ಈ ಹಡಗಿನವರಿಂದ ದ್ವೀಪದ ಜನರಿಗೆ ಆಗುತ್ತಿರುವ ಕಷ್ಟಗಳನ್ನು ಹೇಳಿಕೊಂಡಳು. ಮಿನಿಕಾಯದ ಸಂಸ್ಕೃತಿ ಮಾಪ್ಳಾಗಿಂತ ಹೇಗೆ ಬೇರೆ ಎಂಬುದನ್ನು ಹೇಳುತ್ತಾ ಹೋದಳು.

**ಕಾಯುವ ಹೆಂಗುಸರು**

ಅವಳ ಪ್ರಕಾರ ದ್ವೀಪದ ಜನರ ಮುಖ್ಯ ಸಮಸ್ಯೆ ಎರಡು: ಒಂದನೆಯದು ವಾರಕ್ಕೊಮ್ಮೆ ಬರುವ ಹಡಗಿನದು. ಎರಡನೆಯದು ಇಲ್ಲಿನ ಹೆಂಗಸರ ಪಾಡಿನದು. ಹೆಂಗಸರ ಮಾತು ಬಂದೊಡನೆ ನಾನು 'ಕೊಂಚ ಇರಿ' ನಮ್ಮ ಗುಂಪಿನ ಸದಸ್ಯರನ್ನು ಕರೆತರುವೆ ಎಂದು ಓಡಿಹೋಗಿ ''ಬನ್ನಿ ಮಿನಿಕಾಯದ ಒಂದು ಸುಂದರ ಜ್ವಾಲಾಮುಖಿ ತೋರಿಸುತೇನೆ'' ಎಂದು ಹೇಳಿ ಬಾನುವನ್ನೂ ಮಹಿಳಾ ಅಧ್ಯಯನ ವಿಭಾಗದಲ್ಲಿ ಸಂಶೋಧನೆ ಮಾಡುವ ಡಾ. ಉಷಾ ಅವರನ್ನೂ ಕರೆತಂದೆ. ಅಷ್ಟುಹೊತ್ತಿಗೆ ಸುನಿಧಾ ಜಮಖಾನೆ ಹಾಸಿಕೊಂಡು ಡೆಕ್ಕಿನ ಮೇಲೆ ತನ್ನ ಕುಟುಂಬದೊಡನೆ ಕುಳಿತಿದ್ದಳು. ನಮ್ಮ ಚರ್ಚೆ ಮುಂದುವರೆಯಿತು. 'ಇಲ್ಲಿ ಮಹಿಳೆಯರ ಕಷ್ಟ ಎಂದರೆ ಯಾವುದು?' ಎಂದು ಬಾನು ಕೇಳಿದಳು. ಸುನಿಧಾ ತಟ್ಟನೆ ಹೇಳಿದಳು: 'ಹೆರಿಗೆಯಲ್ಲಿ ಸಾಯುವುದು'. ಉತ್ತರದಿಂದ ನಮಗೆ ಶಾಕ್. 'ಇಲ್ಲಿನ ಗರ್ಭಿಣಿಯರಿಗೆ ಹಾಲು ಹಣ್ಣು ತರಕಾರಿ ಸಿಕ್ಕುವುದಿಲ್ಲ. ಅನಿಮಿಕ್ಕಾದ ಹೆಂಗಸರು ಹಡೆಯುವಾಗ ಸಾಯುತ್ತಾರೆ. ದ್ವೀಪಕ್ಕೊಬ್ಬ ಡಾಕ್ಟರೇನೋ ಇದ್ದಾನೆ. ಹೆರಿಗೆ ಡಾಕ್ಟರು ಇರುವುದು ಕವರಟ್ಟಿಯಲ್ಲಿ ಮಾತ್ರ; ಮುಸ್ಲಿಂ ಗಂಡಸರು ಮಕ್ಕಳಾಗದ ಆಪರೇಶನ್ ಮಾಡಿಸದ ಕಾರಣವೂ ಇದೆ.' ಈ ಕತೆಯನ್ನ ಕೇಳಿದ ಮೇಲೆ ಶಮಾ ಹೇಳಿದಳು: ''ಅಪ್ಪಾ, ನಾನೇನಾದರೂ ಡಾಕ್ಟರಾದರೆ, ಈ ದ್ವೀಪಗಳಿಗೆ ಬಂದು ಕೆಲಸ ಮಾಡಬೇಕು ಅನಿಸುತ್ತದೆ.'' ನಾನು ನಿನ್ನ ಪ್ರತಿಜ್ಞೆ ನಿಜವಾಗಲಿ, ಆಮೀನ್ ಎಂದೆ- ವಿನೋದದಿಂದ.

ದ್ವೀಪಗಳು ಜನರನ್ನು ಬಂಧಿಸುತ್ತವೆ ಎಂದು ನನಗೆ ಯಾವಾಗಲೂ ಅನಿಸುತ್ತದೆ. ಇಲ್ಲಿನ ಹೆಂಗಸರಿಗೆ ಕಾಯುವುದು ಒಂದು ಕಾಯಕವಾಗಿದೆಯೇ ? ಕಡಲ ಮೇಲೆ ಹೋದ ಗಂಡಿಗಾಗಿ ಕಾಯಬೇಕು. ಎಲ್ಲ ಗಂಡಸರು ಕಡಲಿಗೆ ಹೋಗಿಲ್ಲ ; ಕಡಲನ್ನು ದಾಟಿ ಕೆಲವರು ಕೇರಳಕ್ಕೆ, ಮತ್ತೆ ಕೆಲವರು ಕೊಲ್ಲಿ ದೇಶಗಳಿಗೆ ಹೋಗಿದ್ದಾರೆ. ಹೀಗಾಗಿ ಹೆಂಗಸರು ಮುದುಕರು ಮಕ್ಕಳೇ ದ್ವೀಪಗಳಲ್ಲಿರುವುದು. ಈ ಕಾರಣಕ್ಕೆ ಹೆಣ್ಣಿಗೆ ಇಲ್ಲಿ ಸಾಮಾಜಿಕ ಬದುಕು ತೆರೆದಿದೆ.

## ಬಾಮಿಯಾನ ಬುದ್ಧ ಅವನು...



ಬಾಮಿಯಾನ ಬುದ್ಧ ಅವನು ಚೂರು
ಚೂರೇ ಚೂರಾಗಿ ನೆಲಕ್ಕೆ
ಒರಗುವಾಗ ಮೊಗದಲ್ಲಿ ಕರುಣೆ, ಸಣ್ಣ ನಗು
ಮುಂಗುರುಳಿನ ಮಂಜು
ಕರಗಿ ನಿಮೀಲಿತ ಕಣ್ಣ ಕೊನೆಯಲ್ಲಿ
ಧಾರೆ ಧಾರೆ, ಮಗು ಹೇಳಿತು
ಗೊಂಬೆ ಮುಖ ಅಳುತ್ತಿದೆ.

ಅವನೂ ಅತ್ತಿದ್ದ ಕೆತ್ತಿ ಮುಗಿಸಿದಾಗ
ನೆಟ್ಟಿರುಳಿನ ಪೂರ್ಣ ಚಂದ್ರಬಿಂಬ
ಬೆಳಕಲ್ಲಿ ನೇತ್ರೋನ್ಮಿಲನದ
ಪರವಶತೆಗೆ ಏನು ಸಾಟಿ
ಆಕಾಶಕ್ಕಾದರೆ ಆಕಾಶಕ್ಕಿರಲಿ
ನೆಲಕ್ಕಾದರೆ ನೆಲಕ್ಕಿರಲಿ
ಅಂತಃಕರಣದ ಜ್ಯೋತಿ ಬೆಳಗುತ್ತಿರಲಿ.

ಬಾಮಿಯಾನ ಬುದ್ಧ ಅವನು
ನಿಂತೇ ಇದ್ದ ಬಿಸಿಲು ಕುದಿಯುವ
ರಣ ಮಧ್ಯಾಹ್ನಗಳಲ್ಲಿ ತಂಪು ನೆರಳು ಚಾಚುತ್ತಾ
ತುಣುಕು ಮೋಡಗಳು ಅವನ ಹೆಗಲು
ಬಳಸಿ ಹನಿದವು ವಲಸೆ ಹಕ್ಕಿಗಳು
ಬಗಲಿನಲ್ಲೇ ಮೊಟ್ಟೆ ಕಾವಿಗಿರಿಸಿದ ಕಲರವ
ದಂಡಯಾತ್ರೆಯ ಮಂದಿ, ಅಂಬಾರಿಯ ಸಾಮ್ರಾಟರ
ಹಿರಿದ ಖಡ್ಗದ ಗಾಯ ಮೈ ತುಂಬಾ
ಹೊತ್ತು , ಹೊತ್ತವರ ಸಂತೈಸಿದ್ದು ಅವನೇ.

ಬಾಮಿಯಾನ ಬುದ್ಧ ಅವನು ನಿಂತೇ ಇದ್ದ
ತಳಮಳಿಸುತ್ತಾ ನಿಷ್ಕಾರಣ ದ್ವೇಷಕ್ಕೆ
ಕಾರಣ ಕೇಳುವ ಪ್ರೀತಿಗೆ
ಜಗದ ವ್ಯಾಪಾರವೆಲ್ಲಾ ಸಾವಿನ ತಕ್ಕೆಯಲ್ಲಿ
ಹೇಳಿದವನೇ ಅವನು ಯಾಕೆ
ಹೃದಯ ಒಡೆದುಕೊಂಡ, ಚೂರು ಚೂರೇ
ಮಣ್ಣ ಮುಟ್ಟಿ ಕಣ್ಣೀರು ಹರಿಸಿಕೊಂಡ

ಈಗ
ಕಾರವಾನವೊಂದು ಹೆಜ್ಜೆ ಸವೆಸುತ್ತಿದೆ
ನೆರಳು ಹುಡುಕುತ್ತಾ ಹೀಗೆ.

**ತುಳಸೀ ವೇಣುಗೋಪಾಲ್**
ಸಿ೨ಎ/೩೦೧, ಭಾರತೀಯ ಕಲಾಮಂಡಲ
ಸಿ.ಎಚ್.ಎಸ್. ಓಂ ನಗರ, ಜೆ. ಬಿ. ನಗರ ಎಕ್ಸ್‌ಟೆನ್‌ಷನ್
ಅಂಧೇರಿ ಈಸ್ಟ್, ಮುಂಬೈ - ४೦೦ ೦೯೯

ಆದರೆ ಈ ದ್ವೀಪಗಳಲ್ಲಿ ಎಲ್ಲಿ ಹೋಗಬೇಕು ಅವಳು? ಕೇರಳದ ಮಾಪ್ಪಾಗಳು ಹಾಡುವ ಪಾಟ್ಟುಗಳಲ್ಲಿ ಹೆಣ್ಣಿನ ಇಂತಹ ಏಕಾಂತದ ಕ್ಷಣಗಳ ವರ್ಣನೆ ಬಹಳ ಇದೆಯೆಂದು ಕೇಳಿದ್ದೇನೆ. ಮಿನಿಕಾಯದ ಸಾಂಪ್ರದಾಯಿಕ ಮನೆಗಳನ್ನು ತೋರಿಸಲು ನಮ್ಮನ್ನು ಒಂದು ದೊಡ್ಡಮನೆಗೆ ಕರೆದುಕೊಂಡು ಹೋಗಲಾಗಿತ್ತು. ಹಾಗೆ ಮತ್ತೊಬ್ಬರ ಮನೆಯೊಳಗೆ ನುಗ್ಗಿ ಅವರ 'ಸಂಸ್ಕೃತಿ'ಯನ್ನು ಅಧ್ಯಯನ ಮಾಡುವ ಕುತೂಹಲದಲ್ಲಿ ನೋಡುವುದು ಹಿಂಸೆಯ ಕೆಲಸ. ಅವರ ಖಾಸಗಿ ಬದುಕಿನಲ್ಲಿ ನುಗ್ಗುತ್ತಿದ್ದೇವೆ ಎಂಬ ಹಿಂಜರಿಕೆ ಕತ್ತಿಗೆ ಕೈಹಾಕಿ ಅಮುಕುತ್ತದೆ. ಆದರೆ ಆ ಮನೆಯವರು, ಈ ಕ್ಷಣ ಬಂದು ಇನ್ನೊಂದು ಕ್ಷಣ ಹೋಗುವ ಪ್ರವಾಸಿಗರನ್ನು ಸಂಭಾಳಿಸುವಲ್ಲಿ, ನಮ್ಮ ಹಂಪಿಯ ಜನರಂತೆ ನಿರ್ಲಿಪ್ತತೆ ಪಡೆದಂತಿತ್ತು. ನನಗಲ್ಲಿ ಎದ್ದುಕಂಡಿದ್ದು ರಾಜರಂತೆ ಕೂರಲು ಮಾಡಿಕೊಂಡಿರುವ ಮೆತ್ತೆದಿಂಬು ಹಾಗೂ ತೂಗುಮಂಚಗಳು. ದ್ವೀಪಗಳಲ್ಲಿ ತಿರುಗಾಡಲು ಜಾಗವಿಲ್ಲ, ದ್ವೀಪ ಬಿಟ್ಟು ಹೋಗಲು ಸಾಧ್ಯವಿಲ್ಲ, ಜತಗೆ ಗಂಡನಿಲ್ಲ ಎಂಬಂತಹ ಇಕ್ಕಟ್ಟುಗಳಲ್ಲಿ, ಹೆಂಗಸರು ಕಾಲದೂಡಲು ಇದೆಲ್ಲ ವ್ಯವಸ್ಥೆ ಮಾಡಿಕೊಂಡಿರಬಹುದೇ? ಅನುಮಾನ. ಆದರೆ ಟೀವಿ ಬಂದು ಈ ಜನರನ್ನು ಹೊರಜಗತ್ತಿಗೆ ಕಿಂಡಿ ಕೊರೆದಿದೆ. ಎಲ್ಲರ ಮನೆಗಳಲ್ಲಿ ಟೀವಿ ಕಡ್ಡಾಯವಾಗಿ ಉರಿಯುತ್ತಿತ್ತು. ಸುನಿಧಾ ಹೇಳುವ ಪ್ರಕಾರ, ಇಲ್ಲಿ ಪಕ್ಕದ ದ್ವೀಪವನ್ನು ಕೂಡ ನೋಡದೆ ಸಾಯುವ ಹೆಂಗಸರು ಬೇಕಾದಷ್ಟು ಇದ್ದಾರೆ. ನನಗೆ ತೆಂಗಿನಮರಕ್ಕೆ ಕಟ್ಟಿಸಿಕೊಂಡು ಗರಿ ತಿನ್ನುತ್ತಿರುವ ಆಡುಗಳೇ ನೆನಪಾದವು. ಆದರೆ ಡೆಕ್ಕಿನ ಮೇಲೆ, ಬುರುಖಾ ಧರಿಸದೆ ದಿಟ್ಟವಾಗಿ ಓಡಾಡಿಕೊಂಡಿರುವ ಅನೇಕ ಆಧುನಿಕ ತರುಣಿಯರು ಕಂಡರು. ದ್ವೀಪಗಳಲ್ಲಿ ಕಾಲೇಜಿಲ್ಲದ ಕಾರಣ, ಬಹಳ ಜನ ಹೆಣ್ಣುಮಕ್ಕಳನ್ನು ಓದಲು ಮೇನ್‌ಲ್ಯಾಂಡಿಗೆ ಕಳಿಸುವುದಿಲ್ಲವಂತೆ. ಸುನಿಧಾ ಒಂದು ಅಪವಾದ.

ತೆಂಗು ಹಾಗೂ ಕಡಲು ಲಕ್ಷದ್ವೀಪಗಳ ಜೀವನಾಡಿ. ಆದರೆ ಎಲ್ಲರೂ ಇವೆರಡನ್ನೂ ನೆಚ್ಚಿ ಬದುಕಲಾಗದು. ಕೆಲಸ ಹುಡುಕಿಕೊಂಡು ಗಂಡಸರು ದ್ವೀಪ ಬಿಟ್ಟು ಹೋಗುವುದು ಅನಿವಾರ್ಯ. ಅವರ ಕಷ್ಟ ಹೆಂಗಸರ ಕಾಯುವಿಕೆಗಿಂತ ಕಡಿಮೆಯಾದದ್ದಲ್ಲ. ಮನದನ್ನೆಯನ್ನೂ ಎಳೆಮಕ್ಕಳನ್ನೂ ಬಿಟ್ಟು ದೂರ ನಾಡಿಗೆ ದುಡಿಯಲು ಹೋಗುವ, ತಮ್ಮ ಯೌವನವನ್ನೆಲ್ಲ ಸವೆಸಿ, ಭಾರತಕ್ಕೆ  ವಿದೇಶಿ ವಿನಿಮಯ ಗಳಿಸಿಕೊಟ್ಟು, ಅರೆಮುದುಕರಾಗಿ ಕೈತುಂಬ ಹಣದೊಂದಿಗೆ ಬಂದು ಭರ್ಜರಿ ಮನೆ ಕಟ್ಟಿಸಿಕೊಂಡು ಬದುಕುವ ಈ ಗಂಡಸರ ಬಗ್ಗೆ ಯೋಚಿಸಿದರೆ ಅಯ್ಯೋ ಅನಿಸುತ್ತದೆ. ಇಲ್ಲಿನ ಮಕ್ಕಳಲ್ಲೂ ದ್ವೀಪಗಳನ್ನು ಬಿಟ್ಟು ದುಡಿಯಲು ಹೋಗುವ ಉಮೇದು ಬಹಳ. ಅವರ ಆಟಿಕೆಗಳಲ್ಲೂ ಇದರ ನೆರಳು ಕಂಡಂತಾಯಿತು. ತೆಂಗಿನ ಮರದ ಕೆಚ್ಚಿನಲ್ಲಿ ಮಾಡಿದ ದೋಣಿಗಳಲ್ಲಿಯೂ ಮಕ್ಕಳು ಆಡುತ್ತಿದ್ದರು. ದೋಣಿ ಅವರ ನಿತ್ಯ ಬದುಕಿನ ಸಂಗಾತಿ. ಜತೆಗೆ ಈ ದ್ವೀಪಗಳಾಚೆ ಅವರನ್ನು ಕರೆದೊಯ್ಯುವ ಕನಸಿನ ಸಂಗಾತಿಯೂ ಆಗಿರಬಹುದು ಅನಿಸಿತು. ದೂರನಾಡುಗಳಿಗೆ ಹೋಗುವ ಕನಸು ಕಾಣುವುದು ದ್ವೀಪಗಳ ಬದುಕಿನಲ್ಲಿ ಅನಿವಾರ್ಯ. ಮೇನ್‌ಲ್ಯಾಂಡಿನ ಜನ ಬದುಕು ಹುಡುಕಿಕೊಂಡು ದ್ವೀಪಗಳಿಗೆ ಹೋಗುತ್ತಿರುವುದನ್ನು ಅಂಡಮಾನಿನಲ್ಲಿ ನೋಡಿದ್ದೆವು. ಇಲ್ಲಿ ದುಡಿಮೆ ಹುಡುಕಿಕೊಂಡು ಜನ ದ್ವೀಪಗಳಾಚೆ ಹೋಗುತ್ತಿದ್ದರು.

ಮಿನಿಕಾಯದ ಒಂದು ಕಡೆ ಕಡಲದಂಡೆಗೆ ಮುಖಮಾಡಿದಂತಹ ಒಂದು ತೆಂಗಿನ ಚಪ್ಪರದಲ್ಲಿ ಏಳೆಂಟು ಮಹಾಲಿ ಹೆಂಗಸರು ಗುಡ್ಡೆ ಹಾಕಿಕೊಂಡು ಕುಳಿತಿದ್ದರು. ಹೆಚ್ಚಿನವರು ವಯಸ್ಸಾದವರು. ನಾವು ಬಂದುದನ್ನು ಕಂಡು ಮುದುಡಿಕೊಂಡರು. ಬಾನು ಫೋಟೋಗಾಗಿ ವಿನಂತಿಸಿದಳು. ಅವರು ಮಹಾಲಿಯಲ್ಲಿ ''ಬೇಡಬೇಡ'' ಎಂದು ಮುಖಕ್ಕೆ ಸೆರಗು ಹೊದ್ದುಕೊಂಡರು. ಒಂದು ಅಜ್ಜಿ ''ತೋಬಾತೋಬಾ''ಎಂದಿತು - ಪಾಪ ಎಂಬರ್ಥದಲ್ಲಿ. ಅವರಲ್ಲಿ ಒಬ್ಬಳಿಗೇನೋ ಆಸೆಯಿದ್ದಂತಿತ್ತು. ಆದರೆ ಇಡೀಗುಂಪು ನಿರಾಕರಿಸುವುದನ್ನು ಕಂಡು ತಾನೂ ಸುಮ್ಮನಾದಳು. ಕಲ್ಪನಿಯಲ್ಲಿ ಮೇಕೆಗೆ ಬಾಳೆಲೆ ಕಡಿದು ಹಾಕುತ್ತಿದ್ದ ಒಬ್ಬ ಮಾಪ್ಪಾ ಹೆಂಗಸು ಕೂಡ ತನ್ನ ಫೋಟೋ ತೆಗೆಯಲು ನಿರಾಕರಿಸಿದಳು. ದೂರದ ಅಂಗಡಿಯಲ್ಲಿ ಕುಳಿತ ಗಂಡಸರು ನಮ್ಮ ಚೇಷ್ಟೆಯನ್ನು ನೋಡುತ್ತಿದ್ದರು. ಇವರ ಧರ್ಮಶ್ರದ್ಧೆ ವಿಚಿತ್ರ ಅನಿಸಿತು. ಆಧುನಿಕ ಲೋಕದ ಕೈಗಳು ತಾಗದ ಅನೇಕ ಮೂಲೆಗಳು ಇಲ್ಲಿರಬಹುದು. ಇದಕ್ಕಾಗಿಯೇ ಸುನಿಧಾ ಮತ್ತೆ ಮತ್ತೆ ಭವಿಷ್ಯದ ಭರವಸೆಯಂತೆ ತೋರಿದಳು. ಸಂತೋಷ ಕೊಟ್ಟಿದ್ದೆಂದರೆ, ಮಿನಿಕಾಯದ ಮಸೀದಿಗಳಲ್ಲಿ ಹೆಂಗಸರಿಗೆ ಪ್ರವೇಶ ವಿರುವುದು. ಇದು ಇಂಡೋನೇಶಿಯನ್ ಇಸ್ಲಾಮಿನ ಉದಾರವಾದಿ ಗುಣವಿರಬೇಕು.

**ಪರಿಜಕ್ಕಳಿ ನೃತ್ಯ**

ಒಮ್ಮೆ ನಮಗೆ ಮಾಪ್ಪಾ ನೃತ್ಯ ನೋಡುವ ಅವಕಾಶ ಸಿಕ್ಕಿತು. ನೃತ್ಯಗಾರರನ್ನು ಪ್ರವಾಸಿ ಇಲಾಖೆಯೆ ಕರೆಸಿತ್ತು. ಬಿಳಿಯರ ಮೋಜಿಗಾಗಿ ಆಫ್ರಿಕೆಯ ಜನ ಬಂದು ತಮ್ಮ 'ಸಂಸ್ಕೃತಿ' ಪ್ರದರ್ಶಿಸುವುದು ನೆನಪಾಗಿ ನಮ್ಮ ಮೇಲೇ ಜಿಗುಪ್ಸೆ ಬಂತು. ಅದನ್ನು ಬೀದಿ ನಾಟಕದಂತೆ ನೋಡುವುದು ಕಷ್ಟವಾಗುತ್ತಿತ್ತು. ಪ್ರವಾಸೋದ್ಯಮದಲ್ಲಿ ಸ್ಥಳೀಯ ಸಂಸ್ಕೃತಿಯನ್ನು ಒಂದು 'ವಸ್ತು'ವಾಗಿಸುವ, ಸ್ಥಳೀಯರನ್ನು 'ಬಳಸಿಕೊಳ್ಳುವ' ಅಂಶವನ್ನು ತೆಗೆದುಹಾಕುವುದು ಸಾಧ್ಯವೇ ಇಲ್ಲವೆ? ಅಥವಾ ಇದು ಹಿಂದುಳಿದ ದೇಶಗಳ ಪ್ರವಾಸೋದ್ಯಮದಲ್ಲಿ ಬಿಡಿಸಲಾಗದ ಅವಸ್ಥೆಯೋ? ಪಾಶ್ಚಾತ್ಯದೇಶಗಳು ಪ್ರವಾಸಿಗರಿಗೆ ತಮ್ಮ ತಂತ್ರಜ್ಞಾನ ತೋರಿಸಿ ದಂಗುಬಡಿಸಿದರೆ, ನಾವು ನಮ್ಮ 'ಸಂಸ್ಕೃತಿ' 'ಪ್ರಾಚೀನತೆ' ತೋರಿಸಿ ಚಕಿತಗೊಳಿಸಬೇಕು ಎಂಬುದನ್ನು ನಮಗೆ ಒಪ್ಪಿಸಿದವರು ಯಾರು? ಪ್ರವಾಸದಲ್ಲಿ ಅನ್ಯ 'ಸಂಸ್ಕೃತಿ'ಗಳ ದರ್ಶನವಾಗಬೇಕು, ಆದರೆ ಅದು ಟೀ ಕಾಫಿಯನ್ನು ತಟ್ಟೆಯಲ್ಲಿ ತಂದುಕೊಟ್ಟಂತೆ ಆಗಬಾರದು. ಪರಿಜಕ್ಕಳಿ ಎಂಬ ನೃತ್ಯದಲ್ಲಿ ಕುತೂಹಲ ಮೂಡಿಸಿದ್ದು ಕತ್ತಿಗುರಾಣಿ ಹಿಡಿದು ಮಾಡುವ ಯುದ್ಧಾನುಕರಣೆ. ಅರಬ್ಬಿಸಮುದ್ರದ ನಡುವೆ, ಅಕ್ಕಿನುಚ್ಚಿನಂತೆ ಇರುವ ಈ ದ್ವೀಪಗಳು ತಮ್ಮ ಚರಿತ್ರೆಯಲ್ಲಿ ಎಷ್ಟೊಂದು ಮಚ್ಚೆಗಳನ್ನು ಕಂಡಿವೆಯೋ? ಅವುಗಳಿಂದ ಇಳಿದುಬಂದ ಎಂತೆಂತಹ ವ್ಯಾಪಾರಿಗಳನ್ನು, ಸೈನಿಕರನ್ನು, ಮಿಷನರಿಗಳನ್ನು ಕಂಡಿವೆಯೊ ! ಅವರ ಜತೆ ಎಂತೆಂತಹ ಸ್ನೇಹ-ಜಗಳ ಮಾಡಿವೆಯೊ? ಮೊದಲು ಕಣ್ಣಾನೂರಿನ ರಾಜರು, ನಂತರ ಪೋರ್ಚುಗೀಸರು, ಬಳಿಕ ಟಿಪ್ಪು, ಕೊನೆಗೆ ಬ್ರಿಟಿಷರು ಈ ದ್ವೀಪಗಳನ್ನಾಳಿದವರು. ಇವೆಲ್ಲಾ ಅವರ ಜನಪದ ಸಾಹಿತ್ಯದಲ್ಲಿ ನೃತ್ಯದಲ್ಲಿ ಹೇಗೆ  ಸುಪ್ತವಾಗಿ ಮೂಡಿವೆಯೋ ತಿಳಿಯುವ ಆಸೆಯಾಯಿತು. ಈ ನೃತ್ಯಕಾರರ ಗುಂಪಿನಲ್ಲಿ ಹಾಡುವ ಗಾಯಕ ಕಪ್ಪನೆಯ ಹುಡುಗನಲ್ಲಿದ್ದ ನೀಗ್ರೋ ಲಕ್ಷಣಗಳು ಕೂಡ ಈ ದ್ವೀಪಗಳ ಮೇಲೆ ಹಾದುಹೋದ ಚರಿತ್ರೆಯ ಗಾಳಿಯ ಒಂದು ಗುರುತಿನಂತಿತ್ತು. ಅವನೊಬ್ಬ ಅದ್ಭುತ ಹಾಡುಗಾರ. ಅವನ ರಾಗಗಳು ತುಂಬ ಹಾಂಟಿಂಗ್ ಆಗಿದ್ದವು. ಒಂದು ಪದದ ರಾಗ ಮಾತ್ರ ಪ್ರಸಿದ್ಧ ಹಿಂದಿ ಹಾಡಿನ ಅನುಕರಣೆಯಾಗಿತ್ತು.



**ಹಡಗು: ದ್ವೀಪಗಳ ಬಂಧಿಸುವ ಕೊಂಡಿ?**

ಹೊಸ ಹೊಸಬರು ಬರುವುದು ಈ ದ್ವೀಪಗಳ ಪಾಲಿಗೆ ಶಾಪವೋ ವರವೋ. ನಾನು ಮಾತಾಡಿದ ಬಹಳ ಜನ ಈ ಟೂರಿಸಂನಿಂದ ಖುಶಿಯಾಗಿದ್ದಾರೆ. ಟೂರಿಸ್ಟರೂ ಬಾರದಿದ್ದರೆ ನಮಗೆ ಈಗಿರುವ ನಾಗರಿಕ ಸೌಲಭ್ಯಗಳೂ ಸಿಗುತ್ತಿರಲಿಲ್ಲ ಎಂದು ಹೇಳುತ್ತಾರೆ. ಇಲ್ಲಿನ ಜೀವನದಲ್ಲಿ ತೆಂಗು ಕಡಲು ಬಿಟ್ಟರೆ ಮೂರನೆಯ ಆಸರೆ ಪ್ರವಾಸೋದ್ಯಮ. ಹೀಗಾಗಿ 'ಟಿಪ್ಪುಸುಲ್ತಾನ' ಬಂತೆಂದರೆ ಅವರಿಗೆ ಹೊರಜಗತ್ತಿನ ತುಣುಕೊಂದು ಬಂದಂತೆ. ಕೈತುಂಬ ಕೆಲಸ ಸಿಕ್ಕಂತೆ. ಈ ಹಡಗಿನ ಹೆಸರು ಈ ದ್ವೀಪಗಳ ಬದುಕಿನಲ್ಲಿ ಪ್ರವಾದಿಯ ಹೆಸರಿನಷ್ಟೆ ಪವಿತ್ರವಾಗಿರಬೇಕು. ದ್ವೀಪಗಳ ಬದುಕೇ ವಿಚಿತ್ರ. ಅವು ಅತಿಥಿಗಾಗಿ ಕಾಯುತ್ತಾ ಇರುತ್ತವೆ. ಮತ್ತೆಂದೂ ಭೇಟಿಯಾಗದೆ ಹೊರಟುಹೋಗುವ ಅತಿಥಿಗೆ ತಣಿಸಿ, ನೆನಪುಗಳು ತುಂಬಿ ಬೀಳುಕೊಡುತ್ತವೆ.

ದ್ವೀಪದ ಜನರಿಗೆ ಕೊಚ್ಚಿಗೆ ಬಂದುಹೋಗಲು ಟಿಕೇಟಿನಲ್ಲಿ ಸಿಕ್ಕಾಪಟ್ಟೆ ರಿಯಾಯಿತಿಯಿದೆ. ಆದರೆ ಸಾಕಾದಷ್ಟು ಹಡುಗುಗಳಿಲ್ಲ. 'ನಿಮ್ಮ ಮುಖ್ಯ ಸಮಸ್ಯೆ ಯಾವುದು' ಎಂದರೆ ಎಲ್ಲರೂ 'ಒಂದು ಹಡಗು ಸಾಲದು' ಎಂದೇ ಹೇಳುತ್ತಿದ್ದರು. ಲಕ್ಷ ದ್ವೀಪಗಳನ್ನು ೩೦ ವರುಷಗಳಿಂದ ಪ್ರತಿನಿಧಿಸುತ್ತಿರುವ ಏಕೈಕ ಪಾರ್ಲಿಮೆಂಟ್ ಸದಸ್ಯ ಕಾಂಗ್ರೆಸ್ಸಿನ ಸೈಯದ್ ಬಗ್ಗೆ ಅನೇಕರಿಗೆ ಅಸಮಾಧಾನವಿದೆ. (ಈಚೆಗೆ ಮಂಗಳೂರಿನಿಂದ ಲಕ್ಷದ್ವೀಪಕ್ಕೆ ಒಂದು ಪ್ರಯಾಣಿಕರ ಸಣ್ಣ ಹಡಗನ್ನು ಬಿಡಲಾಗಿದೆ.) ದ್ವೀಪಗಳನ್ನೆಲ್ಲಾ ಸುತ್ತಾಡುವ ಹಡಗಿನಲ್ಲಿ ತನ್ನ ದ್ವೀಪ ಬರುವ ದಿನವನ್ನು ಕಾಯುತ್ತ ಇರಬೇಕು. ಕೆಲವರಿಗೆ

ಅವರ ದ್ವೀಪ ನಾಲ್ಕನೇ ದಿನ ಬರುತ್ತದೆ. ಹಡಗಿನಲ್ಲಿ ಎಷ್ಟೇ ರಶ್ಶಿದ್ದರೂ ಎಲ್ಲರನ್ನೂ ಹತ್ತಿಸಿಕೊಳ್ಳಲಾಗುತ್ತದೆ. ಆದರೆ ಅವರಿಗೆ ಸೌಲಭ್ಯ ಕೊಡುವುದಿಲ್ಲ. ನಾವು ಒಮ್ಮೆ ಬಂಕರಿಗೆ ಹೋದೆವು. ನೂರಾರು ಹೆಂಗಸರು ಮಕ್ಕಳು ತಂತಮ್ಮ ಲಗೇಜುಗಳೊಂದಿಗೆ ಚಾಪೆ ಹಾಸಿಕೊಂಡು ಅಲ್ಲಲ್ಲೇ ಬಿದ್ದುಕೊಂಡಿದ್ದರು. ಬಂಕರಿನಲ್ಲಿ ಬಿಸಿಯಾದ ವಾತಾವರಣ ವಿರುವುದರಿಂದ ಹೆಚ್ಚಿನ ಪಯಣಿಗರು ಡೆಕ್ಕಿನ ಮೇಲೆ ಇರುತ್ತಾರೆ. ಡೆಕ್ಕಿನ ಮೇಲಿರುವುದು ಒಂದು ಭಾಗ್ಯ. ಅದರಲ್ಲೂ ರಾತ್ರಿ ಡೆಕ್ಕಿನ ಮೇಲೆ ಅಂಗಾತ ಮಲಗಿಬಿಟ್ಟರೆ ಹಡಗಿನ ಓಲಾಟಕ್ಕೆ ಇಡೀ ಗಗನದ ನಕ್ಷತ್ರಮಂಡಲವೇ ಜೋಕಾಲಿಯಂತೆ ಜೀಕುವುದನ್ನು ನೋಡುತ್ತ ನಿದ್ದೆಮಾಡಬಹುದು.

**ಕೊನೆಯ ದಿನದ ಅನಾಹುತ**

ಪ್ರವಾಸಿಗರು ಐಡೆಂಟಿಟಿ ಕಾರ್ಡು ಕಡ್ಡಾಯವಾಗಿ ಧರಿಸಲು ಹೇಳುತ್ತಾರೆ - ನಮ್ಮ ಮಂದೆಯ ಕುರಿ ಎಂದು ಬೇಗ ಗುರುತಿಸಲು ಸಾಧ್ಯವಾಗುವಂತೆ. ಕವರಟ್ಟಿಯಲ್ಲಿ ಮರೀನ್ ಮ್ಯೂಸಿಯಮ್ಮನ್ನು ನೋಡಿದ ಮೇಲೆ, 'ನಾವು ನಡೆದುಕೊಂಡು ಜೆಟ್ಟಿಗೆ ಬರುತ್ತೇವೆ' ಎಂದು ನಮ್ಮ ಮಾರ್ಗದರ್ಶಿಗೆ ಹೇಳಿದೆವು. ಆತ ಒಪ್ಪಲಿಲ್ಲ. ನಾವು ವ್ಯಾನಿಗೆ ಹತ್ತದೆ, ಉಪಾಯವಾಗಿ ತಪ್ಪಿಸಿಕೊಂಡು ಜೆಟ್ಟಿರೋಡಿನಲ್ಲಿ ನಡೆಯುತ್ತ ಹೊರಟೆವು. ಹ್ಯಾಟನ್ನು ತೆಗೆಯದೆ ಇದ್ದುದು ತಪ್ಪಾಯಿತು. ನಮ್ಮನ್ನು ಗುರುತಿಸಿದ ಆತ, ವ್ಯಾನು ನಿಲ್ಲಿಸಿ ಬಲವಂತವಾಗಿ ತುಂಬಿಕೊಂಡು ತಂದು ಮೇನ್ ಕ್ಯಾಂಪಿಗೆ ಒಗೆದ. ಈ ಪ್ಯಾಕೇಜು ಟೂರುಗಳ ಮಿತಿಯೇ ಇದು. ಜನರ ಜತೆ ಬೆರೆತು, ಅಲ್ಲಿನ ಬದುಕನ್ನು ತಿರುಗಾಡಿ ಬೆರೆತು ನೋಡುವ ಆಸೆಯಿದ್ದವರಿಗೆ ಈ ಪ್ರವಾಸ ವ್ಯವಸ್ಥೆ ನಿರಾಶೆ ತರುತ್ತದೆ. ಪ್ರವಾಸಿಗರು ತಮಗೆ ಮನಬಂದಂತೆ ತಿರುಗಲು ಬಿಟ್ಟರೆ, ಅವರನ್ನೆಲ್ಲ ಹುಡುಕಿ ಕೂಡಿಸಿ ಹಡಗು ಹತ್ತಿಸುವುದು ಅವರಿಗೂ ತಲೆನೋವು. ತಿರುಗಲು ಹೋದವರಿಗೆ ಹಡಗು ಬಂದಿದ್ದು ಹೋಗಿದ್ದು ಗೊತ್ತೂ ಆಗುವುದಿಲ್ಲ. ಅದು ಎಲ್ಲೋ ಕಡಲಲ್ಲಿ ನಿಂತು, ದೋಣಿಗಳಲ್ಲಿ ಬರುವ ಜನರನ್ನು ಹತ್ತಿಸಿಕೊಂಡು ಸದ್ದಿಲ್ಲದೆ ಹೊರಟುಹೋಗುತ್ತದೆ. ಹಡಗನ್ನು ತಪ್ಪಿಸಿಕೊಂಡರೆ ಒಂದುವಾರ ಅಲ್ಲೆ ಕೊಳೆಯಬೇಕು. ಹೀಗಾಗಿ ಪ್ರವಾಸಿಗರನ್ನು ಸಾಧ್ಯವಾದಷ್ಟು ಅತ್ತಿತ್ತ ಬಿಡದೆ, ಕೈದಿಗಳನ್ನು ಕಾಯುವಂತೆ ಕಾಯುತ್ತಾರೆ.

ಕೊನೆಯ ದಿನವನ್ನು ನಾವು ಕಲ್ಪನಿಯಲ್ಲಿ ಕಳೆದೆವು. ನಮ್ಮ ಹಡಗು ಬೇರೆ ದ್ವೀಪಗಳಿಗೆ ಜನರನ್ನು ಇಳಿಸಿ ಬರುವವರನ್ನು ಹತ್ತಿಸಿಕೊಂಡು ಬರಲು ಹೋಗಿದ್ದು ಇನ್ನೂ ಬಂದಿರಲಿಲ್ಲ. ಅದು ಬರುವ ತನಕ ಏರ್ಪಡಿಸಿದ್ದ ಮನರಂಜನೆ ಪೀಡೆಯಂತಿತ್ತು. ಅದರಿಂದ ಹೇಗೋ ತಪ್ಪಿಸಿಕೊಂಡು, ನಾನು ಬಾನು ಮಕ್ಕಳನ್ನು ಎಳೆದುಕೊಂಡು ದ್ವೀಪದೊಳಗೆ ತಿರುಗಾಡಿಕೊಂಡು ಹೊರಟೆವು. ಸುಂದರವಾದ ಚೊಕ್ಕಾದ ರಸ್ತೆಗಳು. ಸೈಕಲ್ಲುಗಳಲ್ಲಿ ತಿರುಗಾಡುವ ಹುಡುಗರು. ಒಂದು ಕಡೆ ಮಕ್ಕಳು ಹೆಡೆಮಟ್ಟೆಯನ್ನು ಬ್ಯಾಟು ಮಾಡಿಕೊಂಡು ಕ್ರಿಕೆಟ್ ಆಡುತ್ತಿದ್ದವು. ನಾವು ಹೋದೊಡನೆ ಮನೆಯೊಳಗೆ ಓಡಿಹೋಗಿ ತಾವು ಆರಿಸಿ ಡಬ್ಬದಲ್ಲಿಟ್ಟಿದ್ದ ಕವಡೆಗಳನ್ನು ತಂದುಕೊಟ್ಟವು. ಕಪ್ಪುಬಣ್ಣದ ಮಿರಿಮಿರಿ ಮಿಂಚುವ ಕವಡೆಗಳವು. ರಸ್ತೆ ಅಕ್ಕಪಕ್ಕದಲ್ಲಿ ಚೆಂದದ ಮನೆಗಳಿದ್ದವು. ಬೀದಿಗಳಲ್ಲಿದ್ದ ಅಂಗಡಿಗಳು ಸಾಮಾನುಗಳಿಂದ ತುಂಬಿಕೊಂಡಿದ್ದವು. ಜಲ್ಲಿಯನ್ನು ಅಮೂಲ್ಯ ವಸ್ತು ಎಂಬಂತೆ ಚೀಲಗಳಲ್ಲಿ ತುಂಬಿಕೊಂಡು ಜೋಪಾನವಾಗಿ ಇರಿಸಿಕೊಂಡಿದ್ದರು. ಕಲ್ಲುಗಳ ನಾಡಾದ ಹಂಪಿಯಿಂದ ಹೋದ ನನಗಂತೂ ಅದನ್ನು ಕಂಡು ಸಂತೋಷವಾಯಿತು. ಅನೇಕ ಭಾರೀ ಭಾರೀ ಕಲ್ಲು ಹೊತ್ತ ದೊಡ್ಡದೋಣಿಗಳು ಜೆಟ್ಟಿಗಳಲ್ಲಿ ನಿಂತಿರುವುದನ್ನು ಕಂಡಿದ್ದೆವು. ಅವೆಲ್ಲ ಮಂಗಳೂರಿನಿಂದ ಬಂದಿದ್ದವು. ಒಂದು ಕಡೆ ಕೊಬ್ಬರಿ ಮಂಡಿಗಳಿದ್ದವು. ಅದರ ಸುತ್ತ ಕೊಬ್ಬರಿ ಎಣ್ಣೆಯ ಗಮಲು ತುಂಬಿಕೊಂಡಿತ್ತು. ಇಲ್ಲಿನ ಮುಖ್ಯ ವ್ಯಾಪಾರವೆಂದರೆ ಕೊಬ್ಬರಿ ಮತ್ತು ತೆಂಗಿನ ನಾರಿನದು ಅನಿಸುತ್ತದೆ. ಹಡಗು ಕಟ್ಟಿಸಿ ಸಮುದ್ರ ವ್ಯಾಪಾರ ಮಾಡುತ್ತಿದ್ದ ಟಿಪ್ಪುವಿಗೆ ಇಲ್ಲಿನ ತೆಂಗಿನನಾರು ಬಹಳ ಮುಖ್ಯವಾಗಿತ್ತು. ಸಿಕ್ಕ ಜನರೊಡನೆ ಮಾತಾಡುತ್ತಾ ಹೋದೆವು. ಹೆಚ್ಚಿನವರಿಗೆ ಮಾಪ್ಲಾ ಬಿಟ್ಟು ಬೇರೆ ಭಾಷೆ ಬಾರದು. ಕೊಲ್ಲಿ ದೇಶಗಳಿಗೆ ಹೋಗಿಬರುವ ಕಾರಣದಿಂದಲೋ ಟೀವಿಗಳಿಂದಲೋ ಹಿಂದಿ ಕೆಲವರಿಗೆ ಬರುತ್ತದೆ.

ದ್ವೀಪಗಳ ಜೀವನವನ್ನು ನೋಡುತ್ತಾ ಹೋದರೆ ಬೇಗ ಏಕತಾನತೆ ಬರುತ್ತದೆ. ಒಂದು ದ್ವೀಪ ಮತ್ತೊಂದರ ಹಾಗೇ ಕಾಣುತ್ತದೆ. ಅದೇ ತೆಂಗು, ಅದೇ ಕಡಲು, ಅದೇ ಬೆಸ್ತರು, ಅದೇ ಲಗೂನುಗಳು, ಅವೇ ಮರಕ್ಕೆ ಕಟ್ಟಿದ ಮೇಕೆಗಳು. ಸಂಜೆಯಾಗುತ್ತಿತ್ತು. ಸೂರ್ಯನ ಹೊಂಬಣ್ಣದ ಕಿರಣಗಳು ತೆಂಗಿನಮರಗಳ ಕಾಂಡಗಳಿಂದ ನುಸುಳಿ ದ್ವೀಪಗಳ ಒಳಗೆ ನೆಳಲಿನ ನಕ್ಷೆ ಬಿಡಿಸಿದ್ದವು. ನಾವು ಹೋಗಿದ್ದು ಬೇಸಗೆಯಲ್ಲಿ. ಸುಡುವ ಬಿಸಿಲಿಗೆ ಬಳಲಿದ್ದ ನಾವು ಸಂಜೆಗೆ ತೀಡುತ್ತಿದ್ದ ತಂಗಾಳಿ ಮೂಸುತ್ತಾ ನಡೆಯುತ್ತಾ ಹೋದೆವು. ಅಷ್ಟುಹೊತ್ತಿಗೆ ಯಾರೋ ಒಬ್ಬ ಸೈಕಲ್ಲಿನ ಮೇಲೆ ಬರುತ್ತಿದ್ದವನು, ದ್ವೀಪಕ್ಕೆ ಹೊಸಬರಂತಿದ್ದ ನಮ್ಮನ್ನು ನೋಡಿ, ''ಟೂರಿಸ್ಟ್?'' ಎಂದ ಹಿಂದಿಯಲ್ಲಿ. ''ಹೌದು'' ಎಂದೆವು. ''ಟಿಪ್ಪುಸುಲ್ತಾನ ಬಂದು ಬಹಳ ಹೊತ್ತಾಯಿತು. ಇಷ್ಟು ಹೊತ್ತಿಗೆ ಹೋಗಿರಬಹುದು'' ಎಂದ. ಅವನು ನೆಂಟರನ್ನು ದೋಣಿಯಲ್ಲಿ ಹತ್ತಿಸಿ ಮರಳಿಬರುತ್ತಿದ್ದ. ಎದೆ ಧಸಕ್ಕೆಂದಿತು. ನಮ್ಮ ಮುಖಗಳನ್ನು ಕಂಡು ''ಸಿಕ್ಕರೂ ಸಿಗಬಹುದು, ಓಡಿ'' ಎಂದ. ''ಜೆಟ್ಟಿ ಎಷ್ಟು ದೂರ ?'' ''ಮೂರು ಕಿಲೋಮೀಟರ್.'' ''ಯಾವುದಾದರೂ ಆಟೋಗೀಟೋ....?'' ಇಲ್ಲವೆಂದು ತಲೆಯಲ್ಲಾಡಿಸಿದ.

ದ್ವೀಪಗಳಲ್ಲಿ ಎಲ್ಲಿ ಹೋಗುತ್ತೇವೆ ಎನ್ನುವುದು ಗೊತ್ತೇ ಆಗುವುದಿಲ್ಲ. ರಸ್ತೆಗಳು ತಿರುಗು ಮುರುವಾಗಿ ಇರುತ್ತವೆ. ನುಲಿದುಕೊಂಡ ತೆಂಗಿನಮರಗಳಂತೆ. ಎತ್ತಹೋದರೂ ಒಂದೇ ದೃಶ್ಯವಾದ್ದರಿಂದ ಬಂದ ದೂರ ಕೂಡ ಗೊತ್ತಾಗುವುದಿಲ್ಲ. ನಾವು ಜೆಟ್ಟಿಗೆ ಹತ್ತಿರವೇ ಇರಬಹುದೆಂದುಕೊಂಡಿದ್ದೆವು. ಮೂರು ಕಿಮೀಯಷ್ಟು, ಅದೂ ವಿರುದ್ಧ ದಿಕ್ಕಿನಲ್ಲಿ, ಬಂದಿದ್ದೇವೆಂದು ನಂಬಲಾಗಲಿಲ್ಲ. ತಪ್ಪಿನ ಅರಿವಾಗಿ ಓಡತೊಡಗಿದೆವು. ಎಷ್ಟು ಓಡಿದರೂ ಅಲ್ಲೆ ಇರುವಂತೆ ಅನಿಸಿತು. ಎದೆ ಢವಢವ ಎನ್ನುತ್ತಿತ್ತು. ಒಳಗೊಳಗೆ 'ಹಡಗು ತಪ್ಪಿದ್ದು ಒಳ್ಳೆಯದೇ ಆಯಿತು' ಎಂಬ ವಿಚಿತ್ರವಾದ ಸಂತೋಷವೂ ಆಗುತ್ತಿತ್ತು. ಹಾಳು ಟೂರಿಸಂ ಅಧಿಕಾರಿಗಳು ನಮಗೆ ತೋರಿಸಿದ್ದು ಮೂರೇ ದ್ವೀಪ. ಅವುಗಳಲ್ಲಿ ಒಂದನ್ನಾದರೂ ವ್ಯವಧಾನದಿಂದ ನೋಡಲು ಬಿಟ್ಟಿರಲಿಲ್ಲ . ನೋಡಬೇಕಾದ ದ್ವೀಪಗಳು ಇನ್ನೂ ಅನೇಕ ಇದ್ದವು. ಕಡಮತ್ ಅಪೂರ್ವ ಹವಳಗಳಿರುವ ದ್ವೀಪ. ಅಂದ್ರೋತ್ ಮಾಟಮಂತ್ರಗಳಿಗೆ ಖ್ಯಾತವಂತೆ. ಹಕ್ಕಿಗಳೇ ನೆಲೆಸಿರುವ ಪಕ್ಕಿಪಿಟ್ಟು ಎಂಬ ಒಂದು ನಡುಗಡ್ಡೆಯಿದೆ. ಅಲ್ಲೆಲ್ಲ ಎಂತೆಂತಹ ಜೀವನದ ಹೋರಾಟ ಇತ್ತೋ? ಇಡೀ ಪ್ರವಾಸವೇ ನನಗೆ ಅರಗುಕ್ಕಾಗಿತ್ತು. ಹಡಗು ತಪ್ಪಲಿ ಎಂದು ಮನಸ್ಸು ಮಿಡಿಯುತ್ತಿತ್ತು. ಆದರೆ ನಮ್ಮ ಲಗ್ಗೇಜೆಲ್ಲ ಹಡಗಿನಲ್ಲಿತ್ತು.

ಅಷ್ಟು ಹೊತ್ತಿಗೆ ಹಿಂದುಗಡೆಯಿಂದ ಯಾವುದೋ ಖಾಸಗಿ ಜೀಪು ಬಂತು. ಅದು ಜೆಟ್ಟಿಯತ್ತ ಹೋಗುತ್ತಿತ್ತು. ಕೈಯಡ್ಡಮಾಡಿ ''ಜೆಟ್ಟಿಜೆಟ್ಟಿ'' ಎಂದು ಕಿರುಚಿದೆವು. ಆತ ನಿಲ್ಲಿಸಿ 'ಕೂತುಕೊಳ್ಳಿ' ಎಂಬಂತೆ ಸನ್ನೆ ಮಾಡಿದ. ಬಹುಶಃ ಆ ಸೈಕಲ್ಲಿನವನು ಜೀಪಿನವರಿಗೆ ನಮ್ಮ ಬಗ್ಗೆ ಹೇಳಿರಬೇಕು. ಒಳಗೆ ಚಿನ್ನಾಭರಣ ಧರಿಸಿದ ಭಾರಿ ಹೆಂಗಸರು ಕೂತಿದ್ದರು. ''ಹಡಗು ಸಿಗಬಹುದಾ?'' ಎಂದು ಹಿಂದಿಯಲ್ಲಿ ಕೇಳಿದೆವು. ಅವರಿಗೆ ನಮ್ಮ ಮಾತು ಅರ್ಥವಾಗಲಿಲ್ಲ.

ಜೆಟ್ಟಿಗೆ ಬಂದರೆ ಎಲ್ಲ ಖಾಲಿ! ನಮ್ಮ ಜತೆಗಾರ ಪ್ರವಾಸಿಗರೆಲ್ಲ ಹೋಗಿಯಾಗಿತ್ತು. ದೋಣಿಗಳೆಲ್ಲ ಹೋಗಿದ್ದವು. ಜೆಟ್ಟಿಯ ಸಮೀಪದಲ್ಲಿದ್ದ ಠಾಣೆಯಲ್ಲಿ ಪೋಲೀಸರು ವಾಕಿಟಾಕಿಯಲ್ಲಿ ಮಾತಾಡುತ್ತಿದ್ದರು. ಹತ್ತುವ ಮಂದಿ ಇನ್ನೂ ಇದ್ದಾರೆ ಎಂದು ಹಡಗಿನವರ ಜತೆಗೆ ಹೇಳುತ್ತಿರಬಹುದೇ? ಎಲ್ಲಿಂದಲೊ ಬಂದ ದೋಣಿಯೊಂದು ನಮ್ಮನ್ನು ವೇಗವಾಗಿ ಹಡಗಿಗೆ ಕರೆದೊಯ್ಯಿತು. ದೂರದಲ್ಲಿ ಕಡಲೊಳಗೆ ಸಣ್ಣ ಬಿಳಿಯ ಚುಕ್ಕೆಯಂತೆ ಟಿಪ್ಪು ಸುಲ್ತಾನ ಅತ್ಯಂತ ಸಹನೆಯಿಂದ ಕಾಯುತ್ತಿತ್ತು.

ಜ್ವಾಲಾಮುಖಿಯಿಂದ ಹುಟ್ಟಿದ ಈ ದ್ವೀಪಗಳ ಚರಿತ್ರೆ ಕಾಣೆಯಾಗಿಲ್ಲ. ಅವುಗಳ ಕಾಲಡಿಯೇ ಸುಪ್ತವಾಗಿ ಸಾವಿನಬೀಜವನ್ನು ಇಟ್ಟುಕೊಂಡು ಕೂತಿದೆ. ಸುಮಾರು ನೂರು ವರ್ಷಗಳಲ್ಲಿ ಈ ದ್ವೀಪಗಳೆಲ್ಲ ಮುಳುಗುತ್ತವಂತೆ - ಕುಸಿಯುತ್ತಿರುವ ಕೆಳಗಿನ ಬಂಡೆಗಳಿಂದ ಹಾಗೂ ಏರುತ್ತಿರುವ ಸಮುದ್ರಮಟ್ಟದಿಂದ. ಒಂದು ಕಾಲದ ನಂತರ ಇಲ್ಲಿ ಏನೂ ಇರಲಿಲ್ಲವೆಂಬಂತೆ ನೀರು ತಾಂಡವವಾಡುತ್ತದಂತೆ. ಆದರೇನು? ಬಂಡೆಗಳನ್ನು ಮಂಗಳೂರಿನಿಂದ ತರಿಸಿ ದಂಡೆಗೆ ಜೋಡಿಸಿ ಕಡಲು ಊರೊಳಗೆ ನುಗ್ಗದಂತೆ ಮಾಡುತ್ತಿದ್ದರು. ಕಾಲದಲೆಗಳ ಜೊತೆ ಮಾಡುವ ಹೋರಾಟದಂತೆ ಮುಳುಗಿಹೋಗಲಿರುವ ಈ ದ್ವೀಪಗಳ ದಂಡೆರಕ್ಷಣೆ ಮಾಡುವುದು ವ್ಯರ್ಥ ಕೆಲಸವಾಗಿತ್ತು. ಆದರೆ ಬರಲಿರುವ ಕರಾಳಭವಿಷ್ಯವನ್ನು ನೆನೆದು ಯಾರೂ ಅಳುತ್ತ ಕೂತಿಲ್ಲ. ಮೀನು ಹಿಡಿಯುತ್ತ, ತೆಂಗಿನಕಾಯಿ ಆರಿಸುತ್ತ ಬದುಕುತ್ತಿದ್ದಾರೆ. ಇರುವಷ್ಟು ದಿನ ಖುಶಿಯಾಗಿ ಬದುಕಬೇಕು ಎಂಬ ಆಸೆಯೇ ಲಕ್ಷದ್ವೀಪಗಳನ್ನು ಜೀವಂತಿಕೆಯಲ್ಲಿ ಇಟ್ಟಂತಿದೆ; ಈ ಜೀವಂತಿಕೆಯೇ ಇಲ್ಲಗಳ ನಾಡನ್ನು ಹಲವು 'ಇದೆ'ಗಳ ನಾಡಾಗಿಸಿದೆ! ಇಲ್ಲದಿದ್ದರೆ ಕೊಚ್ಚಿಯಲ್ಲಿ ಹಡಗು ಹತ್ತಲು ಯಾಕಷ್ಟು ಜನಜಂಗುಳಿ ನೆರೆಯಬೇಕು?

ಹಡಗು ಹೊರಟಿತು. ಕತ್ತಲಾವರಿಸುತ್ತಿತ್ತು. ಕಲ್ಪನಿಯ ದ್ವೀಪಗಳು ದೂರವಾಗುತ್ತ, ಮಸುಕಾಗುತ್ತ ಕೊನೆಗೆ ಮರೆಯಾದವು. ಆದರೆ ಲೈಟ್‌ಹೌಸಿನ ಗರಗರ ತಿರುಗುವ ಬೆಳಕು ಮಾತ್ರ ಬಹಳ ದೂರದವರೆಗೆ ಗಳಿಗೆಗೊಮ್ಮೆ ಫಕ್ಕನೆ ಕಾಣಿಸುತ್ತ ಕಣ್ಣು ಮಿಟುಕಿಸುತ್ತಿತ್ತು.

ಡಾ|| ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಜ್ಞಾನ ಅನುಭವ ಮತ್ತು ಸಾಹಿತ್ಯ

**ಪ್ರೊ॥ ಜಿ. ಕೆ. ಗೋವಿಂದರಾವ್**

ಇಲ್ಲಿ ಜ್ಞಾನ ಎಂಬ ಶಬ್ದವನ್ನು ಮಿದುಳಿಗೆ ಸಂಬಂಧಿಸಿಯಷ್ಟೇ ಬಳಸುತ್ತಿದ್ದೇನೆ. ಆ ಅರ್ಥದಲ್ಲಿ ಜ್ಞಾನವೆಂಬುದು ಎಣಿಕೆಗೆ ಬರುವಂಥದು, ಹೋಲಿಕೆ ಮಾಡಬಹುದಂಥದು ಹಾಗೂ ಸ್ಪರ್ಧಾತ್ಮಕವಾಗಬಲ್ಲಂಥದು ಕೂಡ. 'ಜ್ಞಾನಿ' ಎಂಬ ಶಬ್ದವನ್ನು ಅತ್ಯಂತ ವಿಶಾಲವಾಗಿ ಬಳಸುವುದನ್ನು ನಾವು ನೋಡಿದ್ದೇವೆ. ಮಹಾನ್ ಚಿಂತಕರಿಗೂ, ಋಷಿಗಳಿಗೂ ಅನ್ವಯಿಸಿ ಈ ಶಬ್ದ ಬಳಕೆಯಾಗುತ್ತದೆ. ಉದಾಹರಣೆಗೆ, ಒಂದು ಕಡೆ ರಾಮಕೃಷ್ಣ ಪರಮಹಂಸ, ವಿವೇಕಾನಂದರಿಗೂ ಮತ್ತೊಂದು ಕಡೆ ಬರ್ಟ್‌ರೆಂಡ್ ರಸೆಲ್ ಅಂಥ ಪ್ರಕಾಂಡ ವಿಚಾರವಾದಿಗೂ ಈ ಮಾತು ಬಳಸಬಹುದು. ಆದರೆ ನಾನು 'ಜ್ಞಾನ' ಎಂಬ ಶಬ್ದವನ್ನು ತಿಳಿವಳಿಕೆ, ವಿವೇಕ ಎಂಬ ಅರ್ಥವನ್ನು ಒಳಗೊಳ್ಳುವಂತೆ ಬಳಸುತ್ತಿಲ್ಲ. ಇಂಗ್ಲಿಷಿನಲ್ಲಿ knowledgeಗೆ ಎಷ್ಟು ಅರ್ಥವಿದೆಯೋ ಅಷ್ಟು ಮಾತ್ರ ಇಲ್ಲಿ ಬಳಸಿ ಮಾತನಾಡುತ್ತಿದ್ದೇನೆ. ಅನುಭವವೆಂಬುದು ಇಡೀ ವ್ಯಕ್ತಿತ್ವವನ್ನು ಒಳಗೊಳ್ಳುವಂಥದು, ಅಮೂರ್ತವಾದುದು, ಎಣಿಕೆಗೆ ಸಿಗಲಾರದಂಥದು. ಬಹುಶಃ ಜ್ಞಾನವೂ, ಅನುಭವವೂ ಒಟ್ಟು ಸೇರಿದಾಗ ಮಾತ್ರ ವಿವೇಕ ಮತ್ತು ಜೀವನ ದರ್ಶನ ಸಾಧ್ಯವಾಗುವುದು. ಆದರೆ ಜ್ಞಾನ ಮಾತ್ರ ಸಾಧ್ಯವಾದಾಗ ವ್ಯಕ್ತಿ ಎಷ್ಟು ಸೀಮಿತ ಬೆಳವಣಿಗೆ ಉಳ್ಳವನಾಗಿರುತ್ತಾನೆ ಎಂಬುದಕ್ಕೆ ಜ್ಞಾನ ಮೂಲದಿಂದ ನಾವು ಓದಿದ, ಕೇಳಿದ ಮಾತುಗಳನ್ನು ನಾವು ಉದ್ಧರಿಸಿ ಮಾತನಾಡುವಾಗ ಸ್ಪಷ್ಟವಾಗುತ್ತದೆ. ಈ ಬಗ್ಗೆ ನಾವು ಉದ್ಧರಿಸುತ್ತ ಹೋಗುವುದು ನಮ್ಮ ನೆನಪಿನ ಮೂಲದಿಂದ ಹೊಮ್ಮುವುದು. ಬಹಳಷ್ಟು ಪಾಲು ಪ್ರದರ್ಶನಕ್ಕಾಗಿ ಮಾಡುವುದು ಹಾಗೂ ಬೇರೆಯವರ ಮೇಲೆ ನಮ್ಮ ಅಗಾಧ ಓದಿನ ಪರಿಣಾಮ ಬೀರುವುದಕ್ಕೆ ಮಾಡುವುದು. ಒಂದು ಮಾತಿನಲ್ಲಿ ಹೇಳುವುದಾದರೆ ಇದು ನಮ್ಮ 'ಅಹಂ'ನಿಂದ ಹುಟ್ಟಿಬರುವ ಹವ್ಯಾಸ. ಆದರೆ ಅನುಭವದ ನೆಲೆಯಲ್ಲಿ ನಾವು ಓದಿದ, ಕೇಳಿದ ಮಾತುಗಳನ್ನು ನಾವು ಉದ್ಧರಿಸಿದಾಗ ಅದು ನಾವು ಹೇಳುತ್ತಿರುವ ಬೇರೆ ಮಾತುಗಳನ್ನು ಹಿಗ್ಗಿಸುತ್ತವೆ, ಬೇರೆ ಮಾತುಗಳಿಗೆ ಪೂರಕವಾಗಿ ಬರುತ್ತವೆ ಹಾಗೂ ನಮ್ಮ ನಿಲುವನ್ನು ಸ್ಪಷ್ಟಪಡಿಸುವುದರ ಜೊತೆಗೆ ಅದಕ್ಕೆ ಒಂದು ಹೊಸ ಹೊಳಪನ್ನೂ ನೀಡುತ್ತಿರುತ್ತದೆ. ಇಲ್ಲಿ ನಮಗೆ ಇರುವ ಕಳಕಳಿ ನಾವು ಮಾತನಾಡುತ್ತಿರುವ ವಿಷಯವೇ ಹೊರತು, ನಮ್ಮ ಸತ್ವದ ಕುರಿತಾದ ಕಾಳಜಿಯೇ ಹೊರತು, ನಮ್ಮ 'ಅಹಂ' ಅಲ್ಲ.

ಸಾಹಿತ್ಯವೆಂಬುದು ಅನುಭವಜನ್ಯವಾದುದು, ಅಮೂರ್ತವಾದುದು; ಮನಸ್ಸಿನಲ್ಲಿ ಹುಟ್ಟುವುದು, ಖಂಡಿತ ಮೆದುಳಿನಲ್ಲಿ ಹುಟ್ಟುವುದಲ್ಲ. ಹೀಗಾಗಿ ಸಾಹಿತ್ಯವೆಂಬುದು ವಿಷಯ ಪ್ರತಿಪಾದನೆಗಲ್ಲ, ವಿವರಣೆಗಳನ್ನು ನೀಡುವುದಕ್ಕಲ್ಲ ಮತ್ತು ಯಾವುದೇ ಸಂದರ್ಭದಲ್ಲಿಯೂ ನೀತಿ ಬೋಧನೆ ಮಾಡುವುದಕ್ಕಂತೂ ಅಲ್ಲವೇ ಅಲ್ಲ. ಸರಿ, ತಪ್ಪುಗಳ ಮಾರ್ಗದರ್ಶನ ಮಾಡಿಸುವುದಕ್ಕಲ್ಲ ಸಾಹಿತ್ಯವಿರುವುದು, ಬದಲಾಗಿ ಸರಿ, ತಪ್ಪು ಎಂಬ ಶಬ್ದಗಳಿಗೇ ಅರ್ಥಗಳನ್ನು ಹುಡುಕುತ್ತ ಹೋಗುವುದು.

ನೀತಿ ಬೋಧನೆಗಾಗಿ ಅಲ್ಲ ಮತ್ತು ಸರಿ-ತಪ್ಪುಗಳ ಮಾರ್ಗದರ್ಶನಕ್ಕಲ್ಲ ಎಂದಮೇಲೆ ಸಹಜವಾಗಿ ಸಾಹಿತ್ಯ ವ್ಯವಸ್ಥಿತ ಧರ್ಮಕ್ಕೂ, ವ್ಯವಸ್ಥಿತ ವಿಜ್ಞಾನಕ್ಕೂ ವಿರೋಧಿಯಾಗಿರುತ್ತದೆ.

ಹೀಗೆ ನಾವು ಧರ್ಮ ಮತ್ತು ವಿಜ್ಞಾನ ಎಂಬ ಎರಡು ಹೊಸ ಶಬ್ದಗಳನ್ನು ಬಳಸಿದ ಕೂಡಲೇ ಅವುಗಳ ಅರ್ಥಗಳನ್ನು ಕೊಂಚ ವಿಶದಪಡಿಸಿಕೊಂಡು ಮುಂದುವರಿಯಬೇಕು ಎಂದು ಅನ್ನಿಸುತ್ತದೆ. ಕಲೆ, ವಿಜ್ಞಾನ ಹಾಗೂ ಧರ್ಮ

> *ಮಿದುಳಿನ ಎಡ-ಬಲ ಭಾಗಗಳ ಸಮನ್ವಯ ಸಾಧಿಸುವುದು ಹೇಗೆ ? ಈ ವ್ಯಕ್ತಿತ್ವ ಸಮಗ್ರಗೊಳ್ಳುವುದು ಹೇಗೆ ? ಈ ನಶ್ವರದಲ್ಲಿ ಬದುಕುತ್ತಲೇ ಶಾಶ್ವತ ಬದುಕಿನ ಕುರಿತಾದ ಪ್ರಜ್ಞೆ ಬೆಳೆಸಿಕೊಳ್ಳುವುದು ಹೇಗೆ ? ಅನುಭವವನ್ನು ಸ್ವೀಕರಿಸುವುದು ಹೇಗೆ ? ಎಂಬೆಲ್ಲದನ್ನೂ ಕಲಿಸುವುದು ಸಾಹಿತ್ಯ.*

ಇವುಗಳ ಮಧ್ಯೆ ಯಾವ ಅಂತರವೂ ಇಲ್ಲ ಎಂಬ ನಿಲುವು ನನ್ನದು. ಅಂದರೆ ಈ ಮೂರೂ ಕೂಡ ಮನುಷ್ಯಾನುಭವದ ಬೇರೆ ಬೇರೆ ಸ್ವರೂಪಗಳು. ಮನುಷ್ಯನ ಕಲ್ಪನಾಶಕ್ತಿಯ ಸೂಚಕಗಳು ಇವು ಮತ್ತು ಮನುಷ್ಯ ವ್ಯಕ್ತಿತ್ವವನ್ನು ಸಮಗ್ರೀಕರಿಸುವ, ಸಮನ್ವಯಗೊಳಿಸುವ ಅತ್ಯಂತ ಅಮೂಲ್ಯ ಸಾಧನಗಳು. ಎಲ್ಲವನ್ನೂ ಒಳಗೊಳ್ಳುವ, ಎಂದಿಗೂ ಹಿಗ್ಗುತ್ತಾ ಹೋಗುವ ಮತ್ತು ಇಡೀ ಬ್ರಹ್ಮಾಂಡವನ್ನೂ ತನ್ನ ಕಲ್ಪನೆಯ ಅಂಗವಾಗಿಸಿಕೊಳ್ಳುವ ಮಾರ್ಗಗಳು. ಅಚ್ಚರಿ ಮತ್ತು ಅದಮ್ಯ ಕುತೂಹಲಗಳು ಧರ್ಮ, ವಿಜ್ಞಾನಗಳ ಹಿಂದೆ ಕೆಲಸ ಮಾಡುವ ಪ್ರಬಲ ಲಕ್ಷಣಗಳು; ಆದ್ದರಿಂದಲೇ ಅಸಹನೆ ಹಾಗೂ ಹಿಂಸೆಗಳು ಎಂದಿಗೂ ಸಾಧ್ಯವೇ ಆಗುವುದಿಲ್ಲ ಈ ಮಾರ್ಗಾನ್ವೇಷಕರಿಗೆ.

ಜ್ಞಾನ ಎಂದರೆ ಭೌತಿಕ ಶಕ್ತಿ. ಈ ಭೌತಿಕ ಜಗತ್ತಿನ ಕುರಿತಾದ ಶಕ್ತಿ. ಇಂಗ್ಲಿಷಿನಲ್ಲಿ ಹೇಳುವ ಹಾಗೆ knowledge is power ಮತ್ತು ಈ ಶಕ್ತಿ ಬೇರೆಯವರನ್ನು ಆಳಲು, ಶೋಷಿಸಲು, ಒಡೆಯಲು ಬಳಸುವ ಶಕ್ತಿ.

ಅನುಭವವೆಂದರೆ ನಿರಂತರ ಬೆಳೆಯುತ್ತಿರುವ ಹಾಗೂ ಅರಳುತ್ತಿರುವ ಪ್ರಕ್ರಿಯೆ. ಎಂದೂ ಪ್ರಜ್ಞೆಯ ಸುತ್ತ ಸೀಮೆಗಳನ್ನು ಕಟ್ಟದಂತೆ ಅರಳುತ್ತಲೇ ಇರುತ್ತದೆ. ಆದ್ದರಿಂದ ಬೇರೆಯವರನ್ನು ಆಳುವ ಅಥವಾ ಶೋಷಿಸುವ ಪ್ರಶ್ನೆಯೇ ಸಾಧ್ಯವಿರುವುದಿಲ್ಲ.

ಹೀಗಾಗಿ, ಸಂಕ್ಷಿಪ್ತವಾಗಿ ಹೇಳಬಹುದಾದರೆ, ಜ್ಞಾನ ಸ್ಥಾವರ, ಅನುಭವ ಜಂಗಮ, ಜ್ಞಾನ ಮತ್ತು ಅನುಭವಗಳು ಎಂದಿಗೂ ಘರ್ಷಣೆಯಲ್ಲಿಯೇ ತೊಡಗಿರುತ್ತವೆ. ಇದೊಂದು ರೀತಿಯ ವ್ಯವಸ್ಥೆ ಮತ್ತು ಕ್ರಿಯಾಶೀಲ ಅರಾಜಕತೆಗಳ ಮಧ್ಯದ ಸಂಘರ್ಷವಿದ್ದ ಹಾಗೆ.

ವಿಜ್ಞಾನ ಮತ್ತು ಧರ್ಮಗಳು ಈ ರೀತಿಯ ಘರ್ಷಣೆಯನ್ನು ತಮ್ಮೊಳಗೆ ಪರಸ್ಪರವಾಗಿ ಎಂದಿಗೂ ಎದುರಿಸುತ್ತಿರುತ್ತವೆ. ಬಹು ಅವಸರದ ನಮ್ಮ ತೀರ್ಮಾನಗಳಲ್ಲಿ, ನಮ್ಮ ವ್ಯಾಖ್ಯಾನಗಳಲ್ಲಿ ಧರ್ಮ ಮತ್ತು ವಿಜ್ಞಾನ ಎಂದಿಗೂ ಮುಖಾಮುಖಿಯಾಗಿರುತ್ತದೆಂದೂ, ಅವುಗಳ ಉದ್ದಿಶ್ಯ, ಬೆಳವಣಿಗೆಯ ದಿಕ್ಕುಗಳೂ ವಿರುದ್ಧ ದಿಕ್ಕಿನವು ಎಂದೂ ಭಾವಿಸಿರುತ್ತೇವೆ. ಘರ್ಷಣೆ ಇರುವುದು ವಿಜ್ಞಾನ, ಧರ್ಮಗಳ ಮಧ್ಯದಲ್ಲಿ ಅಲ್ಲ ಬದಲಿಗೆ ವ್ಯವಸ್ಥಿತ ವಿಜ್ಞಾನ ಹಾಗೂ ವ್ಯವಸ್ಥಿತ ಧರ್ಮಗಳ ಮಧ್ಯೆ. ವ್ಯವಸ್ಥಿತ ವಿಜ್ಞಾನವೆಂದರೆ ತಂತ್ರಜ್ಞಾನ, ಪ್ರಯೋಗಶಾಲೆಗಳು, ಹಾಗೆಯೇ ವ್ಯವಸ್ಥಿತ ಧರ್ಮವೆಂದರೆ ಮಠಗಳು ಮತ್ತು ಅದರೊಡನೆ ಎಂದಿಗೂ ಅಂಟಿಕೊಂಡಿರುವ ಸಂಪ್ರದಾಯಗಳು, ವಿಧಿ ನಿಯಮಗಳು, ಆಚರಣೆಗಳು. ತಂತ್ರಜ್ಞಾನವೂ, ವ್ಯವಸ್ಥಿತ ಧರ್ಮವೂ 'ಶಕ್ತಿ' ಮೂಲದ ಬೆಳವಣಿಗೆಗಳು, ಜ್ಞಾನದ ಮೇಲೆ – ಅದರ ಬಹು ಸೀಮಿತ ಅರ್ಥದ ಅಂದರೆ ಅಹಂ ಜನ್ಯವಾದ ಜ್ಞಾನದ ಮೇಲೆ ನಿಂತಿರುವುದು. ಆದ್ದರಿಂದಲೇ ವ್ಯವಸ್ಥಿತ ಧರ್ಮಕ್ಕೂ ವ್ಯವಸ್ಥಿತ ವಿಜ್ಞಾನಕ್ಕೂ ಮಧ್ಯ ಘರ್ಷಣೆ ಇರುವುದು. ಮತ್ತು ಅತ್ಯಂತ ವಿಷಾದಕರ ಸಂಗತಿ ಎಂದರೆ ಈ ಘರ್ಷಣೆ ಕ್ರಿಯಾಶೀಲವಾದದ್ದಲ್ಲ. ವಿಜ್ಞಾನ ಹಾಗೂ ಧರ್ಮಗಳು ಮನುಷ್ಯನ ಕ್ರಿಯಾಶೀಲ ಮನಸ್ಸಿನ ಎರಡು ಬಗೆಯ ವಿಭಿನ್ನ ಚಟುವಟಿಕೆಗಳು. ಹಾಗಾಗಿಯೇ ನನಗೆ ಬಹಳ ಸಲ ಅನ್ನಿಸಿರುವಂತೆ ಕ್ರಿಸ್ತನೂ, ಗೆಲಿಲಿಯೋನೂ ಸಮಕಾಲೀನರಾಗಿದ್ದಿದ್ದರೆ ಗೆಲಿಲಿಯೋ ತನ್ನ ವೈಜ್ಞಾನಿಕ ಸಂಶೋಧನೆಗಳ ಪ್ರಕಾರ ಭೂಮಿ ಸೂರ್ಯನ ಸುತ್ತುತ್ತಿದೆ ಎಂದು ಹೇಳಿದ್ದಿದ್ದರೆ ನಿಸ್ಸಂದೇಹವಾಗಿ ಕ್ರಿಸ್ತ ಒಪ್ಪುತ್ತಿದ್ದನಷ್ಟೇ ಅಲ್ಲ, ಸಂಪೂರ್ಣ ಮೆಚ್ಚಿಕೊಳ್ಳುತ್ತಲೂ ಇದ್ದ. ಯಾತಕ್ಕೆಂದರೆ ಕ್ರಿಸ್ತನಿಗಾಗಲಿ, ಗೆಲಿಲಿಯೋನಿಗಾಗಲಿ ತಮ್ಮ 'ಅಹಂ'ಗಳನ್ನು ಮೀರಿದ, ಸರ್ವಕಾಲಕ್ಕೂ ಸತ್ಯಗಳಾಗಿ ಉಳಿಯುವ ವಿಷಯಗಳ ಕುರಿತಾದ ಬದ್ಧತೆ ಇದ್ದಿತು.

ಬಹುಶಃ ಇದೇ ಸಂದರ್ಭದಲ್ಲಿ ನಾವು ಬುದ್ಧಿಜೀವಿ ಎಂಬ ಶಬ್ದವನ್ನೂ ಅರ್ಥಮಾಡಿಕೊಳ್ಳಲು ಯತ್ನಿಸಬೇಕು. ಬುದ್ಧಿಜೀವಿ ಎಂಬ ಶಬ್ದವನ್ನು ನಾವು ಬಹು ಹಗುರವಾಗಿ, ಬಹಳಷ್ಟು ಸಲ ಏನೂ ವಿಚಾರಮಾಡದೆಯೇ ಬಳಸುತ್ತಿರುತ್ತೇವೆ ಎಂಬ ಅನುಮಾನ ನನ್ನದು.

ಬುದ್ಧಿಜೀವಿ ಎಂದರೆ ಕೇವಲ ಜ್ಞಾನಕ್ಕೆ ಸಂಬಂಧಪಟ್ಟ ಹಾಗೆ, ಮಿದುಳಿಗೆ ಸೀಮಿತವಾದ ಬುದ್ಧಿಗೆ ಮಾತ್ರ ಸಂಬಂಧಪಟ್ಟ ಹಾಗೆ, ವಿದ್ವತ್ತು ಪ್ರದರ್ಶಿಸುವವರಲ್ಲ ಎಂಬುದನ್ನು ನಾವು ಬಹು ಸ್ಪಷ್ಟವಾಗಿ ಮನದಟ್ಟು ಮಾಡಿಕೊಂಡೇ ಮುಂದುವರಿಯಬೇಕು. ಮಿದುಳಿಗೆ ಸಂಬಂಧಪಟ್ಟ ಬುದ್ಧಿ ಎಂಬುದನ್ನು ಬ್ರೈನ್ ಎಂಬ ಅರ್ಥದಲ್ಲಿಯೂ ಬುದ್ಧಿಯನ್ನು ಮೈಂಡ್ ಎಂಬ ಅರ್ಥದಲ್ಲಿಯೂ ಬಳಸುತ್ತಿದ್ದೇವೆ. ಮಿದುಳು ಮೂಲದ ವಿದ್ವತ್ತು ಬೌದ್ಧಿಕ ಕಸರತ್ತು ಮಾತ್ರ ಆಗಿ ನಿಂತುಬಿಡುತ್ತದೆ; ಪಾಂಡಿತ್ಯಕ್ಕೆ ಸೀಮಿತವಾಗಿಬಿಡುತ್ತದೆ; ತರ್ಕಕ್ಕೆ ಮಾತ್ರ ಒಗ್ಗಿಬಿಟ್ಟಿರುತ್ತದೆ.

ನನ್ನ ಅರ್ಥದಲ್ಲಿ ಬುದ್ಧಿಜೀವಿ ಎಂದರೆ ಒಬ್ಬ ಮೇಧಾವಿ. ಅಂದರೆ ಪಾಂಡಿತ್ಯ ಎಷ್ಟು ಅವನಿಗೆ ಮುಖ್ಯವೋ ಅಷ್ಟೇ ಮುಖ್ಯ ಕ್ರಿಯಾಶೀಲವಾಗಿ ತನ್ನ ಸುತ್ತಲ ಪರಿಸರದಲ್ಲಿ ಭಾಗವಹಿಸುವುದು, ನಿಲುವುಗಳನ್ನು ತೆಗೆದುಕೊಳ್ಳುವುದು, ವ್ಯವಸ್ಥೆಯೊಡನೆ ಎಂದಿಗೂ ಒಪ್ಪಂದ ಮಾಡಿಕೊಳ್ಳಲಾರದ ಹೋರಾಟದ ಮನಃಸ್ಥಿತಿಯಲ್ಲಿರುವುದು. ಬುದ್ಧಿಜೀವಿ ಎಂಬ ಶಬ್ದವನ್ನು ಅತ್ಯಂತ ಎಚ್ಚರದಿಂದ, ಅಪರೂಪವಾಗಿ ಬಳಸಬೇಕು ನಾವು. ಸಾಕ್ರಟೀಸನಿಗೆ, ಕ್ರಿಸ್ತನಿಗೆ, ಬುದ್ಧನಿಗೆ, ಬಸವಣ್ಣನಿಗೆ, ಗಾಂಧೀಜಿಗೆ ಬಳಸಬೇಕಾದ ಶಬ್ದ ಇದು. ಪ್ರಾಮಾಣಿಕತೆ, ಬದ್ಧತೆ ಮತ್ತು ಧೈರ್ಯ ಬುದ್ಧಿಜೀವಿಯ ಪ್ರಧಾನ ಲಕ್ಷಣಗಳು. ಆದದ್ದರಿಂದಲೇ ಒಬ್ಬ ಬುದ್ಧಿಜೀವಿ ಎಂದರೆ ಅವನು ಏಕಕಾಲಕ್ಕೆ ಧಾರ್ಮಿಕ ವ್ಯಕ್ತಿಯೂ, ವೈಜ್ಞಾನಿಕ ಮನಸ್ಸು ಮತ್ತು ಬುದ್ಧಿಯುಳ್ಳವನೂ ಹಾಗೂ ಕಲಾವಿದನೂ ಆಗಿರುತ್ತಾನೆ.

ಹಾಗಾದರೆ ನಮಗೆ ಮಿದುಳಿಗೆ ಸಂಬಂಧಪಟ್ಟ ಜ್ಞಾನ ಬೇಡವೇ ಬೇಡವೆ ? ಹಾಗೆ ಹೇಳಲು ಸಾಧ್ಯವೇ ಇಲ್ಲ. ನಮ್ಮ ಈ ಮನುಷ್ಯ ದೇಹದ ಬಗ್ಗೆ ನಮಗೆ ಜ್ಞಾನವಿರಬೇಕು. ಈ ದೇಹವನ್ನು, ಆರೋಗ್ಯವನ್ನು, ಕಾಪಾಡಿಕೊಳ್ಳುವುದಕ್ಕೆ ನಮಗೆ ಕನಿಷ್ಠಮಟ್ಟದ ಮಾಹಿತಿಗಳಿರಬೇಕು. ರಸ್ತೆಯಲ್ಲಿ ನಡೆಯುವಾಗ ಜಾಗೃತವಾಗಿರಬೇಕು ಎಂಬ ಜ್ಞಾನವಿರಬೇಕು. ನಮ್ಮ ಸಜ್ಜನಿಕೆ, ಬೇರೆಯವರ ಕುರಿತಾದ ಗೌರವ ಇವುಗಳೆಲ್ಲ ಇಂಥ ಜ್ಞಾನದಿಂದ ಹುಟ್ಟುವುದು. ಇವೆಲ್ಲ ಅವಶ್ಯಕವೆ. ಆದರೆ ದುರದೃಷ್ಟವಶಾತ್ ನಮ್ಮ ವ್ಯಕ್ತಿತ್ವದ ವಿಷಯದಲ್ಲಿಯೂ ಕೂಡ ಇದೇ ರೀತಿಯ ಸೀಮಿತ ಜ್ಞಾನವನ್ನು ಅಳವಡಿಸಿ ನಾವು ನಡೆದುಕೊಳ್ಳುತ್ತಿರುತ್ತೇವೆ. ಪರಿಣಾಮವೆಂದರೆ ನಮ್ಮ ವ್ಯಕ್ತಿತ್ವಗಳೆಂದರೆ ಭಯ, ಪೂರ್ವಾಗ್ರಹಗಳ ಆಗರ. ನಮ್ಮ ಶಂಕೆಗಳ, ಅನುಮಾನಗಳ, ಅಸಹನೆಗಳ ಕೂಪ. ಇವುಗಳೆಲ್ಲದರ ಮೇಲೆ ಬಹು ಚಂದದ, ಸುಗಂಧಪೂಸಿದ ವಸ್ತ್ರಗಳನ್ನು ಹೊದ್ದಿಸಿಬಿಟ್ಟು 'ನಾಗರಿಕತನ'ವನ್ನು ಮೆರೆಯುತ್ತಿರುತ್ತೇವೆ.

ಹೀಗಾಗುವುದಕ್ಕೆ ಮುಖ್ಯ ಕಾರಣವೆಂದರೆ ನಾವು ಅನುಭವವನ್ನು ನಿರಾಕರಿಸುವುದು. ಅನುಭವದ ಕುರಿತಾದ ಭಯಗಳಿರುವುದರಿಂದ ಅನುಭವವನ್ನು ಸ್ವೀಕರಿಸುವುದು, ಒಪ್ಪಿಕೊಳ್ಳುವುದು ಎಂದರೆ ಅಪಾಯಗಳಿಗೆ ಸಿಲುಕುವುದು ಎಂದೇ ನಮ್ಮ ತೀರ್ಮಾನ. ಆದರೆ ಈ ತೀರ್ಮಾನ ಪ್ರಜ್ಞಾಪೂರ್ವಕವಾದದ್ದಲ್ಲ. ಅನುಭವವನ್ನು ಸ್ವೀಕರಿಸುವುದೆಂದರೆ ಒಂದು ಸಾಹಸ, ಒಂದು ರೋಮಾಂಚಕ ಹೋರಾಟ ಮತ್ತು ಒಂದು ಗೊತ್ತಿರದ, ಇಂದಿನವರೆವಿಗೆ ಶೋಧಿಸದೇ ಹೋಗಿದ್ದ ಚಕ್ರವ್ಯೂಹ ಪ್ರವೇಶಿಸಿದಂತೆ. ಇದು ನಮ್ಮಲ್ಲಿ ಬಹುಪಾಲು ಮಂದಿಗೆ ಸಾಧ್ಯವಾಗುವುದಿಲ್ಲ. ಆದದ್ದರಿಂದಲೇ ಧಾರ್ಮಿಕತೆ ಸಾಧ್ಯವಾಗದ ನಾವು ವ್ಯವಸ್ಥಿತ ಧರ್ಮ ಸೃಷ್ಟಿಸಿದ ನೀತಿ ಶಾಸ್ತ್ರಗಳಿಗೆ ಶರಣಾಗುತ್ತೇವೆ, ಮೆದುಳಿಗೆ ಸೀಮಿತವಾಗುವ ನೈತಿಕತೆಯನ್ನು ಪಾಲಿಸುವುದರಲ್ಲಿ ಕೃತಾರ್ಥತೆಯನ್ನು ಕಾಣುತ್ತೇವೆ, ನಾಲ್ಕು ಜನಗಳ ಕಣ್ಣಲ್ಲಿ ಸಂಭಾವಿತರಾಗಲು ಇಡೀ ಜನ್ಮ ಸವೆಸುತ್ತೇವೆ.

ನೈತಿಕತೆ ಎಂಬುದು ಅನುಭವ ಮೂಲವಾದಾಗ ಒಂದು ದೊಡ್ಡ ಸವಾಲಾಗುತ್ತದೆ. ನಾಲ್ಕು ಜನರನ್ನು ಎದುರಿಸಿ ನಿಲ್ಲುವ ಸ್ಥೈರ್ಯ ನೀಡುತ್ತದೆ. ಕೊಚ್ಚಿಕೊಂಡು ಹೋಗುತ್ತಿರುವ ಕಟ್ಟಲೆ-ಸಂಪ್ರದಾಯಗಳ ಪ್ರವಾಹದ ವಿರುದ್ಧ ಸೆಣಸುವ ಎದೆಗಾರಿಕೆ ನೀಡುತ್ತದೆ. ಜ್ಞಾನ ಮೂಲದ ನೈತಿಕತೆ ಸಾರ್ವಜನಿಕಾಭಿಪ್ರಾಯ ಹಾಗೂ ಮನ್ನಣೆಗಳನ್ನು ಎದುರು ನೋಡಿದರೆ, ಅನುಭವಜನ್ಯವಾದ ನೈತಿಕತೆ ಅನಂತದ, ಶಾಶ್ವತದ ಮೌಲ್ಯಗಳ ಮಧ್ಯದಲ್ಲಿ ಎಷ್ಟು ಅರ್ಥಪೂರ್ಣ ಎಂಬ ಕಾಳಜಿ ಹೊಂದಿರುತ್ತದೆ.

ಕಲೆ, ವಿಜ್ಞಾನ ಹಾಗೂ ಧರ್ಮಗಳೆಲ್ಲವೂ ಮನುಷ್ಯ ವ್ಯಕ್ತಿತ್ವದ, ಅಭಿವ್ಯಕ್ತಿ ಮಾರ್ಗದ ವಿಭಿನ್ನ ಮಾರ್ಗಗಳಷ್ಟೆ, ಬೇರೆ ಬೇರೆಯಲ್ಲ ಎಂದು ಹೇಳಿದ ಮೇಲೆ ಸಹಜವಾಗಿ ಕ್ರಿಸ್ತನೂ, ಬುದ್ಧನೂ, ವ್ಯಾಸನೂ, ಶೇಕ್ಸ್‌ಪಿಯರನೂ, ಗೆಲಿಲಿಯೋ, ಐನ್‌ಸ್ಟೀನರೂ ಒಂದೇ ಜಾಡಿಗೆ ಸೇರಿದ ಮಹಾನ್ ಪುರುಷರೆನಿಸುತ್ತಾರೆ; ವ್ಯಕ್ತಿತ್ವ ವಿಕಾಸದ ಅತ್ಯಂತ ಎತ್ತರದ ಮಾದರಿಗಳಾಗುತ್ತಾರೆ.

ಕಲೆಯ ಅಂಗವಾದ ಸಾಹಿತ್ಯ ಇದಕ್ಕಾಗಿಯೇ ಬಹು ಪ್ರಧಾನ ಸ್ಥಾನವನ್ನು ನಮ್ಮ ಬದುಕಿನಲ್ಲಿ ಪಡೆದುಕೊಳ್ಳುವುದು.



## ದುರಿಗ್ಯಾ ಎತ್ತು ಮೆರೆಸಿದ್ದು



ನಮ್ಮ ಆಳುಮಗ ದುರುಗಪ್ಪ ಹರಿಜನನಾದರೂ ಮನೆಮಗನೇ ಆಗಿದ್ದ. ಹಬ್ಬ-ಹುಣ್ಣಿಮೆ ಸಂದರ್ಭಗಳಲ್ಲಿ ಅಪ್ಪ ಊಟಮಾಡುವ ಮೊದಲು ''ದುರಿಗ್ಯಾ ಉಂಡಾನಿಲ್ಲೋ ?'' ಎಂದು ಕೇಳುತ್ತಿದ್ದರು. ಇದಕ್ಕೇ ಇರಬೇಕು ದುರುಗಪ್ಪನಿಗೆ ಅಪ್ಪನ ಮೇಲಷ್ಟೇ ಅಲ್ಲ, ನಮ್ಮ ಕುಟುಂಬದ ಎಲ್ಲರ ಮೇಲೆ ಎಲ್ಲಿಲ್ಲದ ಅಭಿಮಾನ. ಅಪ್ಪನಿಗೆ, ಇಲ್ಲ ನಮಗೆ, ಯಾರಾದರೂ ಏನಾದರೂ ಅಂದರೆ ಕೆಂಡಮಂಡಲವಾಗುತ್ತಿದ್ದ ದುರುಗ.

ಕಾರಹುಣ್ಣಿಮೆ ಬಂದರೆ ಸಾಕು ತುಂಬ ಮುತುವರ್ಜಿ ವಹಿಸಿ ನಮ್ಮ ಎತ್ತುಗಳನ್ನು ಶೃಂಗಾರ ಮಾಡುವವ. ಮೈ ತುಂಬಿಕೊಂಡು ಮಿಂಚುತ್ತಿದ್ದ ನಮ್ಮ ಎತ್ತುಗಳು ಊರಿಗೇ ಮುಂದು. ಒಂದು ಕಾರಹುಣ್ಣಿಮೆ ದಿನ ಅವರಿವರು ಬಾಜಾ ಭಜಂತ್ರಿಯೊಂದಿಗೆ ಎತ್ತು ಮೆರೆಸುತ್ತಾ ನಮ್ಮ ಮನೆಯ ಮುಂದೆ ಹಾಯ್ದುಹೋದರು. ದುರುಗಪ್ಪನಿಗೆ ಕಸಿವಿಸಿಯಾಯಿತು.

''ಸಣ್ಣ ಗೌಡ್ರ, ಅಪ್ಪಾರಿಗೆ ಹೇಳ್ರಿ ನಾವೂ ಎತ್ತ ಮೆರಸೂಣು'' ಎಂದು ನನ್ನ ಪೀಡಿಸತೊಡಗಿದ. ಅಪ್ಪನನ್ನು ಕೇಳಲು ನನಗೂ ಹೆದರಿಕೆ. ಮತ್ತೆ ಮತ್ತೆ ಪೀಡಿಸಿದ. ನನಗೂ ಎತ್ತು ಮೆರೆಸುವ ಬಯಕೆ. ನಾನು ಅಂಜುತ್ತಲೆ ಕೇಳಿದೆ :

''ಯಪ್ಪಾ, ದುರುಗಪ್ಪ ಎತ್ತ ಮೆರಸೂಣು ಅಂತಾನ, ಮೆರಸೂಣಾ ?''

''ಎಲ್ಲಿದ್ದಾನ ಅಂವಾ ಕರಿ ಇಲ್ಲೆ.''

ದುರುಗ ಗೋದಲಿಯ ಒಳಗಿನಿಂದ ಮೆಲ್ಲನೆ ಹೊರಗೆ ಬಂದ.

''ತುಡುಗ ಸೂಳೇಮಗನಾ, ಏನ ಕಿಸಾಮತಿ ಮಾಡೀರಿ ನೀನು, ನಿನ್ನ ಎತ್ತ ಮೆರಸಾಕ ?'' ಎಂದರು.

''ಹೆಂತೆಂತಾವರs ಮೆರಸಾಕ ಹತ್ಯಾರ್ರಿ..... ನಮ್ಮ ಎತ್ತು..... ನಿಂತು ನೋಡಂಗ ಆದಾವು, ಅದಕ್ಕ ಇದೊಂದ ಬ್ಯಾರಿ ಮೆರಿಸಿಬಿಡೂಣ್ರಿ'' ಎಂದ.

ಅಪ್ಪನ ಮುಂದೆ ಆತ ಇಷ್ಟು ಧೈರ್ಯದಿಂದ ಮಾತನಾಡಿದ್ದು ಅದೇ ಮೊದಲು. ಮುಂದಾಗಬಹುದಾದ ಅನಾಹುತ ನೆನೆದು ನನ್ನ ಎದೆ ಡವಗುಟ್ಟುತ್ತಿತ್ತು.

''ಮಗನಾ, ಬರೆ ಮೆಯ್ಸಿ ಮೈ ಬೆಳಿಸಿದರ ನಿಂತು ನೋಡಂಗಿಲ್ಲ, ಮಂದಿ ನಿಂತು ನೋಡುವಂತಾ ಕೆಲಸಾ ಮಾಡಿ ತೋರಿಸಿ ಆಮ್ಯಾಲ ಮೆರಸು, ಕಾರುಣ್ಣಿ ಬರೂತ್ಲೆ ಎತ್ತ ಮೆರಸಬೇಕನಸ್ತದ ಮಗ್ಗ.....'' ಎಂದವರೇ ಹೊಲಕ್ಕೆ ಹೋದರು. ದುರುಗಪ್ಪನ ಅಭಿಮಾನಕ್ಕೆ ಚುರುಕು ಮುಟ್ಟಿತು. ಅಪ್ಪನಿಗರಿವಿಲ್ಲದಂತೆಯೇ ಸಿದ್ಧತೆ ನಡೆಸಿದ. ನಮ್ಮ ಆರು ಎತ್ತುಗಳಲ್ಲಿ ಬಲಶಾಲಿಯಾದ, ಚುರುಕಾದ ಸೂರ್ಯ ಮತ್ತು ಅಡ್ಯಾರ್ ಎಂಬ ಎರಡು ಎತ್ತುಗಳನ್ನು ಚೆನ್ನಾಗಿ ಮೇಯಿಸಿದ, ಪಳಗಿಸಿದ. ಬಿಳಿಜೋಳ ಬಿತ್ತುವ ತತಿ ಬಂದಾಗ :

''ಅಪ್ಪಾರ, ಕೆರಿಹೊಲ ಇವತ್ತ ಒಂದsದಿಂದಾಗ ಬಿತ್ತಿ ತೋರಿಸ್ತೀನ್ರಿ'' ಎಂದು ಡಿಕ್ಲೇರ್ ಮಾಡಿದ.

''ತಲಿ ಕೆಟ್ಟದೇನು ಮಗನಾ, ಮೊದಲs ಹಸಿ ಬಿಗದsತಿ, ಕೂರಿಗಿ ದಿಂಡಿನ ಮ್ಯಾಲ ಮೂರುಮಣಾ (ಸುಮಾರು ಮೂವತ್ತು ಕಿಲೊ) ಹಾರಿ ಹೇರಿ, ಕೆಸರಬಡದು ಒಂದs ದಿನದಾಗ ಹದಿನಾಲ್ಕು ಎಕರೆ ಏನ ಬಿತ್ತತೀದಿ !''

''ನಾ ಬಿತ್ತಿ ತೋರಸ್ತೀನ್ರೆಲ.''

ಎಂದವನೇ ದುರುಗ ಬೆಳಗಿನ ಏಳು ಗಂಟೆಗೆ ಕರಿಕಂಬಳಿ ಉಡಿಕಟ್ಟಿ ಬಿತ್ತಲು ನಿಂತೇಬಿಟ್ಟ. ನಮ್ಮದು ಊರ ಮುಂದಿನ ಹೊಲ. ಇದು ಅಸಾಧ್ಯದ ಕಾರ್ಯ ಎಂದು ಖಾಯಸ ಮಾಡಿಕೊಂಡಿದ್ದ ಊರಿನ ಮತ್ತು ನೆರೆಹಳ್ಳಿಯ ರೈತರು ನಮ್ಮ ಹೊಲದ ತುಂಬ ಸೇರಿ ಹಬ್ಬದ ವಾತಾವರಣ ನಿರ್ಮಾಣ ಮಾಡಿದರು. ನಮಗೆ ಹಿಗ್ಗೇ ಹಿಗ್ಗು. ಬಂದವರಿಗೆಲ್ಲ ಚಹಾ ಚೂಡಾದ ಸಮಾರಾಧನೆ.

ಸಂಜೆ ಐದು ಗಂಟೆಯ ಹೊತ್ತು. ಕೊನೆಯ ಸುತ್ತು ಹೋಗಿಬಂದ ದುರಿಗ್ಯಾ ಕೇಕೆ ಹೊಡೆದು ಎತ್ತುಗಳನ್ನು ತಬ್ಬಿಕೊಂಡ. ಅವನ ಕಣ್ಣಲ್ಲಿ ಆನಂದಬಾಷ್ಪ ಚಿಲ್ಲನೆ ಸಿಡಿದುವು.

ಮೊದಲೇ ಇದರ ಸುಳಿವು ತಿಳಿದಿದ್ದ ಅಪ್ಪ ತಾಳಿಕೋಟೆಯಿಂದ ಮದ್ದು, ಗುಲಾಲ, ಝೂಲಾ, ಬುಡ್ಡೀಗ್ಯಾಸು ದುರುಗಪ್ಪನಿಗೆ ಬೆಳ್ಳಿ ಕಡೆ ತರಿಸಿ ಇಟ್ಟಿದ್ದರು. ಹಳ್ಳೂರಿನಿಂದ ಬ್ಯಾಂಡಿನವರನ್ನೂ ಕರೆಸಿದ್ದರು. ಅಂದು ಸಾಯಂಕಾಲ ನಮ್ಮ ಊರ ತುಂಬ ಎತ್ತುಗಳೊಂದಿಗೆ ದುರಿಗ್ಯಾನ ಮೆರವಣಿಗೆ.

ನಾನಷ್ಟೇ ಅಲ್ಲ, ನಮ್ಮ ಭಾಗದ ನಮ್ಮ ಪೀಳಿಗೆಯ ಜನ ಈ ಘಟನೆಯನ್ನು ಇನ್ನೂ ಮರೆತಿಲ್ಲ.

ಬಿ. ಆರ್. ಪೋಲೀಸಪಾಟೀಲ
ವಾತ್ಸಲ್ಯ, ಬನಹಟ್ಟಿ - ೫೮೭ ೩೧೧

ಸಾಹಿತ್ಯವೆಂಬುದು ಎಂದೂ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ. ಅನುಭವವನ್ನು ನಿರಾಕರಿಸುವ, ವ್ಯಕ್ತಿಯು ತನ್ನ ಅನುಭವಗಳನ್ನು ನಿರಾಕರಿಸಿಕೊಳ್ಳುವ ಪ್ರಕ್ರಿಯೆಯನ್ನು ಕಲಿಸುವ ನಮ್ಮ ವ್ಯವಸ್ಥಿತ ಧರ್ಮ ಸಾಮಾಜಿಕ ಕಟ್ಟಲೆ ಹಾಗೂ ರಾಜಕೀಯ ವ್ಯವಸ್ಥೆಯ ವಿರುದ್ಧದ ಬಹು ಶಕ್ತಿಶಾಲಿ ದನಿ. ಅಂತರಾಳದಲ್ಲಿ ಬಹು ಗುಪ್ತವಾಗಿ ಎಂದೂ ಅರಾಜಕವಾಗಿರುವ ಮನಸ್ಸು ಮಾತ್ರ ಕಾವ್ಯ ರಚಿಸಬಲ್ಲದು. ಈ ಮನಸ್ಸು 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವ' ಮನಸ್ಸು; ಭವಿಷ್ಯ ಮುಖೀ ಮತ್ತು ಆಶಾವಾದೀ ಮನಸ್ಸು; ಎಂದಿಗೂ ಹತಾಶವಾಗಲಾರದ ಮನಸ್ಸು. ಸಾಹಿತ್ಯೋಪಾಸನೆಯಾಗಲಿ ಸಾಹಿತ್ಯ ಸೃಷ್ಟಿಯಾಗಲಿ ಒಂದು ಧ್ಯಾನದ ಕ್ರಿಯೆ. ಏಕಾಂತವನ್ನು ಕಲಿಸುವ ಬಹು ಪ್ರಮುಖ ಮಾರ್ಗ. ನಮ್ಮ ವ್ಯಕ್ತಿತ್ವದೊಳಗಿನ ಸಹವಾಸ ವೆಂದರೆ ಹೆದರುವ, ಓಡಿಹೋಗಬೇಕೆನ್ನಿಸುವ, ಶಬ್ದಗದ್ದಲಗಳಲ್ಲಿ ಕರಗಿಹೋಗಬೇಕೆನ್ನಿಸುವ ಬಯಕೆಗಳನ್ನು ಮೂಡಿಸುವ ಈ ವ್ಯವಸ್ಥೆಯಲ್ಲಿ ಸಾಹಿತ್ಯ ನಮ್ಮನ್ನು ನಾವು ಧೈರ್ಯವಾಗಿ ನೋಡಿಕೊಳ್ಳುವ, ಪರೀಕ್ಷಿಸಿಕೊಳ್ಳುವ, ವಿಶ್ಲೇಷಣೆಗೊಳಿಸುವ ಮನಸ್ಸನ್ನು ನಮ್ಮಲ್ಲಿ ಹುಟ್ಟು ಹಾಕುತ್ತದೆ. ಬಹುಮಟ್ಟಿಗಿನ ನಮ್ಮ ಬದುಕು ಏಕಾಕಿತನವನ್ನು ಸೃಷ್ಟಿಸುವಂಥದು. ಏಕಾಕಿತನ ನಕಾರಾತ್ಮಕವಾದದ್ದು. ಆದರೆ ಸಾಹಿತ್ಯ, ಕಲೆ ಸಕಾರಾತ್ಮಕವಾದ ಏಕಾಂತವನ್ನು ಸೃಷ್ಟಿಸುತ್ತದೆ. ಆದರೆ ಇವು ಯಾವುವೂ ಶೂನ್ಯದಲ್ಲಿ ನಡೆಯುವಂಥವಲ್ಲ. ಒಂದು ಸಂದರ್ಭದಲ್ಲಿ, ಸುತ್ತಮುತ್ತಲವರ ಮಧ್ಯೆ, ಒಂದು ಆರ್ಥಿಕ, ರಾಜಕೀಯ, ಸಾಮಾಜಿಕ ಪರಿಸರದಲ್ಲಿ ನಡೆಯುವಂಥದು. ಆದದ್ದರಿಂದ ನಮ್ಮ ವಿಕಾಸವೂ ಕೂಡ ಸಾಮಾಜಿಕ ಪ್ರಸ್ತುತತೆಯನ್ನು ಪಡೆದಿರುವುದು ಹಾಗೂ ಎಷ್ಟೇ ಚಿಕ್ಕ ಪ್ರಮಾಣದಲ್ಲಿಯಾದರೂ ಸಮಾಜದ ಮೇಲೆ ಪರಿಣಾಮ ಬೀರುವಂಥದು.

ಸಾಹಿತ್ಯ ಹೇಗೆ ಬದುಕಿನ ಬಗ್ಗೆ ಪ್ರೀತಿ ಬೆಳೆಸುತ್ತದೋ, ಹಾಗೆಯೇ ಸಾವಿನ ಕುರಿತಾದ ಅತ್ಯಂತ ಪ್ರಬುದ್ಧ ರೀತಿಯ ದೃಷ್ಟಿ ಬೆಳೆಸುತ್ತದೆ. ಸಾಹಿತ್ಯ ನಮ್ಮ ಬಗ್ಗೆಯೇ ನಮ್ಮ ಆತಂಕಗಳು, ಕೀಳರಿಮೆಗಳು, ಭಯಗಳು, ನಾಚಿಕೆ, ಅವಮಾನಗಳು ಇವುಗಳನ್ನು ಎದುರಿಸುವ ಶಕ್ತಿಯನ್ನು ಬೆಳೆಸುತ್ತದೆ. ಈ ಎಲ್ಲದ ರಿಂದ ಪಲಾಯನ ಮಾಡದೆ, ಇವು ನಮ್ಮದೇ ಎಂದು ಒಪ್ಪಿ ಕೊಳ್ಳುವ ಸ್ಥೈರ್ಯ ನೀಡುತ್ತದೆ. ಆದ್ದರಿಂದಲೇ ಈ ದೈಹಿಕ ಬದುಕಿಗೆ ಅಂತ್ಯವೆಂಬುದೊಂದಿದೆ ಎಂಬ ಉನ್ನತ ರೀತಿಯ ಅರಿವನ್ನು ಮೂಡಿಸುತ್ತದೆ. ನಮ್ಮ ಅಮರತ್ವವೆಲ್ಲ ನಾವು ಈ ಬದುಕಿನಲ್ಲಿ ನೀಡಿರಬಹುದಾದಂಥ ಪ್ರೀತಿ, ನಾವು ತೋರಿದ ಕಳಕಳಿಗಳು, ನಮ್ಮ ನಿಸ್ವಾರ್ಥ ಚಟುವಟಿಕೆಗಳು ಇಷ್ಟಕ್ಕೆ ಮಾತ್ರ ಸೀಮಿತವಾದದ್ದು ಎಂಬ ವಿನಯ ಹುಟ್ಟಿಹಾಕುತ್ತದೆ. ನಾವು ಹೋದರೂ ಬದುಕು ಉಳಿಯುತ್ತದೆ; ಆದದ್ದರಿಂದ ನಮ್ಮ ಆದ್ಯತೆ ಶಾಶ್ವತವಾದದ್ದರ ಕುರಿತಾಗಿ ಇರಬೇಕೇ ವಿನಾ ನಶ್ವರ ವಾದದ್ದರ ಕುರಿತಾಗಿ ಅಲ್ಲ ಎಂದು ಅನುಭವದ ಮೂಲಕ ಹೇಳಿ ಕೊಡುತ್ತದೆ. ನಶ್ವರವಾದದ್ದು ಈ ಅಹಂ, ದರ್ಪ ಅಧಿಕಾರ ನಡೆಸುವ ಜ್ಞಾನ; ಶಾಶ್ವತವಾದದ್ದು ನಮ್ಮ ಜೀವ ಪ್ರೇಮ.

ಇಷ್ಟು ಹೇಳಿದ ಮೇಲೆ ನಮ್ಮ ದೇಹರಚನೆಯ ಕುರಿತಾದ ಒಂದು ಬಹು ಕುತೂಹಲಕಾರಿ ಅಂಶವನ್ನು ಹೇಳಲೇಬೇಕೆಂಬ ಮನಸ್ಸಾಗುತ್ತಿದೆ.

ನಮ್ಮ ಮಿದುಳಿಗೆ ಎರಡು ಭಾಗವಿದೆ. ಎಡಭಾಗ ಮತ್ತು ಬಲಭಾಗ. ಶಸ್ತ್ರಚಿಕಿತ್ಸೆ ಮಾಡಿದರೆ ಕಣ್ಣಿಗೆ ಕಾಣುವ




ಗೌಡ್ರು ಮಾಡಿದ್ ಪಾದಯಾತ್ರೆ
ಚೆನ್‌ಪಟ್ಣಟು ಬ್ಯಾಂಗ್ಲೂರ್
ಕಾಂಗ್ರೆಸ್‌ನೋರಿಗೆ ಉರಿಕಿತ್ಕೊಂಡಿದೆ
ತಲೆಗೂದ್ಲುಟು ಕಾಲುಗುರು

ಭಾಗಗಳು ಇವು. ಇಂಗ್ಲಿಷಿನಲ್ಲಿ ಇದಕ್ಕೆ ಲೆಫ್ಟ್ ಲೋಬ್, ರೈಟ್ ಲೋಬ್ ಅನ್ನುತ್ತಾರೆ. ಚೈನಾ ಭಾಷೆಯಲ್ಲಿ ಬಳಸುವ ಯಿನ್ ಮತ್ತು ಯಾಂಗ್ ಎಂಬ ಶಬ್ದಗಳು ಈ ಎರಡು ಭಾಗದ ವಿವರಣೆಯಷ್ಟೇ ಅಲ್ಲ ಅದನ್ನು ಮೀರಿದ ಅಮೂರ್ತ ಅರ್ಥಗಳನ್ನೂ ಒಳಗೊಂಡಿದೆ. ಈ ಎಡ, ಬಲಭಾಗಗಳಿಗೆ ತಮ್ಮದೇ ಪ್ರತ್ಯೇಕ ಜವಾಬ್ದಾರಿಗಳಿವೆ. ದೈಹಿಕವಾಗಿ ಮಿದುಳಿನ ಎಡಭಾಗ ದೇಹದ ಬಲ ಭಾಗವನ್ನೂ, ಬಲಭಾಗ ದೇಹದ ಎಡಭಾಗವನ್ನೂ ನಿಯಂತ್ರಿಸುತ್ತವೆ. ಈ ಎಡ, ಬಲಭಾಗಗಳ ಜವಾಬ್ದಾರಿಗಳೇನು ?

ಮಿದುಳಿನ ಎಡಭಾಗ ಆಕ್ರಮಣಶೀಲ, ಮಹತ್ವಾ ಕಾಂಕ್ಷಿ, ಸ್ಪರ್ಧಾತ್ಮಕ, ತರ್ಕಶೀಲ ಮತ್ತು ಗಂಡು ಲಕ್ಷಣಗಳ ಭಾಗ. ಬಲಭಾಗ ಸಂವೇದನಾಶೀಲ, ಸಹಕಾರಿ ಮನೋ ಭಾವದ, ಅಂತರ್‌ದೃಷ್ಟಿ ಹಾಗೂ ಅಂತರ್‌ಬೋಧೆಯ ಲಕ್ಷಣಗಳುಳ್ಳ ಸಹಾನುಭೂತಿಯ ಹೆಣ್ಣಿನ ಮೃದುತ್ವವುಳ್ಳ ಭಾಗ. ಮುಂದುವರೆದು ಹೇಳುವುದಾದರೆ ಎಡಭಾಗ ಈ ಭೌತವಸ್ತುವನ್ನೂ ಬಲಭಾಗ ಅಂತಶ್ಚೇತನವನ್ನೂ ಪ್ರತಿನಿಧಿಸುತ್ತವೆ. ಬಹುಶಃ ಬಹು ಅಮೂರ್ತ ಮಾತು ಗಳಲ್ಲಿ ದೇಹ, ಆತ್ಮಗಳು ಎಂದು ಕೂಡ ಹೇಳಬಹುದು. ಎಡಭಾಗ ಈ ಕ್ಷಣವನ್ನೂ, ಬಲಭಾಗ ಅನಂತವನ್ನೂ, ಶಾಶ್ವತವನ್ನೂ ಸೂಚಿಸುತ್ತವೆ.

ಈ ವಿಷಯ ಎಂಥ ಅದ್ಭುತವಾದದ್ದು ಎಂಬ ಕಲ್ಪನೆ ನಮಗಾಗಬೇಕು.

ಏಕಕಾಲದಲ್ಲಿ ಈ ನಶ್ವರ ದೇಹದಲ್ಲಿ ಕ್ಷಣವೂ, ಅನಂತವೂ ಮೇಳೈಸಿವೆ. ಶಾಶ್ವತ ತುಡಿತಗಳೂ ನಶ್ವರ ಅಹಂಕಾರಗಳೂ ಸೆಳೆಯುತ್ತಿವೆ. ಈ ಲೋಕದಲ್ಲಿ, ನಿಜ ಪರಿಸರದಲ್ಲಿ ಬದುಕುತ್ತಿದ್ದಂತೆಯೇ ಈ ಇಂದ್ರಿಯಗಳಿಗೆ ಅತೀತವಾದ, ಮಿದುಳಿಗಷ್ಟೇ ಸಾಧ್ಯವಾದ ಕಲ್ಪನೆಗಳನ್ನು ಮೀರಿದ ಸತ್ಯಗಳತ್ತ, ಸೌಂದರ್ಯಗಳತ್ತ ಆಕರ್ಷಿಸುತ್ತದೆ. ಪ್ರಕೃತಿ ನಮ್ಮನ್ನು ಈ ಸವಾಲಿನ ಮಧ್ಯೆ ಕೆಡವಿದೆ.

ನಾವು ಶರಣಾಗುವುದು ಎಡಭಾಗಕ್ಕೋ ಬಲಭಾಗಕ್ಕೋ ?

ಹೋರಾಟ ನಮಗೇ ಬಿಟ್ಟದ್ದು. ಯಾವ ಪ್ರಾಣಿಗೂ ಇರದ ಭಯಂಕರ ಆಯ್ಕೆಯ ಪ್ರಶ್ನೆ ನಮಗೆ ಒಡ್ಡಲಾಗಿದೆ.

ಬಾಲ್ಯದ ನಮ್ಮ ಅಚ್ಚರಿ, ಕುತೂಹಲಗಳು, ನಮ್ಮ ಮುಗ್ಧತನ, ನಮ್ಮ ಸ್ವಚ್ಛಂದತೆ ಇವುಗಳೆಲ್ಲ ನಮ್ಮ ಮಿದುಳಿನ ಬಲಭಾಗದ ಪ್ರಾಧಾನ್ಯದ ಸೂಚಕ.

'ಇನ್ನೂ ಮಗು' ಎಂದು ನಮ್ಮನ್ನು ನಮ್ಮ ಪಾಡಿಗೆ ಸುತ್ತಲ ಜಗತ್ತು ಬಿಟ್ಟುಬಿಟ್ಟಿರುವ ನಮ್ಮ ಪುಣ್ಯದ ವಯಸ್ಸು.

ವಯಸ್ಸಾಗುತ್ತಿದ್ದಂತೆ, ತರ್ಕ, ಲೆಕ್ಕಾಚಾರ, ಲಾಭ-ನಷ್ಟ, ಸೋಲು-ಗೆಲುವು ಇವುಗಳ ಗೊಂದಲಗಳಿಗೆ, ಸಿಕ್ಕು ಬೀಳುತ್ತೇವೆ. ಇವುಗಳು ನಾವುಗಳೇ ಸೃಷ್ಟಿಸಿಕೊಂಡ ಗೊಂದಲಗಳು. ಮತ್ತು ಇಂಥ ಗೊಂದಲಗಳಲ್ಲಿ, ಸ್ವಾರ್ಥ ಗಳಲ್ಲಿ ಸಿಲುಕಿಕೊಂಡಿರುವವರೆಗೆ ನಾವು ಯಾರೂ ವ್ಯವಸ್ಥೆಗೆ ಏನೂ ಪ್ರಶ್ನೆಯಾಗುವುದಿಲ್ಲ, ಸವಾಲಾಗುವುದಿಲ್ಲ. ಹೀಗೆ ನಮ್ಮನ್ನು ಬಗ್ಗಿಸುವುದೇ, ಒಗ್ಗಿಸಿಕೊಳ್ಳುವುದೇ, ವ್ಯವಸ್ಥೆಯ ಮೂಲಲಕ್ಷಣ ಮತ್ತು ಉದ್ದೇಶ. ಅಂದರೆ ಬಲಭಾಗ ಕ್ರಮೇಣ ಕುಗ್ಗುತ್ತ, ಅಪ್ರಸ್ತುತವಾಗಿ ಕಾಣುತ್ತ, ಅಡಚಣೆ ಯಾಗುತ್ತ, ಕೆಲವೊಮ್ಮೆ ಅಪಾಯಕಾರಿಯೂ ಆಗುತ್ತ ಮಧ್ಯ ವಯಸ್ಸಿನ ಹೊತ್ತಿಗೆ ಸಂಪೂರ್ಣ ಸತ್ತೇಹೋಗಿರುತ್ತದೆ. ಅಂದರೆ ಮುಂದೆ ದೇಹದಲ್ಲಿ ಮಾತ್ರ ಜೀವವಿರುವು ದರಿಂದ 'ಜೀವಂತ'ರಾಗಿದ್ದೇವೆಂದು ಅರ್ಥವೇ ಹೊರತು ಒಳಗಿನ ಜೀವಶಕ್ತಿಯ ಮಿಡಿತದಿಂದ ಅಲ್ಲ ಎಂದು. ಹೀಗಾಗುವುದರಿಂದಲೇ ನಾವು ಗುಪ್ತವಾಗಿ ಹಿಂಸಾ ವಾದಿಗಳು ಕೂಡ ಆಗುವುದು. ಮಾತಿನಲ್ಲಿ, ನಡವಳಿಕೆ ಯಲ್ಲಿ, ನಮ್ಮ ಒಟ್ಟು ಜೀವನ ದೃಷ್ಟಿಯಲ್ಲಿ ಅಸಹನೆ ಹಾಗೂ ಪರರ ಕುರಿತಾದ ಅಸಹ್ಯಗಳನ್ನು ಬೆಳೆಸಿಕೊಳ್ಳುವುದು. ಇವುಗಳೇ ನಮ್ಮ ಸಂಸ್ಕೃತಿಯನ್ನು – ವೈಯಕ್ತಿಕ ಹಾಗೂ ಸಾಮಾಜಿಕ – ನಾಶ ಮಾಡುವುದು. ಜೀವ ಪ್ರೇಮ ಕಮರಿಹೋಗುವಂತೆ ಮಾಡುವುದು. ಸೃಷ್ಟಿಶೀಲ ಬಲಭಾಗ ಸತ್ತಿತೆಂದರೆ ಮನುಷ್ಯ -ಮನುಷ್ಯನ ಮಧ್ಯದ ಎಲ್ಲ ಸಂಬಂಧಗಳಿಗೂ ಬಹು ಪ್ರಧಾನವಾದ ಮಾಧ್ಯಮವಾದ ಭಾಷೆ ಸತ್ತಿತೆಂದು ಅರ್ಥ.

ಈ ಎಲ್ಲ ಅಪಾಯಗಳ ವಿರುದ್ಧ ಶಾಶ್ವತ ಹೋರಾಟ ಮಾಡುತ್ತಿರುವುದು ಕಲೆ-ಸಾಹಿತ್ಯ, ಸಂಗೀತ, ಚಿತ್ರಕಲೆ ಇತ್ಯಾದಿ. ಮಿದುಳಿನ ಎಡ-ಬಲ ಭಾಗಗಳ ಸಮನ್ವಯ ಸಾಧಿಸುವುದು ಹೇಗೆ ? ಈ ವ್ಯಕ್ತಿತ್ವ ಸಮಗ್ರಗೊಳ್ಳುವುದು ಹೇಗೆ ? ಈ ನಶ್ವರದಲ್ಲಿ ಬದುಕುತ್ತಲೇ ಶಾಶ್ವತ ಬದುಕಿನ ಕುರಿತಾದ ಪ್ರಜ್ಞೆ ಬೆಳೆಸಿಕೊಳ್ಳುವುದು ಹೇಗೆ ? ಅನುಭವವನ್ನು ಸ್ವೀಕರಿಸುವುದು ಹೇಗೆ ? ಎಂಬೆಲ್ಲದನ್ನೂ ಕಲಿಸುವುದು ಸಾಹಿತ್ಯ. ಬದುಕು ಆದಿ ಅಂತ್ಯಗಳಿಲ್ಲದ ನಿರಂತರ ಪ್ರಕ್ರಿಯೆ ಎಂಬ ವಿನಯದ ಅರಿವು ಮೂಡುವುದು ಶ್ರೇಷ್ಠ ಸಾಹಿತ್ಯಾಭ್ಯಾಸದಿಂದ. ಶ್ರೇಷ್ಠ ಸಾಹಿತ್ಯಾಭ್ಯಾಸವೆಂದರೆ ಧರ್ಮ ವಿಜ್ಞಾನಗಳ ಅಭ್ಯಾಸ ಹಾಗೂ ಅನುಭವ. ಏಕಕಾಲದಲ್ಲಿ ಬದುಕು ಉತ್ಸವ-ಧ್ಯಾನಗಳ ಮಿಲನ ಎಂದೂ ಅರ್ಥ.

– ಪ್ರೊ|| ಜಿ. ಕೆ. ಗೋವಿಂದರಾವ್
ನಂ. ೧೬೧, ೧ನೇ ಮಹಡಿ, ೩೬ನೇ 'ಎ' ಕ್ರಾಸ್, ೭ನೇ ಬ್ಲಾಕ್
ಜಯನಗರ, ಬೆಂಗಳೂರು-೫೬೦ ೦೮೨



## ಅರಾರತ್

ಅರಾರತ್ ಪರ್ವತದ ಪುಣ್ಯ ಶಿಖರಗಳ ಮೇಲೆ
ಶತಮಾನಗಳು ಗಳಿಗೆಗಳಂತೆ ಉರುಳಿ
ಹೋಗಿವೆ.
ಅಸಂಖ್ಯಾತ ಮಿಂಚು-ಕರವಾಲಗಳು
ಶಿಖರಗಳ ವಜ್ರಶಿರಗಳನ್ನು ಖಣಖಣಿಸಿ
ಹೋಗಿವೆ.
ಜನ ಜನಾಂಗಗಳು ಕಣ್ದೆರೆದು
ಅರಾರತ್‌ನ ಶಿಖರಪ್ರಭೆಯಲ್ಲಿ ಮಿಂದು
ಹೋಗಿವೆ.
ಈ ಮಹೋನ್ನತ ಶಿಖರಗಳ ನೋಡು
ಅರೆಗಳಿಗೆ ನಿಲ್ಲು ; ಈಗ ನಿನ್ನ ಸರದಿ
ಹೋಗು !

## ಕವಿ ಅವೇತಿಕ್ ಇಸ್ಸಹಾಕಿಯಾನ್

ಆರ್ಮೇನಿಯಾದ ಮಹಾಕವಿ ಅವೇತಿಕ್ ಇಸ್ಸಹಾಕಿಯಾನ್. ೧೮೯೭ರಲ್ಲಿ ಇವನ ಮೊದಲ ಕವನ ಸಂಕಲನ "ಹಾಡುಗಳು ಮತ್ತು ಗಾಯಗಳು" ಪ್ರಕಟವಾಯ್ತು. ಅಹ್ಮಂಗನ್ ಶ್ರೇಣಿಯ ಸೊಬಗು, ಅಮೋಘ ಚೆಲುವಿನ ಸೇವನ್ ಸರೋವರ, ಅರಾರತ್ ಪರ್ವತ, ಅಲಗೇಜ್ ಶಿಖರದ ತುದಿಯ ಬಟ್ಟಲಲ್ಲಿ ನೀಲಾಕಾಶವನೆಲ್ಲ ಹೃದಯ ದಲ್ಲಿಟ್ಟುಕೊಂಡು ಮಿನುಗುವ ಪುಟ್ಟ ಕೊಳ, ಗಾರ್ನಿ ಕಣಿವೆ, ಯೆರವಾನ್ ನಗರ, ರಂಗುರಂಗಿನ ಆರ್ಮೇನಿಯಾದ ಜನಪದ ಇವೆಲ್ಲವನ್ನೂ ಹಾಡಾಗಿಸಿದವನು ಅವೇತಿಕ್. ಅಕ್ಟೋಬರ್ ಕ್ರಾಂತಿಯಿಂದ ಪ್ರಭಾವಿತನಾಗಿ ಹೊಸ ಯುಗಕ್ಕೆ ಚೈತನ್ಯ ಪೂರ್ಣವಾಗಿ ಸ್ಪಂದಿಸಿದ ಈ ಕವಿಯ ಹಿನ್ನೆಲೆಯಲ್ಲಿ ಪುಷ್ಕಿನ್, ಲೆರ್‌ಮಾಂತೋಫ್, ಗಯಟೆ ಮುಂತಾದವರಿದ್ದಾರೆ. ಕಣ್ಣೆದುರೇ ಬದಲಾದ ಯೆರೆವಾನ್‌ನ ಜನಜೀವನ, ಜನತೆಗೆ ದೊರಕಿದ ಪ್ರಜಾಪ್ರಭುತ್ವದ ಬದುಕು, ಮರುಭೂಮಿಯಲ್ಲಿ ಚಿಗುರಿದ ಹಸಿರು, ರಸ್ತೆಗಳು, ಕಾಲುವೆಗಳು, ಕಾರ್ಖಾನೆಗಳು, ಸಾಮೂಹಿಕ ಬೇಸಾಯ ಇತ್ಯಾದಿ ಪ್ರಗತಿಪರ ಕನಸುಗಳೆಲ್ಲ ಸೋವಿಯೆಟ್‌ಲ್ಯಾಂಡಿನಲ್ಲಿ ಸಾಕಾರವಾದವು. ಆರ್ಮೇನಿಯಾದ ವಿಜ್ಞಾನ ವಿಭಾಗದಲ್ಲಿ, ಸೋವಿಯೆತ್ ಪೀಸ್ ಕಮಿಟಿಯಲ್ಲಿ, ಆರ್ಮೇನಿಯಾ ಬರಹಗಾರರ ಒಕ್ಕೂಟದಲ್ಲಿ ಅವೇತಿಕ್ ಕೆಲಸ ಮಾಡಿದ್ದಾನೆ. ಸಂಗೀತಕ್ಕೆ ಒಗ್ಗುವ ಈ ಕವಿಯ ಅನೇಕ ಕವಿತೆಗಳು ಆರ್ಮೇನಿಯಾದಲ್ಲಿ ಅತ್ಯಂತ ಜನಪ್ರಿಯವಾಗಿವೆ. ಕತೆಗಳಿಗೂ ಕವಿತೆಗಳಿಗೂ ವ್ಯತ್ಯಾಸವೇ ಸಿಗದೇ ಕತೆಗಳಲ್ಲಿ ಕವಿತೆಗಳೂ, ಕವಿತೆಗಳಲ್ಲಿ ಕತೆಗಳೂ ಮಿಳಿತವಾಗಿ ಅಪೂರ್ವ ಅನುಭವವಾಗುತ್ತದೆ.

■



## ಮೊದಲ ಹನಿ

ವಸಂತದ ಸೂರ್ಯ ಸುದೀರ್ಘ ಮುತ್ತನ್ನಿಟ್ಟ
ಹಸಿರು ಚಿಗುರು ಹೂಗಳಿಗೆ ಜೀವಕೊಟ್ಟ
ಬಾಲೆಯ ಮುಗುಳು ತುಳುಕಿಸುತ್ತಾ
ವಾಯಲೆಟ್ ಹೂ ತನ್ನ ನೀಲಿಗಂಗಳನ್ನು ಪಿಳುಕಿಸಿತು.

ಕಾಯುತ್ತಿದ್ದ ಪಡುವಣ ಗಾಳಿ
ಕನ್ನೆಯ ಕಿವಿಯೊಳಗೆ ಪ್ರೇಮದ ಪುಂಗಿಯೂದಿದ
ಪತರಗುಟ್ಟುವ ಬಣ್ಣದ ಚಿಟ್ಟೆ
ಪುಟ್ಟದೊಂದು ಮುತ್ತು ಕೊಟ್ಟು ಹಾರಿಹೋದ.

ನಿಂತೇ ಇದ್ದಳು ವಾಯಲೆಟ್ ಬಾಲೆ
ಮಾತುಕೊಟ್ಟು ಮಾಯವಾದವರ ಕನಸುಗಳ ಹೊತ್ತು
ನಿಷ್ಕಳಂಕ ನೀಲಿಗಂಗಳಿಂದ
ಪ್ರೇಮದ ಮೊದಲ ಕಣ್ಣೀರ ಹನಿ ಬಿತ್ತು !

**ವಿಜಯವಾಮನ**
ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಬಾಲಕಿಯರ ಕಾಲೇಜು
ಸಾಗರ-೫೭೭ ೪೦೧, ಶಿವಮೊಗ್ಗ ಜಿಲ್ಲೆ

# ಕರ್ತಾರನ ಕಮ್ಮಟದಲ್ಲಿ ಕೃಷ್ಣ ವಿವರಗಳು

ಜಿ. ಟಿ. ನಾರಾಯಣರಾವ್

**ಕೃಷ್ಣ ವಿವರ : ಪರಮ ಸುಂದರ ಸೃಷ್ಟಿ**

''ನಿಸರ್ಗದ ಅಧ್ಯಯನ ಮಾಡಲು ವಿಜ್ಞಾನಿಗೆ ಪ್ರೇರಣೆ ಹೇಗೆ ಬರುತ್ತದೆ ?''

''ಮೂಲತಃ ಆತ ಸೌಂದರ್ಯಾರಾಧಕ. ಇನ್ನು ನಿಸರ್ಗ ? ಅದು ಸೌಂದರ್ಯದ ಖನಿ. ಸೌಂದರ್ಯಾನುಶೀಲನೆಯೇ ಆತನ ಪ್ರೇರಕ ಬಲ.''

''ಸೌಂದರ್ಯದ ವ್ಯಾಖ್ಯೆ ?''

''ಭಾಗಗಳ ಸುಸಂಗತ ಮೇಳನದಿಂದ ಲಭಿಸುವ ಮತ್ತು ಪರಿಶುದ್ಧ ಪ್ರತಿಭೆಗೆ ಗ್ರಾಹ್ಯವಾಗುವ ದಿವ್ಯ ಗಹನ ಅನುಭವವದು. ಉದಾಹರಣೆಗೆ, ಚಂದ್ರ ರಹಿತ ನಿರಭ್ರ ರಾತ್ರಿಯ ಗಗನದಲ್ಲಿ ಪ್ರಕಟವಾಗುವ ನಕ್ಷತ್ರ ವೈಭವ.''

''ಹಾಗಾದರೆ ನಿಸರ್ಗದಲ್ಲಿ ಪರಮ ಸುಂದರ ನಿರ್ಮಿತಿ ಯಾವುದು ? ಪರಮಾಣು, ನಕ್ಷತ್ರ, ಬ್ರಹ್ಮಾಂಡ, ನೀಹಾರಿಕೆ ?''

''ಕೃಷ್ಣ ವಿವರಗಳು – ಸಂದೇಹಾತೀತವಾಗಿ !''

''ಆದರೆ ವೀಕ್ಷಣೆ ಅವುಗಳ ಅಸ್ತಿತ್ವವನ್ನು ಇನ್ನೂ ಸ್ಥಿರೀಕರಿಸಿಲ್ಲ ?''

ತುಸು ಉತ್ತೇಜಿತರಾಗಿ ಖಚಿತವಾಣಿಯಲ್ಲಿ ನುಡಿದರು, ''ವೀಕ್ಷಣತಂತ್ರ ಮತ್ತು ಮಾಪನೋಪಕರಣ ಇನ್ನಷ್ಟು ಪರಿಷ್ಕರಣಗೊಂಡಂತೆ ಅವುಗಳ ಪತ್ತೆ ಆಗಿಯೇ ಆಗುತ್ತದೆ. ಏಕೆಂದರೆ ಕೃಷ್ಣ ವಿವರದ ತಳಪರಿಕಲ್ಪನೆ ಬಲುಸರಳ ಮತ್ತು ಅಷ್ಟೇ ನಿರ್ದಿಷ್ಟ. ವಿಶ್ವದ ವಿಶಾಲ ವ್ಯಾಪ್ತಿಯಲ್ಲಿ ಅದರ ಬೆಳೆ ಹುಲುಸೆಂದು ಭಾವಿಸಲು ಸಾಕಷ್ಟು ಪರೋಕ್ಷ ಪುರಾವೆ ಉಂಟು.''

''ಅಂದ ಮೇಲೆ ನೀವು ನೊಬೆಲ್ ಪ್ರಶಸ್ತಿ ಸ್ವೀಕರಿಸಿದಾಗ (೧೯೮೩) ಮಾಡಿದ ಭಾಷಣದಲ್ಲಿ ಉಲ್ಲೇಖಿಸಿರುವ ಸೂಕ್ತಿಗಳಿಗೆ ಕೃಷ್ಣ ವಿವರ ಪರಮೋತ್ಕೃಷ್ಟ ನಿದರ್ಶನವಾಗಲಿದೆ : ಋತದ ಪರಿಮುದ್ರೆ, ಸರಳತೆ ಮತ್ತು ಸತ್ಯದ ಪರಿವೇಷ ಸೌಂದರ್ಯ !''

ಅವರ ಪ್ರಶಾಂತ ವದನದಲ್ಲಿ ''ಮಿಂಚಿ ಮಾಯವಾಗುತ್ತಿತ್ತು ಒಂದು ಮಂದಹಾಸಾ !'' (ಬೇಂದ್ರೆ)

ಈ ಮೇಲಿನ ಮಾತುಕತೆ ನಡೆದದ್ದು ಸುಬ್ರಹ್ಮಣ್ಯನ್ ಚಂದ್ರಶೇಖರ್ (೧೯೧೦-೯೫) ಮತ್ತು ನನ್ನ (೧೯೩೬) ನಡುವೆ – ಅವರ ನೆಲೆ ಶಿಕಾಗೋ ವಿಶ್ವವಿದ್ಯಾಲಯದಲ್ಲಿ, ೧೯೯೫ ಜೂನ್ ೨೨ ಮತ್ತು ೨೩ರಂದು.

ಅದೇ ಆಗಸ್ಟ್ ೨೨ರಂದು ಅವರು 'ಕೃಷ್ಣ ವಿವರ'ವಾದರು. ಈ ಯುಗ ಪ್ರವರ್ತಕ ಖಭೌತ ವಿಜ್ಞಾನಿಯ ಸ್ಮರಣಾರ್ಥ ಅಮೆರಿಕದ ನಾಸಾ ಸಂಸ್ಥೆ 'ಚಂದ್ರ' ಹೆಸರಿನ ಗಗನ ನೇತ್ರವನ್ನು (ಕೃತಕ ಉಪಗ್ರಹ) ಕಕ್ಷೆಗೆ ಉಡಾಯಿಸಿತು (೨೩ ಜುಲೈ ೧೯೯೯). ಆಗಲೇ ಈ ನೇತ್ರ ಕೃಷ್ಣ ವಿವರಗಳ ಅಸ್ತಿತ್ವಕ್ಕೆ ಪರೋಕ್ಷ ಪುರಾವೆ ಒದಗಿಸಿ ಚಂದ್ರಶೇಖರರ ಭವಿಷ್ಯವಾಣಿಯನ್ನು ಸ್ಥಿರೀಕರಿಸಿತು. ಕವಿ ಜಾನ್ ಕೀಟ್ಸ್ (೧೭೯೫-೧೮೨೧) ಎಂದೋ ಉದ್ಗರಿಸಿದ್ದಾನೆ, ''ಕಲ್ಪನೆ ಯಾವುದನ್ನು ಸೌಂದರ್ಯ ಎಂದು ಎತ್ತಿ ಹಿಡಿಯುವುದೋ ಅದು ಸತ್ಯವೇ ಆಗಿರಬೇಕು – ಅದು ಹಿಂದೆ ಇರಲಿಲ್ಲವೋ ಎಂಬುದು ಅಪ್ರಸ್ತುತ.''

**ವಿಮೋಚನ ವೇಗ**

ಎರಡು ಆಕಾಶಕಾಯಗಳ ನಡುವೆ ವರ್ತಿಸುವ ಗುರುತ್ವಾಕರ್ಷಣ ಬಲವನ್ನು ಗಣಿಸಲು ಐಸಾಕ್ ನ್ಯೂಟನ್ (೧೬೪೨-೧೭೨೭) ಒಂದು ಗಣಿತ ಸೂತ್ರ ನೀಡಿದ್ದಾನೆ (೧೬೬೬) : $GMm \div R^2$ ಇಲ್ಲಿ $G$ ವಿಶ್ವ ಗುರುತ್ವಾಕರ್ಷಣ ಸ್ಥಿರಾಂಕ. ಇದರ ಬೆಲೆಯನ್ನು ಗಣಿಸಲಾಗಿದೆ. $M$ ಮತ್ತು $m$ ಆ ಕಾಯಗಳ ರಾಶಿಗಳು (masses). $R$ ಅವುಗಳ ನಡುವಿನ ಅಂತರ.

ಯಾವುದೇ ಆಕಾಶಕಾಯದ ಸಮಸ್ತ ಘಟಕಗಳೂ ಅದರ ಗುರುತ್ವಾಕರ್ಷಣ ಕ್ಷೇತ್ರದೊಳಗೆ ಬಂಧಿತವಾಗಿರುತ್ತವೆ. ಉದಾಹರಣೆಗೆ ಚಂದ್ರ ಭೂಗುರುತ್ವಾಕರ್ಷಣ ಕ್ಷೇತ್ರದೊಳಗಿದೆ. ಮೇಲೆಸೆದ ಕಲ್ಲು, ಗುಂಡು ಬಡಿದ ಹಕ್ಕಿ, ಆಯ ತಪ್ಪಿದ ವಿಮಾನ, ಪಥ ವಿಚಲಿತವಾದ ಉಲ್ಕೆ ಮುಂತಾದವು ಭೂಮಿಗೆ ಕೆಡೆಯುವುದು ಈ ಕಾರಣದಿಂದಲೇ.

ಈಗ, ಎತ್ತರಕ್ಕೆ ಬೀರಿದ ಕ್ಷಿಪಣಿ ಭೂಗುರುತ್ವದ ಸೆಳೆತ ಮೀರಿ ವಿಶಾಲಾಕಾಶ ವಿಹಾರಿಯಾಗುವುದು ಸಾಧ್ಯವಾದೀತೇ ? ನ್ಯೂಟನ್-ಸೂತ್ರದ ಪ್ರಕಾರ ಹೌದು ! ನೆಲದಿಂದ ನೇರ ಮೇಲಕ್ಕೆ ಸೆಕೆಂಡಿಗೆ ೧೧.೨ ಕಿ.ಮೀ. ಅಥವಾ ಅಧಿಕ ವೇಗವಾಗಿ ಕವಣೆ ಬೀರಿದ ಕಲ್ಲು ಭೂಗುರುತ್ವಾಲಿಂಗನದಿಂದ ವಿಮೋಚಿತವಾಗುತ್ತದೆ. ಎಂದೇ ಈ ಕನಿಷ್ಠ ಆರಂಭಿಕ ಉಡಾವಣ ವೇಗಕ್ಕೆ ವಿಮೋಚನ ವೇಗವೆಂದು (escape velocity) ಹೆಸರು.



*ಡಾ|| ಎಸ್. ಚಂದ್ರಶೇಖರ್ ಅವರೊಡನೆ ಲೇಖಕರು*

ಇದನ್ನು ಗಣಿಸಲು ಸಾರ್ವತ್ರಿಕ ಸೂತ್ರ $\sqrt{2GM/R}$. ಇಲ್ಲಿ $M$ ಆಕಾಶಕಾಯದ ರಾಶಿ ಮತ್ತು $R$ ತ್ರಿಜ್ಯ. ಸೌರವ್ಯೂಹದ ಬೃಹತ್ ಗ್ರಹ ಗುರುವಿನ ವಿಮೋಚನ ವೇಗ ಸೆಕೆಂಡಿಗೆ ೫೭.೫ ಕಿ.ಮೀ. ಇನ್ನು ಸೂರ್ಯನದು ಕೇವಲ ೬೧೮ !

ವಿಮೋಚನ ವೇಗದ ಸೂತ್ರ 'ಓದಿ'ದರೆ ಎರಡು ಸಂಗತಿಗಳು ಹೊಳೆಯುತ್ತವೆ : ರಾಶಿ ($M$) ವೃದ್ಧಿಸಿದಾಗ, ಅಂತೆಯೇ ತ್ರಿಜ್ಯ ($R$) ಕ್ಷಯಿಸಿದಾಗ ವಿಮೋಚನ ವೇಗ ವರ್ಧಿಸುತ್ತದೆ.

**ಬೆಳಕಿನ ವೇಗ**

ಗೆಲಿಲಿಯೋ ಗೆಲಿಲೀ (೧೫೬೪-೧೬೪೨) ಆಗಮನದ ತನಕ ಬೆಳಕಿನ ವೇಗ ಅನಂತ ಎಂದು (ತಪ್ಪಾಗಿ) ಭಾವಿಸಲಾಗಿತ್ತು. ಈತನ ನಿಶಿತ ಮತಿ ಇದನ್ನು ಒಪ್ಪಲಿಲ್ಲ. ಆದರೆ ಬೆಳಕಿನ ವೇಗ ಅಳೆಯಲು ಈತ ಕೈಗೊಂಡ ಪ್ರಯೋಗಗಳು ವಿಫಲವಾದುವು – ತಾತ್ವಿಕ ದೋಷವಲ್ಲ, ಭೂ ಚೌಕಟ್ಟಿನ ಸೀಮಿತತೆ ಮತ್ತು ಬೆಳಕಿನ ಅತಿ ಚಟುಲತೆ. ಮುಂದೆ ಓಲಾಸ್ ರೋಮರ್ (೧೬೪೪-೧೭೧೦) ಗೆಲಿಲಿಯೋ-ತಂತ್ರವನ್ನು ಸೌರವ್ಯೂಹದ ವಿಸ್ತಾರ ಚೌಕಟ್ಟಿಗೆ ಅನ್ವಯಿಸಿ ಬೆಳಕಿನ ವೇಗವನ್ನು ಶೋಧಿಸಿದ : ಸೆಕೆಂಡಿಗೆ ೨೨೭,೦೦೦ ಕಿ.ಮೀ. (೧೬೭೬). ಇಂದಿನ ಪರಿಷ್ಕೃತ ಬೆಲೆ ೨೯೯,೭೯೨.೪೫೮. ಇದನ್ನು c ಅಕ್ಷರದಿಂದ ಸೂಚಿಸುವುದು ವಾಡಿಕೆ.

ನ್ಯೂಟನ್ನನ ಮಹಾಪ್ರತಿಭೆ ಬೆಳಕನ್ನು ಅನಂತಾಲ್ಪ ದ್ಯುತಿ ಕಣಗಳ ಸಂತತ ಪ್ರವಾಹ ಎಂದು ಪ್ರಾಯೋಗಿಕವಾಗಿ

---

**'ಕರ್ತಾರನ ಕಮ್ಮಟ' ಎಂದರೆ ಭೌತವಿಶ್ವ, 'ಕೃಷ್ಣ ವಿವರ' ಎಂದರೆ** Black Hole.

ದರ್ಶಿಸಿತು. ಹೀಗೆ ನ್ಯೂಟನ್ ಮತ್ತು ರೋಮರ್ ಅವರ ಪ್ರಯೋಗ-ಚಿಂತನೆ ಫಲವಾಗಿ ಬೆಳಕಿನ ಭೌತ ಅಸ್ತಿತ್ವ ಮತ್ತು ಚಲನ ವೇಗ ಸ್ಥಿರೀಕೃತವಾದುವು.

ಆದ್ದರಿಂದ ಯಾವುದೇ ನಕ್ಷತ್ರ, ತಾತ್ತ್ವಿಕವಾಗಿ, ದ್ಯುತಿ ಕಣಗಳನ್ನು ಸೆಕೆಂಡಿಗೆ ೨೨೭,೦೦೦ ಕಿ.ಮೀ. ವೇಗದಲ್ಲಿ ಪುಂಖಾನುಪುಂಖವಾಗಿ ಎರಚುವ ಆಕರ ಎನ್ನಬಹುದು (೧೭ನೆಯ ಶತಮಾನ). ಅಂದ ಮೇಲೆ, ಒಂದು ನಕ್ಷತ್ರದ ವಿಮೋಚನ ವೇಗ ಸಾಕ್ಷಾತ್ ಬೆಳಕಿನ ವೇಗವನ್ನೇ ಮೀರುವ ಬೃಹತ್ಸಂಖ್ಯೆ ಆಗುವುದು ಸಾಧ್ಯವೇ ? ಈ ತೆರನಾಗಿ ಚಿಂತಿಸಿ ಚಾಚಿದಾತ ಪಿಯರೆ ಸೈಮನ್ ಲಾಪ್ಲಾಸ್ (೧೭೪೯-೧೮೨೭).

**ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ !**

''ಭೂಸಾಂದ್ರತೆಯಷ್ಟು ಸಾಂದ್ರತೆಯೂ ಸೌರವ್ಯಾಸದ ೨೫೦ ಮಡಿ ವ್ಯಾಸವೂ ಇರುವ ಒಂದು ಮಿನುಗುತಾರೆ ಸ್ವಂತಾಕರ್ಷಣೆಯ ಕಾರಣವಾಗಿ ತನ್ನ ಇನಿತು ಕಿರಣವನ್ನೂ ಹೊರಜಿನುಗಬಿಡದು. ವಿಶ್ವದ ಬಲು ದೊಡ್ಡ ಮಿನುಗು ಕಾಯಗಳು ಈ ಕಾರಣದಿಂದ ನಮಗೆ ಕಾಣದಿರುವ ಸಾಧ್ಯತೆ ಉಂಟು.'' ಈ 'ಕಲ್ಪನಾ ವಿಲಾಸಾ' ಲಾಪ್ಲಾಸನಿಗೆ ಮಿಂಚಿದ್ದು ಆತ ವಿಮೋಚನ ವೇಗವೆಂಬ ''ಭೃಂಗದ ಬೆನ್ನೇರಿ'' ಬಾನಿನ ಎತ್ತರ ಬಿತ್ತರ ಮಹತ್ತರಗಳಿಗೆ ಜಿಗಿದಾಗ (೧೭೯೬).

ಭೂಸಾಂದ್ರತೆಯೂ ಸೌರವ್ಯಾಸವೂ ತಿಳಿದಿರುವುದರಿಂದ ಲಾಪ್ಲಾಸನ ಕಾಲ್ಪನಿಕ ಮಿನುಗುತಾರೆಯ ವಿಮೋಚನ ವೇಗವನ್ನು ಗಣಿಸಬಹುದು. ಇದರ ಬೆಲೆ ಬೆಳಕಿನ ವೇಗಕ್ಕಿಂತ ತುಸುವೇ ಜಾಸ್ತಿ ! ಅರ್ಥ ಏನು ? ಈ ಕಾಯದಿಂದ ಹೊರಜಿಗಿದ ದ್ಯುತಿ ಕಣಗಳು ವಿಮೋಚನ ವೇಗದ ಬೇಲಿ ಹಾರಲಾಗದೇ ಅಲ್ಲಿಯೇ ಉಳಿಯುತ್ತವೆ – ಅರ್ಥಾತ್ ಬಾಹ್ಯ ಲೋಕಕ್ಕೆ ಇದರ ಇರವಿನ ಅರಿವು ಬರದು. ಇದೊಂದು ವಿಚಿತ್ರ ಕಾಯ : ಇದೆ, ಆದರೆ ಇರುವುದು ಇತರರಿಗೆ ತಿಳಿಯದ್ದರಿಂದ ಇಲ್ಲ ! ''ಇರಬೇಕು ಇರಬೇಕು ಇರದಿರಬೇಕು'' ಎಂಬ ಪುರಂದರ ವಾಣಿಗೆ ದಿವ್ಯ ನಿದರ್ಶನ.

ಲಾಪ್ಲಾಸನ ಫಲವಂತ ಚಿಂತನೆ ವಿಮೋಚನ ವೇಗದ ಸೂತ್ರದಲ್ಲಿ ಅಂಶವನ್ನು (*M*) ವೃದ್ಧಿಸುವ ದಿಶೆಯಲ್ಲಿ ಮಾತ್ರ ಹರಿಯಿತು, ಛೇದವನ್ನು (*R*) ಕ್ಷಯಿಸುವ ದಿಶೆಯಲ್ಲಿ ಚಾಚಲಿಲ್ಲ – ಏಕೆ ?

**ಖಭೌತ ವಿಜ್ಞಾನ**

ಖಗೋಳ ಕಾಯಗಳಿಗೆ ಭೌತವಿಜ್ಞಾನದ ತತ್ವಗಳನ್ನು ಅನ್ವಯಿಸಿ ಬೆಳೆಸಿದ ಚಿಂತನ ಪ್ರಕಾರವಿದು. ಆ ಕಾಯಗಳಿಂದ ಲಭಿಸುವ ಭೌತ ಮಾಹಿತಿಗಳನ್ನು ಭೌತವಿಜ್ಞಾನದ ಭೂಮಿಕೆಯಲ್ಲಿ ಅಭ್ಯಸಿಸಿ ಅವುಗಳ ಸ್ಥಿತಿ ಗತಿ ವಿಕಾಸ ಮುಂತಾದವನ್ನು ವ್ಯಾಖ್ಯಾನಿಸುವುದು ಇದರ ವಸ್ತು. ೨೦ನೆಯ ಶತಮಾನದಲ್ಲಿ ವಿಶೇಷವಾಗಿ ಅಭಿವರ್ಧಿಸಿತು. ಕಾರಣ ?

ನ್ಯೂಟನ್ ಪ್ರವರ್ತಿಸಿದ ಭೌತವಿಜ್ಞಾನ ೧೯ನೆಯ ಶತಮಾನಾಂತ್ಯದ ತನಕ ವಿಜೃಂಭಿಸಿತು. ಇಂದ್ರಿಯಗ್ರಾಹ್ಯ ಮತ್ತು ದೂರದರ್ಶಕ ಲಭ್ಯ ಸಮಸ್ತ ಮಾಹಿತಿಗಳನ್ನೂ ಇದು ಖಗೋಳ ವಿಜ್ಞಾನದ ಚೌಕಟ್ಟಿನೊಳಗೆ ಸಂದೇಹಾತೀತವಾಗಿ ವಿವರಿಸಲು ಶಕ್ತವಾಯಿತು. ಇದನ್ನು ಅಭಿಜಾತ ಭೌತ ವಿಜ್ಞಾನ ಎಂದು ಕರೆಯುವುದು ರೂಢಿ.

೧೯-೨೦ ಶತಮಾನಸಂಧಿ ಕಾಲದಲ್ಲಿ ಪರಮಾಣು ಮತ್ತು ನಕ್ಷತ್ರಗಳ ಅಂತರಂಗ ವ್ಯವಹಾರ ಕುರಿತು ಸಾಕಷ್ಟು ಭೌತ ಮಾಹಿತಿಗಳು ಸಂಗ್ರಹವಾಗತೊಡಗಿದವು. ಇವನ್ನು ಸಮರ್ಥವಾಗಿಯೂ ಸಮರ್ಪಕವಾಗಿಯೂ ವ್ಯಾಖ್ಯಾನಿಸುವಲ್ಲಿ ಅಭಿಜಾತ ಭೌತವಿಜ್ಞಾನ ಯಶಸ್ಸು ಗಳಿಸಲಿಲ್ಲ. ಆಗ ಮೈದಳೆದ ಮೂರು ಮುಖ್ಯ ಚಿಂತನ ಪ್ರಕಾರಗಳು ಶಕಲ ಸಿದ್ಧಾಂತ (೧೯೦೦, Quantum theory), ವಿಶೇಷ ಮತ್ತು ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತಗಳು (೧೯೦೫, ೧೫, Special and General Theories of Relativity) ಮತ್ತು ಪರಮಾಣುವಿನ ಭೌತ ಪ್ರತಿರೂಪ (೧೯೧೪-೧೬). ಇವು ಪರಸ್ಪರ ಪೂರಕ ಪೋಷಕವಾಗಿ ಪ್ರವರ್ಧಿಸಿ ವಿಶ್ವದ ಬಗ್ಗೆ ನವದೃಷ್ಟಿಯನ್ನೇ ಒದಗಿಸಿದುವು. ಒಟ್ಟಾಗಿ ಇವುಗಳ ಹೆಸರು ನವಜಾತ ಭೌತವಿಜ್ಞಾನ.

ನವಜಾತ ನೀಡಿದ ವಿಶ್ವದೃಷ್ಟಿಯ ಫಲವಾಗಿ ನಕ್ಷತ್ರಗಳ ಜನನ, ವಿಕಾಸ ಮತ್ತು ಶಕ್ತಿ ರಹಸ್ಯ ಕುರಿತು ವಿಶೇಷ ಒಳನೋಟ ಲಭಿಸಿದೆ.

ನಕ್ಷತ್ರಗಳ ತೊಟ್ಟಿಲು ನೀಹಾರಿಕೆ (nebula). ಇದು ಪ್ರೋಟಾನ್, ನ್ಯೂಟ್ರಾನ್, ಎಲೆಕ್ಟ್ರಾನ್ ಮುಂತಾದ ಮೂಲಕಣಗಳ ಮಹಾವ್ಯಾಪ್ತಿ. ಮಳೆ ಮೋಡದಲ್ಲಿ ನೀರ ಹನಿಗಳು ಮೈದಳೆಯುವಂತೆ ನೀಹಾರಿಕೆಯಲ್ಲಿ ಆದಿಮ ನಕ್ಷತ್ರಗಳು (ಅಂದರೆ ಮೂಲಕಣ ಪುಂಜಗಳು) ಹೆಪ್ಪುಗಟ್ಟುತ್ತವೆ.

ಆದಿಮ ನಕ್ಷತ್ರದಲ್ಲಿ ಮೂಲಕಣಗಳು ಸಂಯೋಜಿಸಿ ಹೈಡ್ರೊಜನ್ ಬೀಜಗಳಾಗುತ್ತವೆ. ಈ ನಕ್ಷತ್ರ ತನ್ನ ಭಾರಕ್ಕೆ ತಾನೇ ಮಣಿದು ಕೇಂದ್ರಾಭಿಮುಖವಾಗಿ ಸಂಕೋಚಿಸಲಾರಂಭಿಸುತ್ತದೆ. ಆಗ ಸಹಜವಾಗಿ ಇದರ ಗರ್ಭದಲ್ಲಿ ಸಂಮರ್ದ ಮತ್ತು ಉಷ್ಣತೆ ಮೇರೆ ಇರದೇ ವರ್ಧಿಸುತ್ತವೆ. ಇವು ಒಂದು ಅವಧಿಕ ಘಟ್ಟ ದಾಟುವಾಗ ಅಲ್ಲಿ ಬೈಜಿಕಾಗ್ನಿ (nuclear fire) ಪ್ರಜ್ವಲಿಸಿ ಹೈಡ್ರೊಜನ್ ಬೀಜಗಳ ಸಂಲಯನ (fusion) ಆರಂಭವಾಗುತ್ತದೆ. ಇದೊಂದು ತೆರನಾದ ದಹನ. ಇದರ ಫಲವಾಗಿ ವಿಕಿರಣ (ಬೆಳಕು, ಶಾಖ ಇತ್ಯಾದಿ ಶಕ್ತಿ ಪ್ರಕಾರಗಳು) ವಿಮೋಚನೆಗೊಂಡು ವಿಶ್ವದ ಮಹಾಗರ್ತಕ್ಕೆ ವಿಸರ್ಜಿತವಾಗುತ್ತದೆ – ನಕ್ಷತ್ರ ಜನನ ಪ್ರಕ್ರಿಯೆ ಇದು. ದಹನಶೇಷ ಹೀಲಿಯಮ್ ಬೀಜಗಳು. ಇವು ನಕ್ಷತ್ರದ ಒಡಲಲ್ಲೇ ಶೇಖರಣೆಗೊಳ್ಳುತ್ತವೆ.

ನಕ್ಷತ್ರ ವಿಕಾಸದ ಪ್ರಥಮ ಹಂತವಿದು. ಇದರಲ್ಲಿ ಬೈಜಿಕ ಕುಲುಮೆಗೆ ಇಂಧನ ಹೈಡ್ರೊಜನ್ ಎಂದೇ ಇದರ ಹೆಸರು ಹೈಡ್ರೊಜನ್ ತಾರೆ. ನಮ್ಮ ಸೂರ್ಯ ಒಂದು ಉದಾಹರಣೆ. ಸೂರ್ಯನ ವಯಸ್ಸು ಸುಮಾರು [illegible] ಬಿಲಿಯನ್ ವರ್ಷಗಳು (೧ ಬಿಲಿಯನ್ = ೧,೦೦೦,೦೦೦,೦೦೦ = ೧೦೦ ಕೋಟಿ). ಇನ್ನು ೧೫ ಬಿಲಿಯನ್ ವರ್ಷಗಳು ಸಲ್ಲುವಾಗ ಸೂರ್ಯನಲ್ಲಿಯ ಹೈಡ್ರೊಜನ್ ಇಂಧನ ಮುಗಿಯಲಿದೆ. ಆಗ ಅದು ಬಹುತೇಕ ಹೀಲಿಯಮ್‌ಮಯವಾಗಿರುವುದು.

> ಕಡಲಿನ ಒಂದು ನೀರಿನ ಕಣ ಇದ್ದೂ ಇಲ್ಲದ್ದು, ಕಣಕ್ಕೆ ಸಾಗರ ಬಿಟ್ಟು, ಪ್ರತ್ಯೇಕ ಅಸ್ತಿತ್ವ ಇಲ್ಲವೆಂಬುದು ಇದರ ಕಾರಣವಲ್ಲ. ಕಣಕ್ಕೆ ತನ್ನದೇ ಅಸ್ತಿತ್ವ, ಸ್ವಂತಿಕೆ ಇಲ್ಲದಿದ್ದರೆ ಸಾಗರಕ್ಕೂ ಅದರ ಅಸ್ತಿತ್ವ ಇಲ್ಲವಾಗುವುದರಿಂದ, ಅವೆರಡೂ ಸುಂದರವಾಗಿ ಪರಸ್ಪರ ಅವಲಂಬಿಸಿವೆ. ಇದು ಭೌತಿಕ ಪ್ರಪಂಚದ ಒಂದು ಸತ್ಯ.
>
> **– ಗಾಂಧೀಜಿ**

ಸಾಧಾರಣ ನಕ್ಷತ್ರದಲ್ಲಿ ಒಂದು ಜೊತೆ ವಿರುದ್ಧ ಬಲಗಳು ಏಕಕಾಲಿಕವಾಗಿ ವರ್ತಿಸುತ್ತಿರುವುವು: ಗುರುತ್ವದ ಸಂಕೋಚನಶೀಲಬಲ, ವಿಕಿರಣದ ವ್ಯಾಕೋಚನಶೀಲ ಬಲ. ತಾರೆಯಲ್ಲಿ ಸಂಚಿತವಾಗಿರುವ ರಾಶಿಯ ಕಾರಣವಾಗಿ ಮೊದಲಿನದೂ ಬೈಜಿಕ ಸಂಲಯನ ಉತ್ಪಾದಿಸುವ ವಿಕಿರಣದ ಕಾರಣವಾಗಿ ಎರಡನೆಯದೂ ಕ್ರಿಯಾಶೀಲವಾಗಿರುತ್ತವೆ. ಇವು ಸಮತೋಲನದಲ್ಲಿರುವ ತನಕ ನಕ್ಷತ್ರ ಏಕಸ್ಥಿತಿಯಲ್ಲಿರುತ್ತದೆ. ಆದರೆ ಇದೇನೂ ಶಾಶ್ವತ ಸ್ಥಿತಿ ಅಲ್ಲ. ಎಣ್ಣೆ ಇರುವತನಕ ಹಣತೆ ಉರಿಯುತ್ತದೆ, ಅಲ್ಲವೇ ?

**ರಕ್ತ ದೈತ್ಯಗಳು ಶ್ವೇತ ಕುಬ್ಜಗಳು**

ಹೈಡ್ರೊಜನ್ ನಕ್ಷತ್ರದ ಅವಸಾನ ದಿನಗಳಲ್ಲಿ ಅದರ ಉಷ್ಣತೆ ಮತ್ತು ವಿಕಿರಣೋತ್ಪಾಟನೆ ಎರಡೂ ಗರಿಷ್ಠಕ್ಕೆ ಜಿಗಿದಿರುತ್ತವೆ, ಆದರೆ ರಾಶಿ ಮಾತ್ರ ಕನಿಷ್ಠಕ್ಕೆ ಕುಸಿದಿರುತ್ತದೆ. ಅಂದರೆ ಗುರುತ್ವದ ಸಂಕೋಚನಶೀಲ ಬಲವನ್ನು ಮೀರಿ ವಿಕಿರಣದ ವ್ಯಾಕೋಚನಶೀಲಬಲ ಮೇಲುಗೈ ಸಾಧಿಸಿರುತ್ತದೆ. ವಿಕಾಸ ಪಥದಲ್ಲಿ ಎರಡನೆಯ ಹಂತ ಪ್ರವೇಶಿಸುತ್ತಿರುವ ಈ ನಕ್ಷತ್ರ ದೈತ್ಯಗಾತ್ರಕ್ಕೆ ಉಬ್ಬುತ್ತದೆ, ಆಗ ಇದರ ಉಷ್ಣತೆ ತಗ್ಗಿ ಬಣ್ಣ ಕೆಂಪಾಗುತ್ತದೆ. ರಕ್ತದೈತ್ಯ (red giant) ಎಂಬುದು ಇದರ ಅನ್ವರ್ಥಕ ನಾಮ. ಇದು ಹೀಲಿಯಮ್‌ಭರಿತವಾಗಿರುವುದರಿಂದ ಹೀಲಿಯಮ್ ತಾರೆಯೂ ಹೌದು.

ಮತ್ತೆ ಗುರುತ್ವದ ಗಾಣ ಕ್ರಿಯಾಶೀಲವಾಗುತ್ತದೆ. ಗರ್ಭದಲ್ಲಿ ಬೈಜಿಕ ಕುಲುಮೆ ಪ್ರಜ್ವಲಿಸುತ್ತದೆ. ಈಗ ಇಂಧನ ಹೀಲಿಯಮ್. ದಹನ ಫಲ (ವಿಕಿರಣ) ಸೋರಿ ಹೋಗುತ್ತದೆ, ಶೇಷ ಕಾರ್ಬನ್ ಅಲ್ಲೇ ಜಮಾಯಿಸುತ್ತದೆ. ರಕ್ತದೈತ್ಯದ ಗಾತ್ರ ಕ್ರಮೇಣ ಸಂಕುಚಿಸುತ್ತದೆ. ಒಡಲು ಕಾರ್ಬನ್‌ಭರಿತವಾಗುತ್ತದೆ. ಕುಬ್ಜಗಾತ್ರ, ಇದಕ್ಕೆ ಹೊಂದದ ಅತ್ಯುಷ್ಣತೆ. ಎಂದೇ ಇದರ ಅನ್ವರ್ಥಕ ನಾಮ ಶ್ವೇತಕುಬ್ಜ (white dwarf). ಇದು ಕಾರ್ಬನ್ ತಾರೆಯೂ ಹೌದು. ನಕ್ಷತ್ರ ವಿಕಾಸದ ಮೂರನೆಯ ಹಂತವಿದು.

ರೋಹಿಣಿ, ಆರ್ದ್ರಾ ಮತ್ತು ಜ್ಯೇಷ್ಠಾ ಎಂಬ ಮೂರು ರಕ್ತ ದೈತ್ಯಗಳು (ಹೀಲಿಯಮ್ ನಕ್ಷತ್ರಗಳು) ಮನುಕುಲದ ನಿತ್ಯ ಸಂಗಾತಿಗಳಾಗಿ ಬೆಳೆದುಬಂದಿವೆ. ಮೊದಲ ಶ್ವೇತಕುಬ್ಜ ೧೮೬೮ರಲ್ಲೇ ಪತ್ತೆ ಆಗಿದ್ದರೂ ೧೯೧೫ರ ತನಕ ಅದರ ಒಗಟಿಗೆ ಒಡಪು ಲಭಿಸಿರಲಿಲ್ಲ. ತದನಂತರ ಶ್ವೇತಕುಬ್ಜಗಳ ಹುಲುಸು ಬೆಳೆಯೇ ದೊರೆತಿದೆ. ಈ ವಿಚಿತ್ರ ಕಾಯಗಳ ಜೀವನ ವೃತ್ತಾಂತವನ್ನು ಆರ್ಥರ್ ಎಡಿಂಗ್ಟನ್ (೧೮೮೨-೧೯೪೪) ಅಭಿಜಾತದ ಚೌಕಟ್ಟಿನೊಳಗೆ ಅಭ್ಯಸಿಸಿ ಸಿದ್ಧಾಂತ ಮಂಡಿಸಿದರು (೧೯೨೧-೩೦ರ ದಶಕ) : ಕಾರ್ಬನ್ (ಶ್ವೇತಕುಬ್ಜ) ಹಂತಕ್ಕೆ ಅಭಿವರ್ಧಿಸಿದ ನಕ್ಷತ್ರ ಮುಂದೆ ಶಾಶ್ವತವಾಗಿ ಅದೇ ಸ್ಥಿತಿಯಲ್ಲಿ ಉಳಿದಿರುತ್ತದೆ ! ಅಂದ ಮೇಲೆ ಸುದೂರದ ಭವಿಷ್ಯದಲ್ಲಿ ವಿಶ್ವ ಸರ್ವತ್ರ ಶ್ವೇತಕುಬ್ಜಗಳು ತುಂಬಿರಬೇಕು ?

**ಚಂದ್ರಶೇಖರ್ ಪರಿಮಿತಿ**

೧೯೩೦. ಖಭೌತ ವಿಜ್ಞಾನದ ಅರುಣೋದಯ ಕಾಲ. ಈ ಯುವ ಕ್ಷೇತ್ರದಲ್ಲಿ ನವ ಸಂಶೋಧನೆಗೈಯಬೇಕೆಂಬುದು ಹೊಸ ಚೇತನ ಚಂದ್ರಶೇಖರರ ಉತ್ಕಟ ಅಭಿಲಾಷೆ. ಇಪ್ಪತ್ತರ ಹರೆಯದ ಈ ಮಹಾಪ್ರತಿಭೆ ಆದೇ ತರುಣದಲ್ಲಿ ಮದ್ರಾಸು ವಿಶ್ವವಿದ್ಯಾಲಯದಿಂದ ಎಂ.ಎ.

(ಭೌತವಿಜ್ಞಾನ) ಪದವಿ ಗಳಿಸಿದ್ದರು.

ಅವರು ಇಂಗ್ಲೆಂಡಿಗೆ ಕಡಲಯಾನ ತೊಡಗಿದ್ದಾರೆ. ಆಗ ಅವರ ಸೌಂದರ್ಯ ಪ್ರಜ್ಞೆಗೆ ಹಿರಿಸವಾಲಾಗಿದ್ದುದು ಶ್ವೇತ ಕುಬ್ಜದ ಶಾಶ್ವತತೆ ಎಂಬ ಎಡಿಂಗ್ಟನ್ – ತೀರ್ಮಾನ : ಇದೊಂದು ವಿರೋಧಾಭಾಸವಲ್ಲವೇ ? ಭೌತ ವಿಶ್ವದಲ್ಲಿ ಸಮಸ್ತವೂ ನಶ್ವರ ಎಂಬುದು ಸೌಂದರ್ಯದೃಷ್ಟಿಗೂ ತತ್ತ್ವಶಾಸ್ತ್ರ ಚಿಂತನೆಗೂ ಸಮ್ಮತ. ಇಲ್ಲಿ ಶ್ವೇತಕುಬ್ಜ ಅಪವಾದವಾಗುವುದು ಹೇಗೆ ? ಸೃಷ್ಟಿಕರ್ತ ಎಡಹಿದನೇ ? ಎಡಿಂಗ್ಟನ್ ಆತನ ಬರೆಹವನ್ನು ತಪ್ಪಾಗಿ ಓದಿದರೇ ? ಮೊದಲನೆಯ ದು ಅಸಾಧ್ಯ. ಎರಡನೆಯದು ? ಶಸ್ತ್ರಕ್ರಿಯೆ ಯಶಸ್ವಿ, ರೋಗಿ ಮಾತ್ರ ಗತಜೀವಿ !




ಆಗ ಚಂದ್ರಶೇಖರರ ಪ್ರಖರ ಪ್ರತಿಭಾನದಲ್ಲಿ (intuition) ಹೊಸ ಹೊಳಹು ಮಿಂಚಿತು : ವಾಸ್ತವವಾಗಿ ಶ್ವೇತ ಕುಬ್ಜದ ಶಾಶ್ವತತೆ ಎನ್ನುವುದು ನಕ್ಷತ್ರ ಲೋಕದಲ್ಲಿಯ ಸಮಸ್ಯೆ, ಅದರ ಪರಿಹಾರಕ್ಕೆ ನಿಯೋಜಿಸಬೇಕಾದದ್ದು ನವಜಾತ ಭೌತವಿಜ್ಞಾನವನ್ನೇ ಹೊರತು ಅಭಿಜಾತವನ್ನಲ್ಲ. ಹಳೆ ದೇಹಕ್ಕೆ ಹಳೆ ಉಡುಪು ಸರಿ, ಹೊಸ ಗೇಹಕ್ಕೋ ?

ನವಜಾತ ಮಾರ್ಗದಲ್ಲಿ ಪರಿಕ್ರಮಿಸಿದ ಚಂದ್ರಶೇಖರ್ ಆವಿಷ್ಕರಿಸಿದ್ದು, ತರುವಾಯದ ವರ್ಷಗಳಲ್ಲಿ ಅವರ ಹೆಸರಿನಿಂದಲೇ ಪ್ರಸಿದ್ಧವಾದ, ಮೂಲಭೂತ ವಿಶ್ವ ಸ್ಥಿರಾಂಕವನ್ನು : ೧.೪ x ಸೌರರಾಶಿ. ಇದರ ಹೆಸರು ಚಂದ್ರಶೇಖರ್ ಪರಿಮಿತಿ. ಇದಕ್ಕಿಂತ ಕಡಿಮೆ ಇರುವ ಕಾರ್ಬನ್ ತಾರೆ ಮಾತ್ರ ಶ್ವೇತ ಕುಬ್ಜ ಆಗಬಲ್ಲದು.

ಅವರು ಇಂಗ್ಲೆಂಡಿನಲ್ಲಿದ್ದ ಸುಮಾರು ೫ ವರ್ಷ ಪರ್ಯಂತ ತಮ್ಮ ಸಿದ್ಧಾಂತವನ್ನು ನೇರ್ಪುಗೊಳಿಸಿದರು : ಶ್ವೇತ ಕುಬ್ಜದಲ್ಲಿ ಬೈಜಿಕ ಕುಲುಮೆಯನ್ನು ಕ್ರಿಯಾಶೀಲವಾಗಿಸಲು ಬೇಕಾಗುವ ಗುರುತ್ವ ಬಲವಿಲ್ಲ, ಎಂದೇ ಇದು ಕ್ರಮೇಣ ವಿಕಿರಣ ನಷ್ಟದಿಂದ ನಂದಿ ಮೃತ ನಕ್ಷತ್ರವಾಗುವುದು.

೧೯೩೫. ಯುವ ಚಂದ್ರಶೇಖರರ ನವಯುಗ ಪ್ರವರ್ತಕ ಸಂಶೋಧನ ಪ್ರಬಂಧಕ್ಕೆ ವಿಜ್ಞಾನಿಗಳ ತಾಂತ್ರಿಕ ಸಮಾವೇಶದಲ್ಲಿ ದೊರೆತದ್ದು ತಿರಸ್ಕಾರ! ದಕ್ಷಯಜ್ಞದ ಪುನರಾವರ್ತನೆ. ಸಾಕ್ಷಾತ್ ಎಡಿಂಗ್ಟನ್ನರೇ ದಕ್ಷ. ಏಕೆ ? ವ್ಯಕ್ತಿಯ ರಾಗ ಭಾವ ಪ್ರಪಂಚದ ನಡೆವಳಿಕೆಯೇ ಹಾಗೆ : ನಾನು ಕಂಡದ್ದು ಮಾತ್ರ ಸತ್ಯ.

**ಕೃಷ್ಣವಿವರದೆಡೆಗಿನ ರಾಜಪಥ**

ಅದೇ ವರ್ಷದ ನವಂಬರಿನಲ್ಲಿ ಚಂದ್ರಶೇಖರ್ ಇಂಗ್ಲೆಂಡ್ ತೊರೆದರು, ಅಮೇರಿಕ (ಶಿಕಾಗೊ ವಿಶ್ವವಿದ್ಯಾಲಯ) ಸೇರಿದರು.

ಅಂದಿನ (೧೯೩೫) ತನಕ ವೀಕ್ಷಣೆಗೆ ಲಭಿಸಿದ್ದ ಎಲ್ಲ ಶ್ವೇತ ಕುಬ್ಜಗಳ ರಾಶಿಗಳೂ ಚಂದ್ರಶೇಖರ್ ಪರಿಮಿತಿಯೊಳಗಿದ್ದುವು. ಹಾಗಾದರೆ ಇದನ್ನು ಮೀರುವ ಕಾರ್ಬನ್ ತಾರೆಗಳ ಭವಿಷ್ಯ ಏನು ? ಇಂಥವುಗಳ ಭೌತ ಅಸ್ತಿತ್ವವಿನ್ನೂ ಸ್ಥಿರೀಕೃತವಾಗಿರಲಿಲ್ಲ. ಸೈದ್ಧಾಂತಿಕ ವಿಜ್ಞಾನಿಗಳು (ಚಂದ್ರಶೇಖರ್ ಈ ವರ್ಗದವರು) ಈ ನಿಟ್ಟಿನಲ್ಲಿ ತಮ್ಮ ಸಂಶೋಧನೆಗಳನ್ನು ಪ್ರಪಂಚಾದ್ಯಂತ ಅಧಿಕ ಆಸಕ್ತಿಯಿಂದ ಮುಂದುವರಿಸಿದರು: ಹೊನ್ನಿನ ಬೆಳೆಯನು ಕೊಡಲಿಹ ಊಹಾಕ್ಷೇತ್ರಾನ್ವೇಷಣೆಗೆ ! ೧೯೬೦ರ ವೇಳೆಗೆ ಹೊಮ್ಮಿದ ಸಮಗ್ರ ಸೈದ್ಧಾಂತಿಕ ಚಿತ್ರವನ್ನು ಸೂತ್ರರೂಪದಲ್ಲಿ ಹೀಗೆ ನಿರೂಪಿಸಬಹುದು :

ಕಾರ್ಬನ್ ತಾರೆ → ಆಕ್ಸಿಜನ್ ತಾರೆ + ವಿಕಿರಣ ↑
ಆಕ್ಸಿಜನ್ ತಾರೆ → ನೀಯಾನ್ ತಾರೆ + ವಿಕಿರಣ ↑
ನೀಯಾನ್ ತಾರೆ → ಸಿಲಿಕಾನ್ ತಾರೆ + ವಿಕಿರಣ ↑
ಸಿಲಿಕಾನ್ ತಾರೆ → ಕಬ್ಬಿಣ ತಾರೆ + ವಿಕಿರಣ ↑

ಎಡಗಡೆ ಕಾಣಿಸಿರುವ ಪ್ರತಿಯೊಂದು ಹಂತದಲ್ಲಿಯೂ ಗುರುತ್ವದ ಗಾಣ (ಸಂಕೋಚನಶೀಲ ಬಲ) ಆ ತಾರೆಯನ್ನು ಹಿಂಡುತ್ತದೆ, ಫಲವಾಗಿ ವಿಕಿರಣ ಉತ್ಪಾದನೆಗೊಂಡು ಸೋರಿಹೋಗುತ್ತದೆ, ಶೇಷ ಅಲ್ಲೇ ಜಮೆ ಆಗುತ್ತದೆ (ಬಲಭಾಗ).

ಕಬ್ಬಿಣ ಹಂತಕ್ಕೆ ಏರಿದ ನಕ್ಷತ್ರದಲ್ಲಿ ಪರಿಸ್ಥಿತಿ ವಿಷಮಿಸುತ್ತದೆ : ಗುರುತ್ವದ ಗಾಣಕ್ಕೆ ಕಬ್ಬಿಣದ ಬೀಜಗಳು ಮಣಿಯುವುದಿಲ್ಲ; ಆಕುಂಚನ - ಪ್ರತಿರೋಧ ತೀವ್ರಾತಿತೀವ್ರವಾದಂತೆ ತಾರೆ ಮರಣಾಂತಿಕ ಆಸ್ಫೋಟನೆಗೀಡಾಗುತ್ತದೆ. ಇದು ಸೂಪರ್ನೋವಾ ಆಸ್ಫೋಟನೆ. ಆಗ ಸಂಜನಿಸುವ ಅಗಾಧ ಉಷ್ಣತೆ ಮತ್ತು ಅಪಾರ ಸಂಮರ್ದಗಳ ಹಠಾತ್ ಉತ್ಸರ್ಜನೆಯಲ್ಲಿ ಆವರ್ತ ಕೋಷ್ಟಕದ (periodic table) ೯೨ ರಾಸಾಯನಿಕ ಧಾತುಗಳೂ ಪಾಕಗೊಂಡು ವಿಶ್ವದ ಮಹಾ ವಿಸ್ತಾರಕ್ಕೆ ಎರಚಿಹೋಗುತ್ತವೆ.

ಸೂಪರ್ನೋವಾ ಹರಾಕಿರಿಯಲ್ಲಿ ¬ ನಕ್ಷತ್ರ ಸರ್ವನಾಶಗೊಳ್ಳಬಹುದು, ಅಥವಾ ಬೃಹನ್ನಕ್ಷತ್ರಗಳ (ಸೌರರಾಶಿಯ ೧೦೦ ಮಡಿ ಮತ್ತು ಅಧಿಕ) ಸಂದರ್ಭದಲ್ಲಿ ಅತಿ ದೃಢ ಮತ್ತು ಭದ್ರ ತಿರುಳು ಉಳಿಯಬಹುದು. ಇದು ನ್ಯೂಟ್ರಾನ್ ಕಣಗಳ ಬಲು ನಿಬಿಡ ಮುದ್ದೆ – ನ್ಯೂಟ್ರಾನ್ ನಕ್ಷತ್ರ ಎಂದು ಹೆಸರು.

ಸಿದ್ಧಾಂತ ಹೀಗೆ ಜಿಗಿದೋಡುತ್ತಿದ್ದಾಗ ವೀಕ್ಷಣೆ ಏನೂ ತೀರ ಹಿಂದೆ ಕುಂಟುತ್ತಿರಲಿಲ್ಲ. ೧೯೫೭ರಲ್ಲಿ ಆಕಾಶಯುಗ ಆರಂಭವಾಗಿ ವಿಶ್ವರೂಪ ದರ್ಶನಕ್ಕೆ ನೂತನ ಆಯಾಮ ಒದಗಿತು. ೧೯೬೪ರಲ್ಲಿ ಅಂದಿಗೆ ಆಕಾಶ ದೀಪಸ್ತಂಭವೆಂದು ಪರಿಗಣಿತವಾದ, ಪಲ್ಸರ್ ಪ್ರಥಮ ಬಾರಿಗೆ ಪತ್ತೆ ಆದಾಗ "ನಾನೇ ಅದು !" ಎಂದು ಬೀರಿತು ಮಂದಹಾಸ ನ್ಯೂಟ್ರಾನ್ ತಾರೆ !

ಗತಯುಗಗಳಲ್ಲಿ ಸಂಭವಿಸಿದ ಹಲವಾರು "ನಡುಹಗಲ ನವಸೂರ್ಯ" ಕುರಿತ ಐತಿಹಾಸಿಕ ಸಂಶೋಧನೆ ಹೊರಗೆಡಹಿದ್ದು, ಪ್ರಾಯಶಃ ಅವೆಲ್ಲವೂ ಸೂಪರ್ನೋವಾಗಳೆಂಬ ನೂತನ ವಿಸ್ಮಯವನ್ನು. ಹಾಗಾದರೆ ಅವು ಪ್ರಕಟವಾದವೆಂದು ಭಾವಿಸಲಾಗುವ ಪ್ರದೇಶಗಳಲ್ಲಿ ಅವಶೇಷಗಳಾಗಿ ಇಂದು ಪಲ್ಸರುಗಳಿರಬೇಕಷ್ಟೆ? ವೀಕ್ಷಣೆಗಳೂ ಶೋಧನೆಗಳೂ ಈ ಊಹೆಯನ್ನು ಸಮರ್ಥಿಸಿದುವು. ೧೯೮೭ರಲ್ಲಿ ೨೦ನೆಯ ಶತಮಾನದ ಮೊದಲ (ಮತ್ತು ಕೊನೆಯ ಕೂಡ) ಸೂಪರ್ನೋವಾ ಪ್ರತ್ಯಕ್ಷ ವೀಕ್ಷಣೆಗೆ ಲಭಿಸಿದಾಗ ಸಿದ್ಧಾಂತವನ್ನು ನಿಸರ್ಗ (ವಾಸ್ತವತೆ) "ಮೆಚ್ಚಿ ಅಹುದು ಅಹುದು" ಎಂದಿತು !

ನ್ಯೂಟ್ರಾನ್ ತಾರೆಯ ಭವಿಷ್ಯವೇನು ? ಸಿದ್ಧಾಂತದ ಪ್ರಕಾರ ಇದರಲ್ಲಿಯೂ ಗುರುತ್ವ ಗಾಣದ ಆಕುಂಚನೆ ಎಡೆ ತಡೆ ಇರದೆ ಮುಂದುವರಿಯುತ್ತದೆ, ಇದನ್ನು ಪ್ರತಿರೋಧಿಸುವ ಯಾವ ಬಲವೂ ಪ್ರಕ್ರಿಯೆಯೂ ನಕ್ಷತ್ರದಲ್ಲಿ ಪ್ರಕಟವಾಗುವುದಿಲ್ಲ, ನಕ್ಷತ್ರ ಗಾತ್ರ ಕ್ರಮೇಣ ಸಂಕೋಚಿಸುತ್ತದೆ. ಈ ಪ್ರಕ್ರಿಯೆಗೆ ಸಂತತ ಗುರುತ್ವ ನಿಪತನ (continuous gravitational collapse) ಎಂದು ಹೆಸರು.

ಈ ತಾರೆಯಲ್ಲಿ ರಾಶಿ ($M$) ಬದಲಾಗದು, ಆದರೆ ತ್ರಿಜ್ಯ ($R$) ಮಾತ್ರ ಕಿರಿದು ಕಿರಿದು ಆಗುತ್ತದೆ. ಆಗ ಇದರ ವಿಮೋಚನ ವೇಗ ( $\sqrt{2GM/R}$. ) ಮೇರೆ ಇರದೇ ವರ್ಧಿಸುವುದು. ಅಂಶ ಸ್ಥಿರವಾಗಿದ್ದು ಛೇದ ಶೂನ್ಯಗಾಮಿಯಾದಂತೆ ಭಿನ್ನರಾಶಿಯ ಬೆಲೆ ಅನಂತಗಾಮಿಯಾಗುವುದು. ಯಾವುದೋ ಹಂತದಲ್ಲಿ ವಿಮೋಚನೆ ವೇಗ ಬೆಳಕಿನ ವೇಗಕ್ಕೆ ಸಮವಾಗುತ್ತದೆ :

$$C^2 = 2GM/R \quad \text{ಅಥವಾ} \quad R = 2GM/C^2$$

ಇದರ ಅರ್ಥ : ನಕ್ಷತ್ರದ ತ್ರಿಜ್ಯ $R$ ಅಥವಾ ಕಡಿಮೆ ಆದಾಗ ಆ ನಕ್ಷತ್ರದಿಂದ ಬಾಹ್ಯ ಲೋಕಕ್ಕೆ ವಿಕಿರಣ ಪ್ರಸಾರ ಕೈದು ! (ಲಾಪ್ಲಾಸನ ಊಹೆ ತಾತ್ವಿಕವಾಗಿ ಸರಿಯಾಗಿದ್ದರೂ ವಿವರದಲ್ಲಿ ತಪ್ಪಾಗಿತ್ತು ಎಂಬುದನ್ನು ಗಮನಿಸಬೇಕು).

ಇಂಥ ಒಂದು ಸೈದ್ಧಾಂತಿಕ ವೈಚಿತ್ರ್ಯಕ್ಕೆ ಜಾನ್ ಆರ್ಚಿಬಾಲ್ಡ್ ವ್ಹೀಲರ್ (೧೯೧೧) Black Hole ಎಂಬ ಅನ್ವರ್ಥಕ ಮತ್ತು ಸ್ವಾರಸ್ಯಕರ ನಾಮ ಸೂಚಿಸಿದರು (೧೯೬೮). ಎಲ್ಲವನ್ನೂ ಕಬಳಿಸುವ ಆದರೆ ಏನನ್ನೂ ಬಿಡದಿರುವ ಮಹಾಗಗನ ಗರ್ತವಿದು. ಪರೋಕ್ಷ ಪುರಾವೆಗಳಿಂದ ಮಾತ್ರ ಇದರ ವಾಸ್ತವ ಅಸ್ತಿತ್ವವನ್ನು ಸ್ಥಿರೀಕರಿಸಬೇಕು. ೧೯೯೯ ರಿಂದೀಚೆಗೆ ಅದೂ ಸಿದ್ಧಿಸಿದೆ.

ನಮ್ಮ ರಾಷ್ಟ್ರದ ಖಭೌತ ವಿಜ್ಞಾನಿ ಜಯಂತ್ ವಿಷ್ಣು ನಾರ್ಲೀಕರ್ (೧೯೩೮) Black Holeಗೆ 'ಕೃಷ್ಣವಿವರ' ಎಂಬ ಸಂವಾದೀ ಪದವನ್ನು ಟಂಕಿಸಿದ್ದಾರೆ. 'ಕೃಷ್ಣ' ಅಂದರೆ ಕಪ್ಪು, 'ವಿವರ' ಅಂದರೆ ರಂಧ್ರ ಅಥವಾ ಕುಳಿ.

ಕೃಷ್ಣವಿವರವಾಗಿ ಅಂತರ್ಧಾನಿಸಿದ ತಾರೆಯ ಭವಿಷ್ಯವೇನು ? ಸಂಶೋಧನೆಗೆ ವಸ್ತು ಸಿದ್ಧವಾಗಿದೆ. ಪಥ ? ಪಥಿಕ ?

ದಾರಿಗಾ ! ಪಥ ದತ್ತವಾಗಿಲ್ಲ, ನೀ ನಡೆದು
ತೋರು ನವದೃಶ್ಯವನು – ಎಲ್ಲಿಯೂ ನಿಲ್ಲದಿರು,
ಯಾರಿಗೂ ಬಾಗದಿರು, ಬದ್ಧನಾಗಿರು ಖತಕೆ
ಹಾರಲಾಗದ ಕಮರಿಯೇ ಇರದು ಅತ್ರಿಸೂನು.

ಜಿ. ಟಿ. ನಾರಾಯಣರಾವ್
೮, ಅತ್ರಿ, ಕಾಮಾಕ್ಷಿ ಆಸ್ಪತ್ರೆ ರಸ್ತೆ, ಸರಸ್ವತೀಪುರ, ಮೈಸೂರು - ೫೭೦ ೦೦೯




# ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ
## ಬೆಂಗಳೂರು

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ, ಮಹಿಳೆಯರಿಗೆ, ಮಕ್ಕಳಿಗೆ, ದುರ್ಬಲ ವರ್ಗದವರಿಗೆ, ಮಾನಸಿಕ ಅಸ್ವಸ್ಥರಿಗೆ, ಜನಾಂಗ ಹಿಂಸೆ, ಮತೀಯ ದೌರ್ಜನ್ಯ, ಪ್ರವಾಹ, ಕ್ಷಾಮ, ಭೂಕಂಪ ಅಥವಾ ಕೈಗಾರಿಕಾ ವಿನಾಶಗಳಿಗೆ ತುತ್ತಾದವರಿಗೆ, ರಕ್ಷಣಾ ಗೃಹದಲ್ಲಿರುವ ಮಹಿಳೆ ಮತ್ತು ಮಕ್ಕಳಿಗೆ, ಮಾನಸಿಕ ರೋಗಿಗಳಿಗೆ, ಮನುಷ್ಯನ ದಬ್ಬಾಳಿಕೆಗೆ ಗುರಿಯಾದ ವ್ಯಕ್ತಿಗಳಿಗೆ ಅಲ್ಲದೇ ವಾರ್ಷಿಕ ಆದಾಯ ರೂ. 18,000ಕ್ಕೆ ಮೀರಿಲ್ಲದ ಎಲ್ಲಾ ವರ್ಗದ ವ್ಯಕ್ತಿಗಳಿಗೆ ಕಾನೂನಿನ ಸೇವೆ ನೆರವು ಉಚಿತವಾಗಿ ದೊರೆಯುವುದು.

ಯಾವುದೇ ವರಮಾನದ ಪರಿಮಿತಿ ಇಲ್ಲದೆ ಉಚಿತ ಕಾನೂನು ಸಲಹೆಯು ಎಲ್ಲಾ ವರ್ಗದವರಿಗೂ ದೊರೆಯುತ್ತದೆ.

ನೀವು ಉಚಿತ ಕಾನೂನು ಸೇವೆ / ನೆರವು ಮತ್ತು ಸಲಹೆ ಪಡೆಯಲು ನಿಮ್ಮ ಸಮೀಪದ ತಾಲ್ಲೂಕಿನ ನ್ಯಾಯಾಲಯದ ಆವರಣದಲ್ಲಿರುವ ತಾಲ್ಲೂಕು ಕಾನೂನು ಸೇವೆಗಳ ಸಮಿತಿಯನ್ನು ಅಥವಾ ಜಿಲ್ಲಾ ನ್ಯಾಯಾಲಯದ ಆವರಣದಲ್ಲಿರುವ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರವನ್ನು ಅಥವಾ ಬೆಂಗಳೂರಿನ ಅರಮನೆ ರಸ್ತೆಯಲ್ಲಿರುವ ತಾಂತ್ರಿಕ ಶಿಕ್ಷಣ ಕಟ್ಟಡದ 2ನೇ ಕೊಠಡಿಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವನ್ನು ಸಂಪರ್ಕಿಸಬಹುದು.

ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವು ದಿನಾಂಕ 20-4-1997ರಿಂದ ಅಸ್ತಿತ್ವಕ್ಕೆ ಬಂದಿದೆ. 2001ನೇ ವರ್ಷದ ಅಕ್ಟೋಬರ್ ಮಾಹೆಯ ಅಂತ್ಯದವರೆಗೆ 6,042 ಜನರಿಗೆ ಉಚಿತ ಕಾನೂನು ನೆರವನ್ನು ಹಾಗೂ 8,770 ಜನರಿಗೆ ಉಚಿತ ಕಾನೂನು ಸಲಹೆಯನ್ನು ನೀಡಲಾಗಿದೆ. ಅಲ್ಲದೆ 2,229 ಜನತಾ ನ್ಯಾಯಾಲಯ ಶಿಬಿರಗಳನ್ನು ಏರ್ಪಡಿಸಿ ಒಟ್ಟಾರೆ 1,65,455 ಪ್ರಕರಣಗಳನ್ನು ರಾಜೀ ಸಂಧಾನದ ಮೂಲಕ ತೀರ್ಮಾನಗೊಳಿಸಿದೆ. ಹೀಗೆ ತೀರ್ಮಾನಿಸಿರುವ ಪ್ರಕರಣಗಳಲ್ಲಿ 27,597 ಮೋಟಾರು ವಾಹನ ಅಪಘಾತ ಪ್ರಕರಣಗಳಾಗಿದ್ದು, ಆ ಸಂಬಂಧ 129 ಕೋಟಿ ರೂಪಾಯಿಗಳಿಗಿಂತ ಹೆಚ್ಚು ಪರಿಹಾರ ಧನವನ್ನು ನೀಡಲಾಗಿದೆ. ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ 799 ಕಾನೂನು ನೆರವು ಶಿಬಿರಗಳನ್ನು ಏರ್ಪಡಿಸಿದ್ದು, ಆ ಮೂಲಕ ಸುಮಾರು 2.5 ಲಕ್ಷಕ್ಕೂ ಹೆಚ್ಚು ಜನರು ಪ್ರಯೋಜನ ಪಡೆದಿರುತ್ತಾರೆ.

ಅರಳಿ ನಾಗರಾಜ
ಸದಸ್ಯ ಕಾರ್ಯದರ್ಶಿ

# ಭಾರತದ ಕೃಷಿ ಅಭಿವೃದ್ಧಿಯ ಆಯಾಮಗಳು ಒಂದು ಚಿಂತನೆ

■ ಡಾ|| ಎಸ್. ಬಿಸಲಯ್ಯ

ಆಲ್‌ಫ್ರೆಡ್ ಬರ್ನಾರ್ಡ್ ನೊಬೆಲ್ ೧೮೯೫ರ ನವೆಂಬರ್ ೨೭ರಂದು ಬರೆದ ಉಯಿಲಿನಲ್ಲಿ ನೊಬೆಲ್ ಬಹುಮಾನಕ್ಕೆ ಅರ್ಹರಾಗುವವರ ಸಾಧನೆ ಏನಿರಬೇಕು ಎಂಬುದರ ಬಗ್ಗೆ ಉಲ್ಲೇಖವಿದೆ. ಈ ಉಲ್ಲೇಖದ ರೀತಿ, ನೊಬೆಲ್ ಬಹುಮಾನಕ್ಕೆ ಅರ್ಹನಾಗುವ ವ್ಯಕ್ತಿ ಮಾನವ ಸಮಾಜಕ್ಕೆ ಅತ್ಯಧಿಕ ಒಳಿತಾಗುವ ಕೆಲಸ ಮಾಡಿರಬೇಕು ಎಂಬುದು ಒಂದು ನಿಯಮ. ಹಸಿರು ಕ್ರಾಂತಿಯ ಹರಿಕಾರ ಮತ್ತು ಮುಖ್ಯ ರುವಾರಿಯೆಂದೇ ಹೆಸರುಗಳಿಸಿರುವ ಡಾ|| ಬೋರ್‌ಲಾಗ್ ಅವರನ್ನು ೧೯೭೦ರಲ್ಲಿ ನೊಬೆಲ್ ಬಹುಮಾನಕ್ಕೆ ಆಯ್ಕೆ



ಮಾಡಿದಾಗ, ಕೃಷಿಯ ಮತ್ತು ಆಹಾರ ಉತ್ಪಾದನೆಯ ಪ್ರಾಮುಖ್ಯತೆಯನ್ನು ಪರಿಗಣಿಸಿದಂತಾಯಿತು. ಇವುಗಳ ಅಭಿವೃದ್ಧಿ ಅತಿಮಹತ್ವದ ಮತ್ತು ಜೀವನಾಧಾರಕ್ಕೆ ಬೇಕಾದುದೆಂದು ಒಪ್ಪಿಕೊಂಡು, ಅದಕ್ಕೆ ಮುಖ್ಯ ಕಾರಣರಾದ ಡಾ|| ಬೋರ್‌ಲಾಗ್ ಅವರಿಗೆ ನೊಬೆಲ್ ಪ್ರಶಸ್ತಿಯನ್ನು ಕೊಡಲಾಯಿತು. ನಮ್ಮ ದೇಶದಲ್ಲಿ ಕೃಷಿ ಪ್ರಾಮುಖ್ಯತೆಯನ್ನು ಸಾರುವಾಗ ಕೃಷಿಕರನ್ನು ಅನ್ನದಾತರೆಂದು ಮತ್ತು ದೇಶದ ಬೆನ್ನೆಲುಬೆಂದು ಕರೆಯುತ್ತೇವೆ. ಒಂದು ರೀತಿಯಲ್ಲಿ ನಾವೆಲ್ಲ ಕೃಷಿಕರ ಮತ್ತು ಕೃಷಿಕರು ಬೆಳೆಯುವ ಬೆಳೆಗಳ ಅತಿಥಿಗಳು.

ಉದ್ಯೋಗ, ಆದಾಯ ಮತ್ತು ಈ ದೇಶದ ಮೂರನೆ ಎರಡು ಭಾಗ ಜನರಿಗೆ, ಕೃಷಿ ಜೀವನಾಧಾರ ಎಂಬುದರ ಬಗ್ಗೆ ನಮಗೆಲ್ಲ ಅರಿವಿದೆ. ಇದೆಲ್ಲದರ ಜೊತೆಗೆ, ವ್ಯವಸಾಯದ ಪ್ರಾಮುಖ್ಯತೆಯನ್ನು ಇನ್ನೂ ಕೆಲವು ಕೋನಗಳಿಂದ ನೋಡಬಹುದು. ಮೊದಲನೆಯದಾಗಿ, ೧೯೪೩ರಲ್ಲಿ ಬಂಗಾಲದ ಬರಗಾಲ ಮಾನವನ ಇತಿಹಾಸದಲ್ಲಿ ಒಂದು ದುಃಖದ ಸಂಗತಿ. ಲೆಕ್ಕವಿಲ್ಲದಷ್ಟು ಜನರ ಸಾವು ಮತ್ತು ಕಲ್ಕತ್ತಾ ನಗರದಲ್ಲಿನ ಹೆಣಗಳ ರಾಶಿ ನಮ್ಮೆಲ್ಲರಲ್ಲಿ ಪಾಪದ ಪ್ರಜ್ಞೆಯನ್ನು ಮೂಡಿಸುವುದರ ಜೊತೆಗೆ ಈ ದೇಶದಲ್ಲಿ ಆಹಾರ ಉತ್ಪಾದನೆಯ ಪ್ರಾಮುಖ್ಯತೆಯನ್ನು ಮತ್ತು ಅದರ ಹಂಚಿಕೆಯನ್ನು ಮನದಟ್ಟು ಮಾಡಿಕೊಟ್ಟಿತ್ತು. ಕಳೆದ ಶತಮಾನದ ಅರವತ್ತರ ದಶಕದ ಮೊದಲನೆಯ ಭಾಗದಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳು ಆಹಾರ ಉತ್ಪಾದನೆಯಲ್ಲಿ ಭಾರತದ ಸಾಮರ್ಥ್ಯವನ್ನು ಶಂಕಿಸತೊಡಗಿದವು. ಭಾರತ ಎಂದಾದರೂ ತನ್ನ ಜನರಿಗೆ ಬೇಕಾಗುವ ಆಹಾರ ವಸ್ತುಗಳನ್ನು ಬೆಳೆಯುವ ಸಾಮರ್ಥ್ಯವನ್ನು ಪಡೆಯುತ್ತದೆಯೇ ಎಂಬುದು ಚರ್ಚೆಗೆ ಗ್ರಾಸವಾಯಿತು. ಭಾರತದ ಸ್ಥಾನಮಾನ ಅಂತರರಾಷ್ಟ್ರೀಯ ಮಟ್ಟದಲ್ಲಿ ಹರಾಜಾಯಿತು. ಭಾರತ ಭಿಕ್ಷಾಪಾತ್ರೆ ಹಿಡಿದು ಮತ್ತೊಮ್ಮೆ ದೇಶಗಳನ್ನು ಸುತ್ತಬಾರದು ಎಂಬ ಕಾರಣಕ್ಕೆ ಕೃಷಿಯ ಅಭಿವೃದ್ಧಿ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಎರಡನೆಯದಾಗಿ, ಕೃಷಿಯ ಅಭಿವೃದ್ಧಿಯಾಗದೆ ಭಾರತದಲ್ಲಿ ಬಡತನ ನಿವಾರಣೆಯಾಗಲು ಸಾಧ್ಯವಿಲ್ಲ ಎಂಬ ವಾದಕ್ಕೆ ಸಾಕಷ್ಟು ಪುರಾವೆಗಳಿವೆ. ಭಾರತದಲ್ಲಿ ಸುಮಾರು ೩೫ ಕೋಟಿಯಷ್ಟು ಜನ ಬಡತನದ ರೇಖೆಗಿಂತ ಕೆಳಗಡೆ ಇದ್ದಾರೆ ಎಂಬುದಾಗಿ ಅಂದಾಜು ಮಾಡಲಾಗಿದೆ. ಅವರಲ್ಲಿ ಶೇ. ೮೦ರಷ್ಟು ಹಳ್ಳಿಗಾಡಿನಲ್ಲಿದ್ದಾರೆ. ಕೃಷಿಯ ಅಭಿವೃದ್ಧಿಯಿಂದ ಕಡಿಮೆ ಬೆಲೆಗೆ ಹಳ್ಳಿಗಳ ಮತ್ತು ಪಟ್ಟಣಗಳ ಬಡವರಿಗೆ ಆಹಾರ ಸಿಕ್ಕುವಂತಾಗುತ್ತದೆ. ಆದ್ದರಿಂದ ಕೃಷಿಯ ಅಭಿವೃದ್ಧಿ ಬಡತನ ನಿರ್ಮೂಲನೆಗೆ ಬೇಕಾಗುವ ಲಕ್ಷಣಗಳನ್ನು ಹೊಂದಿದೆ. ಪಟ್ಟಣಗಳ ಅಭಿವೃದ್ಧಿಯಿಂದ ಬಡತನ ನಿವಾರಣೆಯಾಗುತ್ತದೆ ಎಂಬುದರ ಬಗ್ಗೆ ಅಷ್ಟೊಂದು ನಂಬಿಕೆ ಇಲ್ಲ. ಮೂರನೆಯದಾಗಿ, ವಾಷಿಂಗ್‌ಟನ್‌ನ ಅಂತರರಾಷ್ಟ್ರೀಯ ಆಹಾರ ಸಂಶೋಧನೆಯ ಅಂದಾಜಿನ ಪ್ರಕಾರ, ಕೃಷಿಯ ಅಭಿವೃದ್ಧಿ ಈಗಿನ ಮಟ್ಟಕ್ಕಿಂತ ಜಾಸ್ತಿಯಾಗದಿದ್ದರೆ, ೨೦೨೦ರ ವೇಳೆಗೆ ಭಾರತ ಸುಮಾರು ೪೦ ದಶಲಕ್ಷ ಟನ್ ಆಹಾರ ಧಾನ್ಯದ ಕೊರತೆಯನ್ನು ಎದುರಿಸಬೇಕಾಗುತ್ತದೆ. ಇತ್ತೀಚಿನ ಲೆಸ್ಟರ್ ಬ್ರೌನ್ ಅವರ *''ಭರ್ತಿಯಾದ ಮನೆ''(Full House)* ಎಂಬ ಪುಸ್ತಕದಲ್ಲಿ ಕೂಡ ಈ ರೀತಿಯ ಚಿಂತನೆಯನ್ನು ಕಾಣಬಹುದು.

ಈ ಎಲ್ಲಾ ಕಾರಣಗಳಿಗಾಗಿ ಭಾರತದಲ್ಲಿ ಕೃಷಿಯ ಪ್ರಾಧಾನ್ಯತೆಯನ್ನು ಮತ್ತು ಅದರ ಅಭಿವೃದ್ಧಿಯ ಅಗತ್ಯವನ್ನು ಕಾಣಬಹುದು. ಈ ಅಭಿವೃದ್ಧಿಯ ಪ್ರಮುಖ ಆಯಾಮಗಳನ್ನು ಮತ್ತು ಅವುಗಳ ಗುಣಲಕ್ಷಣಗಳನ್ನು ಗುರುತಿಸಿ, ನಾವು ಕೃಷಿ ಅಭಿವೃದ್ಧಿಯಲ್ಲಿ ಸಾಗಿ ಬಂದಿರುವ ಹಾದಿಯನ್ನು ಅರ್ಥಮಾಡಿಕೊಂಡು, ಮುಂದಿನ ಅಭಿವೃದ್ಧಿಯ ಹಾದಿಯನ್ನು ಗುರುತಿಸುವುದು ಬಹುಮುಖ್ಯ. ಅದೇ ಈ ಲೇಖನದ ಮುಖ್ಯ ಉದ್ದೇಶ. ಈ ದಿಕ್ಕಿನಲ್ಲಿ ನಾವು ನಾಲ್ಕು ಮುಖ್ಯವಾದ ಆಯಾಮಗಳನ್ನು ಗುರುತಿಸಬಹುದು.

ಮೊದಲನೆಯ ಆಯಾಮದಲ್ಲಿ, ಕೃಷಿ ರೈತ ಸಮುದಾಯಕ್ಕೆ ಒಂದು ಸಂಸ್ಕೃತಿ ಮತ್ತು ಜೀವನ ವಿಧಾನ. ಹಿಂದೆ ಕೃಷಿ ಇನ್ನೂ ಒಂದು ವ್ಯಾಪಾರವಾಗಿ ಪೂರ್ಣ ಪರಿವರ್ತನೆಯಾಗಿರಲಿಲ್ಲ. ಕೃಷಿಗೆ ಬೇಕಾಗುವ ಬಿತ್ತನೆ ಬೀಜ ಹಿಂದಿನ ವರ್ಷದ ಬೆಳೆಯಿಂದ ಬರುತ್ತಿತ್ತು. ಗಿಡ ಮತ್ತು ಪ್ರಾಣಿಗಳ ತ್ಯಾಜ್ಯವಸ್ತುಗಳಿಂದ ಗೊಬ್ಬರ ಸಿಗುತ್ತಿತ್ತು. ನೀರಾವರಿಯ ಸೌಕರ್ಯವಿರುವ ಕಡೆ, ಅದರ ನಿರ್ವಹಣೆ ಹಳ್ಳಿಯ ಸಮುದಾಯಕ್ಕೆ ಸೇರಿದ್ದು, ಜಮೀನು ಇಲ್ಲದವರೂ ನೀರಾವರಿ ನಿರ್ವಹಣೆಯಲ್ಲಿ ಭಾಗವಹಿಸುತ್ತಿದ್ದರು. ಅವರ ಜೀವನ ಸಾಗಲು ಕೃಷಿಯ ಉತ್ಪಾದನೆ ಮುಖ್ಯ ಸಾಧಕ. ಮಿಶ್ರ ಬೇಸಾಯ ಮತ್ತು ಮಿಶ್ರಬೆಳೆ ಪದ್ಧತಿ ಸರ್ವೇಸಾಮಾನ್ಯ. ಚಿಕ್ಕ ರೈತರಾದರೂ ಜಮೀನಿನಲ್ಲಿ ನಾಲ್ಕಾರು ಬೆಳೆಗಳನ್ನು ಬೆಳೆಯುತ್ತಿದ್ದ ಕಾಲ. ಈ ಆಯಾಮದಲ್ಲಿ, ನಮ್ಮ ಹಳ್ಳಿಗಳು ಚಿಕ್ಕ ಗಣರಾಜ್ಯಗಳಾಗಿ ಕೆಲಸ ನಿರ್ವಹಿಸುತ್ತಿದ್ದುವು. ಇದೊಂದು ರಾಜಕೀಯ, ಸಾಮಾಜಿಕ, ಆರ್ಥಿಕ ವ್ಯವಸ್ಥೆಯಾಗಿತ್ತು.

ಎರಡನೆ ಆಯಾಮದಲ್ಲಿ, ಬಂಗಾಲದ ಬರಗಾಲದ ಬವಣೆಯಿಂದ ನೊಂದ ದೇಶ ಕೃಷಿ ಉತ್ಪಾದನೆಯನ್ನು ಮತ್ತು ಉತ್ಪಾದಕತೆಯನ್ನು ಜಾಸ್ತಿ ಮಾಡಲೇಬೇಕು ಎಂಬ ನಿರ್ಧಾರಕ್ಕೆ ಬಂದು ಆ ದಿಕ್ಕಿನಲ್ಲಿ ಕೆಲವು ಕಾರ್ಯಕ್ರಮಗಳ ಮೂಲಕ ಕೃಷಿಯ ಆಧುನೀಕರಣಕ್ಕೆ ನಾಂದಿಹಾಡಿತು. ಇದು ಸ್ವಾತಂತ್ರ್ಯ ಚಳುವಳಿಯ ಕೊನೆಯ ಒಂದೆರಡು ವರ್ಷಗಳಿಂದ ಪ್ರಾರಂಭವಾಗಿ ಐವತ್ತರ ದಶಕದ ಕೊನೆಯವರೆವಿಗೂ ಈ ಬದಲಾವಣೆಗಳ ಗಾಳಿ ಬೀಸಲಾರಂಭಿಸಿತು. ಹೆಚ್ಚು ಆಹಾರ ಬೆಳೆಯಿರಿ ಎಂಬ ಆಂದೋಲನ ಪ್ರಾರಂಭವಾಯಿತು. ಹಳ್ಳಿಗಳಲ್ಲಿ ಗ್ರಾಮಸೇವಕರು ಕಾಣಿಸಿಕೊಂಡು, ಕೃಷಿಯ ಆಧುನೀಕರಣಕ್ಕೆ

ಮುಖ್ಯ ಸಂಘಟಕರಾದರು. ಹೊಸ ಬೆಳೆ ತಳಿಗಳು, ಕೊಂಚಮಟ್ಟಿಗೆ ರಾಸಾಯನಿಕ ಗೊಬ್ಬರ, ಕ್ರಿಮಿ-ಕೀಟನಾಶಕ ಔಷಧಿಗಳು ಮತ್ತು ಆಧುನಿಕ ವ್ಯವಸಾಯದ ಇನ್ನಿತರ ಆವಿಷ್ಕಾರಗಳನ್ನು ಉಪಯೋಗಿಸಲು ರೈತರನ್ನು ಪ್ರೋತ್ಸಾಹಿಸಲಾಯಿತು. ವ್ಯವಸಾಯದ ಜೊತೆಗೆ ಇನ್ನಿತರ ಗ್ರಾಮೀಣ ಅಭಿವೃದ್ಧಿಗೆ ಸಂಬಂಧಪಟ್ಟ ಕಾರ್ಯಕ್ರಮಗಳ ಅನುಷ್ಠಾನವೂ ಈ ಆಯಾಮದಲ್ಲಿ ಪ್ರಾರಂಭವಾಗಿ, ಸಮುದಾಯ ಬೆಳವಣಿಗೆಗೆ ಒತ್ತುಕೊಡಲಾಯಿತು.

ಮೂರನೆಯ ಆಯಾಮದಲ್ಲಿ ಭಾರತದ ಕೃಷಿಯ ಕ್ರಾಂತಿಗೆ ಚಾಲನೆ ಸಿಕ್ಕಿತು. ಅರವತ್ತರ ದಶಕದ ಮೊದಲನೆಯ ಭಾಗದಲ್ಲಿ ಅಮೆರಿಕದ ವುಡ್ಸ್ ಎಂಬುವರ ಕ್ಷಾಮ - *೧೯೭೫* ಎಂಬ ಪುಸ್ತಕ ಪ್ರಕಟವಾಯಿತು. ೧೯೭೫ರಲ್ಲಿ ಭಾರತದಲ್ಲಿ ಕ್ಷಾಮದಿಂದ ಲೆಕ್ಕವಿಲ್ಲದಷ್ಟು ಜನ ಸಾಯುತ್ತಾರೆ ಎಂಬ ಭವಿಷ್ಯವನ್ನು ಆ ಪುಸ್ತಕ ನುಡಿಯಿತು. ಕಾರಣ, ಭಾರತ ತನ್ನ ಜನಸಂಖ್ಯೆಗೆ ಅನುಗುಣವಾಗಿ ಕೃಷಿ ಉತ್ಪಾದನೆಯನ್ನು ಮಾಡುವ ಸಾಮರ್ಥ್ಯ ಪಡೆದಿರುವುದಿಲ್ಲ. ಬಡದೇಶಗಳಲ್ಲಿ ಆಹಾರ ಕ್ಷಾಮದಿಂದ ಜನರು ಸತ್ತರೆ ಉಳಿದವರು ನೆಮ್ಮದಿಯಿಂದ ಇರಬಹುದು. ಈ ಪ್ರಪಂಚಕ್ಕೆ ಇಷ್ಟೊಂದು ಜನಸಂಖ್ಯೆಯನ್ನು ಹೊರುವ ಶಕ್ತಿಯಿಲ್ಲ. - ಇಂತಹ ವಿಚಾರಧಾರೆ ಪ್ರಚಲಿತವಾದಾಗ ಭಾರತಕ್ಕೆ ಇದೊಂದು ಸವಾಲಾಯಿತು. ಈ ಸವಾಲಿನಿಂದ ಭಾರತ ತನಗೆ ಬೇಕಾಗುವ ಕೃಷಿ ಉತ್ಪನ್ನಗಳನ್ನು ಬೆಳೆಯಲು ಏನು ಮಾಡಬೇಕು ಮತ್ತು ಯಾವ ರೀತಿ ಮುಂದುವರಿಯಬೇಕು ಎಂಬುದರ ಬಗ್ಗೆ ಚಿಂತಿಸಬೇಕಾಯಿತು. ಆ ಚಿಂತನೆಯ ಫಲದಿಂದ ಒಂದು ನಿರ್ಧಾರಕ್ಕೆ ಬರಲಾಯಿತು. ಯಾವ ದೇಶದಲ್ಲಿ ಕೃಷಿ ಅಭಿವೃದ್ಧಿಯಾಗಿದೆಯೋ, ಅದರ ಸಾಧನೆಗೆ ಮೂಲಕಾರಣ ಕೃಷಿವಿಜ್ಞಾನ ಮತ್ತು ತಾಂತ್ರಿಕತೆಯ ಮುನ್ನಡೆ ಎಂಬುದನ್ನು ಗಮನಿಸಿ ನಮ್ಮ ದೇಶದಲ್ಲಿ ಕೃಷಿ ವಿಜ್ಞಾನ ಮತ್ತು ತಾಂತ್ರಿಕತೆಗೆ ಒತ್ತುಕೊಡಬೇಕೆಂಬ ನಿರ್ಧಾರಕ್ಕೆ ಬರಲಾಯಿತು. ತದನಂತರ, ಕೃಷಿ ವಿಶ್ವವಿದ್ಯಾನಿಲಯಗಳ ಸ್ಥಾಪನೆಯಾಯಿತು. ಕೃಷಿಶಾಸ್ತ್ರ ಬೋಧನೆಯಲ್ಲಿ, ಸಂಶೋಧನೆಯಲ್ಲಿ ಮತ್ತು ವಿಸ್ತರಣಾ ಕಾರ್ಯಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ತರಲಾಯಿತು. ಈ ದಿಕ್ಕಿನಲ್ಲಾದ ಬದಲಾವಣೆಗಳು ಹಸಿರು ಕ್ರಾಂತಿಗೆ ಗಟ್ಟಿನೆಲೆಯನ್ನು ಸಿದ್ಧಪಡಿಸಿದವು.

ಈ ಆಯಾಮದಲ್ಲಿ, ಕೃಷಿಯಲ್ಲಿ ಹಿಂದೆಂದೂ ಆಗದಂತಹ ಕ್ರಾಂತಿಕಾರಕ ಬದಲಾವಣೆಗಳಾದವು. ಹೊಸ ಬೆಳೆಗಳ ಮತ್ತು ತಳಿಗಳ ಆಗಮನವಾಯಿತು. ಮಿಶ್ರ ಬೆಳೆ ಮತ್ತು ಮಿಶ್ರ ಬೇಸಾಯಕ್ಕಿದ್ದ ಒತ್ತು ಕಡಿಮೆಯಾಯಿತು. ಬಿತ್ತನೆ ಬೀಜಕ್ಕೆ ಸರ್ಕಾರದ ಇಲಾಖೆಗಳ ಮತ್ತು ಖಾಸಗಿ ಕಂಪನಿಗಳ ಮೇಲೆ ರೈತ ಅವಲಂಬಿತನಾದ. ರಾಸಾಯನಿಕ ಗೊಬ್ಬರದ ಬಳಕೆ ಮತ್ತು ಕ್ರಿಮಿ-ಕೀಟ ನಾಶಕ್ಕೆ ರಾಸಾಯನಿಕ ವಸ್ತುಗಳ ಬಳಕೆ ಜಾಸ್ತಿಯಾಯಿತು. ಸಾವಯವ ವ್ಯವಸಾಯಕ್ಕೆ ಆದ್ಯತೆ ಕಡಿಮೆಯಾಯಿತು. ನೀರಾವರಿಯ ಸೌಲಭ್ಯ ತ್ವರಿತಗತಿಯಲ್ಲಿ ಬೆಳವಣಿಗೆಯಾಗಲು ಪ್ರಾರಂಭವಾಯಿತು. ನೀರಾವರಿಯ ನಿರ್ವಹಣೆ ಸರ್ಕಾರದ ಕೆಲಸವಾಯಿತು. ಬ್ಯಾಂಕುಗಳು ಮತ್ತು ಇತರ ಹಣಕಾಸು ಸಂಸ್ಥೆಗಳು ರೈತರಿಗೆ ಸಾಲ ಕೊಡುವ ಕಾರ್ಯ ಚುರುಕಾಯಿತು. ಈ ಆಯಾಮದಲ್ಲಿ, ರೈತರಿಗೆ ವ್ಯವಸಾಯ ಒಂದು ಸಂಸ್ಕೃತಿಯಾಗಿ ಮತ್ತು ಜೀವನ ವಿಧಾನವಾಗಿ ಮಾತ್ರ ಉಳಿಯಲಿಲ್ಲ. ವ್ಯವಸಾಯದ ವ್ಯಾಪಾರೀಕರಣವಾಯಿತು. ಕೃಷಿಯ ವ್ಯಾಪಾರೀಕರಣಕ್ಕೆ ಬೇಕಾಗುವ ವ್ಯವಸ್ಥೆ ತಲೆಯೆತ್ತಿತ್ತು.

ಮತ್ತೆ ಈ ಆಯಾಮದಲ್ಲಿ ಕೃಷಿಯ ಅಭಿವೃದ್ಧಿಯಲ್ಲಿ ಸಾಧನೆ ಮತ್ತು ಸಮಸ್ಯೆಗಳ ವಿಶ್ಲೇಷಣೆ ಬಹುಮುಖ್ಯವೆಂದು ಕಾಣುತ್ತದೆ. ಭಾರತದಲ್ಲಿ ೧೯೫೦ರ ಆದಿಭಾಗದಲ್ಲಿ ಸುಮಾರು ೫೦ ದಶಲಕ್ಷ ಟನ್ ಆಹಾರ ಧಾನ್ಯ ಬೆಳೆಯುತ್ತಿತ್ತು. ಅದು ಸುಮಾರು ೨೦೦ ದಶಲಕ್ಷ ಟನ್ನಿನಷ್ಟಾಯಿತು. ಕಬ್ಬಿನ ಉತ್ಪನ್ನ ಮತ್ತು ಎಣ್ಣೆ ಬೀಜಗಳ ಉತ್ಪನ್ನ ಸುಮಾರು ೫ ಪಟ್ಟು ಹೆಚ್ಚಾಯಿತು. ಹತ್ತಿಯ ಉತ್ಪನ್ನ ಸುಮಾರು ೪ ಪಟ್ಟಾಯಿತು. ಈ ಹೆಚ್ಚುವರಿ ಉತ್ಪನ್ನಕ್ಕೆ ಎಕರೆವಾರು ಇಳುವರಿಯಲ್ಲಿ ಆದ ಹೆಚ್ಚಳವೇ ಮುಖ್ಯಕಾರಣ. ಈ ಇಳುವರಿ ಹೆಚ್ಚಳಕ್ಕೆ ಭಾರತ ಸಾಧಿಸಿದ ಕೃಷಿ ವಿಜ್ಞಾನ ಮತ್ತು ತಾಂತ್ರಿಕತೆಯ ಅಭಿವೃದ್ಧಿಯೇ ಮುಖ್ಯಕಾರಣ. ಕೃಷಿವಿಜ್ಞಾನಿಗಳು - ರೈತರು - ಸರಕಾರ ಇವರೆಲ್ಲರ ಸಹಭಾಗಿತ್ವದಿಂದ ಭಾರತದ ಕೃಷಿಯ ಇತಿಹಾಸದಲ್ಲೊಂದು ಮೈಲಿಗಲ್ಲು ನಿರ್ಮಾಣವಾಯಿತು.

ಈ ಮೈಲಿಗಲ್ಲು ನಿರ್ಮಾಣವಾದುದನ್ನು ಪುಷ್ಟೀಕರಿಸಲು ಕೆಲವು ಅಂಕಿ ಅಂಶಗಳ ಉಲ್ಲೇಖ ಸಹಾಯವಾಗಬಹುದು. ಒಂದು ಶತಮಾನದ ಭಾರತದ ಕೃಷಿ ಬೆಳವಣಿಗೆಯನ್ನು ಅಧ್ಯಯನ ಮಾಡಿದಾಗ ನಮಗೆ ಕೆಲವು ಮುಖ್ಯ ವಿಚಾರಗಳು ವೇದ್ಯವಾಗುತ್ತವೆ. ಬ್ರಿಟಿಷರ ಕಾಲದಲ್ಲಿ ಕೃಷಿ ಉತ್ಪನ್ನಗಳ ವಾರ್ಷಿಕ ಬೆಳವಣಿಗೆ ಶೇಕಡಾ ಒಂದಕ್ಕಿಂತ ಕಡಿಮೆಯಿತ್ತು. ಅದು ಸ್ವಾತಂತ್ರ್ಯಾನಂತರ ಶೇಕಡಾ ೨.೬೮ರಷ್ಟು ಬೆಳೆಯಿತು. ಸ್ವಾತಂತ್ರ್ಯಾನಂತರದ ಉತ್ಪಾದನಾ ಬೆಳವಣಿಗೆಯಲ್ಲಿ ಶೇಕಡಾ ೭೦ ಭಾಗ ಇಳುವರಿಯ ಬೆಳವಣಿಗೆಯಿಂದ ಬಂದದ್ದು. ಜಮೀನಿನ ಅಭಾವವಿರುವ ದೇಶದಲ್ಲಿ ಇಳುವರಿ-ನಿಯಂತ್ರಿತ ಕೃಷಿ ಬೆಳವಣಿಗೆ ಅತಿಮುಖ್ಯ. ಜನಸಂಖ್ಯೆ ಜಾಸ್ತಿಯಿರುವ ನಮ್ಮಂತಹ ದೇಶದ ಆಹಾರ ಸಮಸ್ಯೆ ಬಗೆಹರಿಸಲು ಇಂತಹ ಇಳುವರಿ-ನಿಯಂತ್ರಿತ ಕೃಷಿ ಬೆಳವಣಿಗೆಯಿಂದ ಮಾತ್ರ ಸಾಧ್ಯ. ತಲಾ ಸರಾಸರಿ ಆಹಾರ ಧಾನ್ಯ ಲಭ್ಯವನ್ನು ಜನಸಂಖ್ಯೆ ಬೆಳವಣಿಗೆಯ ಸನ್ನಿವೇಶದಲ್ಲೂ ತೂಗಿಸಿಕೊಂಡು ಬಂದಿರುವುದು ನಮ್ಮ ದೇಶದ ಹೆಮ್ಮೆಯೇ ಸರಿ. ಭಾರತ ೧೯೬೫ರ ವೇಳೆಯಲ್ಲಿ ತನಗೆ ಬೇಕಾಗುವ ಆಹಾರಧಾನ್ಯಗಳ ಶೇ. ೧೪ರಷ್ಟನ್ನು ಬೇರೆ ದೇಶಗಳಿಂದ ಆಮದು ಮಾಡಿಕೊಳ್ಳಬೇಕಾಗಿತ್ತು. ಆದರೆ ಇಂದು ಬೇರೆ ದೇಶಕ್ಕೆ ಆಹಾರ ಧಾನ್ಯಗಳನ್ನು ರಫ್ತುಮಾಡುವ ಸ್ಥಿತಿಯಲ್ಲಿ ನಾವಿರುವುದು ಒಂದು ಸಾಮಾನ್ಯ ಸಾಧನೆಯಲ್ಲ. ಈ ಸಾಧನೆಯಲ್ಲಿಯೂ, ನಮ್ಮ ದೇಶದ ಆರ್ಥಿಕ ಸ್ಥಿತಿಯ ಒಂದು ಕಪ್ಪು ಚುಕ್ಕಿಯನ್ನು ಮರೆಯುವಂತಿಲ್ಲ. ಈಗಾಗಲೇ ಹೇಳಿದಂತೆ ಸುಮಾರು ೩೫ ಕೋಟಿ ಜನರಿಗೆ ಈ ದೇಶದಲ್ಲಿ ಎರಡು ಹೊತ್ತು ಸಾಕಷ್ಟು ಆಹಾರ ಸಿಗುತ್ತಿಲ್ಲ. ಅವರು ಬಡತನದ ರೇಖೆಯ ಕೆಳಗಿದ್ದಾರೆ. ಅವರ ಹಸಿವು ಮಾರುಕಟ್ಟೆಯಲ್ಲಿ ದಾಖಲಾಗುವುದಿಲ್ಲ. ಇದೊಂದು ದುರಂತ.

ಇಷ್ಟೆಲ್ಲ ಐತಿಹಾಸಿಕ ಅಭಿವೃದ್ಧಿಯನ್ನು ಭಾರತ ಕೃಷಿ ಕ್ಷೇತ್ರದಲ್ಲಿ ಸಾಧಿಸಿದ್ದರೂ, ನಮಗೆ ಸವಾಲಾಗಿ ಮೂರು ಮುಖ್ಯ ಸಮಸ್ಯೆಗಳು ಉದ್ಭವಿಸಿವೆ. ಅವುಗಳನ್ನು ಗುರುತಿಸಿ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ಕಂಡುಹಿಡಿಯುವುದು ಈ ದೇಶದ ಆದ್ಯತೆಗಳಲ್ಲಿ ಮುಖ್ಯವಾಗಬೇಕು. **ಮೊದಲು,** ಹಸಿರು ಕ್ರಾಂತಿಯ ಆಯಾಮದಲ್ಲಿ ಪರಿಸರದ ಅಧೋಗತಿಯ ಚಿನ್ಹೆಗಳು ಕಾಣಿಸುತ್ತವೆ. ರಾಸಾಯನಿಕ ಗೊಬ್ಬರಗಳು ಮತ್ತು ಕ್ರಿಮಿ-ಕೀಟ ನಾಶಕಗಳ ಬಳಕೆಯಿಂದ ಪರಿಸರ ಹಾನಿ ಪ್ರಾರಂಭವಾಗಿದೆ. ನಮ್ಮ ಸಸ್ಯಸಂಪತ್ತು ಮತ್ತು ಬೆಳೆಗಳ ವೈವಿಧ್ಯತೆ ಕ್ಷೀಣಿಸುತ್ತಿವೆ. ನೀರು ಕಲುಷಿತವಾಗುತ್ತಿದೆ. ಕೃಷಿ ಉತ್ಪನ್ನಗಳಲ್ಲಿ ಉಳಿಕೆಯಾದ ರಾಸಾಯನಿಕ ವಸ್ತುಗಳು ಆಹಾರ ಪದಾರ್ಥಗಳನ್ನು ಕಲುಷಿತಗೊಳಿಸುತ್ತಿವೆ. ಈ ದೆಶೆಯಲ್ಲಿ ಸಾವಯವ ಕೃಷಿಯ ಆದ್ಯತೆ ಪ್ರಮುಖವಾಗುತ್ತಿದೆ. **ಎರಡು,** ಕೃಷಿ ಉತ್ಪನ್ನಗಳ ವಾರ್ಷಿಕ ಬೆಳವಣಿಗೆ ಎಂಬತ್ತರ ದಶಕದಲ್ಲಿ ಸುಮಾರು ಶೇ. ೪ರಷ್ಟಿದ್ದರೆ, ತೊಂಬತ್ತರ ದಶಕದಲ್ಲಿ ಅದು ಶೇ. ೨ಕ್ಕಿಂತ ಕಡಿಮೆಯಾಗಿದೆ. **ಮೂರು,** ಕೃಷಿ ಬೆಳವಣಿಗೆಯಲ್ಲಿ ಅಸಮಾನತೆ ಮತ್ತು ಅಭಿವೃದ್ಧಿಯ ಅಂತರ ಮತ್ತೊಂದು ಸಮಸ್ಯೆಯಾಗಿದೆ. ಪಂಜಾಬ್‌ನಲ್ಲಿ ಆದಂತಹ ಕೃಷಿ ಬೆಳವಣಿಗೆಯನ್ನು ಬಿಹಾರ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಕಾಣಲಾಗುತ್ತಿಲ್ಲ. ನೀರಾವರಿ ಸೌಲಭ್ಯ ಇರುವ ಕ್ಷೇತ್ರಗಳಲ್ಲಿ ಆಗಿರುವ ಅಭಿವೃದ್ಧಿಯನ್ನು ಮಳೆ ಆಧಾರಿತ ಕೃಷಿ ಕ್ಷೇತ್ರಗಳಲ್ಲಿ ಕಾಣುವಂತಿಲ್ಲ. ಮತ್ತೆ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಆಗಿರುವ ಅಭಿವೃದ್ಧಿಯ ಫಲ ಸಾಕಷ್ಟು ಸಿಕ್ಕುತ್ತಿಲ್ಲ ಎಂಬ ಮತ್ತೊಂದು ಕೂಗಿದೆ. ಹಳ್ಳಿ-ಪಟ್ಟಣಗಳ ಅಭಿವೃದ್ಧಿಯ ಕಂದರ ಜಾಸ್ತಿಯಾಗುತ್ತಿದೆ. ಆದ್ದರಿಂದ ಅಭಿವೃದ್ಧಿ ಅಂತರದ ಸಮಸ್ಯೆಯನ್ನು ಬಗೆಹರಿಸಲು ನಾವು ಕಾರ್ಯೋನ್ಮುಖರಾಗಬೇಕಾಗಿದೆ.

ನಾಲ್ಕನೆಯ ಆಯಾಮ ತೊಂಬತ್ತರ ದಶಕದ ಆದಿಯಿಂದ ಪ್ರಾರಂಭವಾಯಿತೆಂದು ಗುರುತಿಸಬಹುದು. ಭಾರತದ ಆರ್ಥಿಕ ನೀತಿಯಲ್ಲಿ ಜುಲೈ ೧೯೯೧ರಲ್ಲಿ ಒಂದು ಕ್ರಾಂತಿಕಾರಕ ಬದಲಾವಣೆಯಾಯಿತು. ಅದನ್ನೇ ಆರ್ಥಿಕ ಸುಧಾರಣೆಯ ಆಯಾಮವೆನ್ನುವುದು. ಜಾಗತೀಕರಣ, ಖಾಸಗೀಕರಣ, ಮುಕ್ತ ಮಾರುಕಟ್ಟೆ ಹಾಗೂ ಅಂತರರಾಷ್ಟ್ರೀಯ ಪೈಪೋಟಿ ಇವು ಈ ಆಯಾಮದ ಪ್ರಮುಖ ಲಕ್ಷಣಗಳು. ಇದರಿಂದ ಕೃಷಿ ಮೇಲೆ ಆಗುತ್ತಿರುವ ಪ್ರಭಾವಗಳು ಹತ್ತು ಹಲವು. ಭಾರತದ ರೈತ ಮುಕ್ತ ಮಾರುಕಟ್ಟೆ ಸಿದ್ಧಾಂತದಿಂದ ದೇಶಿಯ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಗಳೆರಡರಲ್ಲೂ ಪೈಪೋಟಿ ಎದುರಿಸಬೇಕಾಗಿದೆ. ಇದೊಂದು ಅಸಮಾನರ ನಡುವಿನ ಪೈಪೋಟಿ. ನಮ್ಮ ರೈತ ಅಮೆರಿಕದ ರೈತನ ಮೇಲೆ ಕೃಷಿ ಉತ್ಪನ್ನಗಳ ಬೆಲೆ ಮತ್ತು ಗುಣಮಟ್ಟದಲ್ಲಿ ಪೈಪೋಟಿಗೆ ನಿಲ್ಲಬೇಕಾಗಿದೆ. ಭಾರತದ ಕೃಷಿ ಇಂದು ಒಂದು ವಿರೋಧಾಭಾಸದ ಸನ್ನಿವೇಶದಲ್ಲಿ ಸಿಲುಕಿದೆ. ಆಹಾರದ ಕೊರತೆಯಿರುವ ೩೫ ಕೋಟಿ ಬಡಜನರ ಹಸಿವು ಒಂದು ಕಡೆ; ಇನ್ನೊಂದು ಕಡೆ ಉಗ್ರಾಣಗಳಲ್ಲಿ ತುಂಬಿ ತುಳುಕುತ್ತಿರುವ ಆಹಾರ ಸಾಮಗ್ರಿಗಳು. ಕೃಷಿ ಬೆಲೆಗಳ ಕುಸಿತ, ಕುಂಠಿತವಾದ ಕೃಷಿ ಬೆಳವಣಿಗೆ ಮತ್ತು ರೈತರು ಕಂಗಾಲಾಗಿ ಆತ್ಮಹತ್ಯೆಯ ಮೊರೆ ಹೋಗುತ್ತಿರುವುದು ಮುಂತಾದ ಹತ್ತು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಇಂತಹ ಸನ್ನಿವೇಶವನ್ನು ಎದುರಿಸಿ ನಿಲ್ಲುವಂತಹ ಶಕ್ತಿಯನ್ನು ನಮ್ಮ ರೈತರಲ್ಲಿ ಬೆಳೆಸಬೇಕು. ಇಲ್ಲದಿದ್ದರೆ ನಮ್ಮ ರೈತರು ಕಂಗಾಲಾಗಿ ಬೀದಿಯ ಪಾಲಾದಾರು ಎಂಬ ಭಯ, ಮತ್ತು ಈ ದೇಶದ ಮುಂದಿನ ಕ್ರಾಂತಿ ಹಳ್ಳಿಗಾಡಿನಲ್ಲಿ ಆಗಬಹುದೆ ಎಂಬ ಸಂಶಯ.

ಇಂತಹ ವಿರೋಧಾಭಾಸದ ಸನ್ನಿವೇಶದಲ್ಲಿ ಸಿಲುಕಿರುವ ಕೃಷಿಯನ್ನು ಮತ್ತು ಕೃಷಿಕರನ್ನು ರಕ್ಷಿಸಲು ಏನು ಮಾಡಬೇಕು ಎಂಬ ದಿಕ್ಕಿನಲ್ಲಿ ಸಾಕಷ್ಟು ಚಿಂತನೆ ಆಗಬೇಕಾಗಿದೆ. ಈಗಾಗಲೇ ಹೇಳಿರುವಂತೆ, ನಮ್ಮ ದೇಶದ ಮೂರನೆ-ಎರಡು ಭಾಗ ಜನಸಂಖ್ಯೆಗೆ, ಅಂದರೆ ಸುಮಾರು ೬೪ ಕೋಟಿ ಜನರಿಗೆ, ಕೃಷಿಯೇ ಜೀವನಾಧಾರ. ಕೃಷಿ ಅಭಿವೃದ್ಧಿ ಇತರ ಕ್ಷೇತ್ರಗಳ ಅಭಿವೃದ್ಧಿಗೆ ಪೂರಕವಾಗುತ್ತದೆ, ಮತ್ತು ಬಡತನದ ನಿರ್ಮೂಲನೆಗೆ ಈ ಕ್ಷೇತ್ರದ ಅಭಿವೃದ್ಧಿ

ಬಹುಮುಖ್ಯ. ಕೃಷಿಯ ಅಭಿವೃದ್ಧಿಯಿಂದ ಮಾತ್ರ ಪಟ್ಟಣ-ಹಳ್ಳಿಗಳಿಗೆ ಇರುವ ಅಭಿವೃದ್ಧಿ ಮತ್ತು ಆದಾಯದ ಅಂತರ ಕಡಿಮೆಯಾಗುತ್ತದೆ. ದೇಶದ ಮತ್ತು ಕುಟುಂಬದ ಆಹಾರ ಭದ್ರತೆ ಕೃಷಿಯ ಅಭಿವೃದ್ಧಿಯಿಂದ ಮಾತ್ರ ಸಾಧ್ಯ. ಕೃಷಿಯ ಅಭಿವೃದ್ಧಿಯಾಗದಿದ್ದರೆ ಇನ್ನೆರಡು ದಶಕಗಳಲ್ಲಿ ಭಾರತಕ್ಕೆ ತನ್ನ ಜನರಿಗೆ ಬೇಕಾಗುವ ಆಹಾರ ಪದಾರ್ಥಗಳನ್ನು ಉತ್ಪತ್ತಿ ಮಾಡುವ ಸಾಮರ್ಥ್ಯ ಇರುವುದಿಲ್ಲ. ಮತ್ತೊಮ್ಮೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಅವಹೇಳನಕ್ಕೆ ಗುರಿಯಾಗಬೇಕಾಗುತ್ತದೆಯೋ ಎಂಬ ಭಯ. ಕೃಷಿಯ ಅಭಿವೃದ್ಧಿಯಾಗಲು ಮತ್ತು ನಮ್ಮ ರೈತ ಸಮುದಾಯ ಪೈಪೋಟಿಯನ್ನು ಎದುರಿಸಿ ನಿಲ್ಲುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ಹಲವಾರು ದಿಕ್ಕಿನಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ.

ಮೊದಲು, ಮುಕ್ತ ಮಾರುಕಟ್ಟೆಯ ಮತ್ತು ಜಾಗತೀಕರಣದ ಸವಾಲುಗಳನ್ನು ಎದುರಿಸಲು, ಈಗಾಗಲೇ ಹೇಳಿದಂತೆ ಕೃಷಿ ಇಳುವರಿ ಜಾಸ್ತಿಯಾಗಬೇಕು. ಪ್ರತಿ ಕ್ವಿಂಟಾಲ್‌ನ ಉತ್ಪಾದನ ವೆಚ್ಚ ಕಡಿಮೆಯಾಗಬೇಕು. ಕೃಷಿ ಉತ್ಪನ್ನಗಳ ಗುಣಮಟ್ಟ ಜಾಸ್ತಿಯಾಗಬೇಕು. ಈ ದಿಕ್ಕಿನಲ್ಲಿ ಪ್ರಗತಿಯಾಗಬೇಕಾದರೆ ಕೃಷಿ ವಿಜ್ಞಾನ ಮತ್ತು ತಾಂತ್ರಿಕತೆಗಳಿಂದ ಬೆಂಬಲ ಸಿಗಬೇಕು. ಕೃಷಿ ಸಂಶೋಧನೆಗೆ ಈ ದೇಶದಲ್ಲಿ ಸಾಕಷ್ಟು ಆದ್ಯತೆಯನ್ನು ಕೊಟ್ಟಿಲ್ಲ. ಈಗ ಕೃಷಿ ಸಂಶೋಧನೆಗೆ ಒಟ್ಟು ಕೃಷಿ ಉತ್ಪಾದನೆಯ ಮೊತ್ತದಲ್ಲಿ ಶೇಕಡಾ ೦.೫ರಷ್ಟನ್ನು ಮಾತ್ರ ಕೊಡಲಾಗುತ್ತಿದೆ. ಈ ಪ್ರಮಾಣ ಶೇಕಡಾ ೧ ರಿಂದ ೨ ರಷ್ಟಾದರೂ ಇರಬೇಕು. ಆದ್ದರಿಂದ ಕೃಷಿ ಸಂಶೋಧನೆಗೆ ಆದ್ಯತೆಯ ಮೇಲೆ ಹಣ ಒದಗಿಸುವುದು ಬಹುಮುಖ್ಯ. ಸಂಶೋಧನೆಯಲ್ಲಿ ಹೊಸ ಆವಿಷ್ಕಾರಗಳನ್ನು (ಉದಾಹರಣೆಗೆ: ಜೈವಿಕ ತಂತ್ರಜ್ಞಾನ) ಬೆನ್ನಟ್ಟಬೇಕು. ಖುಷ್ಕಿ ಜಮೀನಿಗೆ ಮತ್ತು ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ನೇರವಾಗಿ ಅನುಕೂಲವಾಗುವ ಸಂಶೋಧನೆಯಾಗಬೇಕು. ಇದಕ್ಕೆ ಪೂರಕವಾಗಿ ಬೆಂಬಲ ಬೆಲೆ ಮತ್ತು ಮಾರುಕಟ್ಟೆ ಅಭಿವೃದ್ಧಿ ರೈತರ ಸಹಾಯಕ್ಕೆ ಬರಬೇಕು. ಈಗಿರುವ ವ್ಯವಸ್ಥೆಯನ್ನು ಬದಲಾಯಿಸುವುದರ ಬಗ್ಗೆ ಈಗಾಗಲೆ ಚಿಂತನೆ ನಡೆದಿದೆ. **ಎರಡು**, ನಮ್ಮ ದೇಶದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಶೇಕಡಾ ೭೦ಕ್ಕಿಂತಲೂ ಜಾಸ್ತಿಯಿದ್ದಾರೆ. ಇವರು ಮುಕ್ತ ಮಾರುಕಟ್ಟೆಯ ವ್ಯವಸ್ಥೆಯಲ್ಲಿ ಪೈಪೋಟಿ ಮಾಡಿ ಉಳಿಯಬೇಕಾದರೆ, ಮುಖ್ಯವಾಗಿ ಹಳ್ಳಿಮಟ್ಟದಲ್ಲಿ ಈ ರೈತರ ಸಂಘಟನೆಯಾಗಬೇಕು. ಈ ಸಂಘಟನೆ ನೀರಾವರಿ ಸೌಲಭ್ಯಗಳ ಉಪಯೋಗ, ಕೃಷಿ ಪೂರಕಗಳ ಕೊಳ್ಳುವಿಕೆ, ಮತ್ತು ಕೃಷಿ ಉತ್ಪನ್ನಗಳ ಮಾರಾಟ ಮುಂತಾದ ದಿಕ್ಕಿನಲ್ಲಿ ಕೆಲಸ ಮಾಡಲು ಸಹಕಾರಿಯಾಗುತ್ತದೆ. ಈ ರೀತಿ ಆಗಲು ರೈತ ಸಮುದಾಯಗಳನ್ನು ಒಂದು ಅಭಿವೃದ್ಧಿ ಘಟಕವೆಂದು ಸರ್ಕಾರವೂ ಪರಿಗಣಿಸಿ ಆ ದಿಕ್ಕಿನಲ್ಲಿ ಕೆಲಸ ಮಾಡಬೇಕು. **ಮೂರು**, ಹಳ್ಳಿಗಳು ಕೇವಲ ಕಚ್ಚಾ ವಸ್ತುಗಳನ್ನು ಉತ್ಪತ್ತಿ ಮಾಡುವ ಕೇಂದ್ರಗಳು ಎಂಬ ಭಾವನೆ ಹೋಗಿ, ಹಳ್ಳಿಗಳಲ್ಲೇ ಈ ವಸ್ತುಗಳ ಸಂಸ್ಕರಣೆಯಾದ ಪಕ್ಷದಲ್ಲಿ ರೈತ ಬೆಳೆದ ವಸ್ತುಗಳ ಬೆಲೆ ಜಾಸ್ತಿಯಾಗುತ್ತದೆ. ಈ ಸಂಸ್ಕರಣ ಘಟಕಗಳು ಹಳ್ಳಿಗಳ ಸಮುದಾಯದಲ್ಲಿ ಸ್ಥಾಪನೆಯಾದರೆ ಹಳ್ಳಿಯ ಜನರಿಗೆ ಉದ್ಯೋಗದ ಅವಕಾಶವಾಗುತ್ತದೆ. ಈ ದಿಕ್ಕಿನಲ್ಲಿ ಸಾಕಷ್ಟು ಚಿಂತನೆ ಆಗಿದ್ದರೂ ಕಾರ್ಯರೂಪಕ್ಕೆ ತರುವಲ್ಲಿ ನಿಧಾನವಾಗುತ್ತಿದೆ. **ನಾಲ್ಕು**, ರೈತರ ಸಾಮರ್ಥ್ಯವನ್ನು ಹೆಚ್ಚಿಸುವಂತ ಕೆಲಸವಾಗಬೇಕು. ವ್ಯವಸಾಯದ ವ್ಯಾಪಾರೀಕರಣವಾದ ಮೇಲೆ ರೈತ ಅನೇಕ ದಿಕ್ಕಿನಲ್ಲಿ ವಿಷಯಗಳನ್ನು ತಿಳಿದು ನಿರ್ಧಾರ ಮಾಡಬೇಕಾಗುತ್ತದೆ. ತನಗೆ ಇರುವ ಸವಲತ್ತುಗಳನ್ನು ಗಣನೆಗೆ ತಗೆದುಕೊಂಡು, ಯಾವ ಬೆಳೆಗಳನ್ನು ಮತ್ತು ಯಾವ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳಬೇಕು? ತಾಂತ್ರಿಕ ಜ್ಞಾನಗಳ ನಿರ್ವಹಣೆ ಹೇಗೆ? ಯಾವಾಗ ತನ್ನ ಬೆಳೆ ಪದ್ಧತಿಗಳನ್ನು ಬದಲಾಯಿಸಬೇಕು? ತಾನು ಬೆಳೆವ ಯಾವ ಸರಕಿಗೆ ಮಾರುಕಟ್ಟೆಯಲ್ಲಿ ಸಾಕಷ್ಟು ಬೇಡಿಕೆಯಿದೆ? ತಾನು ಉತ್ಪಾದಿಸುವ ಬೆಳೆಗಳಲ್ಲಿ ಯಾವ ಗುಣ ಲಕ್ಷಣಗಳಿದ್ದರೆ ಮಾರುಕಟ್ಟೆಯಲ್ಲಿ ಜಾಸ್ತಿ ಬೇಡಿಕೆ ಇರುತ್ತದೆ? ಯಾವ ವೇಳೆಯಲ್ಲಿ ಮತ್ತು ಎಲ್ಲಿ ತಾನು ಬೆಳೆದ ಸರಕನ್ನು ಮಾರಬೇಕು? ಯಾವಾಗ ಮತ್ತು ಎಲ್ಲಿ ರೈತ ತನಗೆ ಬೇಕಾಗುವ ಕೃಷಿ ಸಾಮಗ್ರಿಗಳನ್ನು ಮಾರುಕಟ್ಟೆಯಲ್ಲಿ ಕೊಳ್ಳಬೇಕು? ತಾನು ಕೊಳ್ಳುವ ಕೃಷಿ ಸಾಮಗ್ರಿಗಳಿಗೆ ಸರಕಾರ ಸಹಾಯ ಧನವನ್ನು ಹಿಂತೆಗೆದುಕೊಂಡರೆ ಏನು ಮಾಡಬೇಕು? ಕೃಷಿ ವ್ಯಾಪಾರದ ಜಾಗತೀಕರಣದಿಂದ ಮತ್ತು ಮುಕ್ತ ಮಾರುಕಟ್ಟೆ ವ್ಯವಸ್ಥೆಯಿಂದ ತನಗಾಗುವ ಅನುಕೂಲ ಮತ್ತು ಅನಾನುಕೂಲಗಳಾವುವು? ಇಷ್ಟೆಲ್ಲಾ ವಿಷಯಗಳ ಬಗ್ಗೆ ನಮ್ಮ ರೈತ ಸಮುದಾಯದಲ್ಲಿ ಸಾಕಷ್ಟು ತಿಳುವಳಿಕೆ ಇಲ್ಲ. ಆದ್ದರಿಂದ ಸರಿಯಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯ ಕೂಡ ಕಡಿಮೆ. ಇಂತಹ ಒಂದು ಸಾಮರ್ಥ್ಯವನ್ನು ನಾವು ರೈತರಲ್ಲಿ ಬೆಳೆಸದಿದ್ದಲ್ಲಿ ರೈತ ಸಂಕಷ್ಟಕ್ಕೆ ಸಿಲುಕುತ್ತಾನೆ ಮತ್ತು ನಮ್ಮೆಲ್ಲರ ಆತಿಥೇಯ ಬೀದಿಪಾಲಾಗುತ್ತಾನೆ. ಆದರಿಂದಾಗುವ ಘೋರ ಸಮಸ್ಯೆಗಳನ್ನು ಊಹಿಸುವುದೂ ಕಷ್ಟ. ಮೊದಲೇ ಹೇಳಿದಂತೆ, ಈ ದೇಶದ ಮುಂದಿನ ಕ್ರಾಂತಿ ಹಳ್ಳಿಗಾಡಿನಿಂದ ಪ್ರಾರಂಭವಾದರೆ ಆಶ್ಚರ್ಯಪಡಬೇಕಾಗಿಲ್ಲ.


ಡಾ|| ಎಸ್. ಬಿಸಲಯ್ಯ

ಅಧ್ಯಕ್ಷರು, ಕರ್ನಾಟಕ ಕೃಷಿ ಬೆಲೆ ಆಯೋಗ, ಶೇಷಾದ್ರಿ ರಸ್ತೆ, ಬೆಂಗಳೂರು - ೫೬೦ ೦೦೧

# ಇದ್ದ ಕಾರಣ

## (ಏಕಾಂಕ)

ಚಿ. ಶ್ರೀನಿವಾಸರಾಜು



(ಸೂರ್ಯೋದಯದ ಸಮಯ. ಮಧ್ಯಮ ವರ್ಗದವರ ಮನೆಯ ಮುಂದೆ ಸಾವಿನ ಬೆಂಕಿ ಹಚ್ಚಿದ್ದಾರೆ. ಒಬ್ಬ ಕೂತು ಬೆಂಕಿ ಕಾಯಿಸುತ್ತಿದ್ದಾನೆ. ಸ್ವಲ್ಪ ಹೊತ್ತು ಬಿಟ್ಟುಕೊಂಡು ಇನ್ನೊಬ್ಬ ಬರುತ್ತಾನೆ)

**ತಿಮ್ಮಣ್ಣ** : ಆಗ್ಲೇ ಹಾಜರ್... ಲೋ ಕೆಂಚ.. ಯಾವಾಗ ಬಂದೋ ?... ಸತ್ತೋರ್ ಮನೆ ಮುಂದೆ ಬೆಂಕಿ ಕಾಯಿಸೋಕೆ, ....ತಿಥಿ ಊಟಕ್ಕೆ.... ಸದಾ ಹಾಜರ್.

**ಕೆಂಚ** : (ಜೋರಾಗಿ ನಗುತ್ತಾ) ರಂಗಪ್ಪನೋರು ಹೋಗಿಬಿಟ್ರು... ರಂಗಪ್ಪನೋರು ಹೋಗಿಬಿಟ್ರು (ಎಂದು ಬೆಂಕಿ ಸುತ್ತಾ ಕುಣಿಯುತ್ತಾನೆ)... ಫ್ಯಾಕ್ಟರಿ ಬಸ್ ಹೋದಾಗಲೇ ಬಂದೆ... ಇನ್ನೂ ಜನಾ ಬರ್ಬೇಕು... ಮಸಾಣಕ್ಕೆ ಹೋಗ್ಬೇಕು....

**ತಿಮ್ಮಣ್ಣ** : ಇವನ್ ಜೊತೇಲ್ಲಿ ಮಾತಾಡೋಕ್ಕೆ ಯಾರಿಗೆ ಸಾಧ್ಯ ?... ನಾಲ್ಕಾಣೆ ಮಾತಿಗೆ ಹನ್ನೆರಡಾಣೆ ಸೇರಿಸ್ತಾನೆ... ನಿನ್ನೆನೇ ಕಾರ್ಯ ಮುಗಿದೋಗಿದ್ದರೆ ಚೆನ್ನಾಗಿತ್ತು... ನಿನ್ನೆ ಮಂಗಳವಾರ ಅಂತ ಮುಂದಕ್ಕೆ ಹಾಕಿದ್ರು... ಓ.... ಇನ್ನೂ ದಾಯಾದಿಗಳು ಬರಬೇಕಲ್ಲ ?.... ಬರೋರು ಬರೋ ಅಷ್ಟೊತ್ತಿಗೆ ಒಂದೆರಡು ಇಡ್ಲಿ ಮುಗಿಸಿ ಬಂದ್ರೆ ಒಳ್ಳೇದು... ಎಷ್ಟೊತ್ತು ಆಗುತ್ತೊ ಏನೋ ?.... ಲೋ ಕೆಂಚ.... ಬೆಂಕಿ ಕಾಯಿಸಿಕೊಳ್ಳೋ ಭರಾಟೆಲ್ಲಿ ಬೆಂಕಿ ಆರಿಸ್ಬೇಡ... ಒಂದೆರಡು ಬೆರಣಿ ಹಾಕು.... ಬತ್ತೀನಿ.

**ಕೆಂಚ** : ನಾನೂ ಬತ್ತೀನಿ ತಿಮ್ಮಣ್ಣ.... ನಂಗೂ ಒಂದೆರಡು ಇಡ್ಲಿ ಕೊಡಿಸು.

**ತಿಮ್ಮಣ್ಣ** : ನೀನು ಇಲ್ಲೇ ಇರು. ಆಮೇಲೆ ತಿನ್ನೋವಿಯಂತೆ... (ಸ್ವಗತ) ಒಂದೆರಡು ಇಡ್ಲಿ ತಿನ್ನೋ ಗಿರಾಕಿ ಅಲ್ಲ ಇದು.... ಒಂದು ದೊಡ್ಡ ಒಬ್ಬೇನೇ ಬೇಕು... ಹುಚ್ಚರಿಗೆ ಹೊಟ್ಟೆ ಜಾಸ್ತಿ....

**ಕೆಂಚ** : ತಿಮ್ಮಣ್ಣಾ.... ತಿಮ್ಮಣ್ಣಾ....

**ತಿಮ್ಮಣ್ಣ** : ಆಮೇಲೆ... ಆಮೇಲೆ. (ಮರೆಯಾಗುತ್ತಾನೆ).

**ಕೆಂಚ** : (ಜೋರಾಗಿ ಮಗ್ಗಿ ಹೇಳುತ್ತಾ, ಬೆಂಕಿ ಸರಿ ಮಾಡುತ್ತಾ ಇರುತ್ತಾನೆ)

ಒಂದು ಒಂದ್ಲ ಒಂದು
ಒಂದು ಎರಡ್ಲ ಎರಡು
ಒಂದು ಮೂರ್ಲ ಮೂರು
ಒಂದು ನಾಲ್ಕ್ಲ ನಾಲ್ಕು
ಒಂದು ಐದ್ಲ ಐದು
ಒಂದು ಆರ್ಲ ಆರು
ಒಂದು ಏಳ್ಲ ಏಳು

**ಚಂದ್ರಪ್ಪ** : (ಮನೆಯೊಳಗಿನಿಂದ ಬಂದು) ಲೋ... ಕೆಂಚಾ.. ಸುಮ್ನೆ ಇರೋ.. ಸಾವಿನ ಮನೇಲ್ಲಿ ಭಜನೆ ಮಾಡೋದು ಕಂಡಿದ್ದೀನಿ.. ಇವನೋ ಮಗ್ಗಿ ಹೇಳ್ತಾ ಅವ್ನೆ.. ನೋಡದೋರು ಏನು ಅನ್ಕೊಳಲ್ಲಾ ?.. ನರಸಿಂಹನೋ, ಗೋವಿಂದನೋ ಬೇಗ ಬಂದ್ಬಿಟ್ಟರೆ ಈ ತಲೆನೋವೆ ಇರಲ್ಲ.

**ಕೃಷ್ಣಾಚಾರ್** : ನಮಸ್ಕಾರ. (ಪಕ್ಕದ ಮನೆಯವರು ಬಂದು)

**ಚಂದ್ರಪ್ಪ** : ನಮಸ್ಕಾರ.

**ಕೃಷ್ಣಾಚಾರ್** : ರಂಗಪ್ಪನೋರು ಇಷ್ಟು ಸಡನ್ ಆಗಿ ಹೋಕ್ತಾರೆ ಅಂತ ಯಾರೂ ಅಂದುಕ್ಕೊಂಡಿರಲಿಲ್ಲ... ಪಾಪ... ಆದ್ರೂ ಒಳ್ಳೇ ಸಾವು... ಬರೋರು ಎಲ್ಲಾ ಬಂದ್ರಾ ?

**ಚಂದ್ರಪ್ಪ** : ಇನ್ನೂ ಇಲ್ಲ ಕೃಷ್ಣಾಚಾರ್‌ರೇ..... ಆ ನರಸಿಂಹ ಕೋಲಾರದಿಂದ ಬರ್ಬೇಕು... ಆ ಗೋವಿಂದ ಕನಕಪುರದಿಂದ ಬರ್ಬೇಕು... ಸುದ್ದಿ ಹೋಗ್ಯೆತೆ.... ಈಗ್ಲೋ ಆಗ್ಲೋ ಇಳಿದಾರು...

**ಕೃಷ್ಣಾಚಾರ್** : ಬರ್ಲಿ ಬರ್ಲಿ.... ಬೇಗಾದ್ರೆ ಎಲ್ಲರಿಗೂ ಒಳ್ಳೇದು.... ಅಕ್ಕಪಕ್ಕದ ಮನೇಲಿ ಬೆಂಕಿನೇ ಹಾಕಿಲ್ಲ... ಮಕ್ಕಳು-ಮರಿ, ವಯಸ್ಸಾದೋರು.... ಪಾಪ...

**ಕೆಂಚ** : (ಬೆಂಕಿ ಕಾಯಿಸುತ್ತಾ) ಮನೆಯ ಮುಂದೆ ಬೆಂಕಿ ಆರ್ದ್‌ಕೂಡ್ಲೇ ಕೃಷ್ಣಾಚಾರ್ ಮನೇಲ್ಲಿ ಎಲ್ಲರಿಗೂ ಊಟ.. ಎಲ್ಲರಿಗೂ ಊಟ... ಊ....ಟ.....

**ಕೃಷ್ಣಾಚಾರ್** : ಲೋ ಕೆಂಚಾ.... ಕೆಂಚಾ. (ಅಟ್ಟಿಸಿಕೊಂಡು ಹೋಗುವನು)

**ಚಂದ್ರಪ್ಪ** : ಹೋಗ್ಲಿಬಿಡಿ ಆಚಾರ್ರೆ.... ಅವನಿಗಂತೂ ತಲೆ ನೆಟ್ಟಗಿಲ್ಲ... ಆದಷ್ಟು ಬೇಗ ಮುಗಿಸ್ಬಿಡೋಣ.... ಅವರಿಬ್ಬರಲ್ಲಿ ಒಬ್ಬರು ಬಂದ್ರೂ ಸಾಕು.

**ಕೃಷ್ಣಾಚಾರ್** : ಕರ್ಮಾಂತರಕ್ಕೆ ಒಂದು ಮಗು ಇದ್ದಿದ್ದರೆ ಎಷ್ಟು ಚೆನ್ನಾಗಿರ್ತಿತ್ತು ?.... ಅವರು ಮಾಡಿಸಿದ ಪೂಜೆಗಳಿಗೆ ಏನ್ ಕಡಿಮೆ ?... ಹೋದ ಪುಣ್ಯಸ್ಥಳಗಳಿಗೆ ಏನ್ ಕಡಿಮೆ ? ....ಭಗವಂತ ಮನಸ್ ಮಾಡ್ಲಿಲ್ಲ.... ರಂಗಪ್ಪನೋರ ಶ್ರೀಮತಿಯೋರು ಸುಧಾರಿಸಿಕೊಂಡ್ರಾ ?... ಇನ್ನು ಮುಂದೆ ಆ ತಾಯಿ ಎಂಗೆ ಕಾಲ ಹಾಕ್ತಾಳೋ..... ಏನೋ... ಪಾಪ (ಮನೆಯಿಂದ 'ರೀ ರೀ' ಎಂಬ ಕರೆ ಬಂದ ಕೂಡಲೇ).... ಬರ್ತೀನಿ.... ಮಕ್ಕಳನ್ನ ಸ್ಕೂಲಿಗೆ ರೆಡಿ ಮಾಡಿಸ್ಬೇಕು... ಇಡ್ಲಿ-ಗಿಡ್ಲಿ ತಂದು ಕೊಡಬೇಕು. (ಮರೆಯಾಗುತ್ತಾನೆ)

**ಚಂದ್ರಪ್ಪ** : ಅವರವರ ಚಿಂತೆ ಅವರವರಿಗೆ.... ಲೋ ಕೆಂಚ... ನೀನು ತೆಪ್ಪಗೆ ಬಾಯಿ ಮುಚ್ಚಿಕೊಂಡು ಇರು.... ಆಚಾರ್ಯರಿಗೆ ಹಂಗೆಲ್ಲಾ ಹೇಳಬಾರ್ದು ಗೊತ್ತಾಯ್ತ ?

**ಕೆಂಚ** : ಹೂ.... ಆಗ್ಲಿ ಸೋಮಿ...

ಒಂದು ಒಂದ್ಲ ಒಂದು
ಒಂದು ಎರಡ್ಲ.....

**ಚಂದ್ರಪ್ಪ** : ಸುಮ್ನೆ ಇರ್ತಿಯೋ ಇಲ್ಲವೋ.... ಇನ್ನೊಂದು ಸಾರಿ ಅದನ್ನ ಹೇಳಿದ್ರೆ, ಸುಟ್ಟುಬಿಡ್ತೀನಿ ನೋಡು... ಹುಚ್‌ನನ್‌ಮಗನೆ.... (ಅಷ್ಟು ಹೊತ್ತಿಗೆ ಇಬ್ಬರು ಆತುರ ಆತುರವಾಗಿ ಬರುತ್ತಾರೆ) ಬನ್ನಿ.... ಬನ್ನೀ.... ನರಸಿಂಹನೋ ಗೋವಿಂದನೋ ಬಂದ್ರೆ ಆಯ್ತು.... ರಾಹುಕಾಲ ನೋಡಿಕೊಂಡು ತೆಗೆದು ಬಿಡೋದೆ... ಎಲ್ಲಾ ರೆಡಿ ಆಗ್ಯೆತೆ.... ನಾರಾಯಣ ದಾನದ ಸಾಮಾನು ತರೋಕೆ ಯಶವಂತಪುರಕ್ಕೆ ಹೋಗಿದ್ದಾನೆ... ಈಗ್ಲೋ ಆಗ್ಲೋ ಬರ್ತಾನೆ....

**ಬಂದವರಲ್ಲಿ ಒಬ್ಬ** : ರಂಗಪ್ಪನೋರಿಗೆ ಏನಾಗಿತ್ತು ?.. ಚೆನ್ನಾಗೇ ಇದ್ದರಲ್ಲ ?

**ಚಂದ್ರಪ್ಪ** : ಎದೆನೋವು ಬಂತಂತೆ... ಡಾಕ್ಟರ್ ಬರೋದರೊಳ್ಗೆ ಗೋಣು ಚೆಲ್ಲಿಬಿಟ್ಟರಂತೆ.... ದೇವರು ಮನಸ್ಸು ಮಾಡಿದ್ರೆ ನಾರು ಬೇರಾಗುತ್ತೆ.... ಮನಸ್ಸು ಮಾಡ್ದೆ ಇದ್ರೆ ಬೇರು ನಾರಾಗುತ್ತೆ.

**ಬಂದವರಲ್ಲಿ ಇನ್ನೊಬ್ಬ** : (ಬೆಂಕಿಯನ್ನು ಸರಿ ಮಾಡುತ್ತಾ ಕೆಂಚನನ್ನು ನೋಡಿ) ಇವನಾರು ?..... ದೂರ ಕೂತ್ಕೊಳ್ಳೋ.... ಈ ಬೆಂಕಿಯಲ್ಲಿ ಛಳಿ ಕಾಯಿಸ್ಬಾರ್ದು...

**ಕೆಂಚ** : ಬೆಂಕಿ ಎಲ್ಲೋದ್ರು ಒಂದೇನೆ... ಎಲ್ಲಿ ಬೆಂಕಿ ಕಾಯಿಸಿದ್ರೂ ಛಳಿ ಹೋಗುತ್ತೆ. (ನಗು)

**ಬಂದವರಲ್ಲಿ ಇನ್ನೊಬ್ಬ** : ತಲೆಗೆ ಕೆರ ಕೇಳೋರಿಗೆ ಹೇಳೋಕಾಗಲ್ಲ.... (ಗದರಿ) ಏಳಯ್ಯ ಮೇಲೆ... ಏಳಯ್ಯ ಮೇಲೆ.

**ಚಂದ್ರಪ್ಪ** : ಬಿಡಿ ಸ್ವಾಮಿ... ಅವನಿಗೆ ಯಾವುದೂ ಅರ್ಥವಾಗೋದಿಲ್ಲ... ಸ್ವಲ್ಪ ಸರಿಯಿಲ್ಲ.... ನಾರಾಯಣ ಬಂದ ಕೂಡ್ಲೆ ಮುಗಿಸ್ಬಿಡೋಣ... (ಬಂದವರಿಬ್ಬರು ತಮ್ಮ ತಮ್ಮಲ್ಲಿಯೇ ಮಾತಾಡಿಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಳ್ಳುತ್ತಾರೆ) ಲೋ... ಕೆಂಚ ಆಚೆಮನೆ ಯಜಮಾನ್ರ ಕರೆಯೋ... ಶಾಸ್ತ್ರ-ಸಂಪ್ರದಾಯ ಅಂತ ಸರಿಯಾಗಿ ಮಾಡಿಸ್ತಾರೆ....

**ಕೆಂಚ** : ಯಜಮಾನ್ರೂ ಬರ್ತಾರೆ
ಚಟ್ಟಾನೂ ಕಟ್ತಾರೆ
ಕಡ್ಲೆ-ಪುರಿ ಎರಚಾಡ್ತಾರೆ

(ಎಂದುಕೊಂಡು ಹೋಗುವನು. ನಾರಾಯಣ ಸೈಕಲ್ ಮೇಲೆ 'ಸಾಮಾನು' ತರ್ತಾನೆ. ಅಲ್ಲಿದ್ದವರು ಮತ್ತು ಹೊರಗಿನವರು ಚಟ್ಟ ಕಟ್ಟುವ ಕಾರ್ಯದಲ್ಲಿ ಮಗ್ನರಾಗುತ್ತಾರೆ)

**ಯಜಮಾನ್ರು** : (ಬಂದು ಎಲ್ಲವನ್ನೂ ಒಮ್ಮೆ ವೀಕ್ಷಿಸಿ) ಚಟ್ಟ ಕಟ್ಟಿದ ಮೇಲೆ, ಬಹಳ ಹೊತ್ತು ಅಂಗೇ ಬಿಡಬಾರ್ದು... ದಾಯಾದಿಗಳು ಯಾವಾಗ ಬರ್ತಾರೆ ?.... ಎಲ್ಲ ರೆಡಿ ಆಗ್ಬಿಡಲಿ... ಬಂದ ಕೂಡ್ಲೆ ಎತ್ತಿಬಿಡಬೇಕು...

**ಚಂದ್ರಪ್ಪ** : ನಿಜ ಯಜಮಾನ್ರೆ... ವಾರಸುದಾರ್ರು ಬರ್ಲೇಬೇಕಲ್ಲ... ಈಗಲೋ ಆಗ್ಲೋ ಇಳಿತಾರೆ.

**ನಾರಾಯಣ** : ಕೋಲಾರದಿಂದ ಒಬ್ಬ ಬರ್ಬೇಕು... ಕನಕಪುರದಿಂದ ಒಬ್ಬ ಬರ್ಬೇಕು... ಅವರು ಬಂದು ರಂಗಪ್ಪನೋರ್ನ ನೋಡ್ತಾ ಇದ್ದದ್ದು ಅಷ್ಟಲ್ಲೇ ಅಯ್ತೆ... ಹತ್ತಿರದೋರು ಅಂತ ಕಾಯ್ಬೇಕು ಅಷ್ಟೇ.... ರಂಗಪ್ಪನೋರ ಸುಖಕ್ಕೆ ಆದೋರಲ್ಲ, ಕಷ್ಟಕ್ಕೆ ಆದೋರಲ್ಲ... ಆಗಾಗ ವಸೂಲಿಗೆ ಬರ್ತಾ ಇದ್ರು, ಅಷ್ಟೆ.... ಆ ಕಡೆ ಹಗ್ಗ ಬಿಗಿ ಮಾಡು ಚಿಕ್ಕಣ್ಣ.... ಮನುಷ್ಯ ವಜನ್ ಜಾಸ್ತಿ... ಅಂಗೇ ಆ ಮೂಲೆ ಇಟ್ಟಿ ಸರಿಮಾಡು... ಚಟ್ಟ ಜಾರ್ತಾ ಅಯ್ತೆ....

**ಚಂದ್ರಪ್ಪ** : ಯಾರ್ ಏನ್ ಮಾಡಿದ್ರೆ ನಮಗೇನು ?.. ಈಗ ಕೆಲ್ಸ ತೂಗೋದ ಮುಖ್ಯ.... ರಂಗಪ್ಪನೋರ ಆಸ್ತಿಗೆ ಯಾರ್ ಬೇಕಾದ್ರೂ ಕಿತ್ತಾಡಿಕೊಂಡು ಸಾಯ್ಲಿ... ಹಾಲು-ತುಪ್ಪ ಹಾಕಿ, ಭುಜ ಇಳಿಸಿಕೋಳ್ಳೊವರ್ಗೆ ನಮ್ಮ ಕೆಲ್ಸ... ಆಮೇಲೆ ಅವರುಂಟು, ರಂಗಪ್ಪನೋರ ಆಸ್ತಿ ಉಂಟು.

**ಯಜಮಾನ್ರು** : ಮೊದ್ಲು ಕೆಲ್ಸ ನೋಡ್‌ರಯ್ಯ... ಆಸ್ತಿ-ಗೀಸ್ತಿ ಎಲ್ಲಾ ಇರೋವರ್ಗೆ... ರಂಗಪ್ಪನೋರು ಆಸ್ತಿ ಏನೋ ಮಾಡಿದ್ದಾರೆ... ಯಾರ್ನಾದ್ರು ದತ್ತು ತಕ್ಕೊಂಡಿದ್ರೆ ಒಳ್ಳೇದಾಗ್ತಾಯಿತ್ತು... ರಂಗಪ್ಪನೋರು ಮೋಸ ತಟವಟದಿಂದ ದುಡ್ಡು ಮಾಡ್ದೋರಲ್ಲ... ಕಷ್ಟಪಟ್ಟು ದುಡಿದ್ರು, ಸಂಪಾದಿಸಿದ್ರು.... ಆದ್ರೆ ದೇವರು ಕಣ್ಣೆತ್ತಿ ನೋಡಲಿಲ್ಲ.

**ಕೆಂಚ** : ನಾನೇ ರಂಗಪ್ಪನೋರ ದತ್ತುಪುತ್ರಾ.... ದತ್ತು ಪುತ್ರ. (ನಕ್ಕು ಕುಣಿದಾಡುವನು)

**ತಿಮ್ಮಣ್ಣ** : ಹಾಕ್ರೊ ಅವನಿಗೆ ನಾಲ್ಕು... ದತ್ತು ಪುತ್ರಾ, ಅಂತೆ... ದತ್ತು ಪುತ್ರ... ಬೇವರ್ಸಿ ನನ್‌ಮಗ... ಏನೋ ಹುಚ್‌ನನ್‌ಮಗ ಅಂತ ಬಟ್ಟೆ-ಬರೆ ಕೊಡ್ತಾ ಇದ್ರು.... ಊಟ-ಗೀಟ ಹಾಕ್ತಾ ಇದ್ರು.... ಇಷ್ಟಕ್ಕೇ ಹಕ್ಕು ಚಲಾಯಿಸ್ತಾನೆ... ಇರೋ ಇರೋ, ನಿಜವಾದ ಹಕ್ಕುದಾರ್ರು ಈಗ್ಲೋ ಆಗ್ಲೋ ಇಳಿತಾರೆ... ನಿನ್ ಬುರುಡೇಗೆ ಬಿಸಿನೀರು ಕಾಯಿಸ್ತಾರೆ.

**ಯಜಮಾನ್ರು** : ರಾಹುಕಾಲ ಬರೋದ್ರೊಳಗೆ ಎತ್ತಬೇಕು... ಬರೋರ್ ಎಲ್ಲಾ ಬಂದ್ರಾ ?

**ಚಂದ್ರಪ್ಪ** : ಇನ್ನೂ ಇಲ್ಲ.

**ತಿಮ್ಮಣ್ಣ** : ಬರ್‍ತಾರೆ.. ಬರ್‍ತಾರೆ. ಸುದ್ದಿ ಮುಟ್ಟೈತೆ. (ಅಷ್ಟರಲ್ಲಿ ಒಂದಿಬ್ಬರು ಹುಡುಗರು ಬಂದು ಕುತೂಹಲದಿಂದ ನೋಡುತ್ತಾರೆ. ಕೆಲವರು ಚಟ್ಟ ಕಟ್ಟೋದರಲ್ಲಿ ಮಗ್ನರಾಗಿರುತ್ತಾರೆ. ಕೆಂಚ ಅವರನ್ನು ಬೆಂಕಿ ಹತ್ತಿರ ಕರೆದು)

**ಕೆಂಚ** : ಒಂದು ಆಟ ಆಡೋಣ ಬರ್‍ತೀರಾ ?

**ಹುಡುಗರು** : ಓ..... ಓ..... (ಚಪ್ಪಾಳೆ ತಟ್ಟುತ್ತಾ)

**ಕೆಂಚ** : ಒಂದು, ಎರಡು, ಮೂರು ಬರುತ್ತಾ

**ಹುಡುಗರು** : (ನಕ್ಕು) ನಿಂಗೆ ಬರುತ್ತಾ ?

**ಕೆಂಚ** : ಸರಿ... ಒಂದು, ಎರಡು, ಮೂರು, ನಾಲ್ಕು, ಐದು ಅಂತ ನೂರರವರೆಗೂ ಜೋರಾಗಿ, ಸ್ಪೀಡಾಗಿ ಹೇಳ್ಬೇಕು.

**ಹುಡುಗರು** : ಇದೇನ್ ಆಟನೋ ?.... ಕೆಂಚ.

**ಕೆಂಚ** : ಇಲ್ನೋಡಿ.... ಒಂದು, ಎರಡು, ಮೂರು ಹೇಳೋದು ಮಾಮೂಲಿ... ಆದ್ರೆ, ಎಲ್ಲೆಲ್ಲಿ ಎರಡು ಬರುತ್ತೆ (ಸುತ್ತಲೂ ಒಮ್ಮೆ ಗಮನಿಸಿ) ಅಲ್ಲೆಲ್ಲಾ ಹೆಣ ಅನ್ಬೇಕು.... ಎಲ್ಲೆಲ್ಲಿ ಐದು ಬರುತ್ತೆ ಅಲ್ಲೆಲ್ಲಾ ಹಣ ಅನ್ಬೇಕು... ಗೊತ್ತಾಯ್ತ ?

**ಹುಡುಗರು** : ಆಮೇಲೆ ?

**ಕೆಂಚ** : ಇದನ್ನು ಜೋರಾಗಿ, ಸ್ಪೀಡಾಗಿ ಹೇಳ್ಬೇಕು...

**ಹುಡುಗರು** : (ಒಟ್ಟಾಗಿ) ಒಂದು, ಹೆಣ, ಮೂರು, ನಾಲ್ಕು, ಹಣ, ಆರು, ಏಳು, ಎಂಟು, ಒಂಭತ್ತು, ಹತ್ತು...

**ಕೆಂಚ** : ಇನ್ನೂ ಸ್ಪೀಡಾಗಿ ತಡವರಿಸ್ದೆ ಹೇಳ್ಬೇಕು. (ದೊಡ್ಡದಾಗಿ ನಗುವನು)

**ಹುಡುಗರು** : (ಜೋರಾಗಿ, ಸ್ಪೀಡಾಗಿ ಹೇಳಲು ಪ್ರಯತ್ನಿಸಿ ವಿಫಲರಾಗುವರು) ಒಂದು, ಹೆಣ, ಮೂರು, ನಾಲ್ಕು, ಹಣ, ಆರು, ಏಳು ಎಂಟು, ಒಂಭತ್ತು, ಹತ್ತು, ಹನ್ನೊಂದು, ಒಂದು ಹೆಣ, ಹದಿಮೂರು, ಹದಿನಾಲ್ಕು, ಒಂದು ಹಣ, ಹದಿನಾರು, ಹದಿನೇಳು, ಹದಿನೆಂಟು, ಹತ್ತೊಂಭತ್ತು, ಹೆಣ ಸೊನ್ನೆ, ಹೆಣ ಒಂದು, ಹೆಣ ಮೂರು, ಹೆಣ ನಾಲ್ಕು, ಹೆಣ ಹಣ, ಹೆಣ ಆರು.... ಆಗೋಲ್ಲ... ಆಗೋಲ್ಲ.... ಕೆಂಚ, ಕೆಂಚ ಹುಚ್ಚ ಕೆಂಚ. (ಕೂಗಿಕೊಂಡು ಓಡಿ ಹೋಗುವರು)

**ಕೆಂಚ** : ಹೆಣ ಹಣ ಒಟ್ಟಿಗೆ ಹೋಗಲ್ಲ. (ನಗು)

**ಯಜಮಾನ್ರು** : ಸುಮ್ನೆ ಇರೋ ಕೆಂಚ... ಕರ್ಮಾಂತರ ಮಾಡೋರು ಬಂದ್ರೇನಪ್ಪ ?.... ನಾರಾಯಣ ಮೊದ್ಲು ತೆಂಗಿನಗರಿ ಹಾಕಿ, ಆಮೇಲೆ ಬಾಳೆಲೆ ಹಾಸೋ... ನೆನಪಿರ್‍ಲಿ, ದಕ್ಷಿಣಕ್ಕೆ ತಲೆ ಬರ್ಬೇಕು....

**ತಿಮ್ಮಣ್ಣ** : ನರಸಿಂಹ ಬರ್‍ತಾ ಅವ್ನೆ..... ಅದೇ ರಂಗಪ್ಪನೋರ ತಮ್ಮ...

**ಯಜಮಾನ್ರು** : ಒಳ್ಳೇದಾಯ್ತು.. ರಾಹುಕಾಲ ಬರೋದ್ರಲ್ಲಿ ಎತ್ತಬಹುದು.... ನಾರಾಯಣ, ಅವನ್ನ ಬೇಗ ರೆಡಿ ಆಗು ಅನ್ನೋ...

**ನಾರಾಯಣ** : ಹೂ... (ನರಸಿಂಹನ ಹಿಂದೆ ಮೂರು ನಾಲ್ಕು ಜನ ಬರ್‍ತಾರೆ).

**ನರಸಿಂಹ** : (ಜೋರಾಗಿ ಅಳುತ್ತಾ) ಹೋಗಿ ಬಿಟ್ಯಾ ಅಣ್ಣಾ.... ನಮಗೆಲ್ಲ ದೇವರು ಇದ್ದಂಗೆ ಇದ್ದೆಯಲ್ಲೋ... ನನಗಿನ್ನಾರೋ ದಿಕ್ಕು... ಎಲ್ಲಾ ನೀನೇ ಆಗಿದ್ದಲ್ಲೋ....

**ನಾರಾಯಣ** : (ನರಸಿಂಹನನ್ನು ತಡೆದು) ನರಸಿಂಹ ಈಗ ಅಳೋ ಸಮಯ ಅಲ್ಲ... ನೀನೇ ಹಿಂಗೆ ಬಿದ್ದು ಬಿದ್ದು ಅತ್ತರೆ, ಕಮಲಮ್ಮನಿಗೆ ಧೈರ್ಯ ಹೇಳೋರು ಯಾರು ?... ಮೊದಲು ಕರ್ಮಾಂತರಕ್ಕೆ ರೆಡಿಯಾಗು....

**ನರಸಿಂಹ** : ಗೋವಿಂದ ಬರಲಿಲ್ಲವಾ ?

**ನಾರಾಯಣ** : ಇನ್ನೂ ಇಲ್ಲ... ಅವನ್ನೂ ಎದುರು ನೋಡ್ತಾ ಇದ್ದೀವಿ.... ಮೊದಲು ದಾನ ಕಾರ್ಯ ಮೊದಲು ಆಗಿಹೋಗ್ಲಿ... ನಡಿ ಮನೆವೊಳಕ್ಕೆ.... (ನರಸಿಂಹ ಮತ್ತು ಅವನ ಜೊತೆಯಲ್ಲಿ ಬಂದವರೂ ಮನೆಯೊಳಕ್ಕೆ ನುಗ್ಗುತ್ತಾರೆ)

**ಚಂದ್ರಪ್ಪ** : ಅಗೋ... ಗೋವಿಂದನೂ ಬಂದ್ಬಿಟ್ಟ...

**ನಾರಾಯಣ** : ಸದ್ಯ... ಬರೋರೆಲ್ಲ ಬಂದಂಗೆ ಆಯ್ತಲ್ಲ.... ಬಸ್ಸು ತಡವಾಗಿ ಸಿಕ್ಕಿರಬೇಕು.

**ಯಜಮಾನ್ರು** : ಅಂತೂ ಇಬ್ಬರೂ ಟೈಂಗೆ ಸರಿಯಾಗಿ ಬಂದರಲ್ಲ. (ಗೋವಿಂದ ಮತ್ತು ಅವನ ಜೊತೆಯಲ್ಲಿ ಕೆಲವರು ಬರುವರು).

**ಗೋವಿಂದ** : (ಅಳುತ್ತಾ) ಏನಾಗಿತ್ತೋ ಚಿಕ್ಕಪ್ಪ... ಚೆನ್ನಾಗೇ ಇದ್ದೆಯಲ್ಲೋ.. ಹೋದ್ಸಾರಿ ಬಂದಾಗ ನಗ್ತನಗ್ತ ಇದ್ದೆ... ನಮ್ಮನ್ನೆಲ್ಲಾ ಅನಾಥರನ್ನಾಗಿ ಮಾಡಿಬಿಟ್ಟೆಯಲ್ಲೋ... ಅಯ್ಯೋ ಚಿಕ್ಕಪ್ಪಾ.... ನನ್ನ ಚಿಕ್ಕಪ್ಪಾ....

**ಯಜಮಾನ್ರು** : ಗೋವಿಂದ.... ಗೋವಿಂದ.... ದುಃಖ ಆಗ್‌ತೈತೆ, ನಿಜ... ಅಳೋಕೆ ಇದು ಸಮಯ ಅಲ್ಲ... ಎಲ್ರೂ ಕಾಯ್ತ ಅವರೆ... ಚಿಕ್ಕಮ್ಮನ್ನ ಮಾತಾಡ್ಸಿ... ಮುಂದಿನ ಕೆಲಸಕ್ಕೆ ರೆಡಿಯಾಗು...

**ಗೋವಿಂದ** : ನರಸಿಂಹ ಚಿಕ್ಕಪ್ಪ ಬಂದ್ನಾ ?

**ಚಂದ್ರಪ್ಪ** : ಅವನೂ ಈಗ್ಲೇ ಬಂದ... ಅವನೂ ರೆಡಿ ಆಗ್ತಾ ಅವ್ನೆ... ನೀನು ಹೊರಡು...

**ಕೆಂಚ** : ನರಸಿಂಹಪ್ಪನೂ ಬಂದ... ಗೋವಿಂದಪ್ಪನೂ ಬಂದ... ಕಳ್ಳೇಪುರಿ ಎರಚೋ ಹೊತ್ತು ಬಂದೇ ಬಿಡ್ತು... ರಂಗಪ್ಪನೋರ್‍ಗೆ ಗೋವಿಂದ... ಗೋeeeeವಿಂದ...

**ಚಂದ್ರಪ್ಪ** : ಹೋಗ್ತೀಯೋ ಇಲ್ಲೋ.... (ಅಟ್ಟಿಸಿಕೊಂಡು ಹೋಗುವನು).... ಇನ್ನೊಂದ್ಸಾರಿ ಬಾಯಿಗೆ ಬಂದಂತೆ ಹೇಳಿದ್ರೆ.... ಸಿಗದ್‌ಬಿಡ್ತೀನಿ...

**ಯಜಮಾನ್ರು** : ಅವನ ಮಾತು ಯಾವ ಲೆಕ್ಕಕ್ಕೆ... ಬಿಡೋ... ಹುಚ್ಚನ ಜೊತೆಲ್ಲಿ ಏನು ಮಾತು... ಅವನ್‌ಗೇನ್ ಗೊತ್ತಾಗ್‌ತೈತೆ... ಏನೋ ಬಾಯಿಗೆ ಬಂದದ್ದು ಒದರ್‍ಕೊಂಡು ಸುಮ್ನಾಗ್ತಾನೆ.... ಹೊಟ್ಟೆಗ್‌ಹಿಪ್ಪು ಬಿದ್ರೆ ಮುದುರ್‌ಕೊಂಡು ಬಿದ್‌ಕೋತಾನೆ.... ಮೊದಲು ಮುಂದಿನ ಕೆಲ್ಸ ನೋಡ್ರಿ.....

**ಕೃಷ್ಣಾಚಾರ್ರು** : (ಬಂದು) ಬೇಗ ಬೇಗ ರೆಡಿ ಮಾಡಿ... ರಾಹುಕಾಲ ಬಂದ್‌ಬಿಟ್ರೆ, ಇನ್ನೂ ಒಂದೆರಡು ಗಂಟೆ ತಡವಾಗಿಬಿಡುತ್ತೆ... ಮಕ್ಕಳು ಮರಿಗೆ ತೊಂದ್ರೆ.....

(ಅಷ್ಟುಹೊತ್ತಿಗೆ ನರಸಿಂಹ, ಗೋವಿಂದ ಇಬ್ಬರೂ ಮನೆಯೊಳಗಿನಿಂದ ಬರುತ್ತಾರೆ. ಅವರವರ ಜೊತೆಯಲ್ಲಿ ಬಂದವರು ಅವರ ಹಿಂದೆಯೇ ಇದ್ದಾರೆ. ಇಬ್ಬರ ಮುಖದಲ್ಲೂ ಅಸಹನೆ, ಕೋಪ ಕಂಡುಬರುತ್ತದೆ).

**ನರಸಿಂಹ** : ಮೊದ್ಲು ಬಂದೋನು ನಾನು... ನಮ್ಮಣ್ಣನಿಗೆ ಕರ್ಮಾಂತರ ಮಾಡೋ ಹಕ್ಕು ಇರೋದು ನನಗೊಬ್ಬನಿಗೇ....

(ನರಸಿಂಹನ ಕಡೆಯವರು ಇದಕ್ಕೆ ಬೆಂಬಲ ವ್ಯಕ್ತಪಡಿಸುತ್ತಾರೆ. ನರಸಿಂಹ ಷರಟು ತೆಗೆದುಕೊಡುತ್ತಾನೆ)

**ಗೋವಿಂದ** : ನಮ್ಮಪ್ಪನಿಗೆ ಬೆಂಕಿ ಹಿಡಿಯಬೇಕಾದೋನು ನಾನು... ವರಸೇ ಪ್ರಕಾರ ಹಕ್ಕು ಇರೋದು ನಂಗೆ...

(ಗೋವಿಂದನ ಕಡೆಯವರು ಈ ಮಾತಿಗೆ ತಮ್ಮ ಬೆಂಬಲ ವ್ಯಕ್ತಪಡಿಸುತ್ತಾರೆ. ಗೋವಿಂದ ಚಟ್ಟದ ಹತ್ತಿರ ಬಂದು ಷರಟು ಬಿಚ್ಚುವನು)

**ನರಸಿಂಹ** : ರಕ್ತ, ರಕ್ತ ಹಂಚಿಕೊಂಡು ಹುಟ್ಟಿದೋರು ನಾವು... ನನ್ನ ಯಾರು ತಡೀತಾರೆ ನೋಡೇಬಿಡ್ತೀನಿ... (ಮನೆಯ ಹಿಂದಕ್ಕೆ ಹೋಗುವನು).

**ಗೋವಿಂದ** : ಇಷ್ಟು ದಿನ ಇಲ್ದೆ ಇದ್ದ ಸಂಬಂಧನ ಈಗ ಹುಡುಕ್ಕೊಂಡು ಬಂದ್‌ಬಿಟ್ರೆ ಕೇಳೋರ್ ಯಾರು ?.... ನಾನು ಎದ್ನೋ ಬಿದ್ನೋ ಅಂತ ಬಂದಿದ್ದೀನಿ.... ನಾನು ಪಿಂಡ ಇಡದಿದ್ದರೆ ಅಪ್ಪಂಗೆ ಸದ್ಗತಿ ಎಂಗೆ ಸಾಧ್ಯ ?

(ಸುತ್ತಲ ಜನ ಅವಕ್ಕಾಗಿ ಇವರನ್ನು ನೋಡುವರು. ಗೋವಿಂದನೂ ಮನೆಯ ಹಿಂದಕ್ಕೆ ಹೋಗುವನು)

**ಯಜಮಾನ್ರು** : ಎಲ್ಲಾ ಆಯ್ತು ಅನ್ನೋಷ್ಟು ಹೊತ್ತಿಗೆ, ಮತ್ತೇನೋ ರಗಳೆ ಬಂತಲ್ಲಪ್ಪಾ...

**ಕೆಂಚ** : (ದೂರದಲ್ಲೇ ನಿಂತು) ಹಣ-ಹೆಣ ಆಟ... ಹಣ-ಹೆಣ ಆಟ... ಹಣ-ಹೆಣ ಆಟ...

**ಚಂದ್ರಪ್ಪ** : ಇಬ್ಬರಿಗೂ ಕರ್ಮಾಂತರ ಮಾಡೋ ಹಕ್ಕಿದೆ.. ಯಾರು ಮಾಡಿದ್ರೆ ಏನು?.... ಇದಕ್ಕೆ ಯಾಕೆ ಈ ಪೈಪೋಟಿ?...

**ತಿಮ್ಮಣ್ಣ** : ಕರ್ಮಾಂತರ ಮಾಡಿದೋರು ಆಸ್ತಿಗೆ ವಾರಸುದಾರ್ರು ಆಗ್ತಾರೆ... ಅದಕ್ಕೆ ಈ ಪೈಪೋಟಿ....

**ನಾರಾಯಣ** : ಆಸ್ತಿಗಾಗಿ ಆಮೇಲೆ ಕಿತ್ತಾಡಿಕೊಂಡು ಸಾಯ್ರಿ... ಮೊದಲು ದಾನಕಾರ್ಯ ಆಗ್ಲಿ... ಪಂಚಾಯ್ತಿ ಅಯ್ತೆ, ಕೋರ್ಟು ಅಯ್ತೆ... ನಿಧಾನವಾಗಿ ತೀರ್ಮಾನ ಮಾಡಿಕೊಳ್ಳಿ.

**ಚಂದ್ರಪ್ಪ** : ಇನ್ನೂ ಕಮಲಮ್ಮ ಜೀವಂತವಾಗಿ ಅವಳಲ್ಲ... ಗಂಡನ ಆಸ್ತಿ ಹೆಂಡ್ತಿಗೆ.... ಅವರಾದ ಮೇಲೆ ತಾನೆ ಆಸ್ತಿ ಪ್ರಶ್ನೆ... ಈಗ್ಯಾಕೆ ಕಿತ್ತಾಡಿಕೊಂಡು ಸಾಯ್ತಾರೋ ಗೊತ್ತಾಗ್ತಾಯಿಲ್ಲ....

**ಯಜಮಾನ್ರು** : ಇದನ್ನೆಲ್ಲಾ ನೋಡಿ, ಆ ರಂಗಪ್ಪನೋರ ಆತ್ಮ ವಿಲಿವಿಲಿ ಅಂತ ಒದ್ದಾಡ್ತ ಇರಬೇಕು... ಏನೋ.... ದಾಯಾದಿಗಳು ಅಂತ ಕಾದಿದ್ದೇ ತಪ್ಪಾಯ್ತಲ್ಲ... ಇವರು ಕಾರ್ಯ ತೂಗಿಸೋಕೆ ಬಂದಿದಾರೋ ?... ಆಸ್ತಿಗೆ ಕಿತ್ತಾಡೋಕೆ ಬಂದಿದಾರೊ ?.. ಆ ಪರಮಾತ್ಮನಿಗೇ ಪ್ರೀತಿ..

(ನರಸಿಂಹ, ಗೋವಿಂದ, ಪದ್ದೇ ಬಟ್ಟೇಲೇ ಬಂದು ಚಟ್ಟದ ಅಕ್ಕಪಕ್ಕ ನಿಲ್ಲುತ್ತಾರೆ. ಜನಿವಾರ ತೀಡಿಕೊಂಡು ಒಬ್ಬರ ಮುಖ ಒಬ್ಬರು ದುರುಗುಟ್ಟಿಕೊಂಡು ನೋಡ್ತಾರೆ)

**ನರಸಿಂಹ** : ನಮ್ಮಣ್ಣನಿಗೆ ಕರ್ಮಾಂತರ ಮಾಡೋಕೆ ನಾನೇ ಹಕ್ಕುದಾರ.... ನಾನು, ನಮ್ಮ ಪುರೋಹಿತರನ್ನು ಕೇಳಿಕೊಂಡು ಬಂದಿದೀನಿ....

**ಗೋವಿಂದ** : ಮಗ ಕರ್ಮಾಂತರ ಮಾಡೋದೆ ಶ್ರೇಷ್ಠ ಅಂತ ನಮ್ಮ ಪುರೋಹಿತರು ಹೇಳಿದ್ದಾರೆ...

**ಕೆಂಚ** : (ಹಿಂಬದಿಯಿಂದ) ಪುರೋಹಿತರಿಗೆ ದಕ್ಷಿಣೆ ಕೊಟ್ರೆ, ಯಾರಿಗೆ ಬೇಕಾದ್ರೂ ಹೇಳ್ತಾರೆ...

**ನಾರಾಯಣ** : ದೂರ ಅಟ್ರೊ, ಕೆಂಚನ್ನ... ನೀವಿಬ್ಬರಲ್ಲಿ ಯಾರು ಮಾಡಿದ್ರೂ ಸರಿ... ತಂಗಳು ಹೆಣ ಆಗೋದು ಬೇಡ.... ಸುತ್ತಮುತ್ತಲ ಜನ ಒಲೆಗೆ ಬೆಂಕಿ ಹಾಕ್ದೆ ನೆನ್ನೆಯಿಂದ ಕಾಯ್ತ ಅವರೆ... ನಾವೂ ಕೆಲ್ಸ ಕಾರ್ಯಗಳಿಗೆ ಹೋಗ್ಬೇಕು...

**ಯಜಮಾನ್ರು** : ನರಸಿಂಹಾ... ಗೋವಿಂದಾ... ಹೆಣಾನ ಮುಂದೆ ಇಟ್ಕೊಂಡು ಹಿಂಗೆ ಕಿತ್ತಾಡೋದು ಒಳ್ಳೇದಲ್ಲ... ಸತ್ತು ಸ್ವರ್ಗದಲ್ಲಿರೋ ರಂಗಪ್ಪನೋರಿಗೂ ಒಳ್ಳೇದಲ್ಲ... ನಿಮ್ಮಲ್ಲೇ ಒಂದು ತೀರ್ಮಾನಕ್ಕೆ ಬನ್ನಿ... ಒಬ್ಬರು ಮುಂದಕ್ಕೆ ಬನ್ನಿ...

**ನರಸಿಂಹ** : ಯಜಮಾನ್ರೆ... (ಜನಿವಾರ ತೀಡಿಕೊಂಡು) ಅವನಿಗೆ ಬುದ್ಧಿ ಇಲ್ಲ ಅಂದ್ರೆ, ನಿಮಗಾದ್ರೂ ಬುದ್ಧಿ ಬೇಡ್ವ ?... ನೂರಕ್ಕೆ ನೂರು ವಾರಸುದಾರ ನಾನು... ನಮ್ಮದು ನರಸಿಂಹದೇವರು ಒಕ್ಕಲು... ಅಂಗೆಲ್ಲ ಬಿಟ್ಟುಕೊಡೋಕೆ, ನಾನು ಅಲ್ಲಿಂದ ಇಲ್ಲಿಗೆ ಬಂದಿಲ್ಲ....

**ಗೋವಿಂದ** : (ಪಂಚೆಯನ್ನು ಎತ್ತಿಕಟ್ಟಿ) ನಂದೂ ಅದೇ ಒಕ್ಕಲು... ಅವರಿವರು ಹೇಳಿದಂಗೆ ಕೇಳೋಕೆ ನಾನೇನು ಕಿವಿಮೇಲೆ ಹೂವ ಇಟ್ಟುಕೊಂಡಿಲ್ಲ... ಚಿಕ್ಕಪ್ಪ ಅನ್ನೋ ಒಂದೇ ನಿಯತ್ತಿಗೆ ನಾನು ಬಂದಿದ್ದೀನಿ... ಅಣ್ಣನ ಮೇಲೆ ಎಂದೂ ಇಲ್ಲದ ಪ್ರೀತಿ ಇಂದು ಉಕ್ಕಿ ಹರಿಯೋದು ಯಾಕೆ ಅಂತ ನಂಗೊತ್ತೈತೆ....

**ನರಸಿಂಹ** : ಮುಚ್ಚೋ ಬಾಯಿ... ನಾಲ್ಗೆ ಹೋದಂಗೆ ಹರಿಬಿಡ್‌ಬ್ಯಾಡ... ನೀನ್ಯಾಕೆ ಬಂದೆ ಅಂತ ನಂಗೂ ಗೊತ್ತೈತೆ... ಜಾಸ್ತಿ ಮಾತಾಡ್ರೆ ಹಲ್ಲು ಉದುರಿಸಿಬಿಟ್ಟೇನು..

**ಗೋವಿಂದ** : ನಾನೇನು ಬಳೆ ತೊಟ್ಕೊಂಡಿಲ್ಲ... ಏನೋ... ತಂದೆ ಸಮಾನ ಅಂತ ಮರ್ಯಾದೆ ಕೊಟ್ರೆ.,.. ಬೇಲಿ ದಾಟಬಾರ್ದು... ಹೂ...

**ಯಜಮಾನ್ರು** : (ಎತ್ತರಿಸಿದ ದನಿಯಲ್ಲಿ) ನಮ್ಗೆ.... ನಿಮ್ಮ ಆಸ್ತಿ, ನಿಮ್ಮ ಹಕ್ಕು ಮುಖ್ಯವಲ್ಲ... ಬೇಗ ದಾನ ಕಾರ್ಯ ಮುಗಿಸಿದ್ರೆ, ಸುತ್ತಮುತ್ತಲ ಜನಕ್ಕೆ ಒಳ್ಳೇದು... ಬೇಗ ಯೋಚ್ನೆ ಮಾಡಿ... ಯೋಗ್ಯತೆ ಸಂಪಾದ್ನೆ ಮಾಡ್ಕೊಬೇಕು... ಯೋಗ್ಯತೆಗೆ ಕಿತ್ತಾಡಬಾರ್ದು... ವ್ಯವಹಾರವೆಲ್ಲಾ ತಿಥಿ-ವಾರವಾದ ಮೇಲೆ ಇಟ್ಕೊಳ್ಳಿ... ಬೆಟ್ಟದಂಗೆ ಕಮಲಮ್ಮನೋರು ಇದಾರೆ... ಅವರ್ನು ಒಂದು ಮಾತು ಕೇಳಿ.. ರಾಹುಕಾಲ ಬರೋದ್ರೊಳಗೆ ದಾರಿ ಮಾಡ್ಕೊಡಿ..

**ತಿಮ್ಮಣ್ಣ** : ಯಜಮಾನ್ರು ಹೇಳೋದು ನ್ಯಾಯವಾಗೇ ಐತೆ...

**ನಾರಾಯಣ** : ರಂಗಪ್ಪನೋರಿಗೆ ತಿಥಿ-ವಾರ ಮಾಡೋಕೆ ನಾಮುಂದು, ನಾಮುಂದು ಅಂತ ಬಂದಿರೋದು ಒಳ್ಳೇದು... ಹೆತ್ತ ಮಕ್ಕಳೇ ತಿಥಿ ಮಾಡ್ದ ಇರೋ ಕಾಲದಲ್ಲಿ ಇಬ್ಬರು ಮುಂದೆ ಬಂದಿರೋದು, ರಂಗಪ್ಪನೋರು ಎಂತೋರು ಅನ್ನೋದು ಗೊತ್ತಾಗತ್ತೈತೆ..... ನರಸಿಂಹಣ್ಣಾ... ನೀನು ದೊಡ್ಡೋನು. ಚಿಕ್ಕೋನಿಗೆ ಬಿಟ್ಟುಕೊಡು... ಕೆಲಸ ಸುಸೂತ್ರವಾಗಿ ಸಾಗಲಿ...

**ನರಸಿಂಹ** : ಲೋ... ನಾರಾಯಣ.... ನೀನ್ಯಾರೋ ನನಗೆ ಬುದ್ಧಿ ಹೇಳೋಕೆ ?... ಚಟ್ಟಕಟ್ಟೋ ಕೆಲಸ ಎಷ್ಟೋ ಅಷ್ಟು ನೋಡ್ಕೊ... ನಿನಗ್ಯಾಕೆ ನಮ್ಮ ಮನೆತನದ ಸುದ್ದಿ... ಬಂದ್‌ಬಿಟ್ಟ ದೊಡ್ಡದಾಗಿ ಬುದ್ಧಿ ಹೇಳೋಕೆ ?... ನಮ್ಮಣ್ಣ ನಾನು ಹ್ಯಾಂಗಿದ್ದಿವಿ ಅನ್ನೋದು ನಿನಗೇನೋ ಗೊತ್ತು ?... ಇನ್ನೊಬ್ಬರ ವಿಷಯದಲ್ಲಿ ತಲೆಹಾಕೋದು ಒಳ್ಳೇದಲ್ಲ...

**ಯಜಮಾನ್ರು** : ಇಲ್ಲಿ, ಯಾರು ಯಾರಿಗೂ ಬುದ್ಧಿ ಹೇಳೋಕೆ ಬಂದಿಲ್ಲ... ದಾಯಾದಿಗಳ ಹಕ್ಕನ್ನ ಕಿತ್ಕೊಳ್ಳೋಕೆ ನಾವ್ ಯಾರು ?... ಹೋಗ್ಲಿ... ಗೋವಿಂದ ನೀನಾದ್ರೂ ದೊಡ್ಡ ಮನಸ್ ಮಾಡಪ್ಪ... ದೇವರು ನಿನಗೆ ಒಳ್ಳೇದು ಮಾಡ್ತಾನೆ... ಅಲ್ಲಿ ಬಿದ್ದಿರೋ ಘಟಕ್ಕೆ ಯಾರು ಕರ್ಮಾಂತರ ಮಾಡಿದ್ರೂ ಒಂದೇ.... ಅದಕ್ಕೆ ಏನು ಗೊತ್ತಾಗುತ್ತೆ ?

**ಗೋವಿಂದ** : ನೀವು ದೊಡ್ಡೋರು.. ದೊಡ್ಡೋರಂಗೆ ಇದ್ದುಬಿಡಿ... ಈ ವಿಷಯಕ್ಕೆ ತಲೆ ಹಾಕ್‌ಬೇಡಿ... ಯಾವುದು ಸರಿ, ಯಾವುದು ತಪ್ಪು ಅನ್ನೋದನ್ನ ತಿಳಿಕೊಂಡೇ ಬಂದಿದ್ದೇನೆ...

**ಕೃಷ್ಣಾಚಾರ್ರು** : ಇಬ್ರೂ ಸೇರಿ ಒಂದು ಒಪ್ಪಂದಕ್ಕೆ ಬನ್ನಿ... ತಡ ಆದಷ್ಟೂ ಯಾರ್ಗೂ ಒಳ್ಳೇದಲ್ಲ... ನಿನ್ನೆಯಿಂದ ಅಕ್ಕಪಕ್ಕದ ಮನೇಲ್ಲಿ ಬೆಂಕಿ ಹಾಕಿಲ್ಲ... ರಂಗಪ್ಪನೋರು ಇದ್ದಾಗ ಯಾರ್ಗೂ ತೊಂದ್ರೆ ಕೊಡಲಿಲ್ಲ.. ಅವರ ಪಾರ್ಥಿವ ಶರೀರದಿಂದ ಏಕೆ ತೊಂದ್ರೆ ಉಂಟಾಗಬೇಕು ?...

**ಕೆಂಚ** : ಆಚಾರ್ಗೆ, ಭಟ್ಟರ ಹೋಟೆಲ್ ಇಡ್ಲೀನೇ ಗತಿ...

**ನಾರಾಯಣ** : ಸುಮ್ನೆ ಇರೋ ಕೆಂಚ...

**ತಿಮ್ಮಣ್ಣ** : ಯಾರಾದ್ರೂ ಪುರೋಹಿತರನ್ನ ಕರೆಸಿ... ಈ ಕಾರ್ಯ ಯಾರು ಮಾಡ್ಬೇಕು ಅನ್ನೋದನ್ನ ಕೇಳೋಣ... ಅವರು ಹೇಳಿದಂಗೆ ಆಗ್ಲಿ...

**ನರಸಿಂಹ** : ನಾನು ಪುರೋಹಿತರನ್ನ ಕೇಳಿಕೊಂಡೇ ಬಂದಿದ್ದೀನಿ...

**ಗೋವಿಂದ** : ನಾನೂ ಕೇಳಿಕೊಂಡೇ ಬಂದಿದ್ದೀನಿ...

**ತಿಮ್ಮಣ್ಣ** : ಯಾರು ಮಾಡ್ಬೇಕು ಅನ್ನೋದನ್ನ ದೇವರು ಹತ್ರ 'ಹೂ' ಕೇಳೋಣವೇ ?... ಗಣೇಶ ಗುಡಿ ಹತ್ತಿರ್ನೇ ಇದೆ...

**ನರಸಿಂಹ** : 'ಹೂ'ನೂ ಬೇಡ.. 'ಪಾ'ನೂ ಬೇಡ... ಕರ್ಮಾಂತರ ಮಾಡ್ಬೇಕಾದೋನು ನಾನು.. ನಾನು ಮಾಡ್ತೀನಿ..

**ಗೋವಿಂದ** : ಹಕ್ಕು ಇರೋದು ನಂಗೆ... ನಾನೇ ಮಾಡ್ತೀನಿ...

**ನಾರಾಯಣ** : (ಸ್ವಗತ) ರಂಗಪ್ಪನೋರು ಬದುಕಿದ್ದಾಗ ಸತ್ತರೋ, ಬದುಕಿದರೋ ಅಂತ ಬಂದು ನೋಡಲಿಲ್ಲ... ಈಗ ಹಕ್ಕು ಚಲಾಯಿಸೋಕೆ ಬಂದ್‌ಬಿಟ್ರು... ಇಬ್ಬರೂ ಬಂದಿರೋದು ಕರ್ಮಾಂತರಕ್ಕಂತೂ ಅಲ್ಲ... ಆಸ್ತಿ ಹಕ್ಕಿಗೆ... (ಪ್ರಕಾಶ) ಇನ್ನು ಹೊತ್ತಾಯಿತು... ಇನ್ನು ಅದಕ್ಕೆ ಸ್ನಾನ-ಗೀನ ಮಾಡ್ಸಿ.... ಎಲ್ಲ ರೆಡಿ ಮಾಡಿಕೊಳ್ಳಿ... ಏನೋ ಒಂದು ಇತ್ಯರ್ಥ ಆಗ್‌ತ್ತೈತೆ....

**ಕೆಂಚ** : (ಮುಂದಕ್ಕೆ ಓಡಿಬಂದು, ಜೋರಾಗಿ ಹೇಳಿ ಹಿಂದಕ್ಕೆ ಓಡಿ ಹೋಗ್ತಾನೆ)

ಪುರೋಹಿತರ್ನ ಕರ್ಸೊ ಬದಲು, ಪೋಲೀಸರನ್ನ ಕರೆಸಿದ್ರೆ ಬೇಗ ಇತ್ಯರ್ಥ ಆಗ್‌ತ್ತೈತೆ...

**ತಿಮ್ಮಣ್ಣ** : ಹಿಡುಕೊಳ್ರೋ ಅವ್ನ.... ತಲೆಹರಟೆ ನನ್ ಮಗನೆ.

**ಯಜಮಾನ್ರು** : (ಸ್ವಗತ) ಕೆಂಚ ಹೇಳೋದ್ರಲ್ಲೂ ನಿಜ ಅಯ್‌ತೆ. (ಪ್ರಕಾಶ) ನರಸಿಂಹ, ಗೋವಿಂದ, ಬೇಗ ಬೇಗ ಒಂದು ತೀರ್ಮಾನಕ್ಕೆ ನೀವೇ ಬನ್‌ರಪ್ಪಾ... ನಾರಾಯಣ ಗಡಿಗೆಲಿ ನೀರು ಕಾಯ್ತ ?....

**ಕೆಂಚ** : ರಂಗಪ್ಪನೋರು ಮಾಡಿದ ಒಳ್ಳೇ ಕೆಲಸಕ್ಕೆ ಗೋವಿಂದ... ಗೋಋಋವಿಂದ...

**ನಾರಾಯಣ** : ಯಾರು ಕರ್ಮಾಂತರ ಮಾಡಬೇಕು ಅನ್ನೋದನ್ನ ಕಮಲಮ್ಮನೋರೇ ಹೇಳಿಬಿಡ್ಲಿ...

**ಯಜಮಾನ್ರು** : ಅದು ಎಲ್ರೂ ಒಪ್ಪೋ ಮಾತು... ಏನಂತೀರಾ ? ಇನ್ನು ತಡ ಮಾಡೋದು ಬೇಡ...

**ನರಸಿಂಹ** : ನಮ್ಮ ಅತ್ತಿಗೇನ ಈ ವಿಷಯಕ್ಕೆ ಎಳೀಬೇಡಿ..

**ಗೋವಿಂದ** : ಈ ವಿಷಯ ಅವರಿಗೇನು ಗೊತ್ತಾಗೋದಿಲ್ಲ..

**ಚಂದ್ರಪ್ಪ**: ಅದೂ ನಿಜ.. ಅವರ ದುಃಖದಲ್ಲಿ ಅವರು ಇದ್ದಾರೆ. ಈ ಜಗಳಾನ ಅವರು ಎಂಗೆ ಫೈಸಲ್ ಮಾಡ್ತಾರೆ?..

**ಯಜಮಾನ್ರು** : ನಾವು ದಾನಕಾರ್ಯ ತಡಮಾಡಿದಷ್ಟು ರಂಗಪ್ಪನೋರಿಗೆ ಒಳ್ಳೇದಲ್ಲ... ಗರಬಡಿದಂಗೆ ಕೂತಿರೋ ಕಮಲಮ್ಮನಿಗೂ ಒಳ್ಳೇದಲ್ಲ... ಈ ತಕರಾರಿನಿಂದ ಅವರ ದುಃಖ ಹೆಚ್ಚಾಗುತ್ತೇ ಹೊರತು, ಕಡಿಮೆ ಆಗೊಲ್ಲ... ಈ ಹೆಣ್ಣಗಳಿಗೆ ಇಂತ ಕಷ್ಟ ಬರಬಾರದಿತ್ತು... ಹುಟ್ಟಿದ ಮನೆಗೆ, ಮೆಟ್ಟಿದ ಮನೆಗೆ ಮರ್ಯಾದೆ ತಂದ ಹೆಣ್ಮಗಳು... ಹೂ... ನಾಲ್ಕು ಜನರ ಮಾತು ಕೇಳೋದ್ರಿಂದ ಎಲ್ಲರಿಗೂ ಒಳ್ಳೇದಾಗೈತೆ...

**ಕೃಷ್ಣಾಚಾರ್ರು**: ರಂಗಪ್ಪನೋರಿಗೆ ಹಿಂಗೆ ಆಗಬಾರದಿತ್ತು.. ಅವರವರ ಪುಣ್ಯ ಅವರನ್ನ ಕಾಪಾಡುತ್ತೆ... ಬೇಗ ಒಂದು ಇತ್ಯರ್ಥಕ್ಕೆ ಬನ್ನಿ... (ಸ್ವಗತ) ಪಕ್ಕದಲ್ಲಿ ಹೆಣ ಇಟ್ಟುಕೊಂಡು ಒಂದು ಮಡಿಯಿಲ್ಲ, ಆಚಾರವಿಲ್ಲ..... ಇವರಿಬ್ಬರ ಜಗಳದಿಂದ ಎಲ್ಲರಿಗೂ ತೊಂದ್ರೆ... ಕಮಲಮ್ಮನೋರ ಗತಿ ಯಾರ್ಗೂ ಬೇಡ... ಹೆಣನ ಮುಂದೆ ಇಟ್ಟುಕೊಂಡು ಪಂಚಾಯ್ತಿ ಶುರು ಮಾಡವ್ರೆ... ಇವರು ಕಮಲಮ್ಮನೋರ್ನ ಬಹಳ ದಿವ್ಸ ಉಳಿಸೋಲ್ಲ..... (ಪ್ರಕಾಶ) ಕಾರ್ಪೊರೇಷನ್ ವ್ಯಾನ್‌ಗಾದ್ರೂ ಫೋನ್ ಮಾಡಿದ್ರೆ ಒಳ್ಳೇದು..



ನಂಜುಂಡಸ್ವಾಮಿ ಏನಂತಾರೆ ?
ಕುಡೀರಿ ಎಲ್ಲಾ ನೀರಾ
ಮುಂದಿನ ಗುರಿ ಏನು ಅವರ್ಗೆ
ಮುಖ್ಯಮಂತ್ರಿ ಛೇರಾ ?

ಅದು ಬರೋದ್ರಲ್ಲಿ ಸಮಸ್ಯೆ ಗಡಿ ಮುಟ್ಟಬಹುದು.

**ನರಸಿಂಹ** : ಏನ್, ಏನ್ ಆಚಾರ್ರೆ ನೀವ್ ಹೇಳೋದು... ನಮ್ಮಣ್ಣಂದು ಬೇವರ್ಸಿ ಹೆಣಾನಾ.... ಇಲ್ಲಿರೋ ಮಸಾಣಕ್ಕೆ, ಹೆಗಲು ಕೊಡಲು ನಾಲ್ಕು ಜನ ಸಿಗೊಲ್ವ ?... ದೊರೆಯಂಗೆ ಬದುಕಿದ ನಮ್ಮಣ್ಣಂಗೆ ದಿಕ್ಕುದೆಸೆಯಿಲ್ಲದೆ ದಾನ ಮಾಡೋದ ?.... ಕಾರ್ಪೊರೇಷನ್ ವ್ಯಾನ್ ಕರೆಸಬೇಕಂತೆ... ಕಾರ್ಪೊರೇಷನ್ ವ್ಯಾನ್....

**ಕೃಷ್ಣಾಚಾರ್ರು** : (ಕೈ ಮುಗಿದು) ಹೇಗೆ ಬೇಕಾದ್ರೂ ಮಾಡಿಕೊಳ್ಳಿ ಸ್ವಾಮಿ... ನೀವುಂಟು... ನಿಮ್ಮಣ್ಣನ ಹೆಣ ಉಂಟು... (ಪಕ್ಕಕ್ಕೆ ಸರಿದು) (ಸ್ವಗತ) ಬುದ್ಧಿ ಇದ್ದೋರಿಗೆ ಬುದ್ಧಿ ಹೇಳ್‌ಬೋದು, ....ಬುದ್ಧಿ ಇಲ್ಲದೋರಿಗೆ ಬುದ್ಧಿ ಹೇಳಬೋದು... ಇಬ್ಬಂದಿಗಳಿಗೆ ಬುದ್ಧಿ ಹೇಳೋದು ಒಂದೆ, ನಮ್ಮನ್ನು ನಾವು ಎಕ್ಕಡದಿಂದ ಹೊಡೆದು ಕೊಳ್ಳೋದು ಒಂದೆ. ಸ್ವಾರ್ಥ, ಸ್ವಾರ್ಥ ಮೊಟ್ಟೆ ಇಟ್ಟರೆ ಕಣ್ಣೂ ಕಾಣೋದಿಲ್ಲ... ಕಿವಿನೂ ಕೇಳೋದಿಲ್ಲ.. ಆಡೋ ಮಾತಿಗೆ ಹಿಂದೂ-ಮುಂದೂ ಇರೋದಿಲ್ಲ...

**ಗೋವಿಂದ** : ನಮ್ಮ ನಮ್ಮ ಸಂಪ್ರದಾಯದಂಗೆ ನಾವು ನಡೆಕೊಳ್‌ತೇವೆ... ಅವರಿವರ ಕೈಯಲ್ಲಿ ಹೇಳಿಸಿಕೊಂಡು ನಡೆಕೊಳ್ಳೋ ಜಾತಿಯಲ್ಲ ನಮ್ಮದು...

**ಕೃಷ್ಣಾಚಾರ್ರು** : (ಸ್ವಗತ) ಒಳ್ಳೇದಾಗ್ಲಿ ಅಂತ ಹೇಳಿದ್ದೇ ತಪ್ಪಾಯ್ತು.. ಸತ್ತೋರ್ಗೆ ಇದ್ದೋರ್ ಕಾಟ ತಪ್ಪಲಿಲ್ಲ.

(ಗೋವಿಂದ ಮತ್ತು ಅವನ ಕಡೆಯವರು, ನರಸಿಂಹ ಮತ್ತು ಅವನ ಕಡೆಯವರು ಬಿಟ್ಟು ಉಳಿದವರೆಲ್ಲಾ ಸೇರಿ ಗುಜು ಗುಜು ಮಾತಾಡಿಕೊಳ್ಳಲು ಪ್ರಾರಂಭಿಸುತ್ತಾರೆ. ಒಂದು ತೀರ್ಮಾನಕ್ಕೆ ಬಂದಂತೆ ಸೂಚನೆ ಕಂಡುಬರುತ್ತದೆ. ಅಷ್ಟರಲ್ಲಿ ಕೆಂಚ ರವಳುತ್ತಿರುವ ಬೆಂಕಿನ ಸರಿಮಾಡಿ, ಚಟ್ಟವನ್ನು ಒಮ್ಮೆ ನೋಡಿ,

ಚಟ್ಟ ಬಂದ್ರು ಹೆಣ ಇಲ್ಲ
ಹೆಣ ಬಂದ್ರು ಮಾಡೋರಿಲ್ಲ

ಆಚಾರ್ರ ಹೊಟ್ಟೆ ತುಂಬ್ಲೆ ಇಲ್ಲ.

ನಾರಾಯಣ ಕೆಂಚನನ್ನು ಅಟ್ಟಿಸಿಕೊಂಡು ಹೋಗುವನು)

**ಯಜಮಾನ್ರು** : ಹೋಗ್ಲಿ ಬಿಡು ನಾರಾಯಣ... ಅರೆ ಹುಚ್ಚನ ಮಾತೇನ್ ಒಂದು ಲೆಕ್ಕ.... ಮೊದ್ಲು ಆಗ ಬೇಕಾದ್ದು ಆಗ್ಲಿ... ನರಸಿಂಹ, ಗೋವಿಂದ... ಬನ್‌ರಪ್ಪ (ಅವರಿಬ್ಬರ ಹೆಗಲ ಮೇಲೆ ಕೈಹಾಕಿ) ನೋಡ್‌ರಪ್ಪಾ.... ಈ ಕೆಲಸಕ್ಕೆ ನೀವಿಬ್ಬರೂ ಹಕ್ಕುದಾರ್ರು.... ನಿಜ... ಇದರೊಳ್ಗೆ ನಮ್ಮ ತಕರಾರ್ ಏನೇನೂ ಇಲ್ಲ.. ಈಗ ಒಂದು ಕೆಲ್ಸ ಮಾಡಿ... ಇಬ್ಬರೂ ಕರ್ಮಾಂತರ ಮಾಡಿಬಿಡಿ.. ಮೊದಲು ದಾನದ ಕೆಲ್ಸ ಮುಗಿದ್ ಹೋಗ್ಲಿ... ಆಮೇಲೆ ನಾಲ್ಕು ಜನ ಕುಂತು ಮಾತಾಡೋಣ... ಆಗ ದೇವರು ಒಂದು ದಾರಿ ತೋರಿಸೇ ತೋರಿಸ್ತಾನೆ... ಏನಂತೀರಿ ?

**ನರಸಿಂಹ** : ಅಣ್ಣನಿಗೆ ತಮ್ಮ ಕರ್ಮಾಂತರ ಮಾಡ ಬೇಕಾದ್ದು ಧರ್ಮ... ಹಿಂದಿನಿಂದ ನಡೆದುಬಂದ ಸಂಪ್ರದಾಯ... (ಜನಿವಾರ ತೀಡಿಕೊಳ್ಳುತ್ತಾ)

**ಗೋವಿಂದ** : ಅಪ್ಪನಿಗೆ ಮಗ ಕರ್ಮಾಂತರ ಮಾಡ ಬೇಕಾದ್ದು ಧರ್ಮ... ಲಾಗಾಯತ್ತಿನಿಂದ ಬಂದ ಸಂಪ್ರದಾಯ. (ಜನಿವಾರ ತೀಡಿಕೊಳ್ಳುತ್ತಾ)

**ಕೆಂಚ** : ರಂಗಪ್ಪನೋರ್ಗೆ ಈಗ ಜನಿವಾರನೂ ಇಲ್ಲ... ಶಿವದಾರಾನೂ ಇಲ್ಲ... (ನಕ್ಕು) ಉಡುದಾರನೂ ಇಲ್ಲ... ಕಂಡೋರ್ ಆಸ್ತಿಗೆ ಕಿತ್ತಾಡೊದನ್ನ ನೋಡೋದೇ ಒಂದು ಚೆಂದ.... (ಮರೆಯಾಗುವನು) ರಂಗಪ್ಪನೋರ್ ಹೆಣಕ್ಕೆ ಜಿದ್ದಾ ಜಿದ್ದಿ ಕುಸ್ತಿ... ರಂಗಪ್ಪನೋರ್ ಗೋವಿಂದ..... ಗೋೀೀೀವಿಂದ...

**ನಾರಾಯಣ** : ಜಾಸ್ತಿ ಆಯ್ತು, ಜಾಸ್ತಿ ಆಯ್ತು... ಕೆಂಚನ ಗಲಾಟೆ. (ಸ್ವಗತ) ಯಾವ ಗಲಾಟೆ ಅಂತ ನೋಡೋದು... ಇಬ್ಬರಲ್ಲಿ ಒಬ್ಬರು ಒಂದೆಜ್ಜೆ ಇಳಿದು ಬಂದ್ರೆ ಏನಾದ್ರೂ ಮಾಡಬಹುದು.... ಕರ್ಮಾಂತರ ಮಾಡಿದೋರೆ ಆಸ್ತಿಗೆ ಹಕ್ಕುದಾರ್ರು ಅಂತ ಯಾರೋ ಇವರ ಕಿವಿಗೆ ಚೆನ್ನಾಗಿ ಊದಿಬಿಟ್ಟವರೆ...

**ಯಜಮಾನ್ರು** : ನಾವ್ಯಾರೂ, ನಿಮಗೆ ಬುದ್ಧಿ ಹೇಳೋಷ್ಟು ದೊಡ್ಡೋರಲ್ಲ... ಬೇಗ ಒಂದು ತೀರ್ಮಾನಕ್ಕೆ ಬಂದ್ ಬಿಡಿ.... ಕೆಲ್ಸ ಮುಗಿಸ್ ಬಿಡೋಣ... ಆಮೇಲೆ, ನೀವು ಉಂಟು, ಕಮಲಮ್ಮನೋರು ಉಂಟು... ಅದು ನಿಮ್ಮ ಮನೆ ವ್ಯವಹಾರ...

**ಕೆಂಚ** : ಬಂದ್ರು ಬಂದ್ರು ಲಾಯರ್ ಸಾಹೇಬ್ರು

ಬಂದ್ರು ಬಂದ್ರು ಲಾಯರ್ ಸಾಹೇಬ್ರು

(ವಕೀಲರ ಕೈಹಿಡಿದುಕೊಂಡು ಬರುವನು)

**ಯಜಮಾನ್ರು** : ನಮಸ್ಕಾರ ಬುದ್ಧಿ... ದೇವರ್ ಬಂದಂಗೆ ಬಂದ್ರಿ...

**ವಕೀಲರು** : ರಂಗಪ್ಪನೋರು ತೀರಿಕೊಂಡ ವಿಷಯ ಗೊತ್ತಾಯ್ತು.... ಕೋರ್ಟಿಗೆ ಹೋಗೋ ಮೊದಲು ನೋಡಿಕೊಂಡು ಹೋಗೋಣ ಅಂತ ಬಂದೆ... ಕಮಲಮ್ಮನೋರು ಹೆಂಗಿದಾರೆ ?...

**ಯಜಮಾನ್ರು** : ಅವರ ದುಃಖದಲ್ಲಿ ಅವರು ಮುಳುಗವ್ರೆ... ಈಗ ಬಂದಿರೋ ಸಮಸ್ಯೆನ ಬಗೆ ಹರಿಸ್ ಬೇಕಾಗ್ತೆತೆ....

**ವಕೀಲರು** : ಸಮಸ್ಯೆನೇ ಇಲ್ಲ... ಸಮಸ್ಯೆ ಇದೆ ಅಂತ ನೀವು ಅಂತೀರಿ....

**ಯಜಮಾನ್ರು** : ಇವನು ನರಸಿಂಹ, ರಂಗಪ್ಪನೋರ ತಮ್ಮ.. ಇವನು ಗೋವಿಂದ, ರಂಗಪ್ಪನೋರ ಅಣ್ಣನ ಮಗ.. ಇವರಿಬ್ಬರೂ ಕರ್ಮಾಂತರ ಮಾಡೋಕೆ ನಾಮುಂದು, ನಾಮುಂದು ಅಂತ ನಿಂತವರ್ರೆ... ಯಾರು ಕರ್ಮಾಂತರ ಮಾಡಬೇಕು ಅನ್ನೋ ಸಮಸ್ಯೆ ಬಗೆಹರಿದಿಲ್ಲ.. ರಾಹುಕಾಲ ಬೇರೆ ಬರ್‍ತಾ ಅಯ್ತೆ.... ಯಾರು ಮಾಡಬೇಕು ? ಯಾರು ಬಿಡಬೇಕು ಅನ್ನೋದನ್ನ ಕಾನೂನು ತಿಳಿದೋರು, ನೀವಾದ್ರೂ ಹೇಳಿ ಸ್ವಾಮಿ...

**ವಕೀಲರು** : ರಂಗಪ್ಪನೋರ ಕರ್ಮಾಂತರ ಯಾರು ಬೇಕಾದ್ರೂ ಮಾಡಬಹುದು.. ಹತ್ತಿರ ಬಂಧುಗಳು ಮುಂದೆ ಬಂದು ಮಾಡಿದ್ರೆ ಒಳ್ಳೇದು... ಇಲ್ಲದೆ ಹೋದ್ರೆ ನಮ್ಮ ಕೆಂಚ ಮಾಡಿದ್ರೂ ನಡೀತ್ಯೆತೆ... ಯಾವುದಕ್ಕೂ ಯಾವುದೂ ಸಂಬಂಧವಿಲ್ಲ....

**ಕೃಷ್ಣಾಚಾರ್ರು**: ಸ್ವಾಮಿ... ನೀವು ಕಾನೂನು ತಿಳಿದೋರು.. ಕಾನೂನು ರೀತೀಲ್ಲೆ ಮಾತಾಡ್ತೀರಾ ?... ದಾಯಾದಿಗಳಲ್ಲಿ ಯಾರು ಕರ್ಮಾಂತರ ಮಾಡಿದ್ರೆ ಸರಿ ?.. ಯಾರು ಕರ್ಮಾಂತರ ಮಾಡಿದ್ರೆ ತಪ್ಪು ?... ಅನ್ನೋದನ್ನ ನೇರವಾಗಿ ಹೇಳ್ ಬಿಡಿ... ಕೆಲಸ ಸುಸೂತ್ರವಾಗಿ ಸಾಗೋದು ಮುಖ್ಯ....

**ವಕೀಲರು** : ಆಗ್ಲೇ ಹೇಳಿದೆನಲ್ಲ... ಯಾರು ಬೇಕಾದ್ರೂ ಮಾಡಬಹುದು ಅಂತ... ಒಂದ್ನಿಮಿಷ ಇರಿ... ಕಮಲಮ್ಮನೋರ್ನ ನೋಡಿಕೊಂಡು ಬರ್‍ತೇನೆ. (ಒಳಕ್ಕೆ ಹೋಗುವರು)

(ಕೆಂಚ ವಕೀಲರ ಜೊತೆಲ್ಲಿ ಒಳಗೆ ಹೋಗಲು ಮುಂದಾಗುತ್ತಾನೆ. ಆಗ ಯಜಮಾನ್ರು ಅವನನ್ನು ತಡೆದು)

**ಯಜಮಾನ್ರು** : ಇಲ್ಲೇ ನಿಲ್ಲೋ ಕೆಂಚ. ನಿನಗೇನೋ ಕೆಲ್ಸ ಒಳ್ಗೆ... ನಮ್ಮ ತಾಪತ್ರಯ ನಮಗೆ... ಇವನಿಗೆ ಎಲ್ಲಾನೂ ಒಂದು ಆಟ...

**ನಾರಾಯಣ** : ಇವರು ಇನ್ನೇನು ಹೇಳ್ತಾರೋ....ಆ ಭಗವಂತನೇ ಬಲ್ಲ... ಒಟ್ನಲ್ಲಿ ಕೆಲ್ಸ ಆದ್ರೆ ಒಳ್ಳೇದು...

**ಚಂದ್ರಪ್ಪ** : ಕಾನೂನು ತಿಳಿದೋರು ಸರಿಯಾಗೇ ಹೇಳ್ತಾರೆ...

**ತಿಮ್ಮಣ್ಣ** : ಇಷ್ಟೋತ್ತ್ ಕಾದಿದ್ವಿ... ಇನ್ನೊಂದು ಎರಡು ನಿಮಿಷದಲ್ಲಿ ಜಗತ್ತೇನು ಮುಳುಗಿ ಹೋಗಲ್ಲ.. ಅವರು ಹೇಳದಂಗೆ ಕೇಳೋಣ.. ಏನ್‌ರಪ್ಪ.. ನರಸಿಂಹ, ಗೋವಿಂದ..

**ನರಸಿಂಹ** : ಅವರು ಹೇಳೋದೂ ಹೇಳ್ಲಿ.... ಆಮೇಲೆ ನೋಡೋಣ.....

**ಗೋವಿಂದ** : ಹೇಳೋದು ಬಿಡೋದು ಅವರ ಹಕ್ಕು... ಕೇಳೋದು ಬಿಡೋದು ನಮ್ಮ ಹಕ್ಕು...

**ಯಜಮಾನ್ರು** : ದೇವರೇ ದಾರಿ ತೋರಿಸ್ ಬೇಕು... ಕಷ್ಟ... ಬದುಕುದೋರ್ನು ಬಿಟ್ಟಿದ್ದಿಲ್ಲ, ಸತ್ತೋರ್ನೂ ಬಿಟ್ಟಿದ್ದಿಲ್ಲ.... ಹ....ಹ...

(ಅಷ್ಟರಲ್ಲಿ ವಕೀಲರು ಮತ್ತು ಕಮಲಮ್ಮನೋರು ನಿಧಾನವಾಗಿ ಹೊರಗೆ ಬರುತ್ತಾರೆ. ಕಮಲಮ್ಮನ ಹಿಂದೆ ಒಂದಿಬ್ಬರು ಹೆಂಗಸರು ಅವರನ್ನು ಹಿಡಿದು ಕೊಂಡಿದ್ದಾರೆ....ಅವರು ಸುಸ್ತಾದ ದನಿಯಲ್ಲಿ)

**ಕಮಲಮ್ಮ** : ಆಗೋ ಕೆಲಸಕ್ಕೆ... ಅಡ್ಡಿ ಮಾಡಬೇಡ್ರಿ... ವಕೀಲರು... ಹೇಳೋದನ್ನ ಹೇಳ್ತಾರೆ... ಕೆಲಸ ಮಾಡೋರು ಪುಣ್ಯ ಕಟ್ಟಿಕೋತಾರೆ... (ಮೇಲೆ ತೋರಿಸಿ) ಅವರಿಗೂ... ಒಳ್ಳೇದು... (ಎಲ್ಲರಿಗೂ ಕೈಮುಗಿದು ದುಃಖದಿಂದ ನಿಧಾನವಾಗಿ ಮನೆಯೊಳಕ್ಕೆ ಹೋಗುತ್ತಾರೆ)

**ವಕೀಲರು** : (ಕಮಲಮ್ಮನೋರು ಒಳಕ್ಕೆ ಹೋಗುವವರೆಗೂ ಕಾದು, ಅನಂತರ ಮಾತನಾಡುತ್ತಾರೆ. ಎಲ್ಲರ ಗಮನ ಅತ್ತ ಹರಿಯುತ್ತದೆ)

ರಂಗಪ್ಪನೋರು ಎರಡು ವರ್ಷದ ಹಿಂದೇನೇ ಉಯಿಲು ಬರೆಸಿ ರಿಜಿಸ್ಟರ್ ಮಾಡಿದ್ದಾರೆ... ಅದನ್ನ ರಿಜಿಸ್ಟರ್ ಮಾಡಿಸಿದೋನೆ ನಾನು... (ಗುಜುಗುಜು ಶಬ್ದವಾಗಿ ಮತ್ತೆ ಮೌನ) ಉಯಿಲು ಕಾಪಿನ ತಿಥಿ-ವಾರ ಆದ ಮೇಲೆ ತೋರಿಸೋಣ ಅಂತ ಇದ್ದೆ... ಉಯಿಲು ಇಷ್ಟನ್ನ ಖಚಿತವಾಗಿ ಹೇಳ್ತದೆ... ಕಮಲಮ್ಮನೋರು ಇರೋವರ್ಗೆ ರಂಗಪ್ಪನೋರ ಚಿರ-ಚರ ಆಸ್ತಿಗಳೆಲ್ಲಾ ಅವರಿಗೇ ಸೇರಿದ್ದು.... ಆದರೆ ಅವರಿಗೆ ಅದನ್ನ ಮಾರಾಟ ಮಾಡೋ, ಅಡವಿಡೋ ಹಕ್ಕು ಇಲ್ಲ... ಅದರಲ್ಲಿ ಬಂದದ್ದನ್ನ ಅನುಭವಿಸಬೋದು... ಯಾರಿಗೂ ದಾನವಾಗಿ ಕೊಡೋಂಗೂ ಇಲ್ಲ... ಕ್ರಯಕ್ಕೆ ಮಾರೋಂಗೂ ಇಲ್ಲ... ಕಮಲಮ್ಮನೋರ ನಂತರ ಇಡೀ ಆಸ್ತಿ ಮಲ್ಲೇಶ್ವರದ ಅನಾಥ ಸೇವಾಶ್ರಮಕ್ಕೆ ಸೇರುತ್ತೆ... ಯಾರು ರಂಗಪ್ಪನೋರ ತಿಥಿ, ಕಮಲಮ್ಮನೋರ ತಿಥಿ ಮಾಡ್ತಾರೋ ಅವರಿಗಾಗಿ ಒಂದು ಲಕ್ಷ ರೂಪಾಯಿ ಮೈಸೂರು ಬ್ಯಾಂಕ್‌ನಲ್ಲಿ ಇಟ್ಟಿದ್ದಾರೆ. ಅದರಿಂದ ಬರೋ ಬಡ್ಡಿಯಿಂದ ಪ್ರತಿವರ್ಷ ತಿಥಿ ಮಾಡ್ಬೇಕು... ಯಾರು ತಿಥಿ ಮಾಡೋಕೆ ಮುಂದೆ ಬರ್‍ದೆ ಹೋದ್ರೆ, ಆ ಬಡ್ಡಿ ಹಣ ಈ ಬೀದಿ ಕೊನೆಯಲ್ಲಿರೋ ವಿನಾಯಕನ ಗುಡಿಗೆ ಸೇರುತ್ತೆ... ವರ್ಷಕ್ಕೆ ಒಂದ್ಸಾರಿ ದಂಪತಿಗಳ ಹೆಸರಿನಲ್ಲಿ ಅನ್ನದಾನ ಮಾಡ್ ಬೇಕು ಅಂತ ತಿಳಿಸಿದ್ದಾರೆ... ಉಯಿಲು ನೋಡ್ಬೇಕು ಅನ್ನೋರು ಸಂಜೆ ನನ್ನ ಆಫೀಸಿಗೆ ಬಂದ್ರೆ ತೋರಿಸ್ತೀನಿ... ಬೇಕಾದ್ರೆ ಉಯಿಲಿನ ಒಂದು ಕಾಪಿನೂ ಕೊಡ್ತೀನಿ...

(ವಕೀಲರು ಇದನ್ನು ಹೇಳುತ್ತಿರುವಂತೆ ನರಸಿಂಹ ಮತ್ತು ಗೋವಿಂದ ತೆಗೆದಿದ್ದ ಷರಟನ್ನು ಹಾಕಿಕೊಂಡು ತಮ್ಮ ಜೊತೆಯವರೊಂದಿಗೆ ನಿರ್ಗಮಿಸುತ್ತಾರೆ. ಉಳಿದವರು ತದೇಕಚಿತ್ತದಿಂದ ವಕೀಲರ ಮಾತನ್ನು ಕೇಳುತ್ತಿರುತ್ತಾರೆ. ಕೆಂಚ ಬೆಂಕಿಯನ್ನು ಸರಿಮಾಡುತ್ತಿರುತ್ತಾನೆ. ಬೆಳಕು ನಿಧಾನವಾಗಿ ಕ್ಷೀಣಗೊಳ್ಳುತ್ತದೆ).

**ಯಜಮಾನ್ರು** : ಬಂದಿದ್ದ ದೊಡ್ಡ ಸಮಸ್ಯೆಯನ್ನು ರಂಗಪ್ಪನೋರೇ ಹೂ ಎತ್ತಿದಂಗೆ ಬಗೆಹರಿಸಿಬಿಟ್ರು... ದೊಡ್ಡೋರು ದೊಡ್ಡೋರೆ.. ಸಣ್ಣೋರು ಸಣ್ಣೋರೆ... ನಾರಾಯಣ ರೆಡಿ ಮಾಡು... ಎಲ್ರೂ ಒಂದ್ ಕೈ ಹಾಕಿ... ಹಾ... ಭಗವಂತನೇ ಬಗೆಹರಿಸ್ದ.

(ಬೆಳಕು ಇನ್ನೂ ಕ್ಷೀಣಗೊಂಡು ಚಟ್ಟದ ಮೇಲೆ, ಬೆಂಕಿ ಮೇಲೆ ಕೇಂದ್ರೀಕರಿಸುತ್ತೆ. ಒಂದೆರಡು ಕ್ಷಣ ಬಿಟ್ಟು ಬೆಂಕಿ ಹತ್ತಿರ ಇದ್ದ ಕೆಂಚ ಜೋರಾಗಿ ಕೂಗುತ್ತಾನೆ)

**ಕೆಂಚ** : ಕಾರ್ಪೊರೇಷನ್ ವ್ಯಾನ್ ಬಂತು.... ಕಾರ್ಪೊರೇಷನ್ ವ್ಯಾನ್ ಬಂತು... (ಸಂಪೂರ್ಣ ಕತ್ತಲೆ).

**ಚಿ. ಶ್ರೀನಿವಾಸರಾಜು**
೨೧(ಲ), 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ,
ಕೋದಂಡರಾಮಪುರ
ಮಲ್ಲೇಶ್ವರಂ, ಬೆಂಗಳೂರು-೫೬೦ ೦೦೩

# ಅಜ್ಜನ ಮನೆ ಅಂಗಳದಲ್ಲಿ ಕೊನೆ ಕೊಯ್ಲು

ಕಾರಿನಲ್ಲೋ, ಬಸ್ಸಿನಲ್ಲೋ ದೂರದ ಊರಿಗೆ ಪ್ರವಾಸ ಹೋಗುವಾಗ ಪ್ರಕೃತಿ ವೀಕ್ಷಣೆ ಸಹಜವಷ್ಟೆ! ಹಾಗೆ ಅಡಿಕೆ ತೋಟ ಕಣ್ಣಿಗೆ ಬಿತ್ತು ಅಂದರೆ... ವಿಚಿತ್ರವಾದ ಉದ್ವೇಗ ಪ್ರಾರಂಭವಾಗುತ್ತದೆ. ಅಡಿಕೆ ಮರಗಳು, ತೆಂಗಿನ ಮರಗಳಿಗಿಂತ ತೆಳ್ಳಗೆ, ನೇರವಾಗಿ ಹಸಿರು ಚೆಂಡೆ, ಸಿಂಗಾರಗಳು, ಹಸಿರು-ಕೆಂಪು ಅಡಿಕೆ ಕೊನೆಗಳಿಂದ ತಲೆದೂಗುವುದು ನನ್ನಲ್ಲಿ ಬೆರಗನ್ನು ಮೂಡಿಸುತ್ತ ಟೊಂಗೆಗಳಿಲ್ಲದ, ಹತ್ತಲು ಕಠಿಣವಾದ, ಒಳಗೆ ಪೊಳ್ಳಾದ ಈ ಅಡಿಕೆ ಮರಗಳು, ಅದರ ಫಲವಾದ ಅಡಿಕೆ ಎಷ್ಟು ವಿಚಿತ್ರ ಅಲ್ಲವೇ ? ಅಡಿಕೆಯು ಬಾಳೆ, ಮಾವು ಮುಂತಾದ ಹಣ್ಣಿನ ಮರದಂತೆಯೂ ಅಲ್ಲ, ಅಕ್ಕಿ, ಗೋಧಿ, ಜೋಳದಂತ ಆಹಾರ ಪದಾರ್ಥವೂ ಅಲ್ಲ, ಔಷಧ ಮುಕ್ತವಾದ ತಿನಿಸೂ ಅಲ್ಲ. ಕಾಫಿ, ಟೀ ಅಂತಹ ಪಾನೀಯದ ಗಿಡವೂ ಅಲ್ಲ, ಕೆಲಕಾಲ ಬಾಯಲ್ಲಿ ಆಡಿಸಿ, ಉಗುಳುವ ಈ ಅಡಿಕೆಗೆ ಎಷ್ಟು ಮಹತ್ವ ಇದೆ ಎಂದು ಅಚ್ಚರಿ ಮೂಡುತ್ತದೆ.

ಅಡಿಕೆ ಮರದ ತುದಿಗೆ ಏರಿದ ಮನಸ್ಸು ಹಾರು - ಹಾರುತ್ತ ನಲವತ್ತು ವರ್ಷಗಳ ಹಿಂದಿನ, ಅಜ್ಜನ ಮನೆಯ ಅಡಿಕೆ ತೋಟವನ್ನು ತಲುಪುತ್ತದೆ. ಅಜ್ಜನ ಮನೆ ಅಡಿಕೆ ತೋಟ ಹೇಗಿತ್ತು ? ಎಲ್ಲಿತ್ತು ? ಎನ್ನುವುದನ್ನು ಹೇಳುವ ಮೊದಲು, ಅಜ್ಜನ ಮನೆ ಬಗ್ಗೆ ಹೇಳಲೇಬೇಕಲ್ಲವೇ ?

ಈಗಂತೂ ಅತಿ ಯಾಂತ್ರಿಕತೆ - ಅತಿ ನಾಗರೀಕರಣದ ಪರಿಣಾಮವಾಗಿ ಹಳ್ಳಿಗಳು ನಾಶವಾಗುತ್ತಿವೆ. ಹಳ್ಳಿಗಳಲಿಯೂ ತಮ ಬೇರುಗಳನು ಕಳಚಿಕೊಂಡು ನಗರ ಸೇರಿದ, ಪರದೇಶ ಸೇರುವ ವಿಭಕ್ತ ಕುಟುಂಬಗಳೇ ಹೆಚ್ಚಾಗುತ್ತಿವೆ. ಅಮೆರಿಕಾದಿಂದ ವರ್ಷ - ಎರಡು ವರ್ಷಕ್ಕೊಮ್ಮೆ ಭಾರತಕ್ಕೆ ಬರುವ ಮೊಮ್ಮಕ್ಕಳಿಗೆ ಅಜ್ಜ-ಅಜ್ಜಿಯ ಪರಿಚಯ ಹಾಗಿರಲಿ, ಭಾರತಕ್ಕೆ ಬಂದೊಡನೆ ನೆಗಡಿ-ಕೆಮ್ಮು ಪ್ರಾರಂಭವಾಗಿ ಎಲ್ಲರಿಗೂ ಗೋಳಾಗುತ್ತದೆ. ಇಂಥ ಸಂಕೀರ್ಣವಾದ ಕಾಲದಲ್ಲಿ ಅಜ್ಜನ ಮನೆ, ಅಜ್ಜ-ಅಜ್ಜಿಯರ ವಾತ್ಸಲ್ಯ, ಹಬ್ಬಗಳ ರಜಾ ಕಾಲ, ಬೇಸಿಗೆ ರಜೆಗಳಲ್ಲಿ ಹಳ್ಳಿಯಲ್ಲಿರುವ ಅಜ್ಜನ ಮನೆಗೆ ಓಡುವ ಸೌಭಾಗ್ಯ ಈಗಿನ ಮಕ್ಕಳಿಗೆಲ್ಲಿ? ಹೀಗಿರುವಾಗ ಹಳ್ಳಿಯ ಅಜ್ಜನ ಮನೆ ಹಲವರ ಪಾಲಿಗೆ ಕಲ್ಪನೆಯ ಚಿತ್ರವಾಗಿ ಕಾಣಬಹುದು. ನನ್ನ ಸಮವಯಸ್ಕ ಹಿರಿಯರಿಗೆ, ಅವರಿಗೂ ನನ್ನ ಅಜ್ಜನ ಮನೆಯಂತೆ ಅಜ್ಜನ ಮನೆಗಳಿದ್ದರೆ ಅದರ ನೆನಪು ಮತ್ತೆ ಜಾಗೃತವಾಗಬಹುದು. ಇಂದಿನ ಕಿರಿಯರೂ ನನ್ನ ಅಜ್ಜನ ಮನೆ ಅಂಗಳದಲ್ಲಿ ಆಡುವಂತಾಗಲಿ ಎಂದುಕೊಳ್ಳುತ್ತೇನೆ.

ಉತ್ತರ ಕನ್ನಡ ಜಿಲ್ಲೆಯ ಶಿರ್ಶಿಯ ಸಮೀಪ, ಅಂದರೆ ಊರಿನಿಂದ ೪-೫ ಕಿ.ಮೀ. ದೂರದ, ''ಹೂವಿನ ಹಳ್ಳಿ'' ನನ್ನ ಅಜ್ಜನ ಮನೆ. ಅದಕ್ಕೆ ನಿಜವಾದ ಬೇರೆ ಹೆಸರಿದೆ. ಆದರೆ ಸದಾ ಮಂದಾರ, ಪಾರಿಜಾತ, ಅಶೋಕ, ಸಂಪಿಗೆ, ನಾಗಸಂಪಿಗೆ, ದಾಸವಾಳ, ಕಬ್ಬಾವರ, ಗೊರಟಗೆ, ಮೀಸೆ ಗಂಟಿಗೆ, ಸುರಗೀ ಹೂವುಗಳಿಂದ ತುಂಬಿದ ಆ ಹಳ್ಳಿ ನನ್ನ ಪಾಲಿಗೆ ಹೂವಿನ ಹಳ್ಳಿ - ಹೂಹಳ್ಳಿ-ಹೂವಳ್ಳಿ. ಈಗಲೂ ಒಂದು ಕ್ಷಣ ಕಣ್ಣು ಮುಚ್ಚಿ ಆ ದಿನಗಳನ್ನು ನೆನೆದರೆ ಮಧುರ ಪರಿಮಳ ನನ್ನ ಮೂಗು ಸೇರಿ ಮತ್ತೇರುತ್ತದೆ.

ನಿಮಗೆ ಆಶ್ಚರ್ಯವಾಗಬಹುದು. ಬೆಂಗಳೂರಿನ ಲಾಲ್‌ಬಾಗ್‌ನ ರೂವಾರಿ ಡಾ|| ಮರಿಗೌಡರು, ನಾನು ಸಣ್ಣವಳಿದ್ದಾಗ ನನ್ನ ಅಜ್ಜನ ಮನೆಗೆ ಬಂದಿದ್ದರು. ನಮ್ಮ ಅಜ್ಜ ಕಾಂಗ್ರೆಸ್ ಮುಖಂಡರೂ, ಸಮಾಜ ಸೇವಕರೂ, ಡಿಸ್ಟ್ರಿಕ್ಟ್ ಡೆವಲಪ್‌ಮೆಂಟ್ ಬೋರ್ಡಿನ ಸೆಕ್ರಟರಿಯೂ ಆಗಿದ್ದವರು. ಅಜ್ಜನ ಮನೆಯ ಹೂಗಳ ರಾಶಿ, ಸಸ್ಯ ಸಂಪತ್ತು ನೋಡಿ ನಮ್ಮ ಅಜ್ಜಿಯನ್ನು ಕಂಡು ಕೈ ಮುಗಿದು ''ತಾಯಿ, ಇದು ಪುಷ್ಪಕಾಶಿ, ನೀವು ಲಾಲ್‌ಬಾಗ್ ನೋಡಬೇಕಾಗೇ ಇಲ್ಲ'' ಎಂದು ಉದ್ಗಾರ ತೆಗೆದಿದ್ದರು ! ಅಲ್ಲದೇ ಅಜ್ಜನ Visitor's Bookನಲ್ಲಿ ''ದೇವಾಲಯವೀ ಹೂವಿನ ತೋಟ'' ಅಂತ ಬರೆದು ಸಹಿ ಹಾಕಿದ್ದರು. ಪ್ರಚಾರ ಪ್ರಿಯರಲ್ಲದ, ಗಿಡ-ಮರಗಳನ್ನು ತಮ್ಮ ಜೀವನದ ಅವಿಭಾಜ್ಯ ಅಂಗಗಳೆಂದೇ ಭಾವಿಸಿದ್ದ, ಅಜ್ಜ-ಅಜ್ಜಿಗೆ ಇದೆಲ್ಲ ಪತ್ರಿಕೆಗಳಲ್ಲಿ ಪ್ರಕಟಿಸಿ ಹೆಸರು ಗಳಿಸುವ ಹಂಬಲವಿರಲಿಲ್ಲ. ಅಂತೂ ನನ್ನ ಅಜ್ಜನ ಮನೆಗೆ ನಾನು ಇಟ್ಟುಕೊಂಡ ಹೆಸರು ಹೂವಳ್ಳಿ, ಎಷ್ಟು ಸಮರ್ಪಕ ಎನ್ನುವುದಕ್ಕೆ ಇದನ್ನೆಲ್ಲ ಹೇಳಬೇಕಾಯಿತು.

**ವಿಜಯಾ ಶ್ರೀಧರ್**



ಶಿರ್ಶಿಯಿಂದ ಅಜ್ಜನ ಮನೆಗೆ ಹೋಗುವ ದಾರಿ ಆ ಹಳ್ಳಿಗೇ ಕೊನೆಯಾಗುತ್ತದೆ. ಅಲ್ಲಿಂದ ಬೇರೆ ಊರುಗಳಿಗೆ ಹೋಗುವುದಾದರೆ ಮತ್ತೆ ಅದೇ ದಾರಿಯಲ್ಲಿ ತಿರುಗಿ ಶಿರ್ಶಿಗೆ ಬರಬೇಕು. ಹೋಗುವ ದಾರಿಯಲ್ಲಿ ಸಮೃದ್ಧವಾದ ಕಾಡು ಆಗ ಇತ್ತು ! ಈಗ ಮುಕ್ಕಾಲು ಪಾಲು ಕಾಂಕ್ರೀಟು ಕಾಡು ಬೆಳೆದಿದೆ. ದಾರಿಯ ಇಕ್ಕೆಲದಲ್ಲಿ ಕವಳೀ, ಸಂಪಿಗೆ, ಹಣ್ಣಿನ ಗಿಡ, ನೆಲ್ಲಿಕಾಯಿ, ಬಿಕ್ಕೆ ಹಣ್ಣಿನ ಪೊದೆಗಳು. ನಮ್ಮ ಅಮ್ಮ ಸಣ್ಣವಳಿದ್ದಾಗ ಹುಲಿ, ಚಿರತೆ ಓಡಾಡುತ್ತಿದ್ದವಂತೆ ! ನಾನು ಸಣ್ಣವಳಿದ್ದಾಗ ಮೊಲ-ನರಿ-ಕಾಡು ಬೆಕ್ಕು, ಕೇಸಾಳ ಮುಂತಾದ ಪ್ರಾಣಿಗಳು ಓಡಾಡುತ್ತಿದ್ದವು. ಈಗ ಕುರಿ-ಕೋಳಿ-ನಾಯಿಗಳು ಮಾತ್ರ ಓಡಾಡುತ್ತವೆ.

ಮಲೆನಾಡಿನಲ್ಲಿ ಅಡಿಕೆ ತೋಟಕ್ಕೆ ಬೇಕಾಗುವ ಸೊಪ್ಪು -ಸದೆಗಾಗಿ ತೋಟದ ಸುತ್ತಲಿನ ಬೆಟ್ಟ-ಗುಡ್ಡ-ಕಾಡು ಆ-ಆ ರೈತರಿಗೇ ಸೇರಿರುತ್ತದೆ. ಹಾಗಾಗಿ ಅಜ್ಜನ ಮನೆಗೆ ಸೇರುವ ೧ ಕಿ.ಮೀ. ಮೊದಲೇ ಅಜ್ಜನಿಗೆ ಸೇರಿದ ಗೇರು-ಮಾವು-ನೇರಳೇ ಹಣ್ಣಿನ ಮರಗಳು, ನೆಲ್ಲಿಮುತ್ತುಗ-ಮುರುಗಲ ಮರಗಳೂ ತುಂಬಿದ್ದ ಬೆಟ್ಟ ಸಿಗುತ್ತಿತ್ತು. ಬೆಟ್ಟದ ಮಧ್ಯೆ ಇಳಿಜಾರಾದ ಪುಟ್ಟ ಮಣ್ಣಿನ ದಾರಿಯಲ್ಲಿ ಬೀಳುತ್ತ - ಏಳುತ್ತ ಹೋಗುವಾಗಲೂ ದಿವ್ಯಾನಂದವಾಗುತ್ತಿತ್ತು. ಕಾಲಕ್ಕೆ ತಕ್ಕಂತೆ ಬಿಡುತ್ತಿದ್ದ ಹಣ್ಣುಗಳ ರಾಶಿ, ಹೂಗಳ ಪರಿಮಳ, ಹಕ್ಕಿಗಳ ಚಿಲಿಪಿಲಿ, ಪ್ರತಿ ಬಾರಿಯ ಪ್ರಮಾಣವನ್ನೂ ಹೊಸದನ್ನಾಗಿ ಮಾಡುತ್ತಿತ್ತು.

ಬೆಟ್ಟ ಇಳಿದಾಗ ವಿಶಾಲವಾದ ಬಯಲು ಜಾಗದಲ್ಲಿ ದೊಡ್ಡ ಅರಮನೆಯಂಥ ಅಜ್ಜನ ಮನೆ. ಹೂಗಳ ರಾಶಿಯ ಮಧ್ಯೆ ಕೆಂಪು ಹೆಂಚಿನ ಆ ದೊಡ್ಡ ಮನೆ ನನಗಂತೂ ಗಗನಕ್ಕೆ ನೆಗೆಯಲು ಸಿದ್ಧವಾದ ರೆಕ್ಕೆ ಬಿಚ್ಚಿದ ದೇವೇಂದ್ರನ ಪುಷ್ಪಕ ವಿಮಾನದಂತೆ ತೋರುತ್ತಿತ್ತು.

ಪೂರ್ವದಿಕ್ಕಿಗೆ ಮುಖ ಮಾಡಿದ್ದ ಮನೆಯ ಮುಂದೆ ದೊಡ್ಡ ಅಂಗಳ, ಅದರ ಮುಂದೆ ನಾವು ಇಳಿದು ಬಂದ ಬೆಟ್ಟದ ದಾರಿ, ಬಲಬದಿಗೆ ಆಳದಲ್ಲಿ ಹರಿಯುತ್ತಿದ್ದ ಹಳ್ಳ, ಹಳ್ಳವನ್ನು ಸಂಕದಿಂದ ದಾಟಿದರೆ (ಸಂಕವೆಂದರೆ ಅಡಿಕೆ ಮರ ಸೀಳಿ ಮಾಡಿದ ಸೇತುವೆ) ಅಡಿಕೆ, ಬಾಳೆ, ಮೆಣಸಿನ ಬಳ್ಳಿ, ಏಲಕ್ಕಿ, ಕಂಚಿ ಮೊದಲ ಮರಗಳು ತುಂಬಿದ ತೋಟ. ತೋಟದ ಮಧ್ಯೆ ಚೌಡಿ ಕೆರೆ, ಇನ್ನೊಂದು ಬದಿಗೆ ಕಿರು ತೊರೆ, ಅದರಾಚೆ ಕರಡದ ಬ್ಯಾಣ. ಬೆಟ್ಟದಲ್ಲಿ ಬೆಳೆಯುವ ಒಂದು ಜಾತಿಯ ಹುಲ್ಲಿಗೆ ಕರಡ ಅನ್ನುತ್ತಾರೆ. ಈ ಕರಡ ಬೆಳೆಯುವ ಜಾಗ ಬ್ಯಾಣ. ಕರಡ ದನ-ಕರುಗಳಿಗೆ ಅತ್ಯುತ್ತಮ ಮೇವು.

ಅಜ್ಜನ ಮನೆಯ ಎಡಪಕ್ಕದಲ್ಲಿ ಎತ್ತರದ ದರೆ. ಅಲ್ಲಿ ಮೇಲೆ ಹತ್ತಾರು ಆಕಳು-ಎಮ್ಮೆ- ಎತ್ತು- ಹೋರಿಗಳ ಕೊಟ್ಟಿಗೆ. ಮನೆಯ ಹಿಂದೆ ಮತ್ತೆ ಬೆಟ್ಟ. ಆ ಬೆಟ್ಟ ಅಜ್ಜನ ದಾಯಾದಿ ಗಳದ್ದು, ಅದರಾಚೆ ಅಜ್ಜನಿಗೆ ಸೇರಿದ್ದ ಗದ್ದೆ, ಗದ್ದೆಯ ನೀರಿಗಾಗಿ ಎರಡೂ ಸೀಮೆಯಲ್ಲಿ ದೊಡ್ಡ ಹೊಳೆಗಳಿದ್ದವು. ನೇರಳೆ, ನೆಲ್ಲಿಕಾಯಿ ಗಿಡಗಳಿಂದ ತುಂಬಿದ್ದ ಬೆಟ್ಟ, ಕೇದಿಗೆ ವನಗಳಿಂದ ತುಂಬಿದ್ದ ಹೊಳೆ ಅಂಚು, ನಮಗೆ ಅಂದರೆ ನನ್ನ ಅಣ್ಣ - ತಮ್ಮ - ಅಕ್ಕ- ಸ್ನೇಹಿತರಿಗೆ ಬಹು ಆಕರ್ಷಣೀಯ. ಆದರೆ ಭಯವೂ, ನಿಗೂಢವೂ ಆಗಿದ್ದ ತಾಣವಾಗಿತ್ತು.

ಈ ಅಜ್ಜನ ಮನೆ ಅಂಗಳದಲ್ಲಿ ನಾವು ಆಡದ ಆಟವಿಲ್ಲ. ಎಷ್ಟೊಂದು ಅನುಭವಗಳ ಕಣಜವಾಗಿತ್ತು. ಆ ಅಂಗಳ ದೀಪಾವಳಿ ಹಬ್ಬದ ಹೊತ್ತಿಗೆ ವಿಶಾಲವಾದ ಅಂಗಳದಲ್ಲಿ ಅಡಿಕೆ ದಬ್ಬೆಗಳಿಂದ ಚಪ್ಪರ ಹಾಕುವ ಸಂಭ್ರಮ ಪ್ರಾರಂಭವಾಗುತ್ತಿತ್ತು. ಹೂವಿನ ಗಿಡಗಳು ಹಾಳಾಗಬಾರದು ಎಂದು ಅಜ್ಜಿಯ ಆಸೆ. ಹಾಗಾಗಿ ಆಳುಗಳು ಗಟ್ಟಿಮುಟ್ಟಾದ ಮರದ ಕಂಬಗಳ ಮೇಲೆ, ಅಡಿಕೆ ದಬ್ಬೆ, ಬಿದಿರಿನ ತಟ್ಟಿ, ಕರಡ ಎಲ್ಲ ಸೇರಿ ಅಚ್ಚುಕಟ್ಟಾದ ಚಪ್ಪರ ಹಾಕುತ್ತಿದ್ದರು. ಈ ಚಪ್ಪರ ನೆರಳಿಗೂ ಸರಿ, ಅಡಿಕೆ ಒಣಗಿಸಲೂ ಬೇಕು. ದೊಡ್ಡ ಹಬ್ಬ ಮುಗಿಯುತ್ತಿದ್ದಂತೆ, ಅಂಗಳ ನಾನಾ ಕೆಲಸ ಕಾರ್ಯಗಳಿಂದ ಗಿಜಿಗುಟ್ಟುತ್ತಿತ್ತು.

ಶೇರೆಗಾರ ಗಂಡ-ಹೆಂಡತಿ ಬಿದಿರಿನ ಬುಟ್ಟಿ, ತಟ್ಟಿ ಸರಿಮಾಡುತ್ತ ಒಂದೆಡೆ ಕುಳಿತರೆ, ಕೊನೆ ಕೊಯ್ಲಿಗೆ ಸಿದ್ಧತೆಯಲ್ಲಿ ಮುಕ್ರಿ ಆಳುಗಳು ಇನ್ನೊಂದೆಡೆ, ಅಡಿಕೆ ಸುಲಿಯುವ ಮೆಟ್ಟುಕತ್ತಿಗಳು, ಸಾವಿರದ ಬುಟ್ಟಿ, ಅಡಿಕೆ ಬೇಯಿಸುವ ಹಂಡೆ, ಒಲೆ, ಸೌದೆ ರಾಶಿ, ಅಡಿಕೆಗೆ ಬಣ್ಣ ಹಾಕಲು ಚೊಗರು, ... ಒಂದೇ... ಎರಡೇ ಕೆಲಸ. ಎಲ್ಲ ಸಿದ್ಧವಾದರೂ, ಕೊನೆ ಕೊಯ್ಲಿನ ಸೂತ್ರಧಾರ ಬರಬೇಕಲ್ಲ! ಅವನೇ ಕೊನೇಗೌಡ 'ಊರಿಗೊಬ್ಬಳು ಪದ್ಮಾವತಿ' ಎನ್ನುವಂತೆ ಆ ಹಳ್ಳಿಗೆಲ್ಲ ಘಟ್ಟದ ಕೆಳಗಿನ ರಾಮೇಗೌಡನೊಬ್ಬನೇ ಕೊನೆಗೌಡ. ಹಾಗಾಗಿ ೩-೪ ತಿಂಗಳ ಮೊದಲೇ ಮುಂಗಡ ಕೊಟ್ಟು, ಅವನ ಮರ್ಜಿ ಕಾಯಬೇಕಿತ್ತು. ಕೊನೇ ಗೌಡನ ನಂತರದ ಸ್ಥಾನ, ಅಡಿಕೆ ಸುಲಿಯುವ ಹೆಂಗಸರದು. ಪೇಟೆಯಿಂದ ಬಂದ ಚಮಗಾರ ಹೆಂಗಸರು (ಈಗ ನಲವತ್ತು ವರ್ಷಗಳ ಹಿಂದೆಯೇ, ಗಾಂಧೀಜಿಯವರ ಪ್ರಭಾವದಿಂದ ಈ ಚಮಗಾರರಿಗೆ ಹರಿಜನರು ಎನ್ನಬೇಕು ಎನ್ನುವ ಕಲ್ಪನೆ ಅಜ್ಜ ನಮಗೆ ಹೇಳಿಕೊಟ್ಟಿದ್ದರು). ಚಮಗಾರ ಹೆಂಗಸರನ್ನು ಆಗಿನ ಮಡಿ ವಾತಾವರಣದಲ್ಲಿ ಮುಟ್ಟುವಂತಿರಲಿಲ್ಲ. ಆದರೆ ನನ್ನ ಬಾಲ್ಯದ ಕಣ್ಣಿಗಂತೂ ಹಳ್ಳಿಯ ಈ ಮಂದಿ ನಮಗಿಂತ




ಹೆಚ್ಚು ಸುಂದರರೂ, ಜಾಣೆಯರೂ, ಮಾತಿನ ಚತುರತೆಯರೂ ಆಗಿದ್ದರು. ಹಾಗಾಗಿ ಚಮಗಾರ ಹೆಂಗಸರು ಎಂದು ಕರೆದ ಮಾತ್ರಕ್ಕೆ ಅವರನ್ನು ಅಗೌರವಿಸದಂತೆ ಆಗಬೇಕಿಲ್ಲ. ಈ ಹೆಂಗಸರಿಗೆ ಎಷ್ಟೊಂದು ಸುಂದರ ಹೆಸರುಗಳು: ಭೂಮಿ, ಕರೆದೇವಿ, ಚೌಡಿ, ದೇವಿ, ಮಸಣ, ಮಾರಿ ಇತ್ಯಾದಿ. ಅಜ್ಜ ಹೋಗಿ ಈ ಹೆಂಗಸರ ಗುಂಪಿನ ಒಡತಿಗೆ ಸ್ವಲ್ಪ ಹಣ ಕೊಟ್ಟು ಇಂಥ ದಿನ ಬರುವಂತೆ ಹೇಳಿ ಬರುತ್ತಿದ್ದರು.

ಕೊನೆ ಕೊಯ್ಲು ದಿನ ಬೇಗ ಬೆಳಗಾಗುತ್ತಿತ್ತು. ರಾತ್ರಿ ಮಕ್ಕಳೆಲ್ಲ ಮಲಗಿದ ಮೇಲೆ ಬಂದು, ಅಜ್ಜನ ಮನೆಗೆ ತಾಗಿದ್ದ ಓರಿಯಲ್ಲಿ (ಈಗಿನ ಔಟ್ ಹೌಸ್ ಎನ್ನೋಣವೇ ?) ಮಲಗಿರುತ್ತಿದ್ದ. ಬೆಳಗ್ಗೆ ಅವನಿಗಾಗಿ ಹತ್ತಾರು ದೋಸೆ, ಚಟ್ನಿ, ಒಂದು ಕೊಳಗದ ತುಂಬಾ ಚಾ ಸಿದ್ಧವಾಗಬೇಕಿತ್ತು. ಅಜ್ಜಿ-ಅಮ್ಮ ಅಡಿಗೆ ಭಟ್ಟರು ಇಗ್ಗಪ್ಪಣ್ಣ ಅವನಿಗೆ ಬಡಿಸುತ್ತಿದ್ದರೆ, ನಾವು ತಗ್ಗಿ-ಬಗ್ಗಿ-ಅಡಗಿ ಅವನನ್ನು ನೋಡುತ್ತಿದ್ದೆವು. ಯಾಕೆ ಅಂತೀರಾ ? ಅವನು ಹೇಗಿದ್ದ ಅಂದರೆ ದೊಡ್ಡ ಬಡಕಲು ಹುಲಿಯ ಹಾಗೆ ! ಎಲುಬು ಕಾಣುವ ಬಡಕಲು, ಎತ್ತರದ ಬಾಗಿದ ಶರೀರ, ಕೆಂಪು ಕಣ್ಣುಗಳು, ಗೊಗ್ಗರು ಧ್ವನಿ, ಮಧ್ಯೆ ಮಧ್ಯೆ 'ಹುಂ' ಎಂದು ತೇಗುತ್ತಿದ್ದ. ದೊಡ್ಡ ಬಿಳಿ-ಕಪ್ಪು ಮೀಸೆಯ ಕೊನೇಗೌಡನನ್ನು ಕನಸಿನಲ್ಲಿ ಕಂಡರೂ ಪುಟ್ಟ ಮಕ್ಕಳು ಉಚ್ಚೆ ಹೊಯ್ದುಕೊಳ್ಳುತ್ತಿದ್ದರು. ಸೊಂಟಕ್ಕೆ ಸದಾ ನೇತು ಹಾಕಿಕೊಂಡಿರುತ್ತಿದ್ದ ದೊಡ್ಡ ಹರಿತವಾದ ಕತ್ತಿ (ಅಡಿಕೆ ಕೊನೆ ಕತ್ತರಿಸುವುದು) ಎಲ್ಲಿ ನಮ್ಮ ತಲೆಯನ್ನು ಕತ್ತರಿಸುತ್ತದೋ ಎನ್ನುವಷ್ಟು ಭಯಂಕರವಾಗಿ ಕಾಣುತ್ತಿತ್ತು ನಮಗೆ ಮಕ್ಕಳಿಗೆ !

ಒಂದು ವರ್ಷ ಕೊನೆ ಕೊಯ್ಲಿನಲ್ಲಿ ಹೊಸ ಸೇರೆಗಾರ ಗಂಡ-ಹೆಂಡತಿ ಅಜ್ಜನ ಮನೆ ಕೆಲಸಕ್ಕೆ ಸೇರಿ, ಬೆಟ್ಟದಲ್ಲಿ ಬಿಡಾರ ಹೂಡಿದ್ದರು. ಅಜ್ಜ ಮುಂಜಾವಿನ ಕೆಲಸ ಮುಗಿಸಿ ಅಂಗಳಕ್ಕೆ ಬಂದು ತಾವೂ ಎಲೆ, ಅಡಿಕೆ ಹಾಕಿಕೊಳ್ಳುತ್ತ, ಆಳುಗಳಿಗೂ ಹಂಚುತ್ತಿದ್ದರು. ಹೊಸ ಸೇರೆಗಾರನನ್ನು ನೋಡಿ ''ಏನೋ, ನೀನೇ ಹೊಸ ಸೇರೆಗಾರನೋ ? ಹೆಸರೇನೋ ?'' ಎಂದರು. ಆತ ನಗುತ್ತ ಮುಖ ಎತ್ತಿ ''ನಂದಾ'' ಎಂದ. ಅಜ್ಜಿಯೂ ನಗುತ್ತ ''ಹುಂ, ನಿಂದೇ, ಹೆಸರೇನು'' ? ಎಂದರು. ಆತ ಮತ್ತೂ ನಗುತ್ತ ''ನಂದಾ'' ಎಂದ. ಹೀಗೆ ಹತ್ತಾರು ಬಾರಿ ಆದ ಮೇಲೆ ಅಜ್ಜಿಗೆ ಸಿಟ್ಟು ಬಂತು. ''ನಿಂದೇ ಹೆಸರು ಕೇಳ್ತಿರೋದು, ಬೇರೆ ಆಳುಗಳ ಹೆಸರು ನನಗೆ ಗೊತ್ತಿದೆ'' ಎಂದರು. ಅಷ್ಟರಲ್ಲಿ ಅಲ್ಲಿಗೆ ಬಂದ ಅಜ್ಜ ''ಅವನ ಹೆಸರೇ ನಂದ'' ಅವನ ಹೆಂಡತಿಯ ಹೆಸರು ''ಮುರಳಿ'' ಎಂದಾಗ ಎಲ್ಲರೂ ನಕ್ಕಿದ್ದೇ ನಕ್ಕಿದ್ದು.

ಕೊನೇಗೌಡ ಸಕಲ ಸಿದ್ಧತೆಯೊಡನೆ ತೋಟಕ್ಕೆ ೮ ಗಂಟೆಗೆ ಇಳಿದೊಡನೆ, ನಂದ- ಮುರಳಿ, ಅಜ್ಜ, ಅಜ್ಜಿಯ ಜೊತೆ ನಾವು ಮೊಮ್ಮಕ್ಕಳು ತೋಟಕ್ಕೆ ಹಾರುತ್ತಿದ್ದೆವು. ಎತ್ತರದ, ತೆಳುವಾದ, ಕವಲುಗಳಿಲ್ಲದ ಅಡಿಕೆ ಮರವನ್ನು ಏರುವುದೂ ಒಂದು ಕಲೆ. ಎರಡೂ ಕಾಲು ಸೇರಿಸಿ ಕತ್ತದ ಹಗ್ಗದ ಕುಣಿಕೆ ಹಾಕಿಕೊಂಡು, ಸೊಂಟದಲ್ಲಿ ಕತ್ತಿ, ಸೊಂಟದಿಂದ ನೇತಾಡುವ ಬಹು ಉದ್ದವಾದ ಬಾವಿಯ ಹಗ್ಗ ಇವೆಲ್ಲದರ ಜೊತೆ ಕೊನೇಗೌಡ ಅಡಿಕೆ ಮರವನ್ನು ಚುರುಕಾದ ಕೋತಿಯಂತೆ ಏರುತ್ತಿದ್ದ. ಆಕಾಶದೆತ್ತರದಲಿ ತೂಗಾಡುವ ಚೆಂಡೆಗಳ ಹತ್ತಿರ, ಸೊಂಟದ ಕತ್ತಿಯಿಂದ ಅಡಿಕೆ ಕೊನೆ (ಗೊನೆ) ಕತ್ತರಿಸಿ, ಸೊಂಟದಲ್ಲಿ ಇರುವ ಬಾವಿ ಹಗ್ಗದ ಮೂಲಕ ಸರ್ರನೆ ಕೆಳಗೆ ಜಾರಿಸುತ್ತಿದ್ದ. ಅವನಷ್ಟೇ ಕುಶಲತೆಯಿಂದ ಕೆಳಗಿದ್ದ ನಂದ, ಹಗ್ಗದ ಇನ್ನೊಂದು ತುದಿ ಹಿಡಿದು ಆ ಅಡಿಕೆ ಕೊನೆಯನ್ನು ಕೈಯಲ್ಲಿ ಹಿಡಿದು, ಹೆಡಿಗೆಗೆ (ಬೆತ್ತದ ಅಗಲ ದೊಡ್ಡ ಬುಟ್ಟಿ) ತುಂಬುತ್ತಿದ್ದ. ಆಗ ಅತ್ತಿತ್ತ ಚೆದುರಿದ ನಾಲ್ಕಾರು ಅಡಿಕೆಗಳನ್ನು ಮುರಳಿ, ಅವಳ ಜೊತೆ ನಾವು ಮಕ್ಕಳು ಆಯ್ದು ಇನ್ನೊಂದು ಬುಟ್ಟಿಗೆ ತುಂಬುತ್ತಿದ್ದೆವು. ಒಂದು ಅಡಿಕೆ ಮರದಲ್ಲಿ ೩-೪ ಕೊನೆಗಳು ಇರುತ್ತಿದ್ದವು. ಹದವಾಗಿ ಬಲಿತದ್ದನ್ನು ಮಾತ್ರ ಇಳಿಸುತ್ತಿದ್ದ. ಇದೆಲ್ಲ ಮಾಡುವಾಗ ಸೊಂಟಕ್ಕೆ ಕಟ್ಟಿಕೊಂಡ ಪುಟ್ಟ ಮರದ ಹಲಿಗೆಯನ್ನು ಕುರ್ಚಿಯಂತೆ ಬಳಸುತ್ತಿದ್ದ. ಅದ್ಭುತವಾದ ಸರ್ಕಸ್ ನಂತೆ ಅದನ್ನು ಬೆರಗುಗಣ್ಣಿನಿಂದ ನೋಡುತ್ತ ನಿಲ್ಲುತ್ತಿದ್ದೆವು.

ನಂತರ ಇದಕ್ಕೂ ರೋಮಾಂಚನಕಾರಿಯಾದ ಅದ್ಭುತ ಕಾದಿರುತ್ತಿತ್ತು. ತನ್ನ ಕೈಯಲ್ಲಿರುವ ದೋಟಿಯಿಂದ (ಕೊಕ್ಕೆ) ಇನ್ನೊಂದು ಅಡಿಕೆ ಮರದ ಚೆಂಡನ್ನು ಬಗ್ಗಿಸಿ ಹತ್ತಿರ ಬಂದಾಗ ಆ ಮರಕ್ಕೆ ಕೋತಿಯಂತೆ ಜಿಗಿಯುತ್ತಿದ್ದ. ಕಣ್ಣು-ಬಾಯಿ ಬಿಟ್ಟುಕೊಂಡು ನೋಡುತ್ತಿದ್ದೆವು ಈ ಮಜವನ್ನು ! ಒಮ್ಮೆ ಒಂದು ಅಡಿಕೆ ಮರ ಏರಿದನೆಂದರೆ ಆತ ಮರ ಇಳಿಯುವುದು ಸಂಜೆ ಮೂರು ಗಂಟೆಗೆ ! ಅಷ್ಟರಲ್ಲಿ ಅರ್ಧ ಎಕರೆ ತೋಟವನ್ನು ಮರದ ಮೇಲೆ ಮುಗಿಸುತ್ತಿದ್ದ. ನಾಲ್ಕಾರು ಮರಗಳ ಕೊನೆ ಇಳಿಸುವಾಗ ಉದುರಿದ ಅಡಿಕೆ ಆರಿಸುತ್ತ ನಾವು ಸುಸ್ತಾಗಿ ಮನೆಗೆ ಓಡಿ ಬರುತ್ತಿದ್ದೆವು.

ದೊಡ್ಡ ದೊಡ್ಡ ಹೆಡಿಗೆಗಳಲ್ಲಿ ಅಡಿಕೆ ಕೊನೆಗಳು, ಸಣ್ಣ ಬುಟ್ಟಿಗಳಲ್ಲಿ ಉದುರಡಕೆ ಅಜ್ಜನ ಮನೆ ಅಂಗಳಕ್ಕೆ ಬಂದು ಚಪ್ಪರದ ಕೆಳಗೆ ಕಂಬಗಳ ಬಳಿ ಗೋಪುರವಾಗಿ ಬೀಳುತ್ತಿದ್ದವು. ಮಧ್ಯಾಹ್ನ ಊಟ ಮಾಡಿ ಮಲಗುತ್ತಿದ್ದ ಪುಟ್ಟ ಮಕ್ಕಳಿಗೆ ಎಚ್ಚರವಾಗು ತ್ತಿದ್ದುದು, ದೊಡ್ಡ ''ಹುಂ''ಕಾರದೊಂದಿಗೆ ಜಾರಿ ಯಲ್ಲಿ ಊಟ ಮಾಡುತ್ತಿದ್ದ ಕೊನೇ ಗೌಡನ ಧ್ವನಿ ಕೇಳಿದಾಗಲೇ. ಊಟ ಮುಗಿಸಿ, ಸ್ವಲ್ಪ ನಿದ್ರೆ ಮಾಡಿ, ಅಜ್ಜಿಯಿಂದ ಸೇರು ಕೊಬ್ಬರಿ ಎಣ್ಣೆ ಪಡೆಯುತ್ತಿದ್ದ ಸೇರೆಗಾರ ನಂದನಿಂದ ಮೈ, ಕೈಗೆ ಎಣ್ಣೆ ತಿಕ್ಕಿಸಿಕೊಂಡು ಅವನಿಗಾಗಿ ಜಾರಿಯ ಒಲೆಯಲ್ಲಿ ದೊಡ್ಡ ಹಂಡೆಯಲ್ಲಿ ಕೊತ-ಕೊತ ಕುದಿಯುತ್ತಿದ್ದ ನೀರನ್ನು ಸ್ನಾನ ಮಾಡಿ, ದೊಡ್ಡ ಬಾಟ್ಲಿಯಲ್ಲಿ ತಾನು ತಂದ ಹೆಂಡ ಕುಡಿದು, ಕಂಬಳಿ ಹೊದಿದು ಮಲಗಿದನೆಂದರೆ. ಅವನು ಏಳುವುದು ಮರುದಿನ ಬೆಳಗ್ಗೆಯೇ. ಕೊಬ್ಬರಿ ಎಣ್ಣೆ

ಕಡಿಮೆಯಾದರೆ, ನೀರು ಬಿಸಿ ಇರದಿದ್ದರೆ, ಊಟ ಸರಿಯಾಗದಿದ್ದರೆ ಅವನ ಹುಂಕಾರಕ್ಕೆ ದೊಡ್ಡವರೂ ಹೆದರಬೇಕಾಗುತ್ತಿತ್ತು.

ಮರುದಿನ ಮುಂಜಾವು ಇನ್ನೂ ಮಜಾ. ಮಕ್ಕಳು ಏಳುವಾಗಲೇ ನಾನಾ ರೀತಿಯ ಪತ್ತಲವುಟ್ಟು ತುರುಬು ಹಾಕಿ ಅಬ್ಬಲಿಗೆ, ಶೇವಂತಿಗೆ ದಂಡೆ ಮುಡಿದ, ದೊಡ್ಡ ಕುಂಕುಮದ ವಿಚಿತ್ರವಾದ ಪೇಟೆಯ ಕನ್ನಡ ಮಾತನಾಡುವ ಚಮಗಾರ ಹೆಂಗಸರು ಗಲಾಟೆ ಪ್ರಾರಂಭ ಸಿರುತ್ತಿದ್ದರು. ''ಈ ಜಾಗ ನನಗೆ, ಇದು ನನಗೆ, ಈ ಕೊನೆ ನನಗೆ ಬೇಕು, ಉದರಡಕೆ ನೀನು ಸುಲಿ, ಈ ಮೆಟ್ಟಕತ್ತಿ ನಂದು'' ಹೀಗೆ ನಾನಾ ರೀತಿ ಸಂಭಾಷಣೆ. ಅವರಿಗೆಲ್ಲಾ ತಿಂಡಿ, ಚಾ ಕೊಡುವುದರಲ್ಲಿ ಅಡಿಗೆ ಭಟ್ಟರು, ಅಜ್ಜ, ಅಮ್ಮ ಸುಸ್ತಾಗುತ್ತಿದ್ದರು. ಆ ದಿನ ಸಮಯ ಸಿಕ್ಕಾಗೆಲ್ಲ ಅಂಗಳದ ಕಟ್ಟೆ ಮೇಲೆ ಕುಳಿತು ಆ ಹೆಂಗಸರು ಅಡಿಕೆ ಸುಲಿಯುವುದನ್ನು ನೋಡುವುದೇ ಹಬ್ಬ. ಮೆಟ್ಟಕತ್ತಿಗೆ ಕುಕ್ಕಿ ಸಿಪ್ಪೆ ತೆಗೆದು ಇಡೀ ಅಡಿಕೆ ಹಾಗೆ ತೆಗೆದು ಬುಟ್ಟಿಗೆ ಹಾಕುವ ಕೈ ಚಳಕಕ್ಕೆ ಬೆರಗಾಗುತ್ತಿದ್ದೆವು. ''ಈ ಹೆಂಗಸರು ಅಡಿಕೆ ಕದಿಯುತ್ತಾರೆ, ಕಾವಲಿಗೆ ಇಲ್ಲೇ ಇರಿ'' ಎಂದು ಅಜ್ಜ ನಮ್ಮನ್ನು ಅಲ್ಲೇ ಇರುವಂತೆ ಹೇಳುತ್ತಿದ್ದರು. ಆ ಹೆಂಗಸರು ಅಷ್ಟೇ ಜಾಣರು. ''ಮಗಾ, ಒಂಚೂರು ಬೆಲ್ಲ ತಂದುಕೊಡು, ಮಜ್ಜಿಗೆ ನೀರು ತಾ, ಉಪ್ಪಿನಕಾಯಿ ಈಸ ಕೊಂಡು ಬಾ'' ಅಂತ ನಮ್ಮನ್ನು ಒಳಗೋಡಿಸಿ, ತಮ್ಮ ಲಂಗದಲ್ಲಿ ಹೊಲಿಸಿದ ಚೀಲಕ್ಕೆ ಹತ್ತಾರು ಅಡಿಕೆ ತುಂಬಿಕೊಳ್ಳುತ್ತಿದ್ದರು.

ಅಜ್ಜ, ''ಅಲ್ಲೇ ಇರಿ'' ಎಂದು ಬೈದರೂ, ನಾನು, ತಮ್ಮ, ಚಮಗಾರ ಹೆಂಗಸರ ಆಜ್ಞೆ ಮೀರುತ್ತಿರಲಿಲ್ಲ. ಯಾಕೆ ಅಂದರೆ ಹತ್ತಾರು ಕಾರಣಗಳು. ಒಂದು, ಸವಿಯಾಗಿ ಅವರು ಹೇಳುವ ಚಿತ್ರ - ವಿಚಿತ್ರ, ಕೆಲವೊಮ್ಮೆ ಅರ್ಥವಾಗದ ಅಶ್ಲೀಲ ಕಥೆಗಳು, ಒಗಟುಗಳು. ಒಂದು ವರ್ಷ ಕರೆಯಮ್ಮ ಕೇಳಿದ್ದಳು, ''ಮಗಾ, ನೀನು ಬಾಳಾ ಬುದ್ಧಿವಂತೆಯಂತೆ, ಹಾಗಾದ್ರೆ ನಾನ್ ಹೇಳಿದ ಒಗಟು ಉತ್ತರ ಹೇಳಿಯಾ.'' ನಾನು ಜಂಭದಿಂದ ''ಹೂಂ'' ಎಂದಿದ್ದೆ. ''ಅಪ್ಪ ಆಕಾಶಕ್ಕೆ ಹೋಗ್ತಾನೆ, ಅಮ್ಮ ಪಾತಾಳಕ್ಕೆ ಹೋಗ್ತಾಳೆ, ತಂಗಿ ದೇವರ ಪೂಜೆಗೆ ಹೋಗ್ತಾಳೆ, ಅಣ್ಣ ಅಂಗಿ ಕಳಚಿ ಬಣ್ಣ ಬಡಕೊಂಡು ಪೇಟೆಗೆ ಹೋಗ್ತಾನೆ, ಏನದು ?'' ಯಾವ ಪುಸ್ತಕದಲ್ಲೂ ಅದರ ಉತ್ತರ ಇರಲಿಲ್ಲ. ''ಸೋತೆ, ಅಂತ ಹೇಳಿ, ಅಜ್ಜ ಹತ್ತಿರ ಹೊಗೆಸೊಪ್ಪು ತಂದುಕೊಟ್ಟರೆ ಉತ್ತರ ಹೇಳ್ತೀನಿ'' ಎಂದಿದ್ದಳು ಕರೆಯಮ್ಮ. ಅಜ್ಜಯನ್ನು ಕಾಡಿ-ಬೇಡಿ ಹೊಗೆಸೊಪ್ಪಿನ ತುಂಡು ಕೊಟ್ಟ ಮೇಲೆ ''ಅಡಿಕೆ ಮರ ಅಲ್ವಾ ಮಗಾ, ಚೆಂಡೆ ತಂದೆ, ಬೇರು ತಾಯಿ, ಅಡಿಕೆ ಹೂವು - ಸಿಂಗಾರ ದೇವರ ಪೂಜೆಗೆ ಶ್ರೇಷ್ಠ, ಅಡಿಕೆಗೆ ಬಣ್ಣ ಹಾಕಿ ಪೇಟೆಗೆ ಒಯ್ಯುತ್ತಾರೆ. ಅಲ್ವಾ ?'' ಎಂದಾಗ ಎಂಥ ಖುಷಿ, ಕೆಲವೊಮ್ಮೆ ''ತೆಂಗಿನ ಕಾಯಿ ಮುಕ್ಕಣ್ಣ ಒಕ್ಕಣ್ಣ ಯಾರು ?'' ಅಂತ ಸುಲಭದ ಒಗಟು ಕೇಳಿ ಒಂದೇ ಕಣ್ಣಿನ ಅಡಿಕೆ ಎಂದು ನಾನು ಹೇಳಿದರೆ ''ಜಾಣ'' ಅಂತ ನಗುತ್ತಿದ್ದರು ಈ ಹೆಂಗಸರು.



ಸಂಜೆ ಹೊತ್ತಿಗೆ ಸುಲಿದ ಅಡಿಕೆಯ ಲೆಕ್ಕ ಬರೆಯುವ ಸಂಭ್ರಮ. ಸಾವಿರ ಅಡಿಕೆ ಹಿಡಿಯುವ ಬುಟ್ಟಿಯಲ್ಲಿ ಅಡಿಕೆ ಅಳೆಯುವುದು. ಎಲ್ಲರಿಗಿಂತ ಬುದ್ಧಿವಂತೆ ಕರೆಯಮ್ಮ ನಾಲ್ಕು ಸಾವಿರ (೪ ಬುಟ್ಟಿ) ಸುಲಿದರೆ, ಉದುರಡಿಕೆ ಸುಲಿಯುವ ಹುಡುಗಿ ಮಾರಿಯದು ಒಂದೇ ಸಾವಿರ ಆಗುತ್ತಿತ್ತು. ಅವರ ಲೆಕ್ಕ ಬರೆದಿಟ್ಟು ವಾರಕ್ಕೊಮ್ಮೆ ಸಾವಿರಕ್ಕೆ ಎಂಟಾಣೆಯಂತೆ ಕೊಡಬೇಕಾಗುತ್ತಿತ್ತು (ಈಗ ಅದು ಸಾವಿರಕ್ಕೆ ೮ ರೂ. ಇರಬೇಕು). ಈ ಲೆಕ್ಕದ ಜೊತೆ, ಆ ಹೆಂಗಸರು ಕದ್ದ ಅಡಿಕೆಯ ಝಡತಿ ನಡೆಯುತ್ತಿತ್ತು. ಅದರ ಮಜಾ ಹೇಗಿರುತ್ತಿತ್ತು ಎಂದರೆ, ಅಜ್ಜ ''ಏನೇ ಭೂಮಿ, ಹೊಟ್ಟೆ ಯಾಕೆ ಅಷ್ಟು ದೊಡ್ಡ ದಾಗಿದೆಯೇ ?'' ಎಂದರೆ ಆಕೆ ನಾಚುತ್ತಾ ''ನಂಗೆ ೪ ತಿಂಗಳು'' ಎನ್ನುತ್ತಿದ್ದಳು. ''ಬೆಳಗ್ಗೆ ಬರುವಾಗ ಹೊಟ್ಟೆ ಇರಲಿಲ್ಲ, ಈಗ ೪ ತಿಂಗಳು ಬಸರಿ ಆದೆಯಾ'' ಎಂದರೆ ಎಲ್ಲರೂ ನಗುವುದು. ಅಂತೂ ಮುರಳಿ ಎಲ್ಲರನ್ನೂ ಮುಟ್ಟಿ, ಮುಟ್ಟಿ ಅದೇ ಒಂದು ಬುಟ್ಟಿಯಾಗುತ್ತಿತ್ತು. ಅಜ್ಜಿಗೆ ಕಳ್ಳತನ ಇಷ್ಟವಾಗುತ್ತಿರಲಿಲ್ಲ, ಅಷ್ಟೇ. ಮತ್ತೆ ತಾನೇ ಕೈಯತ್ತಿ ಆ ಹೆಂಗಸರಿಗೆ ಬೊಗಸೆ ಅಡಿಕೆ ಕವಳ ಹಾಕಲು ಕೊಡುತ್ತಿದ್ದಳು. ದಾನ ಬೇರೆ, ಕಳ್ಳತನ ಬೇರೆ !!

ರಾತ್ರಿಯಾಗುತ್ತಿದ್ದಂತೆ ಅಂಗಳದ ದೊಡ್ಡ ಒಲೆಗೆ ದೊಡ್ಡ ದೊಡ್ಡ ಮರದ ಕುಂಟೆಗಳನ್ನು ಹಾಕಿ ಬೆಂಕಿ ಹಾಕಲಾಗುತ್ತಿತ್ತು. ದೊಡ್ಡ ಹಂಡೆಯಲ್ಲಿ ಸುಲಿದ ಹಸಿ ಅಡಿಕೆ ಬೇಯಿಸುವುದು ನಂದ-ಮುರಳಿ ಮತ್ತು ಮುಕ್ರಿ ಆಳುಗಳ ಕೆಲಸ. ಬೇಯಿಸಿದ ಅಡಿಕೆಗೆ ಬಣ್ಣ ಹಾಕುವುದು, ಚೊಗರು ತಯಾರಿಸುವುದು, ನೋಡುತ್ತ, ಚಳಿ ಕಾಯಿಸುತ್ತ ನಂದನ ಕಥೆ ಕೇಳುವುದು, ಅಜ್ಜಿಯ ಕಥೆ ಕೇಳುವುದು ಎಷ್ಟು ಸಂತಸ. ಅಡಿಕೆ ಬೇಯಿಸುವ ವಾಸನೆ, ಆ ಅಡಿಕೆ ಚಪ್ಪರ, ಆ ಕಥೆಗಳು ಒಂದು ಮೋಹಕ ಲೋಕವನ್ನೇ ಸೃಷ್ಟಿಸುತ್ತಿದ್ದವು.

ಸಾಧಾರಣ ೧೫ ದಿನಗಳ ಕಾಲ ನಡೆಯುವ ಕೊನೆ ಕೊಯ್ಲು ಪ್ರತಿದಿನ ಹೊಸ ಹೊಸ ಅನುಭವ ನೀಡುತ್ತಿತ್ತು. ಒಂದೊಂದು ದಿನ ಅಡಿಕೆ ಸುಲಿಯುವ ಭೂಮಿಯ ಸಮೀಪ ಕುಳಿತಿದ್ದರೆ ಆಕೆ 'ಈಗಾ ಜೋಡಡಿಕೆ' ಎಂದು ಎರಡು ಅಡಿಕೆ ಕೂಡಿರುವುದನ್ನು ತೋರಿಸು ತ್ತಿದ್ದಳು. ಕೆಲವು ಸಲ ಮುಕ್ಕಣ್ಣ ಅಂದರೆ ಮೂರಡಿಕೆ ಕೂಡಿದ್ದು, ಅತಿ ವಿರಳವಾಗಿ ನಾಲ್ಕಡಿಕೆ ಕೂಡಿದ್ದೂ ಸಿಗುತ್ತಿದ್ದವು. ಮನುಷ್ಯರಲ್ಲಿ ಅವಳೀ, ತ್ರಿವಳೀ, ನಾಲ್ಕು ಮಕ್ಕಳು ಅಪರೂಪವಾಗಿ ಹುಟ್ಟುತ್ತವೆಯಷ್ಟೇ. ಮನುಷ್ಯರನ್ನು ನೋಡಿ ಪ್ರಕೃತಿ ತಾನೂ ಹಾಗೇ ಮಾಡುತ್ತದೋ ? ಅಥವಾ ಮನುಷ್ಯ ಪ್ರಕೃತಿಯನ್ನು ತಾನು ಅನುಸರಿಸುತ್ತಾನೋ ಎಂಬ ಚಿದಂಬರ ಪ್ರಶ್ನೆ ಬಿಡಿಸುತ್ತಾ ಒಂದೊಂದು ದಿನ ಕಳೆಯುತ್ತಿತ್ತು.

ಕೆಲವು ದಿನ ಈ ಮಾರಿ - ಮಸಣಿಯರಿಗೆ ಕೀಟಲೆಯ ಬುದ್ಧಿ ಬಂದುಬಿಡುತ್ತಿತ್ತು. ಅಡಿಕೆ ಸುಲಿಯುತ್ತ ಮಧ್ಯೆ ಎಲ್ಲೋ ಕೆಲವು ಅಡಿಕೆಯಲ್ಲಿ ಬರಿ ಸಿಹಿ ನೀರು ಮಾತ್ರ ಇರುತ್ತಿತ್ತು. ''ತಗಾ ಮಗ, ರಾಮತೀರ್ಥ'' ಅಂತ ಕೊಡುತ್ತಿದ್ದರು. ನಾನೋ ತಮ್ಮನೋ ಆತುರದಿಂದ ಅರ್ಧ ಚಮಚದಷ್ಟಿರುತ್ತಿದ್ದ ಆ ಸಿಹಿ ನೀರು ಕುಡಿದ ಮೇಲೆ ''ಅದು ರಾಮೇಗೌಡನ ಉಚ್ಚೆ'' ಎಂದು ಹೇಳಿ ನಗುತ್ತಿದ್ದರು. ಮೊದಲೇ ಆ ಕೊನೇಗೌಡನನ್ನು ಕಂಡು ಹೆದರುತ್ತಿದ್ದ, ಅವನ ಸಾಹಸ ಕಂಡು ಬೆರಗಾಗುತ್ತಿದ್ದ ನಾವು ''ಇದ್ದರೂ ಇರಬಹುದು. ಬೆಳಿಗ್ಗೆ ಲಕ್ಕೆ ಅಡಿಕೆ ಮರ ಏರುತ್ತಾನೆ, ಇಳಿಯವುದು ಸಂಜೆ ೩ಕ್ಕೆ. ಅಷ್ಟರಲ್ಲಿ ಉಚ್ಚೆ ಅಲ್ಲೇ ಮಾಡುತ್ತಾನೋ ಏನೋ ?'' ಅಂತ ನಂಬಿ ಅಳುತ್ತ ಅಡಿಗೆ ಮನೆಗೆ ಓಡುತ್ತಿದ್ದೆವು. ಅಜ್ಜಿ ಅಮ್ಮ ಅದೆಲ್ಲ ಸುಳ್ಳು ಅಂತ ಹೇಳಿ, ''ಆ ಹೆಂಗಸರ ಆಟ, ಕದಿಯಲು'' ಎನ್ನುತ್ತ ಹೊರಗೆ ಬರುತ್ತಿದ್ದರು.

ಹದಿನೈದು ದಿನ ಮುಗಿಯುವುದರಲ್ಲಿ ನಮ್ಮ ಪುಟ್ಟ ಕೈಗಳಿಂದ ಮೆಟ್ಟಕತ್ತಿಗೆ ಅಡಿಕೆ ಚುಚ್ಚಿ, ಒಂದು ಗಂಟೆಗೆ ಒಂದು ಬೊಗಸೆ ಕಾಯಿ ಸುಲಿಯುವಷ್ಟು ಕಲಿಯುತ್ತಿದ್ದೆವು. ಅಡಿಕೆ ಸಿಪ್ಪೆಗಳನ್ನು ಬುಟ್ಟಿಯಲ್ಲಿ ಹೊತ್ತು ಬಾವಿಯಷ್ಟು ದೊಡ್ಡದಾದ ಗೊಬ್ಬರ ಗುಂಡಿಗೆ ತುಂಬುತ್ತಿದ್ದಂತೆ ಕೊನೆ ಕೊಯ್ಲು ಮುಗಿಯುತ್ತಿತ್ತು. ಕೊನೇಗೌಡ ಚಮಗಾರ ಹೆಂಗಸರು ಮಾಯವಾಗುತ್ತಿದ್ದರು. ಬಣ್ಣದ ಅಡಿಕೆ, ಅಟ್ಟದ ಮೇಲೆ ಒಣಗುತ್ತ ಗೋಣಿ ಚೀಲಗಳಲ್ಲಿ ಬೆಚ್ಚಗೆ ಸೇರುತ್ತಿದ್ದವು. ''ಈ ವರ್ಷದ ದೊಡ್ಡ ಕೆಲಸ ಮುಗಿಯಿತು'' ಅಂತ ಅಜ್ಜಿ-ಅಮ್ಮ ಉಸಿರು ಬಿಡುತ್ತಿದ್ದಂತೆ, ಅಜ್ಜ ಅಡಿಕೆಯನ್ನು ವಖಾರಿಗೆ ಸಾಗಿಸುವ ಭರಾಟೆಯಲ್ಲಿ ಮುಳುಗಿರುತ್ತಿದ್ದರು. ನಾನು, ತಮ್ಮ ಮುಂದಿನ ಕೊನೆ ಕೊಯ್ಲು ಬೇಗ ಬರಲಿ ಎಂದು ಆಸೆ ಮಾಡುತ್ತ ಅಜ್ಜನ ಮನೆಯಿಂದ ಪೇಟೆಯ ನಮ್ಮ ಮನೆಗೆ ಬರುತ್ತಿದ್ದೆವು.


ವಿಜಯಾ ಶ್ರೀಧರ್
W/o ಡಾ|| ಕೆ. ಆರ್ ಶ್ರೀಧರ್, ೧ನೇ ಮುಖ್ಯರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ - ೫೭೭ ೨೦೪




ಜಲ ಸಂಸ್ಕೃತಿ ಎಂಬ ಪರಿಕಲ್ಪನೆ ಓದುಗರನ್ನು ಮತ್ತಷ್ಟು ಗೊಂದಲದಲ್ಲಿ ಕೆಡುವುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ 'ಸಾಂಸ್ಕೃತಿಕ ಅಧ್ಯಯನ'ಗಳ ಸಂದರ್ಭದಲ್ಲಿ ಸಂಸ್ಕೃತಿಯನ್ನು ನಿರ್ದೇಶಿಸುವಂತಹ ತುಸು ಹೆಚ್ಚೇ ಎನ್ನುವಷ್ಟು ಪಾರಿಭಾಷಿಕ ಪದಗಳು ಪ್ರಯೋಗದಲ್ಲಿರುವುದೇ ಆಗಿದೆ. ಜಾನಪದ ಅಧ್ಯಯನದ ಸಂದರ್ಭದಲ್ಲಿ ಆರ್ಯ-ದ್ರಾವಿಡ, ಶಿಷ್ಟ-ದೇಸಿ ಜನಾಂಗ, ಪ್ರದೇಶ ಆಧಾರಿತ ಸಂಸ್ಕೃತಿಯ ಕಲ್ಪನೆಗಳು ಪ್ರಧಾನ-ಅಧೀನ, ಪ್ರತಿ-ಉಪ-ನಿರ್ಲಕ್ಷಿತ ಮೊದಲಾದ ಸಮಾಜ ರಚನೆಯನ್ನು ಆಧರಿಸಿದ ಕಲ್ಪನೆಗಳು, ಗ್ರಾಮ ಮತ್ತು ನಗರ ಮುಂತಾದ ವೃತ್ತಿ ಕುರಿತ ಕಲ್ಪನೆಗಳು ಪ್ರಯೋಗದಲ್ಲಿವೆ. ಇಂಥವು ಇನ್ನೂ ಅನೇಕ ರೀತಿಯಾಗಿ ವಿದ್ವಾಂಸರ ತಾತ್ವಿಕ ಹಿನ್ನೆಲೆ, ಆಸಕ್ತಿಯ ಆಧಾರದ ಮೇಲೆ ಭೋಗ, ಸುಖೀ ಇತ್ಯಾದಿ ಅಸಂಖ್ಯ ಕಲ್ಪನೆಗಳು ಬಳಕೆಯಲ್ಲಿ ಇವೆ. ಇವು ಜನಪದ ಅಧ್ಯಯನವನ್ನು ಅತ್ಯಂತ ಸಂಕೀರ್ಣವೂ, ಅಸ್ಪಷ್ಟವೂ ಆದ ಸ್ವರೂಪಕ್ಕೆ ದೂಡಿವೆ. ಇಷ್ಟು ಬೃಹತ್ ಪ್ರಮಾಣದ ಪರಿಭಾಷೆಗಳನ್ನು ಗಮನಿಸಿದಾಗ ಸಂಸ್ಕೃತಿಯ ಅಧ್ಯಯನದ ವಿಶಾಲವ್ಯಾಪ್ತಿ ಗೋಚರವಾದರೂ ಈ ಪರಿಭಾಷೆಗಳು ಜನಪದ ಸಂಸ್ಕೃತಿಯ ಅಧ್ಯಯನದ ಅಪರಿಮಿತ ಸಾಧ್ಯತೆಗಳನ್ನು ಮಿತಿಗೊಳಿಸಿವೆ ಎಂದೇ ಹೇಳಬೇಕು.

ಸಂಸ್ಕೃತಿ ಎಂಬುದು ಒಟ್ಟಾರೆಯಾಗಿ ಒಂದು ಪ್ರದೇಶದಲ್ಲಿ ವಾಸಮಾಡುವ ಜನಾಂಗದ ಸಮಸ್ತ ಕ್ರಿಯೆಗಳನ್ನು ರೂಪಿಸುವ ಅಂತಃಸತ್ವವಾಗಿರುವುದರಿಂದ, ಅದು ಪ್ರಕಟವಾಗುವ ಆಕೃತಿಗಳ ಮೂಲಕ ಅದರ ಜ್ಞಾನ ಮೂಲಗಳನ್ನು ಶೋಧಿಸಬೇಕಿರುವುದರಿಂದ, ಜನಪದ ಅಧ್ಯಯನಕ್ಕೆ ಮೇಲೆ ಉಲ್ಲೇಖಿಸಿರುವ ಪರಿಭಾಷೆಗಳಿಗಿಂತ ಹೆಚ್ಚು ಸಮರ್ಪಕವೂ ಸ್ಫುಟವೂ ಆದ ಪರಿಕಲ್ಪನೆಯ ಅಗತ್ಯವಿದೆ. ಜನಪದ ಸಂಸ್ಕೃತಿಯನ್ನು ಆಧರಿಸಿ ಈವರೆಗೆ ನಡೆದಿರುವ ಒಟ್ಟಾರೆ ಸಾಂಸ್ಕೃತಿಕ ಅಧ್ಯಯನಗಳ ಹಿನ್ನೆಲೆಯಲ್ಲಿ 'ಜಲಸಂಸ್ಕೃತಿ' ಎಂಬ ಪರಿಕಲ್ಪನೆ ಅತ್ಯಂತ ಶಕ್ತಿಯುತ ರಚನೆಯಾಗಿದೆ. ಜನಪದ ಜೀವನ ಮತ್ತು ಜನಪದ ಪರಿಕರಗಳನ್ನು ಕುರಿತ ಅಧ್ಯಯನಗಳಲ್ಲಿ ಒಡೆದು ಕಾಣುವ ಅಂಶವೆಂದರೆ ''ಭಾರತೀಯ ಸಂಸ್ಕೃತಿ'' ಎಂದು ಸ್ವೀಕೃತವಾಗಿರುವ ದರ್ಶನಗಳೊಂದಿಗೆ ಸಹಯೋಗ ಪಡೆಯದೆ ಆ ಪರಂಪರೆಯೊಂದಿಗೆ ಸಂಘರ್ಷಕ್ಕೆ ತೊಡಗಿದಂತೆ ತೋರುವುದೇ ಆಗಿದೆ. ಜನಪದ ಮೌಲ್ಯಗಳು, ಆಚರಣೆಗಳು ಈ ಪ್ರತಿರೋಧವನ್ನು ಪೋಷಿಸಿಕೊಂಡು ಬಂದಿವೆ. ಜನಪದ ಸಂಸ್ಕೃತಿ ಅಧ್ಯಯನ ನಡೆಸಿರುವ ವಿದ್ವಾಂಸರೆಲ್ಲರೂ ಸಾಮಾನ್ಯವಾಗಿ ಜನಪದ ಜೀವನ ಮತ್ತು ಸಂಸ್ಕೃತಿಯು ವೈದಿಕ , ಶಿಷ್ಟ ಪ್ರಧಾನ ಎಂಬ ಸಂಸ್ಕೃತಿಗಳಿಗಿಂತ ಭಿನ್ನವಾದದ್ದು ಅಥವಾ ವಿರುದ್ಧವಾದದ್ದು ಎಂದೇ ಅಭಿಪ್ರಾಯಪಟ್ಟಿದ್ದಾರೆ. ''ನಮ್ಮ ದೇಶದ ಇತಿಹಾಸ ಆರಂಭದಿಂದ ಅಗ್ನಿ ಪೂಜೆ ಮತ್ತು ಜಲ ಪೂಜೆಗಳು ಒಂದಕ್ಕೊಂದು ವಿರುದ್ಧವಾದ ಎರಡು ಮಾರ್ಗಗಳನ್ನು ಸೂಚಿಸುತ್ತಾ ಬಂದಿವೆ'' ಎಂಬ ಕೆ. ಡಿ. ಕುರ್ತಕೋಟಿ ಅವರ ಅಭಿಪ್ರಾಯವು ಜನಪದ ಸಂಸ್ಕೃತಿಯು ಜಲ ಮೂಲವಾದದ್ದು ಎಂಬ ನಂಬಿಕೆಯನ್ನು ಬಲಗೊಳಿಸುತ್ತದೆ.

**ಜಲ ಸಂಸ್ಕೃತಿ ಏಕೆ?**

ಜನಪದರ ಜೀವನ ದರ್ಶನಗಳಲ್ಲಿ ನೀರು ''ಪೂರ್ಣ ತತ್ತ್ವ'' ದ ಪ್ರತೀಕವಾಗಿದೆ, ದೈವತ್ವದ ಸಂಕೇತವಾಗಿದೆ, ಹೆಣ್ತನದ, ತಾಯ್ತನದ, ಫಲವಂತಿಕೆಯ ಮಾತೃದೇವತೆಯಾಗಿದೆ. ಜನಪದರ ಜೀವನ ಚಕ್ರದ ಹುಟ್ಟು, ಸಾವು, ಮದುವೆಗಳಲ್ಲಿ ನೀರು ಪವಿತ್ರ ಪದಾರ್ಥವಾಗಿ, ದೈವ ಸಾಕ್ಷಾತ್ಕಾರದ ಪ್ರತಿರೂಪವಾಗಿ, ಪ್ರಾಣವನ್ನು ಪಂಚಭೂತಗಳೊಂದಿಗೆ ಬೆರೆಸುವ ಮಾಧ್ಯಮವಾಗಿ ಬಳಕೆಯಗುತ್ತಿದೆ. ಮತ್ತಷ್ಟು ಸ್ಪಷ್ಟಪಡಿಸುವುದಾದರೆ ವೈದಿಕ, ಆರ್ಯ ಜೀವನಾವರ್ತಗಳಲ್ಲಿ 'ಅಗ್ನಿ' ನಿರ್ವಹಿಸುವ ಕಾರ್ಯಗಳನ್ನು, ಪ್ರತಿನಿಧಿಸುವ ದೈವಗಳನ್ನು, ಸಂಕೇತಿಸುವ ರೂಪಗಳನ್ನು, ಜನಪದರ ಜೀವನಾವರ್ತಗಳಲ್ಲಿ 'ನೀರು' ನಿರ್ವಹಿಸುತ್ತದೆ. ಆದ್ದರಿಂದಲೇ ವೈದಿಕ ದರ್ಶನಗಳ ಪುರುಷ ಕೇಂದ್ರಿತ ಚಿಂತನೆಗಳನ್ನು 'ಅಗ್ನಿ ಸಂಸ್ಕೃತಿ' ಎಂದು ಕರೆಯುವುದು ರೂಢಿಯಾಗಿದೆ. ಇದೇ ರೀತಿಯಾಗಿ ಜನಪದ ಸಂಸ್ಕೃತಿಯ ಪ್ರಕೃತಿ ಅಥವಾ ಸ್ತ್ರೀ ಕೇಂದ್ರಿತ ಚಿಂತನೆಗಳನ್ನು ಜಲ ಸಂಸ್ಕೃತಿ ಎಂದು ಕರೆಯುವುದು ಹೆಚ್ಚು ಸೂಕ್ತವಾಗಿ ಕಾಣುತ್ತದೆ. ಜಲತತ್ತ್ವ ಭಾರತದ ಇತಿಹಾಸದಲ್ಲಿ ಅತ್ಯಂತ ಪ್ರಾಚೀನವಾದದ್ದಾಗಿದೆ. ಆದರೆ ಅಗ್ನಿತತ್ತ್ವ ಅತ್ಯಂತ ಪ್ರಬಲವಾದದ್ದಾಗಿದೆ. ಈ ಎರಡು ಅಂತಃಸತ್ತ್ವಗಳು ಭಾರತೀಯ ಬದುಕನ್ನು ನಿರಂತರವಾಗಿ ರೂಪಿಸುತ್ತಾ ಬಂದಿವೆ. ಈ ಎರಡು ಮಾರ್ಗಗಳ ನಡುವೆ ವಿರೋಧವಿರುವಂತೆ ಅನೇಕ ಕೊಡುಕೊಳ್ಳೆಗಳು ನಡೆದು ಸಮನ್ವಯದ, ಸಂಕರದ ಸಂಕೇತಗಳು, ರೂಪಗಳು, ದೈವಗಳು, ಆಚರಣೆಗಳು ರೂಢಿಗೆ ಬಂದಿರುವುದನ್ನು ಇಂದು ನಮ್ಮ ಮುಂದಿರುವ ಅನೇಕ ಜಾನಪದ ಹಾಗೂ ಶಿಷ್ಟ ಆಕೃತಿಗಳು ಸಾಬೀತುಪಡಿಸುತ್ತವೆ. ಈ ಬಗೆಯ ಅನುಸಂಧಾನ, ಸಂಕರ, ಸಂಘರ್ಷಗಳ ನಡುವೆ ಈ ಎರಡೂ ಪರಂಪರೆಗಳು ತಮ್ಮ ತಮ್ಮ ಅನನ್ಯತೆಯ ಗುರುತುಗಳನ್ನು ಸ್ಪಷ್ಟವಾಗಿ ಕಾಪಾಡಿಕೊಂಡು ಬಂದಿವೆ.

ಕೃಷಿ ಮತ್ತು ಕೃಷಿ ಪೂರಕ ವೃತ್ತಿಗಳನ್ನು ಆಧರಿಸಿದ ಜನಾಂಗಗಳಲ್ಲಿ ಮತ್ತು ಬುಡಕಟ್ಟುಗಳಲ್ಲಿ ಅನೇಕ ಆಚರಣೆಗಳ, ಆಹಾರ ಪದ್ಧತಿಗಳ, ಮೌಲ್ಯಗಳ ನಡುವೆ ಭಿನ್ನತೆ ಇರುವುದುಂಟು. ಆದರೆ ಈ ಭಿನ್ನತೆ ವೈದಿಕ ಜೀವನ ಕ್ರಮಗಳೊಂದಿಗಿನ ಭಿನ್ನತೆಯಷ್ಟು ಪ್ರಬಲ ವ್ಯತ್ಯಾಸಗಳನ್ನು, ವಿರುದ್ಧ ಗುಣಗಳನ್ನು ಪಡೆದಿರುವುದಿಲ್ಲ ಎಂಬ ಅಂಶ ಗಮನಾರ್ಹವಾದದ್ದು. ಈ ಕಿರು ಪರಂಪರೆಗಳಲ್ಲಿ (ಇತ್ತೀಚೆಗೆ ಇವುಗಳನ್ನು ಉಪಸಂಸ್ಕೃತಿಗಳೆಂದು ಗುರುತಿಸಲಾಗಿದೆ) ಮೌಲ್ಯ, ಕುಟುಂಬ ರಚನೆ, ಜೀವನ ನಿರ್ವಹಣೆಯ ಮಾದರಿಗಳಲ್ಲಿ ಸಮಾನವಾದ ಆಶಯಗಳು - ಅಂಶಗಳು ಕಂಡುಬರುತ್ತವೆ. ಈ ಎಲ್ಲಾ ಪರಂಪರೆಗಳಲ್ಲಿ ಕಾಣಸುವ ದರ್ಶನ ಮಾತ್ರ ಜಲತತ್ತ್ವವೇ ಆಗಿದೆ. ಇದು ಈ ಬಹುತ್ವ ಪರಂಪರೆಗಳ ಅಂತಃಸತ್ವವು 'ನೀರು' (ಅಪ್-ಜಲ) ಎಂಬುದರಿಂದಲೇ ರೂಪಗೊಂಡಿರುವುದನ್ನು ರುಜುವಾತುಪಡಿಸುತ್ತದೆ. ಆದ್ದರಿಂದ ಅನೇಕ ಜನಾಂಗಗಳ (ದ್ರಾವಿಡ), ಬುಡಕಟ್ಟುಗಳ ಬಹಿರ್ ಆಕೃತಿಗಳನ್ನು ಆಧರಿಸಿ ನಡೆಸುವ ಆದಿಮ ಜ್ಞಾನಮೂಲಗಳ ಶೋಧಕ್ಕೆ 'ಜಲ' ಪ್ರಬಲ ಸಂಕೇತವಾಗಿ ಒದಗಿಬರುತ್ತದೆ.

ಜಲ ಸಂಸ್ಕೃತಿಯ ಪರಿಕಲ್ಪನೆಯನ್ನು ಮೊದಲಿಗೆ ಬಳಸಿದವರು ಡಾ॥ ಶಂಬಾ ಅವರು. ''ಆರ್ಯರು ಅಗ್ನಿ-ಸೂರ್ಯ ಆರಾಧಕರು ಎಂಬುದು ಎಲ್ಲರಿಂದ ಒಪ್ಪಿಗೆ ಪಡೆದ ನಿರ್ಣಯವಾಗಿದೆ. ನೀರ-ಹಾಲದೇವರ ಉಪಾಸನಾ ಸಂಪ್ರದಾಯವೊಂದು ಸ್ವತಂತ್ರವಾಗಿ ಆ ಕಾಲದಲ್ಲಿ ಇದ್ದಿತೆಂಬುದನ್ನು ಇನ್ನೂ ಯಾರೂ ಗಮನಿಸಿಲ್ಲ.'' ಹೀಗೆ ಹೇಳುವ ಮೂಲಕ ತಮ್ಮ ಸಂಶೋಧನೆಗಳಲ್ಲಿ ಭಾರತೀಯ ಸಂಸ್ಕೃತಿಯ ಅಂತಃಸತ್ತ್ವವನ್ನು ಅರಿಯಲು ಅವರು ಪ್ರಯತ್ನಿಸಿದರು ಹಾಗೂ ಭಾರತೀಯ ಜೀವನ ಶೈಲಿಯಲ್ಲಿಯೇ ಅಂತರ್ಗತವಾಗಿರುವ ಜಲ ಸಂಪ್ರದಾಯವನ್ನು ಗುರುತಿಸಿದರು. ಈ 'ಜಲ ಸಂಸ್ಕೃತಿ'ಯು ವೈದಿಕ ಸಂಸ್ಕೃತಿಗಿಂತಲೂ ಪುರಾತನವೂ ವಿಭಿನ್ನವೂ ಆದ ಮಾರ್ಗವೆಂದು ತಮ್ಮ 'ಹಾಲು ಮತ ದರ್ಶನ' ದಲ್ಲಿ ಸಿದ್ಧಪಡಿಸಿ ತೋರಿಸಿದರು. ಅಷ್ಟೇ ಅಲ್ಲದೆ ನೀರಿನ ಉಪಾಸನೆ ಮತ್ತು ಜಲ ಸಂಸ್ಕೃತಿಯು ಜಗತ್ತಿನ ಮೂಲ ಸಂಸ್ಕೃತಿಯಾಗಿರಬೇಕು ಎನ್ನುವ ಅನುಮಾನವನ್ನು ಸಹ ದಾಖಲು ಮಾಡಿದರು. ಆದರೆ ಜಲ ಸಂಸ್ಕೃತಿಯನ್ನು ಪ್ರತಿಪಾದಿಸಲು ಶಂಬಾ ಅವರು ಹೆಚ್ಚು ಭಾಷಿಕ ಆಕೃತಿಗಳನ್ನು– ವೈದಿಕ ದೇವತೆಗಳನ್ನು, ಚರಿತ್ರೆಯನ್ನು ತಮ್ಮ ಅಧ್ಯಯನ ಪಠ್ಯಗಳಾಗಿ ಸ್ವೀಕರಿಸಿ ತಮ್ಮ ಶೋಧನೆಗಳನ್ನು ನಡೆಸಿದ್ದಾರೆ. ಜನಪದದ ಕೆಲ ದೈವಗಳನ್ನು ಪ್ರಾಸಂಗಿಕವಾಗಿ

ಪ್ರಸ್ತಾಪಿಸಿದ್ದಾರೆ. ಜನಪದ ಸಂಸ್ಕೃತಿಯ ಸಂಕರಗಳನ್ನು ಬಳಸಿಕೊಂಡು ಚಾರಿತ್ರಿಕವಾಗಿ ಅಗ್ನಿ ಪರಂಪರೆಯೊಂದಿಗಿನ ಅನುಸಂಧಾನಗಳನ್ನು ಅಧ್ಯಯನ ನಡೆಸಿದ್ದರೆ ಶಂಬಾ ಅವರ ನಿರ್ಣಯಗಳು ಮತ್ತಷ್ಟು ಬಲಗೊಳ್ಳುತ್ತಿದ್ದವು. ಜನಪದ ಜೀವನದ ಆಕೃತಿಗಳು ಶಂಬಾ ಅವರ ಅನೇಕ ಊಹೆಗಳಿಗೆ ಸಾಕ್ಷಿಗಳನ್ನು ತಮ್ಮ ಆಚರಣೆ, ನಂಬಿಕೆ, ಮೌಲ್ಯಗಳಲ್ಲಿ ಅಂತಸ್ಥಗೊಳಿಸಿಕೊಂಡಿರುವುದನ್ನು ಕಾಣಬಹುದು.

ಜನಪದರ ಇವೊತ್ತಿನ ಜೀವನವು ಸಂಕರದ ಉತ್ಪನ್ನವಾಗಿದೆ ಎಂದು ಎಲ್ಲರೂ ಒಪ್ಪುತ್ತಾರೆ. ನಮ್ಮ ದೇಶದಲ್ಲಿ ಹೊರಗಿನಿಂದ ಬಂದ ಪುರುಷ ದೇವರುಗಳ ಅಗ್ನಿ ಆರಾಧಕರು, ಸ್ಥಳೀಯ ಸ್ತ್ರೀ ದೇವತೆಗಳ ಆರಾಧಕರಾದ ಮಾತೃ ವಂಶಗಳ ಸಮಾಜವನ್ನು ತಮ್ಮ ಸಾಂಘಿಕ ಪ್ರಯತ್ನಗಳಿಂದ ಪುರುಷ ಪ್ರಧಾನ ಸಮಾಜವಾಗಿ ಮಾರ್ಪಡಿಸಿರುವುದಕ್ಕೆ ಸಾಕಷ್ಟು ಸಾಕ್ಷಿಗಳು ಇವೆ. ಅತ್ಯಂತ ಪ್ರಬಲ ಸಂಕೇತ ವ್ಯವಸ್ಥೆ ಮತ್ತು ಪುರಾಣಗಳನ್ನು ಎದುರು ಹಾಕಿಕೊಂಡ ಅಗ್ನಿ ಪರಂಪರೆಯವರು ಜಲ ಪರಂಪರೆಯ ಅನೇಕ ರೀತಿನೀತಿಗಳನ್ನು ಸ್ವೀಕರಿಸಿ ತಮ್ಮದಾಗಿ ಮಾಡಿಕೊಂಡಿದ್ದಾರೆ. ಈ ಎರಡು ಪರಂಪರೆಗಳ ನಡುವೆ ನಡೆದಿರುವ ಅನುಸಂಧಾನ ಕ್ರಮವನ್ನು ಕೆ.ಡಿ. ಕುರ್ತಕೋಟಿ ಹೀಗೆ ಗುರುತಿಸಿದ್ದಾರೆ: ''ಪಿತೃ ಪ್ರಧಾನ ಕುಟುಂಬಗಳ ಗಂಡು ದೇವತೆಗಳು ಮಾತೃ ಪ್ರಧಾನ ಕುಟುಂಬಗಳ ಹೆಣ್ಣು ದೇವತೆಗಳೊಂದಿಗೆ ಸಂಬಂಧ ಬೆಳಸಿರಬೇಕು.'' ಇದೇ ವಾದವನ್ನು ಸಮರ್ಥಿಸುವ ನಿಲುವನ್ನು ಡಿ. ಡಿ. ಕೋಸಾಂಬಿ ಅವರು ತಳೆದಿದ್ದಾರೆ: ''ಇಂದು ಭಾರತದಲ್ಲಿ ಕಂಡುಬರುವ ದೈವ ದಂಪತಿಗಳು ಮೂಲದಲ್ಲಿ ಎರಡು ಭಿನ್ನ ಮಾದರಿಯ ಸಮಾಜಗಳನ್ನು ಪ್ರತಿನಿಧಿಸುತ್ತಿದ್ದುದರಿಂದ ಅವರು ಪರಸ್ಪರ ಶತ್ರುಗಳಾಗಿದ್ದರು. ಆಹಾರ ಸಂಗ್ರಹಣೆಯ ಕಾಲಕ್ಕೆ ಮಾತ್ರ ದೇವತೆಗಳು ಆರಾಧನೆಗೆ ಒಳಗಾಗುತ್ತಿದ್ದರು. ಪಶು ಸಂಗೋಪನೆಯ ಕಾಲಕ್ಕೆ ಪುರುಷ ದೇವತೆಗಳ ಆಗಮನವಾಯಿತು.'' ಹೀಗೆ 'ಪುರುಷ' ಮತ್ತು 'ಸ್ತ್ರೀ' ದೇವತೆಗಳ ಪ್ರತ್ಯೇಕ ಸಂಪ್ರದಾಯಗಳ ನಡುವೆ ಏರ್ಪಟ್ಟ ಸಂಘರ್ಷಗಳ ಫಲವಾಗಿ ಅರ್ಧನಾರೀಶ್ವರ, ಶಿವ-ಪಾರ್ವತಿ, ಲಕ್ಷ್ಮೀ-ನಾರಾಯಣ ಮುಂತಾದ ಜೋಡಿ ದೇವತೆಗಳು ಭಾರತೀಯ ಸಮಾಜದಲ್ಲಿ ಕಾಣಿಸಿಕೊಂಡವು.

ಮಾತೃವಂಶ ಕುಟುಂಬ ಪದ್ಧತಿ ಇದ್ದ ಸಮಾಜದ ರಚನೆಯನ್ನು ಪಿತೃವಂಶ ಕುಟುಂಬ ಪದ್ಧತಿಯು ಛಿದ್ರಿಸಿರುವ ದಾಖಲೆಯನ್ನು ಈವೊತ್ತಿನ ಜನಪದ ಸ್ಮೃತಿಗಳು ದಾಖಲಿಸಿಕೊಂಡಿವೆ.

ಜನಪದ ಸಂಸ್ಕೃತಿಯನ್ನು 'ಸ್ತ್ರೀತತ್ತ್ವ' ಶೋಧದ ನೆಲೆಯಲ್ಲಿ ಅಧ್ಯಯನ ನಡೆಸಬೇಕು ಎನ್ನುವ ಆಶಯವನ್ನು ಶ್ರೀಮತಿ ವಿಜಯ ದಬ್ಬೆ ಅವರು ತಮ್ಮ ಲೇಖನ ಒಂದರಲ್ಲಿ ಗುರುತಿಸಿದ್ದಾರೆ: ''ಜಾನಪದ ಕ್ಷೇತ್ರದಲ್ಲಿ ನಡೆಸಬೇಕಾದ ಅನ್ವೇಷಣೆ ತುಂಬಾ ಇದೆ. ಜನಪದ ಸಾಹಿತ್ಯ, ಕಲೆ, ನಂಬಿಕೆ ಆಚರಣೆಗಳಲ್ಲಿ ಹುದುಗಿರುವ ಸ್ತ್ರೀ ಸಂಸ್ಕೃತಿಯ ಸ್ವರೂಪವನ್ನು ಕೈಗೆಟುಕಿಸಿಕೊಳ್ಳಬೇಕಾಗಿದೆ. ಮಾತೃ ಪ್ರಾಧಾನ್ಯತೆ, ಮಾತೃ ವಂಶೀಯತೆಯ ಹಿನ್ನೆಲೆಯ ಅನೇಕ ಗುರುತುಗಳು ನಮ್ಮ ರೂಢಿ ನಂಬಿಕೆ ನಡೆವಳಿಕೆಗಳಾಗಿವೆ.''

ಜನಪದ ಸಂಸ್ಕೃತಿಯ ಅಂತಃಸತ್ವವು ಸ್ತ್ರೀತತ್ತ್ವದಿಂದ ರೂಪಿತವಾಗಿರುವ ನೆಲೆಯನ್ನು ವಿಜಯ ಅವರ ಹೇಳಿಕೆಯು ಸ್ಪಷ್ಟಪಡಿಸುತ್ತದೆ. ಪುರುಷ ಪ್ರಧಾನ ವ್ಯವಸ್ಥೆಗಳಾದ ಆರ್ಯೀಕರಣ ಮತ್ತು ವಸಾಹತು ಪ್ರಕ್ರಿಯೆಗಳು ಜಲಸಂಸ್ಕೃತಿಯ ಸಮಾಜವನ್ನು ಒತ್ತಾಯದಿಂದಲೂ, ಆಳ್ವಿಕೆಯಿಂದಲೂ, ಅನುಕರಣೆಗಳಿಂದಲೂ ಅಥವಾ ಕೊಡು–ಕೊಳ್ಳೆಗಳ ಮೂಲಕವೂ ಸಾಕಷ್ಟು ರೂಪಹೀನವಾಗಿಸಿರುವುದಕ್ಕೆ ಇಂದಿನ ನಮ್ಮ ಜೀವನ ಕ್ರಮಗಳೇ ಸಾಕ್ಷಿಯಾಗಿವೆ. ನಮ್ಮ ಪುರಾಣಗಳು, ದೇವತೆಗಳು, ಆಚರಣೆಗಳು ಅನ್ಯ ಸಂಸ್ಕೃತಿಗಳ ಮಾದರಿಗಳಾಗಿ ರೂಪಾಂತರಗೊಳ್ಳುತ್ತಿರುವ ಪ್ರಕ್ರಿಯೆ ಇಂದಿಗೂ ನಡೆಯುತ್ತಿದೆ. ಆದರೆ ಸಾವಿರಾರು ವರ್ಷಗಳಲ್ಲಿ ಮಾತೃಸಮಾಜಗಳು ತಮ್ಮ ಆಕೃತಿ ಮತ್ತು ಆಲೋಚನೆಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಒಪ್ಪಿಕೊಂಡರೂ ತಮ್ಮ ಸಂಸ್ಕೃತಿಯ ಅಂತಃಸತ್ತ್ವ ಮತ್ತು ಅನನ್ಯತೆಯನ್ನು ಅಪ್ರಜ್ಞಾಪೂರ್ವಕವಾಗಿ ಪೋಷಿಸಿಕೊಂಡು ಬಂದಿವೆ. ಇಂದಿನ ಜೀವನ ಕ್ರಮಗಳ ಒಡಲೊಳಗೆ ಅವು ಗುಪ್ತ ನಿಧಿಯಂತೆ ಇದ್ದೇ ಇವೆ. ಡಿ. ಆರ್. ನಾಗರಾಜ್ ಗುರುತಿಸಿರುವಂತೆ ''ಭಾರತೀಯ ಸಂಸ್ಕೃತಿಗಳಲ್ಲಿ ಮಾತೃ ಪ್ರಧಾನ ಮೌಲ್ಯಗಳು, ಸಮಾಜಗಳು ಇಂದು ಬಹುಮಟ್ಟಿಗೆ ನಶಿಸಿಹೋಗುತ್ತಿವೆ ಎನ್ನುವುದು ನಿಜವಾದರೂ ಸಾಂಸ್ಕೃತಿಕ ಮತ್ತು ಸಾಂಕೇತಿಕ ಕ್ಷೇತ್ರಗಳಲ್ಲಿ ಮಾತ್ರ ಇಂದೂ ಅವು ಸಮೃದ್ಧವಾಗಿಯೇ ಇವೆ.'' ಇಂಥ ಜನಪದ ಜೀವನದ ಅಲಕ್ಷಿತ ಸಾಂಕೇತಿಕ ಜಗತ್ತುಗಳ ಅಧ್ಯಯನವು ಜಲ ಸಂಸ್ಕೃತಿಯ ರಚನೆಯನ್ನು ಸಾಧ್ಯಗೊಳಿಸುತ್ತದೆ.

■ ಕೆ. ವೈ. ನಾರಾಯಣ ಸ್ವಾಮಿ
ಕನ್ನಡ ಅಧ್ಯಾಪಕ, ಬಾಲಕರ ಸರ್ಕಾರಿ ಕಾಲೇಜು, ಚಿಂತಾಮಣಿ-೫೬೩ ೧೨೫



# ಖಜೂರೀ

ಮೂಲ: ಅವ್ವೆತಿಕ್ ಇಸ್ಸಹಕಿಯಾನ್

ಒಂದು ದಿನ ತಂಗಾಳಿಯೊಂದು ನ್ಯೂಬಿಯದ ಏರಿಯಿಂದ ಮೆಲ್ಲಗೆ ಇಳಿದು ಬೀಗುತಿದ್ದ ಪಿರಮಿಡ್ಡುಗಳನ್ನೆಲ್ಲ ಸವರಿಕೊಂಡು ನೈಲ್ ನದಿಯ ದಡಕ್ಕಿಳಿದು ಬಂತು. ನೈಲ್ ನದಿಯ ಚಿನ್ನದಲೆಗಳು ಒಂದು ಸುಂದರವಾದ ಎಳೆಯ ಖರ್ಜೂರ ಗಿಡದ ಮುದ್ದಾದ ಅಡಿಗಳನ್ನು ಮುತ್ತಿಕ್ಕುತ್ತಿದ್ದವು.

''ನಾನು ನಿನ್ನನ್ನು ತುಂಬ ಪ್ರೀತಿಸುತ್ತೇನೆ ಕಣೆ ನನ್ನ
ಒಯ್ಯಾರಿ. ಭೂಮಂಡಲವೆಲ್ಲ
ಲಂಗುಲಗಾಮಿಲ್ಲದೇ ಅಳಾಯಿಸಬಲ್ಲಂಥಾ ನಾನು,
ನಿನ್ನ ಮೃದುವಾದ ಪಾದದಡಿ
ಅರಿವಳಿದು ಬಿದ್ದಿದ್ದೇನೆ. ತೀರದಿಂದ ತೀರಕ್ಕೆ
ಸುಳಿದಾಡಿರುವ ನಾನು ಈ ನೈಲ ನದಿಯಲ್ಲಿ
ನಿನ್ನ ಅಪ್ರತಿಮ ಪ್ರತಿಬಿಂಬ ಕಂಡು ಸೋತಿದ್ದೇನೆ.
ನನ್ನ ಮುದ್ದಿನ ಖಜೂರೀ.
ನಿನ್ನ ನಳಿದೋಳುಗಳನ್ನು ತೆರೆದು ನನ್ನನ್ನು ನಿನ್ನಲ್ಲಿ
ತುಂಬಿಕೋ!''

ಆದರೆ ಖರ್ಜೂರ ಗಿಡ ಗಾಳಿಯ ನುಡಿಗಳನ್ನಾಲಿಸದೇ ಸುಮ್ಮನಿತ್ತು.

''ಚೆಂದದ ಚಿಗುರಿನ ನನ್ನ ಖಜೂರೀ, ನಿನಗೆ
ಕರುಣೆಯೆಂಬುದೇ ಇಲ್ಲವೇನೇ ?
ಹೀಗೇ... ನಿನ್ನ ಪಾದದಡಿಯಲ್ಲಿ ಜೀವ ಬಿಟ್ಟು
ಬಿಡಲೇ?''

ತಂಗಾಳಿ ನಿಟ್ಟುಸಿರಿಟ್ಟಿತು. ಖರ್ಜೂರ ಗಿಡದ ಮೇಲೆ ಮೆಲ್ಲಗೆ ತನ್ನ ತೋಳುಗಳನ್ನಿಳಿಸಿತು. ಒಲ್ಲದವಳನ್ನು ಚುಂಬಿಸಬಯಸಿತು. ಆದರೆ ಖಜೂರಿ ಕೆಕ್ಕರಿಸುತ್ತಾ ತಂಗಾಳಿಯನ್ನು ತಿವಿದು ತಳ್ಳಿದಳು.

''ಓಹ್! ಹೀಗೇಕೆ ಗೋಳು ಹುಯ್ಯುಕೊಳುತ್ತೀ ಹಠಮಾರಿ ತಂಗಾಳಿ? ನೀನಾರು ? ನಾನ್ಯಾಕೆ ನಿನ್ನನ್ನು ಪ್ರೀತಿಸಬೇಕು ಹೇಳು? ದೂರ ನಿಲ್ಲು. ತೊಲಗು. ಅಪ್ಪ ಅಮ್ಮ ಇಲ್ಲದ ಅನಾಥ - ಅಲೆಮಾರಿ. ನನ್ನನ್ನು ಸಾಮ್ರಾಟರ ಉದ್ಯಾನಕ್ಕೆ ಕರೆದೊಯ್ಯುತ್ತಾರಂತೆ. ನಿನ್ನಂಥಾ ದರಿದ್ರನನ್ನು ನಾನು ಪ್ರೀತಿಸಬೇಕೆ?''

''ಆದರೆ ... ಆದರೆ ಸಮುದ್ರದಾಳದಂಥ ಪ್ರೀತಿ ನನ್ನದು. ಸಾಗರದ ಪ್ರಚಂಡ ಅಲೆಗಳ ಕಸುವು ನನ್ನದು ಖಜೂರೀ...'' ತಂಗಾಳಿ ಬಿಸುಸುಯ್ಯಿತು.

''ನೀನ್ಯಾರೆಂದು ಗೊತ್ತು ನನಗೆ. ಹಗಲೆನ್ನದೇ, ರಾತ್ರಿಯೆನ್ನದೇ ಗೊತ್ತುಗುರಿಯಿಲ್ಲದೇ ಕಂಡ ಕಂಡ ಮುರುಕಲು ಜೋಪಡಿಗಳಲ್ಲಿ, ಜನರಿಲ್ಲದ ಬೀದಿಗಳಲ್ಲಿ ಕುಂಯ್ಗುಡುತ್ತಾ ತಿರುಗುವ ಅಲೆಮಾರಿ. ಮತ್ಸರದಿಂದ ದೀಪಗಳನ್ನೆಲ್ಲ ನಂದಿಸುವ ನಿನ್ನ ಮುಖಕ್ಕೆ ಬಾಗಿಲು ಬಡಿಯುತ್ತಾರೆ ಎಲ್ಲರೂ. ಮನೆಯೆಂದರೇನು ಎಂದೇ ತಿಳಿಯದ ಬೀದಿಗೂಳಿ. ಮಕಮಲ್ಲಿನಂಥ ಎಲೆಗಳನ್ನುದುರಿಸುವ... ಚೆದುರಿಸುವ ದಾಂಧಲಿಗ.. ಪುಂಡ.. ನಿರ್ಗತಿಕ. ನಡೆ ದೂರ. ಬರಬೇಡ ಹತ್ತಿರ!''

''ನಾನ್ಯಾರೆಂದು ತಿಳಿಯದೇ ಹೋಯಿತೆ ನನ್ನ ರಾಣೀ?'' ತಂಗಾಳಿ ಮಾತು ಮುಂದುವರಿಸಿತು. ''ಇಡಿ ಭೂಮಂಡಲವನ್ನೇ ಮಣಿಸಬಲ್ಲ ಅತಿ ಬಲಾಢ್ಯ ನಾನು. ಭೋರ್ಗರೆಯುತ್ತಾ ಮುಗಿಲೆತ್ತರಕೆ ಜಿಗಿದು ಹಿಮಾಲಯವನಪ್ಪಳಿಸಬಲ್ಲವ; ಬಿರುಗಾಳಿಯಾಗಿ ಪಾರ್ಥಿಯದ ದೇಮಾವೆಂದ್‌ನ ಉಕ್ಕಿನಂಥ ಲಲಾಟವನ್ನು ನೇವೇರಿಸಬಲ್ಲವ; ಮಹಾನ್ ಅರಾರತ್‌ನ ವಜ್ರ-ಶಿಖರಗಳನ್ನು ಸಾಣೆ ಹಿಡಿಯ ಬಲ್ಲವ; ಅಟ್ಲಾಸ್ ಶಿಖರದೆತ್ತರಕ್ಕೂ ಹಾರಬಲ್ಲವ ನಾನು. ತಿಳಿಯಿತೇ?''

''ಕಾಶ್ಮೀರದ ಪಚ್ಚೆಕಣಿವೆಗಳಲ್ಲಿಳಿಯ ಬಲ್ಲವ; ಅಭೇದ್ಯ ಅಮೆಜಾನ್ ಅರಣ್ಯಗಳಲ್ಲಿ ಸುಳಿಯಬಲ್ಲವ (ಚೆಲುವೆಯೊಬ್ಬಳು ಚೆಂದದ ಹೆರಳಲ್ಲಿ ಬೆರಳಾಡಿಸುವಂತೆ!) ಅಟ್ಲಾಂಟಿಕ್ ದುರ್ದಮ್ಯ ಕುಹರಗಳಲ್ಲಿ ನುಸುಳಬಲ್ಲವ; ನಕ್ಷತ್ರಮಂಡಲಕ್ಕೆ ಜಿಗಿಯ ಬಲ್ಲವ; ಕೊನೆಯಿಲ್ಲದ ಸಹಾರಾ ಮರುಧರೆ ಯಲ್ಲಿ ಬೆಟ್ಟಗಳನ್ನೆಬ್ಬಿಸಿ ಮತ್ತೆ ನೆಲಸಮ ಮಾಡಬಲ್ಲವ; ಮೆಂಫಿಸ್ ನಗರಕ್ಕೆ ನಗರವನ್ನೇ ಹಳದೀ ಪ್ರಳಯದಲ್ಲಿ ಮುಳುಗಿಸಿದವ...''

''ನನಗೆ ಭಯ ಆಗ್ತಾ ಇದೆ: ನೀನೊಬ್ಬ ಮಹಾ ಕ್ರೂರಿ. ಪಿಶಾಚಿ.'' ಖಜೂರೀ ತತ್ತರಿಸಿಹೋದಳು. ''ನಾನು ಪ್ರೀತಿಸುವುದಾದರೆ ನೈಲ್ ನದಿಯನ್ನೇ ! ನಿನಗಿಂತ ಬಲಾಢ್ಯ. ನಿನಗಿಂತ ಕರುಣಾಳು. ಅವನು ಬೆಳದಿಂಗಳ ರಾತ್ರಿ ದೂರದ ಚಂದ್ರಕಾಂತಾ ಶಿಖರದಿಂದ ತಂದ ಬಣ್ಣ ಬಣ್ಣದ ಕನಸುಗಳನ್ನು ಹೆಣೆದು ನನ್ನ ಕಣ್ಣುಗಳಿಗೆ ಬಿಟ್ಟು; ಕಿವಿಗಳಲ್ಲಿ ಚೆಂದದ ಲಾಲಿ ಉಸುರುತ್ತಾನೆ. ಹೋಗು. ದಯವಿಟ್ಟು ದೂರ ಹೋಗು.''

''ಹೆದರಬೇಡ ಖಜೂರೀ... ಎದೆಯಲ್ಲಿ ಪ್ರೀತಿ ತುಂಬಿರುವಾಗ ಅತ್ಯಂತ ನಯವಂತ ನಾನು. ನನ್ನ ಮನಸ್ಸು ಇನ್ನೂ ನಿನಗೆ ತಿಳಿದಿಲ್ಲವಲ್ಲ! ಅಮರಾವತಿಯ ಸುಗಂಧವನ್ನು ನನ್ನ ರೆಕ್ಕೆಗಳ ಮೇಲಿರಿಸಿ ಜಗತ್ತನ್ನೇ ಸುತ್ತಿ ಬಂದವ; ವಿರಹಿಗಳ ಹೃದಯ ವೀಣೆಯ ತಂತುಗಳನ್ನು ಮಿಡಿಯಬಲ್ಲವ; ಮುತ್ತಿನ ಕಾರಂಜಿಗಳಲ್ಲಿ ಮುಗುಳ್ನಗುವ ಹಸಿರು ವನಗಳ ಅಸೀಮ ಮೌನಕ್ಕೆ ಮುನ್ನುಡಿ ಬರೆದವ; ನ್ಯೂಮಿಬಿಯದ ಸಿಂಹಗಳ ಕೇಸರಗಳ ಹೆಣೆದೂ, ಮುಗಿಲ ಹಕ್ಕಿಗಳ ರೆಕ್ಕೆ ಬಿಚ್ಚಬಲ್ಲವ,

ಕಮಾನು ಹುಬ್ಬುಗಳ ಚೆಲುವೆಯರ ಹೊಂಗೂದಲನ್ನು ನೇವರಿಸಿ ಚುಕ್ಕಿ ರಾತ್ರಿಯಲ್ಲಿ ನಕ್ಷತ್ರಗನಸುಗಳನ್ನು ಹೆಕ್ಕಿ ಅವರಿಗೊಪ್ಪಿಸಬಲ್ಲವ, ಮೆಮ್ನಾನನ ಪ್ರತಿಮೆಯ ಕಿವಿಗಳಲ್ಲಿ ಮಧುರ ನುಡಿಗಳನ್ನು ಬಿಡಿಸಿಡಬಲ್ಲವ. ಈಗ ನಿನ್ನ ಪಾದದಡಿ ಬಿದ್ದು ಪ್ರೇಮಕ್ಕಾಗಿ ಬೇಡುತ್ತಿದ್ದೇನೆ. ಕರುಣೆ ತೋರು. ದಣಿದಿರುವೆ. ನೊಂದಿರುವೆ. ನಿನ್ನ ಮುಂಗುರುಳ ನೆರಳನ್ನಾದರೂ ನೀಡು. ಒಂದು ಮುತ್ತು.. ಶೋಕ ತೊಳೆದು ಹೋಗಲೀ ಖಜೂರೀ ಒಂದು ಮುತ್ತು.. ಶತಶತಮಾನಗಳ ನನ್ನಳಲು ತೊಳೆದು ಹೋಗಲೀ.. ಒಂದು ಮುತ್ತು.''

''ಸಾಧ್ಯವೇ ಇಲ್ಲ; ನಿನ್ನನ್ನು ನಾನು ಪ್ರೀತಿಸುವುದಿಲ್ಲ.'' ಸಿಡುಕಿದಳು ಖಜೂರೀ. ''ನಾನು ಪ್ರೀತಿಸುವುದಾದರೆ ನೈಲನ್ನೇ. ಅವನು ಸೌಮ್ಯನೂ ಹೌದು, ಬಲಾಢ್ಯನೂ ಹೌದು. ಒಡಲ ತುಂಬ ಮರುಕ ತುಂಬಿದವನವನು. ನೋಡು ! ತನ್ನೆದೆಯ ಮೇಲೆ ನನ್ನ ಬಿಂಬವನ್ನು ಹೇಗೆ ತಳೆದಿದ್ದಾನೆ, ನೋಡು ಹೇಗೆ ನಯವಾಗಿ ಮೈದಡವುತ್ತಿದ್ದಾನೆ. ಎಂಥಾ ಚೆನ್ನಿಗ.. ಭವ್ಯ... ನಿರ್ಮಲ ! ಕಾಣಿಸಿತೇ ನೀಲನಭದ ವಜ್ರದೃಷ್ಟಿ ಅವನೆದೆಯಲ್ಲಿ? ಆಹಾ.. ಸೂರ್ಯಗನ್ನಡಿ !

''ನಾನು ಪ್ರೀತಿಸುವುದಾದರೆ ಅವನನ್ನೇ. ಆ ಅಲೆಗಳ ಹೊನ್ನ ತುಟಿಗಳು ಹೇಗೆ ಚುಂಬಿಸಬಂದಿವೆ! ನನ್ನೆದೆಗೆ ಹೇಗೆ ತಂಪೆರೆಯುತ್ತಿವೆ! ಹೇಗೆ ಸುಂದರ ಕತೆಗಳನ್ನು, ಮನಮೋಹಕ ಗೀತೆಗಳನ್ನು ನನಗಾಗಿ ದಿನನಿತ್ಯ ಹಾಡುತ್ತಾನೆ ಅವನು!

''ನೋಡಲ್ಲಿ, ನನಗಾಗಿ ಹೇಗೆ ತಹತಹಿಸುತ್ತಿದ್ದಾನೆ. ಉರಿಯುತ್ತಿರುವ ನನ್ನಿನಿಯನ ಹಣೆಯ ಮೇಲೆ ನನ್ನ ಸುಗಂಧಿತ ಕೇಶರಾಶಿಯನ್ನಿಡುವೆ.. ಓಹ್.. ಒಂದು ಮುತ್ತು..''

ಹೀಗೆ ನುಡಿದ ಖರ್ಜೂರ ಗಿಡ ತೂನೆದಾಡುತ್ತಾ ತನ್ನ ಚೆಲುವಾದ ಗರಿಗಳನ್ನು ನೈಲ್ ನದಿಯ ಮೇಲೆ ಆಡಿಸಿತು. ನದಿಯ ಅಲೆಗಳೂ ಅಲ್ಲಲ್ಲೇ ಪುಟಿಯುತ್ತಾ ಗಿಡಕ್ಕೆ ಮುತ್ತಿಡತೊಡಗಿದವು.




''ಹಾಗಾದರೆ ನೀನು ನನ್ನನ್ನು ಪ್ರೀತಿಸುವುದಿಲ್ಲವೇ? ತಿರಸ್ಕರಿಸುತ್ತೀಯಾ? ನಾನ್ಯಾರೆಂದು ಈಗಲೇ ತೋರಿಸುತ್ತೇನೆ ನಿನಗೆ. ನಾನೇ ನಿನ್ನೊಡೆಯ! ಹಠಮಾರಿ.. ಬುದ್ಧಿಗೇಡಿ ಖಜೂರೀ.. ನಾನೇ.. ನಿನ್ನೊಡೆಯ!''

ತಂಗಾಳಿ ಬುಸುಗುಟ್ಟಿತು. ನರಳಿ ಹೊರಳಾಡುತ್ತಾ ನಿಶ್ಚಲವಾಗಿ ಮಲಗಿದ್ದ ನೈಲ್ ನದಿಯನ್ನು ರೋಷಾವೇಶದಿಂದ ರಾಡಿಯಾಗಿಸಿ ಅಲ್ಲೋಲ ಕಲ್ಲೋಲ ಗೊಳಿಸಿತು. ನೈಲ್‌ಗೆ ಒಂದೆಡೆ ನಿಲ್ಲಲು ಬಿಡದೇ ಧುಡುಮ್ಮನೇ ದಡದಿಂದಾಚೆಗೆ ತಳ್ಳಾಡಿತು. ದಡದ ಮೇಲೆ ದೇವಲೋಕದ ಚೆಲುವೆಯರಂತೆ ನಿಂತಿದ್ದ ನೂರಾರು ಗಿಡಗಳು ಬುಡಮೇಲಾದವು. ಸಿಡಿಲಂತೆ ನದಿಯ ಎದೆಗೆ ಬಡಿದು ಹಾಹಾಕಾರವೆದ್ದಾಗ ಖರ್ಜೂರ ಗಿಡ ಗಡ ಗಡನೆ ನಡುಗಿ ಹೋಯಿತು. ಪ್ರೇಮದ ಹುಚ್ಚಿನಲ್ಲಿ ಹೀಗೆ ದಂಗೆಯೆದ್ದ ಗಾಳಿ ತನ್ನ ಬಲಿಷ್ಠ ತೋಳುಗಳಿಂದ ಖಜೂರಿಯ ಸೊಂಟವನ್ನು ಬಿಗಿಯಾಗಿ ಬಳಸಿ ಬಲವಂತವಾಗಿ ತನ್ನೆಡೆಗೆ ಸೆಳೆದುಕೊಂಡಿತು. ನೆಲೆತಪ್ಪಿ ಬಸವಳಿದ ಗಿಡವನ್ನು ಎದುತ್ತಿದ್ದ ತನ್ನ ಪ್ರೇಮಪೀಡಿತ ಎದೆಗವಚಿಕೊಂಡು ಸಾಗಿತು ಗಾಳಿ. ದೂರ... ದೂರ... ಬಹುದೂರ... ಸುಡುತ್ತಿದ್ದ ಮರುಧರೆಯಾಚೆಗೆ .... ನೀಲಸಾಗರದಾಚೆಗೆ .... ಹಿಮಖಚಿತ ಶಿಖರಗಳನ್ನೂ ದಾಟಿಕೊಂಡು........

ಕನ್ನಡಕ್ಕೆ: ವಿಜಯವಾಮನ
ಪ್ರಾಚಾರ್ಯರು, ಕೆ.ಎಚ್.ಬಿ. ಕಾಲನಿ,
ಗಾಂಧಿನಗರ, ಸಾಗರ - ೫೭೭ ೪೦೧

ತೆಲುಗು ಮೂಲ : ಸಿ. ವಿ. ಕೃಷ್ಣಾರಾವು

# ನೋಟೀಸು




'**ಈ** ಫರ್ಕಾದ ಪಟೇಲರು, ಪಟ್ವಾರಿಗಳು, ದೇಶಮುಖರು, ಜಾಗೀರುದಾರರು ಪೊಲೀಸರೊಂದಿಗೆ ಕೂಡಿಕೊಂಡು ಪ್ರಜೆಗಳ ಮೇಲೆ ಕ್ರೂರವಾಗಿ ದೌರ್ಜನ್ಯ ನಡೆಸುತ್ತಿರುವರು. ಆದುದರಿಂದ ಇಂದಿನಿಂದ ಯಾವ ಪೊಲೀಸು ಅಧಿಕಾರಿಯೆ ಆಗಲಿ, ಸರ್ಕಾರಿ ಉದ್ಯೋಗಿಯೆ ಆಗಲಿ, ಮತ್ತಾರಾದರೂ ಆಗಲಿ ಪ್ರಜೆಗಳ ಮೇಲೆ ಜುಲುಂ ಮಾಡಿದ್ದೆ ಆದರೆ ಅವರು ತಕ್ಕ ಶಿಕ್ಷೆ ಅನುಭವಿಸುತ್ತಾರೆ.

ಷರಾ: ಈ ನೋಟೀಸನ್ನು ಯಾರು ಹರಿದು ಹಾಕುತ್ತಾರೊ ಅವರ ಹೆಸರನ್ನು ಬರೆದುಕೊಳ್ಳಲಾಗುವುದು. ಎಚ್ಚರಿಕೆ!

ಇತಿ, ಪ್ರಜಾ ಸಂರಕ್ಷಣ ಸಂಘ.'

ವೈರಾ ಎನ್ನುವ ನೈಜಾಂ ಗ್ರಾಮದ ಗೋಡೆಯೊಂದರ ಮೇಲೆ ಈ ನೋಟೀಸನ್ನು ಅಂಟಿಸಲಾಗಿತ್ತು. ಪೊಲೀಸನೊಬ್ಬ ಬೆಳಿಗ್ಗೆ ಆ ದಾರಿಯಲ್ಲಿ ಹೋಗುತ್ತಾ ಈ ಕಾಗದವನ್ನು ನೋಡಿದ. ಓದಿಕೊಂಡ.

''ಏ ಸಾಹುಕಾರ, ಬಾರೋ ಆಚೆ.''

ಪಂಚೆಯನ್ನು ಸರಿಮಾಡಿಕೊಳ್ಳುತ್ತ ಸಾಹುಕಾರ ಬಾಗಿಲಿಗೆ ಬಂದ.

''ಈ ಕಾಗದವನ್ನು ಅಂಟಿಸಿದ್ದು ಯಾರು?''

ಬಾಗಿಲು ದಾಟಿ ಜಗುಲಿಯ ಬಳಿಗೆ ಬಂದು ಕಾಗದವನ್ನು ಓದಿ 'ಯಾರೊ' ಅಂದ.

''ಅದನ್ನು ಹರಿದು ಹಾಕು.''

''ನೀವೇ ಯಾಕೆ ಹರಿದು ಹಾಕಬಾರದು? ನನಗೆ ಯಾಕೆ ಬಂತು, ಪ್ರಾಣಕ್ಕೆ ಸಂಚಕಾರ ತಂದುಕೊಳ್ಳೋದು?''

''ಬದ್ಮಾಷ್'' ಎಂದು ಗೊಣಗಿಕೊಳ್ಳುತ್ತ ಪೊಲೀಸು ಹೊರಟು ಹೋದ.

'ಏನು? ವೆಂಕಯ್ಯ ಮಾವ' ಅನ್ನುತ್ತಾ ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬಾತ, ಈ ದಾರಿಯಲ್ಲೇ ಹೋಗುತ್ತಾ ಇನ್ನೊಬ್ಬ, ಹೀಗೆ ಹತ್ತು ಜನ ಗುಂಪುಗೂಡಿದರು. ಆ ಕಾಗದವನ್ನು ಅಲ್ಲಿ ಅಂಟಿಸಿದ್ದಕ್ಕೆ ಪ್ರತಿಯೊಬ್ಬನೂ ತಬ್ಬಿಬ್ಬುಗೊಳ್ಳುತ್ತಿದ್ದ.

''ಯಾರಂತೀಯ?''

''ಯಾರೋ.''

ಹೆಚ್ಚು ಮಾತಾಡಿದರೆ ಯಾರು ಯಾವ ಚಾಡಿಯನ್ನು ಅಮೀನನೊಂದಿಗೆ ಹೇಳುತ್ತಾರೊ ಎಂದು ಅವರವರ ಕೆಲಸಕ್ಕೆ ಅವರವರು ಹೊರಟು ಹೋಗುತ್ತಿದ್ದರು.

ಇಷ್ಟರಲ್ಲಿ ದಫೇದಾರ ನಾಲ್ಕು ಜನ ಪೊಲೀಸರೊಂದಿಗೆ ಬಂದ.

''ಏಯ್ ಇಧರ್ ಆವ್.''

''ಏನ್ ದ್ಯಾವ್ರು?''

''ಆ ಕಾಗದಾನ ಹರಿದು ಹಾಕು''.

''ಯಾರಿಂದಾತದೆ ದ್ಯಾವ್ರು? ಕತೆಗಳು ಹೇಳ್ತವ್ರೆ. ದಿಗುಲಾತದೆ''. ಅಂದವನು ತಲೆ ತಗ್ಗಿಸಿ ಹೊರಟು ಹೋದ.

ಒಬ್ಬನೂ ಒಪ್ಪಿ ಮುಂದೆ ಬರುತ್ತಿರಲಿಲ್ಲ.

''ಆ ಮುಂಡೆಗೆ ಧೈರ್ಯ ಸತ್ತೈತಾ?'' ಅಂದ ಎಲ್ಲಪ್ಪ.

''ಮಾರು ಬಂದೂಕು, ಮೊಳ ಟೋಪಿ ಇದ್ರೆ ಆಗೋಯ್ತಾ? ಹಿಡಿ ಗುಂಡ್ಗೆ ಇಲ್ದ ಮುಂಡೇವು'' ಅಂದ ವೀರಪ್ಪ. ಅಮೀನ ಸಾಹೇಬ ಬರುತ್ತಿದ್ದಾನೆಂದು ಆ ಗೋಡೆಯ ಯಜಮಾನ ಬಾಗಿಲಿಗೆ ಬೀಗ ಹಾಕಿ ಪಕ್ಕದ ಸಂದಿಯಲ್ಲಿ ಓಡಿ ಹೋದ. ಭಯಗೊಂಡವರು ಕಾಲ್ಕಿತ್ತ ಮೇಲೆ ಒಂದಿಪ್ಪತ್ತು ಮಂದಿ ಅಲ್ಲುಳಿದರು. ಲಾಠಿ ಆಡಿಸುತ್ತಾ ಬಂದ ಅಮೀನ, ಒಬ್ಬನಿಗೆ ಆ ಕಾಗದವನ್ನು ಹರಿದು ಹಾಕಲು ಹೇಳಿದ.

''ಹುಜೂರ್, ಅದನ್ನ ಗಟ್ಟಿಯಾಗಿ ಓದಿ''.

''ಅರಚಬೇಡ ಮಗನೆ.''

ಒಬ್ಬ ಮುದುಕ ಹೇಳಿದ - ''ನೀವು ಹರಿದು ಹಾಕ್ಬಾರ್ದ ಮೇಷ್ಟ್ರೆ?''

''ನೀನೇ ಹರಿದು ಹಾಕು, ತಾತ''.

ಹೆಬ್ಬುಲಿಯನ್ನು ಕಂಡಂತೆ ಆ ಕಾಗದದತ್ತ ನೋಡಿ ಹಿಂದಕ್ಕೆ ಸರಿದ. ಅಮೀನ ಅಮ್ಮ ಅಕ್ಕ ಎಂದೆಲ್ಲ ಕೂಗಾಡುತ್ತಿರುವಾಗ, ಪೊಲೀಸರನ್ನು ತುಂಬಿಕೊಂಡ ಎರಡು ಲಾರಿಗಳು ಖಮ್ಮಂ ಜಿಲ್ಲಾ ಕಲೆಕ್ಟರರ ಮನೆಯ ಮುಂದೆ ನಿಂತವು.

ಅಮೀನ ನೇರವಾಗಿ ಕಲೆಕ್ಟರನೊಂದಿಗೆ ಮಾತನಾಡಲು ಹೋದ. ನಡೆದದ್ದನ್ನೆಲ್ಲ ಹೇಳಿದಾಗ,

''ಕಡೆಗೂ ಗೋಡೆಯ ಮೇಲಿನ ನೋಟೀಸನ್ನು ಹರಿದು ಹಾಕಲಾಗದೆ ಹೋದಿರ?''

''ಸಾರ್, ಅದು ಸರಕಾರಕ್ಕೇ ಧಂಕಿ ಕೊಡುವ ನೋಟೀಸು.''

''ನೀವೇ ಹರಿದು ಹಾಕದೆ ಹೋದಿರ?''

''ನನ್ನ ಕೈಯ್ಯಾರೆ ಹರಿದು ಹಾಕಿದರೆ ಆ ಊರಿನಲ್ಲೆಷ್ಟು ದಿನ ಅಮೀನ್‌ಗಿರಿ ಮಾಡಬಲ್ಲೆ ?''

''ಹೌದು, ಅದೂ ಸರೀನೆ.''

ಕಲೆಕ್ಟರ್, ಅಮೀನ ಇಬ್ಬರೂ ಗಲ್ಲಕ್ಕೆ ಕೈ ಹಚ್ಚಿ , ಒಬ್ಬ ಅನಾಮಿಕ ಕಾರ್ಯಕರ್ತ ನಿಜಾಮನ ನಾಜೀ ತನದ ಮೇಲೆ ಸವಾಲು ಹಾಕಿ ಬರೆದ ನೋಟೀಸನ್ನು ಹರಿದು ಹಾಕುವ ಬಗ್ಗೆ ಆಲೋಚಿಸತೊಡಗಿದರು.

''ಅಚ್ಚೀ ಬಾತ್, ನಾನು ವರಂಗಲ್ಲಿನಿಂದ ರಜಾಕಾರ ನೊಬ್ಬನನ್ನು ಕಳುಹಿಸುತ್ತೇನೆ. ಅವನು ಹಿಂದೂವಿನಂತೆ ತಲೆಗೆ ರುಮಾಲು ಸುತ್ತಿಕೊಂಡು ಧೋತಿ ಉಟ್ಟು ನೀವು ಹೇಳಿದ ತಕ್ಷಣ ಮುಂದಕ್ಕೆ ಬಂದು ಹರಿದು ಹಾಕುವ ಏರ್ಪಾಟು ಮಾಡುತ್ತೇನೆ. ಆದರೆ ನೀವೊಂದು ಕೆಲಸ ಮಾಡಬೇಕು.''

''ಆಗಲಿ. ಏನದು?''

''ಬಂದು ನೋಡುವ ಜನರಲ್ಲಿ ಯಾರೊಬ್ಬನ ಬಳಿಯೂ ಪೆನ್ನು ಕಾಗದ ಇರದಂತೆ ಮಾಡಿ.''

---

**ಅನುವಾದ : ಸ. ರಘುನಾಥ.**

ಬಾಲಾಂಜನೇಯ ಸ್ವಾಮಿ ಗುಡಿಯ ಪೂರ್ವ, ರಾಮಕೃಷ್ಣ ಬಡಾವಣೆ, ಶ್ರೀನಿವಾಸಪುರ - ೫೬೩ ೧೩೫. ಕೋಲಾರ ಜಿಲ್ಲೆ

---

*ಭಾರತೀಯ ಸಾಹಿತ್ಯ ಚರಿತ್ರೆಯಲ್ಲಿ 'ತೆಲಂಗಾಣ ಹೋರಾಟ' ಮುಖ್ಯ ಅಧ್ಯಾಯಗಳಲ್ಲಿ ಒಂದು. ೧೯೪೬ - ೫೧ರ ನಡುವೆ ನಿಜಾಮನ ನಿರಂಕುಶಾಧಿಕಾರದ ವಿರುದ್ಧ ನಡೆದ ತೆಲಂಗಾಣ ಸಶಸ್ತ್ರ ಹೋರಾಟವು ದಮನ ನೀತಿಯ ಎಲ್ಲಾ ಕುಟಿಲ ತಂತ್ರಗಳನ್ನು ಮೆಟ್ಟಿ ವಿಜೃಂಭಿಸಿತು. ಇದು ತೆಲುಗು ಕಲೆ ಮತ್ತು ಸಾಹಿತ್ಯ ಎರಡನ್ನೂ ಪ್ರೇರೇಪಿಸಿತು. ಸಾಹಿತ್ಯ ಕಲೆಗಳು ಹೋರಾಟಕ್ಕೆ ಬೆಂಬಲವಾಗಿ ನಿಂತುದಲ್ಲದೆ, ಆ ಹೋರಾಟದ ಗುಣ ಶೀಲಗಳ, ದಮನಕಾರಿ ಆಘಾತ ಒಡ್ಡಿದ ನೋವು ಅವಮಾನಗಳನ್ನು ಒಡಲಲ್ಲಿ ತುಂಬಿಕೊಂಡು ಅಭಿವ್ಯಕ್ತಗೊಳಿಸಿದವು. ಹೋರಾಟಕ್ಕೆ ಕಾವು ಸ್ಫೂರ್ತಿಯನ್ನು ನೀಡಿದವು. ನಿಜಾಮನ ಪಿತೂರಿ, ಕುತಂತ್ರಗಳನ್ನು ಪ್ರತಿಭಟಿಸಿದವು ಕೂಡ. ಆ ಕಾಲಘಟ್ಟದಲ್ಲಿ ರಚನೆಗೊಂಡ ಕಥೆ, ಕಾವ್ಯ, ಕಾದಂಬರಿಗಳಿಗೆ ಲೆಕ್ಕವಿಲ್ಲ. ಅಂಥ ಕತೆಗಳಲ್ಲಿ ಮುಖ್ಯವಾದೊಂದು ಕಥೆಯೆ 'ನೋಟೀಸು'. ಈ ಕಥೆ ಅಂದಿನ ಸಂಘರ್ಷದ ಚಿತ್ರವನ್ನು ನೀಡುತ್ತದೆ. ಈ ಕತೆಯ ವೈಶಿಷ್ಟ್ಯವೆಂದರೆ ಇದು ಹೋರಾಟ ನಡೆಯುತ್ತಿದ್ದ ಕಾಲದಲ್ಲಿ ರಚನೆಗೊಂಡು (೧೯೫೦) ಪ್ರಕಟಗೊಂಡಿತು. ಈ ಪುಟ್ಟ ಕಥೆಯಲ್ಲಿ ತೆಲಂಗಾಣ ಚಳವಳಿಯ ರೂಪು ರೇಷೆಗಳ ಸ್ಪಷ್ಟ ಚಿತ್ರಣವಿದೆ.*

*-ಅನುವಾದಕ*

# ವಿಕೇಂದ್ರೀಕರಣ ಹಾಗೂ ಅಭಿವೃದ್ಧಿ - ಕರ್ನಾಟಕದ ಅನುಭವಗಳು

■ ಟಿ. ಆರ್. ಚಂದ್ರಶೇಖರ

ನಮ್ಮ ದೇಶದಲ್ಲಿ ೮೦ರ ದಶಕದಲ್ಲಿ ವಿಕೇಂದ್ರೀಕರಣ ಕುರಿತಂತೆ ಎರಡನೆಯ ಅಭಿಯಾನ ಪ್ರಾರಂಭವಾಯಿತು. ಈ ಮಹಾಭಿಯಾನದಲ್ಲಿ ಕರ್ನಾಟಕವು ನಿರ್ಣಾಯಕ ಪಾತ್ರವನ್ನು ನಿರ್ವಹಿಸಿದೆ. ಈ ದಿಶೆಯಲ್ಲಿ ಅದು ಅನೇಕ ಪ್ರಥಮಗಳನ್ನು ಮೆರೆದಿದೆ. ಪಂಚಾಯತ್ ರಾಜ್ ಸಂಸ್ಥೆಗಳಿಗೆ (ಪಂ. ರಾ. ಸಂ.) ಸಂವಿಧಾನದ ೭೩ ಮತ್ತು ೭೪ನೆಯ ತಿದ್ದುಪಡಿಗಳು ಸಂವಿಧಾನಾತ್ಮಕ ಸ್ಥಾನಮಾನ ನೀಡಿದವು. ಇದಕ್ಕೆ ಮೂಲ ಪ್ರೇರಣೆಯು ಕರ್ನಾಟಕವು ವಿಕೇಂದ್ರೀಕರಣ ಕುರಿತಂತೆ ೮೦ರ ದಶಕದಲ್ಲಿ ತೆಗೆದುಕೊಂಡ ಕ್ರಮದಿಂದ ಪ್ರಾಪ್ತವಾಯಿತು ಎನ್ನಲಾಗಿದೆ. ಮತದಾನದ ವಯಸ್ಸನ್ನು ೨೧ ರಿಂದ ೧೮ನೆಯ ವಯಸ್ಸಿಗೆ ಇಳಿಸಿದ ಪ್ರಥಮ ರಾಜ್ಯ ಕರ್ನಾಟಕ. ಮಹಿಳೆಯರಿಗೆ ಹಾಗೂ ಹಿಂದುಳಿದ ವರ್ಗಗಳಿಗೆ ಪಂ. ರಾ. ಸಂ.ಗಳಲ್ಲಿ ಮೀಸಲಾತಿ ಒದಗಿಸಿದ ವಿಷಯದಲ್ಲೂ ಕರ್ನಾಟಕವು ಮಾದರಿ ರಾಜ್ಯವೆನಿಸಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಜಿಲ್ಲಾ ಮಟ್ಟದಲ್ಲಿ 'ಆಡಳಿತ'ವನ್ನು ಅನುಷಂಗಿಕವನ್ನಾಗಿ ಮತ್ತು 'ಅಭಿವೃದ್ಧಿ'ಯನ್ನು ಪ್ರಧಾನವನ್ನಾಗಿ ೧೯೮೩ರ ಕರ್ನಾಟಕ ಪಂಚಾಯತ್ ಕಾಯಿದೆಯಲ್ಲಿ ಮಾಡಲಾಯಿತು. ಸ್ಥಳೀಯ ಜನಪ್ರತಿನಿಧಿಗಳಿಂದ ಕೂಡಿರುವ ಪಂ.ರಾ.ಸಂ.ಗಳಿಗೆ ಅಭಿವೃದ್ಧಿಯ ಜವಾಬ್ದಾರಿಯನ್ನು ನೀಡಲಾಯಿತು. ಜಿಲ್ಲಾ ಆಡಳಿತ ಹಾಗೂ ಜಿಲ್ಲಾಧಿಕಾರಿಗಳ ಪಾತ್ರವನ್ನು ಆಡಳಿತ - ರೆವಿನ್ಯೂ ಚಟುವಟಿಕೆಗಳಿಗೆ ಸೀಮಿತಗೊಳಿಸಲಾಯಿತು. ಆಡಳಿತವನ್ನು ಅಭಿವೃದ್ಧೀಕರಣಕ್ಕೆ ಒಳಪಡಿಸುವ ದಿಶೆಯಲ್ಲಿ ಇದೊಂದು ಮಹತ್ವದ ಹೆಜ್ಜೆಯಾಗಿತ್ತು. ವಸಾಹತುಶಾಹಿ ಕಾಲದಿಂದಲೂ ನಡೆದುಕೊಂಡು ಬಂದಿದ್ದ ಅಭಿವೃದ್ಧಿಯ ಆಡಳಿತೀಕರಣಕ್ಕೆ ತಡೆಯೊಡ್ಡುವ ಒಂದು ಕ್ರಮ ಇಲ್ಲಿ ಪ್ರಾರಂಭವಾಯಿತು.

ಕರ್ನಾಟಕದಲ್ಲಿ ಪಂ. ರಾ. ಸಂ.ಗಳಿಗೆ ಸಂಬಂಧಿಸಿದಂತೆ ನಡೆದ ಪ್ರಯೋಗವು ೮೦ರ ದಶಕದಲ್ಲಿ ಪ್ರಗತಿ ಪರ್ವವನ್ನು ಅನುಭವಿಸಿದರೆ ೯೦ರ ದಶಕದಲ್ಲಿ ಅದು ವಿಗತಿಯ ಪರ್ವವನ್ನು ಪ್ರವೇಶಿಸಿಬಿಟ್ಟಿತು ಎನ್ನಲಾಗಿದೆ. ಈ ಪರ್ವವು ಇಂದು ಮುಂದುವರಿದು 'ಅವನತಿ'ಯ ಸ್ವರೂಪ ಪಡೆದುಕೊಂಡುಬಿಟ್ಟಿದೆ. ವಿಕೇಂದ್ರೀಕರಣ, ಸ್ವಯಂಮಾಡಳಿತ, ಸ್ಥಳೀಯ ಜನಪ್ರತಿನಿಧಿ ಸಂಸ್ಥೆಗಳಿಗೆ ಅಭಿವೃದ್ಧಿಯ ಜವಾಬ್ದಾರಿ-ಮುಂತಾದ ವಿಷಯಗಳಲ್ಲಿ ಕರ್ನಾಟಕವು ಇಂದು ಹಿಂದೆ ಸರಿಯುತ್ತಿರುವಂತೆ ಭಾಸವಾಗುತ್ತಿದೆ. ಸ್ಥಳೀಯ ಜನಪ್ರತಿನಿಧಿ ಸಂಸ್ಥೆಗಳು ಇಂದು ಮೇಲ್ಮಟ್ಟದ ಜನಪ್ರತಿನಿಧಿಗಳ ಹಾಗೂ ಅಧಿಕಾರಶಾಹಿಯ ಆಕ್ರಮಣಕ್ಕೆ ಒಳಗಾಗಿಬಿಟ್ಟಿವೆ. ಮೇಲ್ಮಟ್ಟದ, ಅಂದರೆ ರಾಜ್ಯ ಹಾಗೂ ಕೇಂದ್ರಮಟ್ಟದ ಜನಪ್ರತಿನಿಧಿಗಳು ಹಾಗೂ ಅಧಿಕಾರ ಕೇಂದ್ರಗಳು ಪಂ. ರಾ. ಸಂ.ಗಳನ್ನು ತಮ್ಮ ಪಾಳೆಯಪಟ್ಟುಗಳನ್ನಾಗಿ ಮಾಡಿಕೊಂಡುಬಿಟ್ಟಿವೆ. ಅಭಿವೃದ್ಧಿಯನ್ನು ಇಂದು ಕಾನೂನು, ಶಾಂತಿ, ಸುವ್ಯವಸ್ಥೆಯ ಸಂಗತಿಯನ್ನಾಗಿ, ರೆವಿನ್ಯೂ ಚಟುವಟಿಕೆಯನ್ನಾಗಿ ಪರಿವರ್ತಿಸಿರುವ ದುರಂತ ನಮ್ಮ ಮುಂದಿದೆ.

**ಸ್ಥಳೀಯ ಜನಪ್ರತಿನಿಧಿ ಸಂಸ್ಥೆಗಳು ಇಂದು ಮೇಲ್ಮಟ್ಟದ ಜನಪ್ರತಿನಿಧಿಗಳ ಹಾಗೂ ಅಧಿಕಾರಶಾಹಿಯ ಆಕ್ರಮಣಕ್ಕೆ ಒಳಗಾಗಿಬಿಟ್ಟಿವೆ. ಮೇಲ್ಮಟ್ಟದ, ಅಂದರೆ ರಾಜ್ಯ ಹಾಗೂ ಕೇಂದ್ರಮಟ್ಟದ ಜನಪ್ರತಿನಿಧಿಗಳು ಹಾಗೂ ಅಧಿಕಾರ ಕೇಂದ್ರಗಳು ಪಂ.ರಾ.ಸಂ.ಗಳನ್ನು ತಮ್ಮ ಪಾಳೆಯಪಟ್ಟುಗಳನ್ನಾಗಿ ಮಾಡಿಕೊಂಡುಬಿಟ್ಟಿವೆ. ಅಭಿವೃದ್ಧಿಯನ್ನು ಇಂದು ಕಾನೂನು, ಶಾಂತಿ, ಸುವ್ಯವಸ್ಥೆಯ ಸಂಗತಿಯನ್ನಾಗಿ, ರೆವಿನ್ಯೂ ಚಟುವಟಿಕೆಯನ್ನಾಗಿ ಪರಿವರ್ತಿಸಿರುವ ದುರಂತ ನಮ್ಮ ಮುಂದಿದೆ.**

ಪ್ರಸ್ತುತ ಪ್ರಬಂಧದಲ್ಲಿ ಕರ್ನಾಟಕದಲ್ಲಿ ಪಂ. ರಾ. ಸಂ.ಗಳು ಹಿಡಿದಿರುವ ಅವನತಿಯ ಪರಿಯನ್ನು ಚರ್ಚಿಸಲಾಗಿದೆ. ಅಭಿವೃದ್ಧಿ ಮತ್ತು ಆಡಳಿತಗಳ ನಡುವಿನ ಸಂಬಂಧವನ್ನು ಇಲ್ಲಿ ವಿಶ್ಲೇಷಣೆಗೆ ಒಡ್ಡಲಾಗಿದೆ. ಸ್ಥಳೀಯ ಜನಪ್ರತಿನಿಧಿ ಸಂಸ್ಥೆಗಳು ಯಾವ ರೀತಿಯಲ್ಲಿ ಉನ್ನತ ಮಟ್ಟದ ಅಧಿಕಾರ ಕೇಂದ್ರಗಳ ನಿಯಂತ್ರಣಕ್ಕೆ ಒಳಗಾಗಿವೆ ಎಂಬುದನ್ನು ಇಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ.

## ಭಾಗ ೧

### ಅಭಿವೃದ್ಧಿ ಮತ್ತು ಆಡಳಿತ

ಎರಡು ನೂರು ವರ್ಷಗಳ ಆಳ್ವಿಕೆಯಲ್ಲಿ ವಸಾಹತುಶಾಹಿಯು ಭಾರತದಲ್ಲಿ ಕಟ್ಟಿದ ವ್ಯವಸ್ಥೆಯೆಂದರೆ ಆಡಳಿತಯಂತ್ರ ಮತ್ತು ಅಧಿಕಾರಶಾಹಿ. ಇಲ್ಲಿನ ಜನರ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಬದುಕಿನ ಮೇಲೆ ನಿಯಂತ್ರಣ ಸಾಧಿಸಬೇಕೆಂಬುದೇ ವಸಾಹತುಶಾಹಿ ಆಳ್ವಿಕೆಯ ಬೀಜ ಉದ್ದೇಶವಾಗಿತ್ತು. ಅದು ೨೦೦ ವರ್ಷಗಳ ಕಾಲ ಇಲ್ಲಿ ಅದಕ್ಕಾಗಿ ಪ್ರಯತ್ನಿಸಿತು. 'ಆಡಳಿತ'ವನ್ನು ಭಾರತೀಯರಿಗೆ ಕಲಿಸುವ ಸಲುವಾಗಿಯೇ ನಮ್ಮನ್ನು 'ವಿಧಿಯು' ಇಲ್ಲಿಗೆ ಕಳುಹಿಸಿದೆ ಎಂಬ ಅಹಂಕಾರದಿಂದ ವಸಾಹತುಶಾಹಿ ಆಳ್ವಿಕೆ ಇಲ್ಲಿ ಮೆರೆಯಿತು. ಕ್ರಮಬದ್ಧ ಹಾಗೂ ಕಾನೂನುಬದ್ಧ ಆಡಳಿತವನ್ನು ಒದಗಿಸಿಬಿಟ್ಟರೆ ಸಾಕು, ಜನರು ಅಭಿವೃದ್ಧಿಯ ಜವಾಬ್ದಾರಿಯನ್ನು ತಮ್ಮಷ್ಟಕ್ಕೆ ತಾವು ನಿರ್ವಹಿಸಿಕೊಂಡು ಹೋಗುತ್ತಾರೆ ಎಂಬ ತತ್ವವನ್ನು ವಸಾಹತುಶಾಹಿಯು ಇಲ್ಲಿ ಪ್ರತಿಪಾದಿಸಿತು. ಆಡಳಿತವನ್ನು ನಡೆಸುವುದು ಗೊತ್ತಿಲ್ಲದಿರುವುದೇ ಭಾರತದ ಮುಖ್ಯ ಸಮಸ್ಯೆ ಎಂದು ಗುರುತಿಸಲಾಯಿತು. ಇದನ್ನು ನಿಮಿತ್ತಮಾಡಿಕೊಂಡು ಇಲ್ಲಿ ವಸಾಹತುಶಾಹಿಯು ಬೃಹತ್ ಆಡಳಿತ ವ್ಯವಸ್ಥೆಯನ್ನು ರೂಪಿಸಿತು. ವಿರಾಟ್ ಸ್ವರೂಪದ ಅಧಿಕಾರಶಾಹಿಯು ರೂಪುಗೊಂಡಿತು. ಕಾನೂನು-ಕಟ್ಟಳೆಗಳನ್ನು ರಚಿಸಲಾಯಿತು. ಪೊಲೀಸು - ನ್ಯಾಯಾಂಗ ವ್ಯವಸ್ಥೆಯನ್ನು ಬಲಪಡಿಸಿದರು. ಈ ಎಲ್ಲ ಪ್ರಯತ್ನ - ಪ್ರಯೋಗಗಳ ಹಿಂದೆ ಆಡಳಿತಾತ್ಮಕ ದೃಷ್ಟಿಕೋನ ಕೆಲಸ ಮಾಡುತ್ತಿತ್ತು.

ಆಡಳಿತವೆಂದರೆ 'ನಿಯಂತ್ರಣ'-'ಹತೋಟಿ' ಎಂದೇ ವಸಾಹತುಶಾಹಿ ತಿಳಿದುಕೊಂಡಿತ್ತು. ಅಭಿವೃದ್ಧಿಯು ಅಲ್ಲಿ ಅನುಷಂಗಿಕವಾಗಿಬಿಟ್ಟಿತು ಮತ್ತು ಅದು ಆಡಳಿತ ಯಂತ್ರದ ಅನುಬಂಧವಾಗಿಬಿಟ್ಟಿತು. ಜಿಲ್ಲೆಯನ್ನು ಮೂಲ ಘಟಕವನ್ನಾಗಿ ಮಾಡಿಕೊಂಡು ವಸಾಹತುಶಾಹಿಯು ಇಲ್ಲಿ ಆಡಳಿತ ವ್ಯವಸ್ಥೆಯನ್ನು ರೂಪಿಸಿತು. ಜಿಲ್ಲಾಧಿಕಾರಿಯು ಆಡಳಿತ ವ್ಯವಸ್ಥೆಯ ಧಾತುವಾಗಿದ್ದನು. ಆಡಳಿತ ವ್ಯವಸ್ಥೆಯ ಮುಖ್ಯ ಕಾರ್ಯವು ರೆವಿನ್ಯೂ ವ್ಯವಹಾರವಾಗಿತ್ತು. ಆಡಳಿತವೆನ್ನುವುದು ರೆವಿನ್ಯೂ ಆಡಳಿತವೇ ಆಗಿ ಪರಿಣಮಿಸಿತ್ತು. ಜಿಲ್ಲಾಧಿಕಾರಿಯು ಮೂಲಭೂತವಾಗಿ ರೆವಿನ್ಯೂ ಮುಖ್ಯಸ್ಥ. ಅವನೇ ಜಿಲ್ಲೆಯ ದಂಡಾಧಿಕಾರಿಯೂ ಆಗಿದ್ದ. ಜಿಲ್ಲಾಧಿಕಾರಿ ಮತ್ತು ಜಿಲ್ಲಾ ಆಡಳಿತವು ಸರ್ಕಾರದ ಕಣ್ಣು-ಕಿವಿಯಾಗಿ ಕೆಲಸ ಮಾಡುತಿದ್ದವು. ಎಲ್ಲ ಸಂಗತಿಗಳಿಗೂ ಸರ್ಕಾರವು ಜಿಲ್ಲಾಧಿಕಾರಿಯನ್ನು, ಜಿಲ್ಲಾ ಆಡಳಿತವನ್ನು ಅವಲಂಬಿಸಿಕೊಂಡಿತ್ತು. ಜನರ ಸಹಭಾಗಿತ್ವವಿರಲಿ, ಜನರ ಪ್ರಾತಿನಿಧ್ಯಕ್ಕೂ ಆಡಳಿತ ವ್ಯವಸ್ಥೆಯಲ್ಲಿ ಅವಕಾಶವಿರಲಿಲ್ಲ. ಇದ್ದರೂ ಅದು ಹೆಸರಿಗೆ ಮಾತ್ರ ಎನ್ನುವಂತಿತ್ತು.

### ಸ್ವಾತಂತ್ರ್ಯಾನಂತರ ಏನಾಯಿತು ?

ಸ್ವಾತಂತ್ರ್ಯಾನಂತರ ಆಡಳಿತ ವ್ಯವಸ್ಥೆಯು ಅಭಿವೃದ್ಧೀಕರಣಕ್ಕೆ ಒಳಗಾಗಬೇಕಾಗಿತ್ತು. ಆಡಳಿತವು ಅಭಿವೃದ್ಧಿಯನ್ನು ನಿಯಂತ್ರಿಸುವ ಒಂದು ವ್ಯವಸ್ಥೆಯಾಗುವುದಕ್ಕೆ ಪ್ರತಿಯಾಗಿ

ಅದು ಅಭಿವೃದ್ಧಿಯ ವಿಯೋಗಿಯಾಗಬೇಕಾಗಿತ್ತು. ಸ್ವಾತಂತ್ರ್ಯಾನಂತರ ಆಡಳಿತವು ರೆವಿನ್ಯೂ ವ್ಯವಸ್ಥೆಯಾಗಿಯೇ ಮುಂದುವರಿಯಿತು. ಅಭಿವೃದ್ಧಿಯನ್ನು ರೆವಿನ್ಯೂ ಚಟುವಟಿಕೆಯನ್ನಾಗಿ ಪರಿಭಾವಿಸಿಕೊಳ್ಳಲಾಯಿತು. ಜಿಲ್ಲಾಮಟ್ಟದಲ್ಲಿ ರೆವಿನ್ಯೂ ಅಧಿಕಾರಿಯಾಗಿದ್ದ ಜಿಲ್ಲಾಧಿಕಾರಿಗೆ ಅಭಿವೃದ್ಧಿಯ ಸೂತ್ರಗಳನ್ನು ವಹಿಸಿಕೊಡಲಾಯಿತು. ಜಿಲ್ಲಾಧಿಕಾರಿಯು ಜಿಲ್ಲೆಯ ಮಟ್ಟದಲ್ಲಿ ಸರ್ಕಾರದ 'ಕಣ್ಣು-ಕಿವಿ'ಯಾಗಿ ಕೆಲಸ ಮಾಡುತ್ತಿರುವ ಸ್ಥಿತಿ ಇಂದಿಗೂ ಇದೆ. ಸರ್ಕಾರಕ್ಕೆ ಆಡಳಿತ ಸೂತ್ರ ಹಿಡಿದಿರುವ ಅಧಿಕಾರಶಾಹಿಯ ಮೇಲೆ ವಿಶ್ವಾಸವು ಅಧಿಕವೇ ವಿನಾ ಸ್ಥಳೀಯ ಮಟ್ಟದ ಪಂ. ರಾ. ಸಂ.ಗಳ ಜನಪ್ರತಿನಿಧಿಗಳಲ್ಲಿ ಅಲ್ಲ!

ಆಡಳಿತ-ರೆವಿನ್ಯೂ ಸಂಗತಿಗಳು ಪ್ರಧಾನವಾಗಿರುವ ವ್ಯವಸ್ಥೆಯಲ್ಲಿ ಅಭಿವೃದ್ಧಿಯಷ್ಟೇ ಅಲ್ಲ, ಜನರೂ ಕೂಡ ಆನುಷಂಗಿಕರಾಗಿಬಿಟ್ಟಿದ್ದಾರೆ. ಇಡೀ ದೇಶವನ್ನು, ಅದರೊಳಗೆ ರಾಜ್ಯವನ್ನು ಅಖಂಡ-ಏಕರೂಪ ಘಟಕವೆನ್ನುವಂತೆ ಪರಿಭಾವಿಸಿಕೊಳ್ಳಲಾಗಿದೆ. ಆಡಳಿತವನ್ನು ಏಕರೂಪೀಕರಣಕ್ಕೆ ಒಳಪಡಿಸಿದಂತೆ ಅಭಿವೃದ್ಧಿಯನ್ನು ಇಲ್ಲಿ ಅಖಂಡವಾದಿ ನೆಲೆಯಲ್ಲಿ ಸಂಘಟಿಸಲು ಪ್ರಯತ್ನಿಸಲಾಗಿದೆ. ಕೈಗಾರಿಕೆಗಳು, ನೀರಾವರಿ ಯೋಜನೆಗಳು, ಶಕ್ತಿಸ್ಥಾವರಗಳನ್ನು ಕೇಂದ್ರೀಕೃತ ನೆಲೆಯಲ್ಲಿ ಬೃಹತ್ ಸ್ವರೂಪದಲ್ಲಿ ಕಟ್ಟಿ ಬೆಳೆಸಲಾಯಿತು. ಇಲ್ಲಿಯೂ ಆಡಳಿತದ ಅಟ್ಟಹಾಸವೇ ನಡೆದಿದೆ. ಕಾನೂನು, ಶಾಸನ, ಕಟ್ಟು-ಕಟ್ಟಳೆಗಳು ಇಲ್ಲಿ ಮುಖ್ಯವಾಗಿಬಿಟ್ಟು ಸಾಮಾಜಿಕ ಸಂಕೀರ್ಣತೆಗಳು ಮೂಲೆಗುಂಪಾಗಿಬಿಟ್ಟವು.

**ಮೇಲಿನಿಂದ ಕೆಳಗೆ ಅಭಿವೃದ್ಧಿಯ ಹರಿಯುವಿಕೆ**

ಕೇಂದ್ರ-ರಾಜ್ಯಗಳ ಮಟ್ಟದಲ್ಲಿ ಸಂಘಟಿಸಿದ ಅಭಿವೃದ್ಧಿ ಯೋಜನೆಗಳು ಹರಿಯಬಿಡುವ ಫಲಗಳು ಸಾವಕಾಶವಾಗಿ ಸಮಾಜದ ತಳಮಟ್ಟದ ಜನವರ್ಗವನ್ನೂ ತಲುಪುತ್ತವೆ ಎಂದು ಪ್ರತಿಪಾದಿಸಲಾಯಿತು. ಅದಕ್ಕಾಗಿ ಬೃಹತ್ ಪ್ರಮಾಣದಲ್ಲಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲಾಯಿತು. ಬೃಹತ್ ಪ್ರಮಾಣದ ಉತ್ಪಾದನೆಯಿಂದ ಉಂಟಾಗುವ ಅನುಕೂಲಗಳು ಮಾತ್ರ ನಮ್ಮ ಸಮಾಜದ ಬಡತನ - ಹಸಿವು - ನಿರುದ್ಯೋಗಗಳನ್ನು ನಿವಾರಣೆ ಮಾಡಬಲ್ಲವು ಎಂದೂ ಪ್ರತಿಪಾದಿಸಲಾಯಿತು.

ಆದರೆ ಇದಾವುದೂ ಸಂಭವಿಸಲಿಲ್ಲ ಎಂಬುದು ಈಗ ನಿಚ್ಚಳವಾಗಿದೆ. ಆಡಳಿತವು ಕೇಂದ್ರೀಕರಣಕ್ಕೆ ಒಳಗಾಗದಂತೆ ಅಭಿವೃದ್ಧಿಯೂ ಕೇಂದ್ರೀಕರಣ ಹಾಗೂ ಆಡಳಿತೀಕರಣಕ್ಕೆ ಒಳಗಾಯಿತು. ಶ್ರೇಣೀಕೃತ ಸಾಮಾಜಿಕ ವಾಸ್ತವತೆಗಳಿಗೆ ಅದು ಕುರುಡಾಗಿತ್ತು. ಅಭಿವೃದ್ಧಿಯ ಫಲಗಳು ಸಮಾಜದ ಬುಡಮಟ್ಟದಲ್ಲಿರುವ ವಂಚಿತವರ್ಗಗಳಿಗೆ ತಲುಪುವುದಕ್ಕೆ ಪ್ರತಿಯಾಗಿ ಉನ್ನತವರ್ಗಗಳಲ್ಲಿ ಮಡುಗಟ್ಟಿಕೊಂಡುಬಿಟ್ಟವು. ಈ ಕಾರಣದಿಂದಾಗಿಯೇ ಅಭಿವೃದ್ಧಿಯು ನಡೆದಿದ್ದಾಗ್ಯೂ ಇಲ್ಲಿ ಬಡತನ, ಹಸಿವು, ಅನಕ್ಷರತೆಗಳು ಮುಂದುವರಿಯುತ್ತಿವೆ ಮತ್ತು ತೀವ್ರಗೊಂಡಿವೆ.

ಅಮರ್ತ್ಯ ಸೆನ್ ಸರಿಯಾಗಿ ಗುರುತಿಸಿರುವಂತೆ ನಮ್ಮ ಸಮಾಜದ ಸಂದರ್ಭದಲ್ಲಿ ಆಹಾರವು ಇರುವುದು ಅಥವಾ ಇಲ್ಲದಿರುವುದು ಎಂಬ ಪ್ರಶ್ನೆಯಲ್ಲ. ಇದಕ್ಕೆ ಪ್ರತಿಯಾಗಿ ಆಹಾರವು ವಂಚಿತ ವರ್ಗಗಳಿಗೆ ದೊರೆಯುತ್ತಿಲ್ಲವೆಂಬುದು ಮುಖ್ಯ ಪ್ರಶ್ನೆಯಾಗಿದೆ. ಜನರ ಹಕ್ಕುದಾರಿಕೆಯ ದುಸ್ಥಿತಿಯಲ್ಲಿ ಸೆನ್ ಬಡತನವನ್ನು ಕಾಣಲು ಪ್ರಯತ್ನಿಸುತ್ತಾರೆ. ಈ ವಂಚಿತ ವರ್ಗಗಳಿಗೆ 'ಅಧಿಕಾರ'ದಲ್ಲಿ ಪಾಲು ದೊರೆಯುವಂತಾಗಬೇಕು. ಅಭಿವೃದ್ಧಿ ಅನ್ನೋದು ಚಾರಿಟಿ ಅಲ್ಲ. ಅದು ಜನರ ಹಕ್ಕು. ಆದರೆ ಹಕ್ಕುದಾರಿಕೆಯಿಂದ ಅನೇಕ ಸಾಮಾಜಿಕ ಗುಂಪುಗಳು ವಂಚಿತವಾಗಿವೆ. ವಿಕೇಂದ್ರೀಕರಣ, ಪಂ. ರಾ. ಸಂ. ಗಳಲ್ಲಿ ಮೀಸಲಾತಿ, ಸಹಭಾಗಿತ್ವವಾದಿ ಅಭಿವೃದ್ಧಿ, ಮುಂತಾದ ಪ್ರಯೋಗಗಳ ಮೂಲದಲ್ಲಿ ಕೆಲಸ ಮಾಡುತ್ತಿರುವ ಸಂಗತಿಯೆಂದರೆ ಸ್ಥಳೀಯ ಮಟ್ಟದಲ್ಲಿ ವಂಚಿತ ಸಮುದಾಯಗಳಿಗೆ ಅಧಿಕಾರ ಹಾಗೂ ಅಭಿವೃದ್ಧಿಯಲ್ಲಿ ಪಾಲು ನೀಡುವುದಾಗಿದೆ.

ಅಭಿವೃದ್ಧಿಯನ್ನು ಕೇವಲ ವರಮಾನ - ಉತ್ಪನ್ನ - ಉದ್ಯೋಗಗಳ ವರ್ಧನೆಯಲ್ಲಿ ಕಂಡುಕೊಳ್ಳುವುದರಲ್ಲಿ ಅರ್ಥವಿಲ್ಲ. ವರಮಾನ - ಉತ್ಪನ್ನ - ಉದ್ಯೋಗಗಳನ್ನು ದಕ್ಕಿಸಿಕೊಳ್ಳಲು ಅಗತ್ಯವಾದ ಸಾಮರ್ಥ್ಯ ಹಾಗೂ ಸ್ವಾತಂತ್ರ್ಯದಲ್ಲಿ ಸೆನ್ ಅಭಿವೃದ್ಧಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಬುಡಮಟ್ಟದಲ್ಲಿ ವಂಚಿತ ಸಮುದಾಯಗಳ ಹಕ್ಕುದಾರಿಕೆ, ಅವಕಾಶಗಳನ್ನು ದಕ್ಕಿಸಿಕೊಳ್ಳುವ ಸಾಮರ್ಥ್ಯ, ಅವಕಾಶಗಳಲ್ಲಿ ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯದಲ್ಲಿ ಅಮರ್ತ್ಯ ಸೆನ್ ಅಭಿವೃದ್ಧಿಯನ್ನು ಗುರುತಿಸುತ್ತಾರೆ. ಈ ಬಗೆಯ ಸಾಮರ್ಥ್ಯ-ಸ್ವಾತಂತ್ರ್ಯಗಳ ವರ್ಧನೆಯು ವಿಕೇಂದ್ರೀಕರಣ ಹಾಗೂ ಪಂ. ರಾ. ಸಂ.ಗಳಿಂದ ಸಾಧ್ಯ. ಆದರೆ ಪಂ. ರಾ. ಸಂ. ಗಳನ್ನು ಸ್ವಯಮಾಡಳಿತ ಘಟಕಗಳನ್ನಾಗಿ ಮಾಡಲು ರಾಜ್ಯ ಸರ್ಕಾರವಾಗಲಿ ಅಥವಾ ಕೇಂದ್ರ ಸರ್ಕಾರವಾಗಲಿ ಸಿದ್ಧವಿಲ್ಲ. ಇಲ್ಲಿ ನಿಜವಾದ ಸಮಸ್ಯೆಯಿದೆ.

**ಭಾಗ ೨**

**ಪಂ. ರಾ. ಸಂ.ಗಳ ಅವನತಿ**

ಕರ್ನಾಟಕದಲ್ಲಿ ೮೦ರ ದಶಕದಲ್ಲಿ ಪ್ರಗತಿಯ ಪರ್ವವನ್ನು ಅನುಭವಿಸಿದ ಪಂ. ರಾ. ಸಂ.ಗಳು ೯೦ರ ದಶಕದಲ್ಲಿ ವಿಗತಿಯ ಪರ್ವವನ್ನು ಎದುರಿಸಬೇಕಾಯಿತು. ಇಂದು ಅವು ಅವನತಿಯ ದಾರಿ ಹಿಡಿದಿವೆ. ಅತ್ಯಂತ ವ್ಯವಸ್ಥಿತವಾಗಿ ಅವುಗಳ ಅಧಿಕಾರವನ್ನು ಮೊಟಕುಗೊಳಿಸಲಾಗುತ್ತಿದೆ. ಅವುಗಳನ್ನು ಉನ್ನತಮಟ್ಟದ ಅಧಿಕಾರ ಕೇಂದ್ರಗಳು ತಮ್ಮ ಅಡಿಯಾಳನ್ನಾಗಿ ಮಾಡಿಕೊಳ್ಳಲು ಹವಣಿಸುತ್ತಿವೆ. ಕರ್ನಾಟಕದಲ್ಲಿ ಪಂ. ರಾ. ಸಂ.ಗಳು ಎರಡು ದಿಕ್ಕಿನಿಂದ ಅಪಾಯವನ್ನು ಎದುರಿಸುತ್ತಿವೆ. ಮೊದಲನೆಯದಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಧಿಕಾರವನ್ನು ಪಂ. ರಾ.ಸಂ.ಗಳಿಗೆ ಪೂರ್ಣ ಪ್ರಮಾಣದಲ್ಲಿ ವರ್ಗಾಯಿಸಲು ಸಿದ್ಧವಿಲ್ಲ. ತಮ್ಮ ಅಂಕುಶವನ್ನು ಪಂ. ರಾ. ಸಂ.ಗಳ ಮೇಲೆ ಪ್ರಯೋಗಿಸಲು ಅವು ಪ್ರಯತ್ನ ನಡೆಸಿವೆ.

ಎರಡನೆಯದಾಗಿ 'ಅಧಿಕಾರಶಾಹಿ'ಯು ವಿಕೇಂದ್ರೀಕರಣಕ್ಕೆ ವಿರೋಧಿಯಾಗಿದೆ. ವಿಕೇಂದ್ರೀಕರಣದಿಂದಾಗಿ ಪ್ರಪ್ರಥಮವಾಗಿ ಅಧಿಕಾರಶಾಹಿಯು ಅಪ್ರಸ್ತುತವಾಗಿ ಬಿಡುತ್ತದೆ. ಅದು ತನ್ನ ಅಧಿಕಾರ ಹಾಗೂ ಕಾರ್ಯಕ್ಷೇತ್ರ ಸಂಕುಚಿತಗೊಳ್ಳುವುದನ್ನು ಸಹಿಸುವುದಿಲ್ಲ. ಅಧಿಕಾರಶಾಹಿಯು ಕೇಂದ್ರ ಹಾಗೂ ರಾಜ್ಯಮಟ್ಟದ ಸರ್ಕಾರಗಳಿಗೆ ಜವಾಬ್ದಾರಿಯಾಗಿರಲು ಸಿದ್ಧವಾಗಿದೆ. ಆದರೆ ಸ್ಥಳೀಯ ಮಟ್ಟದ ಸ್ವಯಮಾಡಳಿತ ಸರ್ಕಾರಗಳಿಗೆ ಜವಾಬ್ದಾರವಾಗಲು ಸಿದ್ಧವಿಲ್ಲ.

ಆಡಳಿತದ ಅಭಿವೃದ್ಧೀಕರಣಕ್ಕೆ ಅಧಿಕಾರಶಾಹಿಯು ಬದ್ಧವಿರೋಧಿಯಾಗಿದೆ. ಏಕೆಂದರೆ ಅಧಿಕಾರಶಾಹಿಯ ಜೀವಧಾತುವೆಂದರೆ ಆಡಳಿತ. ಅದು ಅಭಿವೃದ್ಧಿಯನ್ನು ಆಡಳಿತೀಕರಣಗೊಳಿಸಲು ಸದಾ ಪ್ರಯತ್ನಿಸುತ್ತಿರುತ್ತದೆ. ಆಡಳಿತವು ಅವಿಚ್ಛಿನ್ನವಾಗಿ ಮುಂಚೂಣಿಯಲ್ಲಿರಬೇಕಾದರೆ ಕೇಂದ್ರೀಕರಣ ಹಾಗೂ ಏಕರೂಪೀಕರಣದ ಅಗತ್ಯವಿದೆ. ಈ ದಿಶೆಯಲ್ಲಿ ಅಧಿಕಾರಶಾಹಿಯು ರಾಜ್ಯ ಹಾಗೂ ಕೇಂದ್ರಮಟ್ಟದ ಅಧಿಕಾರ ಕೇಂದ್ರಗಳ ಜೊತೆ ಶಾಮೀಲಾಗಿ ವಿಕೇಂದ್ರೀಕರಣ ಪ್ರಯೋಗವನ್ನು ವಿಫಲಗೊಳಿಸಲು ಕಟಿಬದ್ಧವಾಗಿದೆ. ಕರ್ನಾಟಕದಲ್ಲಿ ಪಂ. ರಾ. ಸಂ.ಗಳ ಅವನತಿ ಹಾಗೂ ಅವುಗಳ ಅಧಿಕಾರ ಹರಣ ಹೇಗೆ ನಡೆದಿದೆ ಎಂಬುದನ್ನು ಇಲ್ಲಿ ನಾವು ಚರ್ಚಿಸಬಹುದಾಗಿದೆ.

**೧. ಮೀಸಲಾತಿಯ ಆಡಳಿತೀಕರಣ**

ಮೀಸಲಾತಿಯ ಹಿಂದಿನ ಸೈದ್ಧಾಂತಿಕ ಉದ್ದೇಶಗಳ ಬಗ್ಗೆ ಇಂದು ದಿವ್ಯ ನಿರ್ಲಕ್ಷ್ಯ ಕಂಡುಬರುತ್ತದೆ. ಅದನ್ನು ಅತ್ಯಂತ ಸೀಮಿತ ನೆಲದಲ್ಲಿ ಕೇವಲ ಒಂದು ರಾಜಕೀಯ ಸಾಧನವನ್ನಾಗಿ ನೋಡಲಾಗುತ್ತಿದೆ ವಿನಾ ಅದೊಂದು ಅಭಿವೃದ್ಧಿಯ ನಿಯೋಗವೆಂದಾಗಲಿ ಸಾಮಾಜಿಕ ಆರ್ಥಿಕ ಸಬಲೀಕರಣದ ಪ್ರಕ್ರಿಯೆಯೆಂದಾಗಲಿ ಪರಿಗಣಿಸುವುದು ಕಂಡುಬರುತ್ತಿಲ್ಲ. ಹಿಂದುಳಿದ ವರ್ಗಗಳ, ದಲಿತರ ಹಾಗೂ ಮಹಿಳೆಯರ ಸಬಲೀಕರಣದ ರಾಜಕಾರಣವನ್ನು ರಾಜ್ಯ ಸರ್ಕಾರವು ಅತ್ಯಂತ ಸೀಮಿತ ನೆಲೆಯಲ್ಲಿ ಪರಿಭಾವಿಸಿಕೊಂಡಿರುವುದು ಸ್ಪಷ್ಟವಾಗಿದೆ.

ಪಂ. ರಾ. ಸಂ.ಗಳ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರ ಸ್ಥಾನಗಳಿಗೂ ಮೀಸಲಾತಿ ಅವಕಾಶವನ್ನು ವಿಸ್ತರಿಸಿರುವ ಕ್ರಮ ಅತ್ಯಂತ ಶ್ಲಾಘನೀಯವಾದುದಾಗಿದೆ. ಸಮಾಜದ ದುರ್ಬಲ-ವಂಚಿತ ವರ್ಗಗಳಿಗೂ ಅಧಿಕಾರದಲ್ಲಿ ಪಾಲು ನೀಡಬೇಕೆಂಬುದೇ ಇದರ ಬೀಜೋದ್ದೇಶವಾಗಿದೆ. ಇತ್ತೀಚೆಗೆ ರಾಜ್ಯ ಸರ್ಕಾರವು ಸಮುದಾಯವಾರು ಮೀಸಲಾತಿ ಕ್ಷೇತ್ರಗಳನ್ನು ನಿರ್ಧರಿಸುವ ಜವಾಬ್ದಾರಿಯನ್ನು ರಾಜ್ಯ ಚುನಾವಣಾಧಿಕಾರಿ ವಶದಿಂದ ಜಿಲ್ಲಾಧಿಕಾರಿಗೆ ವರ್ಗಾವಣೆ



ಸಣ್ಣದೇನಲ್ಲ ಹೆಗಡೆ-ಪಟೇಲರ ಪಾತ್ರ
ರೋಡಿಲ್ಲ ಮನೆಯಿಲ್ಲ ನೀರಿಲ್ಲ ಬೆಳೆಯಿಲ್ಲ
ಉದ್ಯೋಗವಂತೂ ಇಲ್ಲ ಎಂಬ ಹಳ್ಳಿಗರಿಗೆಲ್ಲ
ಹಳ್ಳಿಹಳ್ಳಿಗೂ ಕೊಟ್ಟಿಲ್ಲವೆ ''ತೀರ್ಥಕ್ಷೇತ್ರ'' !

ಮಾಡಿದೆ. ಈ ಕ್ರಮವು ಮೊದಲನೆಯದಾಗಿ ಮೀಸಲಾತಿಯಲ್ಲಿ ರಾಜಕೀಯ ಹಸ್ತಕ್ಷೇಪಕ್ಕೆ ಅವಕಾಶ ಮಾಡಿಕೊಡುತ್ತದೆ. ಎರಡನೆಯದಾಗಿ ಇದು ಉನ್ನತ ಮಟ್ಟದ ಅಧಿಕಾರ ಕೇಂದ್ರವು ಪಂ. ರಾ. ಸಂ.ಗಳ ಮೇಲೆ ನಿಯಂತ್ರಣ ಸಾಧಿಸಲು ಅನುವು ಮಾಡಿಕೊಡುತ್ತದೆ. ಪಂ. ರಾ. ಸಂ.ಗಳ ಸಬಲೀಕರಣಕ್ಕೆ ಹಾಗೂ ಅಧಿಕಾರದ ವಿಕೇಂದ್ರೀಕರಣಕ್ಕೆ ಇದರಿಂದ ದೊಡ್ಡ ಪೆಟ್ಟು ಬಿದ್ದಿದೆ. ಸಮುದಾಯವಾರು ಮೀಸಲಾತಿ ಕ್ಷೇತ್ರವನ್ನು ನಿರ್ಧರಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗೆ ನೀಡುವುದರ ಮೂಲಕ ಸರ್ಕಾರವು ಅಧಿಕಾರಶಾಹಿಯ ಅಧಿಕಾರವನ್ನು ಬಲಪಡಿಸಿದಂತಾಗಿದೆ. ಇದೊಂದು ಪ್ರಜಾಪ್ರಭುತ್ವ ವಿರೋಧಿ ಕ್ರಮವಾಗಿದೆ. ಸ್ಥಳೀಯ ಮಟ್ಟದ ಜನಪ್ರತಿನಿಧಿ ಸಂಸ್ಥೆಗಳ ಸಬಲೀಕರಣಕ್ಕೆ ಇದರಿಂದ ಅಪಾಯ ಉಂಟಾಗಿದೆ. ರಾಜ್ಯ ಸರ್ಕಾರಕ್ಕೆ ಅಧಿಕಾರಶಾಹಿಯೇ ಮುಖ್ಯ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

**೨. 'ಜಿಲ್ಲಾ ಉಸ್ತುವಾರಿ ಸಚಿವ' ವ್ಯವಸ್ಥೆ**

ವಿಕೇಂದ್ರೀಕರಣದ ಪ್ರಯೋಗಕ್ಕೆ, ಸ್ವಯಮಾಡಳಿತ ತತ್ವಕ್ಕೆ ಹಾಗೂ ಪಂ. ರಾ. ಸಂ. ಗಳ ಸ್ವಾಯತ್ತತೆಗೆ ಅಡ್ಡಿಯಾಗಿರುವ ಹಾಗೂ ಅಪಾಯಕಾರಿಯಾಗಿರುವ 'ಜಿಲ್ಲಾ ಉಸ್ತುವಾರಿ ಸಚಿವ' ವ್ಯವಸ್ಥೆಯು ರಾಜ್ಯಮಟ್ಟದಲ್ಲಿ ಸಂವಿಧಾನೇತರ ಅಧಿಕಾರ ಕೇಂದ್ರವಾಗಿದೆ. ಈ ವ್ಯವಸ್ಥೆಗೆ ಶಾಸನಾತ್ಮಕ ಹಾಗೂ ಅಧಿಕೃತ ಸ್ಥಾನಮಾನವಿಲ್ಲ. ಇದೊಂದು ರಾಜಕೀಯ ವ್ಯವಸ್ಥೆಯಾಗಿದೆ. ರಾಜ್ಯ ಸರ್ಕಾರವು ಸ್ಥಳೀಯಮಟ್ಟದಲ್ಲಿ ತನ್ನ ನಿಯಂತ್ರಣವನ್ನು ಸಾಧಿಸಿಕೊಳ್ಳುವಸಲುವಾಗಿ ಇಂತಹ ವ್ಯವಸ್ಥೆಯನ್ನು ರೂಪಿಸಿಕೊಂಡಿದೆ. ರಾಜ್ಯ ಸಚಿವ ಸಂಪುಟದಲ್ಲಿ ಯಾವುದಾದರೂ ಇಲಾಖೆಯ ಮಂತ್ರಿಯನ್ನಾಗಿ ಶಾಸಕರನ್ನು ನೇಮಿಸಲಾಗುತ್ತದೆ ವಿನಾ ಅವರನ್ನು ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಿಸುವುದಿಲ್ಲ. ಇಲಾಖೆಯೊಂದರ ಮಂತ್ರಿಯಾಗಿ ಶಾಸಕರು ಪ್ರಮಾಣ ವಚನ ಸ್ವೀಕರಿಸುತ್ತಾರೆ ವಿನಾ ಜಿಲ್ಲಾ ಉಸ್ತುವಾರಿ ಸಚಿವರಾಗಿಯಲ್ಲ. ಸಂವಿಧಾನಾತ್ಮಕ ಸ್ಥಾನಮಾನವು ಈ ವ್ಯವಸ್ಥೆಗಿಲ್ಲ. ಆಡಳಿತಾತ್ಮಕವಾಗಿ ಇದೊಂದು ಅನುಕೂಲವಾದ ವ್ಯವಸ್ಥೆಯೆಂದೂ ಹೇಳಲು ಸಾಧ್ಯವಿಲ್ಲ. ಏಕೆಂದರೆ ಆಡಳಿತಾತ್ಮಕವಾದ ಸಮಸ್ಯೆಗಳನ್ನು ಬಗೆಹರಿಸುವ ಕೆಲಸವನ್ನೇನೂ ಜಿಲ್ಲಾ ಉಸ್ತುವಾರಿ ಸಚಿವರು ನಿಭಾಯಿಸುತ್ತಿಲ್ಲ.

ಅಧಿಕಾರವು ರಾಜ್ಯ ಸರ್ಕಾರದಲ್ಲಿ ಮಡುಗಟ್ಟಿಕೊಳ್ಳುವಂತೆ ರೂಪಿಸಿಕೊಂಡಿರುವ 'ಜಿಲ್ಲಾ ಉಸ್ತುವಾರಿ ಸಚಿವ' ವ್ಯವಸ್ಥೆಯು ಸ್ಥಳೀಯ ಮಟ್ಟದಲ್ಲಿ ಪ್ರಜಾಪ್ರಭುತ್ವವು ಆಳವಾಗಿ ಬೇರೂರಲು ಹಾಗೂ ಭದ್ರವಾಗಿ ನೆಲೆಗೊಳ್ಳಲು ತೀವ್ರ ಅಡ್ಡಿಯಾಗಿದೆ. ಜಿಲ್ಲಾ ಆಡಳಿತ ಹಾಗೂ ಜಿಲ್ಲಾಧಿಕಾರಿ ಜಿಲ್ಲಾ ಉಸ್ತುವಾರಿ ಸಚಿವರಿಗೆ ಜವಾಬ್ದಾರಿಯಾಗಿ ವರ್ತಿಸುವ ಪರಿಸ್ಥಿತಿ ನಿರ್ಮಾಣವಾಗಿಬಿಟ್ಟಿದೆ. ಇದರಿಂದಾಗಿ ಪಂ. ರಾ. ಸಂ.ಗಳಿಗೆ, ವಿಕೇಂದ್ರೀಕರಣಕ್ಕೆ ಯಾವುದೇ ಅರ್ಥವಿಲ್ಲದಂತಾಗಿಬಿಟ್ಟಿದೆ.

ಜಿಲ್ಲಾ ಉಸ್ತುವಾರಿ ಸಚಿವರ ಒಪ್ಪಿಗೆಯಿಲ್ಲದೆ ಜಿಲ್ಲಾ ಪಂಚಾಯಿತಿಗಳು ಯಾವುದೇ ಮುಖ್ಯ ನಿರ್ಣಯ ತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲ. ಅವುಗಳನ್ನು ಜಿಲ್ಲಾ ಉಸ್ತುವಾರಿ ಸಚಿವರು ತಮ್ಮ ಪಾಳೆಯಪಟ್ಟುಗಳನ್ನಾಗಿ ಮಾಡಿಕೊಂಡುಬಿಟ್ಟಿದ್ದಾರೆ. ಪಂ. ರಾ. ಸಂ.ಗಳು, ಸ್ವಯಮಾಡಳಿತ ತತ್ವ ಹಾಗೂ ವಿಕೇಂದ್ರೀಕರಣ ಕರ್ನಾಟಕದಲ್ಲಿ ಅವನತಿಯ ದಾರಿ ಹಿಡಿದಿದ್ದರೆ ಅದಕ್ಕೆ ಜಿಲ್ಲಾ ಉಸ್ತುವಾರಿ ಸಚಿವ ವ್ಯವಸ್ಥೆಯ ಕಾಣಿಕೆ ಅಪಾರವಾಗಿದೆ.

**೩. ವಸತಿ ಯೋಜನೆಗಳು**

ಅಶನ, ವಸನ ಮತ್ತು ವಸತಿ - ಇವು ಮೂರು ಮಾನವನ ಮೂಲಭೂತ ಅಗತ್ಯಗಳು. ಪ್ರತಿಯೊಂದು ಕುಟುಂಬಕ್ಕೂ ತಲೆಯ ಮೇಲೊಂದು ಸೂರನ್ನು ನೀಡುವ ಸಲುವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನೇಕ ವಸತಿ ಯೋಜನೆಗಳನ್ನು ಜಾರಿಗೊಳಿಸಿವೆ. ದುರ್ಬಲರಿಗೆ, ವಂಚಿತರಿಗೆ, ಬಡತನದ ರೇಖೆಯ ಕೆಳಗೆ ಬದುಕುತ್ತಿರುವವರಿಗೆ ಕಡಿಮೆ ವೆಚ್ಚದ ಮನೆಗಳನ್ನು ಒದಗಿಸುವ ಕಾರ್ಯಕ್ರಮ ಕರ್ನಾಟಕದಲ್ಲಿ ೭೦ರ ದಶಕದಿಂದಲೂ ಚಾಲ್ತಿಯಲ್ಲಿದೆ. ಅಂಬೇಡ್ಕರ್ ವಸತಿ ಯೋಜನೆ, ಇಂದಿರಾ ಆವಾಸ್ ಯೋಜನೆ, ಗುಂಪುಮನೆಗಳ ಯೋಜನೆ ಮುಂತಾದವು ಇಂದು ಜಾರಿಯಲ್ಲಿರುವ ವಸತಿ ಯೋಜನೆಗಳಾಗಿವೆ. ಗ್ರಾಮಗಳಲ್ಲಿ ಸದರಿ ಯೋಜನೆಯು ಜಾರಿಗೊಳ್ಳಬೇಕಾಗಿದೆ.

ಈ ಯೋಜನೆಗಾಗಿ ಫಲಾನುಭವಿಗಳನ್ನು ಆಯ್ಕೆ ಮಾಡುವ ಅಧಿಕಾರವನ್ನು ಗ್ರಾಮಸಭೆಗಳಿಗೆ ನೀಡಲಾಗಿದೆ. ಪ್ರತಿಯೊಂದು ಗ್ರಾಮ ಪಂಚಾಯಿತಿಯು ವಾರ್ಷಿಕ ಗ್ರಾಮಸಭೆಯನ್ನು ಸಂಘಟಿಸಿ ವಸತಿಹೀನರನ್ನು ಗುರುತಿಸಿ ಅಂಥವರ ಪಟ್ಟಿಯನ್ನು ಸಿದ್ಧಪಡಿಸಬೇಕು. ಹೀಗೆ ಸಿದ್ಧಪಡಿಸಿದ ಪಟ್ಟಿಯನ್ನು ತಾಲೂಕು ಪಂಚಾಯಿತಿಗೆ ಕಳುಹಿಸಬೇಕು. ಗ್ರಾಮ ಪಂಚಾಯಿತಿಗಳಿಗೆ ವಸತಿಗಳನ್ನು ಮಂಜೂರು ಮಾಡುವ ಅಧಿಕಾರ ತಾಲೂಕು ಪಂಚಾಯಿತಿಗಿಲ್ಲ. ಗ್ರಾಮಸಭೆಯಲ್ಲಿ ಆಯ್ಕೆಯಾದ ಫಲಾನುಭವಿಗಳ ಪಟ್ಟಿಯನ್ನು ಅಂತಿಮವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ರಾಜ್ಯ ಸರ್ಕಾರವು ತನ್ನ ರಾಜಕೀಯ ಹಿತವನ್ನು ಕಾಯ್ದುಕೊಳ್ಳುವ ಸಲುವಾಗಿ ವಸತಿ ಯೋಜನೆಯ ಅನುಷ್ಠಾನದ ಜವಾಬ್ದಾರಿಯನ್ನು ತಾಲ್ಲೂಕು ಮಟ್ಟದಲ್ಲಿ ಶಾಸಕರ ಅಧ್ಯಕ್ಷತೆಯಲ್ಲಿನ ವಸತಿ ಸಮಿತಿಗೆ ವಹಿಸಿ ಕೊಟ್ಟಿದೆ. ಉನ್ನತ ಮಟ್ಟದ ಅಧಿಕಾರ ಕೇಂದ್ರದ ಅಂಕುಶವು ಗ್ರಾಮ ಪಂಚಾಯಿತಿಗಳ ಮೇಲೆ ವ್ಯಕ್ತಗೊಳ್ಳುವುದು ಇದರಿಂದ ಸಾಧ್ಯವಾಗಿದೆ. ಗ್ರಾಮ ಮಟ್ಟದಲ್ಲಿ ವಸತಿಹೀನರ ಆಯ್ಕೆ ಹಾಗೂ ವಸತಿಗಳ ಮಂಜೂರಾತಿ ಜವಾಬ್ದಾರಿಯು ಗ್ರಾಮ ಪಂಚಾಯಿತಿಗಳಿಗಿರಬೇಕೇ ವಿನಾ ಶಾಸಕರಿಗಲ್ಲ. ಆದರೆ ನಮ್ಮ ರಾಜ್ಯ ಸರ್ಕಾರವು ಇಂತಹ ಅಧಿಕಾರವನ್ನು ಶಾಸಕರಿಗೆ ನೀಡಿದೆ. ಇದರಿಂದಾಗಿ ಗ್ರಾಮಪಂಚಾಯತಿಗಳು ಶಾಸಕರ ಮರ್ಜಿಯಲ್ಲಿ ಕೆಲಸ ಮಾಡುವಂತಾಗಿದೆ. ಗ್ರಾಮಸಭೆಯಲ್ಲಿ ಸಿದ್ಧವಾದ ಫಲಾನುಭವಿಗಳ ಪಟ್ಟಿಯನ್ನು ಶಾಸಕರ ಅಧ್ಯಕ್ಷತೆಯ ವಸತಿ ಸಮಿತಿಯು ಬದಲಾಯಿಸುವುದು ಸರ್ವೇಸಾಮಾನ್ಯವಾಗಿಬಿಟ್ಟಿದೆ. ಬಡವರ ಬದುಕನ್ನು ಹೀಗೆ ರಾಜ್ಯ ಸರ್ಕಾರವು ರಾಜಕೀಯ ದಾಳಗಳನ್ನಾಗಿ ಮಾಡಿಕೊಂಡುಬಿಟ್ಟಿದೆ. ಇಲ್ಲಿ ಫಲಾನುಭವಿಗಳು ಎಷ್ಟು ಬಡವರು-ನಿರ್ಗತಿಕರು ಎಂಬುದು ಮುಖ್ಯವಾಗುವುದಿಲ್ಲ. ಶಾಸಕರ ಮರ್ಜಿಯೇ ಪ್ರಧಾನವಾಗಿಬಿಟ್ಟಿದೆ. ಬಡವರನ್ನು ಹೀಗೆ ರಾಜ್ಯ ಸರ್ಕಾರವು ಅವಮಾನಗೊಳಿಸುವುದು ಸಲ್ಲ. ಗ್ರಾಮ ಪಂಚಾಯಿತಿಗಳ ಅಧಿಕಾರದ ಹರಣವು ಹೀಗೆ ಎಲ್ಲ ದಿಕ್ಕಿನಲ್ಲೂ ಅನಿರ್ಬಂಧಿತವಾಗಿ ನಡೆದಿದೆ. ರಾಜ್ಯ ಸರ್ಕಾರವು ಸ್ಥಳೀಯ ಮಟ್ಟದ ಪಂ. ರಾ.ಸಂ.ಗಳನ್ನು ಭದ್ರಗೊಳಿಸುವುದಕ್ಕೆ ಪ್ರತಿಯಾಗಿ ಅವುಗಳನ್ನು ದುರ್ಬಲಗೊಳಿಸುತ್ತಿದೆ ಹಾಗೂ ಅಭದ್ರಗೊಳಿಸುತ್ತಿದೆ. ಗ್ರಾಮ ಪಂಚಾಯಿತಿಗಳನ್ನು ಶಾಸಕರ ಪಾಳೆಯಪಟ್ಟುಗಳನ್ನಾಗಿ ಪರಿವರ್ತಿಸುವ ದಿಶೆಯಲ್ಲಿ ರಾಜ್ಯ ಸರ್ಕಾರದ ಪಾತ್ರ ಮಹತ್ವದ್ದಾಗಿದೆ.

**೪. ಸ್ತ್ರೀ ಶಕ್ತಿ ಕಾರ್ಯಕ್ರಮ**

ಕರ್ನಾಟಕ ರಾಜ್ಯ ಸರ್ಕಾರವು ೨೦೦೦ದಲ್ಲಿ ಪ್ರಾರಂಭಿಸಿದ ಅತ್ಯಂತ ಮಹತ್ವಾಕಾಂಕ್ಷೆಯ ಮಹಿಳಾ ಸಂವೇದಿ ಕಾರ್ಯಕ್ರಮ ಇದಾಗಿದೆ. ಇದೊಂದು ಮಹಿಳಾ ಸಬಲೀಕರಣ ಕಾರ್ಯಕ್ರಮವಾಗಿದೆ. ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು, ಅವರಿಗೆ ತಮ್ಮದೇ ಆದ ವರಮಾನದ ಮೂಲವೊಂದು ಒದಗುವಂತೆ ಮಾಡುವುದು ಮತ್ತು ಅವರಲ್ಲಿ ಸಂಘಟನೆಯ ಮನೋಭಾವವನ್ನು ಬೆಳೆಸುವುದು ಸದರಿ ಯೋಜನೆಯ ಗುರಿಯಾಗಿದೆ. ಈ ಯೋಜನೆಯಡಿಯಲ್ಲಿ ಮಹಿಳೆಯರ ಸ್ವಸಹಾಯ ಗುಂಪುಗಳನ್ನು ಸಂಘಟಿಸಬೇಕು. ಹೀಗೆ ಸಂಘಟಿತವಾದ ಗುಂಪುಗಳು ಆರ್ಥಿಕ ಉತ್ಪಾದನಾ

ಚಟುವಟಿಕೆಗಳನ್ನು ಕೈಗೊಳ್ಳಬೇಕು. ಆರ್ಥಿಕ ಉತ್ಪಾದನಾ ಚಟುವಟಿಕೆಗಳನ್ನು ಕೈಗೊಳ್ಳಲು, ಅಗತ್ಯವಾದ ಕಚ್ಚಾ ಮಾಲು ಕೊಳ್ಳಲು ಮತ್ತು ಇತರೆ ಖರ್ಚಿಗೆ ಸರ್ಕಾರವು ಇಂತಿಷ್ಟು ಮೊತ್ತದ ಹಣವನ್ನು ಆವರ್ತನ ನಿಧಿಯಾಗಿ ನೀಡುತ್ತದೆ. ಇದು ಸ್ತ್ರೀ ಶಕ್ತಿಯೋಜನೆ.

> ತಿರಸ್ಕರಿಸಲಾಗದ ಒಂದು ಸುಖ ಇದೆ; ಅದೇ ಇನ್ನೊಬ್ಬರಿಗಾಗಿ ಬದುಕು ಸವೆಸುವುದು.
>
> *- ಲಿಯೋ ಟಾಲ್‌ಸ್ಟಾಯ್*

ಈ ಯೋಜನೆಯ ಸಂಘಟನೆ ಹಾಗೂ ಅನುಷ್ಠಾನದ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ವಹಿಸಿಕೊಡಲಾಗಿದೆ. ಸ್ತ್ರೀ ಶಕ್ತಿ ಕಾರ್ಯಕ್ರಮಕ್ಕೂ ಮತ್ತು ಜಿಲ್ಲಾಧಿಕಾರಿಗೂ ಏನು ಸಂಬಂಧವೆನ್ನುವುದು ಇಲ್ಲಿ ಅರ್ಥವಾಗುವುದಿಲ್ಲ. ನಮ್ಮ ಮಾನ್ಯ ಮುಖ್ಯಮಂತ್ರಿಗಳು ಸದರಿ ಯೋಜನೆಯನ್ನು ಘೋಷಿಸುತ್ತಾ ತಮ್ಮ ೨೦೦೦-೦೧ ಬಜೆಟ್‌ನಲ್ಲಿ ಅತ್ಯಂತ ಸ್ಪಷ್ಟ ಮಾತುಗಳಲ್ಲಿ ಇದನ್ನು ಜಿಲ್ಲಾಧಿಕಾರಿಗಳಿಗೆ ವಹಿಸಿಕೊಡುವ ಮಾತುಗಳನ್ನಾಡಿದ್ದಾರೆ.

ಇದೊಂದು ಅಭಿವೃದ್ಧಿ ಕಾರ್ಯಕ್ರಮವಾಗಿದೆ. ಸ್ತ್ರೀ ಶಕ್ತಿ ಕಾರ್ಯಕ್ರಮಕ್ಕೆ ಸಮಾನವಾದ ಅನೇಕ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಿಲ್ಲಾ ಪಂಚಾಯಿತಿಗಳು ಈಗಾಗಲೆ ನಿರ್ವಹಿಸುತ್ತಿವೆ. ಆದರೂ ಸದರಿ ಕಾರ್ಯಕ್ರಮವನ್ನು ರಾಜ್ಯ ಸರ್ಕಾರವು ಸ್ಥಳೀಯ ಪಂ. ರಾ. ಸಂ.ಗಳಿಗೆ ವಹಿಸಿಕೊಡುವುದಕ್ಕೆ ಪ್ರತಿಯಾಗಿ ಜಿಲ್ಲಾಧಿಕಾರಿಗಳಿಗೆ ವಹಿಸಿಕೊಟ್ಟಿದೆ. ಮಕ್ಕಳ ಮತ್ತು ಮಹಿಳಾ ಕಲ್ಯಾಣ ಸಚಿವಾಲಯವು ಸದರಿ ಕಾರ್ಯಕ್ರಮಗಳನ್ನು ಜಿಲ್ಲಾಧಿಕಾರಿಗಳ ಮುಖಾಂತರ ನೇರವಾಗಿ ನಿರ್ವಹಿಸುತ್ತದೆ.

ಆಡಳಿತದ ಜವಾಬ್ದಾರಿ ಹೊತ್ತ ಜಿಲ್ಲಾಧಿಕಾರಿ ಹಾಗೂ ರಾಜ್ಯ ಮಕ್ಕಳ ಹಾಗೂ ಮಹಿಳಾ ಕಲ್ಯಾಣ ಸಚಿವಾಲಯವು ಅಭಿವೃದ್ಧಿ ಕಾರ್ಯಕ್ರಮವಾದ ಸ್ತ್ರೀ ಶಕ್ತಿ ಯೋಜನೆಯನ್ನು ಯಾಕೆ ನಿರ್ವಹಿಸಬೇಕು? ಆಡಳಿತ ಮತ್ತು ಅಭಿವೃದ್ಧಿಗಳ ನಡುವೆ ವ್ಯತ್ಯಾಸವಿಲ್ಲವೆ? ರೆವಿನ್ಯೂ ಮನೋಭಾವದಿಂದ ಅಭಿವೃದ್ಧಿ ಕಾರ್ಯಕ್ರಮಗಳನ್ನು ನಿಭಾಯಿಸಲು ಸಾಧ್ಯವೆ? ಪುರುಷ ಪ್ರಧಾನವಾದ ಆಡಳಿತ ವ್ಯವಸ್ಥೆಯು ಮಹಿಳಾ ಸಂವೇದಿಯಾದ ಅಭಿವೃದ್ಧಿ ಕಾರ್ಯಕ್ರಮವನ್ನು ಹೇಗೆ ನಿರ್ವಹಿಸಬಲ್ಲದು?

ಇದನ್ನು ಮಹಿಳಾ ಸಬಲೀಕರಣ ಕಾರ್ಯಕ್ರಮವೆಂದು ಕರೆಯಲಾಗಿದೆ. ಆದರೆ ಇಲ್ಲಿ ಮಹಿಳೆಯರ ಅಧಿಕಾರವನ್ನು ಬಲಪಡಿಸುವ ಯಾವುದೇ ಕ್ರಮವೂ ಕಂಡುಬರುವುದಿಲ್ಲ. ಅಧಿಕಾರದ ಲಿಂಗಸಂಬಂಧಿ ತಾರತಮ್ಯ ಸರಿಪಡಿಸುವ ಯಾವುದೇ ಉದ್ದೇಶ ಈ ಸ್ತ್ರೀ ಕಾರ್ಯಕ್ರಮಕ್ಕಿಲ್ಲ. ರಾಜ್ಯ ಸರ್ಕಾರವು ಕೇವಲ ತಮ್ಮ ಸ್ತ್ರೀ ಸಂವೇದನೆಯನ್ನು ಪ್ರದರ್ಶಿಸುವ ಸಲುವಾಗಿ ಮಾತ್ರವೇ ಮಹಿಳಾ ಸಬಲೀಕರಣ ಎಂಬ ನುಡಿಯನ್ನು ಬಳಸುತ್ತಿದೆ. ಪುರುಷರ ಅಧಿಕಾರವನ್ನು ಕಡಿತಗೊಳಿಸುವುದಾಗಲಿ ಹಾಗೂ ಮಹಿಳೆಯರ ಅಧಿಕಾರವನ್ನು ಸಬಲಗೊಳಿಸುವುದಾಗಲಿ ಸ್ತ್ರೀ ಶಕ್ತಿ ಯೋಜನೆಗಿಲ್ಲ. ಸ್ಥಳೀಯ ಪಂ. ರಾ. ಸಂ.ಗಳು ಮಹಿಳೆಯರ ಪ್ರಾತಿನಿಧ್ಯವಿರುವ ಸಂಸ್ಥೆಗಳಾಗಿವೆ. ಅಂಥ ಸಂಸ್ಥೆಗಳಿಗೆ ಸ್ತ್ರೀ ಶಕ್ತಿ ಯೋಜನೆಯನ್ನು ವಹಿಸಿಕೊಡುವುದಕ್ಕೆ ಪ್ರತಿಯಾಗಿ ರಾಜ್ಯ ಸರ್ಕಾರವು ಪುರುಷಶಾಹಿ ಗುಣವನ್ನು ಪಡೆದಿರುವ ಜಿಲ್ಲಾಧಿಕಾರಿಗಳಿಗೆ ವಹಿಸಿಕೊಟ್ಟಿರುವುದು ನಿಜಕ್ಕೂ ಆಶ್ಚರ್ಯ ಹುಟ್ಟಿಸುತ್ತದೆ.

**೫. ಶಾಸಕರ ಪ್ರದೇಶಾಭಿವೃದ್ಧಿ ನಿಧಿ**

ರಾಜ್ಯ ಸರ್ಕಾರವು ಶಾಸಕರನ್ನು ತನ್ನ ಕಪಿಮುಷ್ಟಿಯಲ್ಲಿಟ್ಟುಕೊಳ್ಳುವ ಉದ್ದೇಶದಿಂದ ಅವರ ಅಧಿಕಾರವನ್ನು ಬಲಪಡಿಸುವಲ್ಲಿ ತುಂಬಾ ಜಾಗೃತಿಯನ್ನು ವಹಿಸಿದೆ. ಕೇಂದ್ರ ಸರ್ಕಾರವು ೯೦ರ ದಶಕದ ಆರಂಭದಲ್ಲಿ ಜಾರಿಗೊಳಿಸಿದ 'ಸಂಸದರ ಪ್ರದೇಶಾಭಿವೃದ್ಧಿ ನಿಧಿ' ಎಂಬ ಕಾರ್ಯಕ್ರಮವನ್ನು ಹೋಲುವ 'ಶಾಸಕರ ಪ್ರದೇಶಾಭಿವೃದ್ಧಿ ನಿಧಿ' ಕಾರ್ಯಕ್ರಮವನ್ನು ಜಾರಿಗೊಳಿಸಲು ನಮ್ಮ ರಾಜ್ಯ ಸರ್ಕಾರವು ಮುಂದಾಗಿದೆ. ಕೇಂದ್ರ ಸರ್ಕಾರವು ಸಂಸದರ ಅಧಿಕಾರವನ್ನು ಬಲಪಡಿಸುವಲ್ಲಿ ಕ್ರಿಯಾಶೀಲವಾಗಿದ್ದರೆ ರಾಜ್ಯ ಸರ್ಕಾರವು ಶಾಸಕರ ಅಧಿಕಾರವನ್ನು ಬಲಪಡಿಸುವಲ್ಲಿ ಕ್ರಿಯಾಶೀಲವಾಗಿದೆ. ಇನ್ನು ಅಧಿಕಾರವನ್ನು ಸ್ಥಳೀಯ ಜನಪ್ರತಿನಿಧಿ ಸಂಸ್ಥೆಗಳಿಗೆ ಹಂಚಿಕೊಡುವ ಮಾತು ದೂರವೇ ಉಳಿದುಬಿಟ್ಟಿದೆ. ಗ್ರಾಮ ಪಂಚಾಯಿತಿಗಳ ಅಧಿಕಾರವನ್ನು ಬಲಪಡಿಸುವವರು ಯಾರು? 'ಶಾಸಕರ ಪ್ರದೇಶಾಭಿವೃದ್ಧಿ ನಿಧಿ'ಯು ಪಂ. ರಾ. ಸಂ.ಗಳನ್ನು ನಿರ್ವೀರ್ಯಗೊಳಿಸುವ ದಿಶೆಯಲ್ಲಿ ಅತ್ಯಂತ ನಿರ್ಣಾಯಕವಾದ ಕ್ರಮವಾಗಿಬಿಟ್ಟಿದೆ. ಇಲ್ಲಿ ಸಂಪನ್ಮೂಲವು ಯಾವುದೇ ಸಾಂಸ್ಥಿಕ ಯೋಜನೆಗೆ ಅನುಗುಣವಾಗಿ ವಿನಿಯೋಗವಾಗುವುದಿಲ್ಲ. ಶಾಸಕರ ವಿವೇಚನೆಗೆ ಅನುಗುಣವಾಗಿ ಇಲ್ಲಿ ಸಂಪನ್ಮೂಲದ ವಿನಿಯೋಗವಾಗುತ್ತದೆ. ಈ ನಿಧಿಯಿಂದ ಪ್ರಾಪ್ತವಾಗುವ ಸಂಪನ್ಮೂಲದ ವಿನಿಯೋಗದಲ್ಲಿ ಗ್ರಾಮಪಂಚಾಯಿತಿಗಳಿಗೆ ಯಾವುದೇ ಅಧಿಕಾರವಿಲ್ಲ. ಶಾಸಕರ ಮರ್ಜಿಯಲ್ಲಿ ಸಂಪನ್ಮೂಲದ ವಿನಿಯೋಗ ನಡೆಯುತ್ತದೆ. ತೆರಿಗೆದಾರರ ಹಣವನ್ನು ಹೀಗೆ ವ್ಯಕ್ತಿಗಳ ವಿವೇಚನೆಗೆ ಅನುಕೂಲವಾಗಿ ವಿನಿಯೋಗಿಸುವ ವ್ಯವಸ್ಥೆಯು ಪ್ರಜಾಪ್ರಭುತ್ವ ವಿರೋಧಿ ಕ್ರಮವಾಗಿದೆ. ಇದು ವಿಕೇಂದ್ರೀಕರಣಕ್ಕೂ ಮಾರಕವಾಗಿದೆ.

**೬. ಪ್ರಾಥಮಿಕ ಶಿಕ್ಷಣದಲ್ಲಿ ಪ್ರಯೋಗಗಳು**

ಪ್ರಾಥಮಿಕ ಶಿಕ್ಷಣ(ಪ್ರಾ. ಶಿ.) ಕುರಿತಂತೆ ಇಂದು ತೀವ್ರ ಕಾಳಜಿಯನ್ನು ಸರ್ಕಾರ ತೋರಿಸುತ್ತಿದೆ. ಕಳೆದ ೨ ವರ್ಷಗಳಲ್ಲಿ ಸರ್ಕಾರವು ಪ್ರಾ. ಶಿ.ಕ್ಕೆ ಸಂಬಂಧಿಸಿದಂತೆ ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಪ್ರಾ. ಶಿ.ಗಳಲ್ಲಿ ಹಾಜರಾತಿ ಉತ್ತಮಪಡಿಸುವ ಸಲುವಾಗಿ, ಮಕ್ಕಳು ಶಾಲೆ ಬಿಡುವ ಪ್ರಮಾಣವನ್ನು ತಗ್ಗಿಸುವ ಸಲುವಾಗಿ, ಹಿಂದುಳಿದ ಪ್ರದೇಶಗಳಲ್ಲಿ ಪ್ರಾ. ಶಿ.ವನ್ನು ತೀವ್ರ ಅಭಿವೃದ್ಧಿಪಡಿಸುವ ಸಲುವಾಗಿ ಸರ್ಕಾರವು ವಿವಿಧ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. 'ಸಮುದಾಯದತ್ತ ಶಾಲೆ' ಎಂಬುದು ಅಂತಹ ಒಂದು ಕಾರ್ಯಕ್ರಮ. ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ ಪ್ರಾ. ಶಿ. ಸಂವರ್ಧಿಸಲು ವಿಶೇಷ ಶಿಕ್ಷಣ ನಿರ್ದೇಶನಾಲಯವನ್ನು ಗುಲಬರ್ಗಾದಲ್ಲಿ ತೆರೆಯಲಾಗಿದೆ. ಶಾಲಾಭಿವೃದ್ಧಿ ಸಮಿತಿಗಳನ್ನು ಚುನಾವಣೆ ಆಧಾರದ ಮೇಲೆ ರಚಿಸುವ ಮಾತು ಕೇಳಿಬರುತ್ತಿದೆ. ಇವೆಲ್ಲ ಅತ್ಯಂತ ಸ್ವಾಗತಾರ್ಹವಾದ ಸಂಗತಿಗಳಾಗಿವೆ. ಸಮಸ್ಯೆಗಳಿಗೆ ಸರ್ಕಾರ ಸ್ಪಂದಿಸುತ್ತಿರುವುದಕ್ಕೆ ಇವು ಸಾಕ್ಷಿಯಾಗಿವೆ.

ಅತ್ಯಂತ ವಿಷಾದದ ಸಂಗತಿಯೆಂದರೆ ಪ್ರಾ. ಶಿ. ದ ಬಲಸಂವರ್ಧನಾ ಕಾರ್ಯಕ್ರಮವನ್ನು ರಾಜ್ಯ ಸರ್ಕಾರವು ಅಧಿಕಾರಶಾಹಿಯ ವಶಕ್ಕೆ ಒಪ್ಪಿಸಿಬಿಟ್ಟಿದೆ. ಅಲ್ಲಿ ಪಂ. ರಾ. ಸಂ.ಗಳಿಗೆ ಯಾವುದೇ ಪಾತ್ರವಿಲ್ಲದಂತಾಗಿದೆ. ಪಂ. ರಾ. ಸಂ.ಗಳು ಗ್ರಾಮಾಂತರ ಪ್ರದೇಶದಲ್ಲಿರುವ ಜನಪ್ರತಿನಿಧಿ ಸಂಸ್ಥೆಗಳು ಎಂಬುದು ಗೊತ್ತೇ ಇಲ್ಲವೆನ್ನುವಂತೆ ರಾಜ್ಯ ಶಿಕ್ಷಣ ಇಲಾಖೆ ವರ್ತಿಸುತ್ತಿದೆ. ಪಂ. ರಾ. ಸಂ.ಗಳ ಮೂಲಕ ಪ್ರಾಥಮಿಕ ಶಿಕ್ಷಣದ ಬಲಸಂವರ್ಧನೆಗೆ ಕಾರ್ಯಕ್ರಮವನ್ನು ಯಾಕೆ ಯೋಜಿಸಬಾರದು? ಅಧಿಕಾರಶಾಹಿಯ ಮೇಲೆ ರಾಜ್ಯ ಸರ್ಕಾರಕ್ಕೆ ಯಾಕೆ ಇಷ್ಟೊಂದು ವಿಶ್ವಾಸ! ರಾಜ್ಯ ಶಿಕ್ಷಣ ಇಲಾಖೆಯು ಸ್ಥಳೀಯ ಮಟ್ಟದ ಪಂ. ರಾ. ಸಂ.ಗಳನ್ನು ಒಳಗು ಮಾಡಿಕೊಂಡು ರೂಪಿಸಿರುವ ಒಂದೇ ಒಂದು ಕಾರ್ಯಕ್ರಮವೂ ನಮಗೆ ಉದಾಹರಣೆಗಾದರೂ ದೊರೆಯುವುದಿಲ್ಲ. ಎಲ್ಲಿಯವರೆಗೆ ಪಂ. ರಾ. ಸಂ.ಗಳನ್ನು ಒಳಗೆ ಮಾಡಿಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಪ್ರಾ. ಶಿ. ದ ಬಲಸಂವರ್ಧನೆಯಾಗುವುದಿಲ್ಲ ಎಂಬುದು ರಾಜ್ಯ ಸರ್ಕಾರಕ್ಕೆ ಎಷ್ಟು ಬೇಗ ತಿಳಿಯುವುದೋ ಅಷ್ಟೂ ಪ್ರಾಥಮಿಕ ಶಿಕ್ಷಣಕ್ಕೆ ಒಳ್ಳೆಯದು.

ಹೀಗೆ ಕರ್ನಾಟಕದಲ್ಲಿ ವ್ಯವಸ್ಥಿತವಾಗಿ ಪಂ. ರಾ. ಸಂ.ಗಳನ್ನು ಮೂಲೆ ಗುಂಪಾಗಿಸುವ ಕೆಲಸ ನಡೆದಿದೆ. ರಾಜ್ಯ ಸರ್ಕಾರವು ಪಂ. ರಾ. ಸಂ.ಗಳನ್ನು ತನ್ನ ಅಡಿಯಾಳನ್ನಾಗಿ ಮಾಡಿಕೊಳ್ಳಲು ಹವಣಿಸುತ್ತಿದೆ. ರಾಜ್ಯ ಸರ್ಕಾರಕ್ಕೆ ಹಾಗೂ ಅಧಿಕಾರಶಾಹಿಗೆ 'ಆಡಳಿತವಾದಿ ಅಭಿವೃದ್ಧಿ' ಯಲ್ಲಿ ನಂಬಿಕೆಯಿದೆ ವಿನಾ 'ಅಭಿವೃದ್ಧಿವಾದಿ ಆಡಳಿತ' ದಲ್ಲಿ ಅಲ್ಲ. ರಾಜ್ಯ ಸರ್ಕಾರವು ಪಂ. ರಾ. ಸಂ.ಗಳಿಗಿಂತ ಜಿಲ್ಲಾಧಿಕಾರಿ - ಜಿಲ್ಲಾ ಆಡಳಿತದಲ್ಲಿ ಹೆಚ್ಚಿನ ವಿಶ್ವಾಸವಿಟ್ಟಿದೆ. ಜಿಲ್ಲಾಧಿಕಾರಿ ಹಾಗೂ ಶಾಸಕರಲ್ಲಿ ಅಧಿಕಾರವು ಕೇಂದ್ರೀಕರಣಗೊಳ್ಳುವಂತೆ ರಾಜ್ಯ ಸರ್ಕಾರವು ಕ್ರಮ ತೆಗೆದುಕೊಳ್ಳುತ್ತಿದೆ. ಇದನ್ನು ಮೀಸಲಾತಿಗೆ ಸಂಬಂಧಿಸಿದಂತೆ ನೋಡಬಹುದು. ಸ್ತ್ರೀ ಶಕ್ತಿ ಕಾರ್ಯಕ್ರಮದಲ್ಲಿ ಕಾಣಬಹುದು. 'ಜಿಲ್ಲಾ ಉಸ್ತುವಾರಿ ಸಚಿವರು' ಎಂಬ ವ್ಯವಸ್ಥೆಯಲ್ಲಿ ಇದು ಕಂಡುಬರುತ್ತದೆ. ವಸತಿ ಯೋಜನೆಗಳಲ್ಲಿ ಇದು ಕಂಡುಬರುತ್ತದೆ.

ಒಟ್ಟಿನಲ್ಲಿ ಸಂವಿಧಾನದ ೭೩ ಮತ್ತು ೭೪ ನೆಯ ತಿದ್ದುಪಡಿಗಳ ಒಂದು ಅಪಮೌಲ್ಯ ಇಲ್ಲಿ ನಡೆದಿದೆ. ಸ್ಥಳೀಯ ಮಟ್ಟದಲ್ಲಿ ಸ್ವಯಮಾಡಳಿತ ಎಂಬುದಕ್ಕೆ ಇಂದು ಅರ್ಥವೇ ಇಲ್ಲದಂತಾಗಿಬಿಟ್ಟಿದೆ. ವಿಕೇಂದ್ರೀಕರಣದ ಹೆಸರಿನಲ್ಲಿ ಕೇಂದ್ರೀಕರಣವು ನಡೆದಿದೆ. ಕೇಂದ್ರೀಕೃತ ಆಡಳಿತವನ್ನು ಸಾಧಿಸುವಲ್ಲಿ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳೆರಡೂ ಪೈಪೋಟಿ ನಡೆಸಿವೆ. ಜನರ ಸಹಭಾಗಿತ್ವ, ವಿಕೇಂದ್ರೀಕರಣ, ಸ್ವಯಮಾಡಳಿತ, ಸಬಲೀಕರಣ ಮುಂತಾದವು ರಾಜಕೀಯ ಚದುರಂಗದಾಟದ ದಾಳಗಳಾಗಿದ್ದಾವೆ ವಿನಾ ನಿಜವಾದ ಅರ್ಥದಲ್ಲಿ ಅವು ಅನುಷ್ಠಾನಗೊಳ್ಳುತ್ತಿಲ್ಲ. ಜನರ ಸಹಭಾಗಿತ್ವಕ್ಕೆ ಪ್ರತಿಯಾಗಿ ಅಧಿಕಾರಿಗಳ ಅಟ್ಟಹಾಸ ನಡೆದಿದೆ. ವಿಕೇಂದ್ರೀಕರಣಕ್ಕೆ ಪ್ರತಿಯಾಗಿ ಏಕರೂಪೀಕರಣ ಹಾಗೂ ಕೇಂದ್ರೀಕರಣ ನಡೆದಿದೆ, ಸ್ವಯಮಾಡಳಿತಕ್ಕೆ ಪ್ರತಿಯಾಗಿ ಪರಾವಲಂಬನೆ ಕಂಡುಬರುತ್ತದೆ.

**ಟಿ. ಆರ್. ಚಂದ್ರಶೇಖರ**
ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಕಾರ್ಮಿಕ ಕಾಯಿದೆಗಳ ಸುಧಾರಣೆ ಯಾರಿಗಾಗಿ ?

**ಇರುವ ಉದ್ಯೋಗಗಳನ್ನು ಲಕ್ಷಗಟ್ಟಲೆ ಕಡಿಮೆ ಮಾಡಿ ಸಾರ್ವಜನಿಕ ರಂಗದ ಆಸ್ತಿಯನ್ನು ಖಾಸಗಿಯವರಿಗೆ ಪರಭಾರೆ ಮಾಡಿ, ಕಾರ್ಮಿಕರ ಹಾಗೂ ಜನತೆಯ ಸಂಘಟನಾ ಮತ್ತು ಪ್ರಜಾಪ್ರಭುತ್ವ ಹಕ್ಕುಗಳನ್ನು ದಮನ ಮಾಡುವ ಸುಧಾರಣೆಗಳು ಯಾರ ಹಿತವನ್ನು ಸಾಧಿಸುತ್ತವೆ ?**

**ಎಚ್. ವಿ. ಅನಂತಸುಬ್ಬರಾವ್**

ನಮ್ಮ ದೇಶದ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ. ಕಾರ್ಖಾನೆಗಳಿಂದ ಬರುವ ಉತ್ಪಾದನೆ ಕಡಿಮೆ ಆಗಿದೆ. ಹತ್ತು ವರ್ಷಗಳ ಹಿಂದೆ ಪಿ. ವಿ. ನರಸಿಂಹರಾವ್-ಮನಮೋಹನ್ ಸಿಂಗ್‌ದ್ವಯರು 'ಆರ್ಥಿಕ ಸುಧಾರಣೆ'ಗಳನ್ನು ತಂದಾಗ ಅವರು ಕಂಡಿದ್ದರೆಂದು ಹೇಳಲಾದ ಕನಸುಗಳು ಭಗ್ನವಾಗಿವೆ. ಈ ದೇಶದ ಸುಮಾರು ೯೫ ಕೋಟಿ ಜನರಿಗೆ ಸುಧಾರಣೆಗಳಿಂದ ಹಾಲು-ಜೇನು ಹರಿಸುತ್ತೇವೆಂದು ಹೇಳಿದ್ದ ಮಾತುಗಳೆಲ್ಲ ಸುಳ್ಳಾಗಿವೆ. ಈಗಾಗಲೇ ಈ ನೀತಿಯ ಜನಕರೇ ಮರುಪರಿಶೀಲನೆಯ ಅವಶ್ಯಕತೆಯ ಬಗ್ಗೆ ಅನೇಕ ಬಾರಿ ಮಾತನಾಡಿದ್ದಾರೆ. 'ಮಾನವೀಯ ಮುಖ' ಇರಬೇಕೆಂದು ಒತ್ತಿ ಹೇಳಿದ್ದಾರೆ. ಈ ನೀತಿಗೂ ಮಾನವೀಯತೆಗೂ ಯಾವುದೇ ಸಂಬಂಧವಿಲ್ಲವೆಂದು ಕೆಲವರಿಗೆ ಮೊದಲೇ ತಿಳಿದಿತ್ತು. ಜಾರಿಯಾದ ಹತ್ತು ವರ್ಷಗಳ ಮೇಲೆ ಈ ನೀತಿಯ ನಿಜಸ್ವರೂಪ ಇಡೀ ದೇಶದ ಜನತೆಗೆ ಗೊತ್ತಾಗಿದೆ ಹಾಗೂ ಮೆಕ್ಸಿಕೋದಿಂದ ಇಂಡೋನೇಷ್ಯಾವರೆವಿಗೆ ಎಲ್ಲೆಲ್ಲಿಯೂ ಮಾನವೀಯ ಮುಖ ಈ ನೀತಿಗಳಿಗೆ ಇರಲಿಲ್ಲ.

ಮುಕ್ತ ಮಾರುಕಟ್ಟೆ ಮತ್ತು ಖಾಸಗೀ ಲಾಭದ ಮೇಲೆ ನಿಂತಿರುವ ವಿಶ್ವಬ್ಯಾಂಕ್, ಐ.ಎಂ.ಎಫ್., ವಿಶ್ವ ವಾಣಿಜ್ಯ ಸಂಘಟನೆ ಇತ್ಯಾದಿಗಳಿಂದ ನಿರ್ದೇಶಿತವಾಗಿರುವ ನೀತಿಗಳಿಂದ ನಮ್ಮ ದೇಶದ ಉದ್ಧಾರ ಸಾಧ್ಯವೇ ? ಈ ದೇಶದ ಯಜಮಾನಿಕೆ ಹೊತ್ತವರು ಇತಿಹಾಸದಿಂದ ಏನೂ ಪಾಠ ಕಲಿತಿಲ್ಲ.

ಉದಾಹರಣೆಗೆ ಹೇಳುವುದಾದರೆ, ಅಮೆರಿಕಾ ಸಂಯುಕ್ತ ಸಂಸ್ಥಾನ ಎರಡನೇ ಜಾಗತಿಕ ಯುದ್ಧಕ್ಕೆ ಮೊದಲೇ ವಿಶ್ವದ ಪ್ರಮುಖ ಆರ್ಥಿಕ ಶಕ್ತಿಯಾಗಿತ್ತು. ಎರಡನೇ ಯುದ್ಧದ ಅವಧಿಯಲ್ಲೂ ಅದು ಆರ್ಥಿಕವಾಗಿ ಲಾಭ ಮಾಡಿಕೊಂಡಿತು. ಯುದ್ಧ ಮುಗಿಯುವ ಹೊತ್ತಿಗೆ ಇಡೀ ವಿಶ್ವದ ಸಂಪನ್ಮೂಲಗಳ ಅರ್ಧದಷ್ಟು ಅದರ ಪಾಲಾಗಿತ್ತು. ಜೊತೆಗೆ, ಅಡೆತಡೆಯಿಲ್ಲದ ರಾಜಕೀಯ ಅಧಿಕಾರವೂ ಅದರದೇ. ತನ್ನ ಭದ್ರತೆಗೆ ಅಪಾಯ ಬರುವ ವಾಸನೆ ಬಂದರೂ ಒಂದಲ್ಲ ಒಂದು ಕಾರಣವನ್ನು ಸೃಷ್ಟಿಸಿಕೊಂಡು ಅಂತಹ ದೇಶಗಳ ಸರ್ಕಾರಗಳನ್ನು ಬುಡಮೇಲು ಮಾಡಿ ತನ್ನ ಕೈಗೊಂಬೆ ಆಡಳಿತಗಳನ್ನು ಅಲ್ಲಿ ಸ್ಥಾಪಿಸುತ್ತಿತ್ತು. ೧೯೫೪ರಲ್ಲಿ ಮೊದಲ ಬಾರಿಗೆ ಗ್ವಾಟಿಮಾಲಾದಲ್ಲಿ ಚುನಾಯಿತ ಸರ್ಕಾರ ಅಧಿಕಾರಕ್ಕೆ ಬಂದದ್ದು ಎಲ್ಲರಿಗೂ ತಿಳಿದ ವಿಷಯವೇ. ಆ ಸರ್ಕಾರದ ಭೂ ಸುಧಾರಣೆ ಹಾಗೂ ಅದರ ಕಾರ್ಮಿಕ ಹಾಗೂ ರೈತರ ಪರವಾದ ನೀತಿ ಅಮೆರಿಕಾದ ಪ್ರಭುಗಳಿಗೆ ಅಪಾಯವೆನಿಸಿತು. ನೆರೆಯ ರಾಜ್ಯಗಳೂ ಗ್ವಾಟಿಮಾಲಾದಿಂದ ಪ್ರಭಾವಿತವಾದರೆ ಅದು ಅಮೆರಿಕಾದ ಭದ್ರತೆಗೆ ಅಪಾಯವೆನಿಸಿದ್ದ ಕಾರಣ ಆ ಸರ್ಕಾರವನ್ನು ಉರುಳಿಸಲಾಯಿತು. ಭದ್ರತೆ ಎಂದರೆ ಅಮೆರಿಕಾದ ಶ್ರೀಮಂತ ಹಾಗೂ ಬಂಡವಾಳಗಾರ ವರ್ಗದ ಹಿತರಕ್ಷಣೆಯೇ ವಿನಃ ಸಾಧಾರಣ ಜನರ ಹಿತರಕ್ಷಣೆಯಲ್ಲ. ಚಿಲಿಯಲ್ಲಿ ಅಲೆಂಡೆ ಸರ್ಕಾರವನ್ನು ಉರುಳಿಸಿದ್ದಿರಬಹುದು, ವಿಯಟ್ನಾಂನಲ್ಲಿ ದೀರ್ಘಕಾಲ ಯುದ್ಧ ಮಾಡಿದ್ದಿರಬಹುದು ಅಥವಾ ಈಗಿನ ಆಫ್ಘಾನಿಸ್ಥಾನದ ಮೇಲಿನ ಯುದ್ಧವಿರಬಹುದು, ಇವೆಲ್ಲವೂ ಅಮೆರಿಕಾದ ಲಾಭಕ್ಕೆ ಮಾತ್ರವೇ ವಿನಃ ಯಾವುದೇ ಜನಪರವಾದ ಒಲವಿನಿಂದಲ್ಲ.

ಸೋವಿಯತ್ ವ್ಯವಸ್ಥೆಯ ಪತನವಾದ ಮೇಲೆ ಸಹಜವಾಗಿಯೇ ಅಮೆರಿಕಾದ ದುರಹಂಕಾರ, ಯಜಮಾನಿಕೆ ಜಾಸ್ತಿಯಾಗಿದೆ. ಅದು ವಿಶ್ವದ ಪೊಲೀಸ್‌ಮನ್ ಕೆಲಸ ಮಾಡಲು ಹೊರಟಿದೆ. ಸೆಪ್ಟೆಂಬರ್ ೧೧, ೨೦೦೧ರ ನಂತರ ಅದರ ಸ್ವಪ್ರತಿಷ್ಠೆಗೆ ಸ್ವಲ್ಪ ಹೊಡೆತ ಬಿದ್ದಿರಬಹುದು. ಇಷ್ಟಕ್ಕೇ ಅದರ ನೀತಿಗಳಲ್ಲಿ ಬದಲಾವಣೆ ಆಗುವುದೆಂದು ನಿರೀಕ್ಷಿಸುವುದು ತಪ್ಪಾದೀತು. ನಮ್ಮ ದೇಶದಲ್ಲಿ ಅನುಸರಿಸುತ್ತಿರುವ ಒಂದು ದಶಕದ ಸುಧಾರಣಾ ಕ್ರಮಗಳು ಕೂಡ ಅಮೆರಿಕಾ ಮತ್ತಿತರ ರಾಷ್ಟ್ರಗಳ ಬಹುರಾಷ್ಟ್ರೀಯ ಬಂಡವಾಳಗಾರರ ಹಿತವನ್ನು ಕಾಪಾಡುವುದಕ್ಕೆ ಮಾತ್ರವೇ ವಿನಃ ನಮ್ಮ ದೇಶದ ಜ್ವಲಂತ ಸಮಸ್ಯೆಗಳನ್ನು ಬಗೆಹರಿಸುವ ದೃಷ್ಟಿಯಿಂದಲ್ಲ.

ಸರ್ಕಾರವು ಯಾವುದೇ ಆರ್ಥಿಕ ಮತ್ತು ಕೈಗಾರಿಕಾ ಚಟುವಟಿಕೆಗಳನ್ನು ಖಾಸಗೀ ಕ್ಷೇತ್ರಕ್ಕೆ ಬಿಡಬೇಕು-ಸಾರ್ವಜನಿಕ ರಂಗದಲ್ಲಿ ಹೊಸ ಕೈಗಾರಿಕೆಗಳು ಆರಂಭ ಆಗಬಾರದು. ಈಗಾಗಲೇ ಸ್ಥಾಪನೆ ಆಗಿ ಬೇರುಬಿಟ್ಟಿರುವ ಕೈಗಾರಿಕೆಗಳನ್ನು ಕ್ರಮೇಣ ಖಾಸಗೀಕರಿಸಬೇಕೆನ್ನುವ ಈ ಪ್ರಕ್ರಿಯೆ ಈಗಾಗಲೇ ಆರಂಭವಾಗಿದೆ. ನೇರವಾಗಿ ಇಂತಹ ಕಾರ್ಖಾನೆಗಳನ್ನು ಖಾಸಗಿಯವರಿಗೆ ಮಾರಬಹುದು. ನಮ್ಮ ರಾಜ್ಯದಲ್ಲೇ ಎನ್.ಜಿ.ಇ.ಎಫ್., ಸಾಬೂನು ಕಾರ್ಖಾನೆ ಇತ್ಯಾದಿಗಳು ಸ್ವಯಂವರಕ್ಕೆ ಸಿದ್ಧವಾಗಿ ನಿಂತಿವೆ. ಛತ್ತೀಸ್‌ಗಢದ ಲಾಭ ಮಾಡುತ್ತಿದ್ದ ಬಾಲ್ಕೋ ಕಾರ್ಖಾನೆಯನ್ನು ಸ್ಟೆರ್‌ಲೈಟ್ ಕಂಪೆನಿಗೆ ಬಹಳ ಅಗ್ಗವಾಗಿ ಮಾರಲಾಯಿತು. ಇದನ್ನು ಪ್ರತಿಭಟಿಸಿ ಅಲ್ಲಿನ ಕಾರ್ಮಿಕರು ತಿಂಗಳುಗಟ್ಟಲೆ ಮುಷ್ಕರ ಹೂಡಿದರು. ಛತ್ತೀಸ್‌ಗಢದ ಮುಖ್ಯಮಂತ್ರಿ ಕೂಡ ಒಂದು ಹಂತದವರೆಗೆ ಈ ಹೋರಾಟಕ್ಕೆ ಬೆಂಬಲ ಕೊಟ್ಟರು. ದೇಶದ ಎಲ್ಲಾ ಟ್ರೇಡ್ ಯೂನಿಯನ್‌ಗಳೂ ಈ ಸುದೀರ್ಘ ಹೋರಾಟಕ್ಕೆ ಬೆಂಬಲ ಕೊಟ್ಟವು. ಆದರೂ ಬಾಲ್ಕೋಗೆ ಸ್ಟೆರ್‌ಲೈಟ್ ಜೊತೆ ಬಲವಂತದ ಮದುವೆ ಆಗಿದೆ. ಖಾಸಗೀಕರಿಸುವ ಇನ್ನೊಂದು ವಿಧಾನವೆಂದರೆ ಸಾರ್ವಜನಿಕ ರಂಗದಲ್ಲಿ ಹೂಡಿರುವ ಬಂಡವಾಳವನ್ನು ಕ್ರಮೇಣ ಹಿಂತೆಗೆದುಕೊಳ್ಳುವುದು. ಕೇಂದ್ರದ ವಿತ್ತ ಸಚಿವರಾದ ಯಶವಂತ ಸಿನ್ಹ ಅವರು ಈಗ 'ಎರಡನೇ ಹಂತದ ಸುಧಾರಣೆಗಳನ್ನು' ತ್ವರಿತವಾಗಿ ಜಾರಿಗೆ ತರುವ ತರಾತುರಿಯಲ್ಲಿದ್ದಾರೆ. ಬ್ಯಾಂಕ್‌ಗಳ ಶೇರುಗಳನ್ನು ಖಾಸಗಿಯವರಿಗೆ ಮಾರುವುದರ ಜೊತೆಗೆ ಇನ್ಶೂರೆನ್ಸ್ ಖಾಸಗೀಕರಣವೂ ಆರಂಭವಾಗಿದೆ. ಶೇರು ಬಂಡವಾಳವನ್ನು ಸಾರ್ವಜನಿಕ ರಂಗದ ಕಾರ್ಖಾನೆಗಳಿಂದ ವಾಪಸ್ಸು ತೆಗೆದುಕೊಳ್ಳಲು ಒಬ್ಬ ಸಂಪುಟ ದರ್ಜೆಯ ಮಂತ್ರಿಯಾಗಿ ಅರುಣ್ ಶೌರಿ ಅವರನ್ನು ನೇಮಿಸಲಾಗಿದೆ. ಅವರ ಕೆಲಸವೇ ಇದು.

ಮನಮೋಹನ್ ಸಿಂಗ್ ಅವರು ನಷ್ಟದಲ್ಲಿರುವ ಸಾರ್ವಜನಿಕ ರಂಗದ ಕೈಗಾರಿಕೆಗಳನ್ನು ಖಾಸಗೀಕರಿಸುವ ಮಾತನ್ನೇನೋ ಆಡುತ್ತಿದ್ದರು. ವಿಚಿತ್ರವೆಂದರೆ ಎರಡನೇ ಹಂತದ ಸುಧಾರಣೆಗಳಲ್ಲಿ ಲಾಭ ಮಾಡುವ ಕಾರ್ಖಾನೆಗಳನ್ನೂ ಖಾಸಗೀಕರಿಸಲಾಗುತ್ತದೆ. ಹಾಲು ಕೊಡುವ ಹಸುವಿಗೆ ಬೆಲೆ ಜಾಸ್ತಿ ಸಿಗುತ್ತದೆ ಎಂಬುದು ಸರ್ಕಾರದ ಅನಿಸಿಕೆ. "ಕಾರ್ಖಾನೆಗಳನ್ನು ನಡೆಸುವುದು ಸರ್ಕಾರದ ಕೆಲಸವಲ್ಲ. ಯಾರಾದರೂ ಬಂಡವಾಳಗಾರರು ಅವುಗಳನ್ನು ನಡೆಸುವ ಜವಾಬ್ದಾರಿಯನ್ನು ಹೊತ್ತರೆ ಅವರಿಗೆ ಸಹಾಯ ಮಾಡುವುದು ಮಾತ್ರ ಸರ್ಕಾರದ ನೀತಿ" ಎನ್ನುತ್ತದೆ ಎನ್.ಡಿ.ಎ. ಸರ್ಕಾರ. ಕೃಷಿಗಾಗಲಿ, ಕೈಗಾರಿಕೆಗಾಗಲೀ ಸಹಾಯಧನ

ಕೊಡುವುದು ನಿಷಿದ್ಧ. ಇದು ವಿಶ್ವಬ್ಯಾಂಕಿನ ನಿರ್ದೇಶನ. ಇದೊಂದು ದ್ವಿಮುಖ ನೀತಿ. ಮುಂದುವರೆದ ದೇಶಗಳು ತಮ್ಮ ದೇಶಗಳಲ್ಲಿ ಕೃಷಿ ಅಥವಾ ಕೈಗಾರಿಕೆ ಉಳಿಸಲು, ಬೆಳೆಸಲು, ಹೇರಳವಾಗಿ ಸಹಾಯಧನ ನೀಡುತ್ತವೆ. ಪ್ರಪಂಚದ ಯಾವುದೇ ಭಾಗದಲ್ಲೂ ಆರ್ಥಿಕ ಬೆಳವಣಿಗೆಯಲ್ಲಿ ಸರ್ಕಾರಗಳದ್ದು ಮುಖ್ಯ ಪಾತ್ರವಿದೆ ಎಂಬುದನ್ನು ಆರ್ಥಿಕ ಬೆಳವಣಿಗೆಯ ಇತಿಹಾಸ ನಮಗೆ ಹೇಳುತ್ತದೆ. ನಮ್ಮ ದೇಶದ ಐದು ದಶಕಗಳ ಇತಿಹಾಸವೂ ಇದೇ ಆಗಿದೆ. ಆದರೆ ಈಗಿನ ನಮ್ಮನ್ನಾಳುವ ದೊರೆಗಳಿಗೆ ಇತಿಹಾಸದ ಪ್ರಜ್ಞೆ ಇಲ್ಲ. ಅವರಿಗೆ ಬೇಕಾಗಿರುವುದು ವಿಶ್ವಬ್ಯಾಂಕಿನ ಜ್ಯೋತಿಷ್ಯ. ಅಮೆರಿಕಾ ದೇಶದಲ್ಲಿ ಅತೀ ಹೆಚ್ಚಿನ ಮಕ್ಕಳ ಬಡತನ ಇರುವುದಾಗಲೀ, ರಷ್ಯಾ ದೇಶದಲ್ಲಿ ಸುಧಾರಣೆಗಳ ನಂತರ ಶೇ. ೨೫ ಭಾಗ ಜನ ಬಡತನದ ರೇಖೆಗಿಂತ ಕೆಳಗೆ ಇಳಿದಿರುವುದಾಗಲೀ ಇವರ ಗಮನಕ್ಕೆ ಬರುವುದಿಲ್ಲ.

ಈ ನೆಲದ ಗುಣವನ್ನೇ ಆಳುವವರು ಅರ್ಥ ಮಾಡಿಕೊಂಡಂತಿಲ್ಲ. ಸಾವಿರಾರು ವರ್ಷಗಳಿಂದ ಧರ್ಮದ ಹೆಸರಿನಲ್ಲಿ ಅತೀ ಹೆಚ್ಚಿನ ಜನರ ಶೋಷಣೆಯಾಗಿದೆ. ಜಾತಿ ಪ್ರಧಾನವಾದ ಸಮಾಜ ಮಾನವೀಯತೆಯನ್ನೇ ಕಳೆದುಕೊಂಡಿದೆ. ಭಾರತ ಜಾತ್ಯತೀತ ರಾಷ್ಟ್ರವೆಂದು ನಮ್ಮ ಸಂವಿಧಾನದಲ್ಲಿದ್ದರೂ, ಜಾತಿ ಒಂದು ಬಂಡವಾಳವಾಗಿ ಪರಿವರ್ತನೆಯಾಗಿ ದಿನೇ ದಿನೇ ಹೆಚ್ಚು ಆಳವಾಗಿ ಸಮಾಜದಲ್ಲಿ ಬೇರೂರುತ್ತಿದೆ. ಹಿಂದುಳಿದ ವರ್ಗಕ್ಕೆ ಸೇರಿದ ಕೆಲವರು ಅಧಿಕಾರಕ್ಕೆ ಬಂದಿದ್ದರೂ, ಜಾತಿಯ ಹೆಸರಿನಲ್ಲಿ ಶೋಷಣೆಯಾಗುವುದು ನಿಂತಿಲ್ಲ. ನಿಲ್ಲುವ ಸೂಚನೆಯೂ ಕಾಣುತ್ತಿಲ್ಲ. ಕಾನೂನುಗಳೇನೋ ಲೆಕ್ಕವಿಲ್ಲದಷ್ಟು ಬಂದಿವೆ. ಅವು ಉಳ್ಳವರ ಗುಲಾಮರಾಗಿವೆ. ಕಂಬಾಲಪಲ್ಲಿಯಿಂದ ವಣೆನೂರಿನವರೆಗೆ ಕಾನೂನು ದೀರ್ಘ ನಿದ್ರೆಯಲ್ಲಿದೆ. ಈ ಮಣ್ಣಿನಲ್ಲಿ ಹುಟ್ಟಿರುವಷ್ಟು ದೇವರುಗಳು ಪ್ರಪಂಚದ ಬೇರಾವುದೇ ಭಾಗದಲ್ಲೂ ಹುಟ್ಟಿಲ್ಲ. ಒಟ್ಟಾರೆ, ಇವೆಲ್ಲ ಸೇರಿ ಮನುಷ್ಯನಿಂದ ಮನುಷ್ಯನ ಶೋಷಣೆಯನ್ನು ತೀವ್ರವಾಗಿಸಿವೆ. ಮೀಸಲಾತಿ ಇಲ್ಲದಿದ್ದರೆ ಸಾಮಾಜಿಕ ನ್ಯಾಯ ಸಿಗುವುದಿಲ್ಲ.

ಈ ಹತ್ತು ವರ್ಷಗಳ 'ಸುಧಾರಣೆ'ಗಳ ಪರಿಣಾಮವೆಂದರೆ, ಹೆಚ್ಚಿನ ಕಾರ್ಖಾನೆಗಳು ರೋಗಗ್ರಸ್ತವಾಗಿವೆ; ಇಲ್ಲ, ಮುಚ್ಚಿವೆ. ಹಲವಾರು ಲಕ್ಷ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಬ್ಯಾಂಕ್‌ಗಳಿಂದ ಹಿಡಿದು ಕೈಗಾರಿಕೆಗಳವರೆಗೆ ವಿ.ಆರ್.ಎಸ್. ಜಾರಿಗೆ ಬಂದಿದೆ. ಇದು ಸ್ವಯಂ ನಿವೃತ್ತಿ ಯೋಜನೆ ಎಂದು ಹೇಳಿದ್ದರೂ, ಅದೊಂದು ಬಲವಂತದ ಮಾಘ ಸ್ನಾನ. ಇಡೀ ಕೈಗಾರಿಕಾ ಕ್ಷೇತ್ರದಲ್ಲಿ ಕಾರ್ಮಿಕರ ಮನಸ್ಸಿನಲ್ಲಿ ಅನಿಶ್ಚಿತತೆ ತಲೆದೋರಿದೆ. ನಾಳೆಯ ಬಗ್ಗೆ ನಂಬಿಕೆಯಿಲ್ಲ. ನಿನ್ನೆಯ ಅನುಭವ ಕೆಟ್ಟದ್ದು. ಆದ್ದರಿಂದ ಇಂದು ಕೊಟ್ಟಷ್ಟು ತೆಗೆದುಕೊಂಡು ಹೋಗುವುದೇ ವಿವೇಕದ ಲಕ್ಷಣವೆಂದು ಸಾಮಾನ್ಯ ಕಾರ್ಮಿಕರು ಭಾವಿಸಿದಂತಿದೆ. ಬ್ಯಾಂಕ್ ಕಾರ್ಮಿಕ ಸಂಘಗಳು ಬಹಳ ಶಕ್ತಿಶಾಲಿಯಾಗಿವೆ. ಅದರ ನಾಯಕತ್ವ ವಿ.ಆರ್.ಎಸ್. ವಿರೋಧಿಸಿದರೂ ಲಕ್ಷಕ್ಕೂ ಹೆಚ್ಚು ಮಂದಿ ಬ್ಯಾಂಕ್ ನೌಕರರು ಬ್ಯಾಂಕ್ ಬಿಟ್ಟಿದ್ದಾರೆ.

> ಕೆಲವು ಪುಸ್ತಕಗಳನ್ನು ರುಚಿ ನೋಡಬೇಕು, ಕೆಲವನ್ನು ನುಂಗಬೇಕು, ಕೆಲವನ್ನು ನಿಧಾನವಾಗಿ ಚೀಪಿ ಚಪ್ಪರಿಸಿ, ಅರಗಿಸಿಕೊಳ್ಳಬೇಕು.
>
> – ಫ್ರಾನ್ಸಿಸ್ ಬೇಕನ್

ವಾರ್ಷಿಕ ಒಂದು ಕೋಟಿ ಉದ್ಯೋಗ ಸೃಷ್ಟಿಯಾಗುವುದರ ಬದಲು ಇರುವ ಉದ್ಯೋಗಗಳು ನಾಶವಾಗುತ್ತಿವೆ.

ಕೃಷಿ ಕ್ಷೇತ್ರ ಕೂಡ ಇದಕ್ಕೆ ಹೊರತಾಗಿಲ್ಲ. ರೈತರ ಆತ್ಮಹತ್ಯೆ ಪ್ರಕರಣಗಳು ಒಂದು ತರಹದ ಅಸಹಾಯಕತೆಯ ಪ್ರದರ್ಶನವೆಂದರೂ, ಸರ್ಕಾರದ ನೀತಿಗಳು ಕೃಷಿಯ ಮೇಲೂ ಅಗಾಧ ಪರಿಣಾಮ ಬೀರುತ್ತಿವೆ. ಸರ್ಕಾರ ಏನೇ ಅಂಕಿ ಅಂಶಗಳ ಚಮತ್ಕಾರವನ್ನು ತೋರಿಸುತ್ತಿದ್ದರೂ, ಒಟ್ಟಾರೆ ಬಡತನ ಜಾಸ್ತಿಯಾಗುತ್ತಿದೆ.

ಈಗ ಸರ್ಕಾರ ಹಾಗೂ ನಮ್ಮ ದೇಶದ ಬಂಡವಾಳಗಾರರು ಕಾರ್ಮಿಕರಿಗೆ ಸಂಬಂಧಪಟ್ಟ ಕಾನೂನುಗಳನ್ನು ಸುಧಾರಣೆ ಮಾಡಬೇಕೆಂದು ಬೊಬ್ಬೆ ಹೊಡೆಯುತ್ತಿದ್ದಾರೆ. ಅವರ ಪ್ರಕಾರ 'ಜಾಗತೀಕರಣ'ದ ಹಿನ್ನೆಲೆಯಲ್ಲಿ ಹೆಚ್ಚಿನ ಬಂಡವಾಳವನ್ನು ಆಕರ್ಷಿಸಲು ಸುಧಾರಣೆಗಳು ಅತಿ ಅವಶ್ಯಕವಾಗಿವೆ. ''ಈಗಿರುವ ಕಾನೂನುಗಳು ಬಹಳ ಗಡುಸಾಗಿವೆ, ಅವು ಎಳೆದ ಕಡೆ ಬರುತ್ತಿಲ್ಲ'' ಎಂಬುದು ಅವರ ವಾದ. ೧೯೨೬ ಅಥವಾ ೧೯೪೭ರಲ್ಲಿ ಬಂದಿರುವ ಕಾರ್ಮಿಕ ಕಾಯಿದೆಗಳಿಗೆ ಖಂಡಿತವಾಗಿ ಹಲವಾರು ತಿದ್ದುಪಡಿಗಳು ಬೇಕು. ಸ್ವಾತಂತ್ರ್ಯ ಬಂದು ಐದು ದಶಕಗಳು ಕಳೆದಿದ್ದರೂ, ಅಪಾರ ಅನುಭವ ನಾವು ಗಳಿಸಿದ್ದರೂ ನಮ್ಮ ದೇಶದಲ್ಲಿ ಕಾರ್ಮಿಕ ಸಂಘಗಳ ಕಡ್ಡಾಯ ಮಾನ್ಯತೆಗೆ ಸಂಬಂಧಪಟ್ಟ ಅಥವಾ ಕಡ್ಡಾಯವಾಗಿ ಮಾಲೀಕರು ಸಂಘಗಳೊಂದಿಗೆ ಸಾಮೂಹಿಕ ಚೌಕಾಶಿ ನಡೆಸಬೇಕೆಂಬ ಕಾನೂನಿಲ್ಲ. ಸಂವಿಧಾನದ ನಿರ್ದೇಶನ ತತ್ವಗಳಲ್ಲಿ ವಿಧಿ ೩೯ರಿಂದ ೪೩(ಎ)ವರೆಗೆ ಇರುವ ಧ್ಯೇಯೋದ್ದೇಶಗಳನ್ನು ಜಾರಿ ಮಾಡಲು ಯಾವುದೇ ಕಾನೂನನ್ನೂ ಸರ್ಕಾರಗಳು ತಂದಿಲ್ಲ. ಉದ್ಯೋಗದ ಹಕ್ಕು, ಕೆಲಸ ಮಾಡುವ ಸ್ಥಳದಲ್ಲಿ ಮಾನವೀಯ ವ್ಯವಸ್ಥೆ, ಬದಕಲು ಬೇಕಾಗುವ ಕನಿಷ್ಠ ವೇತನ ಇತ್ಯಾದಿಗಳೆಲ್ಲ ಈ ವಿಧಿಗಳಲ್ಲಿವೆ. ೪೩(ಎ) ಪ್ರಕಾರ ಸರ್ಕಾರಗಳು ಸೂಕ್ತವಾದ ಕಾನೂನಿನ ಮೂಲಕ ಕಾರ್ಮಿಕರಿಗೆ ಆಡಳಿತದಲ್ಲಿ ಪಾತ್ರವಹಿಸಲು ಅವಕಾಶ ಮಾಡಿಕೊಡಬೇಕು. ಈ ವಿಧಿ ೧೯೭೬ರ ತುರ್ತು ಪರಿಸ್ಥಿತಿಯಲ್ಲಿ ಸಂವಿಧಾನದ ತಿದ್ದುಪಡಿಯ ಮೂಲಕ ತರಲಾಗಿದೆ. ಸರ್ಕಾರಗಳೂ ಇದನ್ನೆಲ್ಲ ಮರೆತಂತಿವೆ. ಮಾಲೀಕ ವರ್ಗವು ಈ ವಿಷಯದಲ್ಲಿ ಕಣ್ಣು ಮುಚ್ಚಿ ಕುಳಿತಿದೆ. ಇವೆಲ್ಲ ಅವರಿಗ್ಯಾಕೆ ಬೇಕು ? ಸಂವಿಧಾನದಲ್ಲಿರುವ 'ಸಮಾಜವಾದ', 'ಸಾಮಾಜಿಕ ನ್ಯಾಯ' ಇನ್ನೂ ಮರೀಚಿಕೆಗಳಾಗಿಯೇ ಉಳಿದಿವೆ. ಮಾಧ್ಯಮಗಳ ಮೂಲಕ ತಮಗೆ ಅನುಕೂಲವಾದ ಅಭಿಪ್ರಾಯಗಳನ್ನು ಸೃಷ್ಟಿಸಿ ಅವೇ ಸತ್ಯವೆಂದು ಡಂಗೂರ ಹೊಡೆಯಲಾಗುತ್ತಿದೆ. ಖಾಸಗೀಕರಣದ ಹುಚ್ಚು ಪ್ರವಾಹದಲ್ಲಿ ಸಾಮಾಜಿಕ ನ್ಯಾಯ ಕೊಚ್ಚಿ ಹೋಗಿರುವುದರಲ್ಲಿ ಅನುಮಾನವೇ ಇಲ್ಲ. ದುರಂತವೆಂದರೆ ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುತ್ತಿದ್ದೇವೆಂದು ಹೇಳಿಕೊಳ್ಳುವ ಅನೇಕ ಶಕ್ತಿಗಳಿಗೆ ವ್ಯವಸ್ಥೆಯ ವಿರುದ್ಧ ಎದ್ದು ನಿಲ್ಲಲು ಬೆನ್ನು ಹುರಿಯಿಲ್ಲ. ವ್ಯವಸ್ಥೆಯ ಬೊಗಳೆ ಆಶ್ವಾಸನೆಗಳಿಗೆ ಅಥವಾ ಅದು ಹಾಕುವ ಎಂಜಲಿಗೆ ಅವು ರಾಜಿ ಮಾಡಿಕೊಂಡಿವೆ. ಬರೀ ಜಾತಿಯ ಹೆಸರಿನಲ್ಲಿ ಬೊಬ್ಬೆ ಹೊಡೆದರೆ ಬದಲಾವಣೆ ಆಗುವುದಿಲ್ಲ. ಜಾತ್ಯತೀತ ಸಮಾಜ ಕಟ್ಟಬೇಕಾದರೆ, ಪ್ರಜ್ಞಾಪೂರ್ವಕವಾದ ಹೋರಾಟದ ಅಗತ್ಯವಿದೆ. ಅಂತಹ ಸಿದ್ಧಾಂತದಲ್ಲಿ ನಂಬಿಕೆಯಿರುವ ಎಲ್ಲ ಶಕ್ತಿಗಳು ಒಂದಾಗಬೇಕು.

> ಅ. ರಾ. ಮಿತ್ರ
>
> ಉಡುಪೀಲಿ ತಪ್ಪಿಸಿಕೊಂಡ ಪೋಲಿ ಹುಡುಗ್ರು
> ಮುಂಬೈ ಸೇರ್ಕೊಂಡ್ ಬಿಡ್ತಾರೆ
> ಅಲ್ಲೆ ಕೆಲಸ ಮಾಡ್ಕೊಂಡ್ ಓದ್ಕೊಂಡ್
> ಮರ್ಯಾದಸ್ಥರಾಗ್ ಬಾಳ್ತಾರೆ

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಹೆಸರಿನಲ್ಲಿ ಸರ್ಕಾರ ಹಾಗೂ ಮಾಲೀಕರಿಗೆ ಹೈರ್ ಅಂಡ್ ಫೈರ್ ನೀತಿಯನ್ನು ತುರ್ತಾಗಿ ಜಾರಿಗೆ ತರುವ ಅವಕಾಶ ಬೇಕಾಗಿದೆ. ಲೇ ಆಫ್, ಲಾಕ್ ಔಟ್ ಮತ್ತು ಕಾರ್ಖಾನೆಗಳನ್ನು ತಮ್ಮ ಇಷ್ಟಕ್ಕನುಸಾರವಾಗಿ ಮುಚ್ಚುವ ಅನಿರ್ಬಂಧಿತ ಅಧಿಕಾರ ಬೇಕಾಗಿದೆ. ಈಗಾಗಲೇ ಇ.ಎಸ್.ಐ. ಭವಿಷ್ಯ ನಿಧಿ ಮತ್ತು ಸಾಮಾಜಿಕ ಕಲ್ಯಾಣದಂತಹ ಸದುದ್ದೇಶಗಳನ್ನು ಹೊಂದಿರುವ ಕಾನೂನುಗಳನ್ನು ಅನೇಕ ಮಾಲೀಕರು ಉಲ್ಲಂಘನೆ ಮಾಡಿರುವುದು ಎಲ್ಲರಿಗೂ ತಿಳಿದ ವಿಷಯ. ಕಾರ್ಮಿಕರಿಗೆ ಸಂಬಂಧಪಟ್ಟ ಕಾಯಿದೆಗಳ ಉಲ್ಲಂಘನೆ ದಿನನಿತ್ಯ ಆಗುತ್ತಿದೆ. ಹೆಚ್ಚು ಹೆಚ್ಚಾಗಿ ಗುತ್ತಿಗೆ ಆಧಾರದ ಮೇಲೆ ಕಾರ್ಮಿಕರಿಗೆ ನೇಮಕ ಆಗುತ್ತಿದೆ. ಕೈಗಾರಿಕಾ ವಿವಾದ ಕಾಯಿದೆಯಲ್ಲಿರುವ ೨೫(ಒ), ಪರಿವಿಧಿ ೫(ಬಿ), ೧೧(ಎ), ೯ (ಎ) ಇತ್ಯಾದಿಗಳ ತಿದ್ದುಪಡಿ ಮಾಡಿ, ಇಡೀ ಕಾರ್ಮಿಕ ವರ್ಗವನ್ನು ಮಾಲೀಕರ ಹಿತಾಸಕ್ತಿಗಳಿಗೆ ಒತ್ತೆ ಇಡಲು ಸರ್ಕಾರ ಸಿದ್ಧಪಡಿಸುತ್ತಿದೆ. ಕಾರ್ಖಾನೆಗಳ ಕಾಯಿದೆ ೧೯೪೮ರ ತಿದ್ದುಪಡಿ ಮಾಡಿ ಕಾರ್ಮಿಕರ ಕೆಲಸದ ವೇಳೆಯನ್ನು ಹೆಚ್ಚಿಸುವ ಬಗ್ಗೆಯೂ ಸರ್ಕಾರ ಚಿಂತಿಸುತ್ತಿದೆ.

ಕೇಂದ್ರ ಸರ್ಕಾರವು ೨ನೇ ಕಾರ್ಮಿಕ ಆಯೋಗವನ್ನು ರಚಿಸಿದ್ದರೂ ಅದರ ಶಿಫಾರಸ್ಸಿಗೆ ಕಾಯದೆ, ಮನಸೋಇಚ್ಛೆ ನಡೆದುಕೊಳ್ಳುತ್ತಿದೆ.

ನ್ಯಾಯಾಂಗ ಕೂಡ ಜಾಗತೀಕರಣ ಸೃಷ್ಟಿಸಿರುವ

ಹೊಸ ಪರಿಸ್ಥಿತಿಗೆ ಹೊಂದಿಕೊಳ್ಳುತ್ತದೆಂಬ ಆಶಾಭಾವನೆಯನ್ನು ವ್ಯಕ್ತಪಡಿಸಲಾಗುತ್ತಿದೆ. ಇತ್ತೀಚಿನ ಕೆಲವು ತೀರ್ಪುಗಳು ಕಾರ್ಮಿಕರ ವಿರೋಧವಾಗಿ ಇರಬಹುದು. ಆದರೆ ಅವುಗಳು ನ್ಯಾಯಾಂಗದ ಮೇಲೆ ಜಾಗತೀಕರಣ ಬೀರಿರುವ ಪರಿಣಾಮ ಎಂದು ಹೇಳುವುದು ಜಾಗತೀಕರಣದ ಬಗ್ಗೆ ಇಡುವ ಅತಿಯಾದ ನಿಷ್ಠೆ ಎಂದರೆ ತಪ್ಪಾಗಲಾರದು. ಸಂವಿಧಾನದ ಪರಾಮರ್ಶೆಗೆ ಆಯೋಗ ರಚನೆ ಆಗಿದ್ದರೂ ಅದರ ಶಿಫಾರಸ್ಸು ಇನ್ನೂ ಬಂದಿಲ್ಲ. ಮೇಲಾಗಿ ಅಷ್ಟು ಸುಲಭವಾಗಿ ಸಂವಿಧಾನವನ್ನು ಬದಲಾಯಿಸುವಷ್ಟು ಬಹುಮತ ಇಂದು ಯಾವುದೇ ರಾಜಕೀಯ ಪಕ್ಷಕ್ಕೂ ಇಲ್ಲ. ಆದ್ದರಿಂದ ನ್ಯಾಯಾಂಗವು ಸಂವಿಧಾನವನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕೇ ಹೊರತು ಜಾಗತೀಕರಣವನ್ನಲ್ಲ.

ಕಾರ್ಮಿಕರ ಕಾಯಿದೆಗಳಿಗೆ ಬದಲಾವಣೆ ತರುವ ಜೊತೆಗೆ ಕೇಂದ್ರ ಸರ್ಕಾರ ಮೂರು ಸಮಿತಿಗಳನ್ನು ರಚಿಸಿತ್ತು. ಈ ಸಮಿತಿಗಳ ವರದಿಯ ಬಗ್ಗೆ ದೀರ್ಘ ಪ್ರಸ್ತಾಪ ಮಾಡುವ ಉದ್ದೇಶ ಈ ಲೇಖನದ್ದಲ್ಲ. ಆದರೆ ಸರ್ಕಾರದ ನೀತಿಯ ಬಗ್ಗೆ ಚರ್ಚೆ ಮಾಡುವಾಗ, ಈ ವರದಿಗಳ ಬಗ್ಗೆ ಗಮನ ಸೆಳೆಯುವುದು ಪ್ರಸ್ತುತವೆನಿಸುತ್ತದೆ. ಮಾಂಟೆಕ್ ಸಿಂಗ್ ಅಹ್ಲುವಾಲಿಯ ಅವರ ಅಧ್ಯಕ್ಷತೆಯಲ್ಲಿ ರಚಿಸಿರುವ ಟಾಸ್ಕ್ ಫೋರ್ಸ್ ಈಗಿರುವ ಕಾರ್ಮಿಕ ಕಾಯಿದೆಗಳನ್ನು ಮಾಲೀಕರ ಅನುಕೂಲಕ್ಕೆ ಸರಿಯಾಗಿ ಬದಲಾಯಿಸಲು ಸಲಹೆಯನ್ನಿತ್ತಿದೆ. ರೈಲ್ವೇ ಇಲಾಖೆಯ ಬಗ್ಗೆ ನೇಮಿಸಿದ್ದ ರಾಕೇಶ್ ಮೋಹನ್ ಸಮಿತಿಯು ಈಗಿರುವ ರೈಲ್ವೇ ಇಲಾಖೆಯನ್ನು ಹಲವಾರು ನಿಗಮಗಳನ್ನಾಗಿ ಮಾಡಿ ಅವುಗಳನ್ನು ವಾಣಿಜ್ಯ ಸಂಸ್ಥೆಗಳನ್ನಾಗಿ ನಡೆಸಬೇಕೆಂದು ತಿಳಿಸಿದೆ. ಇಲ್ಲಿ ಸಾಮಾಜಿಕ ಹಿತಾಸಕ್ತಿಗಳು ಗಣನೆಗೆ ಬರುವುದಿಲ್ಲ. ಹಾಗಾಗಿ ಅಂತಿಮವಾಗಿ ರೈಲ್ವೆ ಕೂಡ ಖಾಸಗೀಕರಣವಾಗಬೇಕೆನ್ನುವುದು ಆ ಸಮಿತಿಯ ಅಭಿಪ್ರಾಯ. ಮತ್ತೊಂದು ಸಮಿತಿ (ಗೀತಾ ಕೃಷ್ಣನ್ ಸಮಿತಿ)ಯು ಕೇಂದ್ರ ಸರ್ಕಾರದ ೩೬ ಇಲಾಖೆಗಳಲ್ಲಿ ಖರ್ಚು ಕಡಿಮೆ ಮಾಡುವ ಬಗ್ಗೆ, ರಸಗೊಬ್ಬರ ಮತ್ತು ಆಹಾರ ಧಾನ್ಯಗಳಿಗೆ ಕೊಡುವ ಸಹಾಯ ಧನಗಳನ್ನು ರದ್ದು ಮಾಡುವ ಬಗ್ಗೆ ವರದಿ ಕೊಟ್ಟಿದೆ. ಈ ಶಿಫಾರಸುಗಳ ಪ್ರಕಾರ ೩೬ ಸರ್ಕಾರಿ ಇಲಾಖೆಗಳಲ್ಲಿ ಮುಂದಿನ ಐದು ವರ್ಷಗಳಲ್ಲಿ ಐದು ಲಕ್ಷ ಉದ್ಯೋಗಗಳು ಇಲ್ಲವಾಗುತ್ತವೆ. ಉದ್ಯೋಗಿಗಳ ಸಂಖ್ಯೆಯನ್ನು ಕಡಿಮೆ ಮಾಡುವುದು, ಇರುವ ಕೆಲಸವನ್ನು ಖಾಸಗಿಯವರಿಗೆ ಕೊಟ್ಟು ಮಾಡಿಸುವುದೇ ತಾರಕ ಮಂತ್ರವಾಗಿದೆ.

ಆದ್ದರಿಂದ ಆರ್ಥಿಕ ರಂಗದ ಮತ್ತು ಕಾರ್ಮಿಕರ ಕಾಯಿದೆಯ ಸುಧಾರಣೆಗಳು ದೇಶದ ದುಡಿಯುವ ಜನಕ್ಕೆ ಮಾರಕವಾಗಿವೆ. ಈ ಕ್ರಮಗಳಿಂದ ಕಾರ್ಮಿಕ ಸಂಘಗಳು ತಮ್ಮ ಮುಖ್ಯತ್ವವನ್ನು ಕಳೆದುಕೊಳ್ಳುತ್ತವೆ. ಸರ್ಕಾರದ ದುರ್ನೀತಿಗಳನ್ನು ಕಳೆದ ಒಂದು ದಶಕದಿಂದ ಎದುರಿಸುತ್ತಿರುವ ಕಾರ್ಮಿಕ ಸಂಘಗಳ ಶಕ್ತಿಯನ್ನು ಮೊಟಕು ಮಾಡುವುದೇ ಸರ್ಕಾರದ ಉದ್ದೇಶ. ಪ್ರಖ್ಯಾತ ರಾಜಕೀಯ ಚಿಂತಕ ಹಾಗೂ ಬರಹಗಾರ ನೋಮ್ ಚೋಮ್‌ಸ್ಕಿಯವರು 'ಹೊಸ ಸುಧಾರಣಾ ನೀತಿಗಳು ವಿದ್ಯಾಭ್ಯಾಸ ಮತ್ತು ಆರೋಗ್ಯಕ್ಕೆ ಕಡಿಮೆ ಗಮನ ಕೊಡುತ್ತವೆ, ಅಸಮಾನತೆಯನ್ನು ಜಾಸ್ತಿ ಮಾಡುತ್ತವೆ ಮತ್ತು ಕಾರ್ಮಿಕರ ಆದಾಯದ ಭಾಗವನ್ನು ಕಡಿಮೆ ಮಾಡುತ್ತವೆಂಬುದರ ಬಗ್ಗೆ ಯಾವ ಸಂದೇಹವೂ ಇಲ್ಲ' ಎಂದು ಹಿಂದೆಯೇ ಹೇಳಿರುವ ಮಾತು ಈಗ ಅಕ್ಷರಶಃ ಸತ್ಯವಾಗಿದೆ.

ಈ ಸುಧಾರಣೆಗಳು ಯಾರ ಪರವಾಗಿವೆ ಎಂಬುದು ನಮ್ಮ ಅನುಭವದಿಂದಲೂ ಸ್ಪಷ್ಟವಾಗಿದೆ. ಇರುವ ಉದ್ಯೋಗಗಳನ್ನು ಲಕ್ಷಗಟ್ಟಲೆ ಕಡಿಮೆ ಮಾಡಿ ಸಾರ್ವಜನಿಕ ರಂಗದ ಆಸ್ತಿಯನ್ನು ಖಾಸಗಿಯವರಿಗೆ ಪರಭಾರೆ ಮಾಡಿ, ಕಾರ್ಮಿಕರ ಹಾಗೂ ಜನತೆಯ ಸಂಘಟನಾ ಮತ್ತು ಪ್ರಜಾಪ್ರಭುತ್ವ ಹಕ್ಕುಗಳನ್ನು ದಮನ ಮಾಡುವ ಸುಧಾರಣೆಗಳು ಯಾರ ಹಿತವನ್ನು ಸಾಧಿಸುತ್ತವೆ ? ಆರ್ಥಿಕ ಬೆಳವಣಿಗೆಯನ್ನು ಅಭಿವೃದ್ಧಿಪಡಿಸಿ, ಹೊಸ ಹೊಸ ಉದ್ಯೋಗಗಳನ್ನು ಸೃಷ್ಟಿಸಿ ಈ ದೇಶದ ೧೦೦ ಕೋಟಿಗೂ ಮಿಗಿಲಾದ ಜನರ ಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸುವ ಸುಧಾರಣೆಗಳು ತುರ್ತಾಗಿ ಬೇಕಾಗಿವೆ.


**ಎಚ್. ಎ. ಅನಂತಸುಬ್ಬರಾವ್**
ನಂ. ೩೭, 'ಜ್ಯೋತಿ ನಿವಾಸ', ೧೬ನೇ ಮುಖ್ಯರಸ್ತೆ,
ಎಂ.ಸಿ. ಲೇಔಟ್, ವಿಜಯನಗರ, ಬೆಂಗಳೂರು-೪೦

# ದಕ್ಷಿಣದ ಹೊಸ ಹೆಸರುಗಳು



**ಡಾ॥ ಬಿ. ಎಸ್. ಶೈಲಜಾ**

ಭಗವದ್ಗೀತೆಯಲ್ಲಿ ''ಮಾಸಾನಾಂ ಮಾರ್ಗಶೀರ್ಷೋಽಹಂ'' ಎಂಬ ಉಕ್ತಿ ಇದೆ. ಇದರ ಮೂಲಾರ್ಥವೇನೋ ನನಗೆ ತಿಳಿಯದು. ಆದರೂ ನಭಾವಲೋಕನಕ್ಕೆ ಮಾರ್ಗಶಿರಕ್ಕಿಂತ ಉತ್ತಮವಾದ ತಿಂಗಳು ಇನ್ನೊಂದಿಲ್ಲ ಎಂಬುದಂತೂ ನಿಜ. ಕಳೆದ ತಿಂಗಳು ಗ್ರಹಣದ ಮೇಲೆ ಗ್ರಹಣಗಳು ನಡೆದವು. ಜೊತೆಗೆ ಧೂಮಕೇತುವೊಂದು ಧುತ್ತೆಂದು ಪ್ರತ್ಯಕ್ಷವಾಗಿ ಎಲ್ಲರ ಗಮನವನ್ನು ಆಕಾಶದ ಕಡೆಗೆ ಒಯ್ದಿತು. ಹೇಗಾದರೂ ಸರಿ ಮಾರ್ಗಶಿರದ ಸೊಬಗು ಎಲ್ಲರ ಗಮನಕ್ಕೆ ಬಂದೇ ಬಂದಿತು.

ಮಾರ್ಗಶಿರ ಇನ್ನೂ ಮುಗಿದಿಲ್ಲ. ನಭದ ಸೊಬಗು ದಿನೇ ದಿನೇ ಹೆಚ್ಚುತ್ತಲೇ ಇದೆ ಎನ್ನಿಸುತ್ತಿದೆ. ಕತ್ತಲೂ ಬೇಗ ಆಗಿಬಿಡುತ್ತಿದೆಯಾದ್ದರಿಂದ ನಕ್ಷತ್ರಗಳ ಪರಿಚಯಕ್ಕೆ ಹೆಚ್ಚು ಸಮಯ ಸಿಕ್ಕಿದಂತಾಗಿದೆ. ಪೂರ್ವದಂಚಿನಲ್ಲಿ ಕಾಣುವ ಒರೈಯನ್ (ಮಹಾವ್ಯಾಧ) ಎಲ್ಲರ ಗಮನ ಸೆಳೆಯುವ ಪ್ರಕಾಶಮಾನವಾದ ಪುಂಜ. ಅದರ ಮೇಲೆ ವೃಷಭದ V ಆಕಾರ, ಮಿನುಗುವ ಕೆಂಪು ಚಿಕ್ಕೆ ರೋಹಿಣಿ, ಅದರ ಪಕ್ಕದಲ್ಲೇ ಪ್ರಕಾಶದ ಸ್ಪರ್ಧೆಗೆ ಇಳಿದು ವಿಜಯಿಯಾಗಿರುವ ಶನಿಗ್ರಹ – ಇವೆಲ್ಲಾ ಪೂರ್ವ ದಿಗಂತದಿಂದ ನೆತ್ತಿಯವರೆಗೂ ವ್ಯಾಪಿಸಿರುವುವು. ಉತ್ತರ ದಲ್ಲಿ ಗ್ರೀಕ್ ಕುಟುಂಬ – ಮಹಾರಾಜ ಸಿಫಿಯುಸ್, ಮಹಾರಾಣಿ ಕಾಸಿಯೋಪಿಯಾ, ರಾಜಪುತ್ರಿ ಆಂಡ್ರೋಮಿಡಾ, ಅವಳನ್ನು ತಿನ್ನಬಯಸಿದ ಡ್ರಾಕೋ, ಅದನ್ನು ಕೊಂದ ನಾಯಕ ಪರ್ಸಿಯುಸ್ – ಇವರ ರಂಗಮಂಚ ಸಿದ್ಧವಾಗಿದೆ. ಇನ್ನು ದಕ್ಷಿಣ ?

ದಕ್ಷಿಣದ ಅಂಚಿನಲ್ಲಿ ಕಾಣಸಿಗುವ ಪ್ರಖರ ನಕ್ಷತ್ರ ಯಾವುದು ? ಎಂಬ ಪ್ರಶ್ನೆಗೆ ಥಟ್ಟನೆ ಸಿಗುವ ಉತ್ತರ ಕನೋಪಸ್(ಅಗಸ್ತ್ಯ). ಆದರೆ ದಿಟ್ಟಿಸಿ ನೋಡಿ – ಅಲ್ಲಿ ಎಷ್ಟೊಂದು ನಕ್ಷತ್ರಗಳಿವೆಯಲ್ಲವೇ? ಅಗಸ್ತ್ಯ (ನಿಮ್ಮ) ಎಡ ಭಾಗದಲ್ಲಿ ದಿಗಂತದ ಅಂಚಿನಲ್ಲಿ ಕಂಡರೆ, ಬಲಭಾಗದ ದಿಗಂತದ ಅಂಚಿನಲ್ಲಿ ಅದೇ ನೇರಕ್ಕೆ ಇನ್ನೊಂದು ನಕ್ಷತ್ರವಿದೆಯಲ್ಲವೇ ? ಅದರಿಂದ ಸ್ವಲ್ಪ ಮೇಲೆ ಫಾಮಲ್‌ಹೌಟ್ (ದಕ್ಷಿಣಮೀನ) ಎಂಬುದೂ ಇದೆ. ಇದಾವ ನಕ್ಷತ್ರ ?

ನಾವಿಕರು ದೊಡ್ಡ ದೊಡ್ಡ ಹಡಗುಗಳಲ್ಲಿ ಸಂಚಾರ ಹೊರಟು ಭೂಮಧ್ಯರೇಖೆಯನ್ನು ದಾಟಿದರಷ್ಟೇ. ಆಗಲೇ ಅವರಿಗೆ ದಕ್ಷಿಣದ ಹೊಸ ಪುಂಜಗಳು ಪರಿಚಯವಾಯಿತು. ಯೂರೋಪಿಯನ್ನರಿಗೆ ಇದೊಂದು ಹೊಸ ಅನುಭವವೇ ಆಯಿತು. ಪ್ರತಿ ಸಮುದ್ರಯಾನದಲ್ಲೂ ಒಬ್ಬಿಬ್ಬರು ಖಗೋಳಜ್ಞರು ಇದ್ದೇ ಇರುತ್ತಿದ್ದರು. ಕಾಲಗಣನೆಗೆ, ಅಲ್ಲದೆ ಅಕ್ಷಾಂಶ ರೇಖಾಂಶಗಳ ಅಳತೆಗೆ ಖಗೋಳ ವಿಜ್ಞಾನ ಪ್ರತಿಯೊಬ್ಬರಿಗೂ ಅತಿ ಅವಶ್ಯಕವಾಗಿತ್ತು. ಆದರೆ ಖಗೋಳ ವೀಕ್ಷಣೆಯ ಉದ್ದೇಶದಿಂದಲೇ ಪ್ರವಾಸ ಮಾಡುತ್ತಿದ್ದವರಿಗೆ ಹೊಸ ನಕ್ಷತ್ರಪುಂಜಗಳೇ ಮುಖ್ಯ ಆಕರ್ಷಣೆಯಾಗಿದ್ದವು. ಈ ಕಾರಣದಿಂದ ಆ ಪುಂಜಗಳ ಹೆಸರುಗಳು ವೈವಿಧ್ಯಪೂರ್ಣವಾಗಿವೆ. ಪಕ್ಷಿ ಪ್ರಾಣಿಗಳ ಹೆಸರು, ನೌಕೆಗಳಿಗೆ, ಸಮುದ್ರಯಾನಕ್ಕೆ ಸಂಬಂಧಿಸಿದ ಹೆಸರುಗಳು ಅಲ್ಲಿವೆ.

ಈಗ ತಾನೇ ನಾವು ನೈಋತ್ಯದಲ್ಲಿ ಗುರುತಿಸಿದ ನಕ್ಷತ್ರಕ್ಕೆ ಆಚೆರ್ನಾರ್ ಅಥವಾ ವೈತರಣೀ ಮುಖ ಎಂಬ ಹೆಸರಿದೆ. ಹೆಸರೇ ಸೂಚಿಸುವಂತೆ ಇದು ವೈತರಣೀ ನದಿಗೆ ಸೇರಿದ್ದು. ಒರೈಯನ್‌ನ ಪಾದದ ಬಳಿಯಿಂದ ಹೊರಡುವ ಈ ನದಿ ವೈತರಣಿ (ಎರಿಡಾನಿಸ್) ಬಳುಕುತ್ತಾ ಸಾಗುತ್ತದೆ. ಅದರ ಅತ್ತಿತ್ತ ಇರುವ ಕ್ಷೀಣ ನಕ್ಷತ್ರ ಪುಂಜಗಳು ಶಶ (ಲೆಪಸ್), ತಿಮಿಂಗಿಲ (ಸೆಟಸ್), ಕಪೋತ (ಕೊಲಂಬಾ), ಅಗ್ನಿಕುಂಡ (ಫಾರ್ನೆಕ್ಸ್), ಚಿತ್ರಫಲಕ (ಪಿಕ್ಟರ್), ಚಕೋರ (ಫೀನಿಕ್ಸ್), ಹೋರಾಸೂಚಿ (ಹೋರಲೋಜಿಯಂ) ಇವನ್ನು ಗುರುತಿಸಲು ಪ್ರಯತ್ನಿಸಿ. ಗ್ರೀಕ್ ಮೂಲದ ಕಥೆಯಲ್ಲಿ ಫೇತಾನ್ ಅನ್ನು ಸೂರ್ಯನ ರಥದಿಂದ ತಳ್ಳಿಬಿಡಲಾಯಿತಂತೆ. ಅವನು ದಕ್ಷಿಣ ದಿಕ್ಕಿಗೆ ಬೀಳತೊಡಗಿದನಂತೆ. ಅವನ

## ಧೂಮಕೇತುವನ್ನು ಹುಡುಕಬಲ್ಲಿರಾ ?

*ಕಳೆದವರ್ಷ (೨೦೦೦) ಪತ್ತೆಯಾದ ಧೂಮಕೇತು C/2000 LINEAR WM, ಇದು ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶ ಪಡೆಯಬಹುದು ಎಂಬ ಆಸೆ ಮೂಡಿಸಿತು. ೧೯೯೭ರಿಂದ ಇಂತಹದೊಂದು ಅವಕಾಶಕ್ಕಾಗಿ ಖಗೋಳ ವಿಜ್ಞಾನಿಗಳು ಕಾಯುತ್ತಿದ್ದರು. ಅಕ್ಟೋಬರ್‌ನಿಂದೀಚೆಗೆ ಪ್ರಕಾಶದ ಹೆಚ್ಚಳ ಕಂಡುಬಂದಿತು. ಆದರೆ ಹೇಲ್ ಬಾಪ್‌ನಂತೆ ಇದು ಚಟುವಟಿಕೆಯಿಂದಿರಲಿಲ್ಲ. ಆದ್ದರಿಂದ ಬರಿಗಣ್ಣಿಗೆ ಕಾಣುವುದೇ ಇಲ್ಲವೇ ? ಎಂಬ ಸಂಶಯ ಹೆಚ್ಚಾಗತೊಡಗಿತು. ನವೆಂಬರ್ ಕೊನೆಯ ಹೊತ್ತಿಗೆ ದುರ್ಬೀನುಗಳಿಗೆ ಸಿಕ್ಕಿತು. ಹಾಗಾಗಿ ಹವ್ಯಾಸಿ ವೀಕ್ಷಕರಿಗೆ ಉತ್ಸಾಹ ಮೂಡಿತು. ಡಿಸೆಂಬರ್ ಮೊದಲವಾರದಲ್ಲಿ ಇದನ್ನು ಬರೆಯುತ್ತಿರುವಾಗ ದುರ್ಬೀನಿನಿಂದ (ಬೆಂಗಳೂರಿನ ವಿದ್ಯುದ್ದೀಪದ ಹಾವಳಿಯ ನಡುವೆಯೂ) ಕಂಡಿತು. ಅಂದ ಮೇಲೆ ಜನವರಿಯುದ್ದಕ್ಕೂ ಅದು ಬರಿಗಣ್ಣಿಗಾಗಲೀ, ದುರ್ಬೀನಿಗಾಗಲೀ ಕಾಣುವ ಸಾಧ್ಯತೆ ಇದೆ ಎಂದಾಯಿತು. ಕೆಳಗಿನ ನಕ್ಷೆ ಧೂಮಕೇತುವಿನ ಪಥವನ್ನು ಸೂಚಿಸುತ್ತದೆ. ಆ ದಿಕ್ಕಿನಲ್ಲಿ ಪ್ರಕಾಶಮಾನವಾಗಿರುವ ನಕ್ಷತ್ರವೆಂದರೆ ದಕ್ಷಿಣಮೀನ(ಫಾಮಲ್‌ಹೌಟ್). ಅದಕ್ಕೂ ದಕ್ಷಿಣಕ್ಕಿರುವ ಎರಡು ನಕ್ಷತ್ರಗಳು ಗ್ರುಸ್ (GRUS) ಅಂದರೆ ಬಕ ಎಂಬ ನಕ್ಷತ್ರ ಪುಂಜಕ್ಕೆ ಸೇರಿವೆ. ಧೂಮಕೇತು ಇವೆರಡರೊಡನೆ ಮೂರನೆಯ ನಕ್ಷತ್ರದಂತೆ ಕಾಣಬಹುದಷ್ಟೆ. ದಕ್ಷಿಣದ ಅಂಚಿನಲ್ಲಿರುವ ಪುಂಜ, ಪಾವೋ(ಮಯೂರ). ಜನವರಿ ೨೨ ರಂದು ಅದು ಪುರರವಿ (ತನ್ನ ಕಕ್ಷೆಯಲ್ಲಿ ಸೂರ್ಯನಿಗೆ ಅತಿ ಸಮೀಪದ ಬಿಂದು)ಯನ್ನು ಹಾಯುವುದು. ಆದ್ದರಿಂದ ಆ ಮುಂದಿನ ತಿಂಗಳೂ ಸಾಕಷ್ಟು ಪ್ರಕಾಶಮಾನವಾಗಿಯೇ ಇರುವುದಾದರೂ, ದಿಗಂತದಂಚಿಗೆ ಸರಿದಿರುವುದರಿಂದ ಗುರುತಿಸುವುದು ಕಷ್ಟವಾಗಬಹುದು.*



*ಶ್ರೀ ಆರ್. ವಿ. ಭಂಡಾರಿ ಅವರ ಪ್ರಶ್ನೆ: ಸೂರ್ಯ ತನಗೆ ಆಧಾರವಾಗಿ ಯಾವುದೋ ಸೂರ್ಯನ ಸುತ್ತ ತಿರುಗುತ್ತಿದೆ. ಅತ ಒಂದು ಸುತ್ತು ಬರಲು ೬೦ ವರ್ಷಗಳು ಬೇಕು. ಇವೇ ಸಂವತ್ಸರಗಳು... ಇದು ನಿಜವೇ?*

*ಉತ್ತರ: ಸಂವತ್ಸರಗಳ ಲೆಕ್ಕಕ್ಕೆ ಇನ್ನೊಂದು ಸೂರ್ಯನನ್ನು ಕಲ್ಪಿಸಿಕೊಳ್ಳಬೇಕಾಗಿಲ್ಲ. ಇದು ಸರಳ ಲೆಕ್ಕ. ಸೂರ್ಯನ ಸುತ್ತ ೨ ವರ್ಷಗಳಿಗೊಮ್ಮೆ ೩ ವರ್ಷಗಳಿಗೊಮ್ಮೆ ಸುತ್ತುವ ಗ್ರಹಗಳಿವೆ ಎಂದುಕೊಳ್ಳೋಣ. ಅವೆರಡೂ ಒಂದೇ ನೇರಕ್ಕೆ ಬರಲು ಎಷ್ಟು ಸಮಯ ಹಿಡಿಯುತ್ತದೆ? ಇದಕ್ಕೆ ಥಟ್ಟನೆ ಸಿಗುವ ಉತ್ತರ ೩ x ೨=೬. ಇದನ್ನೇ ವಿಸ್ತರಿಸಿ, ೨ ವರ್ಷ ಮತ್ತು ೪ ವರ್ಷಗಳ ಗ್ರಹಗಳಿಗೆ ಲೆಕ್ಕ ಹಾಕಿದಾಗ ೪ ವರ್ಷ ಎಂದುತ್ತರ ಬರುತ್ತದೆ. ಅಂದರೆ ಪರಿಭ್ರಮಣಾವಧಿಗಳ ಲ.ಸಾ.ಅ. ಎಂದು ಸುಲಭವಾಗಿ ಊಹಿಸಬಹುದು. ಅತಿನಿಧಾನವಾದ (೩೦೦ ವರ್ಷಗಳಿಗೂ ಮುಂಚೆ ತಿಳಿದಿದ್ದಂತೆ) ಗ್ರಹ ಶನಿ (ಅವಧಿ ೩೦ ವರ್ಷಗಳು). ಅದಕ್ಕಿಂತ ವೇಗವಾದದ್ದು ಗುರು (೧೨ ವರ್ಷಗಳು). ಇವುಗಳ ಲ.ಸಾ.ಅ. ಎಷ್ಟು ?. ೬೦ ಅಲ್ಲವೆ ? ಇದರರ್ಥ ಸುಲಭ. ೬೦ ವರ್ಷಗಳಲ್ಲಿ ಗುರು ಮತ್ತು ಶನಿಗಳ ಯುತಿಯ (Conjunction) ಸ್ಥಾನದ ಪುನರಾವರ್ತನೆ ಆಗುವುದಿಲ್ಲ. ಆದ್ದರಿಂದ ಸಂವತ್ಸರದ ಹೆಸರನ್ನು ದಾಖಲು ಮಾಡಿದ್ದೇ ಆದರೆ ಗ್ರಹಗಳ ಸ್ಥಾನ ವಿವರಗಳಿಂದ ೬೦ ವರ್ಷದಷ್ಟು ನಿಖರತೆ ಸಾಧಿಸಬಹುದು. ಇದು ಇತಿಹಾಸ ಸಂಶೋಧಕರಿಗೆ ಅತಿ ಮುಖ್ಯ ಸುಳಿವು ಕೊಡುತ್ತದೆ.* ■




ಸಹೋದರಿಯರು ಸುರಿಸಿದ ಕಣ್ಣೀರು ನದಿಯಾಗಿ ಹರಿಯಿತಂತೆ. ಅವನನ್ನು ತಂಪುಗೊಳಿಸಿತಂತೆ. ಚಿತ್ರದಲ್ಲಿ ಫೇತಾನ್ ಅನ್ನು ನದಿಯ ಮಧ್ಯದಲ್ಲಿ ಗುರುತಿಸಲಾಗಿದೆ. ವೈತರಣೀ ಮುಖ ಎಂಬ ನಕ್ಷತ್ರ ಇನ್ನೂ ದಕ್ಷಿಣದಲ್ಲಿದೆ. ತಾತ್ಪರ್ಯ ಸರಳ: ಯೂರೋಪಿಯನ್ನರು ತಮಗೆ ಕಾಣುತ್ತಿದ್ದ ನಕ್ಷತ್ರವೇ ನದಿಯ ಕೊನೆ ಎಂದು ಭಾವಿಸಿದ್ದರು. ಆದರೆ ಸಮುದ್ರಯಾನ ನಡೆಸಿದಾಗ ಇನ್ನೂ ದಕ್ಷಿಣಕ್ಕೆ ಇನ್ನೊಂದು ಪ್ರಕಾಶಮಾನ ನಕ್ಷತ್ರ ಕಂಡಿತು. ಅದು ನದಿಯ ಕೊನೆ ಆಚೆರ್ನಾರ್ ಆಯಿತು.

ಈ ತಿಂಗಳ ಸಂಜೆಯಲ್ಲೇ ಮೂರು ಗ್ರಹಗಳನ್ನು ನೋಡುವ ಅವಕಾಶವಿದೆ. ಕುಂಭರಾಶಿಯಲ್ಲಿ ಮಂಗಳ, ವೃಷಭದಲ್ಲಿ ಶನಿ ಮತ್ತು ಮಿಥುನದಲ್ಲಿ ಗುರು. ಬುಧ ಸಂಜೆ ಪಶ್ಚಿಮದ ಅಂಚಿನಲ್ಲಿ ಸ್ವಲ್ಪ ಹೊತ್ತು ಮಾತ್ರ ಕಾಣುವುದು. ಶುಕ್ರ ತಿಂಗಳ ಕೊನೆಗೆ ಪಶ್ಚಿಮದ ಅಂಚಿನಲ್ಲಿ ಸಂಜೆ ಕಾಣುವುದು. ಆದರೆ ಅವೆರಡೂ ಕಾಣುವುದು ದುಸ್ತರವೇ.

ಭೂಮಿಯ ಕಕ್ಷೆ ದೀರ್ಘವೃತ್ತ. ಅನೇಕರು ಈ ಕಾರಣದಿಂದ ಅಂದರೆ ಭೂಮಿ-ಸೂರ್ಯರ ನಡುವಿನ ದೂರ ವ್ಯತ್ಯಾಸವಾಗುವುದರಿಂದ ಋತುಗಳು ಉಂಟಾಗುತ್ತವೆ ಎಂದು ನಂಬಿದ್ದಾರೆ. ಈ ತಿಂಗಳಲ್ಲಿ ಅದು ತಪ್ಪು ಎಂದು ತೋರಿಸುವ ಅವಕಾಶವಿದೆ. ನಮಗೀಗ ಚಳಿಗಾಲ; ಆದರೆ ಭೂಮಿ-ಸೂರ್ಯರ ದೂರ ಕನಿಷ್ಠವಾಗುವುದು ಜನವರಿ ೨ ರಂದು – (ಅಪರಾಹ್ನ ೩.೩೦ ಗಂಟೆಗೆ). ದೂರ ೧೪೭.೫ ಮಿಲಿಯನ್ ಕಿ. ಮೀ.ಗಳು (ಸರಾಸರಿ ದೂರ ೧೫೦ ಮಿಲಿಯನ್ ಕಿ. ಮೀ.ಗಳು).

ನಮ್ಮ ಆಕಾಶ ಮಾರ್ಗದರ್ಶಿ ಚಂದ್ರ ಸಹ ದೀರ್ಘವೃತ್ತದ ಕಕ್ಷೆಯಲ್ಲಿ ಸುತ್ತುತ್ತದೆ. ಅದರ ದೂರ ಕನಿಷ್ಠ ೩೬೫,೪೧೨ ಕಿ. ಮೀ. ೨ ರಂದು; ಗರಿಷ್ಠ ೧೮ ರಂದು – ದೂರ ೪೦೫,೫೦೩ ಕಿ. ಮೀ. ತಿಂಗಳ ಮೊದಲ ವಾರ ಬೆಳಗಿನ ಜಾವ ಕಾಣುವ ಚಂದ್ರ ೧೩ರ ಅಮಾವಾಸ್ಯೆಯ ನಂತರ ಸಂಜೆಯ ಆಕಾಶದಲ್ಲಿ ಕಾಣುತ್ತದೆ. ೧೮ ರಂದು ಮೀನರಾಶಿಯಲ್ಲಿರುವ ಮಂಗಳ ಗ್ರಹದ ಸಮೀಪ ಕಾಣುವುದು. ೨೪ರಂದು ಶನಿಗ್ರಹವನ್ನು ಮರೆಮಾಡುವ ಗ್ರಹಣ (ಆಚ್ಛಾದನೆ) ನಡೆಯಲಿದೆ. ಸೂರ್ಯಾಸ್ತವಾದೊಡನೆ ಶನಿ-ಚಂದ್ರರನ್ನು ಗಮನಿಸಿ, ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಶನಿ ಚಂದ್ರನ ಹಿಂದೆ ಮರೆಯಾಗುವುದನ್ನು ಕಾಣಬಹುದು. ೯.೪೪ಕ್ಕೆ ಹೊರಗೆ ಬರುವುದನ್ನು ಕಾಣಬಹುದು. ಇದು ಛಾಯಾಗ್ರಾಹಕರಿಗೆ ಒಳ್ಳೆಯ ಅವಕಾಶ. ೨೬ರಂದು ಗುರು ಗ್ರಹವನ್ನು ಮರೆಮಾಡುವ ಆಚ್ಛಾದನೆ ನಡೆಯಲಿದೆ. ಇದು ನಮಗೆ ಕಾಣುವುದಿಲ್ಲ. ಗುರು ಮತ್ತು ಚಂದ್ರ ಪಕ್ಕಪಕ್ಕದಲ್ಲಿದ್ದಂತೆ ಕಾಣುತ್ತದೆ. ೨೮ರ ಬೆಳಗಿನಲ್ಲಿ ಹುಣ್ಣಿಮೆಯಾಗುವುದು. ಅಂದು ಚಂದ್ರನ ಸ್ಥಾನವನ್ನು ಗುರುತಿಸಿಕೊಳ್ಳಿ. ಕ್ಷೀಣವಾದ ಪುಷ್ಯ ನಕ್ಷತ್ರವನ್ನು ಚಂದ್ರನ ಬೆಳಕಿನಲ್ಲಿ ಗುರುತಿಸುವುದಂತೂ ಸಾಧ್ಯವಿಲ್ಲ. ಮರುದಿನ ಅದೇ ಹೊತ್ತಿಗೆ (ಸಂಜೆ ೭ ಗಂಟೆಗೆ) ಅದೇ ದಿಕ್ಕನ್ನು (ಪೂರ್ವದ ಅಂಚನ್ನು) ಗಮನಿಸಿ. ದುರ್ಬೀನಿನಿಂದ ಹುಡುಕಿದಿರಾದರೆ ಪುಷ್ಯದ ಪಕ್ಕ ಒಂದು ಸುಂದರ ನಕ್ಷತ್ರಗುಚ್ಛವೂ ಕಾಣುವುದು. ಇದೇ ಪ್ರೆಸಿಪಿ. ನಗರದ ಬೆಳಕಿನಿಂದ ದೂರವಿದ್ದರೆ ಬರಿಗಣ್ಣಿಗೂ ಕಾಣುವುದು.


ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧.


ತತ್ವಜ್ಞಾನಕ್ಕೆ ಸಂಬಂಧಿಸಿದ ನಮ್ಮ ದಾರ್ಶನಿಕರ ನಿಜವಾದ ಚಟುವಟಿಕೆಗಳು ಪೂರ್ವನಿರ್ಧರಿತವಾದ ಕೆಲವು ಆಲೋಚನೆಗಳ ಚೌಕಟ್ಟಿನೊಳಗಿನ ಚಟುವಟಿಕೆಗಳಾಗಿಯೇ ಉಳಿದಿದ್ದವು. ಅವರ ನಂತರದ ದಾರ್ಶನಿಕರು ಉದ್ದೇಶಪೂರ್ವಕವಾಗಿಯೇ ಆ ಚೌಕಟ್ಟನ್ನು ತಿರಸ್ಕರಿಸದೆ ಉಳಿಸಿಕೊಂಡರು. ನಮ್ಮಲ್ಲಿ ವಿಶೇಷ ಜ್ಞಾನವಂತರಾದ ತತ್ವವೇತ್ತರು ಇರಲಿಲ್ಲ ಎಂದಲ್ಲ, ಅಥವಾ ನಿಜವಾದ ಹೊಸ ವಿಚಾರಗಳು ಇದ್ದಿರಲೇ ಇಲ್ಲವೆಂದೂ ಅಲ್ಲ. ಆದರೆ ಯಾರೊಬ್ಬರೂ ಕೂಡ ತಮ್ಮ ಮಟ್ಟಿಗೆ ಬುದ್ಧಿಪೂರ್ವಕವಾಗಿಯೇ ವ್ಯಕ್ತಿಗತ ವೈಶಿಷ್ಟ್ಯವನ್ನೇನೂ ಅಪೇಕ್ಷಿಸುತ್ತಿರಲಿಲ್ಲ.

***- ಡಾ|| ದೇವಿಪ್ರಸಾದ್ ಚಟ್ಟೋಪಾಧ್ಯಾಯ***

## (೧)

**ಉ**ರ್ದುವಿನಲ್ಲಿರುವ ಎಲ್ಲ ಕಾವ್ಯ ಪ್ರಕಾರಗಳು ಫಾರ್‌ಸಿ ಕಾವ್ಯದಿಂದ ಬಂದಿವೆ. ಆದರೆ ರೇಖ್ತಿ ಮಾತ್ರ ಫಾರ್‌ಸಿಯಿಂದ ಬಂದುದಲ್ಲ; ಅದು ನಿರ್ದಿಷ್ಟವಾಗಿ ಉರ್ದು ಕಾವ್ಯ ಶೈಲಿ.

ಉರ್ದು ಭಾಷೆಗೆ 'ರೇಖ್ತ' ಎಂಬ ಹೆಸರೂ ಇದೆ. ಫಾರ್‌ಸಿಯಲ್ಲಿ ಗಜಲ್ ಬರೆಯುವುದನ್ನು ಬಿಟ್ಟು ಉರ್ದುವಿನಲ್ಲಿ ಗಜಲ್ ಬರೆದರೆ ಅದಕ್ಕೆ 'ರೇಖ್ತ' ಎನ್ನುತ್ತಿದ್ದರು. ರೇಖ್ತದಲ್ಲಿ ಅನೇಕರು ಗಜಲ್ ಬರೆದಿದ್ದಾರೆ. ಮೊಗಲ್ ದರ್‌ಬಾರದಲ್ಲಿ ಇದಕ್ಕೆ ಹೆಚ್ಚು ಪ್ರೋತ್ಸಾಹ ಸಿಕ್ಕಿತೆಂದು ತಿಳಿದುಬರುತ್ತದೆ.

'ರೇಖ್ತಿ' 'ರೇಖ್ತ'ದ ಸ್ತ್ರೀಲಿಂಗ.

ರೇಖ್ತಿ ಅಪ್ಪಟ ಉರ್ದು ಕಾವ್ಯ ಪ್ರಕಾರ. ಹೆಂಗಸರ ಭಾಷೆ, ಅವರ ವಿಶಿಷ್ಟ ದಿನನಿತ್ಯ ಬಳಕೆಯ ಶಬ್ದಗಳು, ಅವರ ಉಚ್ಚಾರಣೆ, ಅವರ ಸಂಭಾಷಣೆ ಮತ್ತು ಅವರ ಪರವಾದ ಸಂಬೋಧನೆ – ಮುಂತಾದುವುಗಳ ಬಳಕೆಯಿಂದ ಬರೆದ ಗಜಲ್‌ಗಳಿಗೆ ಪಾರಿಭಾಷಿಕವಾಗಿ 'ರೇಖ್ತಿ' ಎಂಬ ಹೆಸರು ಬಂದಿದೆ. ಹೆಂಗಸರ ಪರವಾಗಿಯೇ – ಹೆಂಗಸರ ಭಾಷೆಯಲ್ಲಿರುವುದರಿಂದ – ಈ ಕಾವ್ಯ ಹೆಂಗಸರದೇ ಪ್ರೇಮ, ಮೋಹ, ವ್ಯಾಮೋಹದ ಹೇಳಿಕೆಯೆಂದು ತಿಳಿಯಬಾರದು: ಅಂದರೆ ಹೆಂಗಸರೇ ಇದರ ರಚನೆಕಾರರೆಂದು ಅರ್ಥೈಸಬಾರದು; ಹೆಂಗಸರ ಪರವಾಗಿ ಗಂಡಸರು ಬರೆದ ಕಾವ್ಯವಿದು.

ಗಜಲ್‌ನಲ್ಲಿ ಪವಿತ್ರಪ್ರೇಮ ಸಾಂಕೇತಿಕವಾಗಿ ಪ್ರಕಟವಾಗುತ್ತದೆ. ಸುಂದರ ಭಾಷೆಯ, ಮನಸೆಳೆವ ಶೈಲಿಯ ಗಜಲ್ ಅಂತರಂಗಿಕವಾದುದು. ಪ್ರಾಪಂಚಿಕ ಮತ್ತು ಆಧ್ಯಾತ್ಮಿಕ ಎರಡೂ ಬಗೆಯ ಪ್ರೇಮ ಗಜಲ್ ಒಳಗೊಂಡಿದೆ; ದೈವಿಕತೆಯ ಕಡೆಗೆ ಮನಸ್ಸನ್ನು ಒಯ್ಯುತ್ತದೆ; ಆತ್ಮಿಕ ಆನಂದ ಇದರಿಂದ ಉಂಟಾಗುತ್ತದೆ. ಗಜಲಿನ ಭಾವ ಸೌಂದರ್ಯ, ಪ್ರೇಮ ಮನುಷ್ಯನ ಬದುಕನ್ನು ಹಸನುಗೊಳಿಸುತ್ತದೆ; ಸಂಸ್ಕೃತಿಗೆ ಉಜ್ವಲತೆಯನ್ನು ನೀಡುತ್ತದೆ. ಇದರ ತದ್ವಿರುದ್ಧವಾದುದೇ ರೇಖ್ತಿ.

ರೇಖ್ತಿ ಎಂಬ ಶಬ್ದಕ್ಕೆ ಪತನವಾದುದು ಎಂಬ ಅರ್ಥವೂ ಇದೆ. ಈ ದೃಷ್ಟಿಯಿಂದ ರೇಖ್ತಿ ಪತನದ ಕಾವ್ಯ. ೧೮ ಮತ್ತು ೧೯ನೆಯ ಶತಮಾನಗಳಲ್ಲಿ ರೇಖ್ತಿ ಕಾವ್ಯ ಬರೆಯುವವರ ಸಂಖ್ಯೆ ಹೆಚ್ಚಾಯಿತು.

ಗಜಲಿನ ಛಂದದಲ್ಲಿಯೇ ಇದ್ದರೂ ರೇಖ್ತಿ ಗಜಲಿನ ಅರ್ಥವ್ಯಾಪ್ತಿಯಿಂದ ಬಹಳ ದೂರ. ವಿಷಯ ಲಂಪಟತೆ, ಕಾಮವಿಕಾರ, ಕೀಳ್ತನ, ಅಶ್ಲೀಲ ಮಾತುಗಳು – ಒಟ್ಟಾರೆ ಇದರಿಂದ ಸಾಹಿತ್ಯ ಸಂಸ್ಕೃತಿಗಳು ಕೆಳಮಟ್ಟಕ್ಕಿಳಿದು ಸಮಾಜ ಮೋಹ, ವ್ಯಾಮೋಹ, ಅಶ್ಲೀಲ ವರ್ತನೆ, ಸುಳ್ಳು, ಕಪಟ ಪ್ರೇಮ, ವಂಚನೆಗಳಿಂದ ಅಧೋಗತಿಯತ್ತ ಸಾಗಿತು. ಒಮ್ಮೊಮ್ಮೆ ಈ ಕಾವ್ಯ ತೀರ ಕೆಳಮಟ್ಟಕ್ಕಿಳಿದು ಅಸಹ್ಯ ಹುಟ್ಟಿಸುತ್ತಿತ್ತು.

ರೇಖ್ತಿಯಲ್ಲಿ ಸ್ತ್ರೀಯರ ಭಾಷೆ ಮತ್ತು ವಿಲಾಸಪ್ರಿಯ ಸಂಬಂಧದ ವಿಷಯ ಬಿಟ್ಟು ಮತ್ತೇನೂ ಇರುತ್ತಿರಲಿಲ್ಲ. ಭಾವಗಳ ದೃಷ್ಟಿಯಿಂದ ಈ ಕಾಲ ಬಹು ಹೀನ ದೆಸೆಯದು. ಆದರೆ ವಿವಿಧ ಛಂದಸ್ಸುಗಳ ರಚನೆಯೂ ಭಾಷಾ ಸೌಂದರ್ಯವೂ ಮೋಹಕವಾಗಿತ್ತು. ಸಾರಾಂಶವೇನೆಂದರೆ, ಈ ಸಮಯದಲ್ಲಿ ಕವಿತ್ವವು ತನ್ನ




■

**ಶಾಂತರಸ**

ಮೂಲಗುಣಗಳನ್ನು ಬಿಟ್ಟು ಧನ ಸಂಗ್ರಹ ಮತ್ತು ಜೀವನೋಪಾಯಾರ್ಜನೆಗೊಳಗಾಗಿತ್ತು. ಕೆಲವರು ಹೀನಾಯವಾದ ಕವಿತೆಗಳನ್ನು ಬರೆದು ನಿರ್ವಾಹ ಮಾಡಿಕೊಳ್ಳುತ್ತಿದ್ದರು. ಆದರಿಂದ ದ್ವೇಷಗಳು ವೃದ್ಧಿಗೊಂಡು ಕವಿಕವಿಗಳಲ್ಲಿ ಹೊಡೆದಾಟಕ್ಕೆ ಪ್ರಾರಂಭವಾಯಿತು.'' ರಾಘವೇಂದ್ರರಾವ್ (ಜಜ್): ಉರ್ದು ಮತ್ತು ಫಾರ್‌ಸಿ ಸಾಹಿತ್ಯ, ಪುಟ ೧೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ೧೯೬೪.

ದಿಲ್ಲಿಗಿಂತ ಲಖ್ನೋದಲ್ಲಿ ಹೆಚ್ಚು ರೇಖ್ತಿ ಕವಿಗಳಿದ್ದರು. ಬಹಿರಂಗದ ಚೆಲುವು ಮತ್ತು ಅದರ ಪ್ರದರ್ಶನ ಲಖ್ನೋದ ಗಜಲಿನಲ್ಲಿ ಇರಲಿಲ್ಲವೆಂದಿಲ್ಲ. ಹೆಣ್ಣಿನ ಕಣ್ಣು, ಮೂಗು, ಮುಖ, ಕೆನ್ನೆ, ಜಡೆ, ಉಡುಗೆ, ತೊಡಿಗೆ, ಒಪ್ಪಓರಣದ ವಸ್ತುಗಳು, ಚಕ್ಕಂದ, ಪ್ರಣಯಲೀಲೆಗೆ ಆಸ್ಪದವಿರಲಿಲ್ಲ. ಆದರೆ ರೇಖ್ತಿಯಲ್ಲಿ ಇವೇ ಅವಳ ಸೌಂದರ್ಯ ಮತ್ತು ಇವುಗಳ ವರ್ಣನೆ ಆವಶ್ಯಕವೆನಿಸಿದುವು.

ಇದು ಭೋಗ ವಿಲಾಸದ ಕಾಲವಾಗಿತ್ತು. ಸಾಹಿತ್ಯ ಶ್ರೀಮಂತರು, ಅರಸರು, ಸರದಾರರ ಅಧೀನಕ್ಕೊಳಗಾಗಿತ್ತು. ಸುಲ್ತಾನರು ತಮ್ಮ ಓಲಗಕ್ಕೆ ಕವಿಗಳನ್ನು ನೇಮಕ ಮಾಡಿಕೊಳ್ಳುತ್ತಿದ್ದರು. ಸುಲ್ತಾನರನ್ನು ಮೆಚ್ಚಿಸಲು ಕವಿಗಳು ಅವರಿಗಿಷ್ಟವಾಗುವಂತೆ ಕಾವ್ಯ ರಚನೆ ಮಾಡುತ್ತಿದ್ದರು. ಸುಲ್ತಾನರನ್ನು ಎದುರು ಹಾಕಿಕೊಂಡರೆ ಅವರಿಂದ ದೊರಕುವ ಎಲ್ಲ ಸೌಲಭ್ಯಗಳು ನಿಂತು ಹೋಗುತ್ತಿದ್ದವು. ಕವಿಗಳ ಜೀವನ ನಿರ್ವಹಣೆ ಸುಲ್ತಾನರು ಮತ್ತು ಸರದಾರರಿಂದಲೇ ನಡೆಯುತ್ತಿತ್ತು. ಆ ಕಾಲದ ಬಹುಮಹತ್ವದ ಹೆಸರಾಂತ ಕವಿ 'ಇನ್ಶಾ' ಆಶ್ರಯದಾತ ಅರಸನನ್ನು ಎದುರು ಹಾಕಿಕೊಂಡು ಬಡತನದಲ್ಲಿ ಬೆಂದನು.

ಸುಲ್ತಾನರ ಓಲಗದಲ್ಲಿ, ಶ್ರೀಮಂತರ ಕೋಠಿಗಳಲ್ಲಿ ಅಲ್ಲದೆ ಸಾರ್ವಜನಿಕವಾಗಿ ಕವಿ ಸಮ್ಮೇಳನಗಳು ನಡೆಯುತ್ತಿದ್ದವು. ಅನೇಕವೇಳೆ ಕವಿಗಳು ಈ ಸಮ್ಮೇಳನಗಳಲ್ಲಿ ನಾ ಹೆಚ್ಚು ತಾ ಹೆಚ್ಚು ಎಂದು ಜಗಳ ಕಾಯುತ್ತಿದ್ದರು.

ರೇಖ್ತಿಯಿಂದ ಬಹುದೊಡ್ಡ ಲಾಭವಾದುದನ್ನು ಮರೆಯುವಂತಿಲ್ಲ. ಮುಸಲ್ಮಾನ ಹೆಣ್ಣುಮಕ್ಕಳ, ಬೇಗಮರ ನಿತ್ಯ ಜೀವನದ ಆಡುಭಾಷೆ, ನುಡಿಗಟ್ಟುಗಳು, ಜಾಣ್ನುಡಿಗಳು ರೇಖ್ತಿಯಿಂದ ಸಂಗ್ರಹಗೊಂಡವು. ಸಾಮಾನ್ಯ ಜನರ ಅಭಿರುಚಿಯ ಶಬ್ದಗಳು, ಮಾತುಗಳು ಕೂಡ ಸಂಗ್ರಹವಾದವು. ಇದರಿಂದ ಕಾವ್ಯದ ಶಬ್ದ ಸಂಗ್ರಹ ವಿಪುಲವಾಯಿತೆಂದು ಹೇಳಬಹುದು. ರೇಖ್ತಿಯಿಲ್ಲದಿದ್ದರೆ ಈ ವಿಶಿಷ್ಟ ಭಾಷೆ, ಶಬ್ದಗಳು ಕಾಲಗರ್ಭದಲ್ಲಿ ಅಡಗಿಹೋಗುತ್ತಿದ್ದವು. ಭಾಷಾ ಶಾಸ್ತ್ರದ ಅಧ್ಯಯನಕ್ಕೆ ಇದು ಉತ್ತಮ ಸಾಧನವಾಯಿತು.

ಈ ಕವಿಗಳು ಕೇವಲ ಹೆಂಗಸರ ಭಾಷೆಯೊಂದನ್ನೇ ಬಳಸಲಿಲ್ಲ. ಅವರ ಆಸೆ, ಅನಿಸಿಕೆ, ಭಾವನೆ, ಒಳತುಡಿತ ಮುಂತಾದವುಗಳನ್ನು ಕಾವ್ಯದಲ್ಲಿ ಹಿಡಿದಿಟ್ಟರು. ಈ ನಿಟ್ಟಿನಲ್ಲಿ 'ರಂಗೀನ್', 'ಇನ್ಶಾ', 'ಜಾನ್‌ಸಾಹೇಬ್' ಪ್ರಮುಖ ಕವಿಗಳು.

ಇನ್ನೊಂದು ಮಾತು ಮಹತ್ವದ್ದೇ ಅನಿಸುತ್ತದೆ. ಅದುವರೆಗೆ ಕೇವಲ ಉಚ್ಚವರ್ಗದ ಜನರಿಗಷ್ಟೇ ಉರ್ದು ಸಾಹಿತ್ಯ ಮೀಸಲಾಗಿತ್ತು. ರೇಖ್ತಿಯಿಂದ ಕೆಳವರ್ಗದ ಜನರಿಗೂ ಪ್ರಾತಿನಿಧ್ಯ ದೊರಕಿದಂತಾಯಿತು. ತೋಟಗಾರ್ತಿಯರ, ಕೊರವಂಜಿಗಳ(ಡೋಮ್ನಿ) ಮತ್ತು ಭಂಗಿಗಳ ಭಾವನೆಗಳೂ ರೇಖ್ತಿಯಲ್ಲಿ ಚಿತ್ರಿತವಾಗಿವೆ. ಜನರಿಗೆ ಅಸಹ್ಯ ಹುಟ್ಟಿಸಿದ್ದು ನಿಜ; ವಿಶಿಷ್ಟವಾದ ಭಾಷಾ ಸಂಪತ್ತು ಮತ್ತು ಭಾವನಾಸಂಪತ್ತು ಈ ಕವಿಗಳಿಂದ ಉಳಿದದ್ದೂ ನಿಜ.



(೨)

೧೯ನೆಯ ಶತಮಾನದ ಸಮಕಾಲೀನ ಕವಿಗಳಾದ ಸಾದತ್ ಯಾರ್‌ಖಾನ್ 'ರಂಗೀನ್' ಮತ್ತು ಸೈಯದ್ ಇನ್ಷಾ ಅಲ್ಲಾಹ ಖಾನ್ 'ಇನ್ಷಾ' (ನಿಧನ ೧೮೧೭) ಇವರು ರೇಖ್ತಿಯ ಪ್ರವರ್ತಕರೆಂದು ನಂಬಲಾಗಿತ್ತು. ಆದರೆ ರೇಖ್ತಿಯ ನಿಜವಾದ ಚಿತ್ರ ಮೊದಲಬಾರಿಗೆ ಸೈಯದ್ ಮೀರಾಂ ಮಿಯಾಂಖಾನ್ 'ಹಾಷ್ಮಿ' ಬಿಜಾಪೂರಿಯ ಕಾವ್ಯದಲ್ಲಿ ಕಂಡುಬರುತ್ತದೆ. ಈತ ಅಲಿ ಆದಿಲ್ ಷಾಹ ಸಾನಿ (ಎರಡನೆಯ - ೧೬೭೨)ಯ ಕಾಲದ ಶ್ರೇಷ್ಠ ಕವಿಯಾಗಿದ್ದ. ಹಾಷ್ಮಿ ಇವನ ಕಾವ್ಯನಾಮ. ಹಾಷ್ಮಿ ಎಂದೇ ಪ್ರಸಿದ್ಧನಾಗಿದ್ದಾನೆ. ''ಹೆಣ್ಣಿನ ಭಾವನೆಗಳನ್ನು ಹೆಣ್ಣಿನ ಭಾಷೆಯಲ್ಲಿ ಹೆಣ್ಣಿನಿಂದ ಹಾಷ್ಮಿಯ ಗಜಲ್‌ಗಳಲ್ಲಿ ವರ್ಣಿಸಲಾಗಿದೆ. ಹಾಷ್ಮಿಯ ಗಜಲ್‌ಗಳು ರೇಖ್ತಿಯ (ಮೂಲವಾಗಿ) ಮುಂದೆ ಮುಂದೆ ಸಾಗಿವೆ.''(ಡಾ॥ ಜಮೀಲ್ ಜಾಲಿಬಿ: ತಾರೀಕೆ ಅದಬೆ ಉರ್ದು, ಜಿಲ್ದ್ ಅವ್ವಲ್, ಪುಟ ೧೯೫, ಎಜ್ಯುಕೇಷನಲ್ ಪಬ್ಲಿಷಿಂಗ್ ಹೌಸ್, ದೆಹಲಿ. ಐದನೆಯ ಮುದ್ರಣ ೧೯೯೩). ಇದರಿಂದ ರೇಖ್ತಿಯ ಮೂಲಪುರುಷ 'ಹಾಷ್ಮಿ'ಎಂದು ಸಿದ್ಧವಾಗುತ್ತದೆ. ಜಾಲಿಬಿಯವರ ಸಂಶೋಧನೆಯನ್ನು ಎಲ್ಲರೂ ಒಪ್ಪಿಕೊಂಡಿದ್ದಾರೆ.

ಹಾಷ್ಮಿ ಹುಟ್ಟುಗುರುಡನಾಗಿದ್ದನೆಂದು ಅನೇಕರು ಹೇಳುತ್ತಾರೆ. ಆದರೆ ಅದು ಸರಿಯಲ್ಲ. ಆತ ಬಣ್ಣಗಳ ವರ್ಣನೆಯನ್ನು ತನ್ನ ಗಜಲ್‌ಗಳಲ್ಲಿ ಮಾಡಿದ್ದಾನೆ. ಹುಟ್ಟುಗುರುಡನಿಗೆ ಬಣ್ಣಗಳ ಕಲ್ಪನೆ ಇರುವುದಿಲ್ಲ. ಹಾಷ್ಮಿ ಆ ಬಳಿಕ ಕುರುಡನಾಗಿರಬಹುದು. ಬಣ್ಣ ಬಣ್ಣದ ಜಗತ್ತನ್ನು ಕಂಡು ಜೀವನದ ವಿವಿಧ ಅನುಭವಗಳನ್ನು ಹೊಂದಿದ ಬಳಿಕ ಅವನಿಗೆ ಅಂಧತ್ವ ಬಂದಿರಬೇಕು. ಇದೇ ವಿಚಾರವನ್ನು ಜಾಲಿಬಿಯವರು ಮಂಡಿಸುತ್ತಾರೆ.

ಹಾಷ್ಮಿ ಹಿಂದಿಯಲ್ಲಿಯೂ ಕಾವ್ಯ ರಚಿಸುತ್ತಿದ್ದ. ಇಲ್ಲಿ ಒಂದು ಮಾತು ಮಹತ್ವದ್ದಿದೆ: ''ದಕ್ಷಿಣದ ಕಾವ್ಯದಲ್ಲಿ ಪ್ರಾದೇಶಿಕ ಮತ್ತು ಸ್ಥಾನಿಕ ಪ್ರಭಾವ ಹೆಚ್ಚಾಗಿದೆ. ರೇಖ್ತಿ ಖಂಡಿತವಾಗಿ ಹಿಂದಿಯ ಅನುಕರಣೆಯಿಂದ ಹುಟ್ಟಿಕೊಂಡಿದೆ. ಹಿಂದಿ ಕಾವ್ಯದಲ್ಲಿ (ದಕ್ಷಿಣ ಕಾವ್ಯದಲ್ಲಿ) ಗಂಡು ಹೆಣ್ಣಿನ ಸಂಬೋಧಕನಾಗಿರುವ ವಿಶಿಷ್ಟ ಪರಂಪರೆ ಉರ್ದುವಿಗೆ ಬಂದಿದೆ ಎಂದು ಊಹಿಸಬಹುದು'' (''ನಿಗಾರೆ ಪಾಕಿಸ್ತಾನ'' ಎಂಬ ೧೯೬೭ರ ವಾರ್ಷಿಕ ವಿಶೇಷಾಂಕದಲ್ಲಿ ಕಾಸರ್ ಚಾಂದ್‌ಪೂರಿಯವರ 'ರೇಖ್ತಿ ಅವ್ರ್ ಇಸ್ಕೆ ಫನ್‌ಕಾರ್' ಎಂಬ ಲೇಖನ . ಪುಟ ೨೭೮).

ಹಾಷ್ಮಿ ಅಲಿ ಆದಿಲ್‌ಷಾಹ ಸಾನಿಯ ಆಸ್ಥಾನ ಕವಿಯಾಗಿದ್ದ. ರೇಖ್ತಿಯಲ್ಲದೆ ಇನ್ನೂ ಬೇರೆ ಪ್ರಕಾರದ ಕಾವ್ಯಗಳನ್ನೂ ರಚಿಸಿದ್ದಾನೆ. ಅವನ ಗಜಲ್‌ಗಳಲ್ಲಿ ಬಹುಭಾಗ ರೇಖ್ತಿ ಗಜಲ್‌ಗಳಾಗಿವೆ. ಈ ಕವಿ ಕ್ರಿ.ಶ. ೧೬೮೮ರಲ್ಲಿ ನಿಧನ ಹೊಂದಿದ.

ಹಾಷ್ಮಿಯ ತರುವಾಯ ಕವಿ ವಲಿಯ ಸಮಕಾಲೀನರಾದ ಇಬ್ಬರು ರೇಖ್ತಿ ಕವಿಗಳು ಪ್ರಸಿದ್ಧರಾಗಿದ್ದಾರೆ: 'ರಹೀಮ್' ಮತ್ತು ಸೈಯದ್ ಮುಹಮ್ಮದ್ ಖಾದಿರ್: ಇವರ ಕಾಲ ಕ್ರಿ. ಶ. ೧೭೦೦. ಖಾದಿರನ ಕಾವ್ಯನಾಮ 'ಖಾಕಿ' ಯಾಗಿದೆ. ಹಾಷ್ಮಿ ಮತ್ತು ವಲಿಯ ಸಮಕಾಲೀನ ಕವಿಗಳಲ್ಲಿ ಹೆಂಗಸರ ವಿಶಿಷ್ಟ ಭಾವನೆ ಮತ್ತು ನುಡಿಗಟ್ಟುಗಳ ಕೊರತೆಯಿಂದ ಅವರ ಕಾವ್ಯ ತುಸು ನೀರಸವೆನಿಸುತ್ತದೆ. ಆ ಕಾಲದಲ್ಲಿ ಇನ್ನೂ ಭಾಷೆ ಬೆಳೆದಿರಲಿಲ್ಲ; ಇದುವೆ ಅವರ ಕಾವ್ಯ ಅಷ್ಟು ಗಟ್ಟಿಯಾಗಿ ಬರದಿರಲಿಕ್ಕೆ ಕಾರಣ. ದಕ್ಷಿಣದಲ್ಲಿ - ಹೈದರಾಬಾದಿನಲ್ಲಿ ಅನೇಕ ರೇಖ್ತಿ ಕವಿಗಳಿದ್ದರು. 'ಖೈಸ್' ಹೈದರಾಬಾದಿನ ಜನಪ್ರಿಯ ಹೆಸರಾಂತ ಕವಿ.

(೩)

ದಿಲ್ಲಿಯಲ್ಲಿ ಆಲಿ ಗೌಹರ್‌ಷಾಹ್ ಆಲಮ್‌ಗೀರ್ ಸಾನಿ (ಕ್ರಿ. ಶ. ೧೭೫೯)ಯ ಕಾಲದಲ್ಲಿ ದಿಲ್ಲಿ ಮತ್ತು ಲಖ್ನೋದಲ್ಲಿ ರೇಖ್ತಿ ತುಂಬ ಜನಪ್ರಿಯತೆ ಗಳಿಸಿತು. ನೂರಾರು ಕವಿಗಳು ರೇಖ್ತಿ ಗಜಲ್ ಬರೆದರು: ಆ ಕಾಲದ ರೇಖ್ತಿಯ ಇತಿಹಾಸ ರೋಚಕವಾಗಿದೆ.

ಹಾಷ್ಮಿಯ ಬಳಿಕ ಉತ್ತರದಲ್ಲಿ ರೇಖ್ತಿಗೆ ಒಂದು ಸ್ಥಾನ ತಂದುಕೊಟ್ಟವರು ಇನ್‌ಷಾ ಮತ್ತು ರಂಗೀನ್.

ರಂಗೀನ್, ಇನ್‌ಷಾ, ನಿಸ್ಬತ್‌ರ ಬಳಿಕ ಪಂಡಿತ ರಾಜಾರಾಮ್ ಬಹಾದ್ದೂರ್, ಜಾನ್ ಸಾಹೇಬ್, ನಾಜನೀನ್, ಅಯ್ಯಾಷ್, ನಾಜ, ಓಬಾಷ್ ಮುಂತಾದ ಕವಿಗಳು ರೇಖ್ತಿಯನ್ನು ಮುಂದುವರಿಸಿದರು. ಇವರಲ್ಲಿ ಮೀರ್ ಯಾರ್ ಆಲಿ ಜಾನ್ ಸಾಹೇಬನಿಗೆ ಹೆಚ್ಚು ಪ್ರಾಮುಖ್ಯತೆಯಿತ್ತು.

ಅತ್ಯಂತ ಸ್ವಾರಸ್ಯದ ವಿಷಯವೆಂದರೆ ಈ ಕವಿಗಳಲ್ಲಿ ಕೆಲವರು ತಮ್ಮ ಕಾವ್ಯನಾಮಕ್ಕೆ ಹೆಂಗಸರ ಹೆಸರನ್ನಿಟ್ಟುಕೊಂಡಿದ್ದರು. ಉದಾಹರಣೆಗೆ: ಮಿರ್ಜಾ ಅಲಿ

ಬೇಗನ ಕಾವ್ಯನಾಮ 'ನಾಜನೀನ್' (ಚೆಲುವೆ), ಅಬ್ದುಲ್ಲ ಖಾನ್ ಮಹ್‌ಷರನ ಕಾವ್ಯನಾಮ 'ಖಾನಮ್ ಜಾನ್'(ಉಚ್ಚಪರಿವಾರದ ಸ್ತ್ರೀಯರ ಬಿರುದು), ಆಬಿದ್ ಮಿರ್ಜಾ ಸಾಹೇಬನ ಕಾವ್ಯನಾಮ 'ಬೇಗಮ್'.

ಜಾನ್ ಸಾಹೇಬ್ ಕವಿ ಸಮ್ಮೇಳನದಲ್ಲಿ ಕಾವ್ಯವಾಚನದ ಕಾಲದಲ್ಲಿ ಹೆಂಗಸರ ಮೇಲುದ (ದುಪಟ್ಟ)ವನ್ನು ಹೊದ್ದುಕೊಳ್ಳುತ್ತಿದ್ದ. ಸ್ತ್ರೀಯರಂತೆ ಅಂಗಚೇಷ್ಟೆ ಮಾಡುತ್ತಾ ಗಜಲ್ ಓದುತ್ತಿದ್ದ.

ಮಹಷರ್ (ಖಾನಮ್ ಜಾನ್)ನ ಗಜಲ್ ವಾಚನ ಅತ್ಯಂತ ಮೋಹಕವಾಗಿತ್ತು. ವಾಚನದ ರೀತಿಯ ವರ್ಣನೆ ಶಬ್ದಕ್ಕೆ ನಿಲುಕದಂತಹುದು ಆಗಿತ್ತೆಂದು ಅನೇಕರು ಹೇಳಿದ್ದಾರೆ. ದಿಲ್ಲಿಯಿಂದ ಢಾಕಾದವರೆಗೆ ಮಹಷರನ ಗಜಲ್ ವಾಚನ ತನ್ನ ಆಕರ್ಷಕ ಛಾಪನ್ನು ಮೂಡಿಸಿತ್ತು.

(೪)

ರೀಖ್ತಿಯ ಭಾಷೆ ವಿಶಿಷ್ಟವಾದುದು: ಹೆಂಗಸರ ನುಡಿಗಟ್ಟುಗಳು, ಜಾಣ್ನುಡಿಗಳು, ಆಡುಮಾತುಗಳು, ಸಂಭಾಷಣೆಗಳು ಮೊದಲಾದುವುಗಳನ್ನು ಅನುವಾದಿಸುವುದು ಕಷ್ಟಸಾಧ್ಯ; ಇದಕ್ಕೆ ಆ ಭಾಷೆಯ ಅಧ್ಯಯನವಲ್ಲದೆ ಆ ಸಂಸ್ಕೃತಿ ಮತ್ತು ಸಂಪ್ರದಾಯಗಳ ತಿಳಿವಳಿಕೆಯೂ ಬೇಕಾಗುತ್ತದೆ. ''ದಿಲ್ಲಿಯ ಬೇಗಮರ ಭಾಷೆ'' ಎಂಬ ಒಂದು ಪುಸ್ತಕ ಪ್ರಕಟವಾಗಿದೆ. ಅದು ನನಗೆ ದೊರಕಿಲ್ಲ.

ಇಲ್ಲಿ ಕೆಲವು ಷೇರ್(ದ್ವಿಪದಿ)ಗಳನ್ನು ಅನುವಾದಿಸಿ ಕೊಟ್ಟಿದ್ದೇನೆ. ಇದು ಭಾವಾನುವಾದ. ಮೂಲ ಓದಿದವರಿಗೆ ಕೆಲವು ದ್ವಿಪದಿಗಳು ಸಪ್ಪೆ ಎನಿಸಬಹುದು. ಯಾಕೆಂದರೆ ಮೂಲ ಉರ್ದು ಆಡುನುಡಿಯ ಬನಿ, ವ್ಯಂಗ್ಯ, ವಿಡಂಬನೆ, ಮೊನಚು ಇತರ ಭಾಷೆಗಳಿಗೆ ತರುವುದು ಸಾಧ್ಯವಿಲ್ಲ. ಗಜಲ್ ಅಲ್ಲದೆ ಇತರ ಕಾವ್ಯಪ್ರಕಾರಗಳೂ ರೀಖ್ತಿಯಲ್ಲಿ ರಚನೆಯಾಗಿವೆ.

ಬಿಡು ನನ್ನ ಹಿಡಿದುಕೊಂಡಿರುವೆಯಲ್ಲ ಜಗ್ಗಿ ಒದರುತ್ತೇನೆ
ದೇವರಾಣೆ ಬಿಡು ಇಲ್ಲದಿರೆ ದೊಡ್ಡ ಅತ್ತೆಯನ್ನು ಕೂಗಿ
ಕರೆಯುತ್ತೇನೆ

ಅನುಮತಿ ನೀಡಿದರೆ ಹೋಗಿ ಮನೆಗೆ ಮದಿರೆ
ತಯಾರಿಸುತ್ತೇನೆ
ಬಿಡು ನನ್ನನ್ನು ಬಿಡುವು ಸಿಕ್ಕರೆ ಮತ್ತೆ ಬೆಳಗ್ಗೆ ಬರುತ್ತೇನೆ

ಯಾರಾದರೂ ನೋಡಿದರೆ ಏನಂದುಕೊಂಡಾರು ಮನದಲ್ಲಿ ಛೀ
ಬದನಾಮಿ ಮಾಡುತ್ತೀಯ ನನ್ನ ನಾನೆಲ್ಲಿಗೆ ಹೋಗೋದಿಲ್ಲ ಬಿಡು

ನೆನಪಿಹವು ಆ ಮಾತು ನೀನು ಗೋಲ್ಕುಂಡಿಗೆ ಹೋದ ದಿನ
ನಾನು ನೀನಂದು ಸಖಿ ಸಲ್ಲಾಪದಲಿ ಕುಳಿತಿದ್ದವಾದಿನ

ಇಲ್ಲಿ ಬಾರೆ ಎಂದು ಅವನು ಕರೆದಾಗ ಕೆಲಸದಲ್ಲಿದ್ದೇನೆ
ಎನ್ನುತ್ತೇನೆ
ಒನೆಯುತ್ತ ತೊನೆಯುತ್ತ ಸುಮ್ಮನೆ ನಾಲ್ಕಾರು ಗಳಿಗೆ
ಕೂಡುತ್ತೇನೆ

*- 'ಹಾಶ್ಮಿ' ಬಿಜಾಪೂರಿ*

ನಿಲ್ಲು ನಿಲ್ಲು ಇಟ್ಟುಕೊಂಡಿದ್ದೇನೆ ಬಹಳ ಬಹಳ
ಏನು ಮಾಡಲಿ ಒಳಗಿನವನನ್ನು ತಡೆಯದಾಗಿದ್ದೇನೆ

ಚುಚ್ಚುತ್ತಿದೆ ಈ ದರಿದ್ರ ದಪ್ಪನ ಮೇಲುದ
ತಂದುಕೊಡು ದಾದಿ ಅದೇ ಮಲ್‌ಮಲ್ ಮೇಲುದ

> ಕೂಲಿ ಕೆಲಸಗಾರನು ಕೂಲಿ ಕೆಲಸಗಾರನಾಗಿರುವವರೆಗೂ ಅವನ ಆಗುಹೋಗುಗಳು ಬಂಡವಾಳದ ಮೇಲೆಯೇ ಅವಲಂಬಿಸಿರುತ್ತವೆ. ಇದೇ ಕಾರ್ಮಿಕನಿಗೂ ಬಂಡವಾಳಗಾರನಿಗೂ ನಡುವಿನ ಸಮಾನ ಹಿತಾಸಕ್ತಿ ಎಂದು ಹೇಳಲಾಗುತ್ತಿರುವುದರ ತಥ್ಯಾರ್ಥ.
>
> *- ಕಾರ್ಲ್ ಮಾರ್ಕ್ಸ್*

ದಾಸಿಯರಲ್ಲಿ ಓ ಅಕ್ಕ ನೀ ಬಯಸುತ್ತಿರುವ ನಿಷ್ಠೆ
ಕುಮಾರಿಯರಲ್ಲಿ ಕಾಣುವುದು ಕಷ್ಟ ಅಂಥ ನಿಷ್ಠೆ

ಬೇಗಮಳ ತೀಕ್ಷ್ಣ ಕಣ್ಣ ನೋಟದಲ್ಲಿರುವ ಹರಿತವದು
ನೂರು ಚೂರಿಯ ಧಾರೆಯಲಿಲ್ಲ ಚಾಕುವಿನ ಮೊನೆಯಲಿಲ್ಲ

ನೀನೊಬ್ಬಳೇ ಚತುರೆ ನೋಡು ಓ ಬೀಬಿ
ಸಿಂಗಾರಗೊಳುವಲೇ ಬಂದಿಯಾಗಿರುವೆ

ಯಾವ ಜಾತ್ರೆಯಿದೆಯೋ ಕೇಳದಿರು ಗೊತ್ತಿಲ್ಲ ನನಗೆ
ಹೋಗುತ್ತಿವೆ ಎಷ್ಟೋ ಪರ್ದಾ ಹಾಕಿದ ಪಲ್ಲಕ್ಕಿಗಳು

*- 'ಇನ್‌ಷಾ'*

ನಿನ್ನೆ ಮುಗಲಾನಿ ಮಡಿಚಿ ಹೊಲಿದುಕೊಟ್ಟ ರವಿಕೆ
ಪಿಟಿ ಪಿಟಿ ಬಿಗಿಯಾಯ್ತು ಬೆನ್ನಿಗೆ ದರಿದ್ರ ರವಿಕೆ

ಚೆನ್ನಾಗಿ ಪುಡಿಮಾಡಿಕೊಟ್ಟರೆ ಕೆಂಪು ಮೆಣಸಿನ ಕಾಯಿ
ಯಾರಾದರೂ
ಮಾಸ್ತರಣಿಯ ಎರಡೂ ಕಣ್ಣುಗಳಲ್ಲಿ ತುಂಬಿಬರುವೆ
ಹೋಗಿ ನಾನು

ನಡೆದಳಲ್ಲಿಂದ ಸೆರಗ ಜಾರಿಸುತ್ತ
ಪೈಜಣದಿಂದ ಪೈಜಣ ಬಾರಿಸುತ್ತ

*-ಸಾದತ್ ಯಾರ್‌ಖಾನ್ 'ರಂಗೀನ್'*

ಸೂರ್ಯಚಂದ್ರರ ಬೆಳಕು ಮಬ್ಬಾಗಲಿ ಅದರ ಮುಂದೆ
ಕಣ್ಣು ಕುಕ್ಕುವಂಥ ಹೊಳೆವ ಮೇಲುದ ತಂದುಕೊಡು

ರಾತ್ರಿ ಅವಳ ಶಯನಗೃಹದಲ್ಲಿ ಫಕ್ಕನೆ ಮಿಂಚಿತು
ಮೋಡ ಸೀಳಿ ಹೊಳೆವ ಸೆಳೆಮಿಂಚಿನಂತೆ 'ಹಮ್ದಮ್'

*- 'ಹಮ್ದಮ್'*

ಗಂಡನಿಗೆ ಎಂದೂ ಬಂಗಾರ ಪ್ರಾಪ್ತಿಯಾಗುವುದಿಲ್ಲ
ಓ ಹೆಣ್ಣೇ ಇದರಿಂದಲೇ ನಿನ್ನ ಮನೆ ತುಂಬುವುದಿಲ್ಲ

ಸೂಳೆಯರಲ್ಲಿ ಏನು ಜೇನು ತುಂಬಿದೆಯೋ
ಯಾರಿಗೆ ಗೊತ್ತು
ಯಾವ ಗಂಡನೂ ಹೆಂಡತಿಯಿಂದ ಖುಷಿ ಪಡೆಯುವುದಿಲ್ಲ

ನೆರೆಯವಳು ಸಿಂಗಾರಗೊಂಡು ಬಂದಿದ್ದಳೆನ್ನ ಮನೆಗೆ
ನೋಡು ಅವರನ್ನು ರಾತ್ರಿ ಬೀಳಬಹುದಿವಳ ಮೇಲೆ ಜಾರಿ

ನಾಜನೀನ್ ಇಷ್ಟೊಂದು ಚಿತ್ತ ಚಂಚಲತೆಯ?
ಏನು ಬಂತಲ್ಲ ನಿನ್ನ ಧ್ಯಾನದಲ್ಲಿ!

*- ಮಿರ್ಜಾ ಆಲಿ ಬೇಗ್ 'ನಾಜನೀನ್'*

ಐದು ಸಲ ಆತ್ತಾಗ ಐದು ಹೊಳೆ ಹರಿದು ಹೋದವು
ನನ್ನ ಕಣ್ಣುಗಳು 'ಅತ್ತೆ ಪಂಜಾಬ್' ವಿರುದ್ಧ ದಾವಾ ಹೂಡಿವೆ

ನನ್ನೊಡನೆ ಹೊಸ ಚೇಷ್ಟೆ ನಡೆಸಿದ್ದಾಳೆ ನನ್ನ ದಾಸಿ
ಎಲ್ಲಿಗೋ ಕಳಿಸಿದರೆ ಮತ್ತೆಲ್ಲಿಗೋ ಹೋಗುವಳು ತಿಳಿಗೇಡಿ

ಈ ಕಡೆ ಬಂದಳು ಅತ್ತೆ ಆ ಕಡೆ ಓಡಿದಳು ಮತ್ತೆ
ಕನಸಿನಂತಿಹುದು ಇನ್ನೂ ಯೌವನವು

ಗೋಸುಂಬೆಯಂತೊಮ್ಮೆ ಕಪ್ಪು ಇನ್ನೊಮ್ಮೆ ಕೆಂಪು
ವಿಚಿತ್ರವಾಯಿತು ಸಿಟ್ಟಿನಲಿ ವಂಚಕನ ಸ್ಥಿತಿ

*- ಮೀರ್ ಯಾರ್ ಜಾನ್ ಆಲಿ ಷಾಹ ಸಾಹೇಬ್ 'ಜಾನ್'*

ಜೀವ ಹೋಗುವದಿದ್ದರೆ ಹೋಗಲಿಬಿಡು
ಏನೂ ನೆವ ಹೇಳಲಾಗುವುದಿಲ್ಲ ಅವಳ ಮಾತಿಗೆ

ಓಡಿ ಹೋಗಬಹುದಿವಳು ಯೌವನ ಬಂದಾಗ
ಸಾಧ್ಯವಿಲ್ಲ ಸಾಕುವುದು ಈ ಹುಡುಗೆಯನ್ನು

ಇಲ್ಲಿ ಕೆಲಸಮಾಡುತ್ತ ಆ ಕಡೆ ನೋಡುತ್ತಿದ್ದಳು
ಏ ಹುಡುಗಿ ಯಾವ ಕಡೆಗಿತ್ತು ನಿನ್ನ ಧ್ಯಾನ ಆಗ

ರಾತ್ರಿಯಲಿ ಚಂದೂ ಎಲ್ಲಿದ್ದೆ ಈ ಮನೆಯಲ್ಲಿಲ್ಲ
ಆ ಮನೆಯಲ್ಲಿಲ್ಲ
ಎರಡೂ ಕಡೆ ಹೋಗಿ ನಿನ್ನ ಪ್ರಿಯ ಕೂಗಿ ಕೂಗಿ
ಮರಳಿಬಂದ

*-ಆಬಿದ್ ಮಿರ್ಜಾ ಸಾಹೇಬ್ 'ಬೇಗಮ್'*

ರೈಲುಗಾಡಿ ಗಂಡನನ್ನು ಒಯ್ಯಿತು ಹೆಂಡತಿ ಉಳಿದಳಲ್ಲೇ
ಮೇಲು ಹೊದಿಕೆ ಲಖ್ನೋ ಮುಟ್ಟಿತು ಒಳಪದರು
ಉಳಿಯಿತು ದಿಲ್ಲಿಯಲ್ಲಿ

*-ನಿಸಾರಹುಸೇನ್ ಖಾನ್ ಸಾಹೇಬ್'ಷೈದಾ ಅಲಹಾಬಾದಿ'*

ಪಶ್ಚಾತ್ತಾಪ ಪಡುವೆ ನೀನೆನ್ನ ಮಾತನ್ನು ಕೇಳದಿರೆ ಬಹಳ;
ರಾತ್ರಿಯಲಿ ಪ್ರಿಯನಿಗಿಷ್ಟವಾದಂತೆ ನೀನೊಲಿದು
ವರ್ತಿಸೆಲೆ ಸಖಿಯೆ

*- 'ರಹೀಮ್'*

ನಾನೆಷ್ಟು ದಿನ ಬಾಳಲಿ ಕಷ್ಟದಲಿ ಮನ ನೊಂದು ನೊಂದು
ದುಃಖಗಳ ಪರ್ವತಕೆ ತಲೆ ಹಾಯುವದೆ ಒಳ್ಳೇದು ಇಂದು

*-ಸೈಯದ್ ಮುಹಮ್ಮದ್ ಖಾದಿರಿ 'ಖಾಕ'*

ಏನಾದರೂ ಮಾಡಿ ನನ್ನಲ್ಲಿಗವನನ್ನು ತಾರಲೆ ದಾದಿ
ನಿನ್ನಾಶೀರ್ವಾದವಿರಲೆನಗೆ ತೀವ್ರ ಕರೆತಾರೆ ದಾದಿ

ಆ ನತದೃಷ್ಟನೆನಗೆ ಸಿಕ್ಕಾಗ ಬಾರಿಸಲೆ ಬೆನ್ನಿಗೆರಡು ಚೆನ್ನಾಗಿ
ಇಲ್ಲದಿರೆ ಮತ್ತೇನಾದರೂ ಬೇರೆ ಉಪಾಯವಿದ್ದರೆ
ಹೇಳು ದಾದಿ

ಯಾರು ಹೇಳಿದರು ಏನು ಹೇಳಿದರು ನಿನಗೆ ರಾತ್ರಿಯಲಿ
ಓ 'ಲಾಯಿಖ್'
ನಿನಗೆನ್ನ ನನ್ನಾಣೆ ನಾಚದಿರು ಹೇಳು ಹೇಳೆನಗೆ ಓ ನನ್ನ ದಾದಿ

*-ಅಮೀರ್‌ಜಂಗ್ ಅಮೀರುದ್ದೌಲ 'ಲಾಯಿಖ್'*

'ಚೈತ್ರ', ಎಂ.ಪಿ.ಜಿ.-೨, ೧೩೩-೧೩೭ರ ನಡುವ
ಸಿದ್ಧಲಿಂಗ ನಗರ, ಗದಗ ೫೮೨ ೧೦೩

# ಕಿತ್ತು ತಿನ್ನುವುದಕ್ಕೆ ಹತ್ತು ಸೂತ್ರಗಳು

ಕೆ. ಫಣಿರಾಜ್

'ದೇಶ ನಿನಗೇನು ಕೊಟ್ಟಿದೆ ಎಂದು ಯೋಚಿಸಬೇಡ; ದೇಶಕ್ಕೆ ನೀನೇನು ಕೊಟ್ಟಿರುವೆ ಎನ್ನುವುದರ ಬಗ್ಗೆ ಯೋಚಿಸು.' ಎಲ್ಲ ಶಾಲೆಯ ಮಕ್ಕಳಿಗೂ ಗೊತ್ತಿರುವ ನುಡಿಮುತ್ತು ಇದು. ಇದನ್ನು ಹೇಳಿದವರು ಯಾರು ? ಅಬ್ರಹಂ ಲಿಂಕನ್ ? ಜಾನ್ ಎಫ್. ಕೆನಡಿ ? ಒಟ್ಟು ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕದ ಒಬ್ಬ ಅಧ್ಯಕ್ಷರು. ಆದರೆ ಯಾರಿಗೆ ಈ ಮಾತುಗಳನ್ನು ಹೇಳಿದರು ಎನ್ನುವುದರ ಬಗ್ಗೆ ಮಾತ್ರ ಅಷ್ಟೇನು ಅನುಮಾನಪಡಬೇಕಾದ ಅವಶ್ಯಕತೆ ಇಲ್ಲ ಎಂದು ಕಾಣುತ್ತದೆ; ಇಂದು ಅಮೆರಿಕದ ಮುಕ್ಕಾಲು ವಾಸಿ ಪ್ರಜೆಗಳ ಸ್ಥಿತಿಯನ್ನು ಗಮನಿಸಿದರೆ, ಇದು ಬಡಜನರನ್ನು ಉದ್ದೇಶಿಸಿ ಹೇಳಿದ್ದು ಎನ್ನುವುದು ಖಾತ್ರಿಯಾಗುತ್ತದೆ. ೧೯೯೮ರ ಅಂಕಿಸಂಖ್ಯೆಗಳ ಪ್ರಕಾರ ಅಮೆರಿಕದ ಜನಸಂಖ್ಯೆಯ ಶೇ. ೧೦ರಷ್ಟಿರುವ ಶ್ರೀಮಂತರು ದೇಶದ ಒಟ್ಟು ಸಂಪತ್ತಿನ ಶೇ. ೭೦ರಷ್ಟು ಪಾಲನ್ನು ಅನುಭವಿಸುತ್ತಿದ್ದರೆ, ಶೇ. ೬೦ರಷ್ಟಿರುವ ಬಡವರ ಪಾಲಿಗೆ ದಕ್ಕುವುದು ಶೇ. ೦.೨ ಮಾತ್ರ; ಅಂದರೆ ಅಮೆರಿಕದ ಜನ ಉತ್ಪಾದಿಸುವ ಪ್ರತಿ ನೂರು ರೂಪಾಯಿ ಸಂಪತ್ತಿನಲ್ಲಿ ೭೦ ರೂಪಾಯಿ ಶ್ರೀಮಂತರ ಜೇಬಿಗೆ, ೨ ನಯಪೈಸೆ ಬಡವರ ಹೊಟ್ಟೆಗೆ. ಅಮೆರಿಕದ ಸರ್ಕಾರ ಹೇಳುವ ಪ್ರಕಾರವೇ ಬಡವರ ಗಳಿಕೆಯ ಅವಕಾಶಗಳು ಕಡಿಮೆಯಾಗುತ್ತಿದೆ; ಅದೇ ಉಳ್ಳವರಿಗೆ ಹಣಮಾಡಲು ಕಂಡಾಬಟ್ಟೆ ಅವಕಾಶಗಳು ಸೃಷ್ಟಿಯಾಗುತ್ತಿವೆ. ಆದರೆ ಇದು ಅಮೆರಿಕದ ಬಡವರ ಸ್ಥಿತಿಯ ಒಂದು ಮಗ್ಗಲು ಮಾತ್ರ. ಅಮೆರಿಕದ ಬಡವರು ಎಂದರೆ ಮೇಲ್ನೋಟಕ್ಕೆ ಭಾರತದ ಮಧ್ಯಮ ವರ್ಗದವರೂ ಹೊಟ್ಟೆಕಿಚ್ಚುಪಟ್ಟುಕೊಳ್ಳುವಷ್ಟು ಹಣ ಗಳಿಸಬಲ್ಲವರು - ಅಮೆರಿಕದ ಅತ್ಯಂತ ಕೆಳಸ್ತರದ ಕುಟುಂಬಗಳ ವಾರ್ಷಿಕ ವರಮಾನ ಸರಾಸರಿ ಎರಡೂವರೆ ಲಕ್ಷ ರೂಪಾಯಿ. ಆದರೆ, ಅಮೆರಿಕದಲ್ಲಿ ಹೊಟ್ಟೆಗೆ ಹಿಟ್ಟು, ತಲೆಗೊಂದು ಸೂರು ದಕ್ಕಬೇಕು ಎಂದರೆ ವರ್ಷಕ್ಕೆ ಮೂರುವರೆ ಲಕ್ಷ ಖರ್ಚು ಮಾಡಬೇಕು. ಅಂದರೆ ಬಡವರು ಪ್ರತಿ ವರ್ಷ ಒಂದು ಲಕ್ಷ ರೂಪಾಯಿ ಸಾಲ ಮಾಡಿ ಮಾತ್ರ ಮಾನವಂತರಾಗಿ ಬದುಕಲು ಸಾಧ್ಯ. ೧೯೯೮ರ ಹೊತ್ತಿಗೆ ಬಡವರು ತಾವು ಗಳಿಸುವ ಪ್ರತಿ ನೂರು ರೂಪಾಯಿಗೆ ೯೭ ರೂಪಾಯಿ ಸಾಲ ಮಾಡಿ ಬದುಕು ಸಾಗಿಸಬೇಕಿತ್ತು. ಸಾಲ ಏನು ಪುಕ್ಕಟೆ ಸಿಗುತ್ತದೆಯೋ ? ಮನೆ, ಬೆಲೆಬಾಳುವ ಮನೆವಾಳ್ತೆಯ ವಸ್ತುಗಳನ್ನು ಅಡವಿಡಬೇಕು; ಸಾಲದ ಮೇಲೆ ಸಾಲ ಬೆಳೆದು, ತೀರಿಸಲಾಗದೆ, ಮನೆಮಾರು ಕಳೆದುಕೊಂಡು ದಿವಾಳಿಯಾಗಬೇಕು. ಕಳೆದ ಇಪ್ಪತ್ತು ವರ್ಷಗಳಲ್ಲಿ ಅಮೆರಿಕದ ಅತ್ಯಂತ ಕೆಳಹಂತದಲ್ಲಿರುವ ದುಡಿಯುವ ಜನರ ವರಮಾನ ಹೆಚ್ಚಾಗಿದೆ; ಹಾಗೆಯೇ ಸಾಲದ ಹೊರೆಯೂ ಹೆಚ್ಚಾಗಿದೆ. ಹಾಗಾದರೆ ಅಮೆರಿಕದ ಬಡಜನರಿಗೆ ನೆಟ್ಟಗೆ ಸಂಸಾರ ಮಾಡುವ ಕ್ರಮ ಗೊತ್ತಿಲ್ಲ ಅಂತಲೋ ? ಅವರು ತಮ್ಮ ಹಾಸಿಗೆಯನ್ನು ಮೀರಿ ಕಾಲು ಚಾಚುತ್ತಿದ್ದಾರೋ ? ಅಲ್ಲಿ ಇಂದು ಸಿಗುವ ಹಾಸಿಗೆಯೇ ಹಾಗೆ; ಬಡವರ ದೇಹಕ್ಕಿಂತ ಮಿತಿಮೀರಿ ದೊಡ್ಡದು; ಅದು ಬೇಡ ಎಂದರೆ ಹಾಸಿಗೆ ಇಲ್ಲದೆ ಜೀವನ ಮಾಡಬೇಕು; ಅಂಥ ವ್ರತದ ಜೀವನ ಜನಸಾಮಾನ್ಯರಿಗೆ ಹೇಳಿ ಮಾಡಿಸಿದ್ದಲ್ಲ. ಈ ಪರಿಸ್ಥಿತಿಗೆ ಕಾರಣವೂ ಕುತೂಹಲಕರವಾಗಿದೆ. ಮಾಹಿತಿ ತಂತ್ರಜ್ಞಾನ ಯುಗಕ್ಕಿಂತ ಮುಂಚೆ, ಶ್ರೀಮಂತರು ತಮ್ಮ ಹಣವನ್ನು ದೊಡ್ಡ ಕೈಗಾರಿಕೆಗಳಲ್ಲಿ ಬಂಡವಾಳವಾಗಿ ಹೂಡುತ್ತಿದ್ದರು; ಅಂಥ ಕಡೆ ಬಂಡವಾಳ ಮುಕ್ಕಾಲು ಪಾಲು ಫ್ಯಾಕ್ಟರಿ ಕಟ್ಟಡ, ಯಂತ್ರ ಇತ್ಯಾದಿ ಸ್ಥಿರಾಸ್ತಿಯ ರೂಪದಲ್ಲಿ ಇರುತ್ತಿತ್ತು. ಈ ಬಂಡವಾಳದಿಂದ ಉತ್ಪಾದನೆಯಾದ ವಸ್ತುಗಳು ಹೆಚ್ಚೆಚ್ಚು ಮಾರಾಟವಾದರೆ ಬಂಡವಾಳದಾರರಿಗೆ ಹೆಚ್ಚೆಚ್ಚು ಲಾಭ, ಆ ಲಾಭವನ್ನು ಬಂಡವಾಳದ ಜೊತೆ ಸೇರಿಸಿ ಮತ್ತೂ ಹೆಚ್ಚಿನ ಬಂಡವಾಳ, ಉತ್ಪಾದನೆ ನಡೆಯುತ್ತಿತ್ತು. ಉತ್ಪಾದನೆಯ ವೆಚ್ಚ ಕಡಿಮೆಯಾದಷ್ಟು ವಸ್ತುಗಳ ಮಾರಾಟದಿಂದ ಬರುವ ಲಾಭ ಜಾಸ್ತಿಯಾಗುತ್ತಿತ್ತು. ಉತ್ಪಾದನೆಯ ವೆಚ್ಚವನ್ನು ಕಡಿಮೆ ಮಾಡುವ ಒಂದು ಸರಳ ದಾರಿ ಎಂದರೆ ಕೆಲಸಗಾರರಿಗೆ ಕೊಡುವ ಸಂಬಳವನ್ನು ಕಡಿಮೆ ಮಟ್ಟದಲ್ಲಿ ಇಡುವುದು. ಆದರೆ ಕಡಿಮೆ ಸಂಬಳ ಪಡೆಯುವ ಕೆಲಸಗಾರನಿಗೆ ಜಾಸ್ತಿ ವಸ್ತುಗಳನ್ನು ಕೊಳ್ಳುವ ಸಾಮರ್ಥ್ಯ ಇರುವುದಿಲ್ಲ. ಸಮಾಜದ ಮುಕ್ಕಾಲುವಾಸಿ ಜನ ಈ ರೀತಿ ಸಂಬಳಕ್ಕೆ ದುಡಿಯುವವರಾದ್ದರಿಂದ, ಉತ್ಪಾದನೆಯಾದ ವಸ್ತುಗಳು ಮಾರುಕಟ್ಟೆಯಲ್ಲಿ ಮಾರಾಟವಾಗದೆ ಕೊಳೆತು, ಬಂಡವಾಳದ ಅಭಿವೃದ್ಧಿ ಸ್ಥಗಿತಗೊಂಡುಬಿಡುತ್ತದೆ. ಇಂಥ ಬಿಕ್ಕಟ್ಟಿನ ಪರಿಸ್ಥಿತಿ ಬರಕೂಡದು ಎಂದರೆ ದುಡಿಯುವವರ ವರಮಾನ, ವಸ್ತುಗಳನ್ನು ಕೊಳ್ಳುವ ಅವರ ಸಾಮರ್ಥ್ಯವನ್ನು ಸಮತೂಕದಲ್ಲಿ ಇಡುವ ರೀತಿಯಲ್ಲಿ ಇರಬೇಕು ಎಂದು ಶಾಸ್ತ್ರೀಯ ಅರ್ಥಶಾಸ್ತ್ರಜ್ಞರು ಹೇಳುತ್ತಿದ್ದರು. ೧೯೪೭-೭೯ರವರೆಗೆ ಕೆಳಹಂತದ ಜನರ ವರಮಾನದ ಹೆಚ್ಚಳ ಏರುಗತಿಯಲ್ಲಿ ಸಾಗಿತ್ತು. ೧೯೮೦ರ ನಂತರ ಮಾಹಿತಿ ತಂತ್ರಜ್ಞಾನ ಯುಗದ ಪ್ರಾರಂಭ - ಬಂಡವಾಳ ಹೂಡಿಕೆಯ ಸ್ವರೂಪದಲ್ಲಿ ಒಂದು ಗಮನಾರ್ಹ ಬದಲಾವಣೆಯಾಗಿದೆ; ಜಗತ್ತಿನ ಮುಕ್ಕಾಲುಪಾಲು ಬಂಡವಾಳ, ಫ್ಯಾಕ್ಟರಿ, ದೊಡ್ಡ ದೊಡ್ಡ ಕೈಗಾರಿಕೆಗೆ ಬೇಕಾದ



ಯಂತ್ರಗಳು – ಈ ನಮೂನೆಯ ಸ್ಥಿರಾಸ್ತಿಯ ರೂಪವನ್ನು ಕಳಚಿ ಇಂದು ಬ್ಯಾಂಕು, ವಿಮಾ ಕಂಪೆನಿ, ಷೇರು ಮಾರುಕಟ್ಟೆಗಳಲ್ಲಿ ತೊಡಗಿಸುವ ಹಣದ ರೂಪ ಪಡೆದುಕೊಂಡುಬಿಟ್ಟಿದೆ. ಈ ನಮೂನೆಯ ಬಂಡವಾಳದ ವಹಿವಾಟು ಜೂಜಿನಾಟದ ತರಹದ್ದು - ಹತ್ತು ರೂಪಾಯಿ ಪಣಕ್ಕಿಟ್ಟು ಐವತ್ತು ರೂಪಾಯಿ ಗೆಲ್ಲುವುದು, ಆ ಐವತ್ತನ್ನೇ ಪಣಕ್ಕಿಟ್ಟು ಐನೂರು ಗೆಲ್ಲುವ ಆಸೆ; ಜೂಜಿನಲ್ಲಿ ಹತ್ತು ಹಾಕಿ ಐವತ್ತು ಬರಬೇಕು ಎಂದರೆ ಹತ್ತು ಹಾಕಿದ ಐದು ಜನರಲ್ಲಿ ನಾಲ್ಕು ಜನ ಹಾಕಿದ್ದನ್ನು ಕಳೆದುಕೊಳ್ಳಬೇಕು; ಹತ್ತು ಹಾಕಿ ಕಳೆದುಕೊಂಡರೆ, ಮುಂದಿನ ಬಾಜಿಗೆ ಇಪ್ಪತ್ತು ಹಾಕಿ ಕಳೆದುಕೊಂಡದ್ದು ಪಡೆಯುತ್ತೇನೆ. ಅದೂ ಹೋದರೆ ಇನ್ನೊಂದು ಬಾಜಿಗೆ ನೂರು ಹಾಕುತ್ತೇನೆ ಎನ್ನಬೇಕು; ಒಟ್ಟಿನಲ್ಲಿ ಜೂಜಾಡುವುದಕ್ಕೆ ಸರಿಕಟ್ಟು ಹಣ ಇರಬೇಕು. ಇದು ಕಳೆದ ಎರಡು ದಶಕಗಳಲ್ಲಿ ಬಂಡವಾಳ ಪಡೆದುಕೊಂಡಿರುವ ಸ್ವರೂಪ. ೮೦ರ ದಶಕಕ್ಕಿಂತ ಹಿಂದೆಯೂ ಬಂಡವಾಳವು ಈ ನಮೂನೆಯಲ್ಲಿ ಚಲಾವಣೆಯಲ್ಲಿತ್ತು; ಆದರೆ, ಅದರ ಪಾಲು ಒಟ್ಟು ಬಂಡವಾಳದ ಸಣ್ಣ ಪಾಲಾಗಿತ್ತು. ಬಂಡವಾಳದಾರರು ಫ್ಯಾಕ್ಟರಿಯಲ್ಲಿ ಹಣ ಹಾಕಿದರೆ, ಬಂಡವಾಳವಿಲ್ಲದವರು ಫ್ಯಾಕ್ಟರಿಯಲ್ಲಿ ದುಡಿದು ಜೀವನ ಸಾಗಿಸಬೇಕು; ಜೀವನಕ್ಕೆ ಅವಶ್ಯಕವಾದುದ್ದನ್ನೆಲ್ಲ ಉತ್ಪಾದಿಸುವವರು ಬಂಡವಾಳ ದಾರರೇ ಆಗಿರುವುದರಿಂದ, ಹೊಟ್ಟೆ ಹೊರೆಯಲು ಮಾಡುವ ವೆಚ್ಚವೆಲ್ಲ ತಿರುಗಿ ಬಂಡವಾಳದಾರರನ್ನೇ ಸೇರಬೇಕು. ಇವತ್ತು ಬಂಡವಾಳದಾರರು ಜೂಜಿನಾಟ ಶುರುಮಾಡಿದ್ದಾರೆ. ಅವರೊಬ್ಬರೇ ಆಟ ಆಡಲಾಗುತ್ತದೆಯೇ ? ಸಾಮಾನ್ಯ ಜನರು ತಮ್ಮ ವರಮಾನವನ್ನು ಈ ಆಟದಲ್ಲಿ ತೊಡಗಿಸದಿದ್ದರೆ ಆಟ ಮುಂದುವರೆಯುವುದಾದರೂ ಹೇಗೆ ? ಸಾಮಾನ್ಯ ಜನರನ್ನು ಒತ್ತಾಯಪೂರ್ವಕವಾಗಿ ಈ ಆಟದಲ್ಲಿ ಎಳೆದು ತರಲು ಇವತ್ತು ತರಹವರಿ ವಿಧಾನಗಳು ಚಾಲ್ತಿಯಲ್ಲಿವೆ. ಒಂದು ಉದಾಹರಣೆ 'ಇಂದೇ ವಸ್ತುಗಳನ್ನು ಕೊಳ್ಳಿ, ಮುಂದೆ ಸುಲಭ ಕಂತುಗಳಲ್ಲಿ ಹಣ ನೀಡಿ' ಎನ್ನುವ 'ಗ್ರಾಹಕರ ಸಾಲ ವ್ಯವಸ್ಥೆ'; ವಸ್ತುಗಳನ್ನು ಕೊಂಡು, ಕಂತುಗಳಲ್ಲಿ ಪಾವತಿಸದಿದ್ದರೆ ಇದ್ದಬದ್ದ ಸ್ವತ್ತನ್ನೆಲ್ಲ ಮುಟ್ಟುಗೋಲು ಹಾಕುವುದಕ್ಕೆ ಅನುಕೂಲವಾಗುವ ಕಾನೂನುಗಳನ್ನು ಅಮೆರಿಕದ ಸರ್ಕಾರ ಅಚ್ಚುಕಟ್ಟಾಗಿ ಮಾಡಿಟ್ಟಿದೆ ಎನ್ನುವುದು ಬೇರೆ ಮಾತು. ಇಂಥ ಆಟ ಬಹಳ ದಿವಸ ನಡೆಯಲಿಕ್ಕಿಲ್ಲ; ಹಾಗಾಗಿ ಎರಡನೇ ಸುಲಭ ವಿಧಾನವಿದೆ. ಕಷ್ಟಕಾಲಕ್ಕೆ ಇರಲಿ ಎಂದು ಉಳಿಸಿದ ಅಷ್ಟೋ ಇಷ್ಟೋ ಹಣ ಬಡ್ಡಿಸಹಿತ ವೃದ್ಧಿಯಾಗಲಿ ಎಂದು ಜನ ಬ್ಯಾಂಕುಗಳಲ್ಲಿ ಠೇವಣಿ ಇಡುತ್ತಾರೆ; ಅಂಥ ಉಳಿತಾಯದ ಮೇಲೆ ದೊರಕುವ ಬಡ್ಡಿಯ ಪ್ರಮಾಣಕ್ಕೆ ಕತ್ತರಿ ಹಾಕಿ, ಜನ ಈ ಯೋಜನೆಗಳಲ್ಲಿ ಹಣ ಹೂಡಲು ಹಿಂಜರಿಯುವಂತೆ ನೇರವಾಗಿ ಕುಮ್ಮಕ್ಕು ಕೊಡುವುದು ಮತ್ತು ಈ ಹಣವನ್ನು ಷೇರುಮಾರುಕಟ್ಟೆಯಲ್ಲಿ ಆಟವಾಡಲು ತೊಡಗಿಸುವಂತೆ ಪುಸಲಾಯಿಸುವುದು. ಆದರೆ, ಉಳಿಕೆಯೇ ಕಷ್ಟವಾದ ಜೀವನ ಸಾಗಿಸುತ್ತಿರುವ ಜನರೇ ಜಾಸ್ತಿ ಇರುವಾಗ, ಈ ವಿಧಾನದಿಂದ ಜೂಜಿನ ಬಂಡವಾಳದ ಹಸಿವು ತೀರುವುದಿಲ್ಲ. ಅಮೆರಿಕದ ಉಳ್ಳವರು, ಸರ್ಕಾರ ಜನರ 'ಸಾಮಾಜಿಕ ಭದ್ರತೆ'ಗೆ ಮಾಡುತ್ತಿರುವ ಖರ್ಚನ್ನು ಗಣನೀಯವಾಗಿ ಕಡಿತ ಮಾಡಬೇಕು ಎಂದು ಒತ್ತಾಯಿಸುತ್ತಿದ್ದಾರೆ. ಅಮೆರಿಕದ ಪ್ರಭುತ್ವ ಇದುವರೆವಿಗೂ ಸಾಮಾಜಿಕ ಭದ್ರತೆಯ ಯೋಜನೆಗಳಿಗೆ ಸಾಕಷ್ಟು ಹಣವನ್ನು ವಿನಿಯೋಗಿಸುತ್ತಿದೆ – ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ. ೧೫ರಷ್ಟು. ಈ ಯೋಜನೆಗಳಿಂದಾಗಿ ಸಾಮಾನ್ಯ ಜನರಿಗೆ ಕಡಿಮೆ ಖರ್ಚಿನಲ್ಲಿ ಉತ್ತಮ ಆರೋಗ್ಯ ಸೇವೆ, ವಯಸ್ಸಾದವರಿಗೆ ವೃದ್ಧಾಪ್ಯ ವೇತನ, ಸುಲಭವಾದ ಆರೋಗ್ಯ ವಿಮೆ, ನಿರುದ್ಯೋಗಿಗಳಿಗೆ ಸ್ವಲ್ಪವಾದರೂ ನಿರುದ್ಯೋಗ ಭತ್ಯೆ ಮುಂತಾದ ಸೌಲಭ್ಯಗಳು ದೊರಕುತ್ತಿವೆ. ಈ ಯೋಜನೆಗಳಿಂದಾಗಿ, ಅಸಮಾನವಾದ ಸಂಪತ್ತಿನ ವಿತರಣೆಯ ನಡುವೆಯೂ, ಅಮೆರಿಕದ ಜನರ ಸರಾಸರಿ ಆಯುಷ್ಯ ೭೬ ವರ್ಷಗಳಷ್ಟಿದೆ. ಆದರೆ ಉಳ್ಳವರ ಪ್ರಕಾರ ಇದು ಜನರನ್ನು ಸೋಮಾರಿಗಳನ್ನಾಗಿಸುವ ನಿಷ್ಪ್ರಯೋಜಕ ಯೋಜನೆ; ವಿಪರೀತ ಸಾಲ ಮಾಡಿಕೊಂಡು ವ್ಯವಹಾರ ಸರಿದೂಗಿಸುತ್ತಿರುವ ಸರ್ಕಾರ ಇಂಥ ಔದಾರ್ಯವನ್ನು ಪ್ರದರ್ಶಿಸುವ ಅವಶ್ಯಕತೆಯಿಲ್ಲ; ತಾವು ಕೊಡುವ ತೆರಿಗೆ ಈ ವಿಧದಲ್ಲಿ ಪೋಲಾಗುವುದು ಸ್ವಲ್ಪವೂ ಸರಿಯಲ್ಲ ಎನ್ನುವುದು ಇವರ ತರ್ಕ. ತಮ್ಮ ಸಂಪತ್ತಿನ ಮೇಲೆ (ಅವರ ಭಾಷೆಯಲ್ಲಿ 'ತಾವು ಕಷ್ಟಪಟ್ಟು ದುಡಿದ ಹಣ') ವಿಧಿಸುವ ತೆರಿಗೆ ಕಡಿಮೆಯಾಗಬೇಕು ಎನ್ನುವುದರ ಜೊತೆಗೆ ಈ ವಿಷಯದಲ್ಲಿ ಮತ್ತೊಂದು ಪ್ರಬಲ ಹಿತಾಸಕ್ತಿಯು ಶ್ರೀಮಂತರಿಗೆ ಇದೆ : ಜನರ ಲೌಕಿಕ

ಜೀವನದ ಅಭದ್ರತೆಯನ್ನೂ ಸರಕನ್ನಾಗಿ ಪರಿವರ್ತಿಸಿ, ದೊಡ್ಡ ಪ್ರಮಾಣದಲ್ಲಿ ಜನರನ್ನು ಜೂಜಿನ ಬಂಡವಾಳದಾಟಕ್ಕೆ ಎಳೆಯಬೇಕು ಎನ್ನುವುದು ಅವರ ಇಚ್ಛೆ. ಹಾಗಾದರೆ ಸಾಮಾನ್ಯ ಜನ ಸರ್ಕಾರಕ್ಕೆ ಕೊಡುವ ತೆರಿಗೆಯ ಉಪಯೋಗವೇನು ? ಇದಕ್ಕೂ ಶ್ರೀಮಂತರ ಬಳಿ ಉತ್ತರವಿದೆ: ಸರ್ಕಾರ ಈ ಹಣವನ್ನು ಅತ್ಯಂತ ದುಬಾರಿಯಾದ, ಆದರೆ ಅತ್ಯುನ್ನತ ತಾಂತ್ರಿಕ ಬೆಳವಣಿಗೆಗೆ ತೀರ ಅವಶ್ಯಕವಾಗಿರುವ, ವೈಜ್ಞಾನಿಕ ಸಂಶೋಧನೆ ಹಾಗೂ ಮೂಲಭೂತ ಕೈಗಾರಿಕಾ ಉತ್ಪಾದನೆಗಳಿಗೆ ಉಪಯೋಗಿಸಬೇಕು; ತತ್ಫಲವಾಗಿ ದೊರಕುವ ಸೂಕ್ಷ್ಮ ತಂತ್ರಜ್ಞಾನವನ್ನು ತಮಗೆ ದಾನ ಮಾಡಿ, ಕಡಿಮೆ ಬಂಡವಾಳದಲ್ಲಿ ಹೆಚ್ಚು ಲಾಭಗಳಿಸುವ ವ್ಯವಸ್ಥೆಯಾಗಬೇಕು. ಅಮೆರಿಕದ ಪ್ರಭುತ್ವವು, 'ರಾಷ್ಟ್ರೀಯ ಸುರಕ್ಷತೆ'ಯ ಹೆಸರಿನಲ್ಲಿ ಅತಿ ಸೂಕ್ಷ್ಮವಾದ ತಂತ್ರಜ್ಞಾನವನ್ನು ಬೆಳೆಸಲು ಕೋಟ್ಯಾಂತರ ಡಾಲರ್‌ಗಳನ್ನು ಖರ್ಚು ಮಾಡಿ, ಇದರ ಫಲವನ್ನು ಪುಕ್ಕಟೆಯಾಗಿ ಅಮೆರಿಕದ ಶ್ರೀಮಂತ ಬಂಡವಾಳದಾರರಿಗೆ ಹಂಚುತ್ತಿದೆ. ಇವತ್ತು ನಾವು ಬಾಯಿ ಬಿಟ್ಟುಕೊಂಡು ನೋಡುತ್ತಿರುವ ಮಾಹಿತಿ ತಂತ್ರಜ್ಞಾನದ ಮೂಲಭೂತ ಸೌಕರ್ಯಗಳನ್ನು ಅಪಾರ ಹಣ ವ್ಯಯ ಮಾಡಿ ಬೆಳೆಸಿದ್ದು ಅಮೆರಿಕದ ರಕ್ಷಣಾ ಖಾತೆಯೇ ಹೊರತು 'ಮಾಹಿತಿ ತಂತ್ರಜ್ಞಾನದ ದಿಗ್ಗಜರು' ಎಂದು ಕೊಚ್ಚಿಕೊಳ್ಳುವ ಶ್ರೀಮಂತ ಕುಳಗಳಲ್ಲ. ಅಮೆರಿಕದ ತಂತ್ರಜ್ಞಾನದ ಬೆಳವಣಿಗೆಯನ್ನು ಅಧ್ಯಯನ ಮಾಡಿರುವ ವಿದ್ವಾಂಸರು, ಪ್ರತಿಯೊಂದು ಮಹತ್ವದ ತಂತ್ರಜ್ಞಾನವು ಖಾಸಗಿ ಬಂಡವಾಳದಾರರಿಗೆ ಇದೇ ರೀತಿ ಧರ್ಮಕ್ಕೆ ಸಿಕ್ಕಿರುವುದನ್ನು ಉದಾಹರಣೆಗಳ ಸಹಿತ ತೋರಿಸಿದ್ದಾರೆ. ಈ ನಮೂನೆಯ ಅರ್ಥವ್ಯವಸ್ಥೆಯನ್ನು ಉಳ್ಳವರ ಆಸ್ಥಾನ ಪಂಡಿತರು 'ಎಲ್ಲವನ್ನು ಕಷ್ಟಪಟ್ಟು ದುಡಿದು, ನ್ಯಾಯಯುತವಾದ ಬೆಲೆ ತೆತ್ತೇ ಪಡೆಯಬೇಕಾದ ಮುಕ್ತ ಮಾರುಕಟ್ಟೆಯ ಅರ್ಥನೀತಿ' ಎಂದು ಹಾಡಿಹೊಗಳುತ್ತಾರೆ. ಆದರೆ ನೋಮ್ ಚೋಮ್‌ಸ್ಕಿ ಈ ವ್ಯವಸ್ಥೆಯನ್ನು ಕರಾರುವಾಕ್ಕಾಗಿ ಹೀಗೆ ವಿವರಿಸುತ್ತಾನೆ : 'ಹಸಿದವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣ್ಣಿಸುವ ವ್ಯಹಸ್ಥೆ.'

ಭಾರತದ ಪ್ರಭುತ್ವ ಕೂಡ ಕಳೆದ ಹತ್ತು ವರ್ಷಗಳಿಂದ ನಮ್ಮನ್ನು 'ಮುಕ್ತ ಮಾರುಕಟ್ಟೆ ಆರ್ಥಿಕ ನೀತಿ'ಯ ಹಾದಿಯಲ್ಲಿ ಎಳೆದುಕೊಂಡು ಹೋಗುವ ಪಣ ತೊಟ್ಟಿದೆ. ನಮ್ಮ ಪ್ರಭುಗಳು ಹೇಳುವ ಪ್ರಕಾರ 'ಎಲ್ಲ ರಾಜಕೀಯ ಪಕ್ಷಗಳಲ್ಲೂ ಈ ದಾರಿಯಲ್ಲಿಯೇ ದೇಶದ ಭವಿಷ್ಯವನ್ನು ರೂಪಿಸಬೇಕು ಎನ್ನುವುದರ ಬಗ್ಗೆ ಸಹಮತ ಮೂಡಿದೆ; ಇನ್ನು ಹಿಂತಿರುಗಿ ನೋಡುವ ಪ್ರಶ್ನೆಯೇ ಇಲ್ಲ.' ನಮ್ಮ ಹಾಲಿ ಪ್ರಧಾನ ಮಂತ್ರಿಗಳು 'ನಮ್ಮದು ಮಾನವೀಯತೆಯನ್ನು ಮರೆಯದ ಆರ್ಥಿಕ ಸುಧಾರಣೆ' ಎಂದು ಕಳೆದ ಎರಡು ವರ್ಷಗಳಲ್ಲಿ ಹತ್ತು ಸಾರಿ ಹೇಳಿದ್ದಾರೆ; ಆರು ಕೋಟಿ ಟನ್ ಆಹಾರ ಧಾನ್ಯ ಗೋದಾಮುಗಳಲ್ಲಿ ಕೊಳೆಯುತ್ತಿರುವಾಗ ಬಡವರು ಹಸಿವಿನಿಂದ ಸಾಯುತ್ತಿದ್ದಾರೆ. ಇದೇ 'ಮಾನವೀಯ ಮುಖವುಳ್ಳ' ಸುಧಾರಣೆಯಾದರೆ ಇನ್ನು ಸಾಫ್‌ಸೀದ ಸುಧಾರಣೆ ಹೇಗಿರುತ್ತದೆ ಎಂದು 'ದೇಶದ ಪ್ರಗತಿಯನ್ನು ಸಹಿಸದ ದುಷ್ಟ ಹಿತಾಸಕ್ತಿಯುಳ್ಳವರು' ಪ್ರಶ್ನೆ ಕೇಳುತ್ತಾರೆ ಎಂದು ನಮ್ಮ ಪ್ರಧಾನ ಮಂತ್ರಿಗಳಿಗೆ ಚೆನ್ನಾಗಿ ಗೊತ್ತು; ಬಡವರು ಹಸಿವಿನಿಂದ ಸತ್ತದ್ದರ ಬಗ್ಗೆ ಆಳವಾದ ಸಂಶೋಧನೆ ಮಾಡಿದ ಪ್ರಧಾನ ಮಂತ್ರಿಗಳು 'ಇವರೆಲ್ಲ ಹಸಿವಿನಿಂದ ಸತ್ತಿದ್ದಾರೆ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಸತ್ತ ಪ್ರತಿಯೊಬ್ಬರ ಮನೆಯಲ್ಲೂ ಸಾಕಷ್ಟು ಆಹಾರ ಧಾನ್ಯವಿದ್ದದ್ದನ್ನು ನಮ್ಮ ಅಧಿಕಾರಿಗಳು ಪತ್ತೆ ಮಾಡಿದ್ದಾರೆ. ಪತ್ರಿಕೆಗಳವರು ಹಾಗೂ ವಿರೋಧ ಪಕ್ಷಗಳು ನಮ್ಮ ಸರ್ಕಾರದ ಮುಖಕ್ಕೆ ಮಸಿ ಬಳಿಯುವ ಸಲುವಾಗಿ ಸುಳ್ಳು ಸುದ್ದಿ ಹಬ್ಬಿಸುತ್ತಿದ್ದಾರೆ. ಬಡವರ ಹೆಸರಿನಲ್ಲಿ ರಾಜಕೀಯ ಲಾಭ ಪಡೆಯುವುದನ್ನು ಇನ್ನು ನಿಲ್ಲಿಸಿ' ಎಂದು ಸಾರ್ವಜನಿಕವಾಗಿ ಕೆಂಡ ಕಾರಿದರು. ಇವರು ಹೀಗೆ ಎಚ್ಚರಿಸುವ ಕೆಲವೇ ದಿನಗಳ ಮುಂಚೆ ಸುಪ್ರೀಂ ಕೋರ್ಟ್, ಮಾನವ ಹಕ್ಕುಗಳ ಸಂಘಟನೆಯಾದ ಪಿ.ಯು.ಸಿ.ಎಲ್. ಹೂಡಿದ ದಾವೆಯ ಆಧಾರದಲ್ಲಿ ದಾಸ್ತಾನಾಗಿರುವ ಆಹಾರ ಧಾನ್ಯಗಳನ್ನು ಯೋಗ್ಯ ರೀತಿಯಲ್ಲಿ ವಿತರಣೆಯಾಗುವಂತೆ ವ್ಯವಸ್ಥೆ ಮಾಡಬೇಕು ಎಂದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಗೆ ಆದೇಶ ನೀಡಿತ್ತು. 'ಕೂಲಿಗಾಗಿ ಕಾಳು ಯೋಜನೆ' ನಿಯಮದ ಪ್ರಕಾರ, ಅರ್ಧ ಕೂಲಿಯನ್ನು ಕಾಳಿನ ರೂಪದಲ್ಲಿ, ಮತ್ತರ್ಧ ಹಣದ ರೂಪದಲ್ಲಿ ಕೊಡಬೇಕು; ಆದರೆ ಹಣ ರೂಪದಲ್ಲಿ ನೀಡಬೇಕಾದ ಕೂಲಿಗೆ ನಮ್ಮ ಬಳಿ ಕಾಸಿಲ್ಲ; ಕೇಂದ್ರ ಸರ್ಕಾರ, ನಿಯಮವನ್ನು ಸಡಿಲಿಸದ ಹೊರತು ನಮಗೇನೂ ಮಾಡಲು ಸಾಧ್ಯವಿಲ್ಲ ಎಂದು ರಾಜ್ಯ ಸರಕಾರಗಳು ಕೈ ತೊಳೆದುಕೊಂಡರೆ, ಕೇಂದ್ರ ಸರಕಾರ ಅನುಮತಿ ಕೊಟ್ಟರೂ ರಾಜ್ಯಗಳು ದಾಸ್ತಾನಿರುವ ಧಾನ್ಯಗಳನ್ನು ಉಪಯೋಗಿಸುತ್ತಿಲ್ಲ ಎಂದು ದೂರಿತು. ಈ ನಡುವೆ, ಆರು ಕೋಟಿ ಟನ್ ಆಹಾರ ದಾಸ್ತಾನು ಮಾಡಿಕೊಂಡಿರುವ 'ಭಾರತ ಆಹಾರ ನಿಗಮ (ಎಫ್.ಸಿ.ಐ.)'ಕ್ಕೆ ನಿಯಮಿತ ಪ್ರಮಾಣಕ್ಕಿಂತ ಹೆಚ್ಚು ಧಾನ್ಯವನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರುವುದಕ್ಕೆ ಅನುಮತಿ ನೀಡಲಾಯಿತು. ಎಫ್.ಸಿ.ಐ. ಚಾಲ್ತಿಯಲ್ಲಿರುವ ಮಾರುಕಟ್ಟೆ ಬೆಲೆಗಿಂತ ತೀರ ಕಡಿಮೆ ಬೆಲೆಯಲ್ಲಿ ಧಾನ್ಯಗಳನ್ನು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಲು ಶುರು ಮಾಡಿತು. ಉಳಿದ ರಾಷ್ಟ್ರಗಳ ಪ್ರಭುತ್ವಗಳು 'ಇವರು ಕಡಿಮೆ ಬೆಲೆಯಲ್ಲಿ ಮಾರಾಟಮಾಡುವ ಮೂಲಕ, ಅನಾರೋಗ್ಯಕರ ಸ್ಪರ್ಧೆಯನ್ನು ಶುರು ಮಾಡಿದ್ದಾರೆ. ಇದನ್ನು ತಡೆಯಿರಿ' ಎಂದು ವಿಶ್ವ ವ್ಯಾಪಾರ ಸಂಘಟನೆಗೆ ದೂರು ಕೊಟ್ಟವು. ಎಫ್.ಸಿ.ಐ. ತಾನು ಈ ಬೆದರಿಕೆಗೆ ಜಗ್ಗುವುದಿಲ್ಲ, ಪ್ರತಿವಾದ ಮಂಡಿಸಲು ಎಲ್ಲ ತಯಾರಿ ಮಾಡಿಕೊಳ್ಳುತ್ತೇವೆ ಎಂದು ತಿಳಿಸಿದೆ. ಇಷ್ಟಾದರೂ ಜನ ಮನೆಯಲ್ಲಿ ರೇಷನ್ ಇಟ್ಟುಕೊಂಡು, 'ಸರ್ಕಾರದ ಮುಖಕ್ಕೆ ಮಸಿ ಬಳಿಯುವ ' ಸಲುವಾಗಿ 'ಹಸಿವಿನಿಂದ ಸತ್ತರು !' ಪ್ರಧಾನ ಮಂತ್ರಿಗಳ ಸಾರ್ವಜನಿಕ ಹೇಳಿಕೆಯ ಸತ್ಯಾಸತ್ಯತೆಗಳನ್ನು ಪರಿಶೀಲಿಸುವುದು ಪತ್ರಿಕೆಗಳು ಹಾಗೂ ರಾಜಕೀಯ ಪಕ್ಷಗಳಿಗೆ ಅಂಥ ಕಷ್ಟದ ಕೆಲಸವೇನೂ ಅಲ್ಲ; ಅಷ್ಟೇ ಯಾಕೆ, ದೇಶದ ನಾಗರಿಕರ ಸಾವಿಗೆ ತಾವು ನೀಡುತ್ತಿರುವ ಕಾರಣ ಖುಲ್ಲಂಖುಲ್ಲ ಅಸಂಬದ್ಧವಾದುದು ಎಂದು ಸ್ವತಃ ಪ್ರಧಾನಿಗಳಿಗೂ ಗೊತ್ತಿರಬಹುದು. ಆದರೆ ಅವರು ಮಾತನಾಡುತ್ತಿರುವುದು 'ನಿಮ್ಮ ಸೊಂಟದ ಪಟ್ಟಿಯನ್ನು ಎಳೆದು ಕಟ್ಟಿಕೊಳ್ಳಿ' ಭಾಷೆಯಲ್ಲಿ. ಸಾಮಾನ್ಯ ಜನರ ಬದುಕನ್ನು ಮತ್ತಷ್ಟೂ ಕಷ್ಟಕ್ಕೆ ಸಿಕ್ಕಿಸುವ ಆರ್ಥಿಕ ಕ್ರಮಗಳನ್ನು ಜಾರಿ ಮಾಡುವ ಮುಂಚೆ ನಮ್ಮ ಪ್ರಭುಗಳು ದೇಶದ ಆರ್ಥಿಕ ಸ್ಥಿತಿಯನ್ನು ಸದೃಢಗೊಳಿಸುವ ಸಲುವಾಗಿ ಕಠಿಣ ಕ್ರಮಗಳನ್ನು ಕೈಗೊಳ್ಳುವುದು ಅನಿವಾರ್ಯವಾಗಿದೆ; ಈಗ 'ನಿಮ್ಮ ಸೊಂಟಕ್ಕೆ ಕಟ್ಟಿದ ವಸ್ತ್ರಗಳನ್ನು ಸ್ವಲ್ಪ ಗಟ್ಟಿಯಾಗಿ ಹಿಡಿದುಕೊಳ್ಳಿ' ಎಂದು ಎಚ್ಚರಿಸುತ್ತಾರೆ. ಜನ ಹಸಿವಿನಿಂದ ಕುಗ್ಗಿ ಹೋಗುವುದು ದೇಶದ ಆರ್ಥಿಕ ದುಸ್ಥಿತಿಯ ಲಕ್ಷಣವಲ್ಲವೆ ? ಈ ಮಾರ್ಗದಿಂದ ಆರ್ಥಿಕ ಸ್ಥಿತಿ ಸದೃಢವಾಗುವುದು ಹೇಗೆ ? ಎಂದು ಸಾಮಾನ್ಯರಿಗೆ ಆಶ್ಚರ್ಯವಾಗಬಹುದು. ಆದರೆ ನಮ್ಮ ಪ್ರಭುಗಳ ಪ್ರಕಾರ 'ಆರ್ಥಿಕ ಸದೃಢತೆ' ಎಂದರೆ 'ಹಸಿದವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣ್ಣಿಸುವುದು.' ಇಷ್ಟು ಮುನ್ಸೂಚನೆ ಕೊಟ್ಟ ನಂತರವೂ, ಬಡವರು ಹಸಿವಿನಿಂದ ಸಾಯುತ್ತಿದ್ದಾರೆ ಎಂದು ಬೊಬ್ಬೆ ಹೊಡೆಯುವುದರಲ್ಲಿ ಅರ್ಥವೇನಿದೆ ? 'ಆರ್ಥಿಕ ಸದೃಢತೆ'ಯೂ ಬೇಕು, ಬಡವರೂ ಸಾಯಬಾರದು ಎಂದರೆ ಹೇಗೆ ? 'ಆರ್ಥಿಕ ಸದೃಢತೆ'ಯನ್ನು ಬೆಂಬಲಿಸುವವರು, ಸುಧಾರಣೆಗಳಿಗೆ 'ಮಾನವೀಯ ಮುಖ' ತೊಡಿಸಲು ಹಸಿವಿನಿಂದ ಸತ್ತವರ ಬಗ್ಗೆ ಒಂದೋ, ಎರಡೋ ದಿನ ಸಂತಾಪ ಸೂಚಿಸುವ ಸಲುವಾಗಿ ಒಂದಿಷ್ಟು ಗಲಾಟೆ ಮಾಡಿ ಸುಮ್ಮನಾಗಬೇಕು; ಅದನ್ನೇ ರಾಜಕೀಯದ ಕೇಂದ್ರ ಮಾಡಿಕೊಂಡರೆ ಹೇಗೆ ? ಇದು 'ಸಹಮತದ ರಾಜಕೀಯ'ವಲ್ಲ, ಇನ್ನು ಹಸಿವಿನ ಸಾವುಗಳ ಬಗ್ಗೆ ಚರ್ಚೆ ಸಾಕು, ಎಂದು ನಮ್ಮ ಪ್ರಧಾನ ಮಂತ್ರಿಗಳು ಸೂಚಿಸುತ್ತಿದ್ದಾರೆ ಅಷ್ಟೆ. ಪ್ರಧಾನಿಗಳ ಆ ಹೇಳಿಕೆಯ ನಂತರ, ಪತ್ರಿಕೆಗಳಲ್ಲಿ ಈ ಸುದ್ದಿಗಳು ಬರುವುದು ನಿಂತೇ ಹೋಯಿತು. ಎಡಪಕ್ಷಗಳನ್ನು ಹೊರತುಪಡಿಸಿ, ಉಳಿದ ರಾಜಕೀಯ ಪಕ್ಷಗಳು ತಮ್ಮ ಆದ್ಯತಾ ಪಟ್ಟಿಯಿಂದ ಈ ವಿಷಯವನ್ನು ಹೊರಗಿಟ್ಟವು.

ಸಾಮಾನ್ಯ ಜನರಿಗೆ ಅಸಂಗತವಾಗಿ ಕಾಣುವ, ಆದರೆ 'ಮಾನವೀಯ ಮುಖದ ಸುಧಾರಣೆ'ಗಳ ದೃಷ್ಟಿಯಿಂದ ಅರ್ಥಗರ್ಭಿತವಾಗಿರುವ ಮತ್ತೊಂದು ಉದಾಹರಣೆಯನ್ನು ನೋಡಬಹುದು. ಕರ್ನಾಟಕ ಸರ್ಕಾರದಲ್ಲಿ ಉನ್ನತ ಶಿಕ್ಷಣ ಸಚಿವರಾಗಿರುವ ಪರಮೇಶ್ವರ, ಅಕ್ಟೋಬರ್ ಮೂರನೇ ವಾರದಲ್ಲಿ, ಹೈಟೆಕ್ ಖಾಸಗಿ ಆಸ್ಪತ್ರೆಯ ಉದ್ಘಾಟನಾ ಸಮಾರಂಭಕ್ಕಾಗಿ ಮಂಗಳೂರಿಗೆ ಬಂದಿದ್ದರು. ಈ ಸಮಾರಂಭದಲ್ಲಿ ಅವರು ಹೇಳಿದ್ದು : 'ಸಾರ್ವಜನಿಕ ಆರೋಗ್ಯ ಕೇಂದ್ರಗಳನ್ನು ಖಾಸಗಿ ಮೆಡಿಕಲ್ ಕಾಲೇಜುಗಳಿಗೆ ಹಸ್ತಾಂತರಿಸಲು ಸರ್ಕಾರ ಈಗಾಗಲೇ ಕ್ರಮಗಳನ್ನು ಕೈಗೊಂಡಿದ್ದು, ಅಧಿಕೃತ ಆದೇಶವು ಶೀಘ್ರದಲ್ಲೇ ಹೊರಬೀಳಲಿದೆ.... ಬಡವರಿಗೆ ಸುಲಭವಾಗಿ ಮತ್ತು ಶಿಸ್ತುಬದ್ಧವಾಗಿ ಆರೋಗ್ಯ ಲಭಿಸುವಂತೆ ಮಾಡಲು ಈ ಕ್ರಮ ಕೈಗೊಳ್ಳಲಾಗಿದೆ.... ಲಾಭ ಮಾಡುವ ಉದ್ದೇಶವಿಲ್ಲದೆ ಕೇವಲ ಸೇವಾ ದೃಷ್ಟಿಯಿಂದ ಬರುವ ಖಾಸಗಿಯವರಿಗೆ ಇಂತಹ

> ಒಂದು ರೀತಿಯಿಂದ ನೋಡಿದರೆ ನಿಗೂಢಾನುಭವ ಎನ್ನುವುದು ಭಾವನಾವಾದದ ಮೂಲವಾಗಿದೆ. ಏಕೆಂದರೆ ಗೋಚರ ಪ್ರಪಂಚವು ಮಿಥ್ಯೆಯೆಂದು ಸಾಧಿಸುವುದಕ್ಕೆ ನಿಗೂಢಾನುಭವವೇ ಆಧಾರವಾಗಿರುತ್ತದೆ. ಆದರೆ ಶೂನ್ಯವಾದದ ವಿಶಿಷ್ಟ ಲಕ್ಷಣಗಳು ತತ್ವಜ್ಞಾನವನ್ನೇ ನಿಗೂಢಗೊಳಿಸುತ್ತವೆ....
>
> *- ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ*

ಆಸ್ಪತ್ರೆಗಳನ್ನು ಹಸ್ತಾಂತರಿಸಿ, ಬಡವರ ಆರೋಗ್ಯಕ್ಕೆ ಹೆಚ್ಚು ಒತ್ತು ನೀಡಲಾಗುವುದು. ರಾಜ್ಯದಲ್ಲಿ ೫,೦೦೦ಕ್ಕೂ ಹೆಚ್ಚು ಸಾರ್ವಜನಿಕ ಆರೋಗ್ಯ ಕೇಂದ್ರಗಳಿವೆ. ಅವುಗಳು ಮೂಲಭೂತ ಸಮಸ್ಯೆಗಳನ್ನು ಎದುರಿಸುತ್ತಿವೆ..... ಹಾಗೆಯೇ ಕೆಲವು ಕೇಂದ್ರಗಳಲ್ಲಿ ಡಾಕ್ಟರುಗಳೇ ಇಲ್ಲ. ಇದಕ್ಕೆ ಪರಿಹಾರ ಸೂಚಿಸಲು ಈ ಕ್ರಮ ಕೈಗೊಳ್ಳಲಾಗಿದೆ.' (ಜನವಾಹಿನಿ, ಶುಕ್ರವಾರ, ಅಕ್ಟೋಬರ್ ೧೯, ೨೦೦೧). ರಾಜ್ಯದ ೫೦೦೦ಕ್ಕೂ ಹೆಚ್ಚು ಸಾರ್ವಜನಿಕ ಆರೋಗ್ಯ ಕೇಂದ್ರಗಳು ಮೂಲಭೂತ ಸಮಸ್ಯೆ ಎದುರಿಸುತ್ತಿರುವುದು ಯಾಕೆ ಎನ್ನುವುದು ಯಕ್ಷಪ್ರಶ್ನೆಯೇನೂ ಅಲ್ಲ; ಕರ್ನಾಟಕ ಸರ್ಕಾರ ಮಂಡಿಸಿರುವ ೨೦೦೧-೦೨ರ ಬಜೆಟ್ ನೋಡಿದರೆ ಇದಕ್ಕೆ ಉತ್ತರ ಸಿಕ್ಕಿಬಿಡುತ್ತದೆ: ರಾಜ್ಯ ಸರ್ಕಾರವು ವ್ಯಯ ಮಾಡುವ ಪ್ರತಿ ಒಂದು ರೂಪಾಯಿಯಲ್ಲಿ ಸಾರ್ವಜನಿಕ ಆರೋಗ್ಯಕ್ಕಾಗಿ ವ್ಯಯ ಮಾಡುವುದು ಐದು ಪೈಸೆ ಮಾತ್ರ. ಒಂದನೆಯದಾಗಿ, ಈ ಐದು ಪೈಸೆಯನ್ನೇ ಸಕ್ಷಮವಾಗಿ ಹೇಗೆ ಉಪಯೋಗಿಸಬೇಕು ಎಂಬ ಕಾರ್ಯಯೋಜನೆ ತಯಾರು ಮಾಡಿಕೊಂಡು, ಅಂಥ ಯೋಜನೆಗಳು ದಕ್ಷ ರೀತಿಯಲ್ಲಿ ನಡೆಯುವ ಹಾಗೆ ನೋಡಿಕೊಂಡರೆ ಒಂದಿಷ್ಟು ಸಮಸ್ಯೆ ಬಗೆಹರಿಯುತ್ತದೆ. ಮಾನ್ಯ ಮಂತ್ರಿಗಳು ಮೇಲಿನ ಮಾಹಿತಿ ನೀಡಿದ ಒಂದೆರಡು ದಿನಗಳ ಒಳಗೇ ದಕ್ಷಿಣ ಕನ್ನಡ ಜಿಲ್ಲೆಯ ಆರೋಗ್ಯಾಧಿಕಾರಿಗಳು ಜಿಲ್ಲೆಯ ಆರೋಗ್ಯ ಕೇಂದ್ರಗಳ ಸೌಕರ್ಯ ಮತ್ತು ಸಕ್ಷಮತೆ ಬಗ್ಗೆ ಪತ್ರಿಕೆಗಳಲ್ಲಿ ವಿವರ ನೀಡಿದ್ದರು; ಆ ವಿವರಣೆಯಲ್ಲಿರುವ ಸಕ್ಷಮತೆ ಅರ್ಧದಷ್ಟು ಮಾತ್ರ ನಿಜವಿರಬಹುದು ಎಂಬ ಅನುಮಾನವಿಟ್ಟುಕೊಂಡರೂ, ದ.ಕ. ಜಿಲ್ಲೆಯ ಆರೋಗ್ಯ ಕೇಂದ್ರಗಳು ಒಂದಿಷ್ಟು ಮಾನವಂತವಾದ ಸೇವೆ ಒದಗಿಸುತ್ತವೆ ಎನ್ನುವುದು ಅರ್ಥವಾಗುತ್ತದೆ; ಇನ್ನು ಸೌಕರ್ಯಗಳನ್ನು ಇಚ್ಛೆ ಇದ್ದವರು ಯಾರಾದರೂ ಪರಿಶೀಲಿಸಬಹುದು. ದ.ಕ. ಹಾಗೂ ಉಡುಪಿ ಜಿಲ್ಲೆಗಳು, ಸರ್ಕಾರವೇ ಬಹಿರಂಗಪಡಿಸಿರುವ ಮಾನವ ಅಭಿವೃದ್ಧಿ ವರದಿಯ ಪ್ರಕಾರ, ರಾಜ್ಯದಲ್ಲೇ ಎರಡನೇ ಸ್ಥಾನದಲ್ಲಿವೆ. ಎರಡನೆಯದಾಗಿ, ರೂಪಾಯಿಯಲ್ಲಿ ಇನ್ನೊಂದು ಐದು ಪೈಸೆ ಜಾಸ್ತಿ ಖರ್ಚು ಮಾಡಿ ಮೂಲಭೂತ ಸಮಸ್ಯೆಗಳನ್ನು ನಿವಾರಿಸಬಹುದು; ರಾಜ್ಯದ ಆದಾಯವೆಲ್ಲ ವಿವಿಧ ಬಗೆಯ ತೆರಿಗೆಗಳಿಂದ ಬರುತ್ತದೆ. ಇದರಲ್ಲಿ ಶೇ. ೯೦ರಷ್ಟು ಜನ ಜೀವನ ನಿರ್ವಹಣೆಗಾಗಿ ಕೊಳ್ಳುವ ವಸ್ತುಗಳ ಮೇಲೆ ವಿಧಿಸುವ ತೆರಿಗೆ ಮೂಲಕವೇ ಬರುವುದು. ಜನರದ್ದೇ ದುಡ್ಡಿನ ಐದು ಪೈಸೆಯನ್ನು ಜನರ ಆರೋಗ್ಯ ಸೇವೆಗೆ ಖರ್ಚು ಮಾಡುವುದು ನ್ಯಾಯ; ಆದರೂ ಈ ಹೆಚ್ಚುವರಿ ಐದು ಪೈಸೆಯನ್ನು ಖರ್ಚು ಮಾಡಲು ಸರ್ಕಾರ ಸುತರಾಂ ಒಪ್ಪುವುದಿಲ್ಲ. ಆದರೆ ಬೇರೆ ಕೆಲವು ವಿಷಯಗಳಿಗೆ ಸರ್ಕಾರ ಹಿಂದುಮುಂದು ನೋಡುವುದೇ ಇಲ್ಲ; ೨೦೦೧-೦೨ರ ಅವಧಿಯಲ್ಲಿ ಕೇಂದ್ರ ತೆರಿಗೆ ಇಲಾಖೆಯ ಆಕ್ಷೇಪಗಳ ಹೊರತಾಗಿಯೂ, ಸರ್ಕಾರ ಖಾಸಗಿ ಉದ್ಯಮಪತಿಗಳಿಗೆ ೩೦೦೦ ಕೋಟಿ ರೂಪಾಯಿ ಅಧಿಕ ತೆರಿಗೆ ವಿನಾಯಿತಿ ನೀಡಿದೆ. (ಟೈಂಸ್ ಆಫ್ ಇಂಡಿಯ, ೨೫-೫-೨೦೦೧). ಕರ್ನಾಟಕದ ಒಟ್ಟು ತೆರಿಗೆ ಆದಾಯ ಸುಮಾರು ೯೦,೦೦೦ ಕೋಟಿ; ಇದರಲ್ಲಿ ರೂಪಾಯಿಗೆ ಐದು ಪೈಸೆ ಎಂದರೆ ೪,೫೦೦ ಕೋಟಿ; ಸರ್ಕಾರ, ಬಜೆಟ್ ಮಂಡಿಸಿದ ಎರಡು ತಿಂಗಳ ಒಳಗೇ ಉಳ್ಳವರಿಗೆ ೩,೦೦೦ ಕೋಟಿ ತೆಗೆದು ಕೊಡಲು ತಯಾರಿದೆ. ಆದರೆ ಸಾರ್ವಜನಿಕ ಆರೋಗ್ಯಕ್ಕಾಗಿ ೪,೫೦೦ ಕೋಟಿ ಹೆಚ್ಚು ಖರ್ಚು ಮಾಡಲು ತಯಾರಿಲ್ಲ. ಇನ್ನು ಆರೋಗ್ಯ ಸೇವೆ ಎದುರಿಸುತ್ತಿರುವ ಮೂಲಭೂತ ಸಮಸ್ಯೆಗಳನ್ನು ಮಾಟ ಮಂತ್ರಗಳು ನಿವಾರಿಸಬಹುದೋ ಹೇಗೆ ? 'ಆರೋಗ್ಯ ಕೇಂದ್ರಗಳಲ್ಲಿ ಡಾಕ್ಟರುಗಳೇ ಇಲ್ಲ' ಎನ್ನುತ್ತಾರೆ ಮಂತ್ರಿಗಳು; ಪರಮೇಶ್ವರ ಮೇಲಿನ ಕ್ರಮಗಳನ್ನು ಬಿತ್ತರಿಸಿ ಹೋದ ಒಂದು ವಾರದ ನಂತರ ಆರೋಗ್ಯ ಮಂತ್ರಿ ಮಲಕಾ ರೆಡ್ಡಿ, ಉಡುಪಿ ಜಿಲ್ಲೆಯ ಶಿರ್ವದಲ್ಲಿ ಹೊಸ ಆರೋಗ್ಯ ಕೇಂದ್ರವನ್ನು ಉದ್ಘಾಟಿಸುವಾಗ, 'ವೈದ್ಯರ ಕೊರತೆಯನ್ನು ನೀಗಲು ಆಯಾ ಜಿಲ್ಲಾಧಿಕಾರಿಗಳು ತಿಳಿಸಿದ ತಕ್ಷಣ ನೇಮಕ ಮಾಡಲಾಗುವುದು' ಎಂದು ತಿಳಿಸಿದರು (ಜನವಾಹಿನಿ ೨೭-೧೦-೨೦೦೧). ಅಲ್ಲದೆ, ಎಲ್ಲ ಹಳ್ಳಿಗಳಲ್ಲೂ ಹೆರಿಗೆ ಆಸ್ಪತ್ರೆಗಳನ್ನು ಪೂರೈಸಲು ಸಾಧ್ಯವಿಲ್ಲದಿರುವುದರಿಂದ, ಹಳ್ಳಿಗಳಲ್ಲಿ ಕೆಲಸ ಮಾಡುತ್ತಿರುವ ದಾದಿಯರಿಗೆ ವಿಶೇಷ ತರಬೇತಿ ಹಾಗೂ ಸಲಕರಣೆಗಳನ್ನು ಒದಗಿಸುವ ವಿಶೇಷ ಯೋಜನೆಯನ್ನು ಪ್ರಕಟಿಸಿದರು. ಲಾಭ ಮಾಡುವ ಉದ್ದೇಶವಿಲ್ಲದೆ ಕೇವಲ ಸೇವಾ ದೃಷ್ಟಿಯಿಂದ ಆರೋಗ್ಯ ಸೌಕರ್ಯ ಒದಗಿಸುವ ಖಾಸಗಿ ಸಂಸ್ಥೆಗಳಿಗೆ ಸಾರ್ವಜನಿಕ ಆರೋಗ್ಯ ಕೇಂದ್ರಗಳನ್ನು ಹಸ್ತಾಂತರಿಸುವ ಬಗ್ಗೆ ಮಂತ್ರಿಗಳು ಹೇಳುತ್ತಾರೆ; 'ಕೇವಲ ಸೇವಾ ದೃಷ್ಟಿ' ಹೊಂದಿದವರು ಇದ್ದರೆ, ಉಚಿತ ಸಾರ್ವಜನಿಕ ಆರೋಗ್ಯ ಕೇಂದ್ರಗಳನ್ನು ತೆರೆಯಲು ಏನಾದರೂ ಅಡ್ಡಿ ಇದೆಯೋ ? ಹಾಗಾದರೆ, ಈಗ ಇರುವ ೫,೦೦೦ ಕೇಂದ್ರಗಳ ಜೊತೆ, ಮತ್ತೊಂದೈದು ಸಾವಿರ ಕೇಂದ್ರಗಳು ಒದಗಿ, ಬಡವರಿಗೆ ಒಂದಿಷ್ಟಾದರೂ ಸಹಾಯವಾಗುವುದಿಲ್ಲವೋ ? 'ಲಾಭ ಮಾಡುವ ಉದ್ದೇಶವಿಲ್ಲದ, ಸುಲಭವಾದ ಮತ್ತು ಶಿಸ್ತು ಬದ್ಧ ಸೇವೆ'ಯನ್ನು ಖಾಸಗಿ ಸಂಸ್ಥೆಗಳು ಒದಗಿಸುತ್ತಿರುವ ಒಂದು ಉದಾಹರಣೆ ನೋಡಿ: ಕಾಲ್ಗೇಟ್ ಟೂತ್ ಪೇಸ್ಟ್ ಕಂಪೆನಿಯವರು ಹಲ್ಲುಗಳನ್ನು ಸ್ವಚ್ಛವಾಗಿಟ್ಟುಕೊಳ್ಳುವುದು ಹೇಗೆ ಎನ್ನುವುದನ್ನು ಕಲಿಸುವ ಸಲಕರಣೆಗಳನ್ನು ಕೊಟ್ಟು ಸ್ವಯಂಸೇವಾ ಸಂಸ್ಥೆಗಳವರನ್ನು ಹಳ್ಳಿ ಹಳ್ಳಿಯ ಶಾಲೆಗಳಿಗೆ ಕಳಿಸುತ್ತಿದ್ದಾರೆ; ದಿನವೂ ಎರಡು ಹೊತ್ತು ಹೇಗೆ ಹಲ್ಲುಜ್ಜಬೇಕು, ಪೇಸ್ಟಿನಿಂದ ಹಲ್ಲುಜ್ಜದಿದ್ದರೆ ಏನಾಗುತ್ತದೆ ಎಂಬಿತ್ಯಾದಿ ಪ್ರಾಥಮಿಕ ಪಾಠಗಳನ್ನು ಶಾಲೆಯ ಮಕ್ಕಳಿಗೆ ಕಲಿಸುತ್ತಿದ್ದಾರೆ. ಈ ಸೇವೆಯ ಅರ್ಥವೇನು ಎಂದು ಬಿಡಿಸಿ ಹೇಳಬೇಕಾಗಿಲ್ಲ. ಶ್ರೀಮಂತರು ಧರ್ಮಾರ್ಥವಾಗಿ ಅನ್ನ ಛತ್ರಗಳನ್ನು ನಡೆಸಬಹುದು, ಬಡವರಿಗಾಗಿ ಉಚಿತ ಆಸ್ಪತ್ರೆಗಳನ್ನು ತೆರೆಯಬಹುದು - ಇದರ ಹಿಂದೆ ಪ್ರಾಮಾಣಿಕ ಸಾಮಾಜಿಕ ಸೇವೆಯ ಉದ್ದೇಶವೂ ಇರಬಹುದು; ಆದರೆ, ಪ್ರಜಾಪ್ರಭುತ್ವ ತತ್ವದ ಪ್ರಕಾರ ಜೀವನಾವಶ್ಯಕ ಸೌಲಭ್ಯಗಳು ಜನರ ಆಜನ್ಮ ಹಕ್ಕು. - ಯಾವ ಹಂಗೂ ಇಲ್ಲದೆ ಸ್ವಾಭಿಮಾನದಿಂದ ದಕ್ಕಬೇಕಾದ ಹಕ್ಕು; ಜನರ ಬದುಕುವ ಹಕ್ಕನ್ನು ಗೌರವಿಸಿ, ತಕ್ಕ ಸೌಲಭ್ಯಗಳನ್ನು ಒದಗಿಸಬೇಕಾದದ್ದು ಪ್ರಜಾತಂತ್ರವನ್ನು ಒಪ್ಪಿಕೊಂಡಿರುವ ಪ್ರಭುತ್ವಗಳ ಮೂಲಭೂತ ಕರ್ತವ್ಯ. ಇದೆಲ್ಲ, ಮಾನ್ಯ ಮಂತ್ರಿಗಳನ್ನೂ ಒಳಗೊಂಡೇ, ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿರುವಂತಹ ಸಂಗತಿ; ಆದರೆ ಪರಮೇಶ್ವರ ಮಾತನಾಡುತ್ತಿರುವುದು ಈ ರೀತಿಯ ಪ್ರಜಾಪ್ರಭುತ್ವದ ಭಾಷೆಯಲ್ಲಿ ಅಲ್ಲ, 'ಮ್ಯಾನೇಜ್ಡ್ ಹೆಲ್ತ್ ಕೇರ್' ಎಂಬ ಹೊಸ ಭಾಷೆಯಲ್ಲಿ. ಹೌದು, ನೀವು ಸರಿಯಾಗಿಯೇ ಊಹಿಸಿದ್ದೀರಿ. – ಈ ಭಾಷೆಯನ್ನು ಹುಟ್ಟು ಹಾಕಿದವರು ಅಮೆರಿಕದ ಶ್ರೀಮಂತರು. ಈಗಾಗಲೇ ಶೇ. ೮೦ರಷ್ಟು ಅಮೆರಿಕದ ನಾಗರಿಕರು ಈ ಹೊಸ ಸೇವಾ ವ್ಯವಸ್ಥೆಯನ್ನು ಅನುಭವಿಸುತ್ತಿದ್ದಾರೆ. ಇದು ಕೂಡ ತುಂಬಾ ಸರಳವಾದ ವ್ಯವಸ್ಥೆ. ಈ ವಿಷಯದಲ್ಲಿ ಅಧ್ಯಯನ ಮಾಡಿರುವ ಮೆಕ್ಸಿಕೋದ ವೈದ್ಯರಾದ ಹೋವರ್ಟ್ ವೈಟ್ಜ್‌ಕಿನ್ ಮತ್ತು ಸೆಲಿಯ ಇರಿಯಾತ್ ಅವರುಗಳು ಹೇಳುವ ಹಾಗೆ: ಸರ್ಕಾರ ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ವಿನಿಯೋಗಿಸುವ ಹಣವನ್ನೆಲ್ಲ 'ಮ್ಯಾನೇಜ್ಡ್ ಕೇರ್ ಆರ್ಗನೈಜೇಷನ್ಸ್ (ಎಂ.ಸಿ.ಒ.)' ಎಂಬ ಬಹುರಾಷ್ಟ್ರೀಯ ಕಂಪೆನಿಗಳ ಕೃಪಾಕಟಾಕ್ಷದಲ್ಲಿ ನಡೆಯುವ, ಖಾಸಗಿ ಸಂಸ್ಥೆಗಳ ಸಮೂಹಕ್ಕೆ ವರ್ಗಾಯಿಸಿ ಬಿಡುತ್ತದೆ. ಎಂ.ಸಿ.ಒ. ತನಗೆ ಹಾಗೂ ತನ್ನನ್ನು ಪೊರೆಯುವ ಶ್ರೀಮಂತರಿಗೆ ಲಾಭ ತರಬಹುದಾದ ಆರೋಗ್ಯ ಸೇವೆಗಳನ್ನು 'ಸುಲಭವಾಗಿ ಮತ್ತು ಶಿಸ್ತುಬದ್ಧವಾಗಿ' ಜನರಿಗೆ ಒದಗಿಸಬೇಕು; ಲಾಭ ಬರುತ್ತಿರುವವರೆಗೂ ಇವರು 'ಸೇವಾ ಮನೋಭಾವದಿಂದ' ಜನರಿಗೆ ಆರೋಗ್ಯ ಸೇವೆಗಳನ್ನು ಒದಗಿಸುತ್ತಾರೆ. ಲಾಭ ಕ್ಷೀಣಿಸುತ್ತಿದ್ದ ಹಾಗೆಯೇ ಸೇವೆಗಳನ್ನು ಮೂಲೆಗೆ ಹಾಕಿ ಲಾಭ ಗಳಿಸಬಹುದಾದ ಪ್ರಪಂಚದ ಬೇರೆ ಭಾಗಗಳಿಗೆ ನುಗ್ಗುತ್ತಾರೆ. ೧೯೯೦ರ ದಶಕದಲ್ಲಿ, ಅಮೆರಿಕದಲ್ಲಿ 'ಮ್ಯಾನೇಜ್ಡ್ ಹೆಲ್ತ್ ಕೇರ್' ಕ್ಷೇತ್ರದಲ್ಲಿ ಲಾಭಕ್ಕೆ ಖೋತ ಆಗುತ್ತಿದ್ದ ಹಾಗೆಯೇ ಲ್ಯಾಟಿನ್ ಅಮೆರಿಕದಲ್ಲಿ ಕಾರ್ಯಾಚರಣೆ ನಡೆಸಿ ಅಲ್ಲಿನ ಸಾರ್ವಜನಿಕ ಆರೋಗ್ಯ ವ್ಯವಸ್ಥೆಯನ್ನು ಸಂಪೂರ್ಣವಾಗಿ ಚಿಂದಿ ಉಡಾಯಿಸಿ, ಎಂ.ಸಿ.ಒ. ಯೂರೋಪನ್ನು ಲಗ್ಗೆ ಹಾಕಲು ನೋಡಿತು. ಆದರೆ ಯೂರೋಪಿನ ಸಾರ್ವಜನಿಕ ಆರೋಗ್ಯ ವ್ಯವಸ್ಥೆ ತುಂಬಾ ಜನಪ್ರಿಯವಾಗಿದ್ದು, ಸಾಮಾನ್ಯ ಜನರು ಸಮಾಜ ಕಲ್ಯಾಣ ಯೋಜನೆಗಳ ಖಾಸಗೀಕರಣವನ್ನು ತೀವ್ರವಾಗಿ ವಿರೋಧಿಸಿದ್ದರಿಂದ ಕೆಲಸ ಕೆಟ್ಟಿತು. ಈಗ ಅವರು 'ಹೊಸ ಮಾರುಕಟ್ಟೆ' ಹುಡುಕುತ್ತಿದ್ದಾರೆ. ಮತ್ತೊಮ್ಮೆ ನಿಮ್ಮ ಊಹೆ ಸರಿಯಾಗಿದೆ, ಎಂ.ಸಿ.ಒ. ಕಣ್ಣು ಈಗ ಆಫ್ರಿಕ ಮತ್ತು ಏಷಿಯಾಗಳ ಮೇಲಿದೆ; ಈಗ ಐ.ಎಂ.ಎಫ್. ಹಾಗೂ ವಿಶ್ವಬ್ಯಾಂಕುಗಳು, 'ಮ್ಯಾನೇಜ್ಡ್ ಕೇರ್' ತತ್ವವನ್ನು 'ಆರ್ಥಿಕ ಸುಧಾರಣೆಗಳ' ಅವಿಭಾಜ್ಯ ಅಂಗವಾಗಿ ಒಪ್ಪಿಕೊಳ್ಳಬೇಕು ಎಂದು ಒತ್ತಾಯಿಸುತ್ತಿವೆ. (ಹೆಚ್ಚಿನ ವಿವರಗಳಿಗೆ ನೋಡಿ : 'ಹೌ ದಿ ಯುನೈಟೆಡ್ ಸ್ಟೇಟ್ಸ್ ಎಕ್ಸ್‌ಪೋರ್ಟ್ಸ್ ಮ್ಯಾನೇಜ್ಡ್ ಕೇರ್ ಟು ಥರ್ಡ್ ವರ್ಲ್ಡ್ ಕಂಟ್ರೀಸ್', ಮಂತ್ಲಿ ರೀವ್ಯೂ, ಸಂಪುಟ ೫೨, ಸಂಚಿಕೆ ೧, ಮೇ ೨೦೦೦). ಮಾನ್ಯ ಮಂತ್ರಿಗಳು ಇಂಥ 'ಆರ್ಥಿಕ ಸುಧಾರಣೆಗಳ ಕುರಿತ ರಾಜಕೀಯ ಸಹಮತ'ದ ಭಾಷೆಯಲ್ಲಿ ಮಾತನಾಡುತ್ತಿದ್ದಾರೆ. ಇಂಥ ಸಹಮತವಿದ್ದ ಮೇಲೆ, ಅನಿವಾಸಿ ಭಾರತೀಯರಾದ 'ಮ್ಯಾನೇಜ್‌ಮೆಂಟ್ ಗುರುಗಳು' ಭಾರತದ ಶ್ರೀಮಂತರಿಗಾಗಿ 'ಬಡವರಿಂದ ಕಿತ್ತು ತಿನ್ನುವುದಕ್ಕೆ ಹತ್ತು ಸೂತ್ರಗಳು; ಉತ್ಸಾಹಿ ಉದ್ಯಮಿಗಳಿಗಾಗಿ ಸುಲಭ ಮಾರ್ಗದರ್ಶಿ' ಎನ್ನುವ ಪುಸ್ತಕ ಬರೆಯಲು ಅಡ್ಡಿಯಿಲ್ಲ.

**ಕೆ. ಫಣಿರಾಜ್**
ಸಿ-೧ (ಎ), ಕೈಲಾಸ ಮನೆಗಳು
ಮಣಿಪಾಲ - ೫೭೬ ೧೧೯

ಒಂದು ಸಾವಿರದಷ್ಟು ವಚನಗಳನ್ನು ಆಯ್ಕೆಮಾಡಿಕೊಂಡು ಅವುಗಳನ್ನೊಂದು ಕಥನ ಕ್ರಮದಲ್ಲಿ ಅಳವಡಿಸುತ್ತಾ ಹನ್ನೆರಡನೆ ಶತಮಾನದ ವಚನ ಚಳುವಳಿಯ ವಿಚಾರದೀಪ್ತಿಯನ್ನು ಬಿಂಬಿಸುವ ಪ್ರಯತ್ನವೇ ಶೂನ್ಯಸಂಪಾದನೆ. ಇಂಥದೊಂದು ಕೃತಿಯನ್ನು ಮೊದಲು ಮೂಡಿಸಿದ್ದು ಒಬ್ಬ ಜಾನಪದ ಪ್ರಸಂಗಕಾರನೂ ಆಗಿದ್ದ ಶಿವಗಣ ಪ್ರಸಾದಿ ಮಹಾದೇವಯ್ಯ. ನಂತರ ಬಂದ ಮೂರು 'ಶೂನ್ಯ ಸಂಪಾದನೆ'ಗಳು ವೀರಶೈವ ಮಠಾಚಾರ್ಯರಿಂದ

> **ಅಲ್ಲಮನ ವಿಕಟರೂಪವನ್ನು ಒಂದು ಕಪಟ ವೇಷವನ್ನಾಗಿ ಗ್ರಹಿಸಬಾರದು. ವೃದ್ಧರು, ಬಾಲರು, ಅಶಕ್ತರು, ರೋಗಿಗಳು, ಗಾಯಾಳುಗಳು, ಹುಚ್ಚರು, ದೀನಮಾನವರು - ಇವರೆಲ್ಲರ ನೈಜ ನೆನಪುಗಳನ್ನು ಹೃದಯಸ್ಥ ಮಾಡಿಕೊಂಡ ಒಂದು ಮೂರ್ತರೂಪನ್ನಾಗಿ ಪ್ರಭುದೇವರನ್ನು ಪರಿಭಾವಿಸಬೇಕಾಗುತ್ತದೆ.**

ಯಲ್ಲಿದ್ದ ಮರುಳುಶಂಕರ ದೇವರನ್ನು ಬಸವ - ಸಿದ್ಧರಾಮಯ್ಯಾದಿಗಳಿಗೆ ತೋರಿಸುತ್ತಾನೆ.

೪. ಅನುಭವಮಂಟಪದಲ್ಲಿ ಸಿದ್ಧರಾಮಯ್ಯನಿಗೆ ಲಿಂಗದೀಕ್ಷೆಯ ಪ್ರಸ್ತಾಪ ಬಂದಾಗ ''ಅಂಗಕ್ಕೆ ಲಿಂಗವಲ್ಲದೆ ಲಿಂಗಕ್ಕೆ ಲಿಂಗವೇಕೆ?'' ಎಂದು ಹೇಳುವ ಅಲ್ಲಮ ಪ್ರಭುಗಳ ನಿರ್ಣಯಕ್ಕೆ ಚನ್ನಬಸವಣ್ಣನೂ ಸಮ್ಮತಿಸುತ್ತಾನೆ.

೫. ಅನುಭವ ಮಂಟಪದಲ್ಲೊಮ್ಮೆ ಲಿಂಗದ ಸ್ವರೂಪವನ್ನು ತಿಳಿಸಿಕೊಡುವಂತೆ ಚನ್ನಬಸವಣ್ಣನು ಕೋರಿದಾಗ ಬಸವಣ್ಣನು ''ಲಿಂಗದಲ್ಲಿ ಲಕ್ಷಣವನ್ನು

# ಶೂನ್ಯಸಂಪಾದನೆಯ ಪ್ರಸ್ತುತತೆ

ಪರಿಷ್ಕರಿಸಲ್ಪಟ್ಟವು. ಪ್ರಸ್ತುತ, ಮೊದಲ ಶೂನ್ಯ ಸಂಪಾದನೆಯನ್ನು ಲಕ್ಷಿಸಿ ಅದನ್ನೊಂದು ಪ್ರಾಚೀನ ಕಥಾಪ್ರಸಂಗವೆಂಬಂತೆ ಪರಿಗಣಿಸದೆ ವರ್ತಮಾನಕ್ಕೆ ಅನ್ವಯಿಸಿ ಅದರ ಪ್ರಸ್ತುತತೆ ಏನು? ಎಂಬುದನ್ನಿಲ್ಲಿ ಮನಗಾಣಿಸಿದೆ.

ವಚನ ಚಳುವಳಿಯ ಧಾತು ಮತ್ತು ಧೋರಣೆಗಳು ಸಂಸ್ಥೆಗಳಲ್ಲಿ 'ಖಿಲವಾಗಿ' ಅಡಗುತ್ತಾ ಬಂದಂತೆಯೇ, ಸಂವಾದಗಳಲ್ಲಿ 'ಅಖಿಲವಾಗಿ' ಬೆಳಗುತ್ತಾ ಬಂದಿದೆ. ವೀರಶೈವ ಮಠಗಳು ಸಂಸ್ಥೆಗಳಾದರೆ ಶೂನ್ಯಸಂಪಾದನೆ ಸಂವಾದಗಳಾಗಿವೆ. 'ಸಂಸ್ಥೆಗಳಲ್ಲಿ ಸಂವಾದಗಳು' ಮತ್ತು 'ಸಂವಾದಗಳಲ್ಲಿ ಸಂಸ್ಥೆಗಳು' ಎಂಬಂತಿರುವಾಗ ಇವೆರಡನ್ನೂ ಗೆರೆ ಕೊಯ್ದು ಪ್ರತ್ಯೇಕಿಸಲಾಗದು. ಇದನ್ನೇ ಅಲ್ಲಮನ ವಚನವೊಂದು ಬಹು ಸೊಗಸಾಗಿ ನಿರೂಪಿಸಿದೆ:

ಅಪರಿಮಿತದ ಕತ್ತಲೆಯೊಳಗೆ
ವಿಪರೀತದ ಬೆಳಗನಿಕ್ಕಿದವರಾರೋ?
ಬೆಳಗೂ ಅದೆ, ಕತ್ತಲೆಯೂ ಅದೆ!
ಇದೇನು ಚೋದ್ಯವೋ? ಒಂದಕ್ಕೊಂದಂಜದು.
ಆನೆಯೂ ಸಿಂಹವೂ ಒಂದಾಗಿ ಉಂಬುದ ಕಂಡು
ಬೆಱಗಾದೆನು ಗುಹೇಶ್ವರ -

'ಅಲ್ಲಮನ ವಚನ ಚಂದ್ರಿಕೆ'
ಡಾ॥ ಎಲ್. ಬಸವರಾಜು

'ಸಂಕಲನ ಯುಗ'ವೆಂಬ ಅಪರಿಮಿತದ ಕತ್ತಲೆಯೊಳಗೆ ಮೂಡಿಬಂದ 'ಶೂನ್ಯಸಂಪಾದನೆ' ವಿಪರೀತದ ಬೆಳಗು ಎನ್ನಬಹುದು. ಇದನ್ನೇ ಕೊಂಚ ತಮಾಷೆಯಾಗಿ ಹೇಳುವುದಾದರೆ '೫೮೬' ಎಂಬ ಅಪರಿಮಿತದ ಕತ್ತಲೆಯೊಳಗೆ '0' ಎಂಬುದೇ ವಿಪರೀತದ ಬೆಳಗು. ಪಂಚಾಚಾರ-ಅಷ್ಟಾವರಣ-ಷಟ್‌ಸ್ಥಲಗಳೆಂಬ (=೫೮೬) ವೀರಶೈವ ಪುರೋಹಿತಶಾಹಿ ತತ್ವಗಳನ್ನು ಕ್ರಿಯಾಮಥನಕ್ಕೊಳಪಡಿಸುವ ಸೊನ್ನೆಯ (=0) ವಿಗಡ ಚರಿತ್ರೆಯೇ ಶೂನ್ಯಸಂಪಾದನೆ. ೫೮೬ಕ್ಕೆ '0' ಯನ್ನು ಕೂಡಲು, ಕಳೆಯಲು, ಗುಣಿಸಲು, ಭಾಗಿಸಲು ಆಗುವುದಿಲ್ಲ. ಅಂಕಗಳೆಂಬ ಗಣಿತಕ್ಕೆ ಸೊನ್ನೆಯೇ ಅಗಣಿತ! ಸೊನ್ನೆಗಿರುವ ಮೌಲ್ಯ ಯಾವ ಒಂದಂಕೆಗೂ ಇಲ್ಲ, ಆದರೆ ೫೮೬ ರೊಂದಿಗೆ '0' ಸೇರಿದರೆ '೫೮೬೦' ಆಗಿಬಿಡುತ್ತದೆ. ಶೂನ್ಯಸಂಪಾದನೆಗೆ ಅಲ್ಲಮನೇ ನಾಯಕನಾದದ್ದು ಇಂಥ ಆಧಿಕ್ಯಗುಣದಿಂದಲೇ ಎಂದು ನನಗನ್ನಿಸಿದೆ. ೫೮೬ ಎಂಬ ಬದ್ಧ ಚಿಂತನೆಗೊಳಗಾಗದೆ ಇದಾವ ಕಟ್ಟಳೆಯೂ ಇಲ್ಲದ ನಿಶ್ಚಿಂತ ನಿರಾಳ ಸೊನ್ನೆಯಾಗಿಬಿಡುವ ಮನಃಸ್ಥಿತಿಯೇ ಶೂನ್ಯಸಂಪಾದನೆ. ಇದು ಭವ ಮಾಲೆಯಿಲ್ಲದ ಬಯಲ ಲೀಲೆ.

ವಚನಗಳು 'ಮುಕ್ತಕ'ಗಳಾಗಿರುವುದರಿಂದ ಸಹಜವಾಗಿಯೇ ಮುಕ್ತಸಂವಿಧಾನವಾಗಿದೆ. ಮೊದಲ ಶೂನ್ಯ ಸಂಪಾದನೆ ಕೂಡ ಮುಕ್ತಕಗಳನ್ನು ಪವಣಿಸಿದ 'ಮುಕ್ತಸಂವಿಧಾನ'ವೆಂಬುದನ್ನು ಮರೆಯಬಾರದು. ''...ಇಲ್ಲಿ ವಚನಕ್ರಮ ಸೇರುವೆ ತಪ್ಪುಳ್ಳಡೆ ನಿಮ್ಮ ಪರಮಜ್ಞಾನದಿಂ ತಿದ್ದಿ ಈ ವಚನಾನುಭಾವ ಪ್ರಸಂಗಮಂ ಮಾಡಿ ಸುಖಿಸುವುದು...'' ಎಂಬ ಮಾತುಗಳಲ್ಲಿ ಮೊದಲ ಶೂನ್ಯಸಂಪಾದನೆಯ ಮುಕ್ತಸಂವಿಧಾನವು ಸುಸ್ಪಷ್ಟವಾಗಿ ಅಭಿವ್ಯಕ್ತಗೊಂಡಿದೆ. ಆದರೆ ಕಾಲಕ್ರಮೇಣ ಮಠೀಯ ಮತ್ತು ಮತೀಯ ಹಿತಾಸಕ್ತಿಗಳು 'ಶೂನ್ಯಸಂಪಾದನೆ'ಯನ್ನು ಬದ್ಧ ಸಂವಿಧಾನದತ್ತ ಎಳೆದೊಯ್ದವು. ಶಿವಗಣಪ್ರಸಾದಿ ಮಹಾದೇವಯ್ಯನು ಮೂಡಿಸಿದ 'ನಿರ್ಮಳದರ್ಪಣ' ಕ್ಕೆ ವೀರಶೈವ ಪುರೋಹಿತಶಾಹಿ ತತ್ವದ 'ಜಿಡ್ಡು' ಹತ್ತಿತು.

ಶೂನ್ಯ ಸಂಪಾದನೆಯ 'ಆದ್ಯಂತ' ಸಂವಿಧಾನವನ್ನೊಮ್ಮೆ ಪರಿಶೀಲಿಸಿದಲ್ಲಿ, ಅದರ ಅನುಭಾವ ಪ್ರಸಂಗದ ನಿಜದುದಯವಾಗುತ್ತದೆ:

೧. ಅಸ್ಥಿಪಂಜರವಾಗುಳಿದಿದ್ದ ಅನಿಮಿಷಯ್ಯನ ಮೂಳೆ ಕೈಗಳಲ್ಲಿ ಪ್ರಕಾಶಿಸುತ್ತಿದ್ದ ಜ್ಯೋತಿರ್ಲಿಂಗವನ್ನು ಅಲ್ಲಮಪ್ರಭು ದೀಕ್ಷಾಕ್ರಮವಿಲ್ಲದೆ ತನಗೆ ತಾನೆ ಅನುಗ್ರಹಿಸಿಕೊಳ್ಳುತ್ತಾನೆ.

೨. ಸೊನ್ನಲಿಗೆಯ ಕರ್ಮಯೋಗಿ ಸಿದ್ಧರಾಮಯ್ಯನಿಗೆ ಅಲ್ಲಮಪ್ರಭು 'ಲಿಂಗ'ದ ನಿಜಸ್ವರೂಪವನ್ನು ಬಸವಣ್ಣನ ಮೂಲಕ ತಿಳಿಸಿಕೊಡುತ್ತೇನೆಂದು ಕಲ್ಯಾಣಕ್ಕೆ ಕರೆತರುತ್ತಾನೆ.

೩. ಬಸವಣ್ಣನ ಮೂಲಕ ತಿಳಿಸಿಕೊಡುವ ಬದಲು ಅಲ್ಲಮಪ್ರಭು ಮಹಾಮನೆಯ ಎದುರು ತಿಪ್ಪೆಗುಂಡಿ

■ ಎ. ಚಂದ್ರಶೇಖರ ನಂಗಲಿ

ಅರಸಲಾಗದು'' - ಎಂದು ಹೇಳುತ್ತಾನೆ.

೬. ಬಸವಣ್ಣ ಮತ್ತು ಅಲ್ಲಮಪ್ರಭುಗಳ ಜನ್ಮಾಂತರ ಸಂಬಂಧಗಳ ಪ್ರಸ್ತಾಪ ಬಂದು, ಅನಿಮಿಷಯ್ಯನೇ ಬಸವಣ್ಣನಾಗಿ ಹುಟ್ಟಿರುವುದು ಗೊತ್ತಾಗುತ್ತದೆ.

೭. ಬಸವಣ್ಣನು ತಾನು ಅನಿಮಿಷಯ್ಯನಾಗಿದ್ದಾಗ ಅಲ್ಲಮಪ್ರಭು ತನಗೆ ತಾನೆ ಅನುಗ್ರಹಿಸಿಕೊಂಡ ಆದಿಯ ಲಿಂಗವನ್ನು ಮರಳಿ ಕರಸ್ಥಲಕ್ಕೆ ಅನುಗ್ರಹಿಸಲು ಕೇಳಿಕೊಳ್ಳುತ್ತಾನೆ.

೮. ಅದಕ್ಕೆ ಅಲ್ಲಮಪ್ರಭು ಆದಿಯ ಲಿಂಗವೇ ತನ್ನ ಪ್ರಾಣಲಿಂಗವಾಗಿ ಬಸವಣ್ಣನಲ್ಲಿ ಅಡಗಿರುವಾಗ ಬೇರೆ ಯೋಚನೆಯೇಕೆ? ಎಂದು ಸ್ಪಷ್ಟೀಕರಿಸುತ್ತಾನೆ.

ಇದಿಷ್ಟು ಶೂನ್ಯಸಂಪಾದನೆಯ ಪ್ರಧಾನಸೂತ್ರ. ಸೂತ್ರಕ್ಕೆ ಮಣಿಗಳಂತೆ ಬಿಡಿಬಿಡಿಯಾದ ಘಟನೆಗಳು ಇಡಿಯಾದ 'ಸಂಘಟನೆ'ಯಾಗಿ ಅರಳಿಕೊಳ್ಳುತ್ತವೆ. 'ಶೂನ್ಯಸಂಪಾದನೆ'ಯ ಮಣಿಹಾರವನ್ನು ಗಮನಿಸದೆ ಸಂಶೋಧನೆ ಮತ್ತು ವಿಮರ್ಶೆಗಾಗಿ ಆಯ್ದುಕೊಳ್ಳುವ ಲಿಂಗದೀಕ್ಷೆ - ವಿವಾಹ - ಪರೀಕ್ಷೆ ಮುಂತಾದ ಚರ್ಚೆಗಳು 'ಮೂರ್ಖರ ಮೇಳ'ವಲ್ಲದೆ ಮತ್ತೇನು?

ವಚನಗಳಲ್ಲಿ ಬೆಡಗು ಹೇಗೋ ಹಾಗೆ ಇಡೀ ಶೂನ್ಯಸಂಪಾದನೆಯೇ ಒಂದು ಬೆಡಗು, ಮಹಾ ಬೆಡಗು ಎನ್ನಬಹುದು. ಶೂನ್ಯಸಂಪಾದನೆಯ ಬೆಡಗಿನ ಸಂವಿಧಾನವನ್ನು ಅರಿಯದಿದ್ದರೆ ''ಕುರುಹನೆ ಕಂಡು ಕೂಡಲರಿಯದೆ ಕೆಟ್ಟರು'' - ಎಂದು ಹೇಳಬೇಕಾಗುತ್ತದೆ. ಶೂನ್ಯಸಂಪಾದನೆಯ ಆರಂಭದಲ್ಲೇ ಇರುವ ಅನಿಮಿಷಯ್ಯ ಮತ್ತು ಅಲ್ಲಮಪ್ರಭುಗಳ ಪ್ರಸಂಗವು ಶೂನ್ಯಸಂಪಾದನೆಯೊಳಕ್ಕೆ ಓದುಗರು ಹೇಗೆ ಪ್ರವೇಶಿಸಬೇಕೆಂಬುದರ ದಿಕ್ಸೂಚಿಯಾಗಿದ್ದು ಸಾಹಿತ್ಯಕೃತಿ ಮತ್ತು ಸಹೃದಯರ ಅನುಸಂಧಾನದ ಸ್ವರೂಪದರ್ಶನದಂತಿದೆ. ಶೂನ್ಯಸಂಪಾದನೆಯ ರಚನಾವಿನ್ಯಾಸವು ಅಸ್ಥಿಪಂಜರ ಮಾತ್ರವಾಗಿರುವ ಅನಿಮಿಷಯ್ಯನನ್ನು ಹೋಲುತ್ತದೆ. 'ವಚನಕ್ರಮ ಸೇರುವೆ'ಯಿಂದ ಸೃಷ್ಟಿಯಾಗಿರುವ 'ಶೂನ್ಯಸಂಪಾದನೆ' ಒಂದು ಅಸ್ಥಿಪಂಜರವಷ್ಟೆ. ಇದರೊಳಗೆ ಪ್ರವೇಶಿಸುವ ಸಹೃದಯರು ಅಲ್ಲಮನಂತೆ ಭಿನ್ನ ಭಾವನೆಯಿಲ್ಲದವರಾಗಿ ಶೂನ್ಯಸಂಪಾದನೆಯ

'ಜ್ಯೋತಿರ್ಲಿಂಗ'ವನ್ನು ತನಗೆ ತಾನೆ ಅನುಗ್ರಹಿಸಿ ಕೊಳ್ಳಬೇಕು. ಆಗ ಶೂನ್ಯಸಂಪಾದನೆಯ ಅಸ್ಥಿ ಚರ್ಮಂಗಳು ಸಂಚತಪ್ಪಿ ನೆಲಕ್ಕೆ ದೊಳದೊಳನೆ ಉದುರಿಬೀಳುತ್ತವೆ. ಇದೇ ರಚನೆ ಮತ್ತು ವಿರಚನೆ! ಇದು ಮಣ್ಣಿನ ಮರೆಯ ಮಾಣಿಕ್ಯ! ನೆಲದಲ್ಲಿ ಹೂಳಿರ್ದ ನಿಧಾನ! ಈ ದೃಷ್ಟಿಯಿಂದ ವಿಚಾರ ಮಾಡಿದರೆ ಶೂನ್ಯ ಸಂಪಾದನೆಯೊಂದು 'ವಿಗಡ ಚರಿತ್ರ!' ಇದರಲ್ಲಿ ತಿಳಿಯಬೇಕಾದ್ದು 'ಅನಿಯಮದ ಬೆಡಗು!'

ಶೂನ್ಯಸಂಪಾದನೆಯನ್ನು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಧರ್ಮಗ್ರಂಥ, ವೀರಶೈವಧರ್ಮದ ಒಂದು ಪಠ್ಯಪುಸ್ತಕ, ವಚನಸಂಕಲನ, ಮಹಾಕಾವ್ಯ, - ಎಂದು ಮುಂತಾದ ಬಗೆಬಗೆಯ ಪ್ರಕಾರ ವ್ಯಾಪ್ತಿಯಲ್ಲಿಟ್ಟು ಚರ್ಚಿಸಲಾಗಿದೆ. ಒಂದು ಕೃತಿಯನ್ನು ಯಾವುದಾದ ರೊಂದು ರೀತಿಯ ಪ್ರಕಾರಕ್ಕೆ ಕೀಲಿಸಬೇಕೆಂಬ ಹಠವೇಕೋ ತಿಳಿಯದಾಗಿದೆ. ''ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ'' - ಎಂಬಂತೆ ಶೂನ್ಯ ಸಂಪಾದನೆಯು ಯಾವೊಂದು ಪ್ರಕಾರಕ್ಕೂ ಸೇರದ ರಚನೆಯಾಗಿದೆ. ಕನ್ನಡ ಸಾಹಿತ್ಯದ ಪ್ರಪ್ರಥಮ 'ಅಪ್ರಕಾರ'ವೆಂದರೆ ಶೂನ್ಯಸಂಪಾದನೆಯೆಂದೇ ಹೇಳಬೇಕು. ನನ್ನ ಕೆಲವು ಮಿತ್ರರು 'ಶೂನ್ಯ ಸಂಪಾದನೆ'ಯನ್ನು ಮೊದಲಿನಿಂದ ಕೊನೆಯ ತನಕ ನಿರಂತರವಾಗಿ ಓದಲಾಗದೆಂದು ಹೇಳುವುದನ್ನು ಕೇಳಿದ್ದೇನೆ. ಸ್ವತಃ 'ಶೂನ್ಯಸಂಪಾದನೆ' ಓದಿನ ಅನುಕ್ರಮವೊಂದನ್ನು ಅಪೇಕ್ಷಿಸುವುದಿಲ್ಲ. ಜೆನ್ ಕಥಾ ಪ್ರಸಂಗಗಳು, ಸೂಫಿ ಕಥಾಪ್ರಸಂಗಗಳು, ಜನಪದ ಕಥಾಪ್ರಸಂಗಗಳು ಹೇಗೋ ಹಾಗೆ 'ಶೂನ್ಯಸಂಪಾದನೆ' ಯಲ್ಲಿರುವುದು ಶೂನ್ಯ ಕಥಾಪ್ರಸಂಗಗಳು. ಇವನ್ನು ಬಿಡಿಬಿಡಿಯಾಗಿ ನೋಡದೆ ಇಡಿಯಾಗಿ, ಹಿಂದು ಮುಂದಾಗಿ, ಮಧ್ಯೆ ಮಧ್ಯೆ, ತಲೆಕೆಳಗಾಗಿ ಓದ ಬೇಕಾಗುತ್ತದೆ. ಇದೇ ರಚನೆ ಮತ್ತು ವಿರಚನೆ!

ಆದರೆ ಇದುವರೆಗೆ ಶೂನ್ಯಸಂಪಾದನೆಯನ್ನು ಘಟನೆಗಳ ಸರಣಿಯನ್ನಾಗಿ ನೋಡಲಾಗಿದೆ. ಆದ್ದರಿಂದಲೇ ವಿವಾದಾತ್ಮಕ ಘಟನೆಗಳ ಕತ್ತರಿ ಪ್ರಯೋಗ, ಅಪೇಕ್ಷಿತ ಘಟನೆಗಳ ಹುಸಿ ನುಸುಳನ್ನು ಇನ್ನಿಲ್ಲದಂತೆ ಚರ್ಚಿಸಲಾಗಿದೆ. ಶೂನ್ಯಸಂಪಾದನೆಯನ್ನು 'ಸಂಘಟನೆಗಳ ಸಂವಿಧಾನ'ವಾಗಿ ನೋಡಬೇಕಾಗುತ್ತದೆ. ಆಗ ಮಾತ್ರ ಶೂನ್ಯಸಂಪಾದನೆಯಲ್ಲಿರುವ ೫೮೬ Vs '0'ಯ ಸ್ವರೂಪದರ್ಶನವಾಗುತ್ತದೆ. ಬಸವಣ್ಣನ ಭಕ್ತಿ Vs ಮರುಳುಶಂಕರದೇವ, ಬಸವಣ್ಣನ ದಾಸೋಹ Vs ಆಯ್ದಕ್ಕಿ ಮಾರಯ್ಯ, ಬಸವಣ್ಣನ ಕಾಯಕ Vs ಮೋಳಿಗೆ ಮಾರಯ್ಯ - ಎಂಬಂತೆ ಸಮ್ಯಕ್ ದೃಷ್ಟಿಯಿಂದ ಪರಿಭಾವಿಸಬೇಕಾಗುತ್ತದೆ. ಸಾಹಿತ್ಯಾಂತರ್ಗತ ಪಾತ್ರಗಳನ್ನು ನೋಡುವಾಗ 'ನಿಜ ವ್ಯಕ್ತಿಗಳು' (Actual Persons) ಎಂಬ 'ಸ್ಥಾವರ' ದೃಷ್ಟಿಗೊಳಗಾಗದೆ, ಬಸವಣ್ಣ - ಚನ್ನಬಸವಣ್ಣ - ಅಲ್ಲಮಪ್ರಭು - ಅಕ್ಕಮಹಾದೇವಿ ಮುಂತಾದವರನ್ನು ತತ್ವಗಳಂತೆ, ವಿಚಾರಗಳಂತೆ ಒಂದೊಂದು ಪ್ರಸ್ಥಾನದಂತೆ (Thought of School) ಪರಿಗಣಿಸಬೇಕಾಗುತ್ತದೆ. ಉದಾಹರಣೆಗೆ, ಅಲ್ಲಮಪ್ರಭು ಇಡೀ ವಚನ ಚಳುವಳಿಯ ಧಾತು ಮತ್ತು ಧೋರಣೆಗಳ ಪ್ರತೀಕವಾಗಿದ್ದು ಕಲ್ಯಾಣದ ಬೆಳಕಾಗಿದ್ದಾನೆ. ಅಲ್ಲಮನ ದೇಶ ಪರ್ಯಟನೆಯು ವಚನ ಚಳುವಳಿಯ ಬೀಜ ಪ್ರಸಾರ ಅಥವಾ ಕಲ್ಯಾಣದ ಬೆಳಕಿನ ಲೋಕಸಂಚಾರ ವಾಗಿದೆ. ಅಲ್ಲಮ ಪ್ರಭುಗಳ ಪುನರಾಗಮನ(= ಕಲ್ಯಾಣಕ್ಕೆ ಮರುಪ್ರವೇಶ) ಸಂಕಲನಯುಗದ (= ಕ್ರಿ. ಶ. ೧೫ನೇ ಶತಮಾನ) ಕತ್ತಲೆಯಲ್ಲಿ ಸಂವಾದಗಳು ಕಂಡ ಕನಸಾಗಿದೆ. ಇದೊಂದು ರೀತಿಯಲ್ಲಿ ಮಾನವ ಕಲ್ಯಾಣಕ್ಕೆ ಬೆಳಕಿನ ಪುನರಾಗಮನ ಎನ್ನಬಹುದು. ಆದರೆ ಇದನ್ನೊಂದು ಐತಿಹಾಸಿಕ ಘಟನೆಯನ್ನಾಗಿ ಕಂಡು ಸಂಶೋಧನೆಯ ಜಾಡಿಗೆ ಬಿದ್ದರೆ ಕುರುಹಿನಲ್ಲೆ ಕಳೆದು ಹೋಗುತ್ತೇವೆ.

ಬಸವಣ್ಣನು ಭಕ್ತಿರತಿಯ ತುಂಬಿದ ಬಟ್ಟಲು. ಈ ತುಂಬಿದ ಬಟ್ಟಲಿನಲ್ಲಿ ಹೊಸದೇನನ್ನೂ ತುಂಬಲಾಗದು. ಇದನ್ನರಿತ ಅಲ್ಲಮನು ಬಸವಣ್ಣನ ಭಕ್ತಿರತಿಯನ್ನು ಬತ್ತಲೆ (=ಖಾಲಿ) ಮಾಡಲು, ಶೂನ್ಯವಾಗಿಸಲು ಮಹಾಮನೆಯಂ ಗಳದ ತಿಪ್ಪೆಗುಂಡಿಯಲ್ಲಿ ಮರುಳುಶಂಕರದೇವರನ್ನು (ಅಂತರ್ ಪಠ್ಯ: ಮಂಟೇಸ್ವಾಮಿಯನ್ನು ) ತೋರುತ್ತಾನೆ. ಈತ ಅಫ್‌ಘನಿಸ್ತಾನಕ್ಕೆ ಸೇರಿದವನೆಂಬ ಚರಿತ್ರಕಾರರ ಅಭಿಮತವನ್ನು ಜೋಳದರಾಶಿ ದೊಡ್ಡನ ಗೌಡರು ಪ್ರಸ್ತಾಪಿಸಿರುವುದನ್ನಿಲ್ಲಿ ಸ್ಮರಿಸಬಹುದು. ''ಸೂಜಿಗಲ್ಲಿನ ಸೆಳೆತಕ್ಕೆ ಸೂಜಿ ಸರಿದು ಬರುವಂತೆ...'' ಅಲ್ಲಮನೆಡೆಗೆ ಮರುಳು ಶಂಕರದೇವ ಸರಿದುಬರುತ್ತಾನೆ. ಬಸವಣ್ಣನ ಮಹಾಮನೆಯ ಸಂಭ್ರಮದ ಬರಬರ ಭಕ್ತಿ ಬೆಲೂನಿಗೆ ಅಲ್ಲಮನು ತಾಕಿಸುವ ನಿಜದ ಸೂಜಿಮೊನೆ

ಮರುಳುಶಂಕರದೇವ ! ಇದೇ 586 Vs O ! ತಿಪ್ಪೆಗುಂಡಿಯಲ್ಲಿದ್ದ 'ಅತ್ಯಂತ ಮಲಿನ' ಮರುಳುಶಂಕರದೇವ (= ಮಂಟೇಸ್ವಾಮಿ) ಇಲ್ಲಿಗೆ ನಿರ್ವಯಲಾಗುವುದಿಲ್ಲ. ಶೂನ್ಯಸಂಪಾದನೆಯ ಕೊನೆಗೆ ಶೂನ್ಯ ಸಿಂಹಾಸನಾರೋಹಣದ ಸಂದರ್ಭದಲ್ಲಿ ಪ್ರಭುದೇವರು 'ಅತ್ಯಂತ ಮಲಿನ' ಮರುಳುಶಂಕರದೇವನಾಗಿ (= ಮಂಟೇಸ್ವಾಮಿಯಾಗಿ) ಕಾಣಿಸಿಬಿಡುತ್ತಾರೆ. ಮಾರ್ಗ - ದೇಸಿಯ ಪಠ್ಯಗಳು ಒಂದರೊಳಗೊಂದು ಬೆರೆತುಹೋಗುವ 'ದರ್ಶನ'ವಿಲ್ಲಿದೆ.

'ಶೂನ್ಯಸಂಪಾದನೆ'ಯ ಶಿಖರವೆನ್ನಬಹುದಾದ 'ಶೂನ್ಯ ಸಿಂಹಾಸನಾರೋಹಣ'ವೆಂಬ ಶೂನ್ಯ ಕಥಾಪ್ರಸಂಗವನ್ನು ನೋಡೋಣ. ಶೂನ್ಯಸಿಂಹಾಸನಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಪ್ರಕಟವಾಗಿರುವ ಆಧುನಿಕ ವ್ಯಾಖ್ಯಾನಗಳು ಐತಿಹಾಸಿಕತೆ, ಒಳಗು - ಹೊರಗು, ಯೋಗ ಮಾರ್ಗ, ಷಟ್‌ಸ್ಥಲ, ಸಂಕೇತಗಳೆಂಬ ಕುರುಹಿನ ಚಾವಟಿಯಲ್ಲಿ ಗಿರಗಿರ ತಿರುಗುವ ಬುಗುರಿಗಳಂತೆ ಕಾಣುತ್ತವೆ. ಆದ್ದರಿಂದ, 'ಶೂನ್ಯ ಸಿಂಹಾಸನಾರೋಹಣ'ವನ್ನು ಹೊಸ ಹೊಸ ದೃಷ್ಟಿಗಳಿಂದ ಮತ್ತು ಬದುಕಿನ ಗತಿಶೀಲ ಸಂಬಂಧಗಳೊಂದಿಗೆ ಇಟ್ಟು ಪರಿಶೀಲಿಸಬೇಕಾಗುತ್ತದೆ. ಇದೊಂದು ರೀತಿಯಲ್ಲಿ ಪ್ರಾಚೀನ ವಸ್ತುವನ್ನು ಪ್ರಸ್ತುತದಲ್ಲೂ ಅರ್ಥೈಸಿಕೊಳ್ಳುವ ಸಾಂಸ್ಕೃತಿಕ ಮುಖಾಮುಖಿ ಎನ್ನಬಹುದು. ಬಸವಣ್ಣನ ಭಕ್ತಿಯನ್ನು ಪರೀಕ್ಷಿಸಲು ಪ್ರಭುದೇವರಾಡಿದ ಕಪಟನಾಟಕವೆಂಬಂತೆ 'ಶೂನ್ಯ ಸಿಂಹಾಸನಾರೋಹಣ'ವನ್ನು ವಿವರಿಸಿರುವುದುಂಟು. ಇದು ಸರಿಯಲ್ಲ! 'ಸಿಂಹಾಸನಾರೋಹಣ'ವೆಂಬುದು ಅಪರಿಮಿತ ಅಧಿಕಾರ ಸಿದ್ಧಿಯ ಸಂಕೇತ. ಇಡೀ ಭೂಗೋಳವನ್ನೆ ಸಿಂಹಪೀಠವನ್ನಾಗಿ ಮಾಡಿಕೊಂಡು ದೂರನಿಯಂತ್ರಣ ಬಲದಿಂದ ವಿಶ್ವವಸಾಹತುಶಾಹಿಯನ್ನು ಸ್ಥಾಪಿಸಲು ಎಳಸುತ್ತಿರುವ ಜಾಗತೀಕರಣವು ಕೂಡ 'ಅಪರಿಮಿತ ಅಧಿಕಾರ ಸಿದ್ಧಿ'ಯ ಹುನ್ನಾರವೇ ಆಗಿದೆ. ಪ್ರಭುವಿನ ಶೂನ್ಯ ಸಿಂಹಾಸನಾರೋಹಣವನ್ನು ಯಾವುದೋ ಗತ ಇತಿಹಾಸದ ಪಳೆಯುಳಿಕೆಯಂತಾಗಲಿ ಅಥವಾ ಆಧ್ಯಾತ್ಮಿಕವಾದ ಯೋಗಮಾರ್ಗದ ದುರವಗಾಹಿ ತತ್ವವೆಂದಾಗಲಿ ಭಾವಿಸಬೇಕಾಗಿಲ್ಲ. ಶಕ್ತಿಮದೋನ್ಮತ್ತರ ಕುರ್ಚಿಯ ಕತೆಗಳು ಮತ್ತು ದೀನಮಾನವರ ಬವಣೆಗಳ ಜೊತೆಗಿಟ್ಟು ಪ್ರಭುವಿನ 'ಶೂನ್ಯಪೀಠ' ಮತ್ತು 'ಆರೋಹಣ'ದ ಅರಿವನ್ನು 'ಸಾಧ್ಯ' ಮಾಡಿಕೊಳ್ಳಬೇಕಾಗಿದೆ. ಈ ದೃಷ್ಟಿಯಿಂದ ನಮ್ಮ ದೇಶದ ಪಠ್ಯಗಳಲ್ಲೂ ಸೇರಿಹೋಗಿರುವ 'ಜಾನಪದೀಯ ಧೀಮಂತಿಕೆ' - Folk Wisdom – ಕಡೆಗೆ ಬರಬೇಕು.

ರಾಜಪೀಠ ಮತ್ತು ಧರ್ಮಪೀಠಗಳ ಮೇಲೆ ಕುಳಿತು ವಿರಾಜಮಾನರಾಗಿ ಮೆರೆಯುತ್ತಿರುವ ಸಿಂಹಾಸನಾಧೀಶ್ವರರುಗಳಿಂದ ತುಂಬಿಹೋಗಿರುವ ನಮ್ಮ ದೇಶದಲ್ಲಿ ಸಿಂಹಾಸನಕ್ಕೆ ಸಂಬಂಧಪಟ್ಟಂತೆ ಜಾನಪದ ಮೂಲದ ಐತಿಹ್ಯಗಳಿಗೆ ತುಂಬಾ ಮಹತ್ವವಿದೆ. ಈ ಹಿನ್ನೆಲೆಯಲ್ಲಿ ಭೋಜರಾಜನ ಸಾಲಭಂಜಿಕಾ ಸಿಂಹಾಸನ, ಸಂಸರ ನಾಟಕಗಳಲ್ಲಿರುವ ಖಾಲಿ ಸಿಂಹಾಸನ, ಶೂನ್ಯ ಸಂಪಾದನೆಯ ಶೂನ್ಯಸಿಂಹಾಸನಗಳನ್ನು ಪರಸ್ಪರ ಹೋಲಿಸಿ ನೋಡಬೇಕು. ಭೋಜರಾಜನು ಸಾಲ-ಭಂಜಿಕಾ ಸಿಂಹಾಸನವನ್ನು ಏರುವಾಗ ಒಂದೊಂದು ಮೆಟ್ಟಿಲಿಗೆ ಒಂದೊಂದು ಬೊಂಬೆಯ ಕತೆ ಕೇಳಿ ತನ್ನ ಅರ್ಹತಾ ಪರೀಕ್ಷೆ ಮಾಡಿಕೊಳ್ಳುವ ಬಗೆಯಲ್ಲಿ ಅಪರಿಮಿತ ಅಧಿಕಾರ ಸಿದ್ಧಿ ಮತ್ತು ಸಂಯಮದ ವಿವೇಕಗಳ ನೇಯ್ಗೆಯಿದೆ. ರಾಮಾಯಣದಲ್ಲಿ ಬರುವ ರಾವಣೇಶ್ವರನ 'ಸಿಂಹಾಸನಾರೋಹಣ'ದ ಪ್ರತಿಷ್ಠೆಗೆ ಕೊಟ್ಟ ಬಲವಾದ ಘಾತವೆಂದರೆ ಹನುಮಂತನ ಬಾಲಸುರುಳಿಯ ಸಿಂಹಾಸನ! ಇದೊಂದು ಅದ್ಭುತವಾದ ಜಾನಪದ ಮೂಲದ 'ಫ್ಯಾಂಟಸಿ' ಎನಿಸುತ್ತದೆ.

ಸಂಸರ ನಾಟಕಗಳಲ್ಲಿ ಸದಾ ಖಾಲಿ ಇರುವ ಸಿಂಹಾಸನವಿರುವುದನ್ನು ಕನ್ನಡ ವಿಮರ್ಶೆಯಲ್ಲಿ ಗುರುತಿಸಲಾಗಿದೆ. ಬಾಲಕ ರಾಜ ಒಡೆಯರು ಬಾಲಚೇಷ್ಟೆಯಿಂದ ಸಿಂಹಾಸನಾರೋಹಣಕ್ಕೆ ಮರಳಿ ಮರಳಿ ಪ್ರಯತ್ನಿಸುವುದು ಮತ್ತು ಕಂಠೀರವನು ತಡೆದು ಬತ್ತವನ್ನು ತರಿಸಿ ಸಿಂಹಾಸನದ ತಳದಲ್ಲಿ ಚೆಲ್ಲಿದಾಗ ಅವು ಛಟಿಲು ಛಟಿಲು ಎಂದು ಸಿಡಿದು ಅರಳಾಗುವುದನ್ನು ತೋರಿಸುವುದು ಒಂದು ಜನಪದ ಐತಿಹ್ಯ! ಬ್ರಿಟಿಷ್ ವಸಾಹತುಶಾಹಿಯ ಆಳ್ವಿಕೆಯಲ್ಲಿ ಕೇವಲ 'ಬೆರ್ಚಪ್ಪ'ಗಳಂತಿದ್ದ ದೇಶೀಯ ರಾಜರ ಸ್ಥಿತಿಗತಿಗಳು ಮತ್ತು ಸಿಂಹಾಸನಾರೋಹಣದ ಅನರ್ಹತೆಯನ್ನು ಸಂಸರ 'ಖಾಲಿ ಸಿಂಹಾಸನ'ದಲ್ಲಿ ಮನಗಾಣಲು ಸಾಧ್ಯ! ಅಂತೆಯೇ ಜಾಗತೀಕರಣವೆಂಬ ಮಂತ್ರ - ತಂತ್ರಗಳಿಂದ 'ವಿಶ್ವಪೀಠ'ದ ಅಧಿಪತಿಗಳಾಗಲು ಹೊಂಚುತ್ತಿರುವ ಶಕ್ತಿ ಮದೋನ್ಮತ್ತರನ್ನು ಲಕ್ಷಿಸಿದರೆ, ಪ್ರಭುದೇವರ ಶೂನ್ಯ ಸಿಂಹಾಸನಾರೋಹಣವು ತುಂಬಾ ಅರ್ಥಪೂರ್ಣವಾದ ಪ್ರಹಸನದಂತೆಯೂ, ಎಲ್ಲ ಕಾಲ - ದೇಶಗಳ ಶಕ್ತಿಮದೋನ್ಮತ್ತರ ವಿಡಂಬನ ಸ್ಥಲದಂತೆಯೂ ಕಂಡುಬರುತ್ತದೆ.

'ಶೂನ್ಯಸಿಂಹಾಸನ'ವನ್ನು ಒಂದು ಸಂಪತ್ಸಮೃದ್ಧ ಕಟ್ಟಡವೆಂಬಂತೆ ವರ್ಣಿಸಿದ್ದ ಶೂನ್ಯಸಂಪಾದನೆಯು ಇದೀಗ "ಅಂತರವಿಲ್ಲದ ಒಳಗು - ಆಲಂಬವಿಲ್ಲದ ಹೊರಗು, ತಳವಿಲ್ಲದ ಕುಸುಮದ ಗದ್ದುಗೆ, ನೆಲನ ಹೊದ್ದದು - ಆಕಾಶವ ಮುಟ್ಟದು".... ಎಂದು ಮುಂತಾಗಿ ನಿರೂಪಿಸುತ್ತಿದೆ. ಸಂಪತ್ಸಮೃದ್ಧಿಯ ಭೌತ ಪರಿಕರಗಳಿಂದ ವಿರಚಿತವಾದ ಈ ಶೂನ್ಯ ಸಿಂಹಾಸನಕ್ಕೆ ತಳವಿಲ್ಲ, ಅಂತರವಿಲ್ಲ, ಆಲಂಬವಿಲ್ಲ, ನೆಲನ ಹೊದ್ದದು, ಆಕಾಶವ ಮುಟ್ಟದು – ಎಂಬ ವರ್ಣನೆಯಲ್ಲಿ ಅದ್ಭುತವಾದ ಕಲ್ಪಕತೆಯಿದೆ. ಶೂನ್ಯ ಸಿಂಹಾಸನದಲ್ಲಿ ಮೂರ್ತಿಗೊಂಡಿರುವ ಪ್ರಭುದೇವರು ಮುಂದೆ ಆರೋಗಣೆಯ ಸಂದರ್ಭದಲ್ಲಿ ಈ ಶೂನ್ಯ ಸಿಂಹಾಸನವು ಗಿರಗಿರ ಸುತ್ತುವುದನ್ನು (=ಶೂನ್ಯ ಸಿಂಹಾಸನ ಬವರಿಗೊಡುತ್ತಿರೆ) ಪ್ರಸ್ತಾಪಿಸಿದ್ದಾರೆ. ನಿರಹಂಕಾರ ಶಿಖರದ ನಿಲುವಿನಂತೆ ತೋರುತ್ತಿರುವ ಪ್ರಭುದೇವರ ಶೂನ್ಯ ಸಿಂಹಾಸನಾರೋಹಣವು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಒಂದು ಇಂದ್ರಜಾಲ - ಮಹೇಂದ್ರಜಾಲದಂತೆ ತೋರುತ್ತದೆ.

> ಅರಿವೆ ಗಿರಣಿಯೊಂದರಲ್ಲಿ ಕೆಲಸ ಮಾಡುವ ಕಾರ್ಮಿಕನು ಕೇವಲ ಹತ್ತಿ ಬಟ್ಟೆಗಳನ್ನಷ್ಟೆ ಉತ್ಪಾದಿಸುತ್ತಾನೆಯೆ? ಇಲ್ಲ, ಅವನು ಬಂಡವಾಳವನ್ನು ಉತ್ಪಾದಿಸುತ್ತಾನೆ. ಅವನು ಮೌಲ್ಯಗಳನ್ನು ಉತ್ಪಾದಿಸುತ್ತಾನೆ. ಅವು ಅವನ ಶ್ರಮವನ್ನು ಮತ್ತೆ ಕೊಂಡುಕೊಳ್ಳಲು ಮತ್ತು ಅದರ ಮೂಲಕ ಹೊಸ ಮೌಲ್ಯಗಳನ್ನು ಸೃಜಿಸಲು ನೆರವಾಗುತ್ತವೆ.
>
> - ಕಾರ್ಲ್ ಮಾರ್ಕ್ಸ್

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ವಿಕಟರೂಪದ 'ಅತ್ಯಂತ ಮಲಿನ' ಅಲ್ಲಮನು ಎಲ್ಲರೂ ಬೆರಗಾಗುವಂತೆ, ತಳವಿಲ್ಲದ ಗದ್ದುಗೆಯಲ್ಲಿ ಕುಳಿತು, ಗಿರಗಿರನೆ ಸುತ್ತುವ ಶೂನ್ಯಸಿಂಹಾಸನವನ್ನು ಆರೋಹಣ ಮಾಡಿರುವುದು. "ಅತ್ಯಂತ ಮಲಿನ ಕೂಡಲಸಂಗಮ ದೇವರ ಸುಳುಹು ವಿಪರೀತ" – ಎಂಬ ಶೂನ್ಯಸಂಪಾದನೆಯ ನುಡಿಮುತ್ತು ಗಮನಾರ್ಹವಾಗಿದೆ. ಇಲ್ಲಿ ಸಹೃದಯರಿಗೆ ಅಂತರ್ ಪಠ್ಯಗಳಾಗಿ ಮರುಳುಶಂಕರದೇವ, ಮಂಟೇಸ್ವಾಮಿ, ತಿಕ್ಕಶಂಕರಯ್ಯ, ಎಳ್ರಿತಾತ ಮುಂತಾದವರೆಲ್ಲರೂ ಪರಸ್ಪರ ಬೆರೆತುಹೋದ ಅಥವಾ ಕೂಡಲಸಂಗಮದೇವರಾಗುವ 'ದರ್ಶನ'ವಿದೆ.

ಅಲ್ಲಮನ ವಿಕಟರೂಪವನ್ನು ಒಂದು ಕಪಟವೇಷವನ್ನಾಗಿ ಗ್ರಹಿಸಬಾರದು. ವೃದ್ಧರು, ಬಾಲರು, ಅಶಕ್ತರು, ರೋಗಿಗಳು, ಗಾಯಾಳುಗಳು, ಹುಚ್ಚರು, ದೀನಮಾನವರು - ಇವರೆಲ್ಲರ ನೈಜ ನೆನಪುಗಳನ್ನು ಹೃದಯಸ್ಥ ಮಾಡಿಕೊಂಡ ಒಂದು ಮೂರ್ತರೂಪವನ್ನಾಗಿ ಪ್ರಭುದೇವರನ್ನು ಪರಿಭಾವಿಸಬೇಕಾಗುತ್ತದೆ. ಇದನ್ನು ಅರಿಯದ ವ್ಯವಸ್ಥೆಯ ವಿಕಟ ನೃತ್ಯವೇ ಬೇಂದ್ರೆ ವಿರಚಿತ 'ಕುರುಡು ಕಾಂಚಾಣಾ' ಎನ್ನಬಹುದು. ಈ ದೃಷ್ಟಿಯಿಂದ ನೋಡಿದರೆ ಕುಷ್ಠರೋಗವಿರುವುದು 'ಅತ್ಯಂತ ಮಲಿನ' ಮಂಟೇಸ್ವಾಮಿಗಲ್ಲ! ಪ್ರಭುವಿನ ಶೂನ್ಯ ಸಿಂಹಾಸನಾರೋಹಣದಿಂದ ರೊಚ್ಚಿಗೆದ್ದು ಹೊರಟು ಹೋಗುವ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ, ಅವರು ಪ್ರತಿನಿಧಿಸುವ ವ್ಯವಸ್ಥೆಗೆ ಕುಷ್ಠ ಬಡಿದಿದೆ. ಆದ್ದರಿಂದ ಇದನ್ನೆಲ್ಲ ಧ್ವನಿಸುತ್ತಿರುವ ಶೂನ್ಯ ಸಿಂಹಾಸನಾರೋಹಣವು ಪ್ರಾಚೀನ ಪ್ರಸಂಗವಲ್ಲ. "ಇದು ನಿಚ್ಚಂ ಪೊಸತು".... ಎಂಬುದನ್ನು ಮರೆಯಬಾರದು. ರಾಜಪೀಠ ಮತ್ತು ಧರ್ಮಪೀಠಗಳಲ್ಲಿ ವಿರಾಜಮಾನರಾಗಿರುವ ಸಿಂಹಾಸನಾಧೀಶ್ವರರುಗಳಿಗೆ ಪ್ರಭುವಿನ 'ಶೂನ್ಯಪೀಠ'ದ ಆರೋಹಣವು ನಿಜದ ಸೂಜಿಮೊನೆಯಾಗಿದೆ. ಕುವೆಂಪು ಮಾತಿನಲ್ಲಿ ಹೇಳುವುದಾದರೆ - ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ಮೂಲಕ ಈ ಯುಗದ ಸಾಮಾಜಿಕ ದರ್ಶನವಾಗಿ ಹೊರಹೊಮ್ಮಿದ "ದರಿದ್ರದೇವೋ ಭವ"ದ ಮುನ್ನೋಟವನ್ನೂ ಒದಗಿಸುತ್ತದೆ. ಪ್ರಾಚೀನ ಸಾಹಿತ್ಯಕೃತಿಯೊಂದರಲ್ಲಿ 'ಸಾಧ್ಯ'ವಾಗಬಹುದಾದ ಅರಿವಿನ ವ್ಯಾಖ್ಯಾನಗಳು ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ (ಕುರುಹುಗಳನ್ನು ಮೀರಿದಂತೆ) ಇನ್ನೂ ಬಗೆ ಬಗೆಯಾಗಿ ಅರಳಿಕೊಳ್ಳಬೇಕು. ಈ ದಿಸೆಯಲ್ಲಿ ಇದೊಂದು ಕಿರು ಪ್ರಯತ್ನ.

ಎ. ಚಂದ್ರಶೇಖರ ನಂಗಲಿ
೩೮೮, ಪಿ. ಸಿ. ಬಡಾವಣೆ
ಕೋಲಾರ - ೫೬೩ ೧೦೧

# "ನಾಪತ್ತೆಯಾದ" ಸ್ತ್ರೀಯರ ರಹಸ್ಯ



ಜನಗಣತಿಯಲ್ಲಿ ಸ್ತ್ರೀ ಪುರುಷರ ಸಂಖ್ಯೆ ಸರಿಸಮಾನವಾಗಿರುತ್ತದೆ ಎಂಬುದು ಸಾಮಾನ್ಯ ನಂಬಿಕೆ. ಆದರೆ ಅಮೆರಿಕಾ ಮತ್ತು ಯೂರೋಪ್‌ಗಳಂತಹ ಮುಂದುವರಿದ ದೇಶಗಳಲ್ಲಿ ಪುರುಷರಿಗಿಂತ ಸ್ತ್ರೀಯರ ಪ್ರಮಾಣ ಅಧಿಕವಾಗಿದ್ದರೆ, ಭಾರತ, ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸ್ತ್ರೀಯರ ಸಂಖ್ಯೆ ಪುರುಷರದಕ್ಕಿಂತ ಕಡಿಮೆ ಇದೆ !

ಪ್ರತಿ ೧೦೦೦ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆಯನ್ನು 'ಲಿಂಗ ಪ್ರಮಾಣ' ಎಂದು ಪಾರಿಭಾಷಿಕವಾಗಿ ಗುರುತಿಸಲಾಗುತ್ತಿದೆ. ಪ್ರಪಂಚದ ವಿವಿಧ ದೇಶಗಳಲ್ಲಿ ಮತ್ತು ಒಂದೇ ದೇಶದ ಬೇರೆ ಬೇರೆ ಪ್ರದೇಶಗಳಲ್ಲಿ 'ಲಿಂಗ ಪ್ರಮಾಣ' ಹೆಚ್ಚು ಕಡಿಮೆ ಇರುವುದು ಕಂಡುಬರುತ್ತದೆ. ಜೀವಶಾಸ್ತ್ರದ ಪ್ರಕಾರ ಪ್ರತಿ ೧೦೦ ಹೆಣ್ಣುಮಕ್ಕಳಿಗೆ ೧೦೫ ಅಥವಾ ೧೦೬ ಗಂಡು ಮಕ್ಕಳು ಜನಿಸುತ್ತಿದ್ದಾರೆ. ಜನನಕ್ಕೆ ಸಂಬಂಧಿಸಿದ ಮಟ್ಟಿಗೆ ಈ ಪ್ರಮಾಣ ಎಲ್ಲ ದೇಶಗಳಲ್ಲೂ ಕಂಡುಬರುತ್ತದೆ. ಆದರೆ ಈ ಮಕ್ಕಳು ಬೆಳೆದು ದೊಡ್ಡವರಾಗುವ ವೇಳೆಗೆ ಮೇಲಿನ ಪ್ರಮಾಣ ಕೆಲವು ದೇಶಗಳಲ್ಲಿ ತಲೆಕೆಳಗಾಗುತ್ತದೆ. ಯೂರೋಪು ಮತ್ತು ಉತ್ತರ ಅಮೆರಿಕಗಳಲ್ಲಿ ಪ್ರತಿ ೧೦೦ ಪುರುಷರಿಗೆ ೧೦೫ ಸ್ತ್ರೀಯರು ಇದ್ದಾರೆ. ಆಗ್ನೇಯ ಏಶಿಯಾದಲ್ಲಿ, ಚೀನಾ ಬಿಟ್ಟು ಉಳಿದ ಪೂರ್ವ ಏಶಿಯಾ ಪ್ರದೇಶಗಳಲ್ಲೂ ಸಹ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಅಧಿಕವಾಗಿಯೇ ಇದೆ. ಈ ಪ್ರದೇಶಗಳಲ್ಲಿ ಪ್ರತಿ ೧೦೦ ಪುರುಷರಿಗೆ ೧೦೧ರವರೆಗೆ ಸ್ತ್ರೀಯರಿದ್ದಾರೆ. ದಕ್ಷಿಣ ಏಶಿಯಾದ ಪಾಕಿಸ್ತಾನ, ಭಾರತ ಮತ್ತು ಬಾಂಗ್ಲಾದೇಶದಲ್ಲಿ ಪ್ರತಿ ೧೦೦ ಪುರುಷರಿಗೆ ೯೦ರಿಂದ ೯೪ರವರೆಗೆ ಮಾತ್ರ ಸ್ತ್ರೀಯರ ಸಂಖ್ಯೆ ಇದೆ. ಭಾರತ ದೇಶದಲ್ಲಿ ೧೯೯೧ರ ಜನಗಣತಿ ಪ್ರಕಾರ ಪ್ರತಿ ೧೦೦ ಪುರುಷರಿಗೆ ೯೩ ಸ್ತ್ರೀಯರಿದ್ದಾರೆ. ದೇಶದೊಳಗಿನ ಬೇರೆ ಬೇರೆ ರಾಜ್ಯಗಳಲ್ಲಿ 'ಲಿಂಗ ಪ್ರಮಾಣ'ದ ವ್ಯತ್ಯಾಸಗಳು ಇದಕ್ಕಿಂತಲೂ ಅಧಿಕವಾಗಿವೆ. ಪಂಜಾಬ್ ಮತ್ತು ಹರಿಯಾಣ ರಾಜ್ಯಗಳು ನಮ್ಮ ದೇಶದ ಸಂಪದ್ಭರಿತ ರಾಜ್ಯಗಳು. ಆದರೆ ಅಲ್ಲಿಯ ಸ್ತ್ರೀಯರ ಸಂಖ್ಯೆ ದೇಶದ ಸರಾಸರಿಗಿಂತ ಕಡಿಮೆ ಇದೆ. ಪ್ರತಿ ೧೦೦ ಪುರುಷರಿಗೆ ಹರ್ಯಾಣದಲ್ಲಿ ೮೭ ಮತ್ತು ಪಂಜಾಬ್‌ನಲ್ಲಿ ೮೮ ಮಂದಿ ಮಾತ್ರ ಸ್ತ್ರೀಯರಿದ್ದಾರೆ. ಇವುಗಳಿಗಿಂತ ಬಡರಾಜ್ಯವಾದ ಕೇರಳದಲ್ಲಿ ೧೦೦ ಪುರುಷರಿಗೆ ೧೦೩ರವರೆಗೂ ಸ್ತ್ರೀಯರಿದ್ದಾರೆ. ಈ ಪ್ರಮಾಣ ಉತ್ತರ ಅಮೆರಿಕ ಮತ್ತು ಜಪಾನ್‌ಗಳ ಪ್ರಮಾಣಕ್ಕೆ ಸಮೀಪವಾಗಿದೆ.

ವಿಶ್ವಸಂಸ್ಥೆ, ಅದರ ಅಂಗ ಸಂಸ್ಥೆಗಳು, ವಿಶ್ವಬ್ಯಾಂಕ್ ಮತ್ತು ಜನಗಣತಿ ಲೆಕ್ಕಗಳ ಆಧಾರದ ಮೇಲೆ ಸ್ತ್ರೀಯರ ಸಂಖ್ಯೆ ಇರಬೇಕಾದ್ದಕ್ಕಿಂತ ಎಷ್ಟು ಕಡಿಮೆ ಇದೆ ಮತ್ತು ಈ ರೀತಿ ಕಡಿಮೆ ಇರಲು ಇರಬಹುದಾದ ಕಾರಣವೇನು ಎಂದು ತಿಳಿಯಲು ೧೯೮೬ರಲ್ಲಿ ಪ್ರೊ॥ ಅಮರ್ತ್ಯ ಸೇನ್ ಅಧ್ಯಯನ ಮಾಡಿದರು (ನೋಡಿ : ಕೋಷ್ಟಕ ೧). ಪ್ರೊ॥ ಸೇನ್ ಅವರ ಅಂದಾಜಿನ ಪ್ರಕಾರ ಯೂರೋಪು ಮತ್ತು ಉತ್ತರ ಅಮೆರಿಕಗಳಲ್ಲಿ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಅಧಿಕವಾಗಿದೆ. ಸಬ್‌ಸಹರನ್ ಆಫ್ರಿಕ, ಆಗ್ನೇಶಿಯಾ, ಲ್ಯಾಟಿನ್ ಅಮೆರಿಕಗಳಲ್ಲಿ ಸ್ತ್ರೀ ಪುರುಷರ ಪ್ರಮಾಣ ಸಮಾನವಾಗಿದೆ. ವಿಶ್ವದ ಇತರ ಭಾಗಗಳಲ್ಲಿ ಪುರುಷರ ಸಂಖ್ಯೆಗಿಂತ ಸ್ತ್ರೀಯರ ಸಂಖ್ಯೆ ಕಡಿಮೆ ಇದೆ. ಒಂದು ದೇಶದಲ್ಲಿ ಅಥವಾ ಪ್ರದೇಶದಲ್ಲಿ ಪ್ರತಿ ೧೦೦ ಪುರುಷರಿಗೆ ೯೪ ಸ್ತ್ರೀಯರಿದ್ದಾರೆ ಎಂದರೆ ಪುರುಷರ ಪ್ರಮಾಣಕ್ಕಿಂತ ಸ್ತ್ರೀಯರ ಪ್ರಮಾಣ ಶೇ. ೬ ಕಡಿಮೆ ಎಂದು

ಪ್ರೊ॥ ಬಿ. ಎ. ವೀರಭದ್ರಪ್ಪ

**ಕೋಷ್ಟಕ-೧**

ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಪ್ರಮಾಣ : 'ನಾಪತ್ತೆ'ಯಾದ ಸ್ತ್ರೀಯರ ಅಂದಾಜು : ೧೯೮೬

| ಪ್ರದೇಶ | ಪ್ರತಿ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ | ಪ್ರತಿ ಸಾವಿರ ಪುರುಷರಿಗೆ ೧೦೨೨ ಸ್ತ್ರೀಯರಿರಬೇಕಾದುದು ಉಚಿತ ಎಂದು ಅಂದಾಜು ಮಾಡಲಾಗಿದೆ. ಇರಬೇಕಾದುದಕ್ಕಿಂತ ಕಡಿಮೆ ಇರುವ ಸ್ತ್ರೀಯರ ಸಂಖ್ಯೆ | |
|---|---|---|---|
| | | 'ನಾಪತ್ತೆ'ಯಾಗಿರುವ ಸ್ತ್ರೀಯರ ಸಂಖ್ಯೆ (ಲಕ್ಷಗಳಲ್ಲಿ) | ಆ ಪ್ರದೇಶದ ಸ್ತ್ರೀಯರಲ್ಲಿ ನಾಪತ್ತೆಯಾದವರ ಶೇಕಡಾವಾರು |
| ಯೂರೋಪ್ | ೧೦೫೦ | | |
| ಉತ್ತರ ಅಮೆರಿಕ | ೧೦೪೭ | | |
| ಸಬ್‌ಸಹರನ್ ಆಫ್ರಿಕಾ | ೧೦೨೨ | | |
| ಆಗ್ನೇಯ ಏಶಿಯಾ | ೧೦೧೦ | ೨೪ | ೧.೨ |
| ಲ್ಯಾಟಿನ್ ಅಮೆರಿಕಾ | ೧೦೦೦ | ೪೪ | ೨.೨ |
| ಉತ್ತರ ಆಫ್ರಿಕಾ | ೯೮೪ | ೨೪ | ೩.೯ |
| ಪಶ್ಚಿಮ ಆಫ್ರಿಕಾ | ೯೪೮ | ೪೩ | ೭.೮ |
| ಇರಾನ್ | ೯೪೭ | ೧೪ | ೮.೫ |
| ಚೈನಾ | ೯೪೧ | ೪೪೦ | ೮.೬ |
| ಬಾಂಗ್ಲಾದೇಶ | ೯೪೦ | ೩.೭ | ೮.೭ |
| ಭಾರತ | ೯೩೩ | ೩೬.೯ | ೯.೫ |
| ಪಾಕಿಸ್ತಾನ | ೯೦೫ | ೫೨ | ೧೨.೯ |

– ಜೀನ್ ಡ್ರೀಜ್ ಮತ್ತು ಅಮರ್ತ್ಯ ಸೇನ್ ರಚಿಸಿದ 'ಹಂಗರ್ ಅಂಡ್ ಪಬ್ಲಿಕ್ ಆ್ಯಕ್ಷನ್' (೧೯೮೯) ಕೃತಿಯಿಂದ.

ಗೊತ್ತಾಗುತ್ತದೆ. ಅಭಿವೃದ್ಧಿಹೊಂದಿದ ಉತ್ತರ ಅಮೆರಿಕ ಮತ್ತು ಯೂರೋಪ್ ದೇಶಗಳಲ್ಲಿಯಂತೆ ಎಲ್ಲ ದೇಶಗಳಲ್ಲೂ ಪ್ರತಿ ೧೦೦ ಪುರುಷರಿಗೆ ೧೦೫ರಷ್ಟು ಸ್ತ್ರೀಯರು ಇರಬೇಕೆಂಬ ಲೆಕ್ಕದ ಮೇಲೆ ಅಂದಾಜು ಮಾಡಿದರೆ ಸ್ತ್ರೀಯರ ಪ್ರಮಾಣ ಇನ್ನೂ ಶೇ. ೫ರಷ್ಟು ಕಡಿಮೆಯಾದಂತೆ ಕಂಡುಬರುತ್ತದೆ. ಈ ಸೂತ್ರದ ಪ್ರಕಾರ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸ್ತ್ರೀಯರ ಪ್ರಮಾಣ ಪುರುಷರ ಪ್ರಮಾಣಕ್ಕಿಂತ ಶೇ. ೧೧ರಷ್ಟು ಕಡಿಮೆ ಎಂದು ತಿಳಿಯಬೇಕಾಗುತ್ತದೆ. ಈ ಕ್ರಮದಲ್ಲಿ ಲೆಕ್ಕ ಹಾಕಿದರೆ ಚೀನಾ ದೇಶವೊಂದರಲ್ಲೇ ಐದು ಕೋಟಿ ಸ್ತ್ರೀಯರ ಸಂಖ್ಯೆ ಕಡಿಮೆಯಾದಂತೆ ಕಂಡುಬರುತ್ತದೆ. ದಕ್ಷಿಣ ಏಶಿಯಾ, ಪಶ್ಚಿಮ ಏಶಿಯಾ, ಉತ್ತರ ಆಫ್ರಿಕಾಗಳಲ್ಲಿ ಸಹ ಕಡಿಮೆಯಾದ ಸ್ತ್ರೀಯರ ಸಂಖ್ಯೆ ಕಡಿಮೆಯಾದ ಚೀನಾ ಸ್ತ್ರೀಯರ ಸಂಖ್ಯೆಯೊಡನೆ ಸೇರಿಸಿದರೆ ಸುಮಾರು ಹತ್ತು ಕೋಟಿ ಸ್ತ್ರೀಯರು ಕಾಣದಿರುವುದು ನಮ್ಮ ಗಮನ ಸೆಳೆಯುತ್ತದೆ ! ಕಣ್ಣಿಗೆ ಕಾಣದ ಈ ಸ್ತ್ರೀಯರನ್ನು ಪ್ರೊ॥ ಸೇನ್ ''ನಾಪತ್ತೆಯಾದ'' (ಮಿಸ್ಸಿಂಗ್) ಸ್ತ್ರೀಯರೆಂದು ಕರೆಯುತ್ತಾರೆ. ಇವರೆಲ್ಲಾ ಎಲ್ಲಿ ಹೋದರು? ಅದರ ಹಿಂದಿನ ರಹಸ್ಯವೇನು ?

ಪುರುಷರಿಗಿಂತ ಸ್ತ್ರೀಯರಿಗೆ ಕಷ್ಟ ಸಹಿಷ್ಣುತಾ ಶಕ್ತಿ ಅಧಿಕವಾಗಿರುತ್ತದೆ ಎಂದು ಜೀವಶಾಸ್ತ್ರ ಹೇಳುತ್ತದೆ. ಪುರುಷರಿಗೆ ಸಮಾನವಾದ ಪೋಷಣೆ, ಆರೋಗ್ಯ ರಕ್ಷಣೆ, ಇತರ ಜೀವನ ಸೌಲಭ್ಯಗಳು ಸ್ತ್ರೀಯರಿಗೆ ದೊರೆತರೆ ಅವರು ಹೆಚ್ಚು ಕಾಲ ಜೀವಿಸುವ ಅವಕಾಶವಿರುತ್ತದೆ.

> ಯಜ್ಞಯಾಗಾದಿ ಕ್ರಿಯೆಗಳನ್ನು ಮಾಡುವವನು ಅಪೇಕ್ಷಿಸುವ ಪ್ರಾಪಂಚಿಕ ವಸ್ತುಗಳ ಮೇಲೆ ನಮ್ಮ ದೇವತೆಗಳಿಗೆ ನಿಜವಾದ ಯಜಮಾನಿಕೆಯೇನೂ ಇಲ್ಲದಿರುವುದರಿಂದಲೂ ಅಪೇಕ್ಷಿತ ವಸ್ತುಗಳನ್ನು ಮತ್ತು ಕ್ರಿಯೆ ಮಾಡುವವನನ್ನು ಪರಸ್ಪರ ಸಂಬಂಧ ಗೊಳಿಸುವುದಕ್ಕೆ ಅವರಿಗೆ ಮಾರ್ಗವೇನೂ ಇಲ್ಲದಿರುವುದರಿಂದಲೂ ಅಪೇಕ್ಷಿತ ಫಲಗಳನ್ನು ನೀಡುವ ಶಕ್ತಿ ದೇವತೆಗಳಿಗೆ ಇರುವುದಿಲ್ಲ....
>
> *ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ*

ಪುರುಷರಿಗಿಂತ ಇವರಿಗೆ ರೋಗ ನಿಗ್ರಹಶಕ್ತಿ ಹೆಚ್ಚು; ಒತ್ತಡಗಳಿಗೆ ತಟ್ಟಿಕೊಳ್ಳುವ ಶಕ್ತಿಯೂ ಅಧಿಕವಾಗಿರುತ್ತದೆ. ಮಕ್ಕಳನ್ನು ಹೆರುವ ಕಾಲ ಮುಗಿದ ನಂತರ ಮಾತ್ರವಲ್ಲ, ತಾಯ ಗರ್ಭದಲ್ಲಿರುವಾಗಲೂ (ಭ್ರೂಣಾವಸ್ಥೆಯಲ್ಲೂ) ಇವರು ಗಂಡು ಮಕ್ಕಳಿಗಿಂತ ಗಟ್ಟಿ ಜೀವಿಗಳು. ಅಪ್ರಯತ್ನವಾಗಿ ಸಂಭವಿಸುವ ಗರ್ಭಸ್ರಾವಗಳಲ್ಲಿ ಹೆಚ್ಚು ಭಾಗ ಪುರುಷ ಭ್ರೂಣಗಳಿಗೆ ಸಂಭವಿಸಿದವಾಗಿರುತ್ತವೆ ಎಂದು ತಜ್ಞ ವೈದ್ಯರು ಅಭಿಪ್ರಾಯಪಡುತ್ತಾರೆ. ಹುಟ್ಟುವಾಗ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳ ಸಂಖ್ಯೆ ಹೆಚ್ಚಾಗಿರುತ್ತದೆ. ಪ್ರತಿ ನೂರು ಮಂದಿ ಹೆಣ್ಣು ಮಕ್ಕಳಿಗೆ ಸರಾಸರಿ ೧೦೫-೧೦೬ ಗಂಡು ಮಕ್ಕಳು ಹುಟ್ಟುತ್ತಾರೆ ಎಂದು ಜನಗಣತಿ ಲೆಕ್ಕಗಳು ತಿಳಿಸುತ್ತವೆ. ಆದರೂ ಕೆಲವು ದೇಶಗಳಲ್ಲಿ ಪುರುಷರ ಪ್ರಮಾಣಕ್ಕಿಂತ ಸ್ತ್ರೀಯರ ಪ್ರಮಾಣ ಅಧಿಕವಾಗಿರುವುದು ಅವರ ಜೀವಶಕ್ತಿಗೆ ನಿದರ್ಶನವಾಗಿದೆ.

ಇಷ್ಟು ಜೀವಧಾರಣ ಶಕ್ತಿಯನ್ನುಳ್ಳ ಸ್ತ್ರೀಯರು ಕೆಲವು ಭಾಗಗಳಲ್ಲಿ ಪುರುಷರಿಗಿಂತ ಕಡಿಮೆ ಸಂಖ್ಯೆಯಲ್ಲಿರಲು ಕಾರಣವೇನು ? ಅವರ ಮರಣ ಪ್ರಮಾಣ ಪುರುಷರ ಪ್ರಮಾಣಕ್ಕಿಂತ ಹೆಚ್ಚಾಗಿರುವುದೇ ಇದಕ್ಕೆ ಕಾರಣವೆಂದು ಜನಗಣತಿ ಲೆಕ್ಕಗಳು ತೋರಿಸುತ್ತವೆ. ಜನಿಸಿದಾಗಿನಿಂದ ಮುಟ್ಟು ನಿಲ್ಲುವವರೆಗೆ, ಅದೇ ವಯಸ್ಸಿನ ಪುರುಷರ ಮರಣಕ್ಕಿಂತ ಸ್ತ್ರೀಯರ ಮರಣ ಪ್ರಮಾಣ ಅಧಿಕವಾಗಿರುತ್ತದೆ. ಪುರುಷರಿಗೆ ಸಮಾನವಾದ ಪೋಷಣೆ, ಆರೋಗ್ಯ ರಕ್ಷಣೆ ಮತ್ತು ಇತರ ಸೌಕರ್ಯಗಳು ಸ್ತ್ರೀಯರಿಗೆ ಲಭಿಸದೇಹೋಗುವುದರಿಂದ ಅವರು ಅಕಾಲ ಮರಣಕ್ಕೀಡಾಗುತ್ತಾರೆಂಬ ತೀರ್ಮಾನಕ್ಕೆ ಪ್ರೊ॥ ಸೇನ್ ಬರುತ್ತಾರೆ. ಸ್ತ್ರೀಯರು ಭಯಂಕರವಾದ ಲಿಂಗತಾರತಮ್ಯಕ್ಕೆ, ತೀವ್ರವಾದ ಅನಾದರಣೆಗೆ ಒಳಗಾಗುವುದನ್ನು ಅವರು ವಿಶದಪಡಿಸಿದ್ದಾರೆ.

**ಭಾರತದಲ್ಲಿ**: ದಕ್ಷಿಣ ಏಶಿಯಾದಲ್ಲಿ 'ಲಿಂಗ ಪ್ರಮಾಣ' ಕಡಿಮೆ ಇರುವ ದೇಶಗಳಲ್ಲಿ 'ಮಾತೃದೇವೋ ಭವ' ಎಂದು ಭಾವಿಸುವ ಭಾರತವೂ ಒಂದು. ಇಲ್ಲಿ ಸರಾಸರಿ ೧೦೦ ಪುರುಷರಿಗೆ ೯೩ ಮಂದಿ ಮಾತ್ರ ಸ್ತ್ರೀಯರಿದ್ದಾರೆ ಎಂದು ೧೯೯೧ರ ಜನಗಣತಿ ಲೆಕ್ಕಗಳು

ತಿಳಿಸುತ್ತವೆ. ಭಾರತಕ್ಕೆ ಸಂಬಂಧಿಸಿದ ಈ ಸಮಸ್ಯೆಯನ್ನು ಜೀನ್ ಡ್ರೇಜ್ ಮತ್ತು ಅಮರ್ತ್ಯ ಸೇನ್ ಅವರು ತಮ್ಮ ''ಇಂಡಿಯಾ : ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಅವಕಾಶ'' ಎಂಬ ಕೃತಿಯಲ್ಲಿ ವಿಶದವಾಗಿ ಪರಿಶೀಲಿಸಿದ್ದಾರೆ. ಅವರ ಪರಿಶೀಲನೆಯಲ್ಲಿ ಗಮನಾರ್ಹವಾದ ಕೆಲವು ಅಂಶಗಳನ್ನು ಮುಂದೆ ನೋಡಬಹುದು.

'ಮಾತೃದೇವೋ ಭವ' ಎಂಬ ಮಂತ್ರವನ್ನು ಉದ್ಘೋಷಿಸುವ ನಮ್ಮ ಭಾರತ ದೇಶದಲ್ಲಿ ಪುರುಷನೊಡನೆ ಸಮಾನವಾದ ಸ್ಥಾನ ಸ್ತ್ರೀಗೆ ಇಲ್ಲ. ವಿದ್ಯೆ ಮತ್ತು ಸೃಜನಾತ್ಮಕ ಶಕ್ತಿಗಳನ್ನು ಬೆಳೆಸುವ ದಿಕ್ಕಿನಲ್ಲಿ ಮಾತ್ರವಲ್ಲ; ಪೋಷಣೆ, ಆರೋಗ್ಯ ರಕ್ಷಣೆಯಂತಹ ಅತಿ ಮುಖ್ಯವಾದವುಗಳಲ್ಲೂ ಮೂಲಭೂತ ಅಗತ್ಯವಾದ ಸಮಾನತೆ ಲೋಪಗೊಂಡಿದೆ.

ಅಭಿವೃದ್ಧಿಹೊಂದಿದ ದೇಶಗಳೊಡನೆ ಹೋಲಿಸಿದರೆ ನಮ್ಮ ದೇಶದ 'ಲಿಂಗ ಪ್ರಮಾಣ' ತೀರ ಕಡಿಮೆ ಇದೆ. ಪಕ್ಕದ ಪಾಕಿಸ್ತಾನದ ಪರಿಸ್ಥಿತಿ ನಮ್ಮ ದೇಶಕ್ಕಿಂತ ಹೀನಾಯವಾಗಿದೆ. ಅಲ್ಲಿ ಪ್ರತಿ ನೂರು ಪುರುಷರಿಗೆ ೯೧ ಮಂದಿ ಮಾತ್ರ ಸ್ತ್ರೀಯರಿದ್ದಾರೆ. ನಮ್ಮ ದೇಶದೊಳಗಿನ ವಿವಿಧ ರಾಜ್ಯಗಳಲ್ಲಿನ ಸ್ತ್ರೀ ಪುರುಷ ಪ್ರಮಾಣಗಳಲ್ಲೂ ಭೇದಗಳಿವೆ. ಆರ್ಯಾವರ್ತವೆಂದು ಕರೆಯಲಾದ ಉತ್ತರ ಭಾರತದ ಅಧಿಕ ಪ್ರದೇಶಗಳಲ್ಲಿ 'ಲಿಂಗ ಪ್ರಮಾಣ' ತುಂಬಾ ಕಡಿಮೆ ಇದೆ. ಪ್ರತಿ ನೂರು ಪುರುಷರಿಗೆ ಹರ್ಯಾಣದಲ್ಲಿ ೮೭ ಮಂದಿ, ಪಂಜಾಬಿನಲ್ಲಿ ೮೮ ಮಂದಿ, ರಾಜಾಸ್ತಾನದಲ್ಲಿ ೯೧ ಮಂದಿ ಮಾತ್ರ ಸ್ತ್ರೀಯರಿದ್ದಾರೆ. ದ್ರಾವಿಡ ದೇಶವೆಂದು ಕರೆಯಲಾದ ದಕ್ಷಿಣ ಭಾರತದಲ್ಲಿ ಪರಿಸ್ಥಿತಿ ಮೇಲಿನಷ್ಟು ಅತಿ ದಾರುಣವಾಗಿಲ್ಲ. ತಮಿಳುನಾಡು, ಆಂಧ್ರ ಪ್ರದೇಶಗಳಲ್ಲಿ ೯೭ ಮಂದಿ, ಕರ್ನಾಟಕದಲ್ಲಿ ೯೬ ಮಂದಿ ಸ್ತ್ರೀಯರಿದ್ದಾರೆ. ಕೇರಳದಲ್ಲಿ ಮಾತ್ರ ಯೂರೋಪ್ , ಮತ್ತು ಉತ್ತರ ಅಮೆರಿಕಾಗಳಲ್ಲಿರುವಂತೆ ೧೦೪ ರಿಂದ ೧೦೫ ಮಂದಿ ಸ್ತ್ರೀಯರಿದ್ದಾರೆ. ಭಾರತದ ಬೇರಾವ ರಾಜ್ಯದಲ್ಲೂ ಈ ಪ್ರಮಾಣದಲ್ಲಿ ಸ್ತ್ರೀಯರಿಲ್ಲ. ಇದರಿಂದ ನಮ್ಮ ದೇಶದಲ್ಲಿ ರೂಢಿಯಲ್ಲಿರುವ ಲಿಂಗ ತಾರತಮ್ಯ ಎಷ್ಟು ತೀವ್ರವಾಗಿದೆ ಎಂಬುದನ್ನು ಊಹಿಸ ಬಹುದು. ಈ ಪರಿಸ್ಥಿತಿ ಎಲ್ಲಾ ರಾಜ್ಯಗಳಲ್ಲೂ ಒಂದೇ ರೀತಿ ಇಲ್ಲ. ಭಾರತದ ವಾಯವ್ಯ ರಾಜ್ಯಗಳಲ್ಲಿ ಲಿಂಗತಾರತಮ್ಯ ತೀವ್ರ ಸ್ಥಾಯಿಯಲ್ಲಿರುವಂತೆ ಅಲ್ಲಿಯ ಸ್ತ್ರೀ ಪುರುಷರ ಜನಗಣತಿ ತಿಳಿಸುತ್ತದೆ. ಸ್ತ್ರೀಯರನ್ನು ಪುರುಷರೊಡನೆ ಬೆರೆಯಲು ಬಿಡದಿರುವುದು, ಕೆಲಸ ಕಾರ್ಯಗಳಲ್ಲಿ ಸ್ತ್ರೀಯರನ್ನು ಹೆಚ್ಚಾಗಿ ಪಾಲ್ಗೊಳ್ಳದಂತೆ ತಡೆಯುವುದು, ಸಾಕ್ಷರತೆಯಲ್ಲಿ ವಿಶೇಷ ವ್ಯತ್ಯಾಸವಿರುವುದು, ಆಸ್ತಿ ಹಕ್ಕುಗಳು ಸ್ತ್ರೀಯರಿಗೆ ನೆಪಮಾತ್ರಕ್ಕೆ ಇರುವುದು, ಹೆರಿಗೆಯಲ್ಲಿ ಗಂಡು ಮಕ್ಕಳಿಗೆ ಪ್ರಾಧಾನ್ಯತೆ ನೀಡುವುದು, ಹೆಣ್ಣು ಮಕ್ಕಳಿರುವೆಡೆಯಲ್ಲಿ ಅಧಿಕ ನಿರಾದರಣೆ ತೋರುವುದು, ಸ್ತ್ರೀ ಮದುವೆಯಾಗಿ ಗಂಡನ ಮನೆ ಸೇರಿದ ನಂತರ ತವರಿನವರ ಜೊತೆ ಸಂಬಂಧಗಳನ್ನು ಕಳೆದುಕೊಳ್ಳಬೇಕೆಂಬ ಕಟ್ಟುಪಾಡು ಈ ಪ್ರಾಂತಗಳಲ್ಲಿ ಅಧಿಕವಾಗಿ ಜಾರಿಯಲ್ಲಿವೆ. ಈ ಪರಿಸ್ಥಿತಿಯೊಡನೆ ಹೋಲಿಸಿದರೆ ದಕ್ಷಿಣ ಭಾರತದಲ್ಲಿರುವ ಲಿಂಗತಾರತಮ್ಯ ಅಷ್ಟು ಕಠಿಣವೆನಿಸುವುದಿಲ್ಲ. ಕೇರಳ ರಾಜ್ಯದೊಳಗಿನ ಮಹಿಳೆಯರ ಸ್ಥಾನಮಾನ ದೇಶದ ಮಿಕ್ಕೆಲ್ಲಾ ರಾಜ್ಯಗಳ ಸ್ತ್ರೀಯರ ಸ್ಥಾನಮಾನಗಳಿಗಿಂತ ಎಷ್ಟೋ ಉತ್ತಮ ವಾಗಿರುವುದು ಕಂಡುಬರುತ್ತದೆ. ಸ್ತ್ರೀಯರಲ್ಲಿ ಸಾಕ್ಷರತೆ ಅಧಿಕವಾಗಿರುವುದು, ರಾಜಕೀಯ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಸ್ತ್ರೀಯರು ಹೆಚ್ಚಾಗಿ ಪಾಲ್ಗೊಳ್ಳುವುದು, ಕೆಲವು ಜಾತಿಗಳಲ್ಲಿ ಅವರ ವಂಶಪಾರಂಪರ್ಯ ಆಸ್ತಿ ಹಕ್ಕುಗಳು ತಾಯಿಂದ ಹೆಣ್ಣು ಮಕ್ಕಳಿಗೆ ಹಾದು ಬರುವುದು ಇದಕ್ಕೆ ಕಾರಣಗಳಾಗಿ ಪರಿಗಣಿಸಬಹುದು ಎಂದು ಡ್ರೇಜ್ ಮತ್ತು ಸೇನ್‌ರು ಅಭಿಪ್ರಾಯಪಡುತ್ತಾರೆ.

ಭ್ರೂಣಾವಸ್ಥೆಯಲ್ಲಿ ಹೆಣ್ಣು ಕೂಸುಗಳನ್ನು ಸಾಯಿಸುವುದರಿಂದ ಮಾತ್ರ ಸ್ತ್ರೀ ಪುರುಷರ ಸಂಖ್ಯಾ ಪ್ರಮಾಣದಲ್ಲಿ ವ್ಯತ್ಯಾಸಗಳು ಸಂಭವಿಸುತ್ತವೆ ಎಂಬ ವಾದವನ್ನು ಅವರು ಒಪ್ಪುವುದಿಲ್ಲ. ಸ್ತ್ರೀ ಭ್ರೂಣಹತ್ಯೆ ಇಲ್ಲವೇ ಇಲ್ಲ ಎಂದೂ ಅವರು ಹೇಳುವುದಿಲ್ಲ. ಬಾಲಕರು ಮತ್ತು ಬಾಲಕಿಯರ ಮರಣದ ಪ್ರಮಾಣದಲ್ಲಿರುವ ವ್ಯತ್ಯಾಸವು ಸ್ತ್ರೀಪುರುಷ ಸಂಖ್ಯಾ ಪ್ರಮಾಣದ ವ್ಯತ್ಯಾಸಕ್ಕೆ ಒಂದು ಕಾರಣವೆಂದು ಅವರು ಹೆಸರಿಸುತ್ತಾರೆ. ಹುಟ್ಟಿದ ಒಂದು ವರ್ಷದೊಳಗೆ ಸಾಯುವ ಗಂಡು ಮತ್ತು ಹೆಣ್ಣು ಮಕ್ಕಳಲ್ಲಿ ವ್ಯತ್ಯಾಸ ತೀರ ಕಡಿಮೆ. ಹುಟ್ಟಿದ ಸಾವಿರ ಗಂಡು ಮಕ್ಕಳಲ್ಲಿ ೧೧೩ ಮಂದಿ ವರ್ಷ ತುಂಬುವುದರೊಳಗೆ ಸತ್ತರೆ, ಹೆಣ್ಣು ಮಕ್ಕಳಲ್ಲಿ ೧೧೫ ಮಂದಿ ಸಾಯುತ್ತಾರೆ. ಆದರೆ ಒಂದು ವರ್ಷದ ನಂತರ ೬೮ ಗಂಡು ಮಕ್ಕಳು ಸತ್ತರೆ ೯೧ ಹೆಣ್ಣು ಮಕ್ಕಳು ಸಾಯುತ್ತಾರೆ. ಇದರಿಂದ ಒಂದು ವರ್ಷ ತುಂಬಿದ ನಂತರವೇ ಬಾಲಕ ಮತ್ತು ಬಾಲಕಿಯರ ಸಾವಿನ ಪ್ರಮಾಣದಲ್ಲಿ ಹೆಚ್ಚು ವ್ಯತ್ಯಾಸವಾಗುತ್ತಿರುವುದು ಎದ್ದುಕಾಣುತ್ತದೆ. ಭ್ರೂಣಾವಸ್ಥೆ ಯಲ್ಲಿ ಹೆಣ್ಣು ಕೂಸನ್ನು ಸಾಯಿಸುವುದು ಇದರ ಮೇಲೆ ಪ್ರಭಾವ ಬೀರಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಗಂಡು ಮಕ್ಕಳ ಮೇಲೆ ವಿಶೇಷ ಆದರ ತೋರಿಸುತ್ತಾ, ಹೆಣ್ಣು ಮಕ್ಕಳನ್ನು ನಿರಾದರಣೆಗೆ ಈಡು ಮಾಡುತ್ತಿರುವುದೇ ಹೆಣ್ಣು ಮಕ್ಕಳ ಅಧಿಕ ಸಾವಿಗೆ ಕಾರಣವೆಂದು ಅವರು ನಿರೂಪಿಸಿದ್ದಾರೆ. ಆರೋಗ್ಯಪಾಲನೆ, ಪೋಷಣೆ, ಮಕ್ಕಳ ಇತರ ಅವಶ್ಯಕತೆಗಳ ವಿಷಯದಲ್ಲಿ ಎದ್ದುಕಾಣುವ ಲಿಂಗತಾರತಮ್ಯಗಳು ಇದಕ್ಕೆ ಕಾರಣವೆಂದು ಅವರು ತೀರ್ಮಾನಿಸುತ್ತಾರೆ. (ನೋಡಿ: ಕೋಷ್ಟಕ ೨).

'ಮಗುವಿನ ಸಾವಿನಲ್ಲಿ ಲಿಂಗಭೇದ' ಎಂಬ ಸಂಶೋಧನಾ ಪ್ರಬಂಧದಲ್ಲಿ ಮೇಲಿನ ವಿಷಯವನ್ನು ಪ್ರಸ್ತಾಪಿಸುತ್ತಾ ಸುನೀತಿ ಕಿಶೋರ್ ಹೀಗೆ ದಾಖಲಿಸಿದ್ದಾರೆ: ''ಬಾಲಕ, ಬಾಲಕಿಯರ ಮರಣ ಪ್ರಮಾಣದಲ್ಲಿ ವ್ಯತ್ಯಾಸಗಳಿವೆ ಎಂಬುದರಲ್ಲಿ ಸಂದೇಹಗಳಿಲ್ಲ. ವಿಶಾಲ ಭಾರತದಲ್ಲಿ ಹೆಣ್ಣು ಮಕ್ಕಳ ಪ್ರಾರಂಭದ ಜೀವನ ಹಂತದಲ್ಲಿ ಸಾವಿನ ಪ್ರಮಾಣ ಅದೇ ವಯಸ್ಸಿನ ಗಂಡು ಮಕ್ಕಳ ಸಾವಿನ ಪ್ರಮಾಣಕ್ಕಿಂತ ಹೆಚ್ಚಾಗಿದೆ. ಮೊದಲ ವರ್ಷಕ್ಕಿಂತ ಐದನೇ ವರ್ಷದ ಬಾಲಕಿಯರ ಸಾವಿನ ಪ್ರಮಾಣ ಅದೇ ವಯಸ್ಸಿನ ಗಂಡು ಮಕ್ಕಳ ಮರಣ ಪ್ರಮಾಣಕ್ಕಿಂತ ತುಂಬಾ ಹೆಚ್ಚಾಗಿದೆ.''

ಭಾರತದಲ್ಲಿ ಈ ವಿಷಯದಲ್ಲಿ ನಡೆದ ಕೆಲವು ಪರಿವೀಕ್ಷಣೆಗಳನ್ನು ಸುನೀತ ಅವರು ಹೆಸರಿಸಿದ್ದಾರೆ. ಪಂಜಾಬಿನಲ್ಲಿ ೧೯೬೫ ಮತ್ತು ೧೯೭೨ರಲ್ಲಿ ನಡೆದ ಪರಿವೀಕ್ಷಣೆಗಳು ಮಗುವಿಗೆ ಎದೆಹಾಲು ಬಿಡಿಸುವ ಕಾಲದಲ್ಲಿ ತಲೆದೋರುವ ಪೋಷಕಾಹಾರ ಕೊರತೆಯಿಂದ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಹೆಚ್ಚು ಬಾಧೆ ಪಡುತ್ತಾರೆಂಬುದನ್ನು ರುಜುವಾತು ಪಡಿಸಿವೆ. ವಿಶೇಷ ಪೋಷಣೆ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳಿಗೇ ಹೆಚ್ಚಾಗಿ ದೊರೆಯುತ್ತದೆ ಎಂಬುದು ಪರಿವೀಕ್ಷಣೆಯಿಂದ ಸ್ಪಷ್ಟವಾಗಿದೆ.

ಪೋಷಣೆಯಲ್ಲಿ ಲಿಂಗತಾರತಮ್ಯ ಬಾಲ್ಯದಲ್ಲೇ ನಿಲ್ಲಲಿಲ್ಲ. ದೊಡ್ಡವರಾದ ಮೇಲೂ ಅದು ಸ್ತ್ರೀಯರನ್ನು ಬೆನ್ನು ಹತ್ತಿತೆಂದು ಉತ್ತರ ಭಾರತದಲ್ಲಿ ನಡೆದ ನಾರಂಗ್‌ವಾಲಾ ಅಧ್ಯಯನ ಸೂಚಿಸುತ್ತದೆ. ಪುರುಷರಿಗೆ ಲಭಿಸುವ ಕ್ಯಾಲರಿಗಳಲ್ಲಿ ಶೇ. ೮೬, ಪ್ರೊಟೀನ್‌ನಲ್ಲಿ ಶೇ. ೮೪, ಕ್ಯಾಲ್ಸಿಯಂನಲ್ಲಿ ಶೇ. ೬೯, ಕಬ್ಬಿಣಾಂಶದಲ್ಲಿ ಶೇ. ೮೮, 'ಎ'

**ಕೋಷ್ಟಕ-೨**

**ಭಾರತದ ವಯೋ ಗುಂಪುಗಳಲ್ಲಿ ಮರಣಗಳು (೧೯೮೯-೯೧)**

| ವಯೋ ಗುಂಪು | ಪ್ರತಿ ನೂರು ಮಂದಿ ಜನಸಂಖ್ಯೆಗೆ ಪುರುಷರ ಮರಣಗಳು | ಪ್ರತಿ ನೂರು ಮಂದಿ ಜನಸಂಖ್ಯೆಗೆ ಸ್ತ್ರೀಯರ ಮರಣಗಳು | ಪ್ರತಿ ನೂರು ಸ್ತ್ರೀಯರ ಮರಣಗಳಿಗೆ ಪುರುಷರ ಮರಣಗಳು |
|---|---|---|---|
| ೦-೪ | ೨೬.೩ | ೨೮.೯ | ೯೧ |
| ೫-೯ | ೨.೪ | ೩.೦ | ೮೨ |
| ೧೦-೧೪ | ೧.೪ | ೧.೫ | ೯೪ |
| ೧೫-೧೯ | ೧.೭ | ೨.೫ | ೬೯ |
| ೨೦-೨೪ | ೨.೪ | ೩.೨ | ೭೫ |
| ೨೫-೨೯ | ೨.೭ | ೩.೭ | ೮೯ |
| ೩೦-೩೪ | ೩.೨ | ೨.೮ | ೧೧೨ |
| ೩೫-೩೯ | ೪.೦ | ೩.೪ | ೧೧೯ |
| ೪೦-೪೪ | ೫.೫ | ೪.೧ | ೧೩೪ |
| ೪೫-೪೯ | ೯.೦ | ೫.೯ | ೧೫೩ |
| ೫೦-೫೪ | ೧೩.೩ | ೯.೦ | ೧೪೭ |
| ೫೫-೫೯ | ೨೦.೭ | ೧೪.೦ | ೧೪೮ |
| ೬೦-೬೪ | ೩೧.೬ | ೨೩.೨ | ೧೩೬ |
| ೬೫-೬೯ | ೪೭.೧ | ೩೭.೬ | ೧೨೫ |
| ೭೦ರ ನಂತರ | ೯೪.೨ | ೮೧.೧ | ೧೧೬ |
| ಅಖಿಲ ಭಾರತ | ೧೦.೦ | ೯.೮ | ೧೦೨ |

''ಇಂಪ್ರೂವಿಂಗ್ ವಿಮೆನ್ಸ್ ಹೆಲ್ತ್ ಇನ್ ಇಂಡಿಯ'' (೧೯೯೬) ಎಂಬ ವಿಶ್ವ ಬ್ಯಾಂಕ್ ಪ್ರಕಟಣೆಯಿಂದ.

**ಕೋಷ್ಟಕ-೩**

೧೯೦೧-೧೯೯೧ರ ಮಧ್ಯೆ ಕಡಿಮೆಯಾದ 'ಲಿಂಗ ಪ್ರಮಾಣ'

| ದೇಶ/ರಾಜ್ಯ | ಜನಗಣತಿಯಲ್ಲಿ ಪ್ರತಿ ಸಾವಿರ ಪುರುಷರಿಗೆ ಇರುವ ಸ್ತ್ರೀಯರು | | |
|---|---|---|---|
| | ೧೯೦೧ರಲ್ಲಿ | ೧೯೯೧ರಲ್ಲಿ | ಈ ಅವಧಿಯಲ್ಲಿ ಆದ + ಅಥವಾ – |
| ಭಾರತ ದೇಶ | ೯೭೨ | ೯೨೭ | -೪೫ |
| ಬಿಹಾರ | ೧೦೫೪ | ೯೧೧ | -೧೪೩ |
| ತಮಿಳುನಾಡು | ೧೦೪೪ | ೯೭೪ | -೭೦ |
| ಒರಿಸ್ಸಾ | ೧೦೩೭ | ೯೭೧ | -೬೬ |
| ಕೇರಳ | ೧೦೦೪ | ೧೦೩೪ | +೩೨ |
| ಮಧ್ಯ ಪ್ರದೇಶ | ೯೯೦ | ೯೩೧ | -೫೯ |
| ಆಂಧ್ರಪ್ರದೇಶ | ೯೮೫ | ೯೭೨ | -೧೩ |
| ಕರ್ನಾಟಕ | ೯೮೩ | ೯೬೦ | -೨೩ |
| ಮಹಾರಾಷ್ಟ್ರ | ೯೭೮ | ೯೩೪ | -೪೪ |
| ಗುಜರಾತ್ | ೯೫೪ | ೯೩೪ | -೨೦ |
| ಪಶ್ಚಿಮ ಬಂಗಾಳ | ೯೪೫ | ೯೧೭ | -೨೮ |
| ಉತ್ತರ ಪ್ರದೇಶ | ೯೩೭ | ೮೭೯ | -೫೮ |
| ಅಸ್ಸಾಂ | ೯೧೯ | ೯೨೩ | +೪ |
| ರಾಜಸ್ಥಾನ್ | ೯೦೫ | ೯೧೦ | +೫ |
| ಹಿಮಾಚಲ ಪ್ರದೇಶ | ೮೮೪ | ೯೭೬ | +೯೨ |
| ಹರ್ಯಾಣ | ೮೬೭ | ೮೬೫ | -೨ |
| ಪಂಜಾಬ್ | ೮೩೨ | ೮೮೨ | +೫೦ |
| ಇತರ ರಾಜ್ಯಗಳು : ಕೇಂದ್ರಾಡಳಿತ ರಾಜ್ಯಗಳು ಸೇರಿ | ೯೪೩ | ೮೮೭ | -೫೬ |

ಜೀನ್ ಡ್ರೇಜ್ ಮತ್ತು ಅಮರ್ತ್ಯ ಸೇನ್‌ರವರ "ಇಂಡಿಯ : ಇಕನಾಮಿಕ್ ಡೆವಲಪ್‌ಮೆಂಟ್ ಅಂಡ್ ಸೋಷಿಯಲ್ ಆಪರ್ಚ್ಯುನಿಟೀಸ್" (೧೯೯೫)ನಿಂದ.

ಅನ್ನಾಂಗದಲ್ಲಿ ಶೇ. ೭೮ ಮಾತ್ರ ಸ್ತ್ರೀಯರಿಗೆ ಲಭಿಸುತ್ತದೆ ಎಂದು ಆ ಅಧ್ಯಯನದಿಂದ ಬೆಳಕಿಗೆ ಬಂದಿದೆ. ನಮ್ಮ ದೇಶದಲ್ಲಿ ನಡೆದ ಇನ್ನೂ ಕೆಲವು ಪರಿವೀಕ್ಷಣೆಗಳು ಈ ಅಂಶವನ್ನು ದೃಢಪಡಿಸಿವೆ.

**ಸ್ತ್ರೀಯರ ಸಂಖ್ಯೆ :** ೨೦ನೇ ಶತಮಾನದ ಪ್ರಾರಂಭದಿಂದ 'ಲಿಂಗ ಪ್ರಮಾಣ' (ಸಾವಿರ ಪುರುಷರಿಗೆ ಎಷ್ಟು ಸ್ತ್ರೀಯರಿದ್ದಾರೆ ಎಂಬ ಲೆಕ್ಕ) ನಿರಂತರವಾಗಿ ಕಡಿಮೆಯಾಗುತ್ತಲೇ ಬಂದಿರುವುದು ಕಂಡುಬರುತ್ತದೆ. ೧೯೦೧ರಲ್ಲಿ ಪ್ರತಿ ಸಾವಿರ ಪುರುಷರಿಗೆ ಸರಾಸರಿ ೯೭೨ ಸ್ತ್ರೀಯರಿದ್ದರು. ೧೯೯೧ರ ವೇಳೆಗೆ, ಅಂದರೆ ೯೦ ವರ್ಷಗಳ ನಂತರ, ಸ್ತ್ರೀಯರ ಸಂಖ್ಯೆ ೯೨೭ಕ್ಕೆ ಇಳಿದಿದೆ. ೧೯೦೧ರಿಂದಲೇ ವಾಯುವ್ಯ ಪ್ರಾಂತಗಳಲ್ಲಿ 'ಲಿಂಗ ಪ್ರಮಾಣ' ದೇಶದ ಇತರ ಪ್ರಾಂತಗಳಿಗಿಂತ ಕಡಿಮೆಯೇ ಇದೆ. ಈ ಪ್ರಮಾಣ ದಕ್ಷಿಣ ರಾಜ್ಯಗಳಲ್ಲಿ ರಾಷ್ಟ್ರದ ಸರಾಸರಿಗಿಂತ ಸ್ವಲ್ಪ ಹೆಚ್ಚಾಗಿಯೇ ಇದೆ (ನೋಡಿ : ಕೋಷ್ಟಕ ೩).

ಕೇರಳ ರಾಜ್ಯದಲ್ಲಿ ಮಾತ್ರ 'ಲಿಂಗ ಪ್ರಮಾಣ' ಅಬಾಧಿತವಾಗಿ ಯಾವಾಗಲೂ ಅಧಿಕವಾಗಿಯೇ ಇದೆ. ೧೯೦೧ರಲ್ಲಿ ಅದು ೧೦೦೪ ಇತ್ತು. ೧೯೯೧ರ ವೇಳೆಗೆ ಅದು ೧೦೩೬ಕ್ಕೆ ಏರಿದೆ. ಈ ೯೦ ವರ್ಷಗಳಲ್ಲಿ ಯಾವ ದಶಕದಲ್ಲೂ ಅಲ್ಲಿ ಸ್ತ್ರೀಯರ ಸಂಖ್ಯೆ ಪುರುಷರ ಸಂಖ್ಯೆಗಿಂತ ಕಡಿಮೆಯಾಗಿಲ್ಲ. ಅದು ನಿರಂತರವಾಗಿ ಬೆಳೆಯುತ್ತಲೇ ಇದೆ.

ಆರ್ಯಾವರ್ತಕ್ಕೆ ಸೇರಿದ ಉತ್ತರ ಪ್ರದೇಶದಲ್ಲಿ ಇದಕ್ಕೆ ತದ್ವಿರುದ್ಧವಾದ ಕಹಿ ಚಿತ್ರ ಕಂಡುಬರುತ್ತದೆ. ೧೯೦೧ರಲ್ಲಿ ಪ್ರತಿ ಸಾವಿರ ಪುರುಷರಿಗೆ ಅಲ್ಲಿ ೯೩೭ ಸ್ತ್ರೀಯರು ಮಾತ್ರ ಇದ್ದರು. ೧೯೯೧ ಬರುವ ವೇಳೆಗೆ ಸ್ತ್ರೀಯರ ಸಂಖ್ಯೆ ೮೭೯ಕ್ಕೆ ಇಳಿಯಿತು. ಹೀಗೆಯೇ ಬಿಹಾರ, ಒರಿಸ್ಸಾ, ತಮಿಳುನಾಡು, ಮಧ್ಯ ಪ್ರದೇಶ, ಮಹಾರಾಷ್ಟ್ರಗಳಲ್ಲಿ ಸ್ತ್ರೀಯರ ಜನಸಂಖ್ಯೆ ಕಡಿಮೆಯಾಗಿದೆ. ಈ ಆರು ರಾಜ್ಯಗಳೊಳಗಿನ ಇಳಿಮುಖವನ್ನು ರಾಷ್ಟ್ರದ ಸ್ತ್ರೀ ಜನಸಂಖ್ಯಾ ಇಳಿತದ ಅತ್ಯಧಿಕ ಭಾಗವಾಗಿ ಪರಿಗಣಿಸಬಹುದೆಂದು ಡ್ರೇಜ್ ಮತ್ತು ಸೇನ್ ಅವರು ಸೂಚಿಸಿದ್ದಾರೆ. ಅದರಲ್ಲೂ ಬಿಹಾರ ಮತ್ತು ಉತ್ತರ ಪ್ರದೇಶಗಳ ಇಳಿತ ಇಡೀ ಭಾರತದ ಇಳಿತದಲ್ಲಿ ಮುಖ್ಯ ಭಾಗವಾಗಿದೆ ಎಂದು ಅವರು ಲೆಕ್ಕ ಹಾಕಿದ್ದಾರೆ.

೩೦-೩೫ ತುಂಬಿದ ನಂತರ ಸ್ತ್ರೀಯರ ಮರಣದ ಪ್ರಮಾಣ ಪುರುಷರ ಮರಣ ಪ್ರಮಾಣಕ್ಕಿಂತ ಕಡಿಮೆ ಇರುತ್ತದೆ ಎಂದು ಜನಗಣತಿಯ ಲೆಕ್ಕಗಳಿಂದ ತಿಳಿದುಬರುತ್ತದೆ. ಆದರೂ, ಈ ವಯಸ್ಸು ದಾಟಿದ ನಂತರವೂ 'ಲಿಂಗ ಪ್ರಮಾಣ' ಕಡಿಮೆಯೇ ಇರುತ್ತದೆ. ಇದರಿಂದ ಕಂಡುಬರುತ್ತಿರುವ ಆರ್ಥಿಕ ಅಭಿವೃದ್ಧಿಯ ಪರಿಣಾಮ ಮತ್ತು ಆಧುನಿಕ ವೈದ್ಯ ಚಿಕಿತ್ಸಾ ವಿಧಾನಗಳು ಸ್ತ್ರೀಯರಿಗಿಂತ ಪುರುಷರಿಗೇ ಹೆಚ್ಚಾಗಿ ಲಭಿಸುತ್ತಿರುವಂತೆ ಕಂಡುಬರುತ್ತದೆ. ಸ್ತ್ರೀಯರಿಗೆ ಬರುವ ಪ್ರತ್ಯೇಕ ರೋಗಗಳ ನಿವಾರಣೆಗೆ ಅಗತ್ಯವಾದ ಚಿಕಿತ್ಸಾ ಸೌಕರ್ಯಗಳು ಅವರ ಅಗತ್ಯಗಳಿಗೆ ತಕ್ಕ ಪ್ರಮಾಣದಲ್ಲಿ ದೊರೆಯುವಂತೆ ಏರ್ಪಾಟಾಗಿಲ್ಲ.

**೨೦೦೧ರ ಜನಗಣತಿ :** ಮಾರ್ಚ್ ೧, ೨೦೦೧ರಂದು ಭಾರತದ ಜನಸಂಖ್ಯೆ ೧೦೨ ಕೋಟಿ ದಾಟಿತು ಎಂದು ಅಂದು ಬಿಡುಗಡೆಯಾದ ಜನಗಣತಿಯ ಸಂಕ್ಷಿಪ್ತ ವರದಿಗಳು ತಿಳಿಸುತ್ತವೆ. ಆ ದಿನದ ಮುಂಜಾನೆ ೦೦.೦೦ ಗಂಟೆಯಲ್ಲಿ ಭಾರತದ ಜನಸಂಖ್ಯೆ ೧೦೨,೭೦,೧೫, ೨೪೭ ಇತ್ತು. ಅದರಲ್ಲಿ ೫೩,೧೨,೭೭,೦೭೮ ಪುರುಷರು ಮತ್ತು ೪೯,೫೭,೩೮,೧೬೯ ಸ್ತ್ರೀಯರು ಸೇರಿದ್ದರು.




೨೦೦೧ರ ಜನಗಣತಿ ಒಂದು ರೀತಿ ಆಶಾದಾಯಕ ಸೂಚನೆಗಳನ್ನು ನೀಡುತ್ತದೆ. ಅದರ ಪ್ರಕಾರ ಸಾಕ್ಷರತೆಯ ಪ್ರಮಾಣ ಕಳೆದ ದಶಕದಲ್ಲಿ ಗಮನಾರ್ಹವಾಗಿ ಏರಿದೆ, 'ಲಿಂಗ ಪ್ರಮಾಣ' ಅಭಿವೃದ್ಧಿ ಹೊಂದಿದೆ ಮತ್ತು ಜನಸಂಖ್ಯಾ ಏರಿಕೆಯ ದರ ಕಡಿಮೆಯಾಗಿದೆ. ಆದರೆ ಅವು ರಾಜ್ಯಗಳೊಳಗೆ ಭಿನ್ನ ಪ್ರಮಾಣದಲ್ಲಿ ಏರಿಳಿತಗಳನ್ನು ತೋರಿಸುತ್ತವೆ.

೧೯೦೧ರಿಂದ ಇಳಿಯುತ್ತಾ ಬಂದ 'ಲಿಂಗ ಪ್ರಮಾಣ' ಅವಮಾನಕರವಾಗಿತ್ತು ಮತ್ತು ಕಳವಳಕ್ಕೆ ಕಾರಣವಾಗಿತ್ತು. ಮಾರ್ಚ್ ೧ರಂದು ಬಿಡುಗಡೆಯಾದ ೨೦೦೧ರ ಜನಗಣತಿಯು 'ಲಿಂಗ ಪ್ರಮಾಣ', ಅಂದರೆ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ, ಏರುಮುಖವಾಗಿರುವುದನ್ನು ತೋರಿಸುತ್ತದೆ. ಅನೇಕ ದಶಕಗಳ ನಂತರ ಮೊಟ್ಟಮೊದಲ ಬಾರಿಗೆ ಸ್ವಲ್ಪ ಮಟ್ಟಿಗಾದರೂ 'ಲಿಂಗ ಪ್ರಮಾಣ' ಹೆಚ್ಚಾಗಿದೆ. ಆದರೆ ಅದು ಹೆಮ್ಮೆ ತರುವಂತಹ ಸಾಧನೆಯೇನಲ್ಲ. ಸ್ವಾಭಾವಿಕವಾಗಿ 'ಲಿಂಗ ಪ್ರಮಾಣವು' ೧೦೦೦ಕ್ಕಿಂತ ಹೆಚ್ಚಾಗಿರಬೇಕೆಂಬುದು ನಿರೀಕ್ಷೆ. ಇತ್ತೀಚಿನ ಈ ಸಂಖ್ಯೆ ೯೩೩ ತುಂಬಾ ಕಡಿಮೆಯಾಗಿದೆ. ಅಷ್ಟೇ ಅಲ್ಲ ಅದು ಒಂದು ಶತಮಾನದ ಹಿಂದೆ, ಅಂದರೆ ೧೯೦೧ರಲ್ಲಿ ಇದ್ದ ಸಂಖ್ಯೆಗಿಂತ -೯೭೨ಕ್ಕಿಂತಲೂ – ಕಡಿಮೆಯಾಗಿದೆ. ಅದು ಮಕ್ಕಳ 'ಲಿಂಗ ಪ್ರಮಾಣ'ದಲ್ಲಿ ಇನ್ನೂ ಕರಾಳವಾಗಿ ಕಾಣಿಸಿಕೊಂಡಿದೆ. ೦-೬ ವಯೋ ಗುಂಪಿನ 'ಲಿಂಗ ಪ್ರಮಾಣ' ೧೯೯೧ರಲ್ಲಿ ೯೪೫ ಇದ್ದುದು ೨೦೦೧ರಲ್ಲಿ ೯೨೭ಕ್ಕೆ ಇಳಿದಿದೆ.

ಎಲ್ಲಾ ವಯಸ್ಸಿನವರ ರಾಷ್ಟ್ರೀಯ 'ಲಿಂಗಪ್ರಮಾಣ' - ಐದು ಪ್ರಮುಖ ರಾಜ್ಯಗಳನ್ನು ಬಿಟ್ಟು - ಒಟ್ಟಾರೆ ಹೆಚ್ಚಾಗಿದೆ. ಗುಜರಾತ್, ಹಿಮಾಚಲ ಪ್ರದೇಶ, ಹರ್ಯಾಣ, ಪಂಜಾಬ್ ಮತ್ತು ದೆಹಲಿಗಳಲ್ಲಿ ಪ್ರತಿ ಸಾವಿರ ಪುರುಷರಿಗೆ ಇರುವ ಸ್ತ್ರೀಯರ ಸಂಖ್ಯೆ ಕಳೆದ ದಶಕದಲ್ಲಿ ಕಡಿಮೆಯಾಗಿದೆ.

ಅದರಲ್ಲೂ ಕೊನೆಯ ಮೂರು ರಾಜ್ಯಗಳಲ್ಲಿ 'ಲಿಂಗ ಪ್ರಮಾಣ' ಮೊದಲೇ ಕಡಿಮೆಯಾಗಿತ್ತು. ರಾಷ್ಟ್ರದ ರಾಜಧಾನಿಯನ್ನೊಳಗೊಂಡ ದೆಹಲಿ ರಾಜ್ಯವು ದೇಶದಲ್ಲೇ ಅತ್ಯಂತ ಕಡಿಮೆ 'ಲಿಂಗ ಪ್ರಮಾಣ'ವನ್ನು ಹೊಂದಿದೆ ಎಂಬುದು ಎಷ್ಟು ಖೇದನೀಯ ! ಕೇಂದ್ರಾಡಳಿತ ಕ್ಕೊಳಪಟ್ಟ ದಾದ್ರ ಮತ್ತು ನಗರ್ ಹವೇಲಿಯ 'ಲಿಂಗ ಪ್ರಮಾಣ'ಕ್ಕಿಂತ ದೆಹಲಿಯ 'ಲಿಂಗ ಪ್ರಮಾಣ' ಮೇಲು ಎಂದು ಸಮಾಧಾನಪಡಬಹುದು !!

ಆರ್ಥಿಕಾಭಿವೃದ್ಧಿ, ಆಧುನಿಕತೆಗಳ ಮಧ್ಯೆಯೂ 'ನಾಪತ್ತೆ'ಯಾಗುತ್ತಿರುವ ಸ್ತ್ರೀಯರ ಬಗ್ಗೆ ಪುರುಷ ಪ್ರಧಾನ ಸಮಾಜ ತೀವ್ರ ಗಮನಹರಿಸಬೇಕಾಗಿದೆ.

**ಪ್ರೊ|| ಬಿ. ವಿ. ವೀರಭದ್ರಪ್ಪ**
ಬಿ-೧೮, ವಿದ್ಯಾನಗರ ದಾವಣಗೆರೆ-೫೭೭ ೦೦೫




ಥ್ಯಾಂಕ್ಸ್, ಜಾರ್ಜ್!.. ಈ 'ಭಯಂಕರ ಭಯೋತ್ಪಾದಕನ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಿಕ್ಕೆ ನನಗೆ ಅನುಮತಿ ಕೊಟ್ಟಿದ್ದಕ್ಕೆ...
ಇಸ್ರೇಲ್


HISTORY ಪಠ್ಯಪುಸ್ತಕ-ಗಳನ್ನು ಮತ್ತೆ ಬರೆಸಬೇಕಿದೆ... ಒಳ್ಳೇ STORY ಬರಹಗಾರರನ್ನು ಕರೆತನ್ನಿ!


ಕಾರ್ಗಿಲ್ ಶವಪೆಟ್ಟಿಗೆ ಹಗರಣ
ಸಿಎಜಿ ವರದಿ


ಸುಪ್ರೀಂ ಕೋರ್ಟ್


ಕೃಪೆ ತೋರು, ಕೃಷ್ಣಾ!!..
13 ಸಾವಿರ ನೌಕರರು
ಗ್ರಾಮೀಣ ಕೃಪಾಂಕ ವಿವಾದ




ನನ್ನಪ್ಪ ತನ್ನಪ್ಪನೊಂದಿಗೆ ಹೇಗೆ ನಡೆದುಕೊಳ್ಳುತ್ತಿರಬಹುದು ಎಂಬುದನ್ನು ನಾನೀಗಲೂ ಹುಡುಕುತ್ತಿದ್ದೇನೆ. ಅಪ್ಪನ ಅಪ್ಪ ಅಂದರೆ ಅಜ್ಜ ಜೀವಂತವಾಗಿಲ್ಲದಿರುವುದೇ ಅಡಚಣೆಯಾಗಿದೆ. ಅವನು ಸತ್ತು ಸುಮಾರು ಇಪ್ಪತ್ತೈದು ವರ್ಷಗಳಾದರೂ ಆಗಿರಬೇಕು. ನಾನವನನ್ನು ಕಂಡಿದ್ದೇನೆ. ಉಳಿದವರಂತೆ ಅವನು ನನ್ನನ್ನು ಹೆಗಲ ಮೇಲೆ ಹೊತ್ತು ತಿರುಗಾಡಿದ್ದಾನೆ, ಆಟವಾಡಿದ್ದಾನೆ. ಐದಾರು ವರ್ಷದವನಿದ್ದಾಗ ಅವನು ನನಗೊಂದು ಭರ್ಜರಿ ಎಲೆ ಸಂಚಿಯನ್ನು ಹೊಲಿದುಕೊಟ್ಟಿದ್ದನು. ಅದರೊಳಗೆ ಪ್ರತಿದಿನ ಐದಾರು ತಿನ್ನುವ ಎಲೆ, ಕತ್ತರಿಸಿದ ಅಡಿಕೆ ಹೋಳು, ಕಾಚಿನ ತುಂಡು ನೆನಪಿನಿಂದ ಇಡುತ್ತಿದ್ದನು. ತಾಂಬೂಲ ತಯಾರಿಸುವುದನ್ನು ಅವನೇ ಕಲಿಸಿದನು. ಹೀಗೆ ಇನ್ನೆಷ್ಟೋ ವಿಷಯಗಳು. ಅವನು ದೊಡ್ಡದಾದ ಪೇಟಾ ಸುತ್ತುತ್ತಿದ್ದನು. ಅದಕ್ಕೊಂದು ಉದ್ದ ಬಾಲಂಗೋಚಿ ಬಿಡುತ್ತಿದ್ದನು. ಉದ್ದವಾದ ಭರ್ಜರಿ ಮೀಸೆ ಬಿಟ್ಟಿದ್ದರಿಂದ ಸದಾ ಅದರ ಮೇಲೆ ಕೈಯಾಡಿಸುತ್ತಿದ್ದನು. ವಾರ-ಎರಡು ವಾರಕ್ಕೊಮ್ಮೆ ಕ್ಷೌರಿಕನನ್ನು ಕರೆಯಿಸಿ ನುಣುಪಾಗಿ ಗಡ್ಡ ಬೋಳಿಸಿಕೊಳ್ಳುತ್ತಿದ್ದನು. ಅದೇ ಕಾಲಕ್ಕೆ ಅವನು ನನ್ನ ತಲೆಯನ್ನೂ ಚಕಚಕಾಂತ ಬೋಳಿಸುತ್ತಿದ್ದನು. ಹೀಗಾಗಿ ದೂರದಲ್ಲಿ ಕ್ಷೌರಿಕ ಕಾಣಿಸಿದ ಕೂಡಲೇ ನಾನು ಪಲಾಯನ ಮಾಡುತ್ತಿದ್ದೆ. ಹೊಳೆ ದಡದಲ್ಲಿರುವ ಎತ್ತರದ ಮರದ ಮೇಲೋ, ಇಲ್ಲವೇ ವಟವೃಕ್ಷದ ದಟ್ಟ ಬಿಳಲಿನಲ್ಲೋ ಅಡಗಿಕೊಳ್ಳುತ್ತಿದ್ದೆ. ಅಜ್ಜ ಇಡೀ ಅರಣ್ಯವನ್ನೆಲ್ಲ ಹುಡುಕುತ್ತಿದ್ದ, ಆದರೆ ನಾನವನಿಗೆ ಸಿಗುತ್ತಿರಲಿಲ್ಲ. ನುಣುಪಾದ ಗಡ್ಡ ಮಾಡಿಕೊಂಡ ನಂತರ ಪೇಟಾ ತಲೆಗೆ ಸುತ್ತಿಕೊಂಡು ಕಾಲಲ್ಲಿ ಮೆಟ್ಟು ಹಾಕಿಕೊಂಡಿದ್ದು ಅಜ್ಜಿಗೆ ಗೊತ್ತಾಗುತ್ತಲೇ ಇಬ್ಬರ ನಡುವೆ ಜಗಳ ಆರಂಭವಾಗುತ್ತಿತ್ತು. ಅಜ್ಜ ಅಜ್ಜಿಯ ಮೇಲೆ ಏರಿ ಹೋಗುತ್ತಿದ್ದ; ಆದರೆ ಅಜ್ಜಿ ಹೆದರುತ್ತಿರಲಿಲ್ಲ. ಬದಲಿಗೆ ಅವಳ ಧ್ವನಿ ಮತ್ತಷ್ಟು ಏರುತ್ತಿತ್ತು. ಅಜ್ಜ ಐನಾಪುರ ದಿನ್ನೆಯತ್ತ ಹೊರಟುಹೋಗುತ್ತಿದ್ದನು.... ಅಜ್ಜಿ ಎದೆ-ಎದೆ ಬಡಿದುಕೊಳ್ಳುತ್ತಿದ್ದಳು. ಆದರೆ ನಾವಿರೋದೆ ಹೊಲದಲ್ಲಿ, ಹೀಗಾಗಿ ಸನಿಹದಲ್ಲಿ ಕೇಳುವವರು ಯಾರೂ ಇಲ್ಲ. ಹಿಂದೆ ಕಿರ್‍ರ್ ಎನ್ನುವ ದಟ್ಟ ಅರಣ್ಯ; ಕೆಳಗೆ ಹಳ್ಳದವರೆಗೆ ಚಾಚಿಕೊಂಡ ಹೊಲ. ಊರಿನಿಂದ ಮೂರು ಮೈಲು ದೂರ. ಹಾಗೆ ಊರಲ್ಲೂ ನಮ್ಮದೊಂದು ಮನೆಯಿದೆ. ಅಲ್ಲಿ ವರ್ಷಕ್ಕೊಮ್ಮೆ ಹಬ್ಬಕ್ಕಷ್ಟೇ ಹೋಗುತ್ತಿದ್ದೆವು. ಆ ರಾತ್ರಿ ಗರ್ಭ ಧರಿಸಿದ ಕುರಿ ಕೊಯ್ದು ಅದರ ಹೊಟ್ಟೆಯೊಳಗಿನ ಮರಿಯನ್ನು ದನದ ಕೊಟ್ಟಿಗೆಯಲ್ಲೇ ಹುಗಿಯುತ್ತಿದ್ದರು. ಬಳಿಕ ಕುರಿ ಮಾಂಸ ತಿಂದು ಮುಗಿಸುವುದು. ಕೈ ಸಹ ಹೊರಗೆ ತೊಳೆಯುವಂತಿಲ್ಲ. ಹೀಗೆ ಖಡಕ್ ನಿಯಮ ಪಾಲಿಸುವ ಕಾರ್ಯಕ್ರಮ ಇರುತ್ತಿತ್ತು. ಅದೂ ಅಮಾವಾಸ್ಯೆಯ ರಾತ್ರಿ. ಅನಂತರ ಈಗ ಬೀಗ ಹಾಕಿದರೆ ಮುಂದಿನ ವರ್ಷವೇ ತೆರೆಯುವುದು. ದಾಯಾದಿಗಳೂ ಇರಲಿಲ್ಲ. ಅಂದ ಮೇಲೆ ಅಜ್ಜಿಯ ಕಿರುಚಾಟ ಕೇಳಿ ಓಡಿಬರುವವರು ಯಾರು ? ಆ ಬಳಿಕ ಅಜ್ಜಿಯೇ ಸಮಾಧಾನ ತಂದುಕೊಂಡು ಮುದುಕನಿಗೆ ಬಯ್ಯುತ್ತ ಕೂಡ್ರುತ್ತಿದ್ದಳು. ಇದರ ಕಾರಣ ಅನಂತರ ತಿಳಿಯಿತು. ಅಜ್ಜ ಮುಂಬೈಯಿಂದ ಬಂದ ಒಬ್ಬ ಹೆಂಗಸನ್ನ ಇಟ್ಟುಕೊಂಡಿದ್ದ. · ಅವಳನ್ನು ನೋಡಬೇಕೆಂದರೂ ನನಗಾಗಲಿಲ್ಲ. ಆದರೆ ಅಮ್ಮ ಅವಳನ್ನು ನೋಡಿದ್ದಳು. ಅವಳು ಮಾಡಿದ ವರ್ಣನೆಗೆ ಅನುಗುಣವಾಗಿ ಆಕೆ ಕೆಂಪು ಬಣ್ಣ, ಉದ್ದ ಮೂಗು, ಚಾಬೂಕಿನಂತೆ ಸಳಸಳ ಹರಿಯುವ ಹೆಣ್ಣಾಗಿದ್ದಳು. ಅವಳಿಗೆ ಸಾಕಷ್ಟು ಸಂಬಂಧಿಕರಿದ್ದರೂ ಅವಳು ಅಜ್ಜನಿಗಾಗಿ ಸ್ವತಂತ್ರ ಮನೆಯಲ್ಲಿ ವಾಸಿಸುತ್ತಿದ್ದಳು. ಅವಳ ಹತ್ತಿರ ಸಾಕಷ್ಟು ಧನಸಂಪತ್ತಿತ್ತು. ಆಕೆ ಸಾಯುವ ಮೊದಲು ಅದನ್ನೆಲ್ಲ ಅಜ್ಜನಿಗೊಪ್ಪಿಸಿದ್ದಳು. ಅವಳ ಹತ್ತಿರದ ಐವತ್ತು ತೊಲೆ ಬಂಗಾರವೆಲ್ಲ ಸಹಜವಾಗಿ ನಮ್ಮ ಮನೆ ಸೇರಿತು. ಅವಳು ಅಪರೂಪಕ್ಕೆ ಮನೆಗೆ ಬರುತ್ತಿದ್ದಳು. ಹೆಚ್ಚು ಹೊತ್ತು ನಿಲ್ಲದೆ ಹೊರಟುಹೋಗುತ್ತಿದ್ದಳು. ಆ ಹೊತ್ತಿನಲ್ಲಿ ನಾವು ಯಾರೂ ಮನೆಯಲ್ಲಿರುತ್ತಿರಲಿಲ್ಲ. ಹೀಗಾಗಿ ಅಜ್ಜಿ ಎಷ್ಟೇ ಕಿರುಚಲಿ, ಎದೆ ಬಡಿದುಕೊಂಡು ಗೋಳಾಡಲಿ, ಅಜ್ಜ ಮಾತ್ರ ಐನಾಪುರ ದಿನ್ನೆಯಿಂದ ಹಾದು ಅವಳ ಮನೆಗೆ ಹೋಗುತ್ತಿದ್ದವನು ಎರಡು ದಿನಗಳ ನಂತರವೇ ಮರಳುತ್ತಿದ್ದ. ಹೀಗಾಗಿ ದನ-ಕರುಗಳ ಕೊಟ್ಟಿಗೆ ಚಾಕರಿ ಎಲ್ಲ ನನ್ನ ಅಮ್ಮನೇ ಮಾಡಬೇಕಾಗುತ್ತಿತ್ತು. ನನ್ನಪ್ಪ ಈ ಯಾವ ವಿಷಯದ ಬಗ್ಗೂ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ▪ ಕ್ಷಣಕ್ಕೆ ಅವನಿಗೇನು ಹೊಳೆಯುತ್ತದೋ ಅದನ್ನೇ ಮಾಡುತ್ತಿದ್ದನು. ಅಂದರೆ ಹಳ್ಳಕ್ಕೆ ನೀರು ಬಂತೆಂದರೆ

ನಾಲ್ಕೈದು ಅಡಿ ಎತ್ತರದವರೆಗೆ ನೀರು ಕಟ್ಟಿ ಹಾಕಿ ಒಡ್ಡು ನಿರ್ಮಿಸುತ್ತಿದ್ದ. ನೀರಿನೊಳಗೆ ಐದಾರು ಕಡೆ ಗಳ ಹುಗಿಯುತ್ತಿದ್ದ. ಅಲ್ಲಲ್ಲಿ ಜಾಳಿಗೆ ನಿರ್ಮಿಸುತ್ತಿದ್ದ. ಅದರೊಳಗೆ ಎರೆಹುಳ ಅಥವಾ ಮೀನಿನ ತಲೆ ತಂದು ಇಡುತ್ತಿದ್ದ. ಮರುದಿನ ಜಾಳಿಗೆಯೊಳಗೆ ಮೀನೆ ಮೀನು ಸಿಕ್ಕಿ ಬೀಳುತ್ತಿತ್ತು. ಒಮ್ಮೊಮ್ಮೆ ಉದ್ದ ಮೀನೂ ಸಿಗುತ್ತಿತ್ತು. ಆ ದಿನ ನಮಗೆಲ್ಲ ಹಬ್ಬ. ನಾಲ್ಕು ದಿನ ಬರೇ ಮೀನೆ ತಿನ್ನುವುದು. ಆದರೆ ಅಪ್ಪ ಮೀನು ಹಿಡಿದರೆ ಅಜ್ಜ ಅದನ್ನು ಮುಟ್ಟುತ್ತಿರಲಿಲ್ಲ. ಆ ದಿನ ಅವನಿಗೆ ಪ್ರತ್ಯೇಕ ಅಡುಗೆ ತಯಾರಿಸಬೇಕಾಗುತ್ತಿತ್ತು ಅಥವಾ ಊರೊಳಗೆ ಯಾರಲ್ಲಾದರೂ ಉಂಡು ಬರುತ್ತಿದ್ದ. ಒಮ್ಮೆ ನಾನು ಈ ಬಗ್ಗೆ ಅಜ್ಜನಿಗೆ ಕೆದಕಿ ಕೇಳಿದಾಗ ಅವನು ಸಿಟ್ಟಿಗೆದ್ದು ಥಳಿಸಿದ. ಅವನ ಐದೂ ಬೆರಳು ಬೆನ್ನಲ್ಲಿ ಮೂಡಿತ್ತು. ಆದರ ಬಳಿಕ ನಾನೆಂದೂ ಅಂಥ ಪ್ರಶ್ನೆ ಮಾಡಿರಲಿಲ್ಲ.

ಹಾಗೆಂದು ಅವನು ಪ್ರಚಂಡ ಸಿಟ್ಟಿನ ಮನುಷ್ಯ ಎಂದೂ ಅಲ್ಲ. ಬದಲಿಗೆ ಅವನು ತೀರಾ ಪ್ರೀತಿಯಿಂದ ನನಗೆ ಮಂತ್ರ - ತಂತ್ರ ಕಲಿಸುತ್ತಿದ್ದ. ಅವನು ಪಂಚಕ್ರೋಶಿಯಲ್ಲೇ ಪ್ರಸಿದ್ಧ ಮಾಂತ್ರಿಕನಾಗಿದ್ದ. ದನಕರುಗಳ ಎಲ್ಲ ರೋಗಕ್ಕೆ ಅವನ ಬಳಿ ಎಲ್ಲ ಉಪಾಯವಿತ್ತು. ಮನುಷ್ಯರ ಅಥವಾ ಸಾಕುಪ್ರಾಣಿಗಳ ಎಲುಬು ಮುರಿದರೆ ಅದನ್ನು ವ್ಯವಸ್ಥಿತವಾಗಿ ಜೋಡಿಸಿ ಅದಕ್ಕೆ ಔಷಧಿ ಲೇಪಿಸಿದನೆಂದರೆ ಹದಿನೈದಿಪ್ಪತ್ತು ದಿನಗಳಲ್ಲಿ ಮುರಿದ ಎಲುಬು ಗುಣಮುಖವಾಗುತ್ತಿತ್ತು. ಹೀಗಾಗಿ ನಾವು ಹೊಲದಲ್ಲಿದ್ದರೂ ಜನರ ಪ್ರಚಂಡ ಗದ್ದಲ ಇದ್ದೇ ಇರುತ್ತಿತ್ತು. ಯಾರದ್ದೇ ಎಮ್ಮೆ ಕರು ಗರ್ಭದಲ್ಲಿ ಸಿಲುಕಿದರೆ, ಎತ್ತಿನ ಬಾಯಿಂದ ನೊರೆ ಬರುತ್ತಿದ್ದರೆ, ಕರುವಿನ ಹೊಟ್ಟೆಯುಬ್ಬಿದರೆ.... ಹೀಗೆ ಎಷ್ಟೋ ತಕರಾರುಗಳಿಗೆ ಅವನು ಅತ್ಯಂತ ಉತ್ಸಾಹದಿಂದ ಔಷಧೋಪಚಾರ ನೀಡಲು ಆರಂಭಿಸುತ್ತಿದ್ದನು ಅಥವಾ ಮೆಟ್ಟು ಧರಿಸಿ ಬಂದ ಮನುಷ್ಯನ ಬೆನ್ನು ಹತ್ತುವನು. ನಾನು ಅವನಿಗೆ ಗೊತ್ತಾಗದಂತೆ ಗಿಡ-ಮರಗಳ ನಡುವಿಂದ ಹಾದು ಅವನ ಬೆನ್ನು ಹತ್ತುತ್ತಿದ್ದೆ. ಕೊನೆಗೆ ದೂರ ಹೋದ ಬಳಿಕ ತಟ್ಟನೆ ಅವನ ಧೋತಿರಿನ ಚುಂಗನ್ನು ಹಿಡಿಯುತ್ತಿದ್ದೆ. ಆಗವನಿಗೆ ನನ್ನನ್ನು ಕರೆದೊಯ್ಯದೆ ಗತ್ಯಂತರವಿರುತ್ತಿರಲಿಲ್ಲ. ಬಳಿಕ ಏನೂ ಮಾತಾಡದೆ ನನ್ನನ್ನು ಹೆಗಲಿಗೇರಿಸಿಕೊಳ್ಳುತ್ತಿದ್ದ. ಎದುರಿನ ಪ್ರಚಂಡ ಆರಣ್ಯವೆಲ್ಲ ನನಗೆ ಗೋಚರಿಸುತ್ತಿತ್ತು. ಒಮ್ಮೆ ಹಸನ ಮುಲಾನಿಯ ಎಮ್ಮೆ ಗೋಣು ಚೆಲ್ಲಿತೆಂದು ಹಸನ ಧಾವಿಸಿ ಬಂದ. ಅವರಿಬ್ಬರೂ ಧಾವಿಸುತ್ತಲೇ ಹೊರಟರು. ನಾನೂ ಅಡಗಿ ಅವರನ್ನು ಹಿಂಬಾಲಿಸಿದೆ. ಮುಲಾನಿಯ ಕೊಟ್ಟಿಗೆ ಸೇರುತ್ತಲೇ ಅಜ್ಜ ಎಮ್ಮೆ ಮೈಮೇಲೆ ಕೈಯಾಡಿಸಿದ. ಎಮ್ಮೆಯ ಬಾಯಿಯಿಂದ ಬರೇ ನೊರೆ ಬರುತ್ತಿತ್ತು. ಅಜ್ಜ ತಟ್ಟನೆ ಅರಣ್ಯ ಹೊಕ್ಕ. ಒಂದು ಗಂಟೆಯಾದರೂ ಬರಲಿಲ್ಲ. ನಾನು ಜೋರಾಗಿ ಕಿರುಚಲಾರಂಭಿಸಿದೆ. ತಟ್ಟನೆ ಬಂದನು. ನಾನು ಅಳುವದನ್ನು ಕಂಡು ಕೈಲಿದ್ದ ಸೊಪ್ಪು ಕೆಳಗೆ ಚೆಲ್ಲಿ ನನ್ನನ್ನು ಅಪ್ಪಿಕೊಂಡನು. ಬಳಿಕ ಎಮ್ಮೆಗೆ ಸೊಪ್ಪಿನಿಂದ ತಯಾರಿಸಿದ ನೀರು ಕುಡಿಸಿದ; ಅಂದರೆ, ಅದರ ಬಾಯಿ ತೆರೆದು ಸುರಿದ. ಎಮ್ಮೆ ಭಯಂಕರವಾಗಿ ಚಡಪಡಿಸಿತು. ನೀರು ಹೊಟ್ಟೆ ಸೇರಿದ ಬಳಿಕ ಎಮ್ಮೆ ಸುಮ್ಮನಾಯಿತು. ಅರ್ಧಗಂಟೆಯ ಬಳಿಕ ಅಜ್ಜ ಅಂಗಿಯನ್ನು ಕಳಚಿದ ಮತ್ತು ಎಮ್ಮೆಯ ಗುದದ್ವಾರದಲ್ಲಿ ತೋಳು ತೂರಿ ಹೊಟ್ಟೆಯೊಳಗೆ ಹಾಕಿದ. ಸುಮಾರು ಐದು ನಿಮಿಷಗಳವರೆಗೆ ಅವನು ಹೊಟ್ಟೆಯೊಳಗೆ ಕೈಯನ್ನು ತಡಕಾಡಿದ. ತಟ್ಟನೆ ಅವನ ಕೈಗೆ ಏನೋ ಹತ್ತಿತು. ಅದನ್ನು ಗಟ್ಟಿಯಾಗಿ ಹಿಡಿದು ಕ್ರಮೇಣ ಕೈಯನ್ನು ಹೊರಗೆ ಎಳೆದುಕೊಳ್ಳಲಾರಂಭಿಸಿದನು. ಎಮ್ಮೆ ಒಮ್ಮೆಲೆ ಚಡಪಡಿಸಲಾರಂಭಿಸಿತು. ಕಾಲು ಝಾಡಿಸಿ ಕೂಗಲಾರಂಭಿಸಿತು. ಅಜ್ಜನ ಕೈ ಹೊರಬಂದಾಗ ಅವನ ಕೈಯಲ್ಲಿ ಕಬ್ಬಿಣದ ದಪ್ಪ ತುಣುಕಿತ್ತು. ಎಮ್ಮೆ ತಟ್ಟನೆ ನಿಶ್ಚೇಷ್ಟಿತ ಬಿದ್ದುಕೊಂಡಿತು. ಹಸನ ಕಬ್ಬಿಣದ ತುಣುಕು ಹಿಡಕೊಂಡು ಹಣೆ-ಹಣೆ ಬಡಿದುಕೊಂಡ. ಅಜ್ಜ ಹೇಳಿದ, ಎಮ್ಮೆ ಸತ್ತೇ ಹೋಗುತ್ತಿತ್ತು. ಆದರೂ ದೈವ ದೊಡ್ಡದು. ಹಸನನ ಹೆಂಡತಿ ಅಜ್ಜನ ಕಾಲಿಗೇ ಬಿದ್ದಳು. ಇಂಥ ಘಟನೆಗಳು ಹಲವು ಸಲ ನಡೆಯುತ್ತಿತ್ತು. ಆದರೆ ಅಜ್ಜ ಹೊರಗಿನಿಂದ ಬಂದಾಗ ಅಪ್ಪ ಒಂದು ವೇಳೆ ಮನೆಯೊಳಗಿದ್ದರೆ ಒಮ್ಮೆಲೆ ಇಬ್ಬರಲ್ಲೂ ಪ್ರಚಂಡ ವಾದ-ವಿವಾದ ನಡೆಯುತ್ತಿತ್ತು. ಇಡೀ ಮನೆಯೇ ಕಂಪಿಸುತ್ತಿತ್ತು. ಆಗ ಅಜ್ಜಿ ಅಜ್ಜನ ಪಕ್ಷ ಹಿಡಿಯುತ್ತಿದ್ದಳು. ಆದರೂ ಏಕಾಕಿಯಾದ ಅಪ್ಪ ಜಗಳದಲ್ಲಿ ಸೋಲುತ್ತಿರಲಿಲ್ಲ. ಆದರೆ ಜಗಳದ ಕಾರಣ ಮಾತ್ರ ತಿಳಿಯುತ್ತಿರಲಿಲ್ಲ. ನಾನೊಮ್ಮೆ ಮಧ್ಯರಾತ್ರಿ ಎಚ್ಚರಗೊಂಡಾಗ ಅಜ್ಜ, ಅಪ್ಪ ಇಬ್ಬರೂ ಜೋರಾಗಿ ಜಗಳ ಮಾಡುತ್ತಿದ್ದರು. ಇಬ್ಬರ ಕೈಯಲ್ಲೂ ಕೊಡಲಿಯಿತ್ತು.

ಅಜ್ಜ ಇಬ್ಬರ ನಡುವೆ ನಿಂತು ತಡೆಗಟ್ಟುವ ಪ್ರಯತ್ನ ಮಾಡುತ್ತಿದ್ದಳು. ಅಮ್ಮ ನನ್ನ ಕಿರಿಯ ತಮ್ಮನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಜಗಳ ಕೇಳುತ್ತ ಕೂತಿದ್ದಳು. ನಾನು ಗಾಬರಿಗೊಂಡು ಜೋರಾಗಿ ಎಷ್ಟು ಜೋರಾಗಿ ಕಿರುಚಿದೆ ಎಂದರೆ ನಮ್ಮ ಮನೆಯ ಪಕ್ಕದಲ್ಲಿದ್ದ ಭಾರಿ ಹುಣಸೇಮರದ ಮೇಲಿನ ಕಾಗೆಗಳೆಲ್ಲ ಬೆದರಿ ಕೂಗಲಾರಂಭಿಸಿದವು. ಬಳಿಕ ಇಬ್ಬರ ಜಗಳ ನಿಂತಿತು ಅನ್ನುವುದಕ್ಕಿಂತ ಇಬ್ಬರೂ ಶಾಂತರಾದರು. ಆ ರಾತ್ರಿ ಅಪ್ಪ ಯಾರಿಗೂ ಹೇಳದೆ ಹೊರಬಿದ್ದ. ಬಳಿಕ ತಿಂಗಳ ನಂತರ ಅವನು ಲೊಂಡಾದ ಖಣಿಯಲ್ಲಿ ಕೆಲಸದಲ್ಲಿದ್ದಾನೆಂದು ಯಾರೋ ಹೇಳುತ್ತ ಬಂದರು. ನಾಲ್ಕು ವರ್ಷ ಅವನು ಮನೆ ಕಡೆ ಹೊರಳಿಯೂ ನೋಡಲಿಲ್ಲ. ಅಜ್ಜ ಅವನನ್ನು ಮರಳಿ ಕರೆಯಿಸುವ ಪ್ರಯತ್ನವನ್ನೂ ಮಾಡಲಿಲ್ಲ. ಮೂರ್‍ನಾಲ್ಕು ವರ್ಷಗಳ ನಂತರ ಅಪ್ಪ ಮರಳಿಬಂದಾಗ ಅದು ಮೊಹರಂ ಕೊನೆಯ ದಿನವಾಗಿತ್ತು. ಅಜ್ಜ ನೈವೇದ್ಯ ಹಾಗೂ ಮಾಲಿದಾ ಸಿದ್ಧಪಡಿಸುತ್ತಿದ್ದಳು. ಅಮ್ಮ ಅವಳಿಗೆ ಸಹಾಯ ಮಾಡುತ್ತಿದ್ದಳು. ಮೊಹರಂ ನಮ್ಮ ಮನೆಯಲ್ಲಿ ಅತ್ಯಂತ ಮಹತ್ವದ್ದು. ಯಾಕೆಂದರೆ ಅಜ್ಜನ ಮೈಯಲ್ಲಿ ನಾಲಸಾಬ್ ಬರುತ್ತಿತ್ತು. ಇಡೀ ಊರಲ್ಲಿ ಅವನೊಬ್ಬನ ಮೈಯಲ್ಲಷ್ಟೇ ಮುಸ್ಲಿಂ ದೇವರು ಬರುತ್ತಿದ್ದ. ಆಗವನು ಕಚಕಚನೆ ಸೂಜಿ ಚುಚ್ಚಿಕೊಳ್ಳುತ್ತಿದ್ದ, ಗಲ್ಲದೊಳಗೆ ದಬ್ಬಣ ಚುಚ್ಚಿಕೊಳ್ಳುತ್ತಿದ್ದ, ಮಸೀದಿ ಎದುರಿನ ಕೆಂಡದ ಮೇಲಿಂದ ನಡೆಯುತ್ತಿದ್ದ. ಇಡೀ ಊರು ಹಾಗೂ ಸುತ್ತಮುತ್ತಲಿನ ಹಳ್ಳಿ ಜನ ನೋಡಲು ಬರುತ್ತಿದ್ದರು. ಅಜ್ಜನ ಕಾಲಿಗೆರಗಿ ಏನೇನೋ ಪ್ರಶ್ನೆ ಕೇಳುತ್ತಿದ್ದರು. ಆ ದಿನ ನಾನು ತುಂಬಾ ಸಂತೋಷದಲ್ಲಿರುತ್ತಿದ್ದೆ. ಯಾಕೆಂದರೆ ನನಗೆ ಹಲಗೆಯ ತಾಡ್ ऽऽ ತುಮ್ ऽऽ ತುಮ್ ऽऽ ಸದ್ದು ತುಂಬಾ ಸೇರುತ್ತಿತ್ತು. ಮುಸಲ್ಮಾನರ ಮನೆಯ ಚೊಂಗೆ ತಿನ್ನಲು ಸಿಗುತ್ತಿತ್ತು.

ಅಪ್ಪ ಮನೆ ಸೇರಿದಾಗ ನಾನು ಅಜ್ಜ ಊರಲ್ಲಿದ್ದೆವು. ಅಮ್ಮ ನೈವೇದ್ಯ ತಂದು ಅಪ್ಪ ಬಂದ ವಿಷಯ ನನ್ನ ಕಿವಿಯಲ್ಲಿ ಉಸುರಿದಳು. ಆದರೆ ಅಜ್ಜನಿಗೆ ತಿಳಿಸಲಿಲ್ಲ. ಮರುದಿನ ಬೆಳಿಗ್ಗೆ ಎಚ್ಚರಗೊಂಡು ನಾನು ಹೊರಬಂದಾಗ ಅಪ್ಪನ ಅವತಾರ ಬದಲಾಗಿತ್ತು. ತಲೆಗೂದಲು ಹೆಗಲು ದಾಟಿತ್ತು. ಗಡ್ಡ ಪ್ರಚಂಡವಾಗಿ ಬೆಳೆದಿತ್ತು. ಕಣ್ಣು ಕೆಂಪಾಗಿತ್ತು. ಅಪ್ಪ ಭಯಾನಕವಾಗಿ ಕಾಣುತ್ತಿದ್ದ. ಆ ಎಂಟು ದಿನ ಮನೆಯಲ್ಲಿ ಒಬ್ಬರೂ ಮಾತಾಡಲಿಲ್ಲ. ಜಗಳವೂ ಆಗಲಿಲ್ಲ. ನಂತರ ಎಲ್ಲವೂ ಎಂದಿನಂತೆ ಸಾಗಿತು; ಆದರೆ ಅಪ್ಪ ಮತ್ತು ಅಜ್ಜ ಒಬ್ಬರೆದುರು ಒಬ್ಬರು ಬರುತ್ತಿರಲಿಲ್ಲ. ಅಪ್ಪನದು ಒಂದೇ ಕೆಲಸ ಊರೊಳಗೆ ಹೋಗಿ ಮೂರ್‍ನಾಲ್ಕು ಬಾಟಲಿ ಶೆರೆ ತರುವುದು, ಇಡೀ ದಿನ ಕುಡಿಯುವುದು. ಅಜ್ಜ ಬೇಸತ್ತು ಹೋದ. ಅವನು ಊರೊಳಗಿನ ನಾಲ್ಕು ಹಿರಿಯರನ್ನು ಕರೆಯಿಸಿದ. ಅವರೆದುರು ಅಪ್ಪನಿಗೆ ತಿಳುವಳಿಕೆ ಹೇಳಿದ; ಆದರೆ ಏನೂ ಉಪಯೋಗವಾಗಲಿಲ್ಲ. ಬದಲು ಅಪ್ಪ ಜೋಪಡಿಯಲ್ಲಿ ಭಟ್ಟಿಯನ್ನೇ ಆರಂಭಿಸಿದ. ಕೊನೆಗೆ ಅಜ್ಜ ಪಂಚರನ್ನು ಕರೆಸಿ ಅಪ್ಪನನ್ನು ಹೆಂಡತಿ ಮಕ್ಕಳು ಸಹಿತ ಹೊರಹಾಕಲು ತಗಾದೆ ಹಚ್ಚಿದ. ಅಮ್ಮನಿಗೆ ತೀರಾ ಕೆಡುಕೆನಿಸಿತು. ಅವಳು ಉಟ್ಟ ಬಟ್ಟೆಯಲ್ಲಿ ಅಪ್ಪನನ್ನು ಹೊರಬೀಳಲು ಹೇಳಿದಳು. ಅಜ್ಜ ಹೊಲದ ಒಂದು ತುಣುಕೂ ಕೊಡಲಿಲ್ಲ.

ಹಾಗೆ ಅಜ್ಜನ ಹೆಸರಿನಲ್ಲಿ ಮೂರು ಊರಲ್ಲಿ ಹೊಲವಿತ್ತು. ಇಚಲಕರಂಜಿಕರ ದರಬಾರಿನಲ್ಲಿ ಅವರ ಮುತ್ತಜ್ಜನೇನೋ ಇದ್ದನೆಂಬ ಸುದ್ದಿಯನ್ನು ಅಜ್ಜನ ಬಾಯಿಂದ ಕೇಳಿದ್ದೆ. ಅವರ ಪರಾಕ್ರಮಕ್ಕೆ ಮೆಚ್ಚಿ ಘೋರಪಡೆ ಸರಕಾರ ಸಂತಗಾವನಲ್ಲೊಂದು ಜಮೀನು ಕೊಟ್ಟಿದ್ದರಂತೆ. ಪೂರ್ವಜರ ಆ ಕಥೆಯನ್ನು ಅವನು ತುಂಬಾ ಮೈಮರೆತು ವರ್ಣಿಸುತ್ತಿದ್ದ. ಆದರೆ ತನ್ನ ತಂದೆ ಮೂರು ಊರಿನ ಹೊಲ, ಮನೆ ಮಾರಿ ತಿಂದರೆಂದು ಹೇಳುವಾಗ ತುಂಬಾ ಅಸ್ವಸ್ಥಗೊಳ್ಳುತ್ತಿದ್ದ. ನಡು-ನಡುವೆ ನನ್ನ ಅಪ್ಪನನ್ನೂ ಬಯ್ಯುತ್ತಿದ್ದ. ಅವನಿಗೆ ತನ್ನ ಅಪ್ಪನೇ ಮಗನ ರೂಪದಲ್ಲಿ ಬಂದಿದ್ದಾನೆಂದು ಅನಿಸುತ್ತಿತ್ತು. ಒಮ್ಮೊಮ್ಮೆ ಅದನ್ನೂ ಸ್ಪಷ್ಟವಾಗಿ ಹೇಳುತ್ತಿದ್ದನು. ಅವನ ಅಸಮಾಧಾನಕ್ಕೆ ಇದೊಂದೇ ಕಾರಣವಲ್ಲ ಅನ್ನುವುದು ಮಾತ್ರ ಖಚಿತ.

ಮನೆಯ ಸನಿಹದ ಅರಣ್ಯದಲ್ಲಿ ಎತ್ತರವಾದ ದಿನ್ನೆ ನೋಡಿ ಅಮ್ಮ ಅಲ್ಲೊಂದು ಜೋಪಡಿ ಕಟ್ಟಿಕೊಂಡಳು. ಇದರಲ್ಲಿ ಅಪ್ಪನ ಉತ್ಸಾಹ ಹಾಗೂ ಪಾಲು ಕಡಿಮೆಯೇ. ಅಮ್ಮ ಸ್ವಂತ ಬಲದಿಂದ ಇದನ್ನೆಲ್ಲ ಮಾಡುತ್ತಿದ್ದಳು. ಉಳಿದ ಹೊತ್ತು ಮೌನವಾಗಿ ಅಜ್ಜಿಯ ಎದುರು ಓಡುತ್ತಿದ್ದ ಅಮ್ಮ, ಇಷ್ಟೊಂದು ಧಾಡಸಿಯಾಗಲು ಕಾರಣವೇನು, ಎನ್ನುವದು ಒಗಟೇ ಆಗಿತ್ತು. ಅಜ್ಜ ಭತ್ತ ಕುಟ್ಟಲು ಅಮ್ಮನಿಗೊಂದು ಒನಕೆ ನೀಡಿದಳು. ಅನಂತರ ಒಮ್ಮೆ ಅಜ್ಜ ಕಡಗೋಲು ಕೊಟ್ಟ. ಇದಿಷ್ಟೇ ಅಜ್ಜನ ಮನೆಯಿಂದ ಬಂದ ಇಸ್ಟೇಟ್. ಅಮ್ಮ ಈ ಎರಡೂ ವಸ್ತುಗಳನ್ನು ಜೋಪಡಿಯ ಛಾವಣಿಗೆ ಸಿಕ್ಕಿಸಿ ಇಟ್ಟಳು. ಸತತವಾಗಿ ದೊಡ್ಡ ಮನೆಯಲ್ಲಿ ಓಡಾಡಿದ್ದರಿಂದ ನನಗೆ ಅಮ್ಮನ ಜೋಪಡಿಯಲ್ಲಿ ಸಮಾಧಾನ ಸಿಗಲಿಲ್ಲ. ಹೀಗಾಗಿ ನಾನು ಸೋದರರನ್ನು ಹಾಗೂ ಅಮ್ಮನನ್ನು ಬಿಟ್ಟು ಅಜ್ಜಿಯ ಬಳಿಯೇ ತಳವೂರಿದೆ. ಅಜ್ಜನಿಗೆ ಭಯಂಕರ ಆನಂದವಾಯಿತು. ಅನಂತರ ಅವನು ಅಧಿಕ ಪ್ರೀತಿಯಿಂದ ನನ್ನನ್ನು ನೋಡಿಕೊಳ್ಳಲಾರಂಭಿಸಿದನು. ಇಷ್ಟೇ ಅಲ್ಲದೆ ಬರು-ಹೋಗುವವರ ಎದುರು ''ಅವನು ನನ್ನ ಮಗನಲ್ಲ. ಇವನೇ ನನ್ನ ಮಗ'' ಎಂದು ಹೇಳಲಾರಂಭಿಸಿದ. ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಿದ್ದ, ತುಂಬಾ ಮುದ್ದಾಡುತ್ತಿದ್ದ. ಅವನು ಆಜರಾದಲ್ಲಿ ಸೇರುವ ಶುಕ್ರವಾರದ ಸಂತೆಗೆ ಕಾಯಿಪಲ್ಲೆ ತೆಗೆದುಕೊಂಡು ಹೋಗುತ್ತಿದ್ದ. ಹೀಗಾಗಿ ಗುರುವಾರ ರಾತ್ರಿಯೇ ಕಾಯಿಪಲ್ಲೆ ತೆಗೆದುಕೊಂಡು ವಾಸ್ತವಕ್ಕೆ ಹೋಗಬೇಕಾಗುತ್ತಿತ್ತು. ಅಜ್ಜ ನನ್ನನ್ನೂ ಜೊತೆಗೆ ಕರೆದೊಯ್ಯುತ್ತಿದ್ದ. ಮುಕ್ಕಾಂ ಬುರುಡನ ಮನೆಯಲ್ಲಿ ಶಾಂತಾ ಎಂಬ ಹುಡುಗಿ ಅಡುಗೆ ಮನೆಗೇ ಕರೆದೊಯ್ದು ಊಟ ನೀಡುತ್ತಿದ್ದಳು. ಅವರ ಹೊರಗಿನ ಪಡಸಾಲೆಯಲ್ಲಿ ಮಲಗುತ್ತಿದ್ದೆವು. ಮರುದಿನ ಸಂತೆಯಲ್ಲಿ ರುಚಿಕರವಾದ ಭಜಿ ತಿನ್ನಲು ಸಿಗುತ್ತಿತ್ತು.

ನಾನೊಮ್ಮೆ ಸಂತೆಯಿಂದ ಮರಳುವಾಗ ಅಜ್ಜನನ್ನು ಕೇಳಿದೆ, ''ನೀವಿಬ್ಬರು ಏಕೆ ಜಗಳಾಡುತ್ತಿದ್ದಿರಿ ?'' ಆದರೆ ಅಜ್ಜ ಮನೆ ತಲುಪುವವರೆಗೆ ಏನೂ ಮಾತಾಡಲಿಲ್ಲ. ಮನೆ ಸೇರಿದ ಕೂಡಲೇ ಅಜ್ಜಿಗೆ ಹೇಳಿದರು: ''ನಾಳೆ ಇವನನ್ನು ಅವರ ಜೋಪಡಿಗೊಯ್ದು ಬಿಟ್ಟು ಬಾ. ಅವನಿಗೆ ಬುದ್ಧಿ ಮೊಳೆಯಲು ಹತ್ತಿದೆ.'' ಅಜ್ಜ ಮರುದಿನ ನಿಜವಾಗಿಯೂ ಅಮ್ಮನ ಬಳಿಗೊಯ್ದುಬಿಟ್ಟಳು. ನಾನೆಲ್ಲಿ ತಪ್ಪಿದೆ ಅನ್ನುವುದೇ ನನಗೆ ತಿಳಿಯಲಿಲ್ಲ. ಅಮ್ಮ ಕೆದರಿ ಕೆದರಿ ಕೇಳುತ್ತಿದ್ದಳು. ಆದರೆ ಹೇಳುವಂತಹದೇನೂ ನಡೆದಿರಲಿಲ್ಲ. ಆ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಬಳಿಕ ನಾನು ನಿರ್ಧರಿಸಿದೆ; ಇನ್ನು ನಾನು ಕೆಳಗಿನ ಮನೆಗೆ ಹೋಗಲೇಬಾರದೆಂದು. ಆದರೆ ಬಹಳ ಹೊತ್ತು ಇದು ತಾಳಲಿಲ್ಲ. ಅನಂತರ ನಾನು ಹಗಲಿನಲ್ಲಿ ಕೆಳಮನೆಗೆ, ರಾತ್ರಿ ಮಲಗಲು ಮೇಲಿನ ಜೋಪಡಿಗೆ ಹೋಗಲಾರಂಭಿಸಿದೆ. ಹೀಗಿದ್ದಾಗ ಅಮ್ಮ ನನ್ನನ್ನು ಶಾಲೆಗೆ ಕಳಿಸಲಾರಂಭಿಸಿದಳು. ಶಾಲೆ ನನಗೆಂದೂ ಸೇರಲಿಲ್ಲ. ಅಲ್ಲದೆ ಪ್ರತಿದಿನ ಸಾಕಷ್ಟು ದೂರ ನಡೆಯಬೇಕಾಗುತ್ತಿತ್ತು. ಹೀಗಾಗಿ ಬಹಳ ಹೊಡೆತ ತಿಂದು ನಾನು ಅಪರೂಪಕ್ಕೆ ಶಾಲೆಗೆ ಹೋಗುತ್ತಿದ್ದೆ. ಉಳಿದ ಎಲ್ಲ ಹೊತ್ತು ಅಜ್ಜ ಹಾಗೂ ಅವನ ಉದ್ಯೋಗ ಇದರಲ್ಲೇ ಕಳೆಯುತ್ತಿದ್ದೆ. ಒಂದು ಬೆಳಿಗ್ಗೆ ನಾನು ಅಜ್ಜನ ಬಳಿಗೆ ಹೋದಾಗ ಅವನು ಕುಕ್ಕರಗಾಲಿನಲ್ಲಿ ಕೂತಿದ್ದ. ಕ್ಷೌರಿಕನ ಕೂಪು ಕೈಯಲ್ಲಿತ್ತು. ಎದುರಿಗೆ ಹಳದಿ ಪುಡಿ, ಎಂತೆಂಥದೋ ಸೊಪ್ಪು - ಸದೆಯಿತ್ತು. ಅವನು ಕೂಪಿನಿಂದ ಮೊಣಕಾಲು ಕೂದಲು ಬೋಳಿಸಿ ಸ್ವಚ್ಛಗೊಳಿಸಿದ. ಬಳಿಕ ಒಮ್ಮೆಲೆ ಕೂಪಿನಿಂದ ಮೊಣಕಾಲಿಗೆ ಕಚಕಚನೆ ಇರಿದುಕೊಂಡ. ರಕ್ತ ಬಳಬಳ ಸುರಿಯಲಾರಂಭಿಸಿತು. ಅವನ ಮುಖದ ಮೇಲೆ ಯಾವ ಭಾವನೆಯೂ ಮೂಡಲಿಲ್ಲ. ಏಕಾಗ್ರತೆಯಿಂದ ಕಚಕಚ ಇರಿದುಕೊಳ್ಳುವುದು ನಡೆದೇ ಇತ್ತು. ಇಡೀ ಮೊಣಕಾಲು ಸಣ್ಣಗೆ ಕೊಚ್ಚಿ ಬೊಗಸೆಯಷ್ಟು ರಕ್ತ ಹರಿದುಹೋದ ಬಳಿಕ ಹಳದಿ ಹಾಗೂ ಸೊಪ್ಪು - ಸದೆಯನ್ನು ಮೊಣಕಾಲಿಗೆ ತಿಕ್ಕಿದ. ಇದೆಲ್ಲ ಹೇಗೆ ನಡೆದಿತ್ತೆಂದರೆ ಮೊಣಕಾಲು ಒಬ್ಬರದು, ಉಪಚರಿಸುವವನು ಮತ್ತೊಬ್ಬ ಹೀಗೆ. ನನ್ನ ಕಣ್ಣು ಕತ್ತಲೆಗೂಡಿತು.

ಅಮ್ಮನಿಗೆ ಇದನ್ನೆಲ್ಲ ತಿಳಿಸಿದಾಗ ಹೇಳಿದಳು: ''ಅಂವ್ ಮನಶ್ಯಾ ಅಲ್ಲೊ, ರಾಕ್ಷಸ ರಾಕ್ಷಸ.'' ಬಳಿಕ ಬಾಯಿ ಮುಚ್ಚಿದಳು. ಮರುದಿನ ಮುದ್ದಾಂ ಹೋಗಿ ನೋಡಿದರೆ ಮೊಣಕಾಲು ಒಮ್ಮೆಲೆ ಒಣಗಿತ್ತು. ಬಳಿಕ ಅಜ್ಜನನ್ನು ಕೇಳಿದರೆ ಹೇಳಿದ, ''ವರುಷಕ್ಕೊಮ್ಮೆ ಹಿಂಗ್ ಹೊಲ್ಸ ರಕ್ತ ಹೊರಗೆ ಹಾಕಿದರ ರೋಗ ಅನ್ನೋದು ಸನಿಕ ಬರಾಂಗಿಲ್ಲ.'' ಬಳಿಕ ಏನೋ ನೆನಪಾದವನಂತೆ ಕೇಳಿದ, ''ನಿನ್ನಪ್ಪ ಎಲ್ಲಿ ಹೋಗಿದ್ದಾನೋ ?'' ನನಗೆ ಗೊತ್ತಿಲ್ಲೆಂದು ಹೇಳಿದೆ. ಮುದುಕ ಒಮ್ಮೆಲೆ ಕೆರಳಿದ. ''ನೀನೂ ಅವರೊಂದಿಗೆ ಶಾಮೀಲಾಗಿದಿಯೇನು ? ಹ್ಯಾಂಗ್ ಭಿಕ್ಕಿ ಬೇಡಾಕ ಹಚ್ಚತೇನಿ ನೋಡು. ಆವಾಗ ಕಾಲಿಗೆ ಬೀಳತಾ ಬರ್ತಾನು.'' ಬಳಿಕ ಏನೇನೋ ಬಡಬಡಿಸುತ್ತಿದ್ದ. ಅದೇನು ಗೊತ್ತಾಗಲಿಲ್ಲ.

ಅನಂತರ ಒಮ್ಮೆ ಅಪ್ಪ ಹಾಗೂ ಅಜ್ಜ ಒಂದೆಡೆ ಕೂಡಿದರು. ಆ ಪ್ರಸಂಗ ಪೂರ್ಣ ತಿಳಿಯಲು ನನಗೆ ಬಹಳ ವರ್ಷಗಳು ಬೇಕಾದವು. ಒಂದು ಮಧ್ಯಾಹ್ನ ನಾನು ಬಾವಿಯಲ್ಲಿ ಜಳಕ ಮಾಡುತ್ತಿದ್ದೆ. ಆಗ ಅಮ್ಮ ಧಾವಿಸಿ ಬಂದು ಹೇಳಿದಳು, ''ಅರೆ ಓಡು ಓಡು. ಅವರನ್ನು ಕರ್ಕೊಂಡು ಬಾ.'' ಅಮ್ಮ ಗಾಬರಿಗೊಂಡಿದ್ದು ಕಂಡು

ಹಾಗೇ ಹೊರಬಂದೆ. ಒದ್ದೆ ಮೈಯಲ್ಲೇ ತೆರಣೇಕರ ಅವರ ತೋಟದ ಕಡೆ ಓಡಲಾರಂಭಿಸಿದೆ. ಅಪ್ಪ ತೆರಣೇಕರರ ಬಾವಿಯ ಕೆಲಸಕ್ಕೆ ಹೋಗಿದ್ದ. ತೇಕುತ್ತ ತೇಕುತ್ತ ಬಾವಿಯ ಬಳಿಗೆ ಬಂದೆ. ಅಪ್ಪನಿಗೆ ತಕ್ಷಣ ಅಮ್ಮನ ಸಂದೇಶ ತಿಳಿಸಿದೆ. ಏಕೆ ? ಎನ್ನುವುದು ಅಪ್ಪನಿಗೆ ಗೊತ್ತಾಗಲಿಲ್ಲ. ಅವನು ಕೆಲಸ ಅರ್ಧಕ್ಕೆ ನಿಲ್ಲಿಸಿ ನನಗಿಂತ ಮುಂದೆ ಧಾವಿಸಿದ. ನಾನು ಮನೆ ತಲುಪಿದಾಗ ಅಪ್ಪ ನಿತ್ಯ ಬಳಸುತ್ತಿದ್ದ ಕೊಡಲಿ ಎತ್ತಿಕೊಂಡು ಐನಾಪುರ ದಿನ್ನೆಯತ್ತ ಹೊರಟ. ಅಮ್ಮನಿಗೆ ಕೇಳಿದರೆ ಅವಳೇನೂ ಹೇಳಲೇ ಇಲ್ಲ. ಆದರೆ ಭಯಂಕರ ಅಸ್ವಸ್ಥಳಾಗಿದ್ದಳು. ಬಳಿಕ ನನಗೆ ಬೇಸರ ಬಂತು. ಅನಂತರ ನಾನು ಕೆಳಗಿನ ಮನೆಗೆ ಹೋದೆ. ಮುದುಕಿ ಅತ್ತು ಅತ್ತು ಸುಸ್ತಾಗಿದ್ದಳು. ಆದರೂ ಬಡಬಡಿಕೆ ನಡೆದೇ ಇತ್ತು. ಅವಳು ಮುದುಕನನ್ನು ಬಾಯಿಗೆ ಬಂದಂತೆ ಬಯ್ಯಲಾರಂಭಿಸಿದಳು. ಅಂದರೆ ಭಾನಗಡಿ ಅಜ್ಜ ಇಟ್ಟುಕೊಂಡಿದ್ದ ಆ ಹೆಂಗಸಿಗೆ ಸಂಬಂಧಿಸಿದ್ದು ಎಂದಾಯಿತು. ಆದರೆ ನಿಜವಾಗಿ ಏನು ನಡೆದಿದೆ ಅನ್ನೋದ ಯಾರೂ ಹೇಳುತ್ತಿರಲಿಲ್ಲ.

ಸಂಜೆಯ ಮಬ್ಬುಗತ್ತಲೆಯಲ್ಲಿ ಅಜ್ಜ ಗಾಡಿ ತೆಗೆದುಕೊಂಡು ಬಂದ. ಅಪ್ಪ ಗಾಡಿಯ ಹಿಂದೆ. ಗಾಡಿ ಕೆಳಗಿನ ಬಾಗಿಲಲ್ಲಿ ನಿಂತಿತು. ಅಪ್ಪ ಗಾಡಿಯ ಸಾಮಾನುಗಳನ್ನೆಲ್ಲ ಎತ್ತಿ ಎತ್ತಿ ಸಿಟ್ಟಿನಿಂದ ಮನೆಯೊಳಗೆ ತಂದು ಅಪ್ಪಳಿಸಿದ. ಪಾತ್ರೆ-ಪರಡಿ, ಪೆಟ್ಟಿಗೆ, ಮೂರ್ನಾಲ್ಕು ತಪೇಲಿ, ಎರಡು ದೊಡ್ಡ ಹಂಡೆ, ಹೀಗೆ ಏನೇನೋ ಸಾಮಾನುಗಳಿದ್ದವು. ಅಜ್ಜಿ ಜೋರಾಗಿ ಬಯ್ಯುತ್ತಿದ್ದಳು. ಅವಳದ್ದೊಂದೇ: ''ಆ ರಂಡಿಯ ಸಾಮಾನು ನನ್ನ ಮನೆಯೊಳಗೆ ಬ್ಯಾಡ್.'' ಕೆರಳಿದ ಅಪ್ಪ ತಪೇಲಿಯನ್ನೇ ಮುದುಕಿ ಮೈಮೇಲೆ ಒಗೆದ. ಮುದುಕಿ ಚೀರಿ ಹುಯ್ಯಲೆಬ್ಬಿಸಿದಳು. ಅಮ್ಮ ಧಾವಿಸಿ ಬಂದಳು. ಸಾಮಾನುಗಳನ್ನೆಲ್ಲ ಇಳಿಸಿದ ಬಳಿಕ ಅಪ್ಪ ಅಮ್ಮನನ್ನು ಕರೆದುಕೊಂಡು ಮೇಲಿನ ತನ್ನ ಜೋಪಡಿಗೆ ತೆರಳಿದ, ಅವನ ಹಿಂದೆ ನಾನು.

ಅನಂತರ ಬಹಳ ದಿನಗಳ ನಂತರ ಕ್ರಮೇಣ ಗೊತ್ತಾಯಿತು. ಅಜ್ಜನ ಸ್ಟೆಪ್ನಿ ಅಂದರೆ ಇಟ್ಟುಕೊಂಡ ಹೆಂಗಸು ತೀರಿಕೊಂಡ ಬಳಿಕ ಅಜ್ಜ ಅವಳ ಮನೆಗೆ ಕೀಲಿ ಹಾಕಿದ. ಅನಂತರ ಗಾಡಿ ತೆಗೆದುಕೊಂಡು ಸಾಮಾನುಗಳನ್ನು ತರಲು ಹೋದಾಗ ಆಕೆಯ ನೆಂಟರು ಅಡ್ಡಗಟ್ಟಿದರು. ಅಜ್ಜನನ್ನು ಮುತ್ತಿದರು. ಏಕಾಕಿ ಮನುಷ್ಯ ಸ್ವಲ್ಪ ಬೆದರಿದ. 'ಹೊಡೆದಾಟ ನಡೆದದ ಬೇಗ ಬಾ' ಎಂದು ಅಪ್ಪನಿಗೆ ಸುದ್ದಿ ತಲುಪಿತು. ಅಪ್ಪ ತಲುಪಿದ. ಜನ ಕೊಡಲಿ ನೋಡಿ ಬೆದರಿದರು. ಕೊಲೆ-ಬಲಿ ಬೇಡ. ಅಜ್ಜ ಆ ಹೆಂಗಸನ್ನು ಇಟ್ಟುಕೊಂಡಿದ್ದ ಎಂದ ಮೇಲೆ ಸಾಮಾನುಗಳನ್ನು ಒಯ್ಯಲಿ ಎಂದರು. ಪ್ರಕರಣ ಮುಗಿಸಿದರು. ಸಾಮಾನು ಮನೆಗೆ ಬಂತು. ಮರುದಿನ ಆ ಸಾಮಾನುಗಳನ್ನು ಅಪ್ಪ ಇಲ್ಲದ ಹೊತ್ತಿನಲ್ಲಿ ಅಜ್ಜ ತಂದು ನಮ್ಮ ಜೋಪಡಿಯಲ್ಲಿ ಒಗೆದ. ಆದರೆ ಇವರಿಬ್ಬರು ಒಂದಾದದ್ದು ಹೇಗೆ ? ಈ ಪ್ರಶ್ನೆ ನನ್ನನ್ನು ಕಾಡಲಾರಂಭಿಸಿತು. ಅನಂತರ ಅಮ್ಮ ನನ್ನನ್ನು ಶಿಕ್ಷಣಕ್ಕಾಗಿ ತನ್ನ ತವರಿಗೆ ಕಳಿಸಿದಳು. ದೊಡ್ಡಣ್ಣನೂ ಅಲ್ಲೇ ಇದ್ದ. ಈಗ ನಾನು ಬರೇ ರಜೆಗಷ್ಟೇ ಮನೆಗೆ ಬರುತ್ತಿದ್ದೆ. ಅದೂ ಅಪರೂಪಕ್ಕೆ.

ಒಮ್ಮೆ ಬೇಸಗೆ ರಜೆಗೆ ಮನೆಗೆ ಬಂದಿದ್ದೆ. ಅಪ್ಪ ಯಾರದೋ ಕಬ್ಬಿನ ಗಾಣದಲ್ಲಿ ಕೆಲಸಕ್ಕಿದ್ದ. ಸತತ ಒಲೆಯೆದುರು. ದೇಹವೆಲ್ಲ ಕರ್ರಗಾಗಿತ್ತು. ಮುದುಕ ಹೊಲ ಕೊಡದೆ ಇರುವುದರಿಂದ ನಮ್ಮ ಮನೆಯವರಿಗೆಲ್ಲ ಈ ಅವಸ್ಥೆ ಬಂದಿದೆ ಎನ್ನುವುದು ಮೊದಲಬಾರಿಗೆ ಗಮನಕ್ಕೆ ಬಂತು. ಅನಂತರ ನೇರವಾಗಿ ಮುದುಕನ ಎದುರು ಹೋದೆ. ಮುದುಕಿ ಸಾಯಲು ಬಿದ್ದಿತ್ತು, ಆದರೆ ಇವನು ಮಾತ್ರ ಕಟ್ಟುಮಸ್ತಾಗಿದ್ದ. ಹೇಳಿದೆ, ''ನಮ್ಮ ಪಾಲಿನ ಹೊಲ ನಮ್ಗೆ ಕೊಡು.'' ಮುದುಕ ಕಣ್ಣರಳಿಸಿ ನೋಡಿದ. ಬಳಿಕ ಹೇಳಿದ, ''ದೊಡ್ಡಾಂವ ಆದಿ ಅಪ್ಪ, ಪಾಲು ಬೇಡಾಕ ಬಂದಿ.'' ನಾನು ಮತ್ತದೇ ಹೇಳಿದೆ. ಕೆರಳಿದ ಮುದುಕ ಬಡಿಗೆ ಎತ್ತಿ ಬಡಿಯಲು ಬೆನ್ನುಹತ್ತಿದ. ನಾನವನಿಗೆ ಸಿಗುವುದು ಸಾಧ್ಯವಿರಲಿಲ್ಲ. ಇನ್ನು ಈ ಮುದುಕನಿಗೆ ಹೀಗೆ ಬಿಡಬಾರದೆಂದು ಪ್ರತಿದಿನ ಹೊಸ ಹೊಸ ಕಿರುಕುಳ ಆರಂಭಿಸಿದೆ. ಅದರಲ್ಲಿ ರಾತ್ರಿ, ಅವನ ಮನೆ ಮೇಲೆ ಕಲ್ಲು ಒಗೆಯುವುದು ಮೊದಲ ಕಾರ್ಯಕ್ರಮ; ಆದರೆ ಮುದುಕ ಇದಕ್ಕೆಲ್ಲ ಹಿಂಜರಿಯುವ ಪೈಕಿಯಲ್ಲ.

ಅನಂತರ ಮರಕ್ಕೆ ಸಾಕಷ್ಟು ಮಾವಿನ ಹಣ್ಣು ಹತ್ತಿತ್ತು. ಎಲ್ಲ ಉದುರಿಸಿಬಿಟ್ವಿ. ಮುದುಕ ಓಡುತ್ತ ಬಂದ. ಅಣ್ಣ ಟೊಂಗೆ ಏರಿ ಕೂತಿದ್ದ. ನಾನು ಮತ್ತೂ ಮೇಲಿದ್ದೆ. ಮುದುಕ ಅಣ್ಣನ ಕಾಲು ಹಿಡಿದು ಎಳೆಯಲಾರಂಭಿಸಿದ. ನಾನು ಮರದ ತುದಿಯಿಂದ ಕೆಳಗೆ ಜಿಗಿದೆ. ಅಣ್ಣ ಸರ್ರನೆ ಇಳಿದ. ಮುದುಕನ ಕೈಲಿದ್ದ ಕೋಲು ಕಸಿದುಕೊಂಡು ಅವನನ್ನು ಸಿಕ್ಕಾಪಟ್ಟೆ ಥಳಿಸಿದೆವು. ನನಗೆ ತೀರಾ ಕೆಟ್ಟೆನಿಸಿತು. ಆದರೆ ಅಣ್ಣ ಬಿಡಲಿಲ್ಲ. ಹೊಡೆದೇ ಹೊಡೆದ. ಮುದುಕ ಗಾಯಾಳು. ಅಷ್ಟರಲ್ಲಿ ಅವನಿಗೆ ಬೇಕಾದವರು ಯಾರು ಯಾರೋ ಬಂದರು. ಮುದುಕ ತಾಲೂಕಿಗೆ ಹೋದ. ಡಾಕ್ಟರ ಸರ್ಟಿಫಿಕೇಟ್ ಪಡೆದು ನಮ್ಮ ಮೇಲೆ ಪೊಲೀಸ್ ಕೇಸೇ ಮಾಡಿಬಿಟ್ಟ. ಬಳಿಕ ನಾವು ಪೊಲೀಸ್ ಠಾಣೆ ಸೇರಬೇಕಾಯಿತು. ಆ ರಾತ್ರಿ ಮುದುಕನ ಹಾಗೂ ನನ್ನ ಎಲ್ಲ ಸಂಬಂಧ ಕಡಿದುಹೋಯಿತು.

ವಾಸ್ತವಿಕವಾಗಿ ಮುದುಕನ ಮಾವಿನ ಹಣ್ಣು ತಿನ್ನುವವರು ಯಾರೂ ಇರಲಿಲ್ಲ. ನಾವು ಮಾವು ಕೆಡವಿದ್ದರಿಂದ ಅವನಿಗೇನೂ ಹಾನಿಯಾಗುತ್ತಿರಲಿಲ್ಲ. ಆದರೂ ಅವನು ಬಂದ. ನಾವೂ ಅವನ ಮೇಲೆ ಕೈ ಮಾಡಬಾರದಿತ್ತು. ಇದು ನಮ್ಮ ತಪ್ಪು. ಆದರೆ ಮುದುಕ ಹೆಚ್ಚು ಮಳೆಗಾಲ ಕಂಡವನು. ಅವನು ಮಕ್ಕಳ ತಪ್ಪನ್ನು ಹೊಟ್ಟೆಯೊಳಗೆ ಹಾಕಿಕೊಳ್ಳಬೇಕಿತ್ತು. ಅವನಿಗೆ ಈ ಪೊಲೀಸರ ವಿಷಯ ಹೊಳೆದದ್ದು ಹೇಗೆ ? ನಾವು ಜಾಮೀನು ನೀಡಿದೆವು. ಅಜ್ಜ ಪೊಲೀಸರಿಗೆ ಎರಡು ಸಾವಿರ ತಿನ್ನಿಸಿದ್ದು ಅನಂತರ ತಿಳಿಯಿತು. ನಾವು ಪೊಲೀಸ್ ಠಾಣೆಯಿಂದ ಮರಳಿದೆವು; ಆದರೆ ಅಪ್ಪ ಯಾವ ಚೌಕಾಶಿಯನ್ನೂ ಮಾಡಲಿಲ್ಲ. ಜಗಳ ಏಕಾಯ್ತು ಎಂದೂ ಕೇಳಲಿಲ್ಲ.

ಅನಂತರ ಮಳೆಗಾಲದಲ್ಲೊಮ್ಮೆ ಸಿಟ್ಟಿನ ಭರದಲ್ಲಿ ಮೆಣಸಿನ ಸಸಿಗಳನ್ನೆಲ್ಲ ಖುರುಪಿಯಿಂದ ಕಚಕಚ ಕಡಿದೆ. ಮತ್ತೆ ಪೊಲೀಸರ ಬಳಿಗೆ ಹೋದ; ಆದರೆ ಹಿಡಿಯಲು ಯಾರೂ ಬರಲಿಲ್ಲ. ಹೀಗೆ ಇದು ದಿನ-ದಿನಕ್ಕೆ ಬೆಳೆಯಲಾರಂಭಿಸಿತು. ಅಂಥದರಲ್ಲಿ ಮುದುಕಿ ಗೊಟಕ್ ಅಂತು. ಯಾರೋ ಹೇಳಿದರು, ''ಕೊನೆಗೆ ಮಣ್ಣಿಗಾದರೂ ಹೋಗು''. ಹೋಗಬೇಕೆಂದು ಅನಿಸಲಿಲ್ಲ. ನಾನಾಗ ಕಾಲೇಜಿನಲ್ಲಿದ್ದೆ; ಆದರೆ ಅಪ್ಪ ಎಲ್ಲ ವ್ಯವಸ್ಥಿತವಾಗಿ ಮಾಡಿ ಮುಗಿಸಿದ. ಇದು ಅನಂತರ ಗೊತ್ತಾಯಿತು. ಆದರೆ ಒಮ್ಮೆ ಹೋಗಿ ಜಗಳವನ್ನೇ ತೆಗೆದೆ. ಹೇಳಿದೆ, ''ಏನ್ ಕಾರಣವಿತ್ತು ಮಣ್ಣಿಗೆ ಹೋಗೋದು ?'' ಆದರೆ ಅಪ್ಪ ಏನೂ ಮಾತಾಡಲಿಲ್ಲ. ಬರೇ ಅವನು ತಂಬಾಕು ಚಿಲುಮಿಯಲ್ಲಿ ತುಂಬಿ, ದೀರ್ಘವಾದ ಜುರುಕಿ ಎಳೆದ ಮತ್ತು ಹೊಗೆ ಬಿಡಲಾರಂಭಿಸಿದ. ಆದರೆ ಮುದುಕಿ ತೀರಿಕೊಂಡ ತಿಂಗಳೊಪ್ಪತ್ತಿನಲ್ಲೇ ಮುದುಕ ಪಿತ್ರಾರ್ಜಿತವಾದ ಹೊಲವನ್ನು ಮಾರಲು ಸಿದ್ಧನಾದ. ಊರೊಳಗಿನ ಜನ ಜಗಿದಾಡಲಾರಂಭಿಸಿದರು. ನಾವು ಕಾಯ್ದೆ ಪ್ರಕಾರ ಮುಂದಿನ ಕ್ರಮ ಕೈಕೊಳ್ಳಬೇಕಿತ್ತು. ಅಮ್ಮನ ತವರಿನವರೂ ಓಡಾಡಲಾರಂಭಿಸಿದರು. ಆದರೆ ಅಪ್ಪನ ಮೇಲೆ ಯಾವ ಪರಿಣಾಮವೂ ಇಲ್ಲ. ಒಮ್ಮೆ ಚುಚ್ಚಿ ಕೇಳಿದಾಗ ಹೇಳಿದರು, ''ಅವರ ಅಜ್ಜ-ಮುತ್ತಜ್ಜ ಗಳಿಸಿದ್ದುದು.'' ಇದರ ಮುಂದೆ ಏನಿಲ್ಲ. ಅಮ್ಮ ಭಯಂಕರ ಗದ್ದಲ ಮಾಡಿದಳು. ಮುದುಕನನ್ನು ಹೊಲದಲ್ಲೇ ಅಡ್ಡಗಟ್ಟಿ ಓಡಿಸಿದಳು. ಅನಂತರ ಮೇಲಿಂದ

ಮೇಲೆ ಜಗಳ ನಡೆಯಲಾರಂಭಿಸಿತು. ಜಗಳ ಬಿಟ್ಟು ಬೇರೇನೂ ಇಲ್ಲ. ಈಗಿನ ಹೋಳಿಹುಣ್ಣಿಮೆಗೆ ಆರಂಭಗೊಂಡ ಜಗಳ ಮುಂದಿನ ಹೋಳಿಹುಣ್ಣಿಮೆ ತನಕ ನಡೆಯುತ್ತಿತ್ತು. ಆ ಹೆಂಗಸು ಒಬ್ಬಳೇ ಜಗಳಾಡುತ್ತಿದ್ದಳು. ಅಪ್ಪ ಶಾಂತ. ಅನಂತರ ಮಾತ್ರ ನನಗೆ ಮುದುಕನ ಎಸ್ಟೇಟ್ ಬಗ್ಗೆಯೇ ತಿರಸ್ಕಾರ ಮೂಡಲಾರಂಭಿಸಿತು.

ಸೋತ ಮುದುಕ ನೆಲ ಹಿಡಿದ. ಏಳು ಊರಿನ ಸರದಾರ ರೊಟ್ಟಿಗೂ ಗತಿ ಕಾಣದಾದ. ಆಗವನು ಅಪ್ಪನ ನೆನಪು ತೆಗೆಯುತ್ತಿದ್ದ. ಆದರೆ ಅಮ್ಮನ ಬೆದರಿಕೆ ಎಷ್ಟಿತ್ತೆಂದರೆ ಅಪ್ಪ ಆ ಕಡೆ ಹೋಗುವದೂ ಕಠಿಣವಾಗಿತ್ತು. ನೆಲ ಹಿಡಿದ ಮುದುಕನನ್ನು ನೋಡಿ ಬರುವಂತೆ ಹಲವರು ಸೂಚಿಸಿದರು. ಆದರೆ ಸಾಧ್ಯವಾಗಲಿಲ್ಲ. ಅವನು ಬಾಲ್ಯವನ್ನು ಸಾಕಷ್ಟು ಕೊರೆದಿದ್ದ, ವ್ಯಾಪಿಸಿದ್ದ. ಒಂದು ದಿನ ಮುದುಕ ಕೊನೆಗಳಿಗೆ ಎಣಿಸುತ್ತಿದ್ದಾನೆಂದು ಸುದ್ದಿ ಬಂತು.

ಮೊಮ್ಮಕ್ಕಳ ಮುಖ ನೋಡಬೇಕಾಗಿದೆ, ಬಂದು ಹೋಗು. ಸುದ್ದಿ ಕೇಳಿದ ಬಳಿಕ ಹೋಟೆಲಿಗೆ ಹೋಗಿ ಚಹಾ ಕುಡಿದುಬಂದೆ. ಆಗ ನಾನೊಂದು ಒಳ್ಳೆ ಕಾರಖಾನೆಯಲ್ಲಿ ಕೆಲಸಕ್ಕಿದ್ದೆ. ಪ್ರಯತ್ನಿಸಿದ್ದರೆ ಕಂಪನಿ ಕಾರು ತೆಗೆದುಕೊಂಡು ಹೋಗಿ ನೋಡಿ ಬರಬಹುದಿತ್ತು. ಆದರೆ ಮನಸ್ಸಾಗಲಿಲ್ಲ. ಇಡೀ ದಿನ ಹಾಡು ಗುಣಗುಣಿಸುತ್ತಾ ಅಲೆದಾಡಿದೆ. ನಾನು ಹೀಗೇಕೆ ನಡೆದುಕೊಳ್ಳುತ್ತಿದ್ದೇನೆ ಅನ್ನುವುದೂ ಗೊತ್ತಾಗುತ್ತಿರಲಿಲ್ಲ.

ಮುದುಕ ತೀರಿಕೊಂಡ ಸುದ್ದಿ ಬಂತು. ಬ್ಯಾಗ್ ತುಂಬಿದೆ. ನನಗಾಗಿ ಹೆಣ ಇಡುವುದಿಲ್ಲವೆಂದು ಗೊತ್ತಿತ್ತು. ನನಗದನ್ನು ನೋಡಬೇಕೆಂದೂ ಅನಿಸಲಿಲ್ಲ. ಸಿಕ್ಕ ಗಾಡಿ ಹಿಡಿದು ಊರು ಸೇರಿದೆ. ನಾನು ಸಕಾಲಕ್ಕೆ ಬರದೆ ಇದ್ದುದರ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳಲಿಲ್ಲ. ಜನರೀತಿಗನುಗುಣವಾಗಿ ವಾರ ನಿಂತೆ.

ಉತ್ತರ ಕಾರ್ಯ ಮುಗಿಸಿದೆ. ಆ ದಿನ ಹೊಟ್ಟೆತುಂಬ ತಿಂದೆ. ಮರಳಿ ಹೊರಟಾಗ ಅಪ್ಪ ಐನಾಪುರ ದಿನ್ನೆವರೆಗೆ ಬಂದ. ಗಾಡಿ ಬರುವ ವೇಳೆಗೆ ಹೇಳಿದ, ''ಮನಶ್ಯಾ ಇರ್ತಾನು, ಹೋಗ್ತಾನು, ಆದರ ಕರುಳ ಒಂದೇ, ಅನ್ನೋದ ಮರೀಬೇಡ. ಮುದುಕನ ಅಗ್ನಿಗ ಬರಬೇಕಿತ್ತು, ತಪ್ಪಿದಿ. ಈಗ ನಿನಗ ನಿನ್ನದೆ ಸಾಮ್ರಾಜ್ಯ. ಆದರೂ ಮಣ್ಣಿನ ಋಣ ಮಾತ್ರ ಮರೀಬ್ಯಾಡ.''

ಅಪ್ಪ ಹೊರಳಿದ. ಗಾಡಿ ಬಂತು. ಒಳಗೆ ಕೂತೆ. ಆಗ ಅಪ್ಪ ಹಾಗೂ ಅಜ್ಜನ ನಿಜವಾದ ಸಂಬಂಧವೇನು ? ಎಂದು ಮತ್ತೊಮ್ಮೆ ಮನದಲ್ಲಿ ಮೂಡಿತು.

ನನ್ನ ಬದಲು ನನ್ನ ಅಪ್ಪ ಅವನ ಅಪ್ಪ ಪರಸ್ಪರರು ಹೇಗೆ ನಡೆದುಕೊಳ್ಳುತ್ತಿದ್ದರೆಂಬುದು ನೀವೊಂದು ವೇಳೆ ಶೋಧಿಸಲು ಪ್ರಯತ್ನ ಮಾಡಿದರೆ ನಿಮಗೆ ಅನುಕೂಲವಾಗಲೆಂದು ಎಲ್ಲ ವಿವರವನ್ನು ನಿಮ್ಮೆದುರಿಗೆ ಇಟ್ಟಿದ್ದೇನೆ. ಈ ವಿವರ ಸತತವಾಗಿ ನನ್ನೆದುರಿಗೆ ಬರುತ್ತದೆ. ಆಗಾಗ ನಾನು ಅದನ್ನು ಉಜಳಗಿ ಮಾಡುತ್ತೇನೆ. ಆದರೂ ನನಗೆ ಉತ್ತರದ ಸಮೀಪ ಸಹ ಹೋಗುವದಾಗಲಿಲ್ಲ. ಹೀಗಾಗಿ ನಾನೊಮ್ಮೆ ಬೇಸತ್ತು ಒಂದು ದಿನ ಮಲ್ಟಿನ್ಯಾಷನಲ್ ಕಂಪೆನಿಯಲ್ಲಿ ಕೆಲಸ ಮಾಡುವ ನನ್ನ ಗೆಳೆಯನೆದುರು ನಾನಿದನ್ನೆಲ್ಲ ಮಂಡಿಸಿದೆ. ಆಗವನು ಹೇಳಿದ: ''ಈ ಪ್ರಕರಣವನ್ನು ನನ್ನಿಂದ ಬಿಡಿಸುವುದು ಸಾಧ್ಯವಿಲ್ಲ. ಯಾಕೆಂದರೆ ನಿನ್ನಪ್ಪ ಗ್ರಾಹಕನಲ್ಲ. ಅಪ್ಪನ ಅಪ್ಪನಂತೂ ಅಲ್ಲವೇ ಅಲ್ಲ. ಅಂದ ಮೇಲೆ ಯಾರು ಗ್ರಾಹಕನಲ್ಲವೋ ಅವನ ಬಗ್ಗೆ ನನಗೆ ಯೋಚಿಸುವುದು ಸಾಧ್ಯವಿಲ್ಲ. ಆದರೆ ನಿನ್ನ ಬಗ್ಗೆ ಮಾತ್ರ ಖಂಡಿತಕ್ಕೂ ನಾನು ಯೋಚಿಸಬಲ್ಲೆ. ಯಾಕೆಂದರೆ ನೀನು ನಮ್ಮ ಕಾಲದಲ್ಲಿ ವ್ಯವಹರಿಸುವ ಒಬ್ಬ ಉತ್ತಮ ಗ್ರಾಹಕ. ನೀನು ನಿನ್ನ ಅಪ್ಪನನ್ನು ಎನ್‌ಕ್ಯಾಶ್ ಮಾಡಬಲ್ಲೆ.''

ತಲೆ ಧಿಮ್ಮೆಂದಿತು. ಈ ಮನುಷ್ಯ ಮಾತಾಡುತ್ತಿರುವುದೇನು ? ಶಾಂತವಾಗಿ ಕೂತು ಯೋಚಿಸಿದ ಬಳಿಕ ಹೊಳೆಯಿತು. ಮುದುಕ ತೀರಿಕೊಂಡ ಬಳಿಕ ಅಮ್ಮನ ಬಗ್ಗೆ ಹೇಳುವಾಗ ನೆರೆಯವನೊಬ್ಬ ಹೇಳುತ್ತಿದ್ದ, ''ಆಕಿ ತುಂಬಾ ಅಸ್ವಸ್ಥ ಆಗಿದ್ದಳು. ಭಯಂಕರ ಅಳುತ್ತಿದ್ದಳು. ಜನ ಚಿತೆ ತಯಾರಿಸುವಾಗ ಅವಳು ಸರ‍್ರನೆ ಎದ್ದಳು. ಅಳು ನಿಲ್ಲಿಸಿ ಜೋಪಡಿಯೊಳಗ ಹೋದಳು. ಮುದ್ಕ ಕೊಟ್ಟ ಕಡಗೋಲು, ಮುದ್ಕಿ ಕೊಟ್ಟ ಒನಕಿ ಹೊರತಂದು ಹೇಳಿದಳು: 'ಇದನ್ನು ಚಿತೆಯೊಳಗೆ ಹಾಕಿರಿ.' ಬಳಿಕ ಮತ್ತೆ ಬಂದು ಶಾಂತವಾಗಿ ಅಳಲಾರಂಭಿಸಿದಳು. ಮುದ್ಕನ ಹೆಣದ ಹತ್ತಿರಾನೇ ಕೂತಿದ್ದಳು.''

ಅವರದ್ದೆಲ್ಲವೂ ಗಟ್ಟಿ ಹಾಗೂ ಅನಾಕಲನೀಯವಾಗಿತ್ತು. ಮಣ್ಣಿನ ಹೆಂಟೆಯಷ್ಟು ಗಟ್ಟಿ ; ಮಳೆ ಬಂದಾಗ ಅಷ್ಟೇ ಸಹಜವಾಗಿ ಕರಗುತ್ತಿತ್ತು.

ಆದರೆ ನಮ್ಮದು ?

ಅನುವಾದ : **ಚಂದ್ರಕಾಂತ ಪೋಕಳೆ**

ಬಿ. ಎಸ್. ಪಿ. ಯು. ಕಾಲೇಜು, ಬೇಡಕಿಹಾಳ - ೫೯೧ ೨೧೪, ಬೆಳಗಾವಿ ಜಿಲ್ಲೆ



## ಅರಿವಿನ ಪಯಣ (ನಾಟಕ)

*ಪ್ರೊ॥ ಸಂಪಿಗೆ ತೋಂಟದಾರ್ಯ*

**ಪುಟ : 48** **ಬೆಲೆ : ರೂ. 20**

**ಸಂಪಿಗೆ ಪ್ರಕಾಶನ**, ಎ-27, ಪ್ರಾಧ್ಯಾಪಕರ ನಿವಾಸ, ಕರ್ನಾಟಕ ವಿಶ್ವವಿದ್ಯಾಲಯ ಆವರಣ, ಧಾರವಾಡ - 580 003

*ಆಧುನಿಕ ವಿಜ್ಞಾನ ಮಾನವನಿಗೆ ಪ್ರಪಂಚದ ಬಹಳಷ್ಟು ನಿಗೂಢಗಳನ್ನೂ ಆಶ್ಚರ್ಯದ ಸಂಗತಿಗಳನ್ನೂ ತೆರೆದಿಟ್ಟು ಆತನ ಜ್ಞಾನದ ಅಂಗಣವನ್ನು ವಿಸ್ತರಿಸಿದೆ. ಪ್ರಸ್ತುತ ನಾಟಕ ವಿಜ್ಞಾನ ನಡೆದು ಬಂದ ದಾರಿಯತ್ತ ಒಂದು ಅವಲೋಕನ. ಪಾತ್ರಗಳ ಮೂಲಕ ವಿಜ್ಞಾನಿಗಳು ಸಾಧಿಸುತ್ತ ಬಂದ ಹಂತ-ಹಂತವಾದ ಏಳಿಗೆಯನ್ನು ವಿವರಿಸುವ ಪ್ರಯತ್ನ. ಕೊನೆಯಲ್ಲಿ ಟಿಪ್ಪಣಿಗಳ ಮೂಲಕ ಏಳು ಜನ ವಿಜ್ಞಾನಿಗಳ ಕಾಲ-ದೇಶ-ಸಾಧನೆಗಳನ್ನು ಪರಿಚಯಿಸಲಾಗಿದೆ.*

## ಕರ್ನಾಟಕ ದೇವದಾಸಿಯರ ಸಮಗ್ರ ಅಧ್ಯಯನ



*ಚೆನ್ನಣ್ಣ ವಾಲೀಕಾರ*

**ಪುಟ : 776** **ಬೆಲೆ : ರೂ. 1,000**

**ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ**, ಬಡೇಪೂರ ಕಾಲೋನಿ, ಗುಲಬರ್ಗಾ-585 105

*ಹತ್ತು ವರ್ಷಗಳ ಸುದೀರ್ಘ ಅಧ್ಯಯನದ ಫಲವಾಗಿ ಕನ್ನಡ ನಾಡಿನ ದೇವದಾಸಿಯರ ಸಮಸ್ಯೆಗಳೆಲ್ಲ ಬೃಹದಾಕಾರ ತಾಳಿ ನಿಂತಂತೆ ಬೃಹದ್ಗ್ರಂಥವೊಂದು ಹೊರಬಂದಿದೆ. ಜೊತೆಗೆ ಹೀನಾಯ ಪದ್ಧತಿಯ ದೆಸೆಯಿಂದ ನೊಂದ ಸೋದರಿಯರಿಗೆ ಹೊಸಬಾಳ ದಾರಿ ತೋರಬೇಕಾದ ಬೃಹತ್ ಜವಾಬ್ದಾರಿಯನ್ನೂ ಹೊರಿಸಿದೆ. ಇತಿಹಾಸವನ್ನು ಶೋಧಿಸುವಲ್ಲಿ ಡಾ॥ ಚೆನ್ನಣ್ಣ ವಾಲೀಕಾರರು ತೋರಿದ ತಾಳ್ಮೆ-ಶ್ರಮ ಇಲ್ಲಿ ಎಷ್ಟು ಬಣ್ಣಿಸಿದರೂ ಕಡಿಮೆಯೆ. ಹೀನ ಸಂಸ್ಕೃತಿಯೊಂದರ ಪೋಷಕರು ಸಮಾಜಕ್ಕೆ ನೀಡಿದ ದುರ್ದಾನವೊಂದರ ಅದ್ಭುತ ಅಧ್ಯಯನ.*



## ಮಾನವೀಯ ಮೌಲ್ಯ ಮತ್ತು ಧರ್ಮ (ವೈಚಾರಿಕ ಕೃತಿ)

*ಸುಮುಖಾನಂದ ಜಲವಳ್ಳಿ*

**ಪುಟ : 128** **ಬೆಲೆ : ರೂ. 60**

**ಸುಮುಖ ಪ್ರಕಾಶನ**, 'ಕಾವ್ಯಶ್ರೀ', ಕಿನ್ನಿಗೋಳಿ-574150 ದ.ಕ.

*ಇಂದು ಧರ್ಮಕ್ಕೆ ವಿವಿಧ ವ್ಯಾಖ್ಯಾನಗಳಿವೆ. ಮನುಷ್ಯ ಉಪಕಾರಿಯಾಗಿ ಬಾಳಲು ರೂಪಿಸಿಕೊಂಡ ಕಟ್ಟುಪಾಡುಗಳಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ವಿಚಾರಗಳಲ್ಲಿ ಬಂದ ಭಿನ್ನಾಭಿಪ್ರಾಯಗಳಿಂದ ಭಿನ್ನ ಸಂಸ್ಕೃತಿಗಳೇ ರೂಪುಗೊಳ್ಳುತ್ತ ನಡೆದು, ಮತಗಳಾಗಿ ಒಡೆದು ಇಂದು ಮತಾಂಧತೆಯ ಅಪಾಯಕಾರಿ ಘಟ್ಟ ತಲುಪಿವೆ. ಸರ್ವಧರ್ಮಗಳ ಸಾರವೂ ಮಾನವನ ಒಳಿತಿಗಾಗಿ ಇರಬೇಕೆಂಬ ಮಹತ್ವದ ದನಿಯೊಂದನ್ನು ಈ ಲೇಖನಗಳು ಪ್ರತಿಪಾದಿಸುತ್ತವೆ. ಲೇಖಕರ ಕಾಳಜಿಯೂ ಅದೇ.*

## ಅದೇ ಮುಖ ಮತ್ತು ಇತರ ಕಥೆಗಳು




*ಮಾಧವ ಕುಲಕರ್ಣಿ*

**ಪುಟ : 91** **ಬೆಲೆ : ರೂ. 40**

**ಗಜಾನನ ಪಬ್ಲಿಕೇಷನ್ಸ್**, ನಂ. 623, ನ್ಯೂ ಕಾಂತರಾಜ ಅರಸ್ ರಸ್ತೆ, ಕುವೆಂಪು ನಗರ - ಮೈಸೂರು - 23

*ಇಂದಿನ ಬಿಡುವಿಲ್ಲದ ಬದುಕಿನ ಮಧ್ಯೆ ಮನೆಮಂದಿಯ ಪರಸ್ಪರ ಸಂಬಂಧಗಳು ಅನಿವಾರ್ಯವಾಗಿ ಹದಗೆಡುವುದನ್ನು ಇಲ್ಲಿನ ಕಥೆಗಳು ಎಳೆಎಳೆಯಾಗಿ ಬಿಡಿಸಿಡುತ್ತವೆ. ಮಹತ್ತರವಾದ ಮೌಲ್ಯಗಳಿಗೆ ವಿದಾಯ ಹೇಳುವ ಪ್ರಸಂಗಗಳನ್ನು ತೀರಾ ಸಹಜವೆಂಬಂತೆ ಸ್ವೀಕರಿಸುವ ಮಂದಿಯ ಮುಖಗಳಿಗೆ ಬಹಳ ಸಾಮ್ಯತೆ ಇರುತ್ತದೆ. ಅವೆಲ್ಲ ಮುಖಗಳೂ ಕಿಡುಕಲ್ಲದೆ ಬೇರೇನೂ ಮಾಡಲು ಶಕ್ತವಲ್ಲವೆಂದು ಕತೆಗಳು ಎಚ್ಚರಿಸುತ್ತವೆ.*

## ನ್ಯಾಯಾಲಯಗಳಲ್ಲಿ ಸ್ವಾತಂತ್ರ್ಯ ಹೋರಾಟ



*ಎನ್. ಪಿ. ಶಂಕರನಾರಾಯಣ ರಾವ್*

**ಪುಟ : 223** **ಬೆಲೆ : ರೂ. [illegible]**

**ರಾಷ್ಟ್ರೋತ್ಥಾನ ಸಾಹಿತ್ಯ**, ಕೇಶವ ಶಿಲ್ಪ, ಕೆಂಪೇಗೌಡ ನಗರ, ಬೆಂಗಳೂರು - 560 019

*ತಾಯ್ನಾಡಿನ ಬಿಡುಗಡೆಗಾಗಿ ಹೋರಾಡಿ ದೇಶಪ್ರೇಮವನ್ನು ಮೆರೆದ ''ಅಪರಾಧ''ಕ್ಕಾಗಿ ರಾಜಕೀಯ ಮೊಕದ್ದಮೆಗಳನ್ನು ಎದುರಿಸಿದ, ನೇಣುಗಂಬಕ್ಕೂ ದೇಹವನ್ನೊಡ್ಡಿದ ಕೆಲವು ಅಮರ ಪ್ರತಿಭೆಗಳ ಸಾಹಸ ಗಾಥೆ ಇಲ್ಲಿದೆ. ಕಾನೂನಿನ ಬಲವುಳ್ಳ ಬ್ರಿಟಿಷ್ ಸರ್ಕಾರದ ದಬ್ಬಾಳಿಕೆಯ ಚಿತ್ರಣ, ರಾಷ್ಟ್ರನಾಯಕರ ಉಜ್ವಲ ದೇಶಾಭಿಮಾನ, ಮಾರಕಾಸ್ತ್ರಗಳಿಗಿಂತಲೂ ಯಶಸ್ವಿಯಾಗಿ ಬಳಸಿಕೊಂಡ ಪಿತೂರಿ ಖಟ್ಲೆಗಳು, ಇವನ್ನೆಲ್ಲ ಹತ್ತಿರದಿಂದ ಕಂಡಿರುವ ಸ್ವಾತಂತ್ರ್ಯ ಪ್ರೇಮಿ ಲೇಖಕರು ಆ ಬಗ್ಗೆ ಮನಮುಟ್ಟುವಂತೆ ವಿವರಿಸಿದ್ದಾರೆ.*



## ನೀರದೀವಿಗೆ

*ಕೆ. ವೈ. ನಾರಾಯಣ ಸ್ವಾಮಿ*

**ಪುಟ : 228** **ಬೆಲೆ : ರೂ. 100**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ - 583 103

*ಪ್ರಪಂಚದ ನಾಗರಿಕತೆ - ಸಂಸ್ಕೃತಿಗಳು ಮಹಾನದಿಗಳ ತೀರಗಳಲ್ಲಿ ಜನ್ಮತಾಳಿ ಮಾತ್ರ ಸ್ವರೂಪದ ಜಲ ಸಂಸ್ಕೃತಿಯನ್ನು ಗೌರವಿಸಿದುವು. ಅದೇ ಸಂದರ್ಭದಲ್ಲಿ ಪ್ರತಿ – ಸಂಸ್ಕೃತಿಯೊಂದು ರೂಪುಗೊಂಡು ನೀರನ್ನು ಮಾತ್ರ ಸಂಸ್ಕೃತಿಯಾಗಿಯೂ ಅಗ್ನಿಯನ್ನು ಪುರುಷ ಸಂಸ್ಕೃತಿಯಾಗಿಯೂ ಸಂಕೇತಿಸುತ್ತಾ ವೇದಕಾಲೀನ ಸಮಾಜದಲ್ಲಿ ಬೇರೂರಿ ಇಂದಿಗೂ ಆಚರಣೆಗಳಲ್ಲಿ ಉಳಿದುಬಂದಿದೆ. ಪವಿತ್ರವೆಂದು ಪರಿಗಣಿಸಲ್ಪಟ್ಟ ನೀರು-ದೀಪ ಇವುಗಳ ಸಾಂಸ್ಕೃತಿಕ ಅಧ್ಯಯನ ನೀರದೀವಿಗೆಯಾಗಿ ನಿಮ್ಮ ಮುಂದಿದೆ.*

## ಕಾಲು ದಾರಿ (ವಿಮರ್ಶಾ ಲೇಖನಗಳು)



*ಲಕ್ಷ್ಮೀಪತಿ ಕೋಲಾರ*

**ಪುಟ : 196** **ಬೆಲೆ : ರೂ. 90**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜ್, ಕುವೆಂಪು ನಗರ, ಬೆಂಗಳೂರು - 29

*ಅತ್ಯಂತ ಮೇಲ್ಮಟ್ಟದ ಯೋಚನಾ ಲಹರಿಗಳಿಂದ ಹಾಗೂ ಸ್ವಂತಿಕೆಯಿಂದ ಕೃತಿ ವಿಮರ್ಶೆಗೆ ತೊಡಗುವ ಲಕ್ಷ್ಮೀಪತಿ ಕೋಲಾರ ಓದುಗನನ್ನೂ ಅದೇ ದಾರಿಯಲ್ಲಿ ಕೊಂಡೊಯ್ದು ಚಿಂತನೆಗೆ ಹಚ್ಚುತ್ತಾ ಮುಂದಿನ ಓದಿನ ಹುಡುಕಾಟಕ್ಕೆ ಅಣಿಗೊಳಿಸುತ್ತಾರೆ. ಕೃತಿಕಾರನ ಓದಿಗಿಂತ ವಿಮರ್ಶಕನ ವಿಚಾರಗಳು ಓದುಗನಿಗೆ ದಾರಿದೀಪ. ಇಲ್ಲಿನ ಲೇಖನಗಳಲ್ಲಿ ಸಾಮಾಜಿಕ-ರಾಜಕೀಯ ಚಿಂತನೆಗಳನ್ನೂ ಮಾಡಲಾಗಿದ್ದು ಒಟ್ಟಿನಲ್ಲಿ ತುಂಬ ಮಹತ್ವದ ವಿಚಾರ-ವಿಮರ್ಶೆ ಓದುವ ಸದವಕಾಶ.*



## ಕೆ. ನ. ಶಿವತೀರ್ಥನ್‌ರ ಗೆಂಡಗಯ್ಯ : ಒಳವು

*ಸಂ. ಡಾ॥ ಕೃಷ್ಣಮೂರ್ತಿ ಹನೂರು, ಪ್ರೊ॥ ಎಚ್. ಶಿವಾಜಿ ಜೋಯಿಸ್*

**ಪುಟ : 152** **ಬೆಲೆ : ರೂ. [illegible]**

**ನೈರುತ್ಯ ಪ್ರಕಾಶನ**, 43, ಮಾಂದಳಿರು, 2ನೇ ಹಂತ, ಎಂ ಬ್ಲಾಕ್, ಕುವೆಂಪು ನಗರ, ಮೈಸೂರು - 23

*ಒಂದು ಉಪಸಂಸ್ಕೃತಿಯ ಶೋಧವೆಂದು ಅಭಿಪ್ರಾಯಪಟ್ಟಿರುವ ''ಗೆಂಡಗಯ್ಯ'' ಕಥನ ಕವನದ ಬಗ್ಗೆ ಇರುವ ವಿಮರ್ಶಾ ಲೇಖನಗಳ ಸಂಗ್ರಹ. ಇಪ್ಪತ್ತೇಳು ಮಂದಿ ಕರ್ನಾಟಕದ ಸಾಹಿತಿ-ವಿಮರ್ಶಕರು ಗೆಂಡಗಯ್ಯ ಕವಿತೆಯ ಬಗ್ಗೆಯೇ ವಿಮರ್ಶೆ ಬರೆದಿರುವುದು ಒಂದು ಕುತೂಹಲಕಾರಿ ಸಂಗತಿ. ಕವಿತೆಯ ಇಂಗ್ಲಿಷ್ ಭಾವಾನುವಾದವನ್ನೂ ಇತರ ಕವಿತೆಗಳನ್ನೂ ಈ ಪುಸ್ತಕ ಒಳಗೊಂಡಿದೆ.*

- ಇಂದಿರಾ ಕುಮಾರಿ



# ಜನಪರ ಕಲಾವಿದ ಸೋಮನಾಥ್ ಹೋರ್

**ಭ**ವ್ಯ ಬಂಗಲೆಗಳಲ್ಲಿ ಕುಳಿತು ಬೃಹತ್ ಕ್ಯಾನ್ವಾಸುಗಳ ಮೇಲೆ ವರ್ಣಗಳ ಮೇಳ, ಒಡನಾಟದಲ್ಲಿ, ಸೌಂದರ್ಯ ಸೃಷ್ಟಿಯಲ್ಲಿ ತೊಡಗುವ ಕಲಾವಿದರ ಮಧ್ಯದಲ್ಲಿಯೇ ಹಾದಿಬೀದಿಗಳಲ್ಲಿ ಸುತ್ತಿ ಗಣನೆಗೊಳಪಡದವರ, ಅಮಾಯಕರ ಆಗುಹೋಗುಗಳನ್ನೇ ಚಿತ್ರಿಸಿ ಬದುಕಿನ ಕುರೂಪವನ್ನೂ, ಸಮಾಜದ ಅಮಾನವೀಯ ಮುಖವನ್ನೂ ಅನಾವರಣಗೊಳಿಸುತ್ತಿರುವ ಕಲಾವಿದರೂ ವಿರಳವಾಗಿಯಾದರೂ ನಮ್ಮಲ್ಲಿದ್ದಾರೆ. ಅಂತಹವರಲ್ಲಿ ಸೋಮನಾಥ್ ಹೋರ್ ಮರೆಯಲಾಗದ ಹೆಸರು.

ಭಾರತೀಯ ಕಲೆ ಪಾಶ್ಚಾತ್ಯ ಪ್ರಭಾವ-ಪರಿಕಲ್ಪನೆಗಳಿಂದ ಆಧುನೀಕರಣಗೊಂಡು ವ್ಯಾಪಕವಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ಬಹುತೇಕ ಕಲಾವಿದರು ಬಹುಮಟ್ಟಿಗೆ ರೂಪನಿಷ್ಠತೆಯೆಡೆಗೆ ಹೊರಳಿದ ಹೊತ್ತಲ್ಲೇ ಸೋಮನಾಥ್ ಹೋರ್ ವಸ್ತುನಿಷ್ಠೆ-ಸಮಾಜನಿಷ್ಠೆಯನ್ನು ತೋರಿದ ಕಲಾವಿದ. ಹಾಗೆಂದು ರೂಪ ಗೌಣವಾಯಿತೆಂದೇನೂ ಅಲ್ಲ. ವಸ್ತುವಿನ ಪರಿಣಾಮಕಾರೀ ಅಭಿವ್ಯಕ್ತಿಗಾಗಿ ಆವಿಷ್ಕೃತವಾದ ರೂಪ, ಅವರದೇ ವಿಶಿಷ್ಟತೆಯೊಂದಿಗೆ ಕೇವಲ ರೂಪಮೌಲ್ಯವನ್ನೂ, ಮಿತಿ-ಸಾಧ್ಯತೆಗಳನ್ನೂ ಮೀರಿ ಜೀವ-ಭಾವನಿಷ್ಠವಾಗಿದೆ. ಜೀವ-ಜೀವನಪರವಾದ ಹೋರ್‌ರವರ ಮಾನವೀಯ ಅನುಕಂಪದ ಮೂಸೆಯಲ್ಲಿ ಮೈದಳೆದ ಪ್ರತಿಯೊಂದು ಕೃತಿಯೂ ಅಮಾನವೀಯ, ಪಾಶವೀಕೃತ್ಯದ ಪರಿಣಾಮಗಳನ್ನೇ ಮನೋವೇಧಕವಾಗಿ ಪ್ರತಿಬಿಂಬಿಸುತ್ತದೆ. ಇಂಥ ಕೃತಿಗಳು ಹುಟ್ಟಬಂದ ಹಿನ್ನೆಲೆಯೂ, ಹೋರ್‌ರವರ ಬದುಕು-ಪರಿಸರಗಳೂ ಸರಳ ಸಾಮಾನ್ಯವಾಗಿರಲಿಲ್ಲ.

ಸೋಮನಾಥ್ ಹೋರ್ ಹುಟ್ಟಿದ್ದು ಅವಿಭಜಿತ ಬಂಗಾಳದ ಚಟ್ಟಗ್ರಾಮದಲ್ಲಿ - (ಚಿಟಗಾಂಗ್, ೧೩ನೆಯ ಏಪ್ರಿಲ್ ೧೯೨೧). ಕೆಳಜಾತಿಯೊಂದರಲ್ಲಿ ಜನಿಸಿದ ಸೋಮನಾಥ್ (ಹೋರ್= ಕಾಯಸ್ಥ ಜಾತಿಯ ಹೆಸರು, ಕ್ಷತ್ರಿಯಾಚಾರವುಳ್ಳ ಶೂದ್ರ) ಹದಿಮೂರನೆಯ ವಯಸ್ಸಿನಲ್ಲೇ ತಂದೆ ರೇಬತಿ ಮೋಹನ್ ಹೋರ್‌ರನ್ನು ಕಳೆದುಕೊಂಡು ತಾಯಿಯ ಆಶ್ರಯದಲ್ಲಿ ಶಿಕ್ಷಿತರಾದರು. ೧೯೩೮ರ ಹೊತ್ತಿಗೆ ಚಟ್ಟಗ್ರಾಮದಲ್ಲಿ ಪ್ರವೇಶಿಕಾ (ಮ್ಯಾಟ್ರಿಕ್) ಮುಗಿಸಿ ಅಲ್ಲಿಯೇ ವಿಜ್ಞಾನದ ವಿದ್ಯಾರ್ಥಿಯಾಗಿ ಐ.ಎಸ್.ಸಿ.ಯನ್ನೂ ಪೂರ್ಣಗೊಳಿಸಿದ ಹೋರ್ ನಂತರ ಕಲ್ಕತ್ತೆಯ ಸಿಟಿ ಕಾಲೇಜಿನಲ್ಲಿ ಬಿ.ಎಸ್‌ಸಿ.ಗೆ ಸೇರಿದರು. ಆದರೆ ಎರಡನೆಯ ಮಹಾಯುದ್ಧ ನಡೆಯುತ್ತಿದ್ದುದರಿಂದಾಗಿ ಮುಂಜಾಗ್ರತಾ ಕ್ರಮವಾಗಿ ಕಲ್ಕತ್ತೆಯ ಜನರನ್ನು ಬೇರೆಡೆಗಳಿಗೆ ಸ್ಥಳಾಂತರಿಸುವ ಕಾರ್ಯ ಪ್ರಾರಂಭವಾಯಿತು. ಹೀಗಾಗಿ ಅಧ್ಯಯನವನ್ನು ಪೂರ್ಣಗೊಳಿಸಲಾಗದೆ ಹೋರ್‌ರವರು ಚಟ್ಟಗ್ರಾಮಕ್ಕೆ ಮರಳಲೇಬೇಕಾಯಿತು.

೧೯೪೨ರಲ್ಲಿ ಜಪಾನೀ ಯುದ್ಧ ವಿಮಾನಗಳ ಬಾಂಬ್ ಧಾಳಿಯಿಂದ ಪತಿಯಾ ಗ್ರಾಮವು ಧ್ವಂಸವಾದುದನ್ನು ಕಣ್ಣಾರೆ ಕಂಡ ಹೋರ್‌ರವರ ಬದುಕು ಮಹತ್ವದ ತಿರುವನ್ನು ಪಡೆದುಕೊಂಡದ್ದು ಈ ಹಿನ್ನೆಲೆಯಲ್ಲಿಯೇ. ಜೀವನದಲ್ಲಿ ಎಂದಿಗೂ ಮಾಸದ-ಅಳಿಸಲಾಗದ ಗುರುತನ್ನು ಮೂಡಿಸಿದ ಈ ಘಟನೆ ಅವರ ಅಂತರಂಗವನ್ನು ಕಲಕಿತು. ಧಾಳಿಯ ಭೀಕರ ಪರಿಣಾಮಗಳಿಗೆ ಸಿಲುಕಿದ ಅಸಹಾಯಕ, ಅಮಾಯಕ ಜನರ ರಕ್ಷಣೆ, ಶುಶ್ರೂಷೆಗಳಲ್ಲಿ ತೊಡಗಿದರು.

ಕಮ್ಯುನಿಸ್ಟ್ ಪಕ್ಷದ ತತ್ವ-ಸಿದ್ಧಾಂತಗಳಿಂದ ಆಕರ್ಷಿತರಾದ ಅವರು ತಮ್ಮ ತಾಯಿಯ ಪ್ರಭಾವದಿಂದ ಪಕ್ಷದೊಂದಿಗೆ ನಿಕಟ ಸಂಬಂಧವನ್ನು ಹೊಂದಿದರು. (ಮುಂದೆ ಪಕ್ಷದ ಸದಸ್ಯರೂ ಆಗಿದ್ದರು). ಪಕ್ಷದ ಸ್ಥಳೀಯ ಮುಖಂಡ ಪೂರ್ಣೇಂದು ದಸ್ತಿದಾರ್‌ರವರ ಮೂಲಕ ಚಟ್ಟಗ್ರಾಮದವರೇ ಆದ ಪ್ರಸಿದ್ಧ ಸ್ವಯಂ ಶಿಕ್ಷಿತ ಕಲಾವಿದ ಚಿತ್ತಪ್ರಸಾದ್ ಭಟ್ಟಾಚಾರ್ಯರ ಪರಿಚಯವಾಯಿತು. ಬಾಂಬ್ ಧಾಳಿಯ ಪರಿಣಾಮವಾಗಿ ೧೯೪೩ರಲ್ಲಿ ಭೀಕರ ಕ್ಷಾಮ ಬಂಗಾಳವನ್ನಾವರಿಸಿತು. ಈ ಸಂದರ್ಭದಲ್ಲಿ ಚಿತ್ತಪ್ರಸಾದರು ಹಳ್ಳಿ ಹಳ್ಳಿಗಳನ್ನು ಸುತ್ತಿ ಬರಪರಿಹಾರ ಕಾರ್ಯದಲ್ಲಿ ತೊಡಗಿದ್ದುದರ ಜೊತೆಗೆ ಅದರ ಭೀಕರ ಪರಿಣಾಮಗಳ ಹಲವಾರು ರೇಖಾಚಿತ್ರಗಳನ್ನು ಬರೆದು ಪಕ್ಷದ ಪತ್ರಿಕೆಗಳಾದ 'ಜನಯುದ್ಧ' ಮತ್ತು 'ಪೀಪಲ್ಸ್ ವಾರ್'ಗೆ ಕಳಿಸುತ್ತಿದ್ದರು. ಪರಿಹಾರ ಕಾರ್ಯದಲ್ಲಿ ಇವರೊಂದಿಗೇ ಇದ್ದ ಸೋಮನಾಥ್ ಹೋರ್ ಕೂಡ ಬರಪೀಡಿತರ ಅಸಹಾಯಕ, ದುರ್ಭರ ಸ್ಥಿತಿಯನ್ನು ಪದಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದರು. ಆದರೆ ಅದು ಕವಿಯಲ್ಲದ ತನ್ನಿಂದ ಸಾಧ್ಯವಲ್ಲವೆಂದರಿತ ಹೋರ್ ಚಿತ್ತಪ್ರಸಾದರಿಂದ ಪ್ರಭಾವಿತರಾಗಿ ತಾವೂ ರೇಖಾಚಿತ್ರ ರಚನೆಗೆ ತೊಡಗಿದರು. ಮನಕಲಕುವ ಅನೇಕ ದೃಶ್ಯಗಳು ಅವರ ರೇಖೆಗಳಲ್ಲಿ ಜೀವ ತಳೆದುವು. ಪಕ್ಷದ ಈ ಎರಡೂ ಪತ್ರಿಕೆಗಳಲ್ಲಿ ನಿರಂತರವಾಗಿ ಪ್ರಕಟವಾಗಿ (೧೯೪೪) ಬರದ ಭೀಕರತೆ, ಜನಸಾಮಾನ್ಯರ, ರೈತರ ಸಾವು-ಬದುಕಿನ ಹೋರಾಟ, ನರಳಾಟಗಳ ನೈಜ ದರ್ಶನವನ್ನು ಮನಮುಟ್ಟುವಂತೆ ಮಾಡಿಸಿದುವು.

೧೯೪೦ರ ದಶಕ ಸೋಮನಾಥ್ ಹೋರ್‌ರವರ ಬದುಕಿನ ಅತ್ಯಂತ ಪ್ರಮುಖ ಘಟ್ಟ. ಇದು ಅವರ ಬದುಕಿನ ಧ್ಯೇಯ-ಧೋರಣೆಗಳನ್ನು ರೂಪಿಸಿದ ಹಲವಾರು ಮಹತ್ವದ ಘಟನೆಗಳು ಜರುಗಿದ ಅವಧಿ. ೧೯೪೨ರ ಬಾಂಬ್ ಧಾಳಿ, ಅದರ ಹಿಂದೆಯೇ ಬಂದ ಭೀಕರ ಕ್ಷಾಮ, ೧೯೪೬ರ ರೈತ ಚಳವಳಿ, ಸ್ವಾತಂತ್ರ್ಯ ಚಳವಳಿ, ಮತೀಯ ಘರ್ಷಣೆಗಳು, ೪೭ರ ವಿಭಜನೆ – ಪೂರ್ವ ಪಾಕಿಸ್ತಾನ(ಬಾಂಗ್ಲದೇಶ)ದಿಂದ ವಲಸೆ, ಹಿಂಸಾಚಾರ, ೪೮ರಲ್ಲಿ ಕಮ್ಯುನಿಸ್ಟ್ ಪಕ್ಷದ ನಿಷೇಧ – ಆ ಕಾರಣದಿಂದ ಭೂಗತಜೀವನ – ಹೀಗೆ ಹಲವಾರು ಘಟನೆಗಳು ಅವರ ಬದುಕು-ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರುತ್ತಲೇ ತಮ್ಮೆಡೆಗೆ ಸೆಳೆದುಕೊಂಡವು. ಈ ಕಾರಣದಿಂದಲೇ, ಮೂಲತಃ ಶೂದ್ರರಾಗಿ ಹುಟ್ಟಿ

ರಾಜಶೇಖರ ರಾಮಣ್ಣ ಬಿಲ್ವಪತ್ರಿ



'ಮಕ್ಕಳು'. ೧೯೫೪. ಎಚ್ಚಿಂಗ್

ಅಸ್ಪೃಶ್ಯತೆಯ ಕಹಿ, ತೀವ್ರ ನೋವುಂಡರೂ ಕೇವಲ ಅದಕ್ಕೇ ಸೀಮಿತವಾಗದೆ, ಸಮಸ್ತ ಮಾನವ ಜನಾಂಗದ ಒಳಿತು-ಹಿತ-ನೆಮ್ಮದಿಗಳಿಗಾಗಿ ಚಿಂತಿಸಿ ಆ ನಿಟ್ಟಿನಲ್ಲಿ ತಮ್ಮೆಲ್ಲ ಸಮಯ, ಶ್ರಮವನ್ನು ವ್ಯಯಿಸಿದರು. ಮಾನವ ಜನಾಂಗದ ಮೇಲೆ ಎಲ್ಲೆಲ್ಲಿ ಅಮಾನವೀಯ ಹಸ್ತಾಘಾತವಾಗುತ್ತಿತ್ತೋ ಅಲ್ಲೆಲ್ಲ ಅದರ ರಕ್ಷಣೆಗಾಗಿ, ಶುಶ್ರೂಷೆಗಾಗಿ, ಅಮಾನವೀಯ ಶಕ್ತಿಗಳ ವಿರೋಧ-ನಿರೋಧಕ್ಕಾಗಿ ಸೋಮನಾಥರು ಮುಂದಾಗುತ್ತಿದ್ದರು. ಹೀಗಾಗಿ ಅವರು ಕಂಡ ಅಪಾರ ಸಾವು-ನೋವುಗಳು, ಪಾಶವೀ ಪ್ರವೃತ್ತಿಯ ಆಘಾತದಿಂದ ಮನುಕುಲಕ್ಕುಂಟಾದ ಗಾಯಗಳು ಅವರ ಕಲಾಭಿವ್ಯಕ್ತಿಯ ಮೂಲ ನೆಲೆಗಳಾದವು.


'ರಾತ್ರಿ ಸಭೆ'. ೧೯೫೩, ವುಡ್ ಎನ್‌ಗ್ರೇವಿಂಗ್

ಚಿತ್ರರಚನೆಯಲ್ಲಿ ಹೋರ್‌ರವರಿಗಿದ್ದ ಪ್ರತಿಭೆ-ಸಾಮರ್ಥ್ಯಗಳನ್ನು ಗುರುತಿಸಿದ ಪಕ್ಷದ ಹಿರಿಯ ಮುಖಂಡ ಪಿ. ಸಿ. ಜೋಷಿ ಮತ್ತಿತರರ ಸಲಹೆ-ಸಹಾಯಗಳಿಂದ ಕಲ್ಕತ್ತೆಯ 'ಗವರ್ನಮೆಂಟ್ ಸ್ಕೂಲ್ ಆಫ್ ಆರ್ಟ್ಸ್ ಆ್ಯಂಡ್ ಕ್ರಾಫ್ಟ್ಸ್'ನಲ್ಲಿ ೧೯೪೫ರಲ್ಲಿ ಪ್ರವೇಶ ಪಡೆಯುವಂತಾಯಿತು.

ಶ್ರೇಷ್ಠ ಮುದ್ರಣ ಚಿತ್ರಕಾರರಾದ ಸಫಿಯುದ್ದೀನ್ ಅಹಮ್ಮದ್‌ರ ಮಾರ್ಗದರ್ಶನದಲ್ಲಿ ವುಡ್‌ಕಟ್ ಮತ್ತು ವುಡ್ ಎನ್‌ಗ್ರೇವಿಂಗ್ (ಮರದ ಹಲಗೆಯಿಂದ ಚಿತ್ರದ ಅಚ್ಚು ತೆಗೆಯುವ ವಿಧಾನ) ಗಳ ಅಭ್ಯಾಸ ಮಾಡುತ್ತಿರುವಾಗಲೇ ಆ ಮಾಧ್ಯಮದಲ್ಲಿ ತಮ್ಮ ಮೊದಲ ಮುದ್ರಣ ಚಿತ್ರಗಳನ್ನು ಮಾಡಿದರು. ಅವುಗಳಲ್ಲಿ ಗಾಂಧೀಜಿಯವರು ಬೃಹಜ್ಜನಸಮೂಹವನ್ನುದ್ದೇಶಿಸಿ ಮಾತನಾಡುತ್ತಿರುವ ದೃಶ್ಯ 'ಕಮ್ಯೂನಲ್ ಹಾರ್ಮನಿ' (೧೯೪೭) ಪ್ರಸಿದ್ಧವಾದುದು. ಸೋಮನಾಥ್ ಹೋರ್‌ರವರ ಮಾನವ ಪ್ರೀತಿ-ಕಾಳಜಿಗಳು ಯಾವುದೊಂದು ವರ್ಗಕ್ಕೆ ಸೀಮಿತವಾಗಿರಲಿಲ್ಲ. ಯಾವಾಗಲೂ ಕೆಳ ಮತ್ತು ಶೋಷಿತವರ್ಗ ಹಾಗೂ ಸಮಾಜದ ಅಸಹಾಯಕ ಜನವರ್ಗದೆಡೆಗೆ ಸ್ವಲ್ಪ ವಿಶೇಷವಾದ ಒಲವೇ ಅವರಿಗಿತ್ತು. ೧೯೪೬ರ ಡಿಸೆಂಬರ್‌ನಲ್ಲಿ 'ತೇಭಾಗಾ' ದ ಹಿನ್ನೆಲೆಯಲ್ಲಿ ರೈತರ ಬೃಹಚ್ಚಳವಳಿ ನಡೆಯಿತು. ಈ ಸಂದರ್ಭದಲ್ಲಿ ಸೋಮನಾಥ್ ಹೋರ್ ಉತ್ತರ ಬಂಗಾಳದ ಕೆಲವು ಜಿಲ್ಲೆಗಳ ಅನೇಕ ಹಳ್ಳಿಗಳನ್ನು ಸಂದರ್ಶಿಸಿ ರೈತರನ್ನು ಕಂಡು, ಒಡನಿದ್ದು ಅವರ ಕಷ್ಟ-ತೊಂದರೆಗಳನ್ನು ವಿಚಾರಿಸಿ ಅವರ ಚಳವಳಿಯನ್ನು ಪ್ರೋತ್ಸಾಹಿಸಿದರು. ಕಲ್ಕತ್ತೆಗೆ ವಾಪಸು ಮರಳುವಾಗ ತಾವು ಮುಂದೆ ರಚಿಸಲಿದ್ದ ಶ್ರೇಷ್ಠ ಕೃತಿಗಳ ಪೂರಕ ಸಾಮಗ್ರಿಯ ಭಂಡಾರವನ್ನೇ ರೇಖಾಚಿತ್ರಗಳಲ್ಲಿ ಹಿಡಿದುಕೊಂಡು ಬಂದರು. ರೈತರ ಕಷ್ಟ-ಕಾರ್ಪಣ್ಯಗಳು, ದೀನತೆ-ಹೀನತೆಗಳು, ಸಾವು-ನೋವುಗಳೇ ಅವುಗಳಲ್ಲಿ ತುಂಬಿದ್ದವು. ಕೆಲವೊಂದು ನಿಯತಕಾಲಿಕಗಳಲ್ಲಿ ಪ್ರಕಟವಾದ ಇದರಲ್ಲಿನ ಕೆಲ ಚಿತ್ರಗಳು ರೈತರ ಬವಣೆಯನ್ನು ಲೋಕಕ್ಕೆ ಬಿತ್ತರಿಸಿದುವು.

ಸೋಮನಾಥ್ ಹೋರ್‌ರವರ ಸಾಮಾಜಿಕ ಚಟುವಟಿಕೆ ಮತ್ತು ಕಲಾಭ್ಯಾಸಗಳು ಜೊತೆಜೊತೆ

ಯಾಗಿಯೇ ಸಾಗಿದವಾದರೂ ಇಷ್ಟರಲ್ಲೇ ಅವರ ಕಲಾಭ್ಯಾಸಕ್ಕೆ ಸಂಚಕಾರ ಬಂದೊದಗುವುದಿತ್ತು. ೧೯೪೯ರಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿದಾಗ ಇವರೂ ಭೂಗತರಾಗಬೇಕಾಯ್ತು. ಹೀಗಾಗಿ ಇನ್ನೊಂದೇ ವರ್ಷ ಬಾಕಿಯುಳಿದಿದ್ದ ಕಲಾಶಿಕ್ಷಣ ಪೂರ್ಣವಾಗದೇ ಹೋಯ್ತು. ಹಾಗೆಂದು ಹೋರ್‌ರವರೇನೂ ನಿಷ್ಕ್ರಿಯರಾಗಲಿಲ್ಲ. ಭೂಗತರಾಗಿದ್ದುಕೊಂಡೇ ಕಲಾಕೃತಿಗಳ ರಚನೆಯಲ್ಲಿ ತೊಡಗಿದರು. ಮಾರನೆಯ ವರ್ಷ (೧೯೫೦) ನಿಷೇಧವನ್ನು ತೆಗೆದುಹಾಕಲಾಯಿತಾದರೂ ಅವರು ಶಿಕ್ಷಣವನ್ನು ಮುಂದುವರಿಸಲಿಲ್ಲ. ಈ ಮುಂದಿನ ಅವಧಿಯಲ್ಲಿ (೧೯೫೧-೫೪) ಅವರು ರಚಿಸಿದ ಏಕವರ್ಣ ಮುದ್ರಣ ಚಿತ್ರಗಳು ಅವರ ಪ್ರೌಢಕೌಶಲಕ್ಕೆ ಉತ್ತಮ ಮಾದರಿಯಾಗಿವೆಯಲ್ಲದೆ ವೈವಿಧ್ಯತೆಯಿಂದ ಕೂಡಿವೆ. ೧೯೪೬ರ ರೈತ ಚಳವಳಿಯಿಂದ ಪ್ರೇರಿತವಾದ ಈ ಕೃತಿಗಳು ರೈತವೀರರ, ಕ್ರಾಂತಿಕಾರರ, ರೈತ ಮಹಿಳೆ-ಮಕ್ಕಳ ಚಿತ್ರಣವನ್ನು, ರಹಸ್ಯ ಸಭೆಗಳ, ಬೃಹತ್ ಮೆರವಣಿಗೆಗಳ ದೃಶ್ಯಗಳನ್ನು ಕೊಡುವುದಲ್ಲದೆ ಸೋಮನಾಥ್ ಹೋರ್‌ರವರ ಅಭಿವ್ಯಕ್ತಿ ಅವರ ಸಮಕಾಲೀನ ಸಾಮಾಜಿಕ ಸಂದರ್ಭದೊಂದಿಗೆ ಜೊತೆಜೊತೆಯಾಗಿ ಸಾಗಿರುವುದರ ಮತ್ತು ಸಮಾಜದ ಪ್ರತಿ ಅವರು ಹೊಂದಿರುವ ಕಾಳಜಿ-ಪ್ರಜ್ಞೆಗಳ ದ್ಯೋತಕವಾಗಿವೆ.

ಖಾಸಗಿ ಸಂಸ್ಥೆ 'ಇಂಡಿಯನ್ ಕಾಲೇಜ್ ಆಫ್ ಆರ್ಟ್ಸ್ ಆ್ಯಂಡ್ ಡ್ರಾಫ್ಟ್ಸ್‌ಮೆನ್‌ಶಿಪ್'ನ ಪ್ರಾಚಾರ್ಯ ಅತುಲ್ ಬೋಸ್‌ರವರ ಕೋರಿಕೆಯ ಮೇರೆಗೆ ೧೯೫೪ರಿಂದ ಬೋಧನಾವೃತ್ತಿಯಲ್ಲಿ ತೊಡಗಿದ ಹೋರ್‌ರವರು ಕಲಾಕ್ರಿಯೆಯಲ್ಲಿ ಗಂಭೀರವಾಗಿ ತೊಡಗಿದ್ದು ಈ ಅವಧಿಯಿಂದಲೇ.

ವರುಷ ಕಳೆಯುವುದರೊಳಗೆ ಅವರ ಕೃತಿಗಳ ಸ್ವರೂಪವೇ ಬದಲಾಯಿತು. ೧೯೫೫-೫೭ರ ಅವಧಿಯ ವುಡ್‌ಕಟ್, ವುಡ್ ಎನ್‌ಗ್ರೇವಿಂಗ್ ಕೃತಿಗಳಲ್ಲಿ ೧೯೪೩ರ ಕ್ಷಾಮದ ದುರಂತ ಪರಿಣಾಮಗಳು ಅಭಿವ್ಯಕ್ತವಾದುವು. ಎದೆಗೂಡು, ಕಡ್ಡಿಯಂತ ಕಾಲು, ಸಣ್ಣ ಮುಖದ ದೊಡ್ಡ ತಲೆಬುರುಡೆ – ಹೀಗೆ ಹಸಿವಿನಿಂದ ಕಂಗೆಟ್ಟ ಜನರ ಕೃಶ ಶರೀರಗಳು ಎಲುಬಿನ ಹಂದರಗಳು ಚಿತ್ರಪಟಗಳಲ್ಲಿ ಬರದ ಭೀಕರತೆಯನ್ನು ಪುನರ್ ಸೃಷ್ಟಿಸಿದವು. ಕೈಯೊಳಗಿನ ಖಾಲಿಪಾತ್ರೆ, ಅನ್ನಕ್ಕಾಗಿ ಪರದಾಟ, ಹಸಿವಿನ ರುದ್ರನರ್ತನವನ್ನು ಸಂಕೇತಿಸಿತು. ತೊಗಲಂಟಿದ ಎಲುಬಿನ ಗೂಡು ಅಮಾಯಕರ ಭೌತಿಕ ಅಸ್ತಿತ್ವಕ್ಕೆ ಸಾಕ್ಷಿಯಾಯಿತು.

ಕೊನೆಗೂ ೧೯೫೭ರಲ್ಲಿ ಕಲ್ಕತ್ತೆಯ ಗವರ್ನ್‌ಮೆಂಟ್ ಸ್ಕೂಲ್ ಆಫ್ ಆರ್ಟ್ಸ್ ಆ್ಯಂಡ್ ಕ್ರಾಫ್ಟ್ಸ್‌ನಿಂದ ಬಾಹ್ಯ ಅಭ್ಯರ್ಥಿಯಾಗಿ ಕಲೆಯಲ್ಲಿ ಡಿಪ್ಲೊಮೊ ಪಡೆದುಕೊಂಡ ಹೋರ್ ೧೯೫೮ರಲ್ಲಿ ಡೆಲ್ಲಿ ಪಾಲಿಟೆಕ್ನಿಕ್(ಈಗ – ಡೆಲ್ಲಿ ಆರ್ಟ್ಸ್ ಕಾಲೇಜ್)ನ ಕಲಾ ವಿಭಾಗದಲ್ಲಿ ಗ್ರಾಫಿಕ್ ಕಲೆಯ ಅಧ್ಯಾಪಕರಾಗಿ ಸೇರಿಕೊಂಡರು. ಎರಡು ಮೂರು ವರ್ಷಗಳಷ್ಟು ಅವಧಿಯಲ್ಲಿಯೇ ಗ್ರಾಫಿಕ್ ವಿಭಾಗವನ್ನು ಸುಸಜ್ಜಿತಗೊಳಿಸಿದ್ದಲ್ಲದೆ ತಮ್ಮ ವಿದ್ಯಾರ್ಥಿಗಳಲ್ಲಿ ಮತ್ತು ಸಹೋದ್ಯೋಗಿಗಳಲ್ಲಿ ಮುದ್ರಣ ಕಲೆಯ ಬಗ್ಗೆ ಆಸಕ್ತಿ, ಉತ್ಸಾಹಗಳನ್ನು ಮೂಡಿಸಿದರು. ತಮ್ಮ ಕಿರಿಯ ಸಹೋದ್ಯೋಗಿಗಳು ಮತ್ತು ಗೆಳೆಯರು ಸೇರಿ ೧೯೬೦ರಲ್ಲಿ ಸ್ಥಾಪಿಸಿದ ಕಲ್ಕತ್ತೆಯ – 'ಸೊಸಾಯಿಟಿ ಆಫ್ ಕಾಂಟೆಂಪೊರರಿ ಆರ್ಟಿಸ್ಟ್ಸ್'ನ ಸದಸ್ಯರಾಗಿದ್ದ ಸೋಮನಾಥ್ ಹೋರ್ ಸಂಘದ ಎಲ್ಲ ಸದಸ್ಯರಿಗೂ ಸ್ಫೂರ್ತಿ-ಪ್ರೇರಣೆಗಳ ಮೂಲವಾಗಿದ್ದರು. ಅವರ ವ್ಯಾಪಕ ಕಲಾಚಟುವಟಿಕೆಯಿಂದಲೇ ಪ್ರೇರಿತವಾದ ಸಂಘವು ೧೯೬೩ರಲ್ಲಿ ಗ್ರಾಫಿಕ್ ಕಾರ್ಯಾಗಾರವೊಂದನ್ನು ಸ್ಥಾಪಿಸುವಂತಾದದ್ದು. ಹೋರ್‌ರವರು ದೆಹಲಿಯಲ್ಲಿದ್ದ ಹತ್ತು ವರ್ಷದ ಅವಧಿಯಲ್ಲಿ ಬರೋಡಾದ ಮಹಾರಾಜ ಸಯ್ಯಾಜಿರಾವ್ ವಿಶ್ವವಿದ್ಯಾಲಯದ ಕಲಾವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರೂ ಆಗಿದ್ದರು.



'ರೋದನ'. ೧೯೮೫, ಕಂಚು ಶಿಲ್ಪ

೧೯೬೪-೮೧ರ ೧೭ ವರ್ಷದ ಅವಧಿ ಹೋರ್‌ರವರ ಕಲಾಸೃಷ್ಟಿಯ ದೃಷ್ಟಿಯಿಂದ ಅತ್ಯಂತ ಮಹತ್ವದ್ದು. ಕೇವಲ ರೂಪಮೌಲ್ಯವೇ ಪ್ರಮುಖವೆಂದು ಪರಿಗಣಿಸದೆ, ಮಾನವೀಯ ಕಾಳಜಿಯೇ ಮುಖ್ಯ ಪ್ರೇರಣೆಯಾಗಿ ಅದರ ಅರ್ಥಪೂರ್ಣ, ಭಾವಪೂರ್ಣ ಅಭಿವ್ಯಕ್ತಿಗಾಗಿ ತುಡಿಯುತ್ತಿದ್ದ ಹೋರ್ ಸೂಕ್ತ, ಪರಿಷ್ಕೃತ ರೂಪ-ಸಾದೃಶ್ಯಗಳ ಸಫಲತೆಯನ್ನು ಪಡೆದ ಅವಧಿ ಇದು. ಈ ಅವಧಿಯಲ್ಲಿ ಸಾಮಾನ್ಯವಾಗಿ ಎಲ್ಲ ಮಾಧ್ಯಮಗಳಲ್ಲಿ ಕೃತಿ ರಚನೆ ಮಾಡಿದ್ದು, ವಸ್ತುವಿನ ನಿರೂಪಣೆ-ಅಭಿವ್ಯಕ್ತಿ ತುಂಬ ಸರಳತೆಯನ್ನು ಸಾಧಿಸಿತು. ಮಾನವಾಕೃತಿಗಳು ಲಿಂಗ ಮತ್ತು ವಯಸ್ಸಿನ ಗುರುತನ್ನುಳಿದು ಇನ್ನಾವುದೇ ವ್ಯಕ್ತಿ ವಿಶಿಷ್ಟ ಲಕ್ಷಣಗಳನ್ನು ಕಳೆದುಕೊಂಡು ಮಾನವ ಸಾಧಾರಣ್ಯವನ್ನು ಹೊಂದಿದವು. ದೊಡ್ಡ ತಲೆ, ಕೆನ್ನೆಯೆಲುಬು, ತೇಲಿದ ಸಣ್ಣಮುಖ, ತೆಳುವಾದ ತೊಗಲ ಪೊರೆ ಸುತ್ತಿದಂತಹ ಎದೆಗೂಡುಗಳು ಅಪೌಷ್ಟಿಕತೆಯಿಂದ ನಿತ್ರಾಣವಾಗಿ ಸಾವಿನ ನೆರಳಲ್ಲಿ ನರಳುತ್ತಿರುವ ಅಸಹಾಯಕ(ಮಾನವ) ಜೀವಿಗಳನ್ನು ಮೂರ್ತಿಸಿದವು. ಅಲ್ಲಲ್ಲಿ ಚೂರಿಯಿಂದಿರಿದಂತಹ ಗುರುತುಗಳು ಸಮಸ್ತ ಮಾನವೀಯತೆಗೆ ಉಂಟಾದ ಗಾಯಗಳನ್ನು ಪ್ರತಿನಿಧಿಸಿದವು. ಹರಿದ ಚರ್ಮದ ಮಧ್ಯೆ ಅಲ್ಲಲ್ಲಿ ತೇಲಿದ ಎಲುಬು, ಅದಕ್ಕೆ ಹಾಕಿದ ಹೊಲಿಗೆಯಾಗಿ ಪರಿಣಮಿಸಿತು. ಅಂಗಾಂಗಗಳ ಗುರುತಳಿದುಹೋಗಿ ಶಿಥಿಲ ಪತ್ರದಂತೆ



'ನಾಯಿ'. ೧೯೮೫, ಕಂಚು ಶಿಲ್ಪ

ಕಂಗೊಳಿಸಿದ ಶರೀರಗಳು ಕ್ರಮೇಣ ಖಿಲವಾಗಿ ನೆಲಕ್ಕುರುಳಿದ ಶಿಶಿರದ ತರಗೆಲೆಯ ಸಾದೃಶ್ಯವನ್ನು ಸಾಧಿಸಿದುವು. ಒಟ್ಟಾರೆ ಮನೋದೈಹಿಕ ಯಾತನೆ-ತುಮುಲಗಳನ್ನು ಚಿತ್ರಿಸಿದ ಕೃತಿಗಳು ಕೇವಲ ಮಾನವರೇ ಅಲ್ಲದೆ ಇತರ ಪ್ರಾಣಿವರ್ಗದ ಕರುಣಾಜನಕ ಸ್ಥಿತಿ, ಸಾವು-ನೋವುಗಳನ್ನು ಬಿಂಬಿಸಿದವು.

ಬಂಗಾಲದ ಕ್ಷಾಮದ ಹಿನ್ನೆಲೆಯಲ್ಲಿ ರಚಿತವಾದ 'ಸ್ಟ್ಯಾಂಡಿಂಗ್ ಗರ್ಲ್ ಇನ್ ಗ್ರೀಫ್' (೧೯೬೪), ಮೃತನೊಬ್ಬನಿಗಾಗಿ ದುಃಖಿತರಾದ 'ರೆಫ್ಯೂಜೀಸ್' (೧೯೬೪), ಮೃತಮಗು'(ಚೈಲ್ಡ್)'ವಿನೊಂದಿಗಿನ ತಂದೆ(೧೯೬೪), ಪರ್ವೆಯಾನಾಯಿ'(ಡಾಗ್)'ಯೊಂದಿಗೆ ಭಿಕ್ಷುಕ(೧೯೬೫), ಮೃತನಿಗಾಗಿ ಶೋಕಿಸುತ್ತಿರುವವರು 'ಮೌರ್ನರ್ಸ್'(೧೯೬೫), 'ಬೆಗ್ಗರ್ ಫ್ಯಾಮಿಲಿ' (೧೯೬೬), 'ಡೆಡ್ ಚೈಲ್ಡ್'(೧೯೬೬) ಮೊದಲಾದ ಯಾವುದೇ ಕೃತಿಗಳಲ್ಲಿ ಇಂತಹ ವಸ್ತು-ವಿಷಯಗಳನ್ನು ನಿರ್ವಹಿಸುವ ಹೋರ್‌ರವರು ಅವುಗಳ ವಿವರಣಾತ್ಮಕ ಅಭಿವ್ಯಕ್ತಿಯಿಂದ ಅಂತರವನ್ನು ಸಾಧಿಸುತ್ತಲೇ ಅವುಗಳ ತತ್‌ಕ್ಷಣದ ಅನುಭವ-ಅನಿಸಿಕೆ, ಭಾವನೆಯೆಡೆಗೆ ಹೆಚ್ಚಿನ ಒತ್ತನ್ನು ನೀಡಿದ್ದಾರೆ. ೧೯೪೬-೪೭ರ ಮತೀಯ ಘರ್ಷಣೆಗಳು, ೧೯೪೭ರ ವಿಭಜನೆ, ವಲಸೆ, ಹಿಂಸಾಚಾರ ಮುಂತಾದುವುಗಳಲ್ಲಿ ತಮ್ಮ ನೇರ ಅನುಭವದ ಮೂಲಕ ಹೋರ್ ಕಂಡಿದ್ದು ಅಸಹಾಯಕ ಜನರ ಸಾವು-ನೋವುಗಳನ್ನು, ರಾಜಕೀಯದ, ಅಧಿಕಾರದ ದಾಳಕ್ಕೆ ಬಲಿಪಶುವಾದ ಜನರನ್ನು. ಈ ಜನಗಳಿಗಾದ ಗಾಯದ ಗುರುತುಗಳು ಅವರ ಮೇಲಾದ ಹಿಂಸಾಚಾರದ, ಅನ್ಯಾಯದ ಮತ್ತು ಮಾನವತೆಯ ಅಧಃಪತನದ ಸಂಕೇತವಾಗಿ ಕಂಡವು. ಹೀಗೆ ಇಲ್ಲೆಲ್ಲ ವ್ಯಕ್ತವಾಗುವ ಕಷ್ಟ-ಕಾರ್ಪಣ್ಯಗಳು, ಸಾವು-ನೋವುಗಳು ಇಡೀ ಶೋಷಿತ ವರ್ಗಕ್ಕಾದ, ಅಮಾಯಕ ಜನಕ್ಕಾದ ಗುಣವಾಗದ 'ಗಾಯ'ದ ಪರಿಕಲ್ಪನೆಯಾಗಿ ರೂಪುಗೊಂಡಿದೆ. ಮಾನವೀಯತೆಗಾದ ಈ'ಗಾಯ' 'ವೂಂಡ್ಸ್' ಕೃತಿಸರಣಿಯಲ್ಲಿ ಪ್ರೌಢಪರಿಕಲ್ಪನೆಯಾಗಿ, ಸಾಧಾರಣೀಕೃತವಾಗಿ ಅಭಿವ್ಯಕ್ತವಾದ ರೀತಿ ವಿಶಿಷ್ಟವಾದುದು.

ಹತ್ತು ವರ್ಷಗಳವರೆಗೆ ದೆಹಲಿಯಲ್ಲಿದ್ದ ಹೋರ್‌ರವರು ೧೯೬೭ರಲ್ಲಿ ತಮ್ಮ ಕೆಲಸವನ್ನು ಬಿಟ್ಟು ಕಲ್ಕತ್ತೆಗೆ ಮರಳಿದರು. ಎರಡು ವರ್ಷಗಳ ನಂತರ ೧೯೬೯ರಲ್ಲಿ ಶಾಂತಿನಿಕೇತನದ ಕಲಾಭವನದ ಮುಖ್ಯಸ್ಥರಾಗಿದ್ದ ಶ್ರೀ ದಿನಕರ ಕೌಶಿಕ್‌ರವರ ಆಮಂತ್ರಣದ ಮೇರೆಗೆ ಗ್ರಾಫಿಕ್ ಕಲೆಯ ಪ್ರಾಧ್ಯಾಪಕರಾಗಿ ಸೇರಿದರು. ಸೇರಿದ ಕೆಲವೇ ವರ್ಷಗಳಲ್ಲಿ ಕಲಾಭವನದ ಗ್ರಾಫಿಕ್ ವಿಭಾಗವನ್ನು ಭಾರತದಲ್ಲಿಯೇ ಅತ್ಯುತ್ತಮವಾದುವುಗಳಲ್ಲಿ ಒಂದನ್ನಾಗಿ ಮಾಡಿದರು.

'ವೂಂಡ್ಸ್' ಸೋಮನಾಥ್ ಹೋರ್‌ರವರ ೧೯೭೦ರಿಂದೀಚಿನ ಮುಖ್ಯ ಕೃತಿಸರಣಿ. ಸಿಮೆಂಟಿನ ಅಚ್ಚಿನಿಂದ ಪೇಪರ್ ಪಲ್ಪ್ ಮೇಲೆ ಮೂಡಿಸಿದ ಗಾಯರೂಪದ ಆಕೃತಿಗಳೇ ಈ ಕೃತಿಗಳ ಜೀವಾಳ. ಇವುಗಳಲ್ಲಿ ಕೆಲವು ಬೀಜಾಂಕುರ, ಹುಟ್ಟು, ಕ್ಷಯ ಮತ್ತು ಸಾವುಗಳನ್ನು ಸಂಕೇತಿಸುವ ಜೈವಿಕ ರೂಪಗಳನ್ನು ಪ್ರತಿನಿಧಿಸಿದರೆ ಮತ್ತೆ ಕೆಲವು ಆಳಗಾಯವನ್ನು, ನೆತ್ತರು ಚಿಮ್ಮುವುದನ್ನು ಸೂಚಿಸುತ್ತವೆ. ಚೂರಿಯಿಂದಿರಿದ,



'ರಸ್ತೆ ಬದಿಯ ಮಗು'. ೧೯೫೬, ಲಿನೋಕಟ್

ಕತ್ತರಿಸಿದ, ಗುಂಡಿನ ಬಗೆದ ಚರ್ಮದ-ಶರೀರದ ಕಲ್ಪನೆ ಕೊಡುವ ಈ ಕೃತಿಗಳ ನೋಟದ ಪ್ರಕ್ರಿಯೆಯು, ಕ್ರಮೇಣ ಸ್ಪರ್ಶದ ಅನುಭವವನ್ನೇ ತಂದುಕೊಡುತ್ತದೆ.

೧೯೭೦ರ ದಶಕದಲ್ಲಿ ಪೇಪರ್ ಪಲ್ಪ್ ಮುದ್ರಣಗಳ ಜೊತೆಜೊತೆಗೆ ಕಂಚು ಶಿಲ್ಪಗಳ ರಚನೆಗೆ ತೊಡಗಿದ್ದು ಅವರ ಮಾನವೀಯ ಕಾಳಜಿಯ ತೀವ್ರತೆಯು ತನ್ನ ತೀಕ್ಷ್ಣವಾದ ಅಭಿವ್ಯಕ್ತಿಯನ್ನು ಅರಸಿಕೊಂಡು ಎಂದು ಹೇಳಬಹುದು. ಮಾಂಸಖಂಡ ರಹಿತವಾದ ಕೃಶ ಶರೀರದ ಎಲುಬುಗಳನ್ನು ಅಪ್ಪಿ ಆವರಿಸಿಕೊಂಡಂತೆ ತೆಳು ಲೋಹದ ಹಾಳೆಯನ್ನು ಚರ್ಮದಂತೆ ಹೊದಿಸಲಾದ ಅಸ್ಥಿಪಂಜರದಂತಿವೆ ಈ ಶಿಲ್ಪಗಳು.

ಲೋಹದ ಹಾಳೆಯ ಕೊನೆಗಳನ್ನು ಜೋಡಿಸಿದ ರೀತಿಯು ಚರ್ಮವನ್ನು ಸೀಳುಸೀಳಾಗಿ ಹರಿದಂತಹ ಪರಿಣಾಮವನ್ನು ಕೊಡುತ್ತದೆ. ಗುಳಿಬಿದ್ದ ಕಣ್ಣುಗಳು ಮತ್ತು ಹೊಟ್ಟೆ, ಕೀಟದಂತಹ ಕಾಲುಗಳು, ಪ್ರಾಣಸಂಕಟದಿಂದ, ಮೂಕವೇದನೆಯಿಂದ ಭಾರವಾದ ತಲೆ, ನೆತ್ತರು ತೊಟ್ಟಿಕ್ಕಿದ ನೆಲ ಕರುಣಾಜನಕ ಸನ್ನಿವೇಶವನ್ನು ನಿರ್ಮಿಸುತ್ತವೆ.

ಸೋಮನಾಥ್ ಹೋರ್ ತಮ್ಮ ಬಹುತೇಕ ಶಿಲ್ಪಗಳನ್ನು ವಿಯೆಟ್ನಾಮ್‌ನ ಸ್ವಾತಂತ್ರ್ಯ ಸೇನಾನಿಗಳ ಸ್ಮೃತಿಗೆ ಸಮರ್ಪಿಸಿದರು. ಅವರ ಬೃಹತ್ತಾದ ಮತ್ತು ಅತ್ಯುತ್ತಮವಾಗಿದ್ದ ಶಿಲ್ಪ 'ಮದರ್ ವಿತ್ ಎ ಚೈಲ್ಡ್' ೧೯೭೭ರಲ್ಲಿ ಕಲಾಭವನದಿಂದ ಕಳುವಾಯಿತು.

ಸೋಮನಾಥ್ ಹೋರ್‌ರವರ ದೀರ್ಘಕಾಲೀನ ಕಲಾಚಟುವಟಿಕೆಯಲ್ಲಿ ಅನೇಕ ಕಲಾಪ್ರದರ್ಶನಗಳಾದವು. ಅವುಗಳಲ್ಲಿ ಮುಖ್ಯವಾಗಿ ೧೯೬೦ರಲ್ಲಿ ಲ್ಯುಗ್ಯಾನೊದಲ್ಲಿ ನಡೆದ ಗ್ರಾಫಿಕ್ ಬಿನಾಲೆ, ೬೨ರಲ್ಲಿಯ ಟೋಕಿಯೋದ ಪ್ರಿಂಟ್ ಬಿನಾಲೆ ಮತ್ತು ಬಿನಾಲೆ ವೆನಿಸ್, ೬೩ರ ಬಿನಾಲೆ ಸಾವೊ ಪಾವ್ಲೊ, ೬೮ರ ದೆಹಲಿಯ ಮೊದಲ ಟ್ರಿನಾಲೆ ಮತ್ತು ಇಂಟರ್‌ನ್ಯಾಷನಲ್ ಬಿನಾಲೆ ಆಫ್ ಪ್ರಿಂಟ್ಸ್ ಪೊಲ್ಯಾಂಡ್ ಮುಂತಾದ ಅಂತರರಾಷ್ಟ್ರೀಯ ಕಲಾಪ್ರದರ್ಶನಗಳಿಗೆ ಇವರ ಕೃತಿಗಳು ಆಯ್ಕೆಯಾದವು. ಕೇಂದ್ರ ಲಲಿತ ಕಲಾ ಅಕಾಡೆಮಿ, ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್, ಶಿಕ್ಷಣ ಮಂತ್ರಾಲಯ, ಬಹಾಯ್ ಮ್ಯೂಸಿಯಂ ಮುಂತಾದೆಡೆಗಳಲ್ಲಿ ಹೋರ್‌ರವರ ಕೃತಿಗಳು ಸಂಗ್ರಹವಾಗಿವೆ.

ರಾಷ್ಟ್ರದ ಕಲಾಪರಂಪರೆಗೆ ಮಹತ್ತರ ಕೊಡುಗೆ ಸಲ್ಲಿಸಿದ ಹೋರ್‌ರವರಿಗೆ ಸಂದ ಗೌರವ, ಪ್ರಶಸ್ತಿಗಳು ಹಲವು. ರಾಷ್ಟ್ರೀಯ ಕಲಾಪ್ರದರ್ಶನದಲ್ಲಿ ಪ್ರದರ್ಶಿತವಾದ ಇವರ ಕೃತಿಗಳಿಗೆ ಕ್ರಮವಾಗಿ ೧೯೬೦, ೬೨ ಮತ್ತು ೬೩ನೇ ಸಾಲಿನ ರಾಷ್ಟ್ರ ಪ್ರಶಸ್ತಿಗಳು ಸಂದವು. ಆನಂತರ ಯಾವುದೇ ರಾಷ್ಟ್ರೀಯ ಪ್ರದರ್ಶನದಲ್ಲೂ ಕೃತಿಗಳನ್ನು ಸ್ಪರ್ಧೆಗೆಂದು ನಮೂದಿಸುವುದನ್ನು ನಿಲ್ಲಿಸಿದ ಹೋರ್‌ರವರಿಗೆ ೧೯೭೭ರಲ್ಲಿ ಎಲ್. ಎನ್. ಗುಪ್ತಾ ಸ್ಮಾರಕ ಪ್ರಶಸ್ತಿ ಮತ್ತು ೧೯೮೪ರಲ್ಲಿ ಗಗನ್-ಅಬನಿ ಪ್ರಶಸ್ತಿಗಳು ಸಂದಿವೆ. ತಮ್ಮ ಮನೆಯನ್ನು ಕಲಾಭವನಕ್ಕೆ ಕಾಣಿಕೆಯಾಗಿ ಅರ್ಪಿಸಿದ ಈ ನಿಸ್ಪೃಹ ಚೇತನ, ಅಸೀಮ ಮಾನವತಾವಾದಿ, ಎಂಬತ್ತು ವರುಷಗಳ ಈ ವೃದ್ಧ ಯೋಗಿಯನ್ನು ಶಾಂತಿನಿಕೇತನದಲ್ಲಿ ಕಾಣಬಹುದಾಗಿದೆ.

**ರಾಜಶೇಖರ ರಾಮಣ್ಣ ಬಿಲ್ವಾಪತ್ರಿ**
೬೫೩, ೧೨ನೇ 'ಬಿ' ಮುಖ್ಯರಸ್ತೆ, ಇ ಡಬ್ಲ್ಯೂ ಎಸ್ ೨ನೇ ಹಂತ
ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪

# ಕೆರೆಗಳ ಜಲ ಕಾರ್ಯನಿರ್ವಹಣೆ ಮತ್ತು ಜನಸಾಮಾನ್ಯರ ಪಾಲ್ಗೊಳ್ಳುವಿಕೆ

ಬಿ. ಎಸ್. ಭವಾನಿ ಶಂಕರ್

ನಮ್ಮ ರಾಜ್ಯದಲ್ಲಿರುವ ಸುಮಾರು 27,000 ಹಳ್ಳಿಗಳಲ್ಲಿರುವ ಕೆರೆಗಳ ಸಂಖ್ಯೆ 36,675 ಎಂದು ರಾಜ್ಯ ಶಾಸನದ ಖಾತೆಯಲ್ಲಿ ಗುರುತಿಸಲಾಗಿದೆ. ಅಂದರೆ ಪ್ರತಿ ಹಳ್ಳಿಗೆ ಸರಾಸರಿ ಒಂದಕ್ಕೂ ಹೆಚ್ಚು ಕೆರೆಗಳಿವೆ ಎಂದಾಯಿತು. ಸಾವಿರಾರು ವರ್ಷಗಳಿಂದ ಹಳ್ಳಿ ಮತ್ತು ಕೆರೆಯ ಸಂಬಂಧ ಎಷ್ಟಿದೆ ಎಂಬುವ ವಿಷಯವನ್ನು ಚರ್ಚಿಸುವ ಅಗತ್ಯವೇ ಇಲ್ಲ. ಕೆರೆ ಇದ್ದರೆ ಹಳ್ಳಿ; ಅಥವಾ, ಹಳ್ಳಿಗೊಂದು ಕೆರೆ ಇಲ್ಲದಿದ್ದರೆ ಜನಜೀವನ ಸಾಗುತ್ತಿರಲಿಲ್ಲ. ಹೀಗಿರುವಲ್ಲಿ ಅನಾದಿಕಾಲದಿಂದಲೂ ಮಹಾರಾಜರು, ಪಾಳೆಯ ಗಾರರು ಅಥವಾ ಜನಹಿತಾಸಕ್ತಿಯುಳ್ಳ ಧರ್ಮಾತ್ಮರು ಗಳಿಂದ ಪ್ರತಿಹಳ್ಳಿಯಲ್ಲಿ ಒಂದು ಕೆರೆಯಾದರೂ ನಿರ್ಮಿಸ ಲಾಗಿದ್ದು, ಹಳೆಯವಾಗಿದ್ದರೂ ಅವುಗಳು ಇಂದಿಗೂ ಉಪಯುಕ್ತವಾಗಿವೆ. ಕೆರೆ ಹಳ್ಳಿಯ ಬದುಕಿನ ಒಂದು ಅಂಗವಾಗಿ ಉಳಿದುಕೊಂಡುಬಂದಿದೆ. ಕೆಲವು ಕೆರೆಗಳು ಸದ್ಗುಣಸ್ಥ ವೇಶ್ಯೆಯರಿಂದಲೂ ಜನರ ಹಿತಾಸಕ್ತಿಗಾಗಿ ನಿರ್ಮಿಸಲ್ಪಟ್ಟಿವೆ. ಚಿತ್ರದುರ್ಗದ ಸೂಳೆಕೆರೆ (ಈಗಿನ ಹೆಸರು ಶಾಂತಿಸಾಗರ) ಮತ್ತು ನೆರೆ ಗುಂದದ ನೀಲಮ್ಮನ ಕೆರೆ ಇದಕ್ಕೆ ಉದಾಹರಣೆಗಳು. ಹಳ್ಳಿಯ ಬದುಕಿನಲ್ಲಿ ಕೆರೆಯ ಪ್ರಾಶಸ್ತ್ಯ ಎಷ್ಟಿದೆ ಯೆಂದರೆ ಖ್ಯಾತ ಕವಿ ನಿಸಾರ್ ಅಹಮದ್ ಅವರು ಬಣ್ಣಿಸಿರುವಂತೆ ಕೆರೆ ಹೆಣ್ಣಿನ ಹಣೆಯ ಕುಂಕುಮದ ಬಟ್ಟಿನ ಅಂದದಂತೆ.



ಕೆರೆಗಳ ಸಂರಕ್ಷಣೆ, ಜಲ ಕಾರ್ಯ ನಿರ್ವಹಣೆ ಮತ್ತು ಸುಧಾರಣೆ ಬ್ರಿಟಿಷರ ಆಳ್ವಿಕೆಗೂ ಮೊದಲು, ಪುರಾತನ ಕಾಲದಿಂದಲೂ ಹಳ್ಳಿಯ ಜನರಿಂದಲೇ ಸಾಮೂಹಿಕವಾಗಿ ಕೈಗೊಳ್ಳಲ್ಪಡುತ್ತಿತ್ತು. ನಂತರ, ಬ್ರಿಟಿಷರ ಆಳ್ವಿಕೆಯ ಕಾಲದಿಂದ ಈಗಿನವರೆಗೂ ಕೆರೆಯ ನಿರ್ವಹಣೆ ಸರ್ಕಾರದ ಪಾಲಿಗೆ ಬಂದಾಗಿನಿಂದ ಕೆರೆಗಳ ಅವನತಿ ಪ್ರಾರಂಭವಾಗಿ, ಈಗ ಅವುಗಳು ದುರ್ದೆಸೆಯ ಸ್ಥಿತಿಯಲ್ಲಿವೆ. ಬಹುತೇಕ ಕೆರೆಗಳು ಹಾಳಾಗುತ್ತಿವೆ. ರಾಜಕೀಯ ಸ್ವಾತಂತ್ರ್ಯ ಬಂದಾಗಿನಿಂದಂತೂ ಅವುಗಳ ಪರಿಸ್ಥಿತಿ ಅಧೋಗತಿಯ ಪರಮಾವಧಿಯನ್ನು ಮುಟ್ಟಿದೆ. ಸರಕಾರದ ಮಟ್ಟದಲ್ಲಿ ಮಂಜೂರಾದ ಹಣದ ದುರುಪ ಯೋಗ, ಅವ್ಯವಸ್ಥೆ ಮತ್ತು ನಿರ್ಲಕ್ಷ್ಯಗಳಿಂದಾಗಿ ಈ ಪರಿಸ್ಥಿತಿ ಉಂಟಾಗಿದೆ ಎನ್ನಬಹುದು. ಸ್ವಾತಂತ್ರ್ಯಾ ನಂತರದ ಅವಧಿಯಲ್ಲಿ ಸರ್ಕಾರವು ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸುವ ನಿಟ್ಟಿನಲ್ಲಿ ಬೃಹತ್ ಹಾಗೂ ಮಧ್ಯಮ ಯೋಜನೆಗಳಿಗೆ ಆದ್ಯತೆ ಕೊಟ್ಟ ಕಾರಣದಿಂದಾಗಿ ಕೆರೆಗಳು ನಿರ್ಲಕ್ಷ್ಯಕ್ಕೊಳ ಗಾದವು. ಈಗ ಎಲ್ಲಾ ಕೆರೆಗಳಲ್ಲಿ ಸರಾಸರಿ ಶೇ. 35ರಷ್ಟು ಹೂಳು ತುಂಬಿಕೊಂಡಿದೆ. ಕೆರೆ ಏರಿ, ಕಾಲುವೆಗಳು, ಪ್ರವಾಹಕಟ್ಟೆಗಳು ಮತ್ತು ತೂಬುಗಳು ನಶಿಸುತ್ತಿವೆ. ಕೆರೆಗಳ ಈಗಿನ ನೀರು ಶೇಖರಣಾ ಸಾಮರ್ಥ್ಯ ಶೇ. 25ಕ್ಕೆ ಇಳಿದು ಹೋಗಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಈಗಿನ ಸರ್ಕಾರ ಕೆರೆಗಳ ಪುನರುಜ್ಜೀವನ ಕಾರ್ಯವನ್ನು ಹಮ್ಮಿ ಕೊಂಡಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಿಂದಿನ ಕಾಲದಲ್ಲಿ ಕೆರೆಗಳ ನಿರ್ವಹಣೆಯ ಕಾರ್ಯ ಜನ ಸಾಮಾನ್ಯರ ಜವಾಬ್ದಾರಿಯೇ ಆಗಿತ್ತು. ಅಲ್ಲದೆ, ಕೆರೆಗಳು ಉತ್ತಮ ಸ್ಥಿತಿಯಲ್ಲೂ ಇರುತ್ತಿತ್ತು ಎನ್ನುವುದು ಮುಖ್ಯ ಅಂಶ. ಅದೇ ನಿಟ್ಟಿನಲ್ಲಿ ಈಗಿನ ಸರಕಾರ ಕೆರೆಗಳ ನಿರ್ವಹಣಾ ಜವಾಬ್ದಾರಿಯನ್ನು ಜನಸಾಮಾನ್ಯರಿಗೆ ಮತ್ತೆ ವಹಿಸಿಕೊಡುವತ್ತ ಹೆಜ್ಜೆ ಇಟ್ಟಿದೆ.

ಮೊದಲನೆಯದಾಗಿ, ಕೆರೆಗಳ ಸುಧಾರಣೆ ಅವುಗಳ ಆಡಳಿತ ನಿರ್ವಹಣೆ, ಮತ್ತು ಅವುಗಳನ್ನು ಬಳಸುವ ಪ್ರಕ್ರಿಯೆಯಲ್ಲಿ ಜನಸಾಮಾನ್ಯರ ಪಾಲ್ಗೊಳ್ಳುವಿಕೆಯನ್ನು ನಿರ್ದಿಷ್ಟವಾಗಿ ಕಾರ್ಯರೂಪಕ್ಕೆ ತರುವ ನಿಟ್ಟಿನಲ್ಲಿ ಸರಕಾರವು ಜಲಸಂವರ್ಧನ ಯೋಜನಾ ಸಂಘವನ್ನು ಸ್ಥಾಪಿಸಿದೆ. ಈ ಇಡೀ ಯೋಜನೆಯ ಮಹತ್ವವನ್ನು ಅರಿತ ಹಿನ್ನೆಲೆಯಲ್ಲಿ ಮುಖ್ಯಮಂತ್ರಿಗಳೇ ಸಂಘದ ನಾಯ ಕತ್ವವನ್ನು ವಹಿಸಿಕೊಂಡಿದ್ದಾರೆ. ಸಂಬಂಧಪಟ್ಟ ರಾಜ್ಯದ ಹಿರಿಯ ಅಧಿಕಾರಿಗಳು ಹಾಗೂ ಸರಕಾರೇತರ ಸಂಸ್ಥೆಗಳ ಪ್ರತಿನಿಧಿಗಳು ಈ ಸಂಘದ ಸದಸ್ಯರಾಗಿದ್ದಾರೆ. ಹಳ್ಳಿ ಹಳ್ಳಿ ಗಳಲ್ಲಿ ಕೆರೆಗಳ ಬಳಕೆದಾರರ ಸಂಘಗಳನ್ನು ಸ್ಥಾಪಿಸಿ ಅಂತಹ ಸಂಘಗಳ ನೋಂದಣಿ ಮಾಡುವುದು ಈ ಯೋಜನೆಯ ಮುಖ್ಯ ಉದ್ದೇಶ. ಕೆರೆಗಳನ್ನು ಪುನರುಜ್ಜೀವನಗೊಳಿಸಿ ಅವುಗಳ ನಿರ್ವಹಣೆಯನ್ನು ಆಯಾ ಸಂಘಗಳಿಗೆ ಒಪ್ಪಿಸುವುದು ಈ ಯೋಜನೆಯ ಜವಾಬ್ದಾರಿಗಳಲ್ಲಿ ಒಂದು. ಇದಕ್ಕೆ ಬೇಕಾದ ಖರ್ಚುಗಳಿಗಾಗಿ ವಿತ್ತೀಯ ಸಂಸ್ಥೆಗಳಿಂದ ಹಣ ಒದಗಿಸಲು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಮುಂಬರುವ 5 ವರುಷಗಳಲ್ಲಿ 5,000 ಕೆರೆಗಳು ಈ ಯೋಜನೆಯ ಮೂಲಕ ಜೀರ್ಣೋದ್ಧಾರ ಗೊಳ್ಳಲಿವೆ. ಈ ಇಡೀ ಪ್ರಕ್ರಿಯೆಯಲ್ಲಿ ಸ್ಥಳೀಯ ಜನತೆಯ ಪಾತ್ರ ಹೆಚ್ಚು ಅರ್ಥಪೂರ್ಣವಾಗಿಸುವ ದೃಷ್ಟಿಯಿಂದ ಪ್ರತಿ ಕೆರೆಯ ಶೇ. 15ರಷ್ಟು ಖರ್ಚಿನ ಬಾಬ್ತು ಸ್ಥಳೀಯರೇ ನಿರ್ವಹಿಸುವುದರ ಜೊತೆಗೆ ಸರಕಾರ ಮಿಕ್ಕ ಶೇ. 85ರಷ್ಟು ಖರ್ಚನ್ನು ತಾನೇ ವಹಿಸಿಕೊಳ್ಳಲಿದೆ. ಈಗಾಗಲೆ ವಿಶ್ವಬ್ಯಾಂಕ್, ನಬಾರ್ಡ್ ಮತ್ತು ಹುಡ್ಕೊ ಸಂಸ್ಥೆಗಳಿಂದ ಹಣ ಸಹಾಯ ಪಡೆಯುವಲ್ಲಿ ಸರಕಾರ ಪ್ರಯತ್ನಶೀಲವಾಗಿದೆ.

**ಜಲ ವಿತರಣೆ**

ಕೆರೆಗಳ ಮುಖ್ಯ ಉಪಯೋಗವೆಂದರೆ ಕೃಷಿ ಭೂಮಿಗೆ ನೀರಾವರಿ ಒದಗಿಸುವುದು. ಅಲ್ಲದೆ, ಹೆಚ್ಚು ಹೆಚ್ಚಾಗಿ ಖಾದ್ಯಾನ್ನ ಬೆಳೆಯುತ್ತಿರುವ ರೈತರಿಗೆ ಕೂಡ ಸಹಾಯಕವಾಗು ವುದು. ಜೊತೆಗೆ ಹಳ್ಳಿಯ ರೈತರೇತರ ಜನರಿಗೆ ದಿನಬಳಕೆಯ ನೀರನ್ನು ಒದಗಿಸುವುದು. ಅವರ ದುಡಿಮೆ ಅಂದರೆ, ವ್ಯವಸಾಯದ ಜೊತೆಗೆ, ಇತರ ಕಸುಬುಗಾರರ (ಕುಂಬಾರ, ಕುರುಬ, ಮೀನುಗಾರ, ಇತ್ಯಾದಿ) ಮತ್ತು ಸಣ್ಣಪುಟ್ಟ ಗುಡಿ ಹಾಗೂ ಗೃಹ ಕೈಗಾರಿಕೋದ್ಯಮಿಗಳ ಅವಶ್ಯಕತೆಗಳಿಗೆ, ಹಾಗೂ ಸಾಮೂಹಿಕ, ಧಾರ್ಮಿಕ ಹಬ್ಬ ಹರಿದಿನಗಳ ಆಚರಣೆಗಳಿಗೆ ಕೆರೆ ಆಸರೆಯಾಗುತ್ತಾ ಬಂದಿದೆ. ಪ್ರತಿ ಯೊಬ್ಬ ವ್ಯಕ್ತಿಗೂ ಕೆರೆಯ ನೀರಿನ ಬಳಕೆಯ ಹಕ್ಕು ಇದ್ದೇ ಇದೆ. ನೀರಿನ ಮಿತ ಬಳಕೆಯ ಬಗ್ಗೆ ಜನರಲ್ಲಿ ಹೆಚ್ಚು ಪ್ರಜ್ಞೆ ಮೂಡಬೇಕಾಗಿರುವುದು ಇಲ್ಲಿ ಮುಖ್ಯವಾಗುತ್ತದೆ.

ಅದೇ ಸಮಯದಲ್ಲಿ ಹಲವಾರು ಕಾರಣಗಳಿಂದಾಗಿ ಸರಕಾರಿ ಸ್ವಾಮ್ಯದಲ್ಲಿ ಕೆರೆಗಳು ಬಂದಾಗಿನಿಂದ ಜಲ ವಿತರಣಾ ವ್ಯವಸ್ಥೆ ಹದಗೆಟ್ಟಿದೆ. ಬಲಿಷ್ಠರು, ಪ್ರಭಾವಶಾಲಿ ವ್ಯಕ್ತಿಗಳು ಹಾಗೂ ಕೆರೆಯ ಹತ್ತಿರವೇ ಇರುವ ಕೃಷಿಕರು ಹೆಚ್ಚು ಹೆಚ್ಚು ನೀರನ್ನು ಬಳಸುತ್ತಾ ಬಂದಿದ್ದಾರೆ. ಬಡವರು, ಕೆರೆಯ ಅಚ್ಚುಕಟ್ಟಿನ ಆಚೆ ಇರುವವರು ಹಾಗೂ ಕೆಳಜಾತಿ ಯವರು ನೀರಿನ ಬಳಕೆಯಿಂದ ಹೆಚ್ಚು ವಂಚಿತರಾಗಿದ್ದಾರೆ. ಹಳ್ಳಿಗಳಲ್ಲಿನ ಬಡತನ ಜಾಸ್ತಿಯಾಗುತ್ತಿರುವುದಕ್ಕೆ ಇದೂ ಒಂದು ಕಾರಣವೆಂದರೆ ತಪ್ಪಾಗಲಾರದು. ಈ ಪರಿಸ್ಥಿತಿ ಬದಲಾಗಬೇಕಾದರೆ ನೀರಿನ ವಿತರಣೆಯಲ್ಲಿ ನಿಷ್ಪಕ್ಷವಾದ

ಒಂದು ಹೊಸ ವ್ಯವಸ್ಥೆಯನ್ನು ಜಾರಿಗೆ ತರುವ ಅವಶ್ಯಕತೆ ಇದೆ. ಹೊಸ ವ್ಯವಸ್ಥೆಯನ್ನು ಜಾರಿಗೊಳಿಸುವ ಸಂದರ್ಭಗಳಲ್ಲಿ ಪಟ್ಟಭದ್ರ ಶಕ್ತಿಗಳು ವಿರೋಧಿಸುವುದು ಹೊಸದೇನೂ ಅಲ್ಲ. ಆದರೆ ಸರ್ಕಾರ ದಿಟ್ಟತನದಿಂದ ಜನಪರ ನಿಲುವನ್ನು ತಾಳಿ ಇಂತಹ ಪರಿಸ್ಥಿತಿಯನ್ನು ನಿಯಂತ್ರಿಸಬಲ್ಲುದೇ ಎಂಬುದು ಪ್ರಶ್ನೆ.

ಈಗಿಗಿನ ಧನಾತ್ಮಕ ಬೆಳವಣಿಗೆಯೆಂದರೆ ನೀರು ಬಳಕೆದಾರರ ಸಂಘಗಳು ಹೆಚ್ಚಾಗಿ ಅಸ್ತಿತ್ವಕ್ಕೆ ಬರುತ್ತಿರುವುದು ಹಾಗೂ ವಿಶಾಲ ತಳಹದಿಯ ಆಧಾರದ ಮೇಲೆ ರೂಪುಗೊಳ್ಳುತ್ತಿರುವುದು. ನೀರಿನ ವಿತರಣೆಯ ಹಕ್ಕುಗಳ ಬಗ್ಗೆ ಹಳ್ಳಿಗಳಲ್ಲಿ ಹೆಚ್ಚು ಪ್ರಜ್ಞೆ ಮೂಡಿಬರುತ್ತಿರುವುದು ಒಂದು ಒಳ್ಳೆಯ ಬೆಳವಣಿಗೆಯೆ. ಹೆಚ್ಚುತ್ತಿರುವ ಜನಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ನೀರಿನ ಬಳಕೆಯನ್ನು ನಿರ್ದಿಷ್ಟಗೊಳಿಸಲು ಹಾಗೂ ಪ್ರದೂಷಣದ ಸಾಧ್ಯತೆ ಕಡಿಮೆ ಮಾಡಲು ಇದು ಸಹಾಯ ಒದಗಿಸುತ್ತದೆ.

ಎರಡು ಸಾವಿರ ಹೆಕ್ಟೇರ್‌ನಷ್ಟು ಅಚ್ಚುಕಟ್ಟುಳ್ಳ ನೀರಾವರಿ ಯೋಜನೆಗಳು ಸಣ್ಣ ನೀರಾವರಿಯೆಂದು ಯೋಜನಾ ಆಯೋಗವು ಪರಿಗಣಿಸುತ್ತದೆ. ಕೆರೆಗಳು ಇದರಡಿ ಸೇರುತ್ತವೆ. ನಾಲ್ಕು ಸಾವಿರದವರೆಗಿನ ಅಚ್ಚುಕಟ್ಟುಳ್ಳ ಕೆರೆಗಳು ಸಣ್ಣ ನೀರಾವರಿ ಇಲಾಖೆಯ ಅಧೀನದಲ್ಲಿವೆ. ಮಿಕ್ಕವು ಜಿಲ್ಲಾ ಅಥವಾ ಗ್ರಾಮ ಪಂಚಾಯ್ತಿಯ ಪರಿಧಿಗೆ ಸೇರುತ್ತವೆ.

ಕ್ರಮೇಣ ಎಲ್ಲ ಕೆರೆಗಳನ್ನೂ ಜಲಸಂವರ್ಧನಾ ಯೋಜನಾ ಸಂಘಗಳ ಉಸ್ತುವಾರಿಗೆ ತೆಗೆದುಕೊಂಡು ನೀರು ಬಳಕೆದಾರರ ಸಂಘದ ನಿಯಮಾವಳಿಗಳಂತೆ ಅವನ್ನು ನೋಂದಾಯಿಸಿ ಕೆರೆಗಳ ಪೋಷಣೆ ಮತ್ತು ನಿರ್ವಹಣೆಯ ಜವಾಬ್ದಾರಿ ಹೊರಬೇಕೆಂಬ ಉದ್ದೇಶವಿದೆ. ಜಲ ವಿತರಣಾ ಪ್ರಬಂಧ ಕಾರ್ಯವು ಇಂತಹ ಸಂಘಗಳ ಹೊಣೆಯಾಗಬೇಕು. ಅದಕ್ಕೆ ಪೂರ್ವಭಾವಿಯಾಗಿ ಕೆರೆಗಳಲ್ಲಿ ಹೂಳು ತೆಗೆದು ಕೆರೆ ಕಟ್ಟೆ ನಾಲೆ ಮತ್ತು ಜಲಾನಯನ ಕ್ಷೇತ್ರದತ್ತ ಗಮನ ನೀಡಬೇಕು. ಇಂತಹ ಪುನರುಜ್ಜೀವನದ ಪ್ರಕ್ರಿಯೆಯಲ್ಲಿ ಸಂಘಗಳು ಪಾಲ್ಗೊಳ್ಳುವುದು ಅತಿಮುಖ್ಯ.

ಜಲ ವಿತರಣೆಗೆ ಸಂಘಗಳು ನೀತಿನಿಯಮಗಳನ್ನು ರೂಪಿಸಬೇಕು. ಕೆರೆಯಲ್ಲಿ ನೀರು ಪೂರ್ತಿ ಸಂಗ್ರಹಣೆಯಾದಾಗ ಅದರಲ್ಲಿ ಕುಡಿಯುವ ನೀರಿಗೆ ಹಾಗೂ ಬೇರೆ ಅವಶ್ಯಕತೆಗಳಿಗೆ ಎಷ್ಟು ಪ್ರಮಾಣ ಮೀಸಲಿರಿಸಬೇಕೆಂಬುದು ಆದ್ಯತೆಯ ಪ್ರಶ್ನೆ. ಇದು ಕಡಿಮೆ ಪ್ರಮಾಣದಲ್ಲಿಯೇ ಇರುತ್ತದೆ. ಉಳಿದಿದ್ದರಲ್ಲಿ ಖಾರಿಫ್ ಮತ್ತು ರಾಬಿ ಬೆಳೆಗಳಿಗೆ ಯಾವ ಪ್ರಮಾಣದ ನೀರನ್ನು ಮೀಸಲಾಗಿರಿಸಬೇಕೆಂಬ ತೀರ್ಮಾನ ಕೈಗೊಳ್ಳಬೇಕು. ವಿತರಣೆಯಲ್ಲಿ ಅಚ್ಚುಕಟ್ಟಿನ ಕಟ್ಟಕಡೆಯಲ್ಲಿರುವವರಿಗೂ ಸಮಪ್ರಮಾಣದ ನೀರು ದೊರೆಯುವಂತಿರಬೇಕು. ಇದೆಲ್ಲಾ ಪ್ರಾರಂಭದಲ್ಲೇ ಯೋಜಿಸಬೇಕಾದ ಅಂಶಗಳು. ಯಾವ ರೈತರು ಯಾವ ಬೆಳೆಯನ್ನಿಡುತ್ತಾರೆಂಬ ಮಾಹಿತಿಯನ್ನು ಮೊದಲೇ ಪಡೆದು ಅದಕ್ಕನುಗುಣವಾಗಿ ನೀರಿನ ವಿತರಣೆಯಾಗಬೇಕು.

ದೊಡ್ಡ ಕೆರೆಗಳಲ್ಲಿ ನೀರಿನ ಘನ ಪರಿಮಾಣವನ್ನು ಆಧರಿಸಿ ಕೃಷಿಕರಿಗೆ ನೀರನ್ನು ಹಂಚಬೇಕು. ವಿತರಣಾ ಪ್ರಕ್ರಿಯೆಯಲ್ಲಿ ನಷ್ಟವಾಗುವ ನೀರಿನ ಪ್ರಮಾಣವನ್ನು ಗುರುತಿಸಿ ಅದನ್ನುಳಿದು ಮಿಕ್ಕಿದ್ದನ್ನು ಹಂಚಲು ಅಚ್ಚುಕಟ್ಟು




ದಾರರ ನೇರ ಸಲಹೆ ಹಾಗೂ ಭಾಗವಹಿಸುವಿಕೆಯಿಂದ ಕ್ರಮ ಕೈಗೊಳ್ಳಬೇಕು. ನೀರಿನ ಮೇಲಿನ ಹಕ್ಕು ಸಹಜವಾಗಿಯೇ ಜಲಾಶಯದಲ್ಲಿ ಶೇಖರವಾಗುವ ಒಟ್ಟು ನೀರಿನ ಪ್ರಮಾಣವನ್ನು ಆಧರಿಸಿರುತ್ತದೆ. ವಿತರಣಾ ಕಾಲುವೆಗಳಲ್ಲಿ ಉದ್ದಕ್ಕೂ ನೀರು ಅಳೆಯುವ ಸಾಧನವನ್ನು ಅಳವಡಿಸಿದರೆ ಹಂಚುವ ಕೆಲಸ ನಿಯಮಬದ್ಧವಾಗಿ ನಡೆಯುತ್ತದೆ. ಹರಿಯುವ ನೀರಿನ ಪ್ರಮಾಣದಲ್ಲಿ ಏರಿಳಿತಗಳು ಉಂಟಾದಾಗ ಅದನ್ನು ನಿಯಂತ್ರಿಸಲು ನೀರಗಂಟಿಗೆ ತಾಂತ್ರಿಕ ತರಬೇತಿಯನ್ನು ನೀಡಿರಬೇಕು.

ನೀರು ವಿತರಣಾ ವಿಧಾನದಲ್ಲಿ ನಿರ್ಧಾರವಾದಂತೆ ಪ್ರತಿ ಕೃಷಿಕನೂ ತನ್ನ ಸರದಿ ಬಂದಾಗ ಮಾತ್ರವೇ ನಿರ್ದಿಷ್ಟ ಪ್ರಮಾಣದ ನೀರನ್ನು ಹರಿಸಿಕೊಳ್ಳುವಂತಿರಬೇಕು. ಅದಕ್ಕೆ ಸಣ್ಣ ಕಾಲುವೆಗಳ ಉಪಯೋಗ ಮಾಡಿಕೊಳ್ಳಬಹುದು. ಎಷ್ಟು ನೀರು ಲಭ್ಯವಾಗುತ್ತದೆಂದು ಮೊದಲೇ ತಿಳಿದಿರುತ್ತದಾದ್ದರಿಂದ ಅದರಂತೆ ಬೆಳೆಗಳನ್ನಿಡುವುದು ಸುಲಭವಾಗುತ್ತದೆ. ಸಮಾನ ನೀರು ಹಂಚಿಕೆ ಮತ್ತು ಉತ್ತಮ ಕೃಷಿ ಇಳುವರಿಗೆ ಈ ಕ್ರಮವು ಸಾಧನವಾಗಬಲ್ಲದು.

ಅಚ್ಚುಕಟ್ಟಿನ ಯಾವುದೇ ಭಾಗದಲ್ಲಾದರೂ ಬಾವಿಗಳಿದ್ದರೆ ಅವನ್ನು ಬಳಸಿಕೊಳ್ಳಲು ಪಂಪುಗಳನ್ನು ಅಳವಡಿಸಬೇಕು; ಬಾವಿಗಳಿಲ್ಲದಿದ್ದರೆ ಅವನ್ನು ಹೊಸದಾಗಿ ತೋಡುವುದೂ ಅವಶ್ಯಕ. ಕೆರೆಯ ನೀರು ಲಭ್ಯವಿಲ್ಲದಾಗ ಅವನ್ನು ಬಳಸಲು ಅನುಕೂಲವಾಗುತ್ತದೆ. ಕಾಲುವೆಯ ನೀರನ್ನು ಹೊಲಗದ್ದೆಗಳಿಗೆ ಕ್ಲುಪ್ತವಾಗಿ ಒದಗಿಸಲು ಸಾಧ್ಯವಾಗದಿರುವುದಕ್ಕೆ ಅಚ್ಚುಕಟ್ಟಿನ ವ್ಯಾಪ್ತಿಯೂ ಒಂದು ಕಾರಣ. ನೀರು ಹರಿದು ಕಡೆಯ ಗದ್ದೆಗೆ ಸೇರುವುದು ಎಷ್ಟೋ ಬಾರಿ ಇಲ್ಲವೇ ಇಲ್ಲ. ಇದಕ್ಕೆ ಪರಿಹಾರ ಬಾವಿಯ ನೀರೇ. ಭೂಮಿಯ ಮೇಲಿನ ಜಲ ಹಾಗೂ ಅಂತರ್ಜಲದ ಜಂಟೀ ಉಪಯೋಗವು ಜಲ ಪ್ರಬಂಧನೆಗೆ ಸೂಕ್ತ ತಂತ್ರವಾಗಿದೆ. ಇಳುವರಿಯ ಹೆಚ್ಚಳಕ್ಕೆ ಇದರ ಕಾಣಿಕೆ ಅಪಾರ.

ಸಣ್ಣ ಕೆರೆಗಳ ಅಚ್ಚುಕಟ್ಟಿನಲ್ಲಿರುವ ರೈತರ ಸಂಖ್ಯೆ ಕಡಿಮೆಯೇ ಇರುತ್ತದೆ. ಅವರು ಪರಸ್ಪರ ಸೌಹಾರ್ದತೆಯಿಂದ ಹಿಂದಿನ ವರ್ಷಗಳ ನ್ಯೂನತೆಗಳನ್ನು ಸರಿಪಡಿಸಿಕೊಂಡು ಉತ್ತಮ ನೀರು ಹಂಚಿಕೆಯನ್ನು ಏರ್ಪಡಿಸಿಕೊಳ್ಳಬಹುದು. ಸಂಘದ ಆಡಳಿತ ಸಮಿತಿಗೆ ಇದು ದುಸ್ತರವಾದ ಕಾರ್ಯಭಾರವಲ್ಲ. ಪ್ರತಿವರ್ಷದ ನೀರು ಹಂಚಿಕೆಯ ಮಾದರಿಯನ್ನು ಅಧ್ಯಯನ ಮಾಡಿ ವಿಶ್ಲೇಷಣೆ ಮಾಡಿಕೊಳ್ಳುವುದಷ್ಟೇ ಇದಕ್ಕೆ ಬೇಕಾದ ಪರಿಣತಿ.

ಯಾವುದೇ ಹಳ್ಳಿಯಲ್ಲೂ ಕೆರೆಯ ನೀರನ್ನು ಬಳಸುವ ಎಲ್ಲ ಕೃಷಿಕರೂ ಸಂಘದ ಸದಸ್ಯರಾಗಿರಬೇಕು. ಆಡಳಿತ ಸಮಿತಿಯಲ್ಲಿ ಹಿಂದುಳಿದವರು ಯಾವ ಕೋಮಿನವರೇ ಇರಲಿ ಅವರಿಗೆ ಪ್ರಾತಿನಿಧ್ಯವಿರಬೇಕು. ಇಲ್ಲದಿದ್ದರೆ ಅಶಕ್ತ ಗುಂಪುಗಳು ಸಮಪಾಲು ದೊರೆಯದೆ ಮತ್ತೆ ಕೃಶರಾಗಿ ಉಳಿಯಬೇಕಾದೀತು. ಎಲ್ಲ ಕೃಷಿಕರೂ ನೀಡುವ ಜಲ ಕರವೇ ಸಂಘದ ಆದಾಯವಾಗುತ್ತದೆ. ಕೆರೆಯಂಗಳದಲ್ಲಿ ಮೀನುಗಾರಿಕೆ, ವನಸಂಪತ್ತು, ಇತ್ಯಾದಿಗಳೂ ಆದಾಯದ ಮೂಲಗಳೇ. ಕೆರೆಗಳ ಸಂರಕ್ಷಣೆ, ಪೋಷಣೆ, ಹೂಳು ತೆಗೆಯುವ ಕೆಲಸ, ಇವೆಲ್ಲಕ್ಕೂ ಈ ಆದಾಯದಿಂದ ಹಣ ಪಡೆಯಬೇಕು. ಸಾಮೂಹಿಕ ಹತೋಟಿಯಿಂದಾಗಿ ಒಂದು ರೀತಿಯ ತನ್ನತನ ಮತ್ತು ನಿಕಟ ಸಂಬಂಧ ಬೆಳೆದು ಕೆರೆಗಳ ಪುನರುತ್ಥಾನಕ್ಕೆ ಸುಗಮವಾದ ಹಾದಿಯು ರಚನೆಗೊಳ್ಳುತ್ತದೆ.

ರಾಷ್ಟ್ರದ ಶೇ.70 ಜನಸಮುದಾಯ ಹಳ್ಳಿಗಳಲ್ಲಿವೆ. ಹಳ್ಳಿಗಳ ಕೆರೆಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದರೆ ಹಳ್ಳಿಗಳು ಪಟ್ಟಣಗಳಂತೆ ವಿಶಾಲವಾಗಿ ಸಮೃದ್ಧವಾಗಬಲ್ಲವು. ಆಗ ಪಟ್ಟಣಗಳತ್ತ ಹಳ್ಳಿಗಳ ಜನರ ಓಟ ಕಡಿಮೆಯಾಗಿ ಒಂದು ಸಂತುಲನೆದೆಡೆಗೆ ರಾಷ್ಟ್ರವು ಹೆಜ್ಜೆ ಇಡಬಹುದು. ಕೆರೆಯ ನಿರ್ವಹಣೆಯಲ್ಲಿ ಎಷ್ಟು ಸಾಮಾಜಿಕ ತತ್ವವಿದೆಯೋ ಅಷ್ಟೇ ಅದನ್ನು ಸಾಮರ್ಥ್ಯದಿಂದ ಪೋಷಿಸಬೇಕಾದರೆ ತಾಂತ್ರಿಕ ತತ್ವಗಳೂ ಕೂಡಿರಬೇಕು. ಆದ್ದರಿಂದ ಜಲ ಸಂವರ್ಧನಾ ಯೋಜನೆಯ ಸಂಘವು ತಾಂತ್ರಿಕ ತತ್ವಗಳನ್ನು ಅಳವಡಿಸಿ ನೀರು ಬಳಕೆದಾರರ ಸಂಘಗಳ ಕಾರ್ಯಕರ್ತರಿಗೆ ಅದನ್ನು ಪರಿಚಯಿಸಬೇಕು. ಅಂತೆಯೇ ಸದಸ್ಯರ ಜ್ಞಾನವೃದ್ಧಿಗೋಸ್ಕರ ಕೆರೆಯ ನಿರ್ವಹಣೆಗೆ ಅನುಕೂಲವಾಗುವಂತೆ ಒಂದು ಕೈಪಿಡಿಯನ್ನು ತಯಾರಿಸಲಾಗಿದೆ. ಸಂಘಗಳಿಂದ ಕೆರೆಗಳ ಸಂರಕ್ಷಣೆ ಮತ್ತು ಎಲ್ಲರಿಗೂ ತೃಪ್ತಿಕರ ಜಲ ವಿತರಣೆ ಮಾಡುವ ಕ್ಷಮತೆ ಬರಬೇಕಾದರೆ ಸರಕಾರದ ತಾಂತ್ರಿಕ ವಿಭಾಗವು ಸಂಘಗಳಿಗೆ ಸಹಾಯಕವಾಗಿರಬೇಕು. ಪ್ರತಿ ವಿಭಾಗ ಮತ್ತು ಅದರ ಕರ್ಮಚಾರಿಗಳು ಸಲಹಾಕಾರರಂತೆ ಕೆಲಸ ಮಾಡಬೇಕು. ಸಂರಕ್ಷಣಾ ಕಾರ್ಯದಲ್ಲಿ ಅತಿಹೆಚ್ಚಿನ ಖರ್ಚಿನ ಕೆಲಸವಿದ್ದರೆ ಸರಕಾರ ಹಣಸಹಾಯ ನೀಡಿ ಅನುಕೂಲ ಮಾಡಿಕೊಡಬೇಕು. ನೀರು ಬಳಕೆದಾರರ ಸಂಘಗಳು ಸಫಲವಾಗಿ ಕಾರ್ಯ ನಿರ್ವಹಿಸುವುದಕ್ಕೆ ಸರಕಾರ ಸದಾ ಬೆಂಬಲ ನೀಡಬೇಕು. ಆಗಲೇ ಸರಿಯಾದ ಪಾಲ್ಗೊಳ್ಳುವಿಕೆ ಅರ್ಥವತ್ತಾಗಿರುತ್ತದೆ ಮತ್ತು ಸಕಲರಿಗೂ ಲಾಭದಾಯಕವಾಗಿರುತ್ತದೆ.

ಜಲವಿದ್ದರೆ ಜೀವ, ಜೀವವಿದ್ದರೆ ಜನಜೀವನ.

ಹಳ್ಳಿಯ ಜನರು ''ನಮ್ಮ ಕೆರೆ ನಮ್ಮ ಹಕ್ಕು'' ಎಂಬ ನಿಯಮವನ್ನು ಸಾಧಿಸಬೇಕು. ಆಗಲೇ ಕೆರೆಗಳು ಮುಂಬರುವ ಪೀಳಿಗೆಗಳಿಗೆ ಉಳಿಯಲು ಸಾಧ್ಯ.

ಬಿ. ಎಸ್. ಭವಾನಿ ಶಂಕರ್
ಅಧ್ಯಕ್ಷರು, ಸಹಯೋಗ, ಬೆಂಗಳೂರು

# ರೋಟೋರುವಾದ ರಹಸ್ಯಮಯ ಭೂಗರ್ಭ

ಎಚ್‌ಎಮ್‌ಟಿ
ಬಹುಮಾನಿತ ಲೇಖನ




**ಹೇಮಲತಾ ಮಹಿಷಿ**

**ಪ್ರ**ಕೃತಿ ರಹಸ್ಯಮಯಿ, ಅವಳು ಸೃಷ್ಟಿಸುವ ವಿಸ್ಮಯತೆಗೆ ಮೊದಲೂ ಇಲ್ಲ, ಕೊನೆಯೂ ಇಲ್ಲ. ಅವಳ ರಹಸ್ಯಮಯ ಸೃಷ್ಟಿಯನ್ನು ಅರ್ಥಮಾಡಿಕೊಳ್ಳಲು ಮಾನವ ಮಾಡದ ಪ್ರಯತ್ನವಿಲ್ಲ. ಅಲ್ಪ - ಸ್ವಲ್ಪ ತಿಳಿದುಬಂದರೂ ಪ್ರಕೃತಿಯ ಅಗಾಧ - ಸಂಕೀರ್ಣ ವ್ಯವಸ್ಥೆಯ ಮುಂದೆ ಮಾನವ ಆಶ್ಚರ್ಯಚಕಿತನಾಗಿ, ಮೂಕನಾಗಿ ನಿಲ್ಲುವುದೊಂದೇ ಅವನಿಗಿರುವ ದಾರಿ. ರೊಟೊರುವಾದ ಭೂ-ಗರ್ಭದಲ್ಲಿ ಅಡಗಿರುವ ರಹಸ್ಯಮಯ ಶಕ್ತಿಯನ್ನು ಕಂಡಾಗ ಇದು ಅನುಭವಕ್ಕೆ ಬಂದಿತು.

ಆಸ್ಟ್ರೇಲಿಯಾ-ನ್ಯೂಜಿಲ್ಯಾಂಡಿನ ಪ್ರವಾಸ ಭಾಗವಾಗಿ ಏಪ್ರಿಲ್ ೩೦ರಂದು ನ್ಯೂಜಿಲ್ಯಾಂಡಿನ ಕ್ವೀನ್ಸ್ ಟೌನ್‌ನಿಂದ ವಿಮಾನದಲ್ಲಿ ರೊಟೊರುವಾಕ್ಕೆ ಹೊರಬಿದ್ದೆವು - ನಾನು, ನನ್ನ ಮಗ ರಣಜಿತ್. ದಕ್ಷಿಣ ಮತ್ತು ಉತ್ತರ ದ್ವೀಪಗಳು ಸೇರಿಕೊಂಡು ನ್ಯೂಜಿಲ್ಯಾಂಡ್ ದೇಶವಾಗಿದೆ. ಕ್ವೀನ್ಸ್‌ಟೌನ್ ದಕ್ಷಿಣ ದ್ವೀಪದಲ್ಲಿದ್ದರೆ ರೊಟೊರುವಾ ಉತ್ತರ ದ್ವೀಪದಲ್ಲಿದೆ. ವಿಮಾನದಲ್ಲಿ ಕೇವಲ ಮೂರು ಘಂಟೆಯ ಪ್ರಯಾಣ. ಮೊದಲೇ ಗೊತ್ತುಪಡಿಸಿದಂತೆ, ರೊಟೊರುವಾದಲ್ಲಿ ಇಳಿಯುತ್ತಿದ್ದಂತೆ ಸೂಪರ್‌ಷಟಲ್ ಬಸ್ ನಮ್ಮನ್ನು ವಿಮಾನ ನಿಲ್ದಾಣದಿಂದ ಹೋಟೆಲ್‌ಗೆ ಕರೆದೊಯ್ಯಲು ಬಂದಿತ್ತು. ಇನ್ನೂ ಊರು ಸಾಕಷ್ಟು ದೂರವಿರುವಾಗಲೇ ಗಂಧಕದ ಉಸಿರು ಕಟ್ಟಿಸುವ ತೀಕ್ಷ್ಣ ವಾಸನೆ ಮೂಗಿಗೆ ಬಡಿಯತೊಡಗಿತ್ತು. ಸಿನಿಮಾದಲ್ಲಿ ಸ್ವರ್ಗಲೋಕ ಅಥವಾ ಭೂತಗಳು ಕಾಣಿಸಿಕೊಳ್ಳುವಾಗ ತೋರಿಸುವಂತೆ ನೆಲದಿಂದ ಅಲ್ಲಲ್ಲಿ ಬಿಳಿ ಹೊಗೆಯ ಎಳೆಗಳು ನೆಲದಿಂದ ಮೇಲೆ ಏಳುವುದು ಕಾಣಿಸುತ್ತಿತ್ತು. ಹಿಂದಿನ ದಿನ ಕ್ವೀನ್ಸ್‌ಟೌನ್‌ನಲ್ಲಿ ಸಿಕ್ಕಿದ್ದ ಇಬ್ಬರು ಬ್ರಿಟಿಷ್-ಸಿಖ್ ಯುವಕರು ಹೇಳಿದ್ದು ನೆನಪಾಯಿತು. ಅವರು ರೊಟೊರುವಾ ನೋಡಿಕೊಂಡು ಕ್ವೀನ್ಸ್‌ಟೌನ್‌ಗೆ ಬಂದಿದ್ದರು. ಕುತೂಹಲದಿಂದ ನಾನು ''ರೊಟೊರುವಾ ಹೇಗಿದೆ?'' ಎಂದು ಕೇಳಿದಾಗ, ''ಎಲ್ಲಾ ಸರಿ, ಚೆನ್ನಾಗಿದೆ, ಆದರೆ ಆ ವಾಸನೆ ಮಾತ್ರ ತಡೆದುಕೊಳ್ಳುವುದು ಕಷ್ಟ. ಅದಕ್ಕೇ ಒಂದೇ ದಿನ ಅಲ್ಲಿ ಇದ್ದು, ಇಲ್ಲಿಗೆ ಓಡಿಬಂದೆವು'' ಎಂದು ಹೇಳಿದ್ದರು. ನಮ್ಮ ಭಾರತದ ಟ್ರಾವೆಲ್ ಏಜೆಂಟ್ ಸಹ ''ಊರು ನೋಡಲು ಒಂದೆರಡು ದಿನ ಸಾಕು, ನಿಮಗೆ ಅಲ್ಲಿ ಜಾಸ್ತಿ ದಿನಗಳು ಇರಲು ಆಗುವುದಿಲ್ಲ'' ಎಂದು ಹೇಳಿ ಆ ಪ್ರಕಾರವೇ ಕಾರ್ಯಕ್ರಮ ರೂಪಿಸಿದ್ದರು. ರಸ್ತೆಯ ಮಗ್ಗುಲಲ್ಲಿ, ಮನೆಗಳ ತೋಟಗಳಲ್ಲಿ, ಕಾಲುದಾರಿಗಳ ಮೇಲೆ, ಬಯಲಲ್ಲಿ, ಗಿಡ ಮರಗಳ ನಡುವೆ ಏಳುತ್ತಿದ್ದ ಬಿಳಿ ಹೊಗೆಯ ಎಳೆಗಳು ಆ ಊರಿಗೆ ಒಂದು ವಿಧದ ಅಲೌಕಿಕ ಮೆರುಗನ್ನು ನೀಡಿತ್ತು. ನಾವಿಳಿದಿದ್ದ 'ರಾಯಲ್ ಲೇಕ್‌ಸೈಡ್ ಹೋಟೆಲ್' ರೊಟೊರುವಾ ಸರೋವರದ ಪಕ್ಕದಲ್ಲಿಯೇ ಇದೆ. ಬೃಹತ್ ಗಾಜಿನ ಕಿಟಕಿಯಿಂದ ಹೊರನೋಡಿದಾಗಲೆಲ್ಲಾ ಹಸಿರು ಬೆಟ್ಟ-ಗುಡ್ಡಗಳು, ಸರೋವರ, ಅದರಲ್ಲಿ ಇರುವ ದೋಣಿಗಳು ಕಣ್ಣಿಗೆ ಬೀಳುತ್ತಿದ್ದವು. ರಾತ್ರಿ ಹತ್ತಿರದಲ್ಲಿಯೇ ಇದ್ದ ಮಿಸ್ಟರ್ ಇಂಡಿಯಾ ರೆಸ್ಟೋರೆಂಟಿನಲ್ಲಿ ಉತ್ತರ ಭಾರತದ ನಾನ್, ಕರಿ ಇತ್ಯಾದಿ ಊಟ ಮಾಡಿದೆವು. ಇಲ್ಲಿ ಎಲ್ಲೆಡೆ ಭಾರತೀಯ ಊಟ, ಸಸ್ಯಾಹಾರಿ ಊಟ ಸಿಗಲು ಏನೂ ತೊಂದರೆ ಇಲ್ಲ. ಭಾರತೀಯ ರೆಸ್ಟೋರೆಂಟುಗಳು ಇವೆ. ಆದರೆ, ದಕ್ಷಿಣ ಭಾರತದ ಊಟ ಸಿಗುವುದು ಕಷ್ಟ.

ಮಾರನೆಯ ಬೆಳಿಗ್ಗೆ ೭.೪೫ಕ್ಕೆ ಸ್ಥಳ ಸಂದರ್ಶನಕ್ಕಾಗಿ ನಮ್ಮನ್ನು ಕರೆದೊಯ್ಯಲು ಸರಿಯಾದ ಸಮಯಕ್ಕೆ ಕೋಚ್ ಬಂದಿತು. ಇಲ್ಲಿ ಮೊದಲೇ ಸ್ಥಳ ಕಾದಿರಿಸಿದ್ದರೆ ಪ್ರವಾಸಿಗರು ಇರುವ ಹೋಟೆಲ್‌ಗೇ ಹೋಗಿ ಕೋಚ್‌ಗಳು ಅವರನ್ನು ಕರೆ ತರುತ್ತವೆ. ಆದರೆ, ಹೋಟೆಲ್ ಲೌಂಜಿನಲ್ಲಿ ನಾವು ಕಾದಿರಬೇಕು. ಇಲ್ಲವಾದರೆ ನಮಗಾಗಿ ಅವು ಕಾಯುವುದಿಲ್ಲ.

ರೊಟೊರುವ ಭೂ ಶಾಖದ ಪ್ರದೇಶವಾದ್ದರಿಂದ ಊರಿನಲ್ಲಿ, ಅದರ ಸುತ್ತ-ಮುತ್ತಲ ಪ್ರದೇಶಗಳಲ್ಲಿ ಭೂಶಾಖ ನಾನಾ ರೀತಿಗಳಲ್ಲಿ ಹೊರಹೊಮ್ಮುವ ಸ್ಥಳಗಳಿವೆ. ಶಾಂತ ಸರೋವರಗಳಲ್ಲಿ, ಹರಿಯುವ ತೊರೆಗಳಲ್ಲಿ ನೀರಿನ ಆವಿ ಮೇಲೇಳುತ್ತದೆ, ನೆಲದಿಂದ ಉಗಿ ಹೊರಚಿಮ್ಮುತ್ತದೆ, ಬಿಸಿನೀರಿನ ಬುಗ್ಗೆ ಉಕ್ಕುತ್ತದೆ, ಮಣ್ಣು ಕುದಿಯುತ್ತದೆ. ಒಂದು ಕಾಲಕ್ಕೆ ಬೆಂಕಿಯನ್ನು ಉಗುಳಿದ್ದ ಎತ್ತರದ ಜ್ವಾಲಾಮುಖಿಗಳು ಈಗ ನಿದ್ರಿಸುತ್ತಿರುವ ರಾಕ್ಷಸನಂತೆ ಕಾಣಿಸುತ್ತವೆ. ಕೆಲವು ಅಗ್ನಿ ಪರ್ವತಗಳು ಈಗಲೂ ಹೊಗೆ-ಶಾಖ ಉಗುಳುತ್ತಿವೆ. ಪೂರ್ತಿಯಾಗಿ ಶಾಂತವಾಗಿರುವ ಜ್ವಾಲಾಮುಖಿಗಳ ಬೋಗುಣಿಯಾಕಾರದ ಬಾಯಿಗಳು ಸ್ಫಟಿಕಶುದ್ಧ, ಪಾರದರ್ಶಕ ಸರೋವರಗಳಾಗಿ ರೂಪಾಂತರಗೊಂಡಿವೆ. ಈಗಲೂ ಎಲ್ಲಿ ಬೇಕಾದರೂ, ಊರಿನ ಒಳಗೂ, ಇದ್ದಕ್ಕಿದ್ದಂತೆ ಭೂಮಿಯಿಂದ ಹಬೆ, ಬಿಸಿನೀರಿನ ಬುಗ್ಗೆ ಚಿಮ್ಮಬಹುದು. ಒಂದೆರಡು ತಿಂಗಳ ಹಿಂದೆ ಯಾರದೋ ಮನೆಯ ಅಂಗಳದಲ್ಲಿ ಇದ್ದಕ್ಕಿದ್ದಂತೆ ಉಗಿ ಹೊರಹೊಮ್ಮಿತಂತೆ. ಆದರೆ ಯಾರಿಗೂ ಪ್ರಾಣಾಪಾಯವಾಗಲಿಲ್ಲವೆಂದು ಬಸ್ಸಿನ ಡ್ರೈವರ್ ತಿಳಿಸಿದ.

ನ್ಯೂಜಿಲ್ಯಾಂಡಿನ ಹೃದಯ ಭಾಗದಲ್ಲಿರುವ ಇಂತಹ ಪ್ರದೇಶದಲ್ಲಿ ಹಿಂದೆ ವಾಸಿಸುತ್ತಿದ್ದ ಮೂಲ ನಿವಾಸಿಗಳು ಮಾವೋರಿ ಬುಡಕಟ್ಟಿನವರು. ಇವರಲ್ಲಿಯೂ ಅನೇಕ ಒಳಪಂಗಡಗಳಿವೆ. ಇಂದಿಗೂ ರೊಟೊರುವಾದ ಜನಸಂಖ್ಯೆಯ ಮೂರನೆ ಒಂದು ಭಾಗದಷ್ಟು ಜನರು ಈ ಮಾವೋರಿ ಜನಾಂಗಕ್ಕೆ ಸೇರಿದವರು. ಹಾಗಾಗಿ ಇಲ್ಲಿಯ ಊರುಗಳಿಗೆ, ರಸ್ತೆಗಳಿಗೆ ಅವರ ಹೆಸರುಗಳನ್ನೇ ಉಳಿಸಿಕೊಂಡಿದ್ದಾರೆ. ಅವರ ಇತಿಹಾಸ ದರ್ಶನ ಮಾಡಿಸುವ ಮ್ಯೂಸಿಯಂ ಕೂಡ ಇಲ್ಲಿದೆ. ಪ್ರತಿದಿನ ಮಧ್ಯಾಹ್ನ ಸಂಜೆ ಅವರ ಹಾಡು-ನೃತ್ಯಗಳ ಕಾರ್ಯಕ್ರಮವಿರುತ್ತದೆ. ಅವರು ಬಹಳ ಸ್ನೇಹಮಯಿ ಜನ. ಅತಿಥಿಗಳಿಗೆ, ಅತಿಥಿ ಸತ್ಕಾರಕ್ಕೆ ಅವರ ಸಂಸ್ಕೃತಿಯಲ್ಲಿ ಮುಖ್ಯ ಸ್ಥಾನವಿದೆ. ಸುಮಾರು ೬೦೦ ವರ್ಷಗಳಿಂದ ಇಲ್ಲಿ ವಾಸಿಸುತ್ತಿದ್ದ ಟೆ ಅರಾವಾ ಮಾವೋರಿ ಜನಾಂಗದವರು ಇಲ್ಲಿದ್ದ ಜಗತ್ತಿನ ಎಂಟನೆಯ ಆಶ್ಚರ್ಯಕರ ವಸ್ತುವಾಗಿದ್ದ ಗುಲಾಬಿ ಬಿಳಿ ಬಣ್ಣದ ಸೋಪಾನಗಳನ್ನು ಪ್ರವಾಸಿಗಳಿಗೆ ಮೊದಲ ಬಾರಿ ತೋರಿಸಿದ್ದರು. ೧೮೮೬ರಲ್ಲಿ ತರವೇರಾ ಅಗ್ನಿಪರ್ವತ ಬೆಂಕಿ ಕಾರಿದಾಗ ಈ ಅದ್ಭುತ ಸೋಪಾನಗಳು ನಾಶಗೊಂಡವು. ಅನೇಕ ಮಾವೋರಿ ಹಳ್ಳಿಗಳು ನೆಲಸಮವಾದವು. ಇದಕ್ಕೆ ಸಂಬಂಧಿಸಿದಂತೆ ಅನೇಕ ಪ್ರೇಮದ, ದುರಂತದ, ಪುರಾಣದ ಕಥೆಗಳು ಅವರ ಹಾಡು, ನೃತ್ಯ, ಕಲೆಯಲ್ಲಿ ಅರಳಿವೆ. ಅಮಾನವ ಲೋಕದ ಇಬ್ಬರು ಸೋದರಿಯರು, ತಮ್ಮ ಚಳಿಯಿಂದ ಮರಗಟ್ಟಿದ್ದ ಮರಣೋನ್ಮುಖ ಸೋದರನಿಗಾಗಿ ತೆಗೆದುಕೊಂಡು ಹೋಗಿದ್ದ ಬೆಂಕಿ ರೊಟೊರುವಾದ ಭೂಮಿಯ ಶಾಖವಾಗಿ ಬದಲಾಯಿತೆಂದು, ಹೊರಹೊಮ್ಮಿತೆಂದು ಒಂದು ಮಾವೋರಿ ಕತೆ ಕಲ್ಪಿಸುತ್ತದೆ. ತರವೇರಾ ಜ್ವಾಲಾಮುಖಿ ಶಾಂತವಾದಾಗ, ಬೆಂಕಿಯುಗುಳಿದ್ದ ಅದರ ಬಾಯಿ ಸರೋವರ



ಕುದಿಯುವ ಕೆಸರಿನ ಕೊಳ

ವಾಯಿತು. ಇದೇ ತರವೇರಾ ಸರೋವರದ ಹತ್ತಿರ ರೊಟೊರುವಾಕ್ಕೆ ಹದಿನೈದು ನಿಮಿಷಗಳ ದೂರದಲ್ಲಿರುವ ತೆ ವೈರೊವಾ ಹಳ್ಳಿ. ಜೂನ್ ೧೦, ೧೮೮೬ರಂದು ಸಂಭವಿಸಿದ ಅಗ್ನಿವರ್ಷದಿಂದಾಗಿ ಅದು ಎರಡು ಮೀಟರ್ ಕಲ್ಲು-ಮಣ್ಣು ಮತ್ತು ಬೂದಿಯಲ್ಲಿ ಹುದುಗಿಹೋಯಿತು. ಅದರಲ್ಲಿ ೧೫೭ ಮಾವೋರಿ ಜನರು, ಆರು ಯೂರೋಪಿಯನ್ನರು ಸತ್ತರು. ಇಂದು ಅದು ಪ್ರವಾಸಿ ಕೇಂದ್ರ, ನ್ಯೂಜಿಲ್ಯಾಂಡ್ ಇತಿಹಾಸದ ಜೀವಂತ ಮ್ಯೂಸಿಯಂ.

ಇದೇ ತರವೇರಾ ಜ್ವಾಲಾಮುಖಿಯ ಸಿಡಿತದಿಂದ ಉಂಟಾಗಿದ್ದು ವೈಮಾಂಗುವಿನ ಫ್ರೈಯಿಂಗ್ ಪ್ಯಾನ್ ಲೇಕ್, ವಿಶ್ವದಲ್ಲಿಯೇ ಅತಿ ದೊಡ್ಡ ಬಿಸಿ ನೀರಿನ ಬುಗ್ಗೆ ಮತ್ತು 'ಇನ್‌ಫರ್ನೊ ಕ್ರೇಟರ್' (ನರಕದ ಬಾಯಿ). ಇದರಲ್ಲಿ ನಿರಂತರವಾಗಿ ನೀರು ತುಂಬಿ, ಹೊರ ಹರಿದು, ಖಾಲಿಯಾಗುತ್ತಿರುತ್ತದೆ, ಪುನಃ ತುಂಬಿ, ಹರಿದು ಖಾಲಿಯಾಗುತ್ತಾ ಇರುತ್ತದೆ. ಇಲ್ಲಿರುವ ಬಂಡೆಗಳ ಸಂದಿಗಳಿಂದ ಉಗಿ ಅಲೆ-ಅಲೆಯಾಗಿ ಮೇಲೇಳುತ್ತಿರುತ್ತದೆ.

ಇದೇ ರೀತಿಯ ಇನ್ನೊಂದು ಭೂಶಾಖದ ಸ್ಥಳ ವೇಯ್-ಒ-ಟಾಪು. ಕುದಿಯುವ ಮಣ್ಣಿನ ಮಡು, ದೊಡ್ಡ ಅಗ್ನಿಪರ್ವತದ ಬಾಯಿ, ರಾಕ್ಷಸಾಕಾರದ ಸಿಲಿಕಾ ಟೇರೇಸ್‌ಗಳಲ್ಲದೆ ಪ್ರತಿದಿನವೂ ಬೆಳಿಗ್ಗೆ ಹತ್ತು ಕಾಲು ಗಂಟೆಗೆ ಸರಿಯಾಗಿ ಇಪ್ಪತ್ತು ಮೀಟರ್ ಎತ್ತರ ಚಿಮ್ಮುವ ಲೇಡಿ ನಾಕ್ಸ್ ಬಿಸಿ ನೀರಿನ ಬುಗ್ಗೆ ಇಲ್ಲಿದೆ. ೭೦ ಮೀಟರ್ ಅಗಲದ, ಜ್ವಾಲಾಮುಖಿ ಬಾಯಿಯಿಂದಾದ ಸರೋವರದಲ್ಲಿ ನೀರು ಕುದಿಯುತ್ತಿದ್ದು ಆವಿ ಮೇಲೇಳುತ್ತಿರುತ್ತದೆ. 'ಷಾಂಪೇನ್ ಪೂಲ್' ಎಂದು ಹೆಸರಾದ ಈ ಸರೋವರ ಜಗತ್ತಿನಲ್ಲಿಯೇ ಏಕೈಕ ಎನ್ನಬಹುದು. ಜೊತೆಗೆ ಖನಿಜಗಳ ವರ್ಣಮಯ ಚಿತ್ತಾರ ಬೇರೆ !

ಇಲ್ಲಿಯ ಹೆಲಿಕಾಪ್ಟರ್‌ಗಳು, ಸಣ್ಣ ವಿಮಾನಗಳು ಇಂತಹ ಜ್ವಾಲಾಮುಖಿಗಳ ಮೇಲೆ ಕರೆದೊಯ್ಯುತ್ತವೆ. ಸಮೀಪದ ವೈಟ್ ಐಲೆಂಡ್‌ನ ಜ್ವಾಲಾಮುಖಿ ಇನ್ನೂ ಹೊಗೆ ಸೂಸಿ ಜೀವಂತಿಕೆಯನ್ನು ತೋರಿಸುತ್ತಿರುವ ಒಂದು ಸ್ಥಳ. ಹೆಲಿಕಾಪ್ಟರ್‌ನಲ್ಲಿ ಅದರ ಹತ್ತಿರ ಹೋಗಿ, ಜ್ವಾಲಾಮುಖಿಯ ಬಾಯಿಯಲ್ಲೂ ಓಡಾಡಿ ಬರಬಹುದು, ಧೈರ್ಯವಿದ್ದವರು ! ನಾವಂತೂ ಹೋಗಲಿಲ್ಲ.

ವಾಕರೇವರೇವಾ ಭೂ ಶಾಖದ ಮತ್ತೊಂದು ಕಾಯ್ದಿಟ್ಟ ಸ್ಥಳ. ಇಲ್ಲಿ ಮಾವೋರಿ ಕಲೆ ಮತ್ತು ಕೈಕಸಬುಗಳ ಸಂಸ್ಥೆ ಇದೆ. ಬಸ್ಸಿನಿಂದ ಇಳಿದ ಕೂಡಲೇ ಪ್ರತಿಯೊಬ್ಬ ಅತಿಥಿಯನ್ನೂ ಮಾವೋರಿ ಮಾರ್ಗದರ್ಶಿಯೊಬ್ಬನು ಅವರ ಬುಡಕಟ್ಟಿನ ಸಂಪ್ರದಾಯದಂತೆ ಸ್ವಾಗತಿಸುತ್ತಾನೆ, ತನ್ನ ಮೂಗನ್ನು ನಮ್ಮ ಮೂಗಿಗೆ ಉಜ್ಜಿ ಆತ್ಮೀಯತೆ ತೋರಿಸುವುದರ ಮೂಲಕ. ಇಲ್ಲಿ ಹಿಂದಿನ ಮಾವೋರಿ ಹಳ್ಳಿಯ ಮನೆಗಳು, ಆಹಾರ ಸಂಗ್ರಹಣಾ ಸ್ಥಳ, ಅವರ ಆಯುಧ - ಸಾಮಗ್ರಿಗಳು, ರಕ್ಷಣೆಗಾಗಿ ಸುತ್ತಲ ಬೇಲಿ - ಕಂದಕ ಇತ್ಯಾದಿಗಳ ಪ್ರತಿಕೃತಿ ಮಾಡಿಡಲಾಗಿದೆ. ಮಾವೋರಿ ಜನರು ಆಹಾರ ಬೇಯಿಸುತ್ತಿದ್ದ 'ಹಾಂಗಿ' ಪದ್ಧತಿಯನ್ನು ಪ್ರದರ್ಶಿಸಲಾಗುತ್ತದೆ. 'ಹಾಂಗಿ' ಎಂದರೆ ಮಣ್ಣಿನ ಒಲೆ. ನದಿಗಳ ಕಲ್ಲನ್ನು ಒಂದು ಕುಣಿಯಲ್ಲಿ ಬೆಂಕಿಯಿಂದ ಕಾಯಿಸಿ, ಅದು ಚೆನ್ನಾಗಿ ಕಾದ ಮೇಲೆ ಕಿಡಿಗಳನ್ನು ತೆಗೆದುಹಾಕಿ ಆಹಾರದ ಮರದ ಪೆಟ್ಟಿಗೆಗಳನ್ನು ಆ ಕಲ್ಲುಗಳ ಮೇಲೆ ಇಡಲಾಗುತ್ತದೆ. ಅವುಗಳ ಮೇಲೆ ಶುದ್ಧವಾದ ಹಸಿ ನಾರು ಬಟ್ಟೆಯನ್ನು ಮುಚ್ಚಿ ಶಾಖವಿರುವ ಭೂಮಿಯಲ್ಲಿ ಹುಗಿದಿಡಲಾಗುತ್ತದೆ. ೨-೩ ಗಂಟೆಗಳಲ್ಲಿ ಭೂಮಿಯಲ್ಲಿರುವ ಆಹಾರ ಉಗಿಯಲ್ಲಿ ಬೆಂದಿರುತ್ತದೆ. ಇಲ್ಲಿಯ ಮಾವೋರಿ ಜನರು ಇಂದಿಗೂ ಇದೇ ಪದ್ಧತಿಯಲ್ಲಿ ಅಡುಗೆ ಮಾಡುತ್ತಾರೆ. ಅಡುಗೆಗಾಗಿ ಕುದಿಯುವ ಖನಿಜಾಂಶವಿರುವ ನೀರನ್ನು ಮಡುವಿನಿಂದ ತೆಗೆದುಕೊಂಡು ಉಪಯೋಗಿಸುತ್ತಾರೆ. ಈ ಮಾವೋರಿ ಹಳ್ಳಿಯಲ್ಲಿ ಇಂತಹ ನೀರಿರುವ ಕುದಿಯುವ ಮಡುವೂ ಇದೆ. ಅದರ ನೀರನ್ನು ಅಡುಗೆಗೆ ಉಪಯೋಗಿಸುತ್ತಾರೆ. ಅಲ್ಲಿಯೇ ಕಾಳುಗಳನ್ನು ನೀರಿನಲ್ಲಿ ಹಾಕಿ ತೋರಿಸುತ್ತಾರೆ.

ಮತ್ತೊಂದು ಕಡೆ, ನ್ಯೂಜಿಲ್ಯಾಂಡಿನ ರಾಷ್ಟ್ರೀಯ ಹಕ್ಕಿಯಾದ 'ಕಿವಿ' ಮನೆ ಇದೆ. ಕಿವಿ ಹಕ್ಕಿ ನಶಿಸಿಹೋಗುತ್ತಿರುವ ಜಾತಿಯ ಹಕ್ಕಿ. ಇದು ಹಕ್ಕಿಯಾದರೂ ಹಾರುವುದಿಲ್ಲ, ಬಾಲವಿರುವುದಿಲ್ಲ. ರಾತ್ರಿ ಮಾತ್ರ ಚಟುವಟಿಕೆಯಿಂದ ಇರುವ ಹಕ್ಕಿ. ಕಣ್ಣಿನ ದೃಷ್ಟಿ ಮಂದವಾಗಿರುವುದರಿಂದ ಅದರ ಉದ್ದನೆಯ ಕೊಕ್ಕಿನ ತುದಿಯಲ್ಲಿ ಅದರ ಮೂಗಿನ ಹೊಳ್ಳೆಗಳು ಇದ್ದು, ಆಹಾರದ ವಾಸನೆಯನ್ನು ಗುರುತಿಸುತ್ತದೆ. ಅದರ ಪುಟ್ಟ ಆಕಾರಕ್ಕೆ ಪ್ರಮಾಣಬದ್ಧವಾಗಿಲ್ಲದ ದೊಡ್ಡ ಮೊಟ್ಟೆಗಳನ್ನು ಇಡುವುದರಿಂದ, ಮೊಟ್ಟೆ ಇಡುವ ಕ್ರಿಯೆ ಹೆಣ್ಣು ಕಿವಿಗೆ ಒಂದು ಅಗ್ನಿಪರೀಕ್ಷೆ ಇದ್ದಂತೆ. ಹಾಗಾಗಿ ಅದು ಮೊಟ್ಟೆ ಇಟ್ಟ ನಂತರ ಮುಂದಿನ ೬೫ ದಿನಗಳ ಕಾಲ ಅದಕ್ಕೆ ಶಾಖ ಕೊಡುವ ಜವಾಬ್ದಾರಿಯನ್ನು ಗಂಡು ಕಿವಿಗೆ ಬಿಟ್ಟುಬಿಡುತ್ತದೆ. ಮಾವೋರಿ ಜನರಿಗೆ ಕಿವಿಯ ಬಗ್ಗೆ ಬಹಳ ಗೌರವ-ಭಕ್ತಿ ! ಅವರ ಬುಡಕಟ್ಟಿನ ನಾಯಕರಿಗೆ ಕಿವಿ ಗರಿಗಳ ಉಡುಪು ಅಧಿಕಾರದ, ಸ್ಥಾನದ ಸಂಕೇತ. ಈ ಹಕ್ಕಿ ಬಹಳ ಸೂಕ್ಷ್ಮವಾಗಿರುವುದರಿಂದ, ನಾಚಿಕೆಯ ಸ್ವಭಾವ ಹೊಂದಿರುವುದರಿಂದ, ಬೆಳಕು-ಶಬ್ದ ಹತ್ತಿರವಾದರೆ ಅಡಗಿ ಕುಳಿತುಬಿಡುತ್ತದೆ. ಹಾಗಾಗಿ ಕಿವಿ ಮನೆಯ ಹತ್ತಿರ ಹೋದಾಗ ನಮ್ಮ ಮಾರ್ಗದರ್ಶಿ ಎಚ್ಚರಿಸಿದಂತೆ ನಾವೆಲ್ಲ ನಿಶ್ಶಬ್ದವಾಗಿ ನಡೆದೆವು. ಕ್ಯಾಮೆರಾ ಹೊರತೆಗೆಯುವಂತಿರಲಿಲ್ಲ. ಅಂತೂ ಇಂತೂ ಅದೃಷ್ಟವಶಾತ್, ಮೂಲೆಯಲ್ಲಿ ಅಡಗಲು ಯತ್ನಿಸುತ್ತಿದ್ದ ಕಿವಿ ದರ್ಶನವಾಗಿ ಪುನೀತರಾದೆವು. ಕಿವಿ ಹಕ್ಕಿಯ ಸಂತತಿಯನ್ನು ಉಳಿಸುವ ಪ್ರಯತ್ನ ಇಲ್ಲಿ ನಡೆದಿದೆ.

ನಮ್ಮನ್ನು ಬಹಳಷ್ಟು ಆಶ್ಚರ್ಯಚಕಿತರನ್ನಾಗಿ ಮಾಡಿದ್ದು ''ಹಾರುವ ಕಪ್ಪೆಯ ಕೆಸರಿನ ಮಡು.'' ಇಲ್ಲಿ ಕೆಸರು-ಕೆಸರಾದ ಮಣ್ಣು ಕುದಿಯುತ್ತಾ, ವೃತ್ತಗಳನ್ನು ರಚಿಸುತ್ತಾ ಆಗಿಂದಾಗ್ಗೆ ಪ್ಲಾಪ್-ಪ್ಲಾಪ್ ಎಂದು ಕೆಸರಿನ ಕಣಗಳನ್ನು ಮೇಲೆ ಹಾರಿಸುತ್ತಿರುತ್ತದೆ, ಹಾರುವ ಕಪ್ಪೆಯನ್ನು ನೆನಪಿಸುವಂತೆ. ಈ ದೊಡ್ಡ ಕುದಿಯುವ ಮಡುವಿನ ಚಟುವಟಿಕೆ ಅಲ್ಲಿ ಬೀಳುವ ಮಳೆಯ ಪ್ರಮಾಣವನ್ನು ಆಧರಿಸಿರುತ್ತದೆ. ಆದರೆ ಕುದಿಯುವ ಕೆಸರಿನ ಉಷ್ಣತೆ ಸುಮಾರು ೯೦°-೯೫° ಸೆಂಟಿಗ್ರೇಡ್ ಇರುತ್ತದೆ. ಬೆಂಗಳೂರಿನಲ್ಲಿ ಪ್ರವಾಸ ಹೊರಡುವ ಮೊದಲು ಇದರ ಬಗ್ಗೆ ಓದಿ, ಚಿತ್ರ ನೋಡಿ ರೊಟೊರುವಾ ನೋಡಲೇಬೇಕಾದ ಜಾಗವೆಂದು ನಿರ್ಧಾರ ಮಾಡಿದ್ದೆ. ಖಂಡಿತ ನನಗೆ ನಿರಾಶೆಯಾಗಲಿಲ್ಲ. ಬಹುಶಃ ಇನ್ನೆಲ್ಲೂ ಇಂತಹ ಕುದಿಯುವ ಕೆಸರು ಕಾಣಸಿಗದು. ಹತ್ತಿರ ಹೋಗಿ ಅಪಾಯ ಮಾಡಿಕೊಳ್ಳದಂತೆ ಸುತ್ತಲೂ ಬೇಲಿ ಹಾಕಿದ್ದಾರೆ.

ವಾಕರೇವರೇವಾ ಕಣಿವೆಯ ಇನ್ನೊಂದು ಆಕರ್ಷಣೆ ಅದರ ಬಿಸಿ ನೀರಿನ ಬುಗ್ಗೆಗಳು. ಇಲ್ಲಿರುವ ಹಲವಾರು ಬುಗ್ಗೆಗಳಲ್ಲಿ ಅತಿ ದೊಡ್ಡದು ಜಗತ್ಪ್ರಸಿದ್ಧ ಪೊಹುಟು ಬುಗ್ಗೆ. ಗಾಳಿಯ ವೇಗ ಹಾಗೂ ದಿಕ್ಕನ್ನು ಆಧರಿಸಿ ಇದು ೧೬ರಿಂದ ೨೦ ಅಡಿಯವರೆಗೆ ಮೇಲೆ ಚಿಮ್ಮುತ್ತದೆ. ಕೆಲವೊಮ್ಮೆ ಇದರ ಎತ್ತರ ೩೦ ಮೀಟರನ್ನು ಮುಟ್ಟುವುದೂ ಉಂಟು. ದಿನಕ್ಕೆ ೧೦ರಿಂದ ೨೫ ಸಾರಿ ಬುಗ್ಗೆ ಚಿಮ್ಮುವುದರಿಂದ ಪ್ರವಾಸಿಗರಿಗೆ ಸದಾಕಾಲ ಕಾಣಸಿಗುತ್ತದೆ. ಇದರ ಹತ್ತಿರವೇ ಪ್ರಿನ್ಸ್ ಆಫ್ ವೇಲ್ಸ್ ಬುಗ್ಗೆ, ಮತ್ತಿತರ ಬುಗ್ಗೆಗಳೂ ಇವೆ. ಒಂದಕ್ಕೊಂದು ಇಷ್ಟು ಸಮೀಪದಲ್ಲಿ ಹಲವಾರು ಬುಗ್ಗೆಗಳು ಇರುವುದು ಬೇರೆಲ್ಲಿಯೂ ಇಲ್ಲ. ನಮಗೆ ಮೂರು ಬಿಸಿ ನೀರಿನ ಬುಗ್ಗೆಗಳನ್ನು (ಗೀಸರ್) ನೋಡಲು ಸಾಧ್ಯವಾಯಿತು. ನೆಲದಲ್ಲಿನ ನೀರು ಶಾಖದ ಒತ್ತಡದಿಂದ ಕುದಿಯುತ್ತ ಬುಗ್ಗೆಯಾಗಿ ಚಿಮ್ಮಿ ಖಾಲಿಯಾದ ಮೇಲೆ ಪುನಃ ನೀರು ಸಂಗ್ರಹವಾಗುತ್ತದೆ, ಶಾಖ ಶಕ್ತಿಯಾಗಿ ಪರಿವರ್ತನೆಯಾಗಿ ಒತ್ತಡ ಸೃಷ್ಟಿಯಾದಾಗ ಬಿಸಿನೀರು ನೆಲದಿಂದ ಕುದಿದು ಹೊರಬಂದು ಬುಗ್ಗೆಯಾಗಿ ಚಿಮ್ಮುತ್ತದೆ. ಈ ಎಲ್ಲಾ ಬಿಸಿನೀರಿನ ಬುಗ್ಗೆಗಳನ್ನು ಅತಿ ಹತ್ತಿರದಿಂದ ನೋಡಬಹುದಾದದ್ದು ಇಲ್ಲಿಯ ವಿಶೇಷ. ಒಂದು ಕಡೆ ಬಿಸಿನೀರಿನ ತೊರೆ ಹರಿದು ಹೋಗುತ್ತಿದ್ದರೆ, ಇನ್ನೊಂದು ಪಕ್ಕ ತಣ್ಣನೆಯ ನೀರಿನ ತೊರೆ ಹರಿಯುತ್ತಿರುತ್ತದೆ.

ಬುಗ್ಗೆಗಳನ್ನು ಕಣ್ಣು ತುಂಬ ನೋಡುತ್ತಾ ವಿಶ್ರಾಂತಿ ಸ್ಥಳದಲ್ಲಿನ ಕಲ್ಲಿನ ಕಟ್ಟೆಯ ಮೇಲೆ ಕೂತರೆ ಕೆಳಗೆ ಬಿಸಿ ಹತ್ತುತ್ತದೆ. ಇಲ್ಲಿ ಭೂಮಿಯ ಮೇಲ್ಪದರ ಬಹಳ ತೆಳುವಾಗಿರುವುದರಿಂದ ಭೂಮಿಯಲ್ಲಿನ ಶಾಖ ಮೈಗೆ ನೇರವಾಗಿ ಹತ್ತುತ್ತದೆ. ಹತ್ತಿರದ ಒಂದು ಗುಂಡಿಯಲ್ಲಿ ನೆಲದಾಳದಲ್ಲಿ ಕೆಂಪಗೆ ಪ್ರಜ್ವಲಿಸುವ ಲಾವಾ ಕಾಣಸುತ್ತದೆ.

ಇಲ್ಲಿ ಮಾವೋರಿ ಜನರ ಪವಿತ್ರ



ಚಿಮ್ಮುತ್ತಿರುವ ಬಿಸಿನೀರ ಬುಗ್ಗೆಗಳು

ಸಭಾಭವನದ ರಚನೆಯನ್ನು, ಅದರ ಕಲಾತ್ಮಕತೆಯನ್ನು ಕಾಣಬಹುದು. ಮಾವೋರಿ ಜನರು ಮರದ ಕೆತ್ತನೆ, ನಾರಿನ ನೇಯ್ಗೆಯಲ್ಲಿ ನಿಪುಣರು. ಆ ಕಸುಬುಗಳನ್ನು ಉಳಿಸುವುದಕ್ಕಾಗಿ, ಪ್ರದರ್ಶಿಸುವುದಕ್ಕಾಗಿ ಈ ಮಾವೋರಿ ಕಲೆ ಮತ್ತು ಕೈಕಸಬುಗಳ ಸಂಸ್ಥೆಯನ್ನು ನ್ಯೂಜಿಲೆಂಡ್ ಸರ್ಕಾರ ಸ್ಥಾಪಿಸಿದೆ.

ರೊಟೊರುವಾ ಜ್ವಾಲಾಮುಖಿಯ ಪ್ರದೇಶವಾಗಿರುವುದರಿಂದ ಸ್ವಚ್ಛ ತಿಳಿ ನೀರಿನ ಸರೋವರಗಳ ನಾಡಾಗಿ ಪ್ರಸಿದ್ಧವಾಗಿದೆ. ಮುಖ್ಯವಾಗಿ ಹನ್ನೊಂದು ಸರೋವರಗಳಿದ್ದರೂ ಕೆಲವು ಕಾಡಿನ ಮಧ್ಯೆ ಇದ್ದು, ಹೆಲಿಕಾಪ್ಟರ್‌ನಲ್ಲಿ ಮಾತ್ರ ಕಾಣಲು ಸಾಧ್ಯ. ಉಳಿದವು ನೋಡಲು ಸುಲಭ ಸಾಧ್ಯ. ಆದರೆ, ಒಂದು ಸರೋವರ, ರೊಟೊಕಾಕಾಹಿ (ಹಸಿರು ಸರೋವರ) ಮಾತ್ರ ಮಾವೋರಿ ಜನರಿಗೆ ಪವಿತ್ರವೆನಿಸಿದ್ದು, ಆ ಬುಡಕಟ್ಟಿನ ಜನರಿಗೆ ಮಾತ್ರ ಅದರ ನೀರಿನ ಮೇಲೆ ಪಯಣಿಸಲು ಅವಕಾಶವಿದೆ. ಅದು 'ಟಾಪು' (ಪವಿತ್ರ) ವಾದ್ದರಿಂದ ಉಳಿದವರಿಗೆ ಅದರ ಮೇಲೆ ದೋಣಿಗಳಲ್ಲಿ ಹೋಗಲು ಸಾಧ್ಯವಿಲ್ಲ. ರೊಟೊರುವಾ ಊರೇ ಅತಿ ದೊಡ್ಡ ರೊಟೊರುವಾ ಸರೋವರದ ದಡದಲ್ಲಿ ಕಟ್ಟಲ್ಪಟ್ಟಿದೆ. ಪ್ರತಿ ವರ್ಷದ ಏಪ್ರಿಲ್ ತಿಂಗಳಿನಲ್ಲಿ ೪೨ ಕಿ.ಮೀ. ರೊಟೊರುವಾ ಮ್ಯಾರಥಾನ್, ಎಂದರೆ ಸರೋವರದ ಸುತ್ತಲೂ ಓಡುವ ಸ್ಪರ್ಧೆಯನ್ನು ನಡೆಸಲಾಗುತ್ತದೆ. ಈ ಸರೋವರಗಳಲ್ಲಿ ಟ್ರೌಟ್ ಮೀನುಗಳು ತುಂಬಾ ಇರುವುದರಿಂದ ಮೀನು ಹಿಡಿಯುವುದು ಸಹ ಪ್ರವಾಸಿಗರ ಮನೋರಂಜನೆಯ ಒಂದು ಆಟ. ಇದರ ಬಗ್ಗೆಯೂ ಪ್ರತಿ ವರ್ಷ ಸ್ಪರ್ಧೆ ನಡೆಸಲಾಗುತ್ತದೆ. ಗುರುತಿಗಾಗಿ ಟ್ಯಾಗ್ ಹಾಕಿರುವ ಟ್ರೌಟ್ ಮೀನು ಹಿಡಿದವರು ಸಾವಿರಾರು ಡಾಲರುಗಳ ಬಹುಮಾನ ಪಡೆಯುತ್ತಾರೆ. ಇದಲ್ಲದೆ ಕಾಡು ಬೆಟ್ಟಗಳಲ್ಲಿ ಬೈಕಿಂಗ್ ಮಾಡುವುದೂ ಒಂದು ಮುಖ್ಯ ಆಕರ್ಷಣೆ. ವಾಕರೇವರೇವಾ ಕಾಡಿನಲ್ಲಿ ಹುಣ್ಣಿಮೆಯ ಬೆಳದಿಂಗಳ ಬೆಳಕಿನಲ್ಲಿ ಇಡೀ ರಾತ್ರಿ ಬೆಟ್ಟದಲ್ಲಿ ಬೈಕಿಂಗ್ ಮಾಡುವ ಸ್ಪರ್ಧೆಯೂ ನಡೆಯುತ್ತದೆ. ಬ್ಯಾಕ್‌ಪ್ಯಾಕ್ ಪ್ರವಾಸಿಗರು ಇಂತಹ ಎಲ್ಲಾ ಸಾಹಸಗಳಿಗೆ ಅನುಭವಗಳಿಗೆ ಸಿದ್ಧರಾಗಿ ಬಂದಿರುತ್ತಾರೆ. ನಮ್ಮಂತಹ ಪ್ರವಾಸಿಗರು ಇದೆಲ್ಲ ಥ್ರಿಲ್‌ಗಳಿಂದ ವಂಚಿತರಾಗುತ್ತೇವೆ.

ರೊಟೊರುವಾ ತನ್ನ ಬಿಸಿನೀರಿನ ಸ್ನಾನದ ಕೊಳ (ಸ್ಪಾ)ಗಳಿಗೂ ಜಗತ್ಪ್ರಸಿದ್ಧ. ಖನಿಜಾಂಶವಿರುವ ಬಿಸಿ ನೀರಿನ ಬುಗ್ಗೆಗಳಿಂದ ಈ ಕೊಳಗಳಾಗಿವೆ. ೧೭ ಇಂತಹ ಖಾಸಗಿ ಕೊಳಗಳಿದ್ದು ಅರ್ಧ ಗಂಟೆಗೆ ಸ್ನಾನಕ್ಕೆ ಬಾಡಿಗೆ ಪಡೆಯಬಹುದು. ತಮಗೆ ಬೇಕಾದ ಉಷ್ಣತೆಗೆ ಕೊಳದ ನೀರನ್ನು ಕೆಲವೆಡೆ ಬದಲಾಯಿಸಿಕೊಳ್ಳಬಹುದು. ಈ ನೀರಿನ ಸಹಜ ಶಾಖ ೩೩°ಯಿಂದ ೪೩° ಸೆಂಟಿಗ್ರೇಡ್ ವರೆಗೆ ಇರುತ್ತದೆ. ಮಕ್ಕಳಿಗಾಗಿ ಬೇರೆ ಕೊಳಗಳಿವೆ. ಅವುಗಳಲ್ಲಿ ಕಾಯಿಸಿದ ಶುದ್ಧ ನೀರಿರುತ್ತದೆ. ಉಳಿದ ದೊಡ್ಡವರಿಗಿರುವ ಕೆಲವು ಕೊಳಗಳ ನೀರು ಆಸಿಡಿಕ್ ಕ್ಷಾರಗುಣ ಹೊಂದಿದ್ದರೆ, ಮತ್ತೆ ಕೆಲವು ಕೊಳಗಳ ನೀರು ಮೆದು ಆಲ್ಕಲಿನ್ ಗುಣ ಹೊಂದಿರುತ್ತವೆ. ಆರ್ಥರಿಟೀಸ್, ರ್‍ಯೂಮ್ಯಾಟಿಸಂ, ಮಸ್ಕುಲರ್ ತೊಂದರೆಗಳಿಗೆ ಈ ಬಿಸಿ, ಖನಿಜಾಂಶಗಳುಳ್ಳ ನೀರಿನ ಸ್ನಾನ ವೈದ್ಯಕೀಯವಾಗಿ ಪರಿಹಾರ ಕೊಡುತ್ತದೆಂದು ಹೇಳುತ್ತಾರೆ. ಸ್ನಾನವಲ್ಲದೆ ಚರ್ಮದ ರಕ್ಷಣೆಗಾಗಿ ಮತ್ತು ಮಸಾಜ್‌ಗಾಗಿ ಉಪಚಾರದ ವ್ಯವಸ್ಥೆಯೂ ಇಲ್ಲಿ ಇರುತ್ತದೆ. ಇದಕ್ಕೆ ಕುದಿಯುವ ಮಡುಗಳಲ್ಲಿನ ಮಣ್ಣನ್ನು ಉಪಯೋಗಿಸುತ್ತಾರೆ. ಇದೇ ಖನಿಜಾಂಶವಿರುವ ಮಣ್ಣಿನಿಂದ ಅನೇಕ ಕಾಸ್ಮೆಟಿಕ್ ಸಾಮಗ್ರಿಗಳನ್ನು ಮಾಡಿ ಅಂಗಡಿಗಳಲ್ಲಿ ಮಾರುತ್ತಾರೆ. ನಾನು ಇಲ್ಲಿಯ ನೆನಪಿಗಾಗಿ ಮಡ್ ಶಾಂಪೂ ಬಾಟಲ್ ಒಂದು ಕೊಂಡುಕೊಂಡೆ. ಅದರ ವಾಸನೆ ಮಾತ್ರ ಚೆನ್ನಾಗಿಲ್ಲ. ಪಾಲಿನೇಶಿಯನ್ ಸ್ಪಾ ಇಂತಹ ಹಲವಾರು ಕೊಳಗಳನ್ನು ಹೊಂದಿರುವ ಒಂದು ವಿಶ್ರಾಂತಿ ಸ್ಥಳ. ಪುರುಷರಿಗೆ-ಮಹಿಳೆಯರಿಗೆ ಪ್ರತ್ಯೇಕ ಕೊಳಗಳಿವೆ. ಕುಟುಂಬದ ಉಪಯೋಗಕ್ಕಾಗಿಯೂ ಚಿಕ್ಕ ಕೊಳಗಳಿವೆ. ನಾವು ಹಾಗೆಲ್ಲ ಹೊರಗೆ ಸ್ನಾನ ಮಾಡಲು ನಾಚಿಕೊಳ್ಳುವ ಜನರಾದ್ದರಿಂದ ಕೇವಲ ಕೊಳದ ನೀರಿನಲ್ಲಿ ಬೆರಳು ಹಾಕಿ ಬಿಸಿನೀರಿನ ಸ್ಪರ್ಶ ಅನುಭವಿಸಿ ತೃಪ್ತಿ ಪಡಬೇಕಾಯಿತು. ಆ ಪಾಲಿನೇಷಿಯನ್ ಸ್ಪಾ ಭೇಟಿಗೆ ಮೊದಲೇ ಕೊಟ್ಟಿದ್ದ ನಮ್ಮ ಹಣ ವ್ಯರ್ಥವಾಯಿತು. ಉಳಿದ ಊರುಗಳಂತೆ ಇಲ್ಲಿಯೂ ಗೊಂಡೋಲಾ ಇದ್ದು ಬೆಟ್ಟದ ಎತ್ತರದಿಂದ ಊರನ್ನು ನೋಡಬಹುದು.



*ಮಾವೋರಿ ನೃತ್ಯ*

ರಾತ್ರಿ ನಮ್ಮ ಹೋಟೆಲ್ ಪಕ್ಕದ ಪೆಂಡಾಲ್‌ನಲ್ಲಿ ಮಾವೋರಿ ಸಾಂಸ್ಕೃತಿಕ ಕಾರ್ಯಕ್ರಮವಿತ್ತು (ಮಾತಾರಿಕಿ). ಹಿಂದಿನ ರಾತ್ರಿ ನಮ್ಮ ಹೋಟೆಲ್ ರಿಸೆಪ್ಶನ್‌ನಲ್ಲಿ, ಮನಸ್ಸಿನಲ್ಲಿ ಸ್ವಲ್ಪ ಕಸಿವಿಸಿ ಪಟ್ಟುಕೊಂಡೇ, ೫೫ ಡಾಲರ್‌ಗಳನ್ನು ಕೊಟ್ಟು ನನ್ನೊಬ್ಬಳಿಗೆ ಸ್ಥಳ ಕಾದಿರಿಸಿದ್ದೆ. ಅಷ್ಟು ದೂರ ಅಪರೂಪಕ್ಕೆ ಹೋಗಿರುವಾಗ ಮಾವೋರಿ ಬುಡಕಟ್ಟಿನ ಜನರ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳಬೇಕೆಂಬ ಆಸಕ್ತಿ ಉಂಟಾಗಿತ್ತು. ಕಟ್ಟುಮಸ್ತಾದ ಮಾವೋರಿ ಹೆಂಗಳೆಯರು ಹೋದಕೂಡಲೇ ಆತ್ಮೀಯತೆಯಿಂದ ಮೂಗು ಉಜ್ಜಿ, ತಬ್ಬಿಕೊಂಡು ಸ್ವಾಗತಿಸಿ, ನಮ್ಮ ಹೆಸರು, ದೇಶ ಎಲ್ಲವನ್ನೂ ಬರೆಸಿಕೊಂಡರು. ಅಲ್ಲಿದ್ದ ದೊಡ್ಡ ಟೇಬಲ್‌ಗಳಲ್ಲಿ ಒಂದೊಂದಕ್ಕೂ ೧೦-೧೫ ಜನರಿದ್ದು ಬೇರೆ ಬೇರೆ ದೇಶಗಳಿಗೆ ಸೇರಿದವರಾಗಿದ್ದರು. ಮಾವೋರಿ ಪುರುಷ-ಮಹಿಳಾ ನೃತ್ಯಗಾರರು ತಮ್ಮ ಸಂಪ್ರದಾಯದ ನಾರಿನ ಉಡುಗೆ ಧರಿಸಿದ್ದರು. ಗಂಡಸರದ್ದು ಕೋಲು ಹಿಡಿದು ಹಾಂ, ಹೂಂ ಎಂದು ಕೂಗುತ್ತಾ ಜೋರಾಗಿ ಕಾಲು ಬಡಿಯುವ ಬೇಟೆಗಾರರ-ಯೋಧರ ನೃತ್ಯ, ಮಹಿಳೆಯರದು ಕುಚ್ಚುಲು ಹಿಡಿದು ಚಪ್ಪಾಳೆ ತಟ್ಟುತ್ತಾ ಮಾಡುವ ಶಿಷ್ಟ ನೃತ್ಯ. ಬಹುಶಃ ಎಲ್ಲ ಬುಡಕಟ್ಟುಗಳ ಜನರ ನೃತ್ಯವೂ ಮೂಲತಃ ಒಂದೇ ರೀತಿಯದ್ದಾಗಿರುತ್ತದೆ. ಎರಡು ಗಂಟೆಗಳ ಕಾಲದ ನೃತ್ಯ-ಸಂಗೀತದ ನಂತರ ಬೇರೆ ಬೇರೆ ದೇಶಗಳ ಪುರುಷ ಅತಿಥಿಗಳನ್ನು ವೇದಿಕೆಯ ಮೇಲೆ ಕರೆದು, ಅವರಿಂದ ಯೋಧರ ನೃತ್ಯದ ಅನುಕರಣೆ ಮಾಡಿಸಿದರು. ಅವರಂತೂ ಯಾವ ಸಂಕೋಚವೂ ಇಲ್ಲದೆ ಮಾವೋರಿ ನೃತ್ಯಗಾರರಿಗಿಂತ ಜೋರಾಗಿ ಕೂಗಿ ನೆಲಕ್ಕೆ ಕಾಲು ಬಡಿದರು. ನಂತರದ ಸರದಿ ಮಹಿಳೆಯರದು. ಅಲ್ಲಿದ್ದ ಏಕೈಕ ಭಾರತೀಯಳು ನಾನಾಗಿದ್ದುದರಿಂದ ಉಳಿದ ದೇಶಗಳ ಮಹಿಳೆಯರೊಂದಿಗೆ ನನ್ನನ್ನೂ ಒತ್ತಾಯ ಪೂರ್ವಕವಾಗಿ ವೇದಿಕೆಯ ಮೇಲೆ ಕರೆದೊಯ್ದು ಕೈಗೆ ಕುಚ್ಚಲನ್ನು ಕೊಟ್ಟು, ಮಾವೋರಿ ಮಹಿಳಾ ನೃತ್ಯಗಾರರು ಮಾಡುವುದನ್ನು ಅನುಕರಿಸುವಂತೆ ಹೇಳಿದರು. ಮನಸ್ಸಿಗೆ ಬಂದಂತೆ ಕೈಕಾಲು ಅಲ್ಲಾಡಿಸಿ, ಕೆಳಗಿಳಿದು ಬಂದ ಮೇಲೆ ನನ್ನ ಪಕ್ಕದ ಟೇಬಲಿನ ವಿದೇಶಿ ಮಹಿಳೆ ನಾನು ಚೆನ್ನಾಗಿ ನೃತ್ಯ ಮಾಡಿದೆನೆಂದು ಹೇಳಿದಾಗ ನಗು ಬಂತು. ಬಹುಶಃ ಅವಳು ನನ್ನ ಸೀರೆಯನ್ನು ಮೆಚ್ಚಿಕೊಂಡಿರಬೇಕು ! ಆ ದಿನದ ಅತಿಥಿಗಳಲ್ಲಿ ಸುಮಾರು ೩೫-೪೦ ದೇಶಗಳ ಪ್ರವಾಸಿಗರಿದ್ದರು. ಹೆಚ್ಚಿನವರು ಆಸ್ಟ್ರೇಲಿಯಾ, ಜಪಾನ್ ಮತ್ತು ಯೂರೋಪಿನ ಜನರು. ನಾನೊಬ್ಬಳೇ ಭಾರತೀಯಳು ! ನಂತರ ಊಟದ ಕಾರ್ಯಕ್ರಮದಲ್ಲಿ ಮಾವೋರಿ ಪದ್ಧತಿಯಂತೆ ನೆಲದಲ್ಲಿ ಹೂತಿಟ್ಟ ಮರದ ಪೆಟ್ಟಿಗೆಯಲ್ಲಿ ಶಾಖದ ಮೂಲಕ ಹಬೆಯಲ್ಲಿ ಬೇಯಿಸಿದ ತಿಂಡಿ-ತಿನಿಸುಗಳನ್ನು (ಹಾಂಗಿ) ಇಡಲಾಗಿತ್ತು. ಅವೆಲ್ಲ ಮಾಂಸಾಹಾರವಾದ್ದರಿಂದ ನಾನು ಕೇವಲ ಹಣ್ಣು - ಸಿಹಿ ತಿಂಡಿಯನ್ನು ತೆಗೆದುಕೊಂಡೆ. ನನ್ನ ಪಕ್ಕದಲ್ಲಿ ಕುಳಿತಿದ್ದ ಇಬ್ಬರು ಆಸ್ಟ್ರೇಲಿಯನ್ ಹುಡುಗಿಯರು ಅದನ್ನು ತಿಂದು, ಕೆಟ್ಟ ಮುಖ ಮಾಡಿಕೊಂಡು, ನಾನೇನನ್ನೂ ಕಳೆದುಕೊಳ್ಳಲಿಲ್ಲವೆಂದು ತಿಳಿಸಿದ್ದಕ್ಕೆ ಸ್ವಲ್ಪ ಸಮಾಧಾನವಾಯಿತು. ಅವಿವಾಹಿತೆಯರಾದ ಆ ಬಿಳಿ ಹುಡುಗಿಯರಿಬ್ಬರೂ ಸಣ್ಣ-ಪುಟ್ಟ ಕೆಲಸದಲ್ಲಿದ್ದು ದುಡ್ಡು ಕೂಡಿಹಾಕಿಕೊಂಡು ಯೂರೋಪ್ ಪ್ರವಾಸ ಮಾಡಿದ್ದರು. ಈಗ ನ್ಯೂಜಿಲ್ಯಾಂಡ್ ಪ್ರವಾಸಕ್ಕೆ ಬಂದಿದ್ದರು. ನಮ್ಮಲ್ಲಿ ಎಷ್ಟು ದೊಡ್ಡ ಕೆಲಸದಲ್ಲಿದ್ದರೂ, ಬೇಕಾದಷ್ಟು ಹಣ ಸಂಪಾದಿಸಿದರೂ, ಈ ರೀತಿ ಪ್ರವಾಸಕ್ಕಾಗಿಯೇ ಕೂಡಿಡುವುದು, ಖರ್ಚು ಮಾಡುವುದು ಕಡಿಮೆ. ಇತ್ತೀಚೆಗೆ ಸ್ವಲ್ಪ ಬದಲಾವಣೆ ಕಂಡುಬರುತ್ತಿದೆ. ಒಟ್ಟಾರೆ ರೊಟೊರುವಾ ಒಂದು ಅಪೂರ್ವ ಅನುಭವವನ್ನು ತಂದುಕೊಟ್ಟಿತು.

**ಹೇಮಲತಾ ಮಹಿಷಿ**
'ಶಶಿಕಿರಣ', ನಂ. ೨೦೯, ೧೮ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು-೫೬೦ ೦೫೫

# ಪ್ರಾಚೀನ ಕರ್ನಾಟಕದ 'ಮನೆ ಮಕ್ಕಳು'

– ಡಾ|| ಎಚ್. ಎಸ್. ಗೋಪಾಲರಾವ್

**ಶಾ**ಸನಾಭ್ಯಾಸಿಗಳಿಗೆ ಹೊಸದು ಎನ್ನಿಸದ ಪದ 'ಮನೆ ಮಗ'. ಈ ಪದಕ್ಕೆ 'ಮನೆ ಮಗತಿ','ಮನೆ ವಗತಿ', 'ಕುಲ ಪುತ್ರ', 'ಪ್ರಿಯ ಪುತ್ರ' ಎಂದೂ ಪರ್ಯಾಯಗಳುಂಟು. ತುಮಕೂರು ತಾಲ್ಲೂಕಿನ ಹಿರೇಗುಂಡಗಲ್ಲಿನ ಕ್ರಿ. ಶ. ಸು. ೭೭೫ರ ಒಂದು ಶಾಸನವು ಮನೆ ಮಗನ ಪ್ರಸ್ತಾಪ ಮಾಡಿದೆ. ಸದ್ಯಕ್ಕೆ ತಿಳಿದಿರುವಂತೆ ಮನೆ ಮಗನ ಪ್ರಸ್ತಾಪ ಮಾಡುವ ಅತ್ಯಂತ ಪ್ರಾಚೀನ ಶಾಸನ ಇದು. ಬೆಂಗಳೂರಿಗೆ ಸಮೀಪವಿರುವ ಬೇಗೂರಿನಲ್ಲಿ ದೊರೆತ ಕ್ರಿ. ಶ. ಸು. ೯೦೦ರ ಒಂದು ಶಾಸನವು ನಾಗತ್ತರನ ಮನೆ ಮಗನಾದ ಪೇಗೂರ ಎನ್ನುವವನ ಸಾವನ್ನು ದಾಖಲಿಸಿದೆ. ಹಲ್ಮಿಡಿ ಶಾಸನದ 'ಪ್ರೇಮಾಲಯ ಸುತ' ಎಂಬ ಪದವೂ ಮನೆ ಮಗನನ್ನೇ ಸೂಚಿಸುತ್ತದೆ ಎಂಬ ಅಭಿಪ್ರಾಯವಿದೆ. ನಿಘಂಟುವಿನ ಪ್ರಕಾರ ಈ ಪದದ ಅರ್ಥ ಮನೆಯಲ್ಲಿ ಹುಟ್ಟಿದವನಂತೆಯೇ ಇದ್ದು, ಕೆಲಸ ಮಾಡಿಕೊಂಡಿರುವ ವ್ಯಕ್ತಿ; ವಂಶ ಪಾರಂಪರ್ಯವಾಗಿ ಬಂದ ಮನೆಯ ಆಳು. ಈ ಪದವು ಆಕರ್ಷಕ; ಆದರೆ, ಅದಕ್ಕಿರುವ ಅರ್ಥ ಮತ್ತು ಆ ಪದದ ಹಿಂದಿನ ನಂಬಿಕೆ ಮತ್ತು ಆಚರಣೆಗಳು ಅಧುನಿಕ ಕಾಲಕ್ಕಂತೂ ಯಾರಿಗೂ ಪ್ರಿಯವಾಗುವುದು ಕಷ್ಟ. ಸಾಮಾನ್ಯವಾಗಿ ಮನೆ ಮಕ್ಕಳ ಪ್ರಸ್ತಾಪವಾಗಿರುವುದು ಅವರ ಸಾವಿನ ಸಂದರ್ಭಗಳಲ್ಲಿ ಮಾತ್ರ. ಸಾಯಲೆಂದೇ ಇವರು 'ಮನೆ ಮಕ್ಕಳಾದರೆ ಅಥವಾ ಸತ್ತದ್ದರಿಂದ ಮನೆ ಮಕ್ಕಳಾದರೆ ಎಂಬ ಪ್ರಶ್ನೆ ಕಾಡಿದರೆ ಆಶ್ಚರ್ಯವೇನಿಲ್ಲ. ಜೀತ ಪದ್ಧತಿಯ ವಿರುದ್ಧ ಹೋರಾಡಬೇಕಾದ ಪರಿಸ್ಥಿತಿ ಈಗಲೂ ಇದೆ. ಈ ಪದ್ಧತಿಯು ಹೊಸದೇನಲ್ಲ ಎಂದು ಆಧುನಿಕರು ಸಮಾಧಾನ ತಾಳಬಹುದು.

ಇತಿಹಾಸದಲ್ಲಿ ಎಲ್ಲವೂ ಸುಂದರವಲ್ಲ. ನಮ್ಮ ಸಂಸ್ಕೃತಿಯನ್ನು ತಿಳಿಯಲು ಸಹಾಯ ಮಾಡುವ ಇತಿಹಾಸವು ತನ್ನ ಒಡಲಲ್ಲಿ ಸೌಂದರ್ಯದ ಜೊತೆಗೆ ರೌದ್ರ ರೂಪವನ್ನೂ ಹೊಂದಿದೆ. ಶಾಂತಿಯ ಜೊತೆಗೆ ಕ್ರೌರ್ಯವನ್ನೂ ತುಂಬಿಕೊಂಡಿದೆ. ಮನುಷ್ಯನ ಬಾಳಿನಲ್ಲಿ ಇದು ಸಹಜ ಮತ್ತು ಅನಿವಾರ್ಯ. ನಮ್ಮ ಹಿಂದಿನ ಕಾಲದಲ್ಲಿ ಎಲ್ಲವೂ ಚೆನ್ನಾಗಿತ್ತು ಮತ್ತು ಸಮೃದ್ಧವಾಗಿತ್ತು ಎಂದು ತಿಳಿಯಬೇಕಾಗಿಲ್ಲ; ಅಲ್ಲಿಯೂ, ಈಗಿನಂತೆಯೇ ಅನೇಕ ಅಪ್ರಿಯ ವಿಷಯಗಳು ಮತ್ತು ವಿಚಾರಗಳು ಇದ್ದುವು. ಇತಿಹಾಸದ ನೆರವಿನಿಂದ ಭವಿಷ್ಯವನ್ನು ರೂಪಿಸಿಕೊಳ್ಳುವ ಸಂದರ್ಭದಲ್ಲಿ, ಅಂತಹ ಅಪ್ರಿಯ ವಿಷಯಗಳ ಬಗ್ಗೆಯೂ ತಿಳಿದಿರಬೇಕಾದ್ದು ಅನಿವಾರ್ಯ. ಇತಿಹಾಸದ ಅಪ್ರಿಯ ವಿಷಯಗಳಲ್ಲಿ ಮನೆ ಮಕ್ಕಳೂ ಸೇರುತ್ತಾರೆ.

ಕೆಲವು ಸಂದರ್ಭಗಳಲ್ಲಿ 'ಮನೆ ಮಕ್ಕಳು' ಅನಿವಾರ್ಯವಾಗಿದ್ದರೇ ಎಂಬ ಪ್ರಶ್ನೆಗೂ ಅವಕಾಶವಿದೆ. ಯಾವುದೇ ಸೈನಿಕನ ಬದುಕು ಅಸ್ಥಿರ. ಸೈನ್ಯಕ್ಕೆ ಪ್ರೀತಿಯಿಂದ ಸೇರಿರಬಹುದು, ಯಾರದೋ ಬಲವಂತಕ್ಕೆ ಅಥವಾ ಸಂದರ್ಭದ ಒತ್ತಡಕ್ಕೆ ಮಣಿದು ಸೇರಿರಬಹುದು. ಒಮ್ಮೆ ಸೈನ್ಯಕ್ಕೆ ಸೇರಿದ ಮೇಲೆ ಸಾವಿಗೆ ಅಂಜದೆ, ಯಾವುದೇ ಸಂದರ್ಭದಲ್ಲಿ ಅದನ್ನು ಸ್ವಾಗತಿಸಲು ಸಿದ್ಧರಾಗಿರಬೇಕಾಗುತ್ತದೆ. ೨೧ನೇ ಶತಮಾನದ ಆರಂಭದ ಈ ದಿನಗಳಲ್ಲೂ ಯುದ್ಧ ಮತ್ತು ಯುದ್ಧದಲ್ಲಿನ ಸಾವು ಅನಿವಾರ್ಯ ಎಂಬ ಪರಿಸ್ಥಿತಿ ಇರುವಾಗ, ಹಿಂದಿನ ದಿನಗಳಲ್ಲಿ ಅವು ಇರಬಾರದಾಗಿತ್ತು ಎಂದು ಭಾವಿಸುವುದು ತಪ್ಪಾಗಬಹುದು. ಆದ್ದರಿಂದ ಹಿಂದಿನ ದಿನಗಳ 'ಮನೆ ಮಕ್ಕಳು', ಸಮಾಜದಲ್ಲಿ ಸಹಜವಾಗಿಯೇ ಇದ್ದವರು ಎಂದು ಒಪ್ಪಿಕೊಳ್ಳಬೇಕಾಗುತ್ತದೆ.

ಆತ್ಮಬಲಿಯ ಪ್ರಸ್ತಾಪವಾದಾಗಲೆಲ್ಲಾ ಜೋಳವಾಳಿ, ವೇಳೆವಾಳಿ, ಕೀಲ್ಗುಂಟೆ, ಗರುಡ ಇತ್ಯಾದಿ ಪದಗಳು ಗಮನ ಸೆಳೆಯುತ್ತವೆ. ಸಹಗಮನವೂ ಆತ್ಮಬಲಿಯ ಒಂದು ಪ್ರಕಾರ. ಕೆಲಸದ ಮೂಲಕ ಬದುಕು ಕೊಟ್ಟ ಅಥವಾ ಬದುಕಿಗೆ ಆಸರೆಯಾದ ಯಜಮಾನನಿಗೆ ಅಥವಾ ಒಡೆಯನಿಗೆ, ಅವನ ಸಾವಿನ ಕಾಲದಲ್ಲೂ ಸಹಚರನಾಗಿರುವ ತೀರ್ಮಾನ ಮಾಡಿರುವವರನ್ನು ಮೇಲೆ ಹೆಸರಿಸಿದ ಯಾವುದಾದರೂ ಒಂದು ಗುಂಪಿಗೆ ಸೇರಿಸಲಾಗುತ್ತದೆ. ಇಂತಹ ವಿಚಾರಗಳನ್ನು ತಿಳಿಸುವ ದಾಖಲೆಗಳು ಕನ್ನಡದಲ್ಲಿ ಅಪರೂಪವೇನಲ್ಲ. ಒಬ್ಬ ಒಡೆಯನಿಗೆ ಸಾವಿನಲ್ಲೂ ಸಹಚರನಾಗುವ ವಿಚಾರವೂ ಇಂದಿನ ಸಂದರ್ಭದಲ್ಲಿ ಅತಿರೇಕ ಅಥವಾ ಅಸಹಜ ಎನ್ನಿಸಬಹುದು. ಆದರೆ ಹಿಂದೆ ಈ ಪದ್ಧತಿ ಇತ್ತು ಮತ್ತು ಜನ ಅದನ್ನು ಮನಸಾರೆ ಒಪ್ಪಿಕೊಂಡಿದ್ದಂತೆ ಭಾಸವಾಗುತ್ತದೆ. ಏಕೆಂದರೆ ಈ ಪದ್ಧತಿಯನ್ನು ಆ ಕಾಲದಲ್ಲಿ ವಿರೋಧಿಸಿರುವ ಯಾವ ಸ್ಪಷ್ಟ ಸೂಚನೆಯೂ ಲಭ್ಯವಿಲ್ಲ. ಇಂತಹ ಪದ್ಧತಿಗಳು ರೂಕ್ಷ ಅನಾಗರಿಕ ಎಂದು ಈ ಸಂದರ್ಭದಲ್ಲಿ ಅನಿಸಬಹುದು. ಆದರೆ ಹಿಂದೆ ಇಂತಹ ಪದ್ಧತಿಗಳು ಹೆಚ್ಚು ಪ್ರಚಲಿತದಲ್ಲಿದ್ದುದನ್ನು ಇತಿಹಾಸವೂ ತಿಳಿಸುತ್ತದೆ. ಈಜಿಪ್ಟ್‌ನಲ್ಲಿರುವ ಪ್ರಾಚೀನ ಪಿರಮಿಡ್‌ಗಳ ಒಳಗೆ ಸತ್ತ ಒಡೆಯರ ಶವಗಳ ಜೊತೆಗೆ, ಅವರ ಸೇವಕ ವರ್ಗದವರ ಶವಗಳೂ ಇದ್ದುದು ತಿಳಿದಿರುವ ವಿಷಯ. ಸತ್ತ ಅಧಿಕಾರ ವರ್ಗದವರ ಜೊತೆಗೆ, ಅವರ ಸೇವಕರು ಮಾತ್ರವಲ್ಲದೆ, ಅವರ ರಕ್ಷಕ ಅಂದರೆ ಅಂಗರಕ್ಷಕ ದಳದವರು ಸ್ವ-ಇಚ್ಛೆಯಿಂದ ಪ್ರಾಣತ್ಯಾಗ ಮಾಡಿರುವುದನ್ನು ಅನೇಕ ಶಾಸನಗಳು ದಾಖಲಿಸಿವೆ.

ಜೈನ ಧರ್ಮದಲ್ಲಿ ಸಲ್ಲೇಖನ ವ್ರತ ಉಂಟು; ಈ ಇಹ ಪ್ರಪಂಚವು ಬೇಡ ಎನಿಸಿದಾಗ, ಜಿನಧ್ಯಾನ ಮಾಡುತ್ತಾ ಉಪವಾಸದ ಮೂಲಕ ಸಾವನ್ನು ಬರಮಾಡಿಕೊಳ್ಳುವ ವ್ರತವೇ ಸಲ್ಲೇಖನ. ಹೀಗೆ ಸಾವನ್ನು ಸ್ವಾಗತಿಸಿರುವ ಅನೇಕ ಜಿನ ಧರ್ಮೀಯರ ಬಗೆಗೆ ಶಾಸನಗಳು ಮತ್ತು ಕಾವ್ಯಗಳು ತಿಳಿಸಿವೆ. ಸಹಗಮನವು ಭಾರತದ ಬಹುತೇಕ ಎಲ್ಲಾ ಧರ್ಮಗಳಲ್ಲೂ ಇತ್ತು ಎನ್ನಬಹುದು. ಅದಕ್ಕೆ ಧರ್ಮದ ಹಿನ್ನೆಲೆಗಿಂತ ಸಾಮಾಜಿಕ ಹಿನ್ನೆಲೆ ಮುಖ್ಯವಾಗಿದ್ದಂತೆ ತೋರುತ್ತದೆ.

ಆತ್ಮಬಲಿಯನ್ನು ಯಾವುದೇ ನಾಗರಿಕ ಸಮಾಜ ಒಪ್ಪುವುದಿಲ್ಲ. ಅದು ಯಾರ ಮನಸ್ಸಿಗೂ ಪ್ರಿಯವಾಗುವ ಸಂಗತಿಯೂ ಅಲ್ಲ ಮತ್ತು ಘಟನೆಯೂ ಅಲ್ಲ. ಜೊತೆಯ ವ್ಯಕ್ತಿಯ ಸಾವನ್ನು ಸಹಿಸದ, ಅಂದರೆ ಸತ್ತ ವ್ಯಕ್ತಿಯನ್ನು ಬಿಟ್ಟು ಇರಲಾರೆ ಎಂಬ ಭಾವನಾತ್ಮಕ ನಂಟು, ಆತ್ಮಬಲಿಗೆ ಕಾರಣವಾಗಿರಬಹುದು. ಕ್ರಮೇಣ ಈ ನಂಟನ್ನು ವಿಧಿಯಂತೆ ಸ್ವೀಕರಿಸಿ, ಆತ್ಮಬಲಿಗೆ ಶಾಸನಸ್ಥ ಸ್ವರೂಪ ದೊರಕಿಸಿರುವ ಸಾಧ್ಯತೆಗಳಿವೆ. ಮಾನವನ ಬುದ್ಧಿಶಕ್ತಿಯ ವಿಕಾಸಕ್ಕೆ ಮೊದಲಿನ ಕಾಲದಲ್ಲಿ, ಅವನು ಪ್ರಾಣಿ ಜೀವನದಿಂದ ಪ್ರತ್ಯೇಕಗೊಂಡು, ಆಧುನಿಕ ವ್ಯಾಖ್ಯೆಯ ಮಾನವ ಜೀವನಕ್ಕೆ ಅಡಿ ಇಡುತ್ತಿದ್ದ ಕಾಲದಲ್ಲಿ, ಸತ್ತ ವ್ಯಕ್ತಿ ಮತ್ತೆ ಏಳುತ್ತಾನೆಂಬ ಕಲ್ಪನೆಯಿಂದ, ಸತ್ತ ವ್ಯಕ್ತಿಯ ಬದುಕಿಗೆ ಆವಶ್ಯಕವಾದ ಆಹಾರ, ಆಯುಧ, ಪಾತ್ರೆ, ದಿನಬಳಕೆಯ ಇತರ ಆವಶ್ಯಕ ವಸ್ತುಗಳ ಸಹಿತ ಅವನನ್ನು ಹೂಳುವ ಪದ್ಧತಿ ಆರಂಭವಾಗಿರಬೇಕು. ಆ ಸಂದರ್ಭದಲ್ಲಿಯೇ ಸತ್ತ ವ್ಯಕ್ತಿಯ ನಿಕಟ ಸಂಬಂಧ ಹೊಂದಿದ್ದವರನ್ನೂ, ಸತ್ತವನು ಎಚ್ಚರಗೊಂಡಾಗ ಜೊತೆಗಿರಲಿ ಎಂದು ಜೀವಂತವಾಗಿ ಹೂಳುವ ಪದ್ಧತಿಯು ಆರಂಭವಾಗಿರುವ ಸಾಧ್ಯತೆಗಳಿವೆ. ಸತ್ತವನು ಸತ್ತ; ಅವನು ಯಾವ ಕಾರಣಕ್ಕೂ ಏಳಲಾಗುವುದಿಲ್ಲ ಎಂಬ ತಿಳುವಳಿಕೆ ಬಂದ ನಂತರ ಶವವನ್ನು ಸುಡುವ ಪದ್ಧತಿಗೆ ಇಂಬು ದೊರೆತಿರಬಹುದು. ಈ ಪದ್ಧತಿಯ ಆರಂಭಕ್ಕೆ ಮೊದಲು, ಸತ್ತವನನ್ನು ಹೂಳುವಾಗ ಅವನೊಡನೆ ಅವನಿಗೆ ಸಂಬಂಧಿಸಿದ ವಸ್ತುಗಳನ್ನು ಹೂಳುವುದರ ಜೊತೆಗೆ



ದೊಡ್ಡಹುಂಡಿ ಶಾಸನ : ಅಗರಯ್ಯ ತನ್ನನ್ನೇ ಇರಿದುಕೊಳ್ಳುತ್ತಿರುವ ದೃಶ್ಯ

ಅವನ ನಿಕಟವರ್ತಿಗಳನ್ನೂ ಹೂಳಿ ಸಮಾಧಿ ಮಾಡಿರಬಹುದು. ಹೀಗೆ ಸಮಾಧಿ ಆದವರಲ್ಲಿ ಸತ್ತವನ ರಕ್ಷಣೆಯ ಜವಾಬ್ದಾರಿ ಹೊತ್ತಿದ್ದ ಅಂಗರಕ್ಷಕರೂ ಸೇರಿರುವುದು ಸ್ವಾಭಾವಿಕ. ಇಂತಹ ಅಂಗರಕ್ಷಕರನ್ನೇ ಪ್ರಾಚೀನ ದಾಖಲೆಗಳು 'ಮನೆ ಮಗ' ಎಂದು ಅಲಂಕಾರಯುತವಾಗಿ ಕರೆದಿವೆ.

ತುರುಗಾಳಗ, ಪೆಣ್ಬುಯ್ಯಲ್, ಊರಳಿವು, ಯುದ್ಧ ಇತ್ಯಾದಿ ಹೋರಾಟಗಳಲ್ಲಿ ಸತ್ತ ವೀರರಿಗೆ ಸ್ಮಾರಕಗಳನ್ನು ಹಾಕಿಸುವ ಪದ್ಧತಿ ಕರ್ನಾಟಕದಲ್ಲಿ ಅಪರೂಪವಲ್ಲ. ಇವು ಆತ್ಮಬಲಿಗೆ ಸಂಬಂಧಿಸಿದ ಸ್ಮಾರಕಗಳಲ್ಲ; ಧಾರ್ಮಿಕ ಸ್ವರೂಪದ ನಿಸಿಧಿಗಳು, ಸಹಗಮನವನ್ನು ದಾಖಲಿಸುವ ಮಾಸ್ತಿ ಕಲ್ಲುಗಳು, ಸಿಡಿತಲೆ ವೀರಗಲ್ಲುಗಳು, ಗರುಡ ಸ್ಮಾರಕಗಳು, ಕೀಲ್ಗುಂಟೆ ಸ್ಮಾರಕಗಳು ಆತ್ಮಬಲಿದಾನದ ಅಧ್ಯಯನಕ್ಕೆ ಮಹತ್ವದ ಆಕರಗಳಾಗಿವೆ. ಈ ಬಗೆಗೆ ಈಗಾಗಲೇ ಕೆಲವು ಪ್ರಮುಖ ಅಧ್ಯಯನಗಳು ನಡೆದಿವೆ.

ಜೋಳವಾಳಿಯ ಬಗ್ಗೆ ಕನ್ನಡದ ಆದಿಕವಿ ಪಂಪನೂ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಹೀಗೆ ಪ್ರಸ್ತಾಪಿಸಿದ್ದಾನೆ.

ಸುರಲೋಕಂ ದೊರೆಕೊಳ್ವುದೊಂದು ಪರಮ ಶ್ರೀ ಲಕ್ಷ್ಮಿಯುಂ ಬರ್ಪುದಾ।
ದರದಿಂ ದೇವ ನಿಕಾಯದೊಳ್ ನೆರೆವುದೊಂದುತ್ಸಾಹಮುಂ ತನ್ನ ಮೆ॥
ಯ್ಸಿರಿ ಭಾಗ್ಯಂ ನೆರಮಪ್ಪುದೊಂದೆ ರಣದೊಳ್ ಗೆಲ್ದಾಜಿಯಂ ತಳ್ತು ಸಂ।
ಗರದೊಳ್ ಜೋಳದ ಪಾಳಿಯಂ ನೆರಪಿದಂ ಗಂಡಂ ಪೆಱಂ ಗಂಡನೇ॥

ಮಹಾಭಾರತದಲ್ಲಿ ಭೀಷ್ಮನಾಗಲೀ, ಕರ್ಣನಾಗಲೀ, ದ್ರೋಣನಾಗಲೀ, ದುರ್ಯೋಧನನ ಪರವಾಗಿ ಹೋರಾಡಲು ಜೋಳದ ಪಾಳಿಯೇ ಕಾರಣ. ಕನ್ನಡ ಶಾಸನಗಳು ಅನೇಕ ವೀರರ ಜೋಳವಾಳಿಯ ಕಾರಣದ ಸಾವನ್ನು ದಾಖಲಿಸಿವೆ. ಅಂತೆಯೇ ತಮ್ಮ ಒಡೆಯ ಸತ್ತಾಗ, ತಾವೂ ಸಾಯುವ ಪ್ರತಿಜ್ಞೆ ಮಾಡಿ, ತಮ್ಮ ಪಾಳಿ ಬಂದಾಗ ಮರಣ ವನ್ನಪ್ಪಿದ್ದಾರೆ. ಹೀಗೆ ಜೋಳವಾಳಿ ಮತ್ತು ವೇಳೆವಾಳಿಗಳಾದವರಿಗೆ, ಅವರ ಸಾವಿನ ನಂತರ, ಅವರ ಒಡೆಯನು ಸ್ಮಾರಕವಾಗಿ ಕಲ್ಲನ್ನು ನೆಡಿಸಿ, ವೀರನ ಕುಟುಂಬಕ್ಕೆ ದಾನ ನೀಡಿರುತ್ತಾನೆ. ಸಾಮಾನ್ಯವಾಗಿ ವೀರನಾದವನಿಗೆ ಗೌರವ ತೋರಿ, ಆತನ ಸಾಹಸವು ಮುಂಬರುವ ಯುವಕರಿಗೆ ಪ್ರೇರಣೆ ಆಗಬಹುದೆಂದು ದಾನವಾಗಿ ನೀಡಲು ಒಪ್ಪಿದ್ದರು.

ಮೇವುಂಡಿಯ ಕ್ರಿ. ಶ. ೮೬೫ರ ಒಂದು ಶಾಸನವು ರೆಟ್ಟಯಣ್ಣ ಎಂಬ ವೇಳೆವಾಳಿಯ ಸಾವನ್ನು ಪ್ರಸ್ತಾಪಿಸುತ್ತಾ, 'ತನ್ನನಾಳ್ದಾತ ಸಯೆ(ಸಾಯೆ) ಬಾಟಿನ್' ಎಂಬ ಅವನ ಪ್ರತಿಜ್ಞೆ ಯಂತೆ, ಅವನ ಒಡೆಯನ ಸಾವಿನ ಸುದ್ದಿ ತಿಳಿದ ತಕ್ಷಣ, ಮೂವತ್ತು ಗಾವುದ ದೂರ ನಡೆದು, ಒಡೆಯನ ಶವ ಇದ್ದ ಸ್ಥಳವನ್ನು ತಲುಪಿ, ಅಲ್ಲಿ ತನ್ನ ತಲೆಯನ್ನು ಕತ್ತರಿಸಿಕೊಂಡು ಪ್ರಾಣಾರ್ಪಣೆ ಮಾಡಿದ್ದನ್ನು ದಾಖಲಿಸಿದೆ. ಲೇಖನದ ಆರಂಭದಲ್ಲೇ ಪ್ರಸ್ತಾಪಿಸಿರುವ ಬೇಗೂರಿನ ಶಾಸನವು ತಿಳಿಸಿರುವುದೂ 'ಮನೆ ಮಗ'ನಾದ ಪೇಗೂರನ ಸಾವನ್ನು ; ಗಂಗರ ಆಳ್ವಿಕೆಯ ಕಾಲದಲ್ಲಿ ಇಂತಹ ಮನೆ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಂತೆ ತೋರುತ್ತದೆ. ತಿ.ನರಸೀಪುರ ತಾಲ್ಲೂಕಿನ ದೊಡ್ಡಹುಂಡಿಯ ಕ್ರಿ. ಶ. ಸು. ೯೦೦ರ ಒಂದು ಶಾಸನವು ಗಂಗ ದೊರೆ ನೀತಿ ಮಾರ್ಗ ಪೆರ್ಮಾನಡಿಯ ಸಾವನ್ನು ಉಲ್ಲೇಖಿಸಿ, ಅವನ ಜೊತೆಗೆ, ಅವನ 'ಮನೆ ಮಗ' ಅಗರಯ್ಯನೂ ಸತ್ತು 'ಕೀಲ್ಗುಂಟೆ' ಆದದ್ದರ ದಾಖಲೆಯಾಗಿದೆ. ಶಾಸನದ ಜೊತೆಗಿರುವ ಶಿಲ್ಪವು ಮಂಚದ ಮೇಲೆ ಮಲಗಿರುವ ರಾಜ ಪುರುಷ ನೊಬ್ಬನನ್ನೂ, ಅವನ ಒಂದು ಪಕ್ಕದಲ್ಲಿ ಅಗರಯ್ಯನು ಇರಿದುಕೊಳ್ಳುತ್ತಿರುವುದನ್ನೂ ಚಿತ್ರಿಸಿದೆ. ಶಾಸನವು 'ಶ್ರೀಮತ್ ಪೆರ್ಮ್ಮನಡಿಗಳ್ ಸ್ವರ್ಗ್ಗಮೇಱಿದ [o] ಏಱಿದೊಡೆ ಪೆರ್ಮ್ಮಾನಡಿಗಳ ಮನೆಮಗತ್ತಿನ್ ಅಗರಯ್ಯಂ ನೀತಿಮಾರ್ಗ್ಗ ಪೆರ್ಮ್ಮನಡಿಗೆ ಕಿಲ್ಗುಂಟೆಯಾದಂ' ಎಂದು ಘಟನೆಯನ್ನು ದಾಖಲಿಸಿದೆ. ತುಮಕೂರು ತಾಲ್ಲೂಕಿನ ಹಿರೇಗುಂಡಗಲ್ಲಿನ ಒಂದು ಶಾಸನವು 'ಸಿಯಗೆಲ್ಲರಾ ಮನೆಮಗತ್ತಿನ್ಬಲ್ಲಹನಾ.... ಮಾನಿಱಿದು ಸತ್ತ' ಎಂದು ತಿಳಿಸಿದೆ. ಈ ಶಾಸನದ ಕಾಲ ಕ್ರಿ. ಶ. ಸು. ೭೫೦. ಹೀಗೆ, ಆ ಕಾಲದ ಮನೆ ಮಕ್ಕಳು, ತಮ್ಮ ಒಡೆಯನ ಸಾವಿನೊಡನೆ ತಾವೂ ಸಾಯುವ ಪ್ರತಿಜ್ಞೆ ಮಾಡಿ, ಅಂತೆಯೇ ನಡೆದುಕೊಂಡಿರುವುದಕ್ಕೆ ಅನೇಕ ಶಾಸನಗಳು ದಾಖಲೆಯಾಗಿವೆ. ಅದೇ ಶಾಸನಗಳು, ಒಡೆಯರಿಂದ ಮನೆ ಮಕ್ಕಳಿಗೆ ದೊರೆತ ದಾನ ದತ್ತಿಗಳನ್ನೂ ದಾಖಲಿಸಿ, ಮನೆ ಮಕ್ಕಳ ಕುಟುಂಬಕ್ಕೆ ಆಳುವವರು ಆಸರೆಯಾಗುತ್ತಿದ್ದುದನ್ನೂ ತಿಳಿಸಿವೆ. ಆದರೆ ಸಾವಿನ ಮುಂದೆ ಆ ದಾನ ದತ್ತಿಗಳು ಗೌಣವಾಗುತ್ತವೆ. ಮನೆ ಮಕ್ಕಳಂತೆಯೇ ಬೆಳೆದು 'ಗರುಡ'ರಾದವರ ಬಗ್ಗೆ ಮುಂದೆ ಅವಕಾಶ ದೊರೆತಾಗ ತಿಳಿಸಲಾಗುವುದು.

**ಡಾ॥ ಎಚ್. ಎಸ್. ಗೋಪಾಲರಾವ್**
'ಸ್ವಸ್ತಿಶ್ರೀ ಸ್ಕಂದ', ಅರಸಿನಕುಂಟೆ, ನೆಲಮಂಗಲ ತಾ॥, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬ ೨೧೨೩

# ಭಯೋತ್ಪಾದನೆ ಒಂದು ವ್ಯಾಖ್ಯಾನ



— ಪಿ. ಎಸ್. ಪಾಟೀಲ

ಸಂವಾದದಿಂದ ತಮ್ಮ ಸಮಸ್ಯೆಗೆ ಪರಿಹಾರವಿಲ್ಲವೆಂಬ ಖಾತ್ರಿಯಿದ್ದವರು ಭಯೋತ್ಪಾದಿಸಿ ಸಮಸ್ಯೆ ಬಗೆಹರಿಸಲು ಪ್ರಯತ್ನಿಸುತ್ತಾರೆ. ಝಾರ್ ಶಾಹಿಯಡಿಯಲ್ಲಿ ಕ್ರಾಂತಿಕಾರಿ ಹೋರಾಟದ ಒಂದು ಭಾಗ ಖಾಯಂ ಭಯೋತ್ಪಾದಕವಾದಿಯಾದುದು ಹೀಗೆಯೇ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಒಂದು ಘಟ್ಟದಲ್ಲಿ ಈ ವಿದ್ಯಮಾನ ತಲೆದೋರಿತು. ರಾಷ್ಟ್ರವೀರರೆನಿಸಿದ ಭಗತ್ ಸಿಂಗ್, ಅರವಿಂದ ಘೋಷ್, ಸೂರ್ಯ ಸೇನ್ ಕಾಣಿಸಿಕೊಂಡದ್ದು ಹೀಗೆಯೇ. ಜೀವನ ವ್ಯವಸ್ಥೆಯಲ್ಲಿ ಅನ್ಯಾಯ, ಶೋಷಣೆ, ದಬ್ಬಾಳಿಕೆಗಳಿಗೆ ನ್ಯಾಯೋಕ್ತ ಪರಿಹಾರ ಪಡೆಯುವ ವಿಧಾನಗಳು ಏರ್ಪಟ್ಟ ಮಟ್ಟಿಗೆ ಸಂವಾದದ ಮೂಲಕ ಸಮಸ್ಯೆಗಳಿಗೆ ಪರಿಹಾರ ದೊರೆಯುವಂತಾದಾಗ ಭಯೋತ್ಪಾದನೆಯ ವಿಧಾನಗಳ ಆಕರ್ಷಣೆ ಕಡಿಮೆಯಾಗುತ್ತದೆ. ನಾಗರಿಕ ಸಮಾಜ, ಪ್ರಜಾತಾಂತ್ರಿಕ ಜೀವನ ವಿಧಾನಗಳು ನೆಲೆಗೊಂಡಿರುವಲ್ಲಿ ಭಯೋತ್ಪಾದಕ ವಿಧಾನಗಳ ಆವಶ್ಯಕತೆ ಇಲ್ಲವಾಗಿ ಅವು ಜನಪ್ರಿಯತೆಯನ್ನು ಕಳೆದುಕೊಳ್ಳುತ್ತವೆ. ಭಯೋತ್ಪಾದಕರು ವಿಭೂತಿ ಪುರುಷರೆನಿಸುವ ವಿಚಿತ್ರ ವಿದ್ಯಮಾನಕ್ಕೆ ತಡೆ ಬೀಳುತ್ತದೆ.

**ನಕ್ಸಲೈಟರು**

ಆದರೂ, ನಾಗರಿಕ ಜೀವನ ವ್ಯವಸ್ಥೆಯೆನ್ನುವಂತಹದು ಯಾವುದೇ ಹಿಂಸೆ, ದಬ್ಬಾಳಿಕೆ, ಅನ್ಯಾಯಗಳಿಗೆ ಅವಕಾಶವೀಯದೆಂದು ಹೇಳಲಾಗುವುದಿಲ್ಲ. ಪಾಳೆಯಗಾರಿಕೆಯಿಂದ ಪ್ರಜಾಪ್ರಭುತ್ವಕ್ಕೆ ಅದೇ ಪರಿವರ್ತಿತಗೊಳ್ಳುತ್ತಿರುವ ಸಮಾಜಗಳಲ್ಲಂತೂ ಆಡಳಿತ ವ್ಯವಸ್ಥೆ, ನ್ಯಾಯದಾನ ವ್ಯವಸ್ಥೆಗಳು ವಿಪುಲ ದೋಷಲೋಪಗಳಿಂದ ಕೂಡಿದುವಾಗಿವೆ. ಆ ಮಟ್ಟಿಗೆ ಸಮಸ್ಯಾ ಪರಿಹಾರಕ್ಕೆ ಭಯೋತ್ಪಾದನೆಯ ವಿಧಾನಕ್ಕೆ ಮರೆ ಹೋಗುವ ಸಂದರ್ಭಗಳುಂಟಾಗುತ್ತವೆ. ಅಲ್ಲದಿದ್ದರೆ ಆಂಧ್ರ, ಮಹಾರಾಷ್ಟ್ರ, ಮಧ್ಯ ಪ್ರದೇಶಗಳ ಗುಡ್ಡಗಾಡಿನ ನಕ್ಸಲೈಟರು, ಈಶಾನ್ಯ ಭಾರತದ ಭಯೋತ್ಪಾದಕರು ಅಸ್ತಿತ್ವದಲ್ಲಿರುವುದಕ್ಕೆ ಕಾರಣವಿರುತ್ತಿರಲಿಲ್ಲ.

**ಪ್ರಚೋದನೆ**

ಇದು ಭಯೋತ್ಪಾದನೆ ಜೀವನದ ಮಧ್ಯೆ ಸಹಜವಾಗಿ ಹುಟ್ಟಿಕೊಳ್ಳುವ ವಿಧಾನವಾದರೆ, ಅದೊಮ್ಮೆ ಹುಟ್ಟಿದ ಮೇಲೆ ಆದರಿಂದ ದುರುಪಯೋಗ ಪಡೆಯುವ ಹಿತಾಸಕ್ತಿಗಳೂ ಸಮಾಜದಲ್ಲಿರಬಹುದಾಗಿದೆ. ಕಳ್ಳ ವ್ಯಾಪಾರಿಗರು, ಅಫು-ಗಾಂಜಾ ವ್ಯವಹಾರಸ್ಥರು, ಒಮ್ಮೊಮ್ಮೆ ಸರಕಾರಗಳ ಗುಪ್ತಚಾರ ಸಂಸ್ಥೆಗಳು ಸಹ ಭಯೋತ್ಪಾದಕರ ದುರುಪಯೋಗ ಪಡೆಯುತ್ತವೆ. ಈ ವ್ಯವಹಾರ ಅತ್ಯಂತ ಲಾಭಪ್ರದವಾದುದರಿಂದ ಭಯೋತ್ಪಾದನೆಗೆ ಎಲ್ಲಿಲ್ಲದ ಪ್ರಚೋದನೆ ದೊರೆಯುತ್ತದೆ. ಮುಂಬಯಿ ನಗರದ ಭಯೋತ್ಪಾದಕ ಸಂಘಟನೆಗಳು, ಭಾರತ ಪಾಕಿಸ್ತಾನ ಗಡಿಗಳಲ್ಲಿ ನಡೆಯುವ ಮಾದಕ ಸರಕು ವ್ಯವಹಾರ, ಕೊನೆಗೆ ಪಾಕಿಸ್ತಾನ ಸರಕಾರದ ಐಸ್.ಎಸ್.ಐ. ಸಂಸ್ಥೆ ಇಂಥ ವಿದ್ಯಮಾನಗಳಿಗೆ ದೃಷ್ಟಾಂತವಾಗಿವೆ.

**ಕುಮ್ಮಕ್ಕು**

ರಾಷ್ಟ್ರಗಳ ಸೀಮೆಗಳಲ್ಲಿ ನಡೆಯುವ ಭಯೋತ್ಪಾದನೆಗೆ ಒಂದು ರಾಷ್ಟ್ರಕ್ಕೆದುರಾಗಿ ಇನ್ನೊಂದು ರಾಷ್ಟ್ರ ಪ್ರೋತ್ಸಾಹ, ಸಹಾಯ, ಸಹಕಾರಗಳನ್ನು ನೀಡುತ್ತಿದ್ದರೆ ಭಯೋತ್ಪಾದನೆ ಒಂದು ಗುಪ್ತ ಯುದ್ಧದ ಸ್ವರೂಪವನ್ನೇ ತಳೆಯತೊಡಗುತ್ತದೆ. ಆಂತರಿಕ ರಾಷ್ಟ್ರೀಯ ಸಮಸ್ಯೆಗಳೀಗ ಅಂತರರಾಷ್ಟ್ರೀಯ ಸಮಸ್ಯೆಗಳಾಗುತ್ತವೆ. ಕಾಶ್ಮೀರ ಸಮಸ್ಯೆ, ಇಸ್ರೇಲ್ - ಪ್ಯಾಲೆಸ್ತೀನ್ ಸಮಸ್ಯೆಗಳಂತಹ ಸಮಸ್ಯೆಗಳೇಳುವುದು ಈ ರೀತಿ. ಭಯೋತ್ಪಾದಕತೆಗೆ ಸರಕಾರಗಳ ನೆರವು ದೊರೆಯತೊಡಗಿದಾಗ ಸಮಸ್ಯೆಗೆ ಎಂದಿಲ್ಲದ ಭೀಕರತೆ ಬರುತ್ತದೆ. ಭಯೋತ್ಪಾದಕ ಗುಂಪುಗಳಿಗೆ ವಿಪುಲವಾದ ಹಣಕಾಸು, ಬೇಕಾದಷ್ಟು ಶಸ್ತ್ರಾಸ್ತ್ರ ತರಬೇತಿಯ ಅನುಕೂಲತೆ, ಸಾರಿಗೆ-ಸಂಪರ್ಕದ ಸಾಧನಗಳೆಲ್ಲ ಲಭ್ಯವಾಗುತ್ತವೆ. ಕಾಶ್ಮೀರದಲ್ಲಿ ನಡೆಯುತ್ತಿರುವ ಗಡಿಯಾಚೆಗಿನ ಭಯೋತ್ಪಾದಕತೆ ಇಂಥ ಅನುಕೂಲಗಳಿಲ್ಲದಿದ್ದರೆ ಸಾಧ್ಯವಾಗುತ್ತಿರಲಿಲ್ಲ. ಹಾಗೆಯೇ ಶ್ರೀಲಂಕಾದಲ್ಲಿ ನಡೆಯುತ್ತಿರುವ ಟೈಗರ್ ಹೋರಾಟ. ಜಗತ್ತಿನ ಎಷ್ಟು ರಾಷ್ಟ್ರಗಳಿಂದ ಟೈಗರ್ ಸಾಧನ ಸಾಮಗ್ರಿಗಳನ್ನು ಪಡೆಯುತ್ತಿದ್ದಾರೆಂಬುದನ್ನು ಗಮನಿಸಿದರೆ, ಭಯೋತ್ಪಾದಕತೆ ಹೇಗೆ ಒಂದು ವಿಶ್ವವ್ಯಾಪಿ ಜಾಲ ಹೊಂದಿದ ಜೇಡರಹುಳುವಾಗಿದೆಯೆಂದು ಸ್ಪಷ್ಟವಾಗುತ್ತದೆ. ಅಲ್ಲದೆ, ಈ ಮುಖಾಂತರ ಸಾಧ್ಯವಾಗುವ ಸಾಧನ-ಸಾಮಗ್ರಿ ಹಾಗೂ ಶಸ್ತ್ರಾಸ್ತ್ರಗಳ ವ್ಯವಹಾರದ ಮೊತ್ತದ ಅರಿವು ಬರುತ್ತದೆ. ಮೊದಲನೆಯ, ಎರಡನೆಯ ಮಹಾಯುದ್ಧಗಳಂತಹ ಯುದ್ಧ ನಡೆಯದಿದ್ದಾಗಲೂ ಅದೇ ಮಟ್ಟದ ಶಸ್ತ್ರಾಸ್ತ್ರ ಸಾಮಗ್ರಿಗಳ ಸರಬರಾಜಿನ ವ್ಯವಹಾರ ಈ ಭಯೋತ್ಪಾದನೆಯ ಜಗದ್ವ್ಯಾಪಿ ಜಾಲದ ಮೂಲಕ ಸಾಧ್ಯವಾಗುತ್ತಿರುವುದು ಕಂಡುಬರುತ್ತದೆ. ಪದೇ ಪದೇ ಬಾಜಾರಮಂದಿಯ ಸಮಸ್ಯೆಯನ್ನು ಎದುರಿಸಬೇಕಾಗುತ್ತಿರುವ ಜಾಗತಿಕ ಬಂಡವಾಳಶಾಹಿಗೆ ಇಂಥ ಅಪೂರ್ವವಾದ ವ್ಯಾಪಾರ-ವ್ಯವಹಾರ ಸಾಧ್ಯತೆ ನಗಣ್ಯವೆನಿಸೀತೆ ?

**ಹೊಸ ಅವಕಾಶಗಳು**

ಅಲ್ಲದೆ, ಹೀಗೆ ಶಸ್ತ್ರಾಸ್ತ್ರ ಪೂರೈಸುವ ಮೂಲಕ ಕಟ್ಟಿದ ಭಯೋತ್ಪಾದಕರ ಸೈನ್ಯಗಳ ಮೂಲಕ, ಹೊಸ ಶೋಷಣಾ ಕ್ಷೇತ್ರಗಳ ಲಭ್ಯತೆ ಸಾಧ್ಯವಿದ್ದರಂತೂ ಜಾಗತಿಕ ಬಂಡವಾಳಶಾಹಿ ಹಾತೊರೆದು ಕೈಚಾಚುವ ಸಾಧ್ಯತೆಗಳುಂಟಾಗುತ್ತವೆ. ಒಸಾಮ ಬಿನ್ ಲಾಡೆನ್ ಹಾಗೂ ಆತನ ಅಲ್ ಕಾಯಿದಾ ಆಗಲಿ, ತಾಲಿಬಾನ್‌ನಂತಹ ಅರೆಸೈನ್ಯ ಸಂಘಟನೆಯಾಗಲಿ ಅಫಘಾನಿಸ್ತಾನದಂತಹ ಆಯಕಟ್ಟಿನ ಸ್ಥಳದಲ್ಲಿ ನೆಲೆಸುವಂತೆ ಮಾಡಿರುವುದಕ್ಕೆ ಆಂಗ್ಲೋ-ಅಮೆರಿಕನ್ ಸಾಮ್ರಾಜ್ಯಶಾಹಿಗಳಿಗೆ ಇಂಥ ಯಾವುದೇ ಆರ್ಥಿಕ ಉದ್ದೇಶ ಇಲ್ಲವೆಂದು ಹೇಳುವುದು ಸಾಧ್ಯವೇ ? ಭಯೋತ್ಪಾದಕರನ್ನು ಚೆಚ್‌ನ್ಯಾವರೆಗೂ ಚಾಚುವುದರಲ್ಲಿ ಮಧ್ಯ ಏಷಿಯಾದ ಪ್ರಚಂಡ ಎಣ್ಣೆ ಹಾಗೂ ಗ್ಯಾಸ್ ಸಂಗ್ರಹಗಳ ತಾಬೇದಾರಿಕೆಯ 'ಸದುದ್ದೇಶ' ಇಲ್ಲವೆನ್ನಲಾದೀತೆ ? ಪಾಕಿಸ್ತಾನೀ ಸರ್ವಾಧಿಕಾರಿಗಳಿಗೆ ಕೇಳಿದಷ್ಟು ನೆರವಿತ್ತು ಈ ಪ್ರದೇಶವನ್ನು ಅರಬ್ಬೀ ಸಮುದ್ರದ ಅಂಚಿನವರೆಗೂ ತಮ್ಮ ವಶಕ್ಕಿಟ್ಟುಕೊಳ್ಳುವ ಸ್ಪಷ್ಟ ಉದ್ದೇಶ ಇಂದಿನ ಅಫಘಾನಿಸ್ತಾನದ "ಭಯೋತ್ಪಾದಕ ವಿರೋಧಿ" ಯುದ್ಧವೆಂಬ ಯುದ್ಧದಲ್ಲಿ ಎದ್ದು ಕಾಣುವುದಿಲ್ಲವೇ ? ಮಧ್ಯ ಏಷಿಯಾದ ಎಣ್ಣೆಗೆ ಅರಬ್ಬೀ ಸಮುದ್ರದವರೆಗೆ ಪೈಪ್ ಲೈನ್ ಹಾಕುವ ಅವಕಾಶ ದೊರೆತರೆ ಬಿಕ್ಕಟ್ಟಿನಲ್ಲಿರುವ ಜಾಗತಿಕ ಬಂಡವಾಳಶಾಹಿಗೆ ಎಂಥ ಮುಕ್ತಿ ದೊರೆತೀತು ? ಇದೆಲ್ಲವನ್ನೂ ನೆನೆಯುತ್ತಿದ್ದರೆ ಅಂತರರಾಷ್ಟ್ರೀಯ ಭಯೋತ್ಪಾದನೆ, ಸಾಮ್ರಾಜ್ಯಶಾಹಿ ಸಾಕಿದ ಕೂಸೇ ಎಂದು ಸ್ಪಷ್ಟವಾಗುತ್ತಿದೆ. ತಮ್ಮ ಕೂಸೇ ಈಗ ತಮ್ಮೆದುರಿಗೆ ಎದ್ದುನಿಂತು ಸಾಕಿದವರನ್ನೇ ಬೆದರಿಸುವ ದುರ್ಭರ ಸನ್ನಿವೇಶವನ್ನು ಅಮೆರಿಕೆ ಎದುರಿಸುತ್ತಿದೆ. ಅಮೆರಿಕದ ಮೇಲೆ ನಡೆದ ಭಯೋತ್ಪಾದಕ ಹಲ್ಲೆ, ಅಪೂರ್ವ ಹಿಂಸೆ, ನಷ್ಟಗಳನ್ನೇನೂ ಯಾರೂ ಬೆಂಬಲಿಸುತ್ತಿಲ್ಲ. ಅದೆಲ್ಲ ಖಂಡನೀಯವೇ. ಭಯೋತ್ಪಾದನೆಯಿಂದ ನಾಗರಿಕತೆಗೂ, ಪ್ರಜಾತಂತ್ರಕ್ಕೂ, ಸಮಾಜ ವಿಕಾಸಕ್ಕೂ ದೊಡ್ಡ ಅಪಾಯವೆಂಬಲ್ಲಿ ಎರಡು ಮಾತಿಲ್ಲ. ಭಯೋತ್ಪಾದನೆಯ ಫಲವಾಗಿ ಕಷ್ಟಕ್ಕೊಳಗಾದ ಅಮೆರಿಕದ ಜನತೆಯೊಡನೆ ಸಹಾನುಭೂತಿ ವ್ಯಕ್ತಪಡಿಸದವರಾರೂ ಇಲ್ಲ. ಅತಿ ಮೊದಲ ಮತ್ತು ಅತ್ಯಂತ ಕಳಕಳಿಯ ಸಹಾನು

> ಸರ್ಕಾರ ತನ್ನ ದೇಶದ ಸಾರ್ವಜನಿಕ ಅಭಿಪ್ರಾಯದ ಪರಿಶೀಲನೆಗೆ ಸತತ ಒಳಗಾಗಿರಬೇಕೆಂದು ನಾವು ಬಯಸುತ್ತೇವೆ.
>
> ಜನತೆಗೆ ಜವಾಬ್ದಾರಿಯುತ ಮುಂದಾಳುಗಳನ್ನು ತಾವೇ ಆರಿಸಿಕೊಳ್ಳುವ ಹಕ್ಕಿರಬೇಕು. ಅವರನ್ನು ಬದಲಾಯಿಸುವ ಅವರ ಪ್ರತಿಯೊಂದು ಚಿಕ್ಕ ವರ್ತನೆಯನ್ನು ತಿಳಿಯುವ ಮತ್ತು ಪರೀಕ್ಷಿಸುವ ಹಕ್ಕು ಜನತೆಗೆ ಇರಬೇಕು. — ವಿ. ಐ. ಲೆನಿನ್

ಭೂತಿ ವ್ಯಕ್ತಪಡಿಸಿದವರೇ ಅಮೆರಿಕದ ಭಯೋತ್ಪಾದನೆಯ ಬಲಿಪಶು ಡಾ॥ ಫಿಡೆಲ್ ಕ್ಯಾಸ್ಟ್ರೋ ಆಗಿದ್ದರು. ಆದರೆ, ಎಲ್ಲರಿಂದಲೂ ನೆರವು ಕೇಳುವ ಅಧ್ಯಕ್ಷ ಬುಷ್ ಹಾಗೂ ಪ್ರಧಾನಿ ಬ್ಲೇರ್ ಈ ವಿಷಯದಲ್ಲಿ ಎಷ್ಟು ಪ್ರಾಮಾಣಿಕರಾಗಿದ್ದಾರೆ ? ಭಯೋತ್ಪಾದನೆಯಲ್ಲೂ ತಮ್ಮದು - ಬೇರೆಯವರದು, ಒಳ್ಳೆಯದು-ಕೆಟ್ಟದ್ದು, ಅಮೆರಿಕದ್ದು-ಕಾಶ್ಮೀರದ್ದು ಇತ್ಯಾದಿ ಭೇದ ಭಾವ ಮಾಡುವುದನ್ನೂ, ದ್ವಂದ್ವ ಮಾನದಂಡ ಪ್ರಯೋಗಿಸುವುದನ್ನೂ ನಿಲ್ಲಿಸಿದ್ದಾರೆಯೇ ? ಮುಂದಿನ ಇತಿಹಾಸವೇ ಅದನ್ನು ನಿರ್ಧರಿಸಬೇಕಾಗಿದೆ.

**ಪ್ರಾಮಾಣಿಕತೆ**

ಭಾರತ-ರಷ್ಯಾಗಳು ಕೇಳುತ್ತಿರುವಂತೆ "ಭಯೋತ್ಪಾದನೆ, ಎಲ್ಲಿದ್ದರೂ ಅದನ್ನು ನಾಗರಿಕತೆಗೆ, ಸಂಸ್ಕೃತಿಗೆ ಮಾನವ ಭವಿಷ್ಯಕ್ಕೆ ಶತ್ರುವೆಂದು ಪರಿಗಣಿಸಿ" ಇಂದಿನ ಭಯೋತ್ಪಾದಕ ವಿರೋಧಿ ಹೋರಾಟ ನಡೆಯಬೇಕಿದೆ. ಆ ಮಾತಿಗೆ ಸಂಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ವಿಸ್ತೃತ ಬೆಂಬಲ ದೊರಕುತ್ತಲಿದೆ. ಭಯೋತ್ಪಾದಕರೀಗ ಬಯೋ ಬಾಂಬ್, ಕೆಮಿಕಲ್ ಬಾಂಬ್, ಬೀಜಾಣು ಬಾಂಬ್ ಕೂಡ ಪಡೆಯುವ ಸಾಧ್ಯತೆಗಳುಂಟೆಂದು ಪ್ರೆಸಿಡೆಂಟ್ ಬುಷ್ ಸ್ವತಃ ಒಪ್ಪುತ್ತಾರೆ. ಅವರಲ್ಲೇ ಇವೆಲ್ಲಾ ಇವೆ; ಬೇರೆಯವೂ ಇವೆ. ಆದ್ದರಿಂದ ಭಯೋತ್ಪಾದನೆಗೆ ಅವಕಾಶವಿಲ್ಲದ ಸಾಮಾಜಿಕ-ರಾಜಕೀಯ ಏರ್ಪಾಡುಗಳನ್ನು ನಿರ್ಮಿಸಿಕೊಳ್ಳುವ ಅಗತ್ಯ ಮನುಷ್ಯ ಕುಲಕ್ಕೀಗ ಇದೆ. ಇಂಥ ಏರ್ಪಾಡುಗಳಾದರೆ, ಇಸ್ರೇಲ್ - ಪ್ಯಾಲೆಸ್ತೀನ್ ಕ್ಷೇತ್ರದಲ್ಲಾಗಲಿ, ಇಂಡೋ-ಪಾಕ್ ಗಡಿಯಲ್ಲಾಗಲಿ, ಶ್ರೀಲಂಕಾ ಮಧ್ಯೆಯಾಗಲೀ ಭಯೋತ್ಪಾದಕ ವಿಧಾನಗಳಿಗೆ ಅವಕಾಶವಿರುವುದಿಲ್ಲ. ಅಮೆರಿಕದ ಶ್ರೀಮಂತ ಸಮಾಜವನ್ನು ಕಂಡು ಕರಬುವ ಯಾವ ಜನಾಂಗಗಳೂ ಭೂಮಿಯ ಮೇಲೆ ಉಳಿದಿರುವ ಅಗತ್ಯವಿರುವುದಿಲ್ಲ. ಅಷ್ಟೇ ಅಲ್ಲ, ಅಮೆರಿಕದಲ್ಲೇ ಕೆಲವೇ ಕಾರ್ಪೊರೇಷನ್‌ಗಳ ಶ್ರೀಮಂತಿಕೆಯ ರಕ್ಷಣೆಗೋಸ್ಕರ ೨೨ ಲಕ್ಷ ಅಮೆರಿಕನ್ ಶ್ರಮಿಕರು, ಮಧ್ಯಮವರ್ಗೀಯರು ಹಾಗೂ ಬುದ್ಧಿಜೀವಿಗಳು ಉದ್ಯೋಗಹೀನರಾಗಬೇಕಾದ ಅಗತ್ಯವಿರುವುದಿಲ್ಲ. ಈ ದಿಸೆಯಲ್ಲಿ ಮುನ್ನಡೆಯುವ ಪ್ರವೃತ್ತಿ ಈಗಲೂ ಕಂಡುಬರುತ್ತಿರುವುದಿಲ್ಲವಲ್ಲ ? ಬುಷ್‌ರವರ ವೀರಾವೇಶ ಯುದ್ಧ ಪ್ರಯತ್ನದ ಮೂಲಕ ಈ ತನಕ ಏನನ್ನು ಸಾಧಿಸಿದೆ ? ಎಷ್ಟು ಭಯೋತ್ಪಾದಕರನ್ನು ಹಿಡಿದು ಕೊಲ್ಲಲಾಯಿತು ? ಅಫಘಾನಿಸ್ತಾನದಲ್ಲಿ ಸತ್ತವರು ಹಾಗೂ ಸಾಯುತ್ತಿರುವವರ ಪೈಕಿ ಈ ತನಕ ಯಾರನ್ನೂ ಭಯೋತ್ಪಾದಕರೆಂದು ಗುರುತಿಸಲು ಸಾಧ್ಯವಾಗಿರುವುದಿಲ್ಲ. ಸಾಯುತ್ತಿರುವವರೆಲ್ಲ ಸಾಮಾನ್ಯ ಅಫಘಾನ್ ರೈತರು, ಕೂಲಿಕಾರರು, ಬುದ್ಧಿಜೀವಿಗಳು, ಬಡವರು, ಮಕ್ಕಳು, ತಾಯಂದಿರು, ವೃದ್ಧರು, ರೋಗಗ್ರಸ್ತರು ಮಾತ್ರ. ಆಸ್ತಿ ಹಾಳಾಗುತ್ತಿದೆ. ಬೇಕಾದಷ್ಟು ಬಾಂಬ್ ಸುರಿಮಳೆಯಾಗುತ್ತಿದೆ. ಅಮೆರಿಕದ ಯುದ್ಧ ಸಾಮಗ್ರಿಯ ಸಂಗ್ರಹವೆಲ್ಲ ತೀರಿ ಹೊಸ ಬಾಂಬ್ ತಯಾರಿಕೆಗೆ ಆರ್ಡರ್ ಕೊಡುವ ಅಗತ್ಯವುಂಟಾಗುತ್ತಿದೆ. ಕಾರ್ಪೊರೇಷನ್‌ಗಳಿಗೆ ಹೋಗಿ ಸಾಮಗ್ರಿ ತಯಾರಿಸಲು ಹೊಸ ಆರ್ಡರುಗಳು, ಹಾಳಾದ ಪ್ರದೇಶವನ್ನು ಪುನರ್ರಚಿಸಲು ಹೊಸ ಕನ್‌ಸ್ಟ್ರಕ್ಷನ್ ಆರ್ಡರ್‌ಗಳು – ಅಂತೂ ಜಾಗತಿಕ ಬಂಡವಾಳಶಾಹಿಯ ಮರಣಾಂತಿಕ ಬಿಕ್ಕಟ್ಟಿಗೆ ಪರಿಹಾರ ಪಡೆಯುವ ಪ್ರಯತ್ನ! ಬಿದ್ದು ಹೋಗಬೇಕಾದ ಬಂಡವಾಳಶಾಹಿ ಇನ್ನೂ ಸಾವಿರ ವರ್ಷ ಬದುಕುವ ಹಾಗೆ ಮಾಡುವ ಪ್ರಯತ್ನ. ಇದೀಗ ಆಂಗ್ಲೋ-ಅಮೆರಿಕನ್ ಸಾಮ್ರಾಜ್ಯಶಾಹಿಗಳ ಭಯೋತ್ಪಾದನ-ವಿರೋಧಿ ಹೋರಾಟದ ಸಾರಾಂಶವೆಂದು ತೋರುತ್ತದೆ.

**ಶಾಂತಿ**

ಆದರೆ ಜಗತ್ತಿಂದು ಬೇಡುತ್ತಿರುವುದು ಶಾಂತಿ - ಸಾಮಾಜಿಕ ಅಭಿವೃದ್ಧಿಗೆ ಅವಕಾಶ. ಪ್ರಚಂಡ ಶಕ್ತಿ-ಸಾಮಗ್ರಿಗಳನ್ನು ವಿಜ್ಞಾನವಿಂದು ಮಾನವನ ವಶಕ್ಕೆ ಕೊಟ್ಟಿದೆ. ಮನುಷ್ಯನೀಗ ಅನಾಗರಿಕ ಬಾಳು ನಡೆಸುವ ಒತ್ತಾಯಕ್ಕೆ ಒಳಗಾಗಿಲ್ಲ. ಆದರೆ, ಮಾನವೀಯ ಸಂಪತ್ತು ಸಾಮ್ರಾಜ್ಯಶಾಹೀ - ಬಂಡವಾಳಶಾಹಿಯ ಸ್ವಾರ್ಥಹಿತದ ಹಿಡಿತದಿಂದ ಪಾರಾಗುವ ಅಗತ್ಯವಿದೆ. ಮತ್ತೆ ಬಾಲ್ಶೆವಿಕ್ ಕ್ರಾಂತಿಯಂತಹ ಒಂದು ಕ್ರಾಂತಿ ಅಮೆರಿಕದಲ್ಲೇ ಸಂಭವಿಸಬೇಕಿದೆ. ಅಮೆರಿಕದ ಜನತೆಗೆ ಸೆಪ್ಟೆಂಬರ್ ೧೧ರ ದುರ್ಭರ ಪ್ರಸಂಗ ಅದನ್ನು ನೆನಪಿಗೆ ತರುವುದೆಂದು ಹಾರೈಸೋಣ.

ಪಿ. ಎಸ್. ಪಾಟೀಲ
ವಕೀಲರು, ಅಕ್ಕಮಹಾದೇವಿ ಕ್ರಾಸ್ ರೋಡ್, ಬಿಜಾಪುರ-೫೮೬ ೧೦೧

ಬೀರಣ್ಣ ಗೊಂದಲಪುರ



# ಪರಂಪರೆ ಅಗೆಯುವ ಮಂದಿ

ಗುಂಡೇಶ್ವರನ ಜಾತ್ರೆ, ಗೊಂದಲಪುರದವರ ಮಾತುಗಳಲ್ಲೇ ಹೇಳುವುದಾದರೂ, ಸಖತ್ ಆಗಿ ನಡೆಯಿತು. ಗುಂಡಯ್ಯನ ಭಕ್ತರು ಸುತ್ತಮುತ್ತಲ ಊರುಗಳಿಂದ ಹುಚ್ಚೆದ್ದು ಧಾವಿಸಿ ಬಂದರು. ಅಂದು, ದೂರದಿಂದ ನೋಡಿದವರಿಗೆ ಗುಡ್ಡಕ್ಕೆ ಹಳದಿ ಚಿಟ್ಟೆಗಳು ಮುತ್ತಿದಂತೆ ಕಂಡಿದ್ದರೆ ಆಶ್ಚರ್ಯವೇನಿಲ್ಲ. ನೀರಾ, ಹೆಂಡ, ಸಾರಾಯಿ ಗುಂಡಯ್ಯನ ದಯೆಯಿಂದ ನೀರಿನಂತೆ ಹರಿದಾಡಿತಂತೆ !

ಜಾತ್ರೆಗೆ ಪ್ರೇರಕರಾದ ಮಾಂತಪ್ಪ, ಸಿದ್ದೇಶ್ವರಾನಂದಜಿ, ಈರಭದ್ರ, ಚೆನ್ನೀರ – ಮುಂತಾದ ಭಕ್ತ ಗಣಂಗಳು ಜಾತ್ರೆ ಇಷ್ಟು ಅದ್ದೂರಿಯಾಗಿ ನಡೆಯಬಹುದೆಂದು ಊಹಿಸಿರಲಿಲ್ಲ! ಪ್ರಾಯಶಃ ಅವರ ಹೆಮ್ಮೆಯ ಕೋಡು ಸ್ವಲ್ಪ ಚಿಗುರಿರಲೂಬಹುದು. ಮುಂದಿನ ವರ್ಷದಿಂದ ದೇವರಿಗೆ ಗುಂಡಿನ ಹರಕೆ ಹೊರುವ ಸಂಪ್ರದಾಯವನ್ನು ರೂಢಿಗೆ ತರಬೇಕೆಂಬ ಅಪೂರ್ವ ಆಲೋಚನೆ ಮಾಂತಪ್ಪನ ತಲೆಯಲ್ಲಿ ಸುಳಿಯಿತು. ಅದರ ಯಶಸ್ಸಿನ ಮೇಲೆ ಈಗಲೇ ಬಾಜಿ ಕಟ್ಟಬಹುದು ! ಸಂಪ್ರದಾಯಗಳು ಪ್ಲೇಗಿಗಿಂತಲೂ ಹೆಚ್ಚು ಶೀಘ್ರವಾಗಿ ಹರಡುವುದು ನಮ್ಮ ದೇಶದ ಹಣೆಬರಹವಲ್ಲವೆ !

ಜಾತ್ರೆಯನ್ನು ಬಿಬಿಸಿ, ಸಿಎನ್‌ಎನ್‌ನಂಥ ವಿದೇಶಿ ಚಾನೆಲ್‌ಗಳೂ ಪ್ರಸಾರ ಮಾಡಿದುವಂತೆ. ಅದನ್ನು ನೋಡಿ ಆನಂದಿಸುವ ಭಾಗ್ಯ ಗೊಂದಲಪುರದವರಿಗೆ ಲಭ್ಯವಿಲ್ಲ. ಕರೆಂಟು ಮನುಷ್ಯರ ರಕ್ತ ಹೀರಿ ಹಿಪ್ಪೆ ಮಾಡಿಬಿಡುತ್ತದೆ ಎಂದೇ ಈಗಲೂ ನಂಬಿರುವ ಅವರು, ತಮ್ಮ ಮನೆಗಳಿಗೆ ಭಾಗ್ಯಜ್ಯೋತಿ ದೀಪ ಹಾಕಿಸಿಕೊಳ್ಳದೆ, ದೇವರ ಕತ್ತಲೆ ಹೋಗಲಾಡಿಸಲು ಹನುಮಂತನ ಗುಡಿಯ ಗೋಪುರಕ್ಕೆ ಕರೆಂಟು ಎಳೆಸಿ ಒಂಟಿ ದೀಪ ಹಾಕಿಸಿದ್ದಾರೆ !

ಜಾತ್ರೆಯಿಂದ ಗೊಂದಲಪುರದವರಿಗೆ ಮತ್ತೊಂದು ಲಾಭವೂ ಆಗಿದೆ. ಸುತ್ತಲಿನ ಹಳ್ಳಿಗರ ದೃಷ್ಟಿಯಿಂದ ಗೊಂದಲಪುರದವರ ಘನತೆ ರವಷ್ಟು ಹೆಚ್ಚಾಗಿದೆ. ಸಂತೆಯಲ್ಲೋ, ಬಸ್ಸಿನಲ್ಲೋ ಸಿಕ್ಕಿದಾಗ 'ಚೆಂದಾಗಿದ್ದೀರಾ ?' ಎಂದು ತುಂಬಾ ಗೌರವದಿಂದ ಮಾತನಾಡಿಸುತ್ತಾರೆ. ಈ ಗೌರವ ಹೀಗೇ ಉಳಿಯಬೇಕೆಂದು ಬಯಸುವುದು ಸಹಜವಷ್ಟೆ. ಮುಂದಿನ ವರ್ಷದಿಂದ ಗುಂಡಯ್ಯನ ಜಾತ್ರೆಯನ್ನು ಶಾಸಕರು, ಮಂತ್ರಿಗಳನ್ನು ಕರೆಸಿ ಮತ್ತಷ್ಟು ಭರ್ಜರಿಯಾಗಿ ನಡೆಸುವುದೆಂದು ಈಗಿನಿಂದಲೇ ಸಿದ್ಧತೆ ಮಾಡುತ್ತಿದ್ದಾರೆ. ಈ ವಿಷಯ ಗ್ರಾಮ ಪಂಚಾಯಿತಿ ಸಭೆಯಲ್ಲಿ ಚರ್ಚೆಗೆ ಬಂದಾಗ, ಸದಸ್ಯೆ ಚೆಲುವಕ್ಕನ ಆಕ್ಷೇಪವನ್ನು ಸಾರಾಸಗಟು ನಿರಾಕರಿಸಲಾಯಿತಂತೆ.

ಗುಲ್ಲೂರಿನ ಯುವ ಸಂಶೋಧಕರೊಬ್ಬರು 'ಜನ ಮರುಳೋ ಜಾತ್ರೆ ಮರುಳೋ !' ಎಂಬ ಗಾದೆ ಸ್ವತಃ ಗೊಂದಲಪುರದಿಂದಲೇ ಹುಟ್ಟಿದ್ದು ಎಂಬುದನ್ನು ರುಜುವಾತುಪಡಿಸುವ ಹಂತದಲ್ಲಿದ್ದಾರಂತೆ ! ಗೊಂದಲಪುರದವರ ಹೆಮ್ಮೆಗೆ ಮತ್ತೂ ಒಂದು ಕೋಡು !

ಜಾತ್ರೆಯ ನಂತರವೂ ಒಂದು ವಾರ ಸಿದ್ದೇಶ್ವರಾನಂದಜಿ ಗುಡಿಯಲ್ಲೇ ಉಳಿದಿದ್ದಾಗ ಒಂದು ಅದ್ಭುತ ನಡೆಯಿತು. ಒಂದು ಬೆಳದಿಂಗಳ ರಾತ್ರಿ ಗುಡ್ಡದ ಬುಡದಲ್ಲಿ ನರಿಗಳು ಊಳಿಡುತ್ತ ನಿದ್ದೆ ಕೆಡಿಸಿದವು. ಜಾತ್ರೆಯ ಅಮಲು ಸಂಪೂರ್ಣ ಇಳಿದಂತಾಯಿತು. ಛೇ, ಇದೆಂಥ ಬದುಕು ಎನಿಸಿ ಎದ್ದು ಕುಳಿತೇಬಿಟ್ಟ. ಸಿದ್ಧಾರ್ಥನಿಗೆ ಬಂದಂಥದೇ ವೈರಾಗ್ಯ ! ಅದು ಮೈ ಕೊರೆವ ಚಳಿಯಂತೆ ಬೆರಳುಗಳಿಂದ ಮೂಲಾಧಾರ ನಾಡಿಯ ಮೂಲಕ ಶಿಖರಕ್ಕೇರಿ ಸುಷುಪ್ತಿ ತಲುಪಿದಂತಾಯಿತು. ಚೆಲುವಕ್ಕನ ಕೈನ ಬಿಸಿಬಿಸಿ ಮುದ್ದೆ, ಗಮಗಮ ಮಸ್ಸೊಪ್ಪಿನ ಸಾರಿನ ನೆನಪಿನಿಂದ ನಾಲಿಗೆಯಲ್ಲಿ ನೀರೂರಿತು. ವೈರಾಗ್ಯವನ್ನು ಒದರಿ ಎಸೆಯಲು ಪ್ರಯತ್ನಿಸಿದಷ್ಟೂ ಅಮರಿಕೊಳ್ಳತೊಡಗಿತು. ಛೇ, ಛೇ ಎಂದು ಲೆಕ್ಕವಿಲ್ಲದಷ್ಟು ಬಾರಿ ಲೊಚಗುಟ್ಟಿದ. ಇನ್ನೂ ಬೆಳಕಾಗಿರಲಿಲ್ಲ. ಕಂಬಳಿ ಒದರಿ ಹೆಗಲ ಮೇಲೆ ಹಾಕಿಕೊಂಡು ಹೊರಟೇಬಿಟ್ಟ.

* * *

ಮುಂದಿನ ಕೆಲವು ದಿನಗಳಲ್ಲಿ ಗೊಂದಲಪುರದವರನ್ನೇ ಗೊಂದಲದಲ್ಲಿ ಬೀಳಿಸಿದ ವಿದ್ಯಮಾನಗಳು ನಡೆಯತೊಡಗಿದವು.

ಸುಮಾರು ಹತ್ತಿಪ್ಪತ್ತು ಜನ ಧಾಂಡಿಗರ ಗುಂಪೊಂದು ಗುಂಡಯ್ಯನ ತೊರೆ ಅಗೆದು ಏನೋ ಹುಡುಕಾಡುತ್ತಿರುವ ಸುದ್ದಿ ತಿಳಿದು ಊರಿನವರು ಆತಂಕಗೊಂಡರು. ಆ ತೊರೆಯಲ್ಲಿ ನೀರು ಹರಿದದ್ದನ್ನು ಯಾರೂ ಕಂಡವರಿಲ್ಲ. ಅಂಥದ್ದರಲ್ಲಿ ಈಗ ಏಕಾಏಕಿ ಯಾರೋ ಅಗೆದು ಆಳ ಮಾಡುತ್ತಿದ್ದಾರೆಂದರೆ ಏನರ್ಥ ! ಈ ಸರಕಾರಿ ಅಧಿಕಾರಿಗಳ ವರಸೆಯೇ ಇಷ್ಟು. ಗ್ರಾಮಸ್ಥರಿಗೆ ತಿಳಿಸದೇನೇ ಕಾಮಗಾರಿ ಶುರು ಮಾಡಿಬಿಡುತ್ತಾರೆ. ಆದರೆ ಗೊಂದಲಪುರದವರನ್ನು ಕೂಲಿಗೆ ಕರೆಯದಿರಲು ಕಾರಣವೇನು ? ಕಂತ್ರಾಟುದಾರ ಆತನ ಕಡೆಯವರನ್ನೇ ಕೆಲಸಕ್ಕೆ ಕರೆತಂದಿರಬಹುದೆ ? ಇದೊಳ್ಳೆ ರಾಜಕೀಯ ಆಯಿತಲ್ಲ ಎಂದು ಬೇಸರದಿಂದ ಗೊಣಗಿಕೊಂಡರು.

ಕೆಲವರು ಕುತೂಹಲ ತಡೆಯಲಾರದೆ ಗುಂಡಯ್ಯನ ತೊರೆಯ ಕಡೆಗೆ ಹೋಗಿ ಬಂದರು. ಅಲ್ಲಿ ನೋಡಿದರೆ ಮಣ್ಣುಗೆಲಸ ಮಾಡುತ್ತಿದ್ದವರೆಲ್ಲ ಇಂಗ್ಲಿಷ್-ಗಿಂಗ್ಲಿಷ್ ಕಲಿತವರು. ಮಣ್ಣು ಹೊರುತ್ತಿದ್ದವರು ಷರಾಯಿ - ಅಂಗಿ ಧರಿಸಿದ್ದ ಯುವತಿಯರು. ಈ ವಿಷಯ ತಿಳಿದಾಗ ಗೊಂದಲಪುರದವರೆಲ್ಲರ ಎದೆಬಡಿತ ಒಮ್ಮೆಲೆ ನಿಂತಷ್ಟು ಆಶ್ಚರ್ಯವಾಯಿತು.

ಹಿಂದಿನಿಂದ ಹಲವು ವದಂತಿಗಳು ಹುಟ್ಟಿಕೊಂಡವು. ಈ ಕಾಮಗಾರಿಯಿಂದ ಗೊಂದಲಪುರದವರಿಗೆ ಒಂದು ಹನಿ ನೀರೂ ಸಿಕ್ಕುವುದಿಲ್ಲವಂತೆ, ಗುಂಡಯ್ಯನ ಬಂಡೆಯನ್ನೂ ಬುಡಸಹಿತ ಕಿತ್ತು ಅಮೆರಿಕದ ಬುಷ್ಷರಿಗೆ ಕಳಿಸಿಕೊಡುತ್ತಾರಂತೆ, ಈ ಹಿಂದೆ ಅಲ್ಲಿ ವಾಸಿಸಿದ್ದ ಜನರು ಅಪಾರ ಸಂಪತ್ತನ್ನು ಅಲ್ಲಿ ಹೂತಿಟ್ಟಿದ್ದು, ಅದನ್ನೀಗ ಅಗೆದು ತೆಗೆಯುತ್ತಿದ್ದಾರಂತೆ. ಅಗೆಯುವ ಮಂದಿ ಕೆಲಸಕ್ಕೆ ಮೊದಲು ಭಜನೆ ಮಾಡುತ್ತಾರಂತೆ, ಗಂಗಾಜಲ ಚಿಮುಕಿಸಿಕೊಳ್ಳುತ್ತಾರಂತೆ !

ನಾವೂ ಒಂದು ಕಡೆ ಅಗೆದರೆ ಚೂರುಪಾರು ಸಂಪತ್ತು ಸಿಕ್ಕಬಹುದಲ್ಲವೆ ಎಂದು ಕೆಲವರ ಮನಸ್ಸಿನಲ್ಲಿ ಆಸೆ ಚಿಗುರಿತು. ಈವರೆಗೆ ಗುಂಡಯ್ಯನ ಗುಡ್ಡ ತಮ್ಮದೇ ಎಂದು ಬೀಗುತ್ತಿದ್ದ ಗೊಂದಲಪುರದವರು ಈಗ ಅದರ ಮೇಲೆ ಹಕ್ಕು ಸಾಧಿಸಲು ಯಾರೋ ಬಂದಿರುವರೆಂದು ಗಾಬರಿಗೊಂಡರು. ಅವರ ಜೊತೆಗೆ ಈ ಪೂಜಾರಿ ಮಾಂತಪ್ಪ, ಈರಭದ್ರ, ಸಿದ್ದೇಶ್ವರಾನಂದಜಿಯಂಥವರೂ ಶಾಮೀಲಾಗಿದ್ದಾರಂತೆ ಎಂಬುದು ತಿಳಿದ ನಂತರ ಎಲ್ಲರ ಹೊಟ್ಟೆಗೆ ಬೆಂಕಿ ಬಿದ್ದಂತಾಯಿತು. ಏನಾದರಾಗಲಿ ಒಂದು [illegible] ನೋಡಿಯೇ ಬಿಡೋಣವೆಂದು ತೀರ್ಮಾನಿಸಿದರು. 'ಗುಂಡಯ್ಯನ ಗುಡ್ಡ ರಕ್ಷಣೆ ಸಮಿತಿ' ರಚಿಸಿ

ಹೋರಾಟ ಪ್ರಾರಂಭಿಸುವ ಮೊದಲು ಊರ ಯಜಮಾನ ಗುರುವಜ್ಜನನ್ನು ಅಲ್ಲಿಗೆ ಕಳಿಸಿ ನಿಜ ಮಾಹಿತಿ ತಿಳಿದು ಬರತಕ್ಕದ್ದೆಂದು ತೀರ್ಮಾನಿಸಲಾಯಿತು.

ಗುರುವಜ್ಜನೇನೋ ಹೋಗಿ ಬಂದ. ಮತ್ತಷ್ಟು ಗೊಂದಲದ ಮಾಹಿತಿ ತಂದ. ''ಅವ್ರೇನೂ ಕಾಲ್ವೆ ತೋಡ್ತಾ ಇಲ್ಲ. ಬಂಡೇನೂ ಉರುಳಿಸ್ತಾ ಇಲ್ಲ. ಏನ್ಮಾಡ್ತಾ ಇದ್ದೀರಪ್ಪ ಅಂದೆ. ಪರಂಪ್ರೆ ಅಗಿತಾ ಇದೀವಿ ಕಣಜ್ಜ ಅಂದ್ರು. ಅದೇನ್ರಪ್ಪ ಅಂಗಂದ್ರೆ ಅಂದೆ. ಇತಿಯಾಸ ಉಡುಕ್ತ ಇದ್ದೀವಿ ಅಂದ್ರು. 'ಥೂ ನಿಮ್ ಮನೆ ಕಾಯಾ ಗೋವ್ರ, ಏನೋ ಯತ್ಲೋ ಅಂತ ಎದರ್ಕಂಡಿದ್ವಲ್ಲ' ಅಂತ ಮನಸ್ನಲ್ಲೆ ಅಂದ್ಕಂಡು, ಗುಂಡೇಶ್ವರ ನಿಮ್ಗೆ ಒಳ್ಳೇ ದ್ಮಾಡ್ಲಿ ಅಗೀರಪ್ಪ ಅಂದೆ. ಅಗಿಲಿ ಬುಡಿ ನಮ್ದೇನೋಯ್ತದೆ ಗಂಟು ?'' ಎನ್ನುತ್ತ ಎಲೆ ಅಡಿಕೆ ಚೀಲ ಬಿಚ್ಚಿದ.

ಒಬ್ಬರ ಮುಖ ಒಬ್ಬರು ನೋಡಿಕೊಂಡರು. ''ಚಿನ್ನದ್ ಗಟ್ಟೇನೋ ವಜ್ರಾನೋ ಅಗಿತಾರೆ ಅಂತ ನಾವಂದ್ಕಂಡಿದ್ರೆ ಅದೇನೋ ಪರಂಪ್ರೆ ಅಗೀತಾ ಅವ್ರೆ ಅಂತಿಯಲ್ಲ ಯಜಮಾನ. ಅದೇನ್ ಅಂಗಂದ್ರೆ ?'' ಎಂದು ಸಿಂಗ್ರಿ ಧೈರ್ಯ ಮಾಡಿ ಕೇಳಿದ.

ಅಷ್ಟರಲ್ಲಿ ಯಜಮಾನ ಬಾಯಿಗೆ ಹೊಗೆಸೊಪ್ಪು ತುಂಬಿಬಿಟ್ಟಿದ್ದ.

ಆಗ, ಊರದೇವರು ಹನುಮಂತನೇ ಒಳ್ಳೆ ಬುದ್ಧಿ ಕೊಟ್ಟು ಕರೆತಂದವನಂತೆ ಈರಾಂಜಣೆ ಗುಲ್ಬೂರಿನಿಂದ ಬಂದ. ಅವನಿಗೆ ಸಾಕಷ್ಟು ಬಾಯುಪಚಾರ ನಡೆಯಿತಲ್ಲದೆ, ಬಂಗಾರಿ ಅಂಗಡಿಯಿಂದ ಬಿಸಿಬಿಸಿ ಟೀ ತರಿಸಲು ಹುಡುಗನೊಬ್ಬನನ್ನು ಓಡಿಸಿದರು.

ಅಲ್ಲಿ ನೆರೆದಿದ್ದವರ ಗಾಬರಿಗೆ ಕಾರಣ ತಿಳಿದ ಈರಾಂಜಣೆ. ಅದೇನೂ ತಲೆ ಹೋಗುವ ವಿಷಯವಲ್ಲ ಎಂದು ಅವರಿಗೆ ಧೈರ್ಯ ತುಂಬುವಂತೆ, ಊರಿನವರನ್ನು ಛೇಡಿಸಲು ಈ ಸಂದರ್ಭ ಬಳಸಿಕೊಂಡು ''ನಿಮ್ ಬುದ್ಧೀಗೆ ಏನೇಳಾನ ! ಲೋಕ್ದಲ್ಲಿಲ್ದೆ ಇರೂ ತಲೆಯರ್ಟೆ ಮಾಡ್ತೀರಿ, ನಮ್ ಪರಂಪ್ರೆ, ಇತಿಯಾಸ ಅಂದ್ರೆ ಗೊತ್ತಿಲ್ಲ. ನಮ್ ಪರಂಪ್ರೆ ಅಂದ್ರೆ ಸಂಸುಕ್ರುತಿ ಅಂತ. ಗೊತ್ತಾಯ್ತ ?''

ಬೇವಿನಕಟ್ಟೆ ಕಕ್ಕಾಬಿಕ್ಕಿಯಾಯಿತು. ತಿಮ್ಮ ತಲೆ ಕೆರೆದು ಕೊಳ್ಳುತ್ತ ''ಅದೇನಣ್ಣ ಅದು ಸಂಸು ಕ್ರುತಿ ಅಂದ್ರೆ. ನಿನ್ ಚಿನ್ನ ಬೆಳ್ಳಿಗಿಂತ, ವಜ್ರಕ್ಕಿಂತ ಬೆಲೆ ಜಾಸ್ತೀನ ?'' ಎಂದ.

''ನಿನ್ ತಲೆಕಣ್ಲಾ. ಪರಂಪ್ರೆ, ಇತಿಯಾಸ, ಸಂಸುಕ್ರುತಿ ಅಂದ್ರೆ ಅದೊಂದ್ ಕ್ವಾಲಿಪಿಕೇಸನ್ನು ! ಅದೊಂದ್ ಇದ್ಯೆ. ನಮ್ ತಾತ ಮುತ್ತಾತ, ಅದಕ್ಕಿಂತೂ ಇಂದಿನೋವ್ರು ಎಂಗೆ ಬದ್ಕಿ ಬಾಳಿದ್ರು, ಯಾವ ದೇವ್ರಿಗೆ ಕೈ ಮುಗಿತಿದ್ರು, ಯಾವ್ ಜಾತ್ರೆ ಮಾಡ್ತಿದ್ರು, ಸತ್ತೋರ್ನ ಎಂಗೆ ಊತಾಕ್ತಿದ್ರು ಅನ್ನೂದ್ನೆಲ್ಲ ರಿಚರ್ಚ್ ಮಾಡೂದು ಅಂತ. ಗೊತ್ತಾಯ್ತ ?''

ಅವರಿಗೆ ಮತ್ತಷ್ಟು ಗಾಬರಿಯಾಯಿತು. ಅಲ್ಲಿಂದ ಕಿತ್ತುಕೊಂಡು ಓಡಿಬಿಡಬೇಕ್ನೆನಿಸಿತು ತಿಮ್ಮನಿಗೆ.

ಹೊಗೆಸೊಪ್ಪಿನಿಂದಲ್ಲ , ಈರಾಂಜಣೆಯ ಮಾತಿನಿಂದ ಗುರುವಜ್ಜನ ತಲೆ ತಿರುಗತೊಡಗಿತು.

''ಲೋ ಮಗಾ ಈರಾಂಜ್ಣಿ, ನೀನಾದ್ರೂ ಅಕ್ಸರ ಕಲ್ತಿರೋನು, ಬುದ್ವಂತ. ರಿಚರ್ಚು ಗಿಚರ್ಚು ನಮ್ ತಲೆಗೆ ಉಳ ಬಿದ್ದಂಗಾಯ್ತದೆ ಅಸ್ಟೆ. ಈ ಕಗ್ಗಂಟ್ನ ಸ್ವಲ್ಪ ಬುಡ್ಸಿ ಸುಮಾರಾಗಾದ್ರೂ ಅರ್ತಾಗುವಂಗೆ ಏಳಪ್ಪ'' ಎಂದು ಗುರುವಜ್ಜ ಪೂಸಿ ಮಾಡಿದ.

ಈರಾಂಜಣೆ ಭಾಷಣಕಾರರ ಗತ್ತಿನಲ್ಲಿ ಹೇಳಿದ : ''ನಮ್ ದೇಸದ್ ಪರಂಪ್ರೆ ಬಾಳಾ ದೊಡ್ದು. ನಮ್ ದೇಸ ಇಂದಿನ್ಕಾಲ್ದಲ್ಲಿ ಬಾಳಾ ಸಮ್ರುದ್ಧಿಯಾಗಿತ್ತು. ಮಳೆ-ಬೆಳೆ ಚಂದಾಗ್ ನಡೀತಿತ್ತು. ಚಿನ್ನ, ಬೆಳ್ಳಿ, ಮುತ್ತು, ರತ್ನಾನ ಬಳ್ದಲ್ಲಿ ಅಳೀತಿದ್ರಂತೆ ಅಂದ್ರೆ ನೋಡ್ಕಳ್ಳಿ ! ನಮ್ಮ ಇತಿಯಾಸ, ಸಂಸುಕ್ರುತಿ ಸ್ರೇಸ್ಟವಾಗಿತ್ತು. ನಮ್ ನಾಗ್ರಿಕತೆ ಸ್ರೀಮಂತ್ವಾಗಿತ್ತು. ಆಗ ಬ್ಯಾರೆ ದೇಸ್ದೋರು ಇನ್ನೂ ಕಚ್ಚೆ ಕಟ್ಟೊಕೆ ಕಲೀತಿದ್ರಂತೆ, ಗೊತ್ತಾಯ್ತಲ್ಲ ! ನಮ್ದು ಈ ಲೋಕ್ದಲ್ಲೇ ಸ್ರೇಸ್ಟವಾದ್ ಸಂಸುಕ್ರುತಿ. ನಮ್ ಸಂಸುಕ್ರುತಿ ಇಲ್ಲಿಂದ ಬ್ಯಾರೆ ದೇಸ್ಗಳ್ ಕಡೆಗೋಗಿ ಅವ್ರೂ ನಾಗ್ರಿಕ್ರಾದ್ರಂತೆ..... !''

ಎಲ್ಲರ ಮನಸ್ಸಿನಲ್ಲಿ ಥೂ ಇದ್ರ ಮನೆ ಎಕ್ಕುಟ್ಹೋಗ ಎನ್ನಿಸಿದ್ದರೆ ಆಶ್ಚರ್ಯವಿಲ್ಲ. ಆದರೂ ಕೆಲವರ ಮನಸ್ಸಿನಲ್ಲಿ ನಮ್ಮ ಗೊಂದಲಪುರದಲ್ಲಿ ಮುತ್ತು ರತ್ನವನ್ನು ಬಳ್ಳದಲ್ಲಿ ಅಳೆಯುತ್ತಿದ್ದರೆಂಬ ಕಲ್ಪನೆ ಒಂದು ಬಗೆಯ ಸುಖಾನುಭವ ನೀಡಿತು.

''ಸರಿ ಕಣ್ಲ ಈರಾಂಜ್ಣಿ. ನಮ್ದು ಸ್ರೇಟ್ಟ ಅಂತವ ಈ ಲೋಕಕ್ಕೆಲ್ಲ ಗೊತ್ತು. ಒಪ್ಕಳಾನ. ಅದ್ಕೆ ನಮ್ ಗುಂಡಯ್ಯನ್ ತೊರೆನ್ಯಾಕ್ಲ ಅಗೀಬೇಕು ? ನಿನ್ ಪರಂಪ್ರೆ, ಇತಿಯಾಸ, ಸಂಸು ಕ್ರುತಿನೆಲ್ಲ ತಂದು ಇಲ್ ಊತಾಕಿ ದ್ದಾರೆನ್ಲ ?'' ಎಂದು ಅನುಮಾನ ವ್ಯಕ್ತಪಡಿಸಿದ ಸಿಂಗ್ರಿ.

ಈರಾಂಜಣೆ ತನಗೆ ತಿಳಿದಷ್ಟನ್ನು ಹೇಳಿದ್ದ. ಸರಕು

ಮುಗಿದಿತ್ತು. ಹೇಗಾದರೂ ಅಲ್ಲಿಂದ ನುಣುಚಿಕೊಳ್ಳುವ ಉಪಾಯ ಹುಡುಕತೊಡಗಿದ.

''ಒಂದ್ ಕಾಲ್ದಲ್ಲಿ ಈ ಗೊಂದಲ್ಪುರ ಚಂದಾಗಿ ಮಳೆ ಬೆಳೆ ಆಗಿ ಸಮ್ರುದ್ಧಿಯಾಗಿತ್ತು. ಈಗ ಬಡವ್ರಾಗೀವಿ. ಇದ್ದಬದ್ದ್ ಮುತ್ತು ರತ್ನ ಬೂಮ್ತಾಯಿ ಒಟ್ಟೆಲದೆ. ಇದ್ನೆಲ್ಲ ಸರ್ಕಾರಕ್ ತಿಳಿಸಿ ಏನಾರ ಸಬ್ಸಿಡಿ ಗಿಬ್ಸಿಡಿ ಬರುವಂಗಾರ ಮಾಡಪ್ಪ...'' ಎಂದು ತಿಮ್ಮ ಹೇಳಿದ್ದೇ ತಡ, ಈರಾಂಜಣಿಗೆ ಉಪಾಯ ಸಿಕ್ಕಿದಂತಾಯ್ತು.

''ಅದಾದ್ರೆ ಒಪ್ಪು ಮಾತು. ಮಾಡನ ತಗಳಿ. ಈಗೇನು ಸಾಯೆಬ್ರು ಎಂಗೂ ನಮ್ಮೋರೆ ಅವ್ರೆ !'' ಎಂದು ಭರವಸೆ ನೀಡಿಯೇಬಿಟ್ಟ. ಆತನ ತಲೆಯಲ್ಲಿ ಮಿಂಚಿನಂತೆ ಹೊಸ ವಿಚಾರವೊಂದು ಸುಳಿಯಿತು. ಕೂಡಲೇ ಬೋರ್ಲಿಯನ್ನು ಭೇಟಿ ಮಾಡಿ, ಯಾವುದಾದರೂ ಫಾರಿನ್ ಫಂಡ್‍-ಗಿಂಡ್ ಸಿಗಬಹುದೇ ಎಂದು ಗುಟ್ಟಾಗಿ ತಿಳಿದುಕೊಳ್ಳುವ ವಿಚಾರ ಅದು.

ಅಂತೂ ಗೊಂದಲಪುರದವರ ಪಾಲಿಗೆ ಈ ಪರಂಪರೆಯ, ಇತಿಯಾಸದ, ಸಂಸುಕ್ರುತಿಯ ಅಗೆತದ ವಿಚಾರ ಹೊಸ, ಅತ್ಯಂತ ಕುತೂಹಲಕಾರಿಯಾದ, ಅದೇ ವೇಳೆ ಭಾರಿ ಸಂಭ್ರಮದ ವಿಷಯವಾಯಿತು. ಇತಿಹಾಸದ ಮೂಲಪುರುಷ ಈ ಗುಂಡಯ್ಯನ ಗುಡ್ಡದ ಬುಡದಲ್ಲಿ ಬದುಕಿ ಬಾಳಿದನೆಂದರೆ ಹೆಮ್ಮೆಪಡಲು ಜಿಪುಣತನ ಯಾಕೆ ತೋರಿಸಬೇಕು !

* * *

ಎಲ್ಲರಂತೆ ಪಂಚಾಯ್ತಿ ಮೆಂಬ್ರು ಚೆಲುವಕ್ಕನಿಗೂ ಕಾಮಗಾರಿ ನೋಡಿಬರುವ ಕುತೂಹಲ. ರಾಮನೂ ಅವಳನ್ನು ಹಿಂಬಾಲಿಸಿದ.

ಗುಂಡಯ್ಯನ ತೊರೆಯಲ್ಲಿ ಒಂದು ತಮಾಷೆ ಪ್ರಸಂಗ ನಡೆಯಿತು. ಎಲ್ಲರ ಜೊತೆಯಲ್ಲಿ ಮೈಮರೆತು ಕರಸೇವೆ ಮಾಡಿಕೊಂಡಿದ್ದ ಸಿದ್ದೇಶ್ವರಾನಂದಜಿ ಅಲ್ಲಿ ಚೆಲುವಕ್ಕನನ್ನು ನಿರೀಕ್ಷಿಸಿರಲಿಲ್ಲ. ಆಕೆಯನ್ನು ಕಂಡಕೂಡಲೇ ತಲೆಯ ಮೇಲಿನ ಮಣ್ಣಿನ ಬಾಣಲೆಯನ್ನು ಅತ್ತ ಬಿಸುಟು, ಗರ ಬಡಿದವನಂತೆ ಓಡಿ ಬಂಡೆಯೊಂದರ ಮರೆಯಲ್ಲಿ ಅಡಗಿ ಕುಳಿತ.

ಕೆಲಸ ಮಾಡುತ್ತಿದ್ದವರೆಲ್ಲ ಏನಾಯಿತೆಂದು ತಿಳಿಯದೆ ಗಾಬರಿಯಿಂದ ಕೆಲಸ ನಿಲ್ಲಿಸಿ ಬಂಡೆಯ ಮರೆಗೆ ಧಾವಿಸಿದರು. ಯಾರು ಏನು ಹೇಳಿದರೂ ಜಪ್ಪಯ್ಯ ಎನ್ನಲಿಲ್ಲ ಆತ.

ಪರಂಪರೆಯ ಮಣ್ಣು ಹೊರುತ್ತಿದ್ದ ಲಲನೆಯರು ಚೆಲುವಕ್ಕ ನಿಂತಿದ್ದ ಮರದ ನೆರಳಿಗೆ ಬಂದು ಮಾತಿಗೆ ತೊಡಗಿದರು. ''ಆಂಟಿ ನಿಮ್ಮನ್ ಕಂಡ್ ಕೂಡ್ಲೆ ನಮ್ ಸ್ವಾಮೀಜಿ ನಡುಗ್ತಾ ಬಂಡೆ ಮರೇಲಿ ಅಡಗಿಕೊಂಡ್ರಲ್ಲ ಏನ್ ಸಂಗ್ತಿ ?'' ಎಂದಳು ಒಬ್ಬಾಕೆ.

''ಏನ್ಸಂಗ್ತಿ ಏಳಾನೆ ನನ್ ತಾಯಿ ! ಆ ನಿಮ್ ಸ್ವಾಮಿ ಅವ್ನಲ್ಲ ಮೈಗಳ್ಳ ಮೈಗಳ್ಳ ! ಮನೆ ಮಟ ಎಂಡ್ತಿ ಮಕ್ಳು ಅನ್ನು ಗ್ಯಾನಿಲ್ದಂವ. ಲಾಗಾಯ್ತ್‌ನಿಂದ್ಲೂ ಇದೇ ಆಗೋಯ್ತಲ್ಲವ್ವ. ನಾನು ಎಣ್ ಎಂಗ್ಸು. ಕೂಲಿನಾಲಿ ಮಾಡಿ ಮಕ್ಕಳ್ ಸಾಕಂಡು ಮನ್ತನ ನಡಿಸ್ತಾ ಇವ್ನಿ. ಮೂರ್ ಮಕ್ಳು. ಇವ್ನೇ ದೊಡ್ನೌನು ರಾಮಾಂತ. ಆರ್ನೆ ಕ್ಲಾಸ್ನಲ್ಲಿ ಓದ್ತಾ ಅವ್ನೆ. ನಿನ್



ಮಕ್ಳೂ ಬುದ್ವಂತ್ರುಕಣಮ್ಮ ಚಂದಾಗ್ ಓದ್ಸು ಅಂತಾರೆ ಉಪಾದ್ರು. ನಾವಾರ ನಾಕಕ್ಸರ ಕಲೀನಿಲ್ಲ, ನಮ್ ಮಕ್ಳಾರಾ ಕಲೀಲಿ ಅನ್ನೂ ಗ್ಯಾನ ಗಂಡ್ಸಗಿರ್ಬೇಕೊ ಬ್ಯಾಡ್ವವ್ವ ? ಯಾವಾಗ್ ನೋಡಿದ್ರು ಊರುದ್ದಾರ ಮಾಡ್ತೀನಿಂತ ಬಂಗಿ ಕುಡಿಯೋರ್ ಸಂಗ ಸೇರ್ಕಂಡು ನನ್ ಒಟ್ಟೆ ಉರಿಸ್ತನಲ್ರವ್ವ !''

ಹುಡುಗಿಯರಿಗೆ ತಮಾಷೆ ಅನ್ನಿಸಿತು. ''ಓಹೋ ಆಂಟಿ ! ಸ್ವಾಮೀಜಿ ಯಾಕೆ ಗಡಗಡ ನಡುಗ್ತಾ ಅವ್ರೆ ಗೊತ್ತಾಯ್ತು. ಚನ್ನಾಗ್ ತದ್ಕಿರ್ಬೇಕು ನೀವು....'' ಎಲ್ಲರೂ ನಕ್ಕರು.

''ನನ್ ತಾಯೀರೆ. ಬಿಸಿಬಿಸಿ ಮುದ್ದೆ ಮಾಡಿಕ್ಕಿದ್ರೆ ಕಣ್ಣು ಮುಚ್ಕಂಡು ಗೊಳಕ್ ಗೊಳಕ್ಕಂತ ನುಂಗ್ತಾನೆ. ಊರ್ನೆಲ್ಲ ಉದ್ಧಾರ ಮಾಡು ಈ ಮೈಗಳ್ಳ, ನೀನು ಎಣ್ಣೆಂಗ್ಸು ಎಂಗಿದ್ದಿ ಮಕ್ಳೆಂಗವೆ, ಉಂಡ್ರ, ಉಟ್ರ ಅಂತ ಒಂದ್ ಮಾತ ? ಈ ನಿಮ್ ಸ್ವಾಮಿ ಮನುಸ್ನೆ ಅಲ್ಲ ಕಣ್ರವ್ವ, ಆ ಬೆಮ್ಮ ಯಾವ್ದೊ ಎಮ್ಮೆ ಜೀವ ತುಂಬ್ಸವ್ನೆ. ಅಯ್ಯೋ ಎಮ್ಮೆ ಯಾಕಾಡನ ಒಳ್ಳೆ ಪ್ರಾಣಿ ಅದು. ಇವನ್ ಮಾಡಿದ್ದು ಒಂದೆರ್ಡು ಅಂತೀರಾ ! ಅಯೋದ್ದೆ ರಾಮ್ ದೇವರ್ಗುಡಿಗೆ ಇಟ್ಗೆ ಒರ್ತೀನಿ ಅಂತ ಅರ್ಕೆ ಕಟ್ಕಂಡ. ಆರ್ತಿಂಗ್ಳು ಮನೆ ಕಡೆ ಸುಳಿಲಿಲ್ಲ. ಮಳೆ ಬಂದು ನಮ್ಮನೆ ಗ್ವಾಡೆ ಬಿದ್ದು ನನ್ ಮಗನ್ ಕಾಲು ಮುರ್ದೋಯ್ತು. ಆಗ ನಾನ್ ಪಟ್ಟ ಪಾಡು ಅಸ್ಟಿಸ್ಟಲ್ಲ ಕಣ್ರವ್ವ. ಈಗ ನಿಮ್ಮೆಲ್ಲರೆದುರ್ಗೆ ಮೂತಿಗೆ ತಿವೀತಾಳೆ ಅಂತ ನಾಚ್ಕಂಡು ಬಂಡೆ ಮರೆಗೋಗವ್ನೆ......''

ಚೆಲುವಕ್ಕನ ಮಾತಿಗೆ ಅವರೆಲ್ಲರೂ ನಕ್ಕರು.

''ಅವ್ವ ತಾಯೀರ ! ಅದೇನೋ ಪರಂಪ್ರೆ ಇತಿಯಾಸ ಅಗೀತಾ ಅವ್ರೆ ಅಂತಿದ್ರಲ್ಲ. ಏನಾರ ಸಿಕ್ಕಿತ್ರವ್ವ ?''

ಅಲ್ಲಿ ಶೇಖರವಾಗಿದ್ದ ಮಡಿಕೆ ಚೂರುಗಳತ್ತ ಕೈ ತೋರಿಸಿದರು.

ಅಯ್ಯೋ ಪಾಪದ ಉಡುಗೀರ ಎಂದುಕೊಂಡ ಚೆಲುವಕ್ಕ ಎಲೆ ಅಡಿಕೆ ಜಗಿಯುತ್ತ ಹೇಳಿದಳು : ''ಅವ್ವ ನೀವೆಲ್ಲ ನಾಲ್ಕಕ್ಸರ ಕಲ್ತೋವ್ರು. ನಾನೋ ಅಳ್ಳೀ ಮುಕ್ಕ. ಆದ್ರೆ ಈ ಮೈಗಳ್ಳನ್ ಜೊತೆಗೆ ಸಂಸಾರ ಮಾಡಿ ಕಸ್ಟ ಸುಕ ಕಂಡಿವ್ನಿ. ಈ ಮೈಗಳ್ಳ ಇಲ್ಲಿ ಕರ್ಸೇವೆ ಮಾಡುದ್ಬುಟ್ಟು ನಮ್ ಹಿತ್ಲಲ್ಲಿ ನಾಲ್ಕ್ ಬದ್ನೆ ಗಿಡ ಹಾಕಿದ್ರೆ ನನ್ ಮಕ್ಳು ತರ್ಕಾರಿ ತಿಂತಿದ್ವು. ನಮ್ ಇಸ್ಕೋಲ್ ಸುತ್ತ ಮುಳ್ ಗಿಡ ಬೆಳ್ಕಂಡವೆ. ಮುಳ್ ಗಿಡ ಕಿತ್ತಿದ್ರೆ ಸ್ಕೂಲಾದ್ರು ಅಸನಾಯ್ತಿತ್ತು. ಮನೆಮಟ ಮರ್ತು ಇಂಗೆ ಇತಿಯಾಸ ಅಗ್ದು ಮೊಣ್ ಒರ್ತಾ ಅವ್ನಲ್ಲ. ಈಗ ನನ್ ಅಣೇಬರಾನ ಯಾರೊಂದ್ಗೇಳ್ಕಳ್ಳಿ ?''

ಲಲನೆಯರ ತಲೆಯಲ್ಲಿ ಚೆಲುವಕ್ಕ ಗೊಂದಲದ ಬೀಜ ಬಿತ್ತಿದಳು.

ವಿನಯ ತೊರೆದ ಮನವು
ಅಹಂ ತುಂಬಿದ ತನುವು
ಅಪ್ಪ ಹೇಳಿದ ಈ ಉಪ್ಪು ನೀರು ಕಥೆ
ಲೋಕಕಂಟಕ ಬೀಜವದು ಹಮ್ಮಿನ ಕಥೆ

ಅಹಂಕಾರ ಮಾಡಿ ಹರಿ ಕೆಟ್ಟನಂತೆ
ಹುಂಬತನ ತೋರಿ ಬಲಿ ಕೆಟ್ಟನಂತೆ

ಕಂಗೊಳಿಪ ನೆಲಮುಗಿಲ
ಜೀವಸಂಪದ ಚೆಲುವು
ಅದು ಕೆಟ್ಟಿತೆಂದರೆ ಮತ್ತೆ
ನಗಲುಬೇಕು ಯುಗ ಹಲವು

ತ್ರಿಮೂರ್ತಿಗಳ ಮಡದಿಯರು ಅಂದು
ವ್ಯಾಜ್ಯ ಹೂಡಿದರಂತೆ ತಮ್ಮ ತಮ್ಮೊಳಗೆ
ನಾನು ಮೇಲು ನೀನು ಕೀಳೆಂದು
ಪಂದ್ಯ ಕಟ್ಟಿ ನಿಂತರಂತೆ ಜಿದ್ದಿನೊಳಗೆ

'ನಾನೇ ಎಲ್ಲ
ನನ್ನಿಂದಲೇ ಎಲ್ಲ
ನಾನಿಲ್ಲದೆ ಏನೂ ಇಲ್ಲ
ಜ್ಞಾನವೇ ಲೋಕದ ಮೂಲ
ಅದಿಲ್ಲದಿರೆ ಸರ್ವ ನಿರ್ಮೂಲ'
ಅಟ್ಟಹಾಸದೀ ಮೆರೆದಳಂತೆ
ಜ್ಞಾನದ ಅಮ್ಮನೇ ತಾನಂತೆ
ಅವಳೇ ಸರಸೂತಿಯಂತೆ

ಬೇಡ ಬೇಡವೆಂದರೂ
ಜಂಬ ಹುಂಬತನವೆಂದರೂ
ಹಟ ಸಲ್ಲದೆಂದರೂ
ಬಿಡಲೇ ಇಲ್ಲವಂತೆ
ಕೇಣದ ಸೆರಗೆಳೆದು ನಡೆದಳಂತೆ
ಪತಿನುಡಿಗೆ ಪ್ರತಿಯಾಡಿದಳಂತೆ

ಮತಿ ಸತಿಗಿರಬೇಕು, ಪತಿಗೆ ಮೊದಲೇಬೇಕು.
ಇಲ್ಲದವರು ಇದ್ದವರಿಂದ ಅರಿತರೆ ಸಾಕು
ಎರಡೂ ಇಲ್ಲದುದು ಎಡವಟ್ಟಿನ ಬದುಕು
ಅನುಭವದ ಮಾತಿದು ಸದಾ ಹೊಳೆವ ಮುತ್ತು
ಉದ್ಧಟತನದ ಸೊಕ್ಕು ತೆರೆಯ ಮರಣದ ಗುದ್ದು
'ನೀನಿಲ್ಲದಿರೆ ಏನಂತೆ
ನಾನಿಲ್ಲದಿರೆ –
ಲೋಕ ನಡೆಯದಂತೆ
ಈ ಲೋಕವೊಂದು ಕಂತೆಬೊಂತೆ
ನಾನೊಲಿದರಷ್ಟೇ ಅದರ ಸಂತೆ
ಒಲಿಯದಿರೆ ಎಲ್ಲಾ ಮಸಣದಂತೆ
ನಾನೊಲಿದರೆ ಝಣಝಣ
ನಾ ಮುನಿದರೆ ರಣಮರಣ'
ಈ ಪರಿ –
ಪ್ರತಿಪಟ್ಟು ಹಾಕಿದಳಂತೆ

# ಅಪ್ಪ ಹೇಳಿದ ಉಪ್ಪು ನೀರ ಕಥೆ

ಅಮ್ಮ ಧನಲಕ್ಷ್ಮಿಯಂತೆ
ದಶಾವತಾರಿ –
ಮಹಾವಿಷ್ಣುಕಾಂತೆ

ಅದರದ್ದು ಹರುಕಲಾದರೆ –
ಇದರದ್ದು ಮುರುಕಲಂತೆ.

ಪತಿ ಪುನಃ ನುಡಿದನಂತೆ ಇಂತು:
'ಹತ್ತು ಮಂದಿಗೆ ಕುತ್ತು ತರಬೇಡ
ಮತ್ತೆ ಅದು ನಿನಗೇ ಕಾದಿದೆ ಮರೀಬೇಡ
ನೆಲ ಮೆತ್ತಗಿದೆ ಅಂತ
ಮೊಳಕೈಲಿ ಗುದ್ದಬೇಡ
ಹೊಲ ನನ್ನದೇ ಅಂತ
ನಂಜಿನ ಬೀಜ ಬಿತ್ತಬೇಡ'

ವಿಧವಿಧವಾಗಿ ತಿಳಿಸಿದರೂ
ಲೋಕಕಿದು ಕಂಟಕವೆಂದರೂ
ಪತಿಮಾನವಳು –
ಹತಹುತ ಮಾಡಿದಳಂತೆ
ಅತಿಮತಿಯಿಂದ –
ಪತಿಯ ಜರಿದು
ಪಥಪಥನೆ ನಡೆದಳಂತೆ:
ಗಂಡನ ಮಾತನು ಕೆಡೆದು
ಬಿಡದೆ ಅವಳು ಚಂಡಿ ಹಿಡಿದುದ ಕಂಡು
ಲೋಕ ಈ ಪರಿ ನುಡಿವುದಂತೆ :
'ಬುಂಡೆ ಬುಂಡೆ ಹೆಂಡ ಕುಡಿದು
ರಂಡೆಯಾದವಳಿಗೆ –
ದಂಡವೂ ಇಲ್ಲ, ದೋಷವೂ ಇಲ್ಲ
ಅಂತ, ಕೊನೆ ನುಡಿಯಲು
'ಅಹುದಹುದು'ಽ ಅಂದಿತಂತೆ ಲೋಕವೆಲ್ಲ'

ಇವರಿಬ್ಬರ ನುಡಿಕೇಳಿ
ಜಬ್ಬರಿಸಿ ನುಡಿದು ಕೆರಳಿ
'ನಿಮ್ಮಿಬ್ಬರದೂ ಬರೀ ಪುರಾಣ ಕಂತೆ
ಲೋಕವಿದನು ಬಲ್ಲದಂತೆ
ಈ ಲೋಕರಕ್ಷಕ ನನ್ನ ಪುತ್ರ
ಲೋಕಸೃಷ್ಟಿಗೆ ನನ್ನದೇ ಪಾತ್ರ
ನನ್ನ ಜಪತಪವಿಲ್ಲದಿರೆ
ಲೋಕಜೀವನ ಕುರುಡು
ಮುನಿದ ಶಿವನ ನಾ ಒಲಿಸದಿರೆ
ಲೋಕವೆಲ್ಲ ಬರಡು ಬರಡು
ಬಂಜೆಗೆ ಬಸಿರಿಲ್ಲ
ಸಂಜೆ ದೀಪಕೆ –
ಎಣ್ಣೆಯೂ ಇಲ್ಲ, ಬತ್ತಿಯೂ ಇಲ್ಲ!

'ದೇವಲೋಕವು ಅಂದು
ಬೆದರಿ ಬೆಬ್ಬಳಿಸಿ ತಳಮಳ
ಬಿದ್ದು ಕದ್ದೋಡಿದಿರಿ –
ತಾರಾಕಾಸುರನ ಉಪಟಳ'

ಅಂತ –
ಪರಿಪರಿಯಾಗಿ ನಿಂದಿಸಿ
ನುಡಿದಳಂತೆ ಗದರಿಸಿ
ವಿಶ್ವಕವಳೇ ತಾಯಿಯಂತೆ
ಶಿವ ಮೆಚ್ಚಿದ ಪಾರ್ವತಿಯಂತೆ
ಲೋಕದ ಮೊದಲ ಮಾದರಿ
ಅವಳೇ –
ಪರಶಿವನರ್ಧಾಂಗಿಯಂತೆ.

ಕರಪಿಡಿದ ವರಪತ್ನಿಗೆ
ಪರಿಪರಿಯಾಗಿ ನುಡಿದನಂತೆ :
'ಈ ಥರ -
ಪಂತ ಪಂದ್ಯ ಹುಡುಗಾಟ
ಜಗವಿದರಿಂದ ಹರಿದು ಪಲ್ಲಟ'
ಹೀಗಿತ್ತು –
ಕರುಣಾಕರ ಶಿವನ ಹಿತಪಾಠ.

ಪತಿಮಾತಿಗುತ್ತರವಾಗಿ
ಹಿತವರಿಯದ ಸತಿಯಾಗಿ
ಪತಿ ಪರಶಿವನೆದುರು
ಲೋಕಹಿತಜನಕನೆದುರು
ಮುಖಾಮುಸುಡಿ ಜಡಿದಳಂತೆ
ತಿಕಾ ತಿರುಗಿಸಿ –
ಪತಿಗೆದುರಾಡಿ ನಡೆದಳಂತೆ
ಈ ಮೂರು ಹೆಂಗಸರ
ಅತಿಯಾದ ಕಾರುಬಾರು
ಪತಿಮಾತನೂ ಮೀರುವ
ಮಿತಿಮೀರಿದ ಅವರ ದರ್ಬಾರು
ಈ ಸಕಲವನೂ ಕಂಡವನಾಗಿ
ಅಖಿಲಸಾಗರಕೆ ಏಕೈಕ ಒಡೆಯನಾಗಿ
ಅತಿ ಕ್ರೋಧನಾದ ಮಹಾಜ್ಞಾನಿ
ಬಾನಗಲ ಬಾಯಿ –
ತೆರೆದನಂತೆ ಅಗಸ್ತ್ಯಮುನಿ
ಲೋಕದಖಂಡ ಜಲದಾಪೋಶಣಿ
ಒಂದೇ ಘಳಿಗೆಯಲಿ
ಬತ್ತಿ ಬಯಲಾಗಿ ಬಾಯಿಬಿರಿದು
ಕೆರೆಕುಂಟೆ ಹಳ್ಳ ಕೊಳ್ಳಗಳಲೂ
ನದಿನಾಲೆ ಬಾವಿಗಳಲೂ
ನೀರಿಲ್ಲದಾಯಿತಂತೆ –
ಒಂದೇ ಒಂದು ಹನಿ



ದೇವಲೋಕಕೆ ಇಲ್ಲದಾಯಿತು ಜೀವದನಿ

ಈರೇಳು ಲೋಕವೂ ಈ ಪರಿ ನಿರ್ಜಲವಾಗಿ
ಸಕಲ ಜೀವರಾಶಿಯೂ ವಿಕಲ ಕಂಗಾಲಾಗಿ
ಜೀವದ್ರವವಿಲ್ಲದೆ ನಿತ್ರಾಣವಂತೆ
ಸಾವ ಕೊನೆಗಾಲದಲ್ಲೂ ಹನಿ ನೀರಿಲ್ಲವಂತೆ
ಇಂತಿರಲಾಗಿ ಸಕಲ ಲೋಕದ ಚಿಂತೆ
ತ್ರಿಮೂರ್ತಿಗಳ –
ಈ ಮೂರು ಹೆಂಗಸರು –
ಯಥಾ ಪ್ರಕಾರದಂತೆ –
ಮುಟ್ಟಾಗಿ ಮನೆಯಾಚೆ ಕುಂತರಂತೆ
ಒಂದೇ ಮಾತಲಿ ನುಡಿದರಂತೆ :
ದೇವಲೋಕವೆಲ್ಲ –
ಗಬ್ಬೆದ್ದು ನಾತವಂತೆ

ನಡೆನುಡಿಯಂತೆ ಬುದ್ಧಿ
ಕುಡಿದು ತಿಂದಂತೆ ಲದ್ದಿ
ನೀತಿ ಮುಂದೆ ದೇವರೇನು, ಮಾನವರೇನು ?
ಮಿತಿಯರಿಯದ ಮತಿಗೆ
ನೀತಿಯೇನು? ಪ್ರೀತಿಯೇನು ?
ಕುಡಿಯಲಿಕ್ಕೇ ಇಲ್ಲದ ನೀರು
ತೊಳೆಯಲಿಕ್ಕೆ ಎಲ್ಲಿದೆ ನೀರು ?

ದಿಕ್ಕೆಟ್ಟು ದೆಸೆಗೆಟ್ಟ ಚಿಂತಾಕ್ರಾಂತ ದೇವಗಣ
ಕ್ಷಣಕ್ಷಣವೂ –
ಅವರನು ಕಾಡಿತ್ತಂತೆ ನಿರ್ಜಲ ಮರಣ

ನೆರೆಯಿತಂತೆ ದೇವಲೋಕ ಸಭೆ
ಸಕಲ ಜಾತಿ ದೇವತೆಗಳ ಸರ್ವಪಕ್ಷ ಸಭೆ
ಕರೆಕೊಟ್ಟರಂತೆ ಬೇಷರತ್ ಕ್ಷಮೆಗೆ
ಜಲದಾನಕ್ಕಾಗಿ ಮೊರೆಯಿಟ್ಟರಂತೆ –
ಅಗಸ್ತ್ಯ ಮಹಾಮುನಿಗೆ
ತ್ರಿಮೂರ್ತಿ ಸತಿಯರು ಮುನಿಗೆರಗಿದರು ಸಾಷ್ಟಾಂಗ
ಬಿಡಿರೆಂದು ಜಲ ತುಂಬಿದ ನಿಮ್ಮ ಉದರಾಂಗ
ಧೇನಿಸಿ ಮುನಿ ನೀರು ಬಿಡಲು ದಾರಿ ಕಿವಿಬಾಯಿಮೂಗು
'ಸ್ವತಂತ್ರ ನೀನು ನಿನಗಿಷ್ಟ ಬಂದಂಗದಿಂ ಪೋಗು'
ಅಗಸ್ತ್ಯನಿಂದ ಮುಕ್ತಿ ಪಡೆದ ಜಲವು ಅಂದು
ಮುನಿಯ ಮೂತ್ರನಾಳದಿಂದ ಹರಿದು ಹರಿದು –
ನದಿನಾಲೆ ಕೆರೆಕುಂಟೆ ತುಂಬಿದವು ಮೊರೆದು
ಹಳ್ಳ ಕೊಳ್ಳಗಳೆಲ್ಲ ತುಂಬಿ ತುಂಬಿ ಹರಿದವಂತೆ ಬಿರಿದು

ನೀರಿಲ್ಲದ ಘೋರ ನರಕದಂತೆ
ಲೋಕವೆಲ್ಲ –
ನಿರ್ಜಲವಾಗಿತ್ತಂತೆ
ಬಹುಕಾಲ ತಡೆದೂ ತಡೆದು
ಮುನಿಗೂ –
ತೀರಾ ಅರ್ಜೆಂಟಾಗಿತ್ತಂತೆ
ಮುನಿ ತನ್ನ ಮೂತ್ರನಾಳದಿಂ
ನೀರು ಬಿಟ್ಟನೋ ಇಲ್ಲವೋ
ದಶದಿಕ್ಕುಗಳಿಗೂ ಅಂದು ಹರಿಯಿತು ಜಲವು
ಎತ್ತ ನೋಡಿದರತ್ತ ಜಲವೋ ಜಲವು
ಧರೆಯೆಲ್ಲ ಕುಡಿಯಿತು ನೀರು
ಹೀರಿ ಹೀರಿ ಹಿಗ್ಗಿದವು ಬೇರು
ಲೋಕವೆಲ್ಲ ಚಿಗುರಿತು ಹಸಿರು
ಸಕಲ ಜೀವರಾಶಿಗೂ ಬಂತು ಉಸಿರು.

ದೇವಾನುದೇವತೆಗಳು ಉಸಿರಾಡಿದರು
ಹೆಂಗಸರು ಗಂಡಸರೆಲ್ಲ –
ಚಪ್ಪರಿಸಿದರು ಅಪೂರ್ವ ನೀರು
ಕ್ಷಣದಿ ಅವರು ಮುಖಗಿಂಜಿದರು –
ಬರೀ ಉಪ್ಪುಪ್ಪು ನೀರು
ಅಹಂಕಾರದ ಫಲ ಆಯಿತೆಲ್ಲ ಏರುಪೇರು
ದೇವರೇನು ? ಮಾನವರೇನು ?
ನೀರಹೊಲ್ಲದ ಜೀವರಾರು ?
ಅಮೃತ ಕುಡಿದು ಮೆರೆದವರಿವರು
ಆದರೇನು ?
ನೀರಿಗಾಗಿ ಪರಿಪರಿ ತಿರಿದವರಿವರು
ಈ ತ್ರಿಮೂರ್ತಿಗಳು –
ತಮ್ಮ ಸತಿಯರ ಅತಿಮತಿಯ
ಒಮ್ಮೆ ಸರಿಪಥಕೆ ತರಲಿಲ್ಲ ಇವರು

ಪ್ರೀತಿಯ ಮಾತು ಕೇಳದಿರೆ
ಭೀತಿ ಅರಿಯದೆ ಸೊಕ್ಕಿ ನಡೆಯುತಿರೆ
ದಂಡಿಸಿ ಬುದ್ಧಿಗಲಿಸದ
ಗಂಡಿಲ್ಲದ ಗಂಡಂದಿರಿವರು
ಇಂಥವರಿದ್ದಲ್ಲಿ ಇರಲುಂಟೆ ನಾಕ ?
ಇಂಥವರ ಏನೆಂದು ತಿಳಿಯಬೇಕು ಲೋಕ ?

ಮನಜ

ಡಾ|| ಮ. ನ. ಜವರಯ್ಯ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ
ಮಾನಸ ಗಂಗೋತ್ರಿ, ಮೈಸೂರು-೫೭೦ ೦೦೬

ಮನ ಮುಟ್ಟಿದ ಆ ಕ್ಷಣ

## ಅವಿಸ್ಮರಣೀಯ ಆ ಕ್ಷಣ

ಆ ದಿನವಷ್ಟೇ ನಾನು ಪ್ರಾಥಮಿಕ ಶಾಲೆಯಿಂದ ಎಂಟನೆಯ ತರಗತಿಗೆ ಆ ಊರಿನ ಕಲಿವೀರ ವಸತಿ ಪ್ರೌಢಶಾಲೆಗೆ ಸೇರಿದ್ದೆ. ಮನೆಯಿಂದ ಶಾಲೆ ಸುಮಾರು ಒಂದೂವರೆ ಕಿ. ಮೀ. ದೂರದಲ್ಲಿದ್ದುದರಿಂದ ಟಿಫಿನ್ ಬಾಕ್ಸ್‌ನಲ್ಲಿ ಊಟವನ್ನು ತೆಗೆದುಕೊಂಡು ಹೋಗಿದ್ದೆ.

ಅಂದು ಮಧ್ಯಾಹ್ನ ಊಟಕ್ಕೆ ಬಿಟ್ಟಾಗ ಶಾಲೆಯಲ್ಲೇ ಊಟ ಮಾಡುವ ಎಲ್ಲರೂ ಪಕ್ಕದಲ್ಲಿದ್ದ ನೀಲಗಿರಿ ಪಾರ್ಕ್‌ಗೆ ಹೋಗುತ್ತಿದ್ದರು. ನಾನೂ ಅವರ ಜೊತೆ ಹೋದೆ. ಸ್ವಲ್ಪ ಸಂಕೋಚ ಸ್ವಭಾವದ ನಾನು ಯಾರೊಂದಿಗೂ ಸೇರದೆ ಬೇರೆಯಾಗಿ ಊಟಕ್ಕೆ ಕುಳಿತೆ. ಅಷ್ಟರಲ್ಲಿ ಅಲ್ಲೇ ಪಕ್ಕದಲ್ಲಿ



ವೃತ್ತಾಕಾರದಲ್ಲಿ ಊಟಕ್ಕೆ ಕುಳಿತಿದ್ದ ನನ್ನ ತರಗತಿಯ ವಿದ್ಯಾರ್ಥಿಗಳ ಗುಂಪಿನಲ್ಲೊಬ್ಬ ನನ್ನನ್ನು ಕರೆದ. ಸ್ವಲ್ಪ ಅಂಜಿಕೆಯಿಂದಲೇ ಅವರ ಜೊತೆ ಹೋಗಿ ಸೇರಿಕೊಂಡೆ.

ಅನಂತರ ಎಲ್ಲರೂ ತಮ್ಮ ಟಿಫಿನ್ ಬಾಕ್ಸ್‌ಗಳನ್ನು ಬಿಚ್ಚಿ ಮುಚ್ಚಳಗಳನ್ನು ತಮ್ಮ ಮುಂದಿಟ್ಟುಕೊಂಡರು. ಆಶ್ಚರ್ಯದಿಂದಲೇ ನಾನು ಅವರನ್ನು ಅನುಸರಿಸಿದೆ. ಆಮೇಲೆ ಎಲ್ಲರೂ ತಮ್ಮ ಊಟದ ಬುತ್ತಿಯಿಂದ ಎಲ್ಲಾ ಮುಚ್ಚಳಗಳಿಗೂ ಒಂದೊಂದು ತುತ್ತು ಹಂಚಿದರು. ಬಳಿಕ ಮುಚ್ಚಳಗಳಲ್ಲಿದ್ದ ಚೌ ಚೌ ಸವಿದು ಬುತ್ತಿಯನ್ನು ಖಾಲಿ ಮಾಡಿದ್ದಾಯಿತು. ಆಶ್ಚರ್ಯವೆಂದರೆ ಆ ಗುಂಪಿನಲ್ಲಿ ಕೆಲ ಧರ್ಮದವರೂ, ಕೆಲ ಜಾತಿಯವರೂ ಇದ್ದರು.

ನನ್ನ ಅಂತರಂಗವನ್ನು ಜಾಲಾಡಿಸಿ ಮನಮುಟ್ಟಿದ ಆ ಕ್ಷಣ ಮನದಲ್ಲಿ ಆಳವಾಗಿ ಬೇರೂರಿದ್ದು, ಈ ಪ್ರಸಂಗ ನನ್ನ ಜೀವನದಲ್ಲಿ ಅವಿಸ್ಮರಣೀಯ.

**ಆರ್. ನಾಗರಾಜ**
ಸಿ.ಕ್ಯೂ.೪೭೯, ಹೆಚ್.ಆರ್.ಪಿ. ಕಾಲೋನಿ, ಗೊರೂರು-೫೭೩ ೧೨೦, ಹಾಸನ ಜಿಲ್ಲೆ

---

## ಅದ್ಭುತ ಯಾನ

ಮುಂಬೈಗೆ ಮೊದಲ ಬಾರಿ ಹೊರಟಿದ್ದೆ. ಆ ನಗರ ನೋಡುವ ಕುತೂಹಲದೊಂದಿಗೆ ಪ್ರಯಾಣಕ್ಕೆ ಸಿದ್ಧನಾಗಿದ್ದೆ. ೯೧ರ ಜೂನ್ ತಿಂಗಳಿರಬೇಕು. ಪ್ರಯಾಣ ರಾಜ್ಯ ಸಾರಿಗೆ ಬಸ್‌ನಲ್ಲಿ.

ಪೂನದವರೆಗೆ ಪ್ರಯಾಣ ಮಾಮೂಲಾಗಿತ್ತು. ಡ್ರೈವರ್‌ಗೆ ಈ ರೂಟ್ ಹೊಸದು. ಪ್ರಯಾಣಿಕರು ದಾರಿ ಸೂಚಿಸಿದ ಚಲಾಯಿಸುತ್ತಿದ್ದ. ಹನಿಯುತ್ತಿದ್ದ ಮಳೆ ಜೋರಾಗ ತೊಡಗಿತ್ತು. ಮೋಡಗಳು ಆವರಿಸಿ ಹಗಲಿನಲ್ಲಿ ಮಂಜು ಮುಸುಕಿದಂತಾಗಿತ್ತು. ಬೆಟ್ಟ-ಗುಡ್ಡಗಳ ಸಾಲು, ಗಿಡ-ಮರಗಳ ಹಸಿರು; ಎಲ್ಲಾ ಅರೆಬರೆ ನಿದ್ದೆ ಹಾಗೂ ಬಳಲಿಕೆಯಿಂದ ಸುಂದರ ಕನಸಿನ ಲೋಕದಲ್ಲಿ ವಿಹರಿಸುತ್ತಿದ್ದೆ. ಮುಂಬೈ ನಗರ ಹತ್ತಿರವಾಗುತ್ತಿದ್ದಂತೆ ರಸ್ತೆ ತುಂಬಾ ನೀರು ಹರಿಯಲಾರಂಭಿಸಿತು.

ಮುಂದೆ ಹೋದಂತೆಲ್ಲಾ ಎಲ್ಲಿ ನೋಡಿದರೂ ನೀರು. ಕೊಚ್ಚಿಹೋಗದಂತೆ ಕಟ್ಟಿ ಹಾಕಿದ ಕಾರು, ಎತ್ತರದ ರಸ್ತೆ ವಿಭಾಗಿಸುವ ಕಟ್ಟೆ ಹತ್ತಿ ಕೂತಿರುವ ಅನಾಥರು, ಉಪನಗರಗಳಿಂದ ಮುಂಬೈಗೆ ಹಿಂದಿರುಗಲು ನಿಂತಿರುವ ದಿಕ್ಕೆಟ್ಟ ಜನ, ಸ್ತಬ್ಧವಾಗಿರುವ ವಾಹನ ಸಂಚಾರ. ಟಯರ್ ಮುಳುಗಿದ್ದರೂ ನಮ್ಮ ಬಸ್ಸು ಒಂದನ್ನು ಮಾತ್ರ, ಕಾಣದ ರಸ್ತೆಯಲ್ಲಿ ಅನುಭವೀ ಚಾಲಕ ನಡೆಸುತ್ತಿದ್ದ. ಬಸ್ಸು ಹತ್ತಲು ಯತ್ನಿಸುವ ಜನರಿಂದ ತಪ್ಪಿಸಿಕೊಂಡು ನಿಧಾನವಾಗಿ ಸಾಗುತ್ತಿತ್ತು. ಆದರೂ ಕೆಲವರು ಹಿಂದಿನ ಏಣಿ ಏರಿದರು.

ಬಸ್ಸಿನಲ್ಲಿದ್ದ ಎರಡು ಮಕ್ಕಳು ಅಳುತ್ತಿದ್ದವು. ದಾರಿಯುದ್ದಕ್ಕೂ ಬಾಗಿಲು ಹಾಕಿದ ಅಂಗಡಿ ಮಳಿಗೆಗಳು ಕೆಳಗಡೆ ಅಂತಸ್ತಿನ ಮನೆಗೆ ನುಗ್ಗಿದ ನೀರನ್ನು ಹೊರಹಾಕುತ್ತಿದ್ದರೆ, ಕೆಲವು ಮಕ್ಕಳು ಮನೆ ಮುಂದಿನ ನೀರಲ್ಲಿ ಟೈರ್ ಹಿಡಿದು ಈಜು ಕಲಿಯುವ ಹುಮ್ಮಸ್ಸಿನಲ್ಲಿರುವ ವಿಪರ್ಯಾಸ.



ಬಾಂಬೆ ಸೆಂಟ್ರಲ್ ತಲುಪಿದಾಗ ಮಧ್ಯಾಹ್ನ ೪ ಗಂಟೆ. ನಿಲ್ದಾಣ ಬಿಕೋ ಅನ್ನುತ್ತಿತ್ತು. ಯಾವುದೇ ಅಂಗಡಿ ತೆರೆದಿರಲಿಲ್ಲ. ೧೫-೨೦ ವರುಷಗಳ ನಂತರದ ದಾಖಲೆ ಮಳೆ ಅದು. ರೈಲು, ವಾಹನ ಸಂಚಾರ ನಿಂತಿತ್ತು. ಒಟ್ಟಿನಲ್ಲಿ ಎಲ್ಲಾ ಅಸ್ತವ್ಯಸ್ತ. ಸ್ಥಳೀಯರಿಗೆ ಕೂಡ ರಸ್ತೆ ಯಾವುದು, ಚರಂಡಿ ಯಾವುದು ಗೊತ್ತಾಗುತ್ತಿರಲಿಲ್ಲ. ಎಲ್ಲೆಲ್ಲೂ ನೀರು. ರಾತ್ರಿ ಇಡೀ ಬಸ್ಸಿನಲ್ಲೇ ಕಳೆದೆವು. ಬೆಳಗ್ಗೆ ೯ಕ್ಕೆ ರೈಲು ಸಂಚಾರ ಆರಂಭವಾಗಿತ್ತು. ಸೊಂಟ ಮುಟ್ಟುತ್ತಿದ್ದ ನೀರಿನಲ್ಲಿ ನಡೆದು ರೈಲು ಹತ್ತಿದೆವು. ರೈಲಿನಲ್ಲಿ ಜನವೋ ಜನ. ಅಂಧೇರಿ ನಿಲ್ದಾಣದಲ್ಲಿ ಇಳಿದು ನೆಂಟರಿಗೆ ಫೋನ್ ಮಾಡಿದಾಗ ಬಂದರು.

ಪ್ರಕೃತಿಯ ಮುಂದೆ ಮನುಷ್ಯನ ಮಿತಿ ಎಷ್ಟೆಂದು ನಮ್ಮ ೪೮ ಗಂಟೆಗಳ ಅನುಭವ ತೋರಿಸಿಕೊಟ್ಟಿತು.

**ಎನ್. ಆರ್. ವಿ. ಕಾರಂತ್**
ನಂ. ೨೦೭೫/೧, ೩ನೇ ಮುಖ್ಯರಸ್ತೆ, ಎಂ.ಸಿ.ಸಿ 'ಎ'ಬ್ಲಾಕ್, ದಾವಣಗೆರೆ - ೫೭೭ ೦೦೪.

---

## ಮರೆಯಲಾಗದ ಸಾಲು



ಇದು ನಲವತ್ತು ವರ್ಷಗಳ ಹಿಂದಿನ ಘಟನೆ. ಹದಿನಾರರ ಹರೆಯದಲ್ಲೇ ನನ್ನ ಹುಟ್ಟೂರು ಮೈಸೂರು ಬಿಟ್ಟು ವೃತ್ತಿಗಾಗಿ ಬೆಂಗಳೂರಿಗೆ ಬಂದಿದ್ದೆ. ತಾಯಿ-ತಂದೆಯರಿಂದ, ಒಡಹುಟ್ಟಿದವರಿಂದ ದೂರವಾಗಿ ಒಂಟಿತನ ಕಾಡುತ್ತಿತ್ತು. ಓದುವ ಸಲುವಾಗಿ ''ಪ್ರಜಾಮತ'' ವಾರ ಪತ್ರಿಕೆ ಕೊಂಡು ಓದಿದೆ. ಅದರಲ್ಲಿ ದಿ॥ ಶ್ರೀ ಬಿ. ಪಾಂಡುರಂಗ ರಾಯರು ಗಮಕ ವಿದ್ವಾಂಸ ಸಂ. ಗೋ. ಬಿಂದೂ ರಾಯರ ಬಗ್ಗೆ ಲೇಖನ ಬರೆದಿದ್ದರು. ಆ ಲೇಖನದಲ್ಲಿ ಒಂದೆರಡು ಪ್ಯಾರಾ ನನ್ನ ತಂದೆ (ಕೃಷ್ಣಗಿರಿ ಕೃಷ್ಣರಾಯರು) ಬಗ್ಗೆಯೂ ಬರೆದಿದ್ದರು. ಓದಿದೆ, ಉತ್ಸಾಹ ಗೊಂಡೆ. ಕೂಡಲೇ ನನ್ನ ತಂದೆಗೊಂದು ಬಾಲಿಶ ಪತ್ರ ಬರೆದೆ. ''ನೀವಿಷ್ಟು ದೊಡ್ಡವರೆಂದು ನನಗೆ ಈಗಲೇ ತಿಳಿದುದು.'' ಅವರು ಮರು ಟಪಾಲಿನಲ್ಲಿಯೇ ಬರೆದಿದ್ದರು : ''ನಾವು ಒಬ್ಬರಿಂದ ದೂರವಾದಾಗಲೇ ಅವರ ಬಗ್ಗೆ ನಮಗೆ ಹೆಚ್ಚು ತಿಳಿಯುವುದು.''

ತಂದೆಯವರು ಕಾಲವಾಗಿ ಮೂರು ದಶಕಗಳಾಗಿದ್ದರೂ, ಅವರು ಬರೆದ ಈ ಸಾಲುಗಳು ನನ್ನ ಹೃನ್ಮನಗಳಲ್ಲಿ ಸ್ಥಿರವಾಗಿ ನಿಂತಿವೆ.

**ಕೃಷ್ಣಗಿರಿ ಮುರಳೀಧರ**
೬೩ ಎ, ಎಂ. ಎಸ್.ಆರ್. ನಗರ, ಬೆಂಗಳೂರು

## ಕರಗಿ ಹೋದ ಕುತ್ತು !

**ಈ** ಸಂಗತಿ ನಡೆದದ್ದು ೧೯೭೧ರಲ್ಲಿ. ಮೂರು ವರುಷದ ಸೇವಾವಧಿ ಮುಗಿಸಿ ರಜೆಗೆಂದು ಪೂರ್ವ ಆಫ್ರಿಕೆಯ ಇಥಿಯೋಪಿಯಾದಿಂದ ನಾವು ಭಾರತಕ್ಕೆ ಬರಬೇಕಿತ್ತು. ಮರುದಿನದ ಪ್ರಯಾಣಕ್ಕಾಗಿ ನಾವು ಕೆಲಸ ಮಾಡುತ್ತಿದ್ದ ನಾಜರೆಥನಿಂದ ಹೊರಟು ರಾಜಧಾನಿ ಅಡಿಸ್ ಅಬಾಬಾಕ್ಕೆ ಬಂದಾಗ ರಾತ್ರಿ ಒಂಬತ್ತು ಗಂಟೆ. ಒಂದು ಚಿಕ್ಕ ಹೊಟೆಲ್ *ಗೊಂಡಾರ್ ಪೆನ್‌ಶನ್*‌ಗೆ ಹೋದಾಗ ಅಲ್ಲಿ ರೂಮುಗಳೆಲ್ಲ ತುಂಬಿಹೋಗಿದ್ದವು. ಅಂಥ ರಾತ್ರಿ , ಆ ಛಳಿ ಮಳೆಯಲ್ಲಿ ಎಲ್ಲಿ ಹೋಗುವುದು ? ಮ್ಯಾನೇಜರ್ ಕನಿಕರದಿಂದ ''ಒಂದು ರೂಮು ಕೊಡುವೆ ಬನ್ನಿ. ಅಲ್ಲಿ ನನ್ನ ಗುರುತಿನವನೇ ತನ್ನ ಸೂಟ್‌ಕೇಸ್ ಇಟ್ಟು ಹೊರಗೆ ಹೋಗಿದ್ದಾನೆ. ಅವನಿಗೆ ನಾನು ಹೇಳುವೆ,'' ಎಂದು ಬೀಗ ತೆಗೆದು ಆ ಸೂಟ್‌ಕೇಸನ್ನು ಹೊರಗಿಟ್ಟು ಹೋದ.



ರಾತ್ರಿ ೧೧ಕ್ಕೆ ಬಾಗಿಲ ಮೇಲೆ ಧಬಧಬ ಬಡಿತ. ''ಯಾರು ನನ್ನ ರೂಮಿನಲ್ಲಿದ್ದೀರಿ, ಹೊರಬನ್ನಿ.'' ಸ್ಪಷ್ಟ ಇಂಗ್ಲಿಷಿನಲ್ಲಿ ಗುಡುಗು. ನನ್ನವರು ಬಾಗಿಲು ತೆಗೆದಾಗ ಅಲ್ಲಿ ಆರೂವರೆ ಅಡಿ ಎತ್ತರದ ಕಟ್ಟುಮಸ್ತಾದ ಇಥಿಯೋಪಿಯನ್ ಗೃಹಸ್ಥ ಕಣ್ಣು ಕೆಂಪಾಗಿ ಮಾಡಿಕೊಂಡು ಒದರಾಡುತ್ತಿದ್ದಾನೆ.

ನನ್ನನ್ನೂ, ನನ್ನ ನಾಲ್ಕು ವರುಷದ ಮಗಳನ್ನೂ ನೋಡಿದಾಗ ನಾವು ಭಾರತೀಯರು ಎಂದು ಗೊತ್ತಾಗಿ, ''ಏ ಬನಿಯಾ, ನನ್ನ ಬ್ಯಾಗನ್ನು ಹೊರಗೆ ಒಗೆದು ಇಲ್ಲಿ ಹೆಂಡತಿ ಮಗಳೊಡನೆ ಮಜಾ ಮಾಡುತ್ತಿದ್ದೀಯಾ ? ನಿನ್ನನ್ನು ಈಗಲೇ ಕೊಂದು ಹಾಕುತ್ತೇನೆ.'' ಎಂದು ಜೇಬಿಗೆ ಕೈಹಾಕಿದ.

ಅವನು ಕುಡಿದಿದ್ದ ಎಂದು ಗೊತ್ತಾಗುತ್ತಿತ್ತು. ಜೇಬಿನಲ್ಲಿ ಪಿಸ್ತೂಲು ಇರುವುದೂ ಸ್ಪಷ್ಟವಿತ್ತು. ಅಲ್ಲಿ ಅದು ಸಾಮಾನ್ಯ. ಅವನು ಶುದ್ಧ ಇಂಗ್ಲಿಷಿನಲ್ಲಿ ಒದರಾಡುತ್ತಲೇ ಇದ್ದ.

ನನ್ನವರೂ ಹೀರೋ ತರಹ, ''ನಾನು ಈ ರೂಮಿಗೆ ಹಣ ಕೊಟ್ಟಿದ್ದೇನೆ. ಏನು ಮಾಡುತ್ತೀಯೋ ಮಾಡು'' ಎಂದು ಬಾಗಿಲಿಗೆ ಅಡ್ಡ ನಿಂತರು.

ಆತ, ''ಏ ಬನಿಯಾ, ಹೊರಗೆ ಬಾ ಹೇಡಿ...'' ಎಂದು ಅವರ ಕುತ್ತಿಗೆಗೆ ಕೈ ಹಾಕಿದ, ಹೊರಗೆ ಎಳೆದೂಬಿಟ್ಟ. ಆಗ ನಾನು ಧೈರ್ಯದಿಂದ, ''ನೋಡೀಪ್ಪಾ, ನಾವು ಭಾರತೀಯ ಶಿಕ್ಷಕರು. ಮೂರು ವರುಷದ ನಂತರ ನಮ್ಮ ದೇಶಕ್ಕೆ ಹೋಗುತ್ತಿದ್ದೇವೆ. ನಾಳೆ ಬೆಳಗ್ಗೆ ಪ್ರಯಾಣ. ನೀವೇ ಒಳಗೆ ಬನ್ನಿ. ನಾವು ಬೇಕಿದ್ದರೆ ಕಾರಿಡಾರಿನಲ್ಲಿ ರಾತ್ರಿ ಕಳೆಯುತ್ತೇವೆ. ಸಾರಿ, ನಾವು ಅಸಹಾಯಕ ಟೀಚರ‍್ಸಲ್ಲವೆ ?'' ಎಂದೆ.

ಅಲ್ಲಿ ವ್ಯಾಪಾರಕ್ಕೆಂದು ಬಂದು ನೆಲೆಸಿ ಹಣ ಗಳಿಸಿರುವ ಭಾರತೀಯ ವರ್ತಕರ ಬಗ್ಗೆ ಅವರೆಲ್ಲರಿಗೆ ತಿರಸ್ಕಾರವಿತ್ತು. ಎಲ್ಲ ಭಾರತೀಯರನ್ನು ಬನಿಯಾ ಎಂದು ಕರೆದು ಬಿಡುತ್ತಿದ್ದರು. ಅದು ಗೊತ್ತಿದ್ದ ನಾನು ನಾವು ಶಿಕ್ಷಕರೆಂದು ಒತ್ತಿ ಹೇಳಿದೆ.

ನನ್ನ ಮಾತು ಕೇಳಿ ಆತ ತತ್‌ಕ್ಷಣ ಬದಲಾದ. ''ಮ್ಯಾಡಂ, ನೀವು ಟೀಚರ‍್ಸೆ ? ಗೊತ್ತಾಗಲಿಲ್ಲ. ಕ್ಷಮಿಸಿ. ಇಂದು ನಾನು ಒಂದು ಸ್ಥಾನಮಾನಕ್ಕೆ ಬಂದು ಜೀವನದಲ್ಲಿ ಸಾಧನೆ ಮಾಡಿದ್ದಕ್ಕೆ ಕಾರಣ ನನ್ನ ಭಾರತೀಯ ಶಿಕ್ಷಕರು. ಸುಖವಾಗಿ ಹೋಗಿ ಬನ್ನಿ ಮ್ಯಾಡಂ. ಸಾರ್, ನನ್ನನ್ನು ಕ್ಷಮಿಸಿಬಿಡಿ,'' ಎಂದು ನನ್ನವರ ಕೈ ಕುಲುಕಿ, ''ನಿಮ್ಮ ಬಗ್ಗೆ ಅಪಾರ ಗೌರವವಿದೆ. ನಿಮ್ಮದು ಸುಖ ಪ್ರಯಾಣವಾಗಲಿ. ■ ಮ್ಯಾನೇಜರ್ ಸೂಳೆಮಗನನ್ನು ಒಂದು ಕೈ ನೋಡಿಕೊಳ್ಳುವೆ. ತಪ್ಪು ಅವನದು,'' ಎಂದು ಗೊಣಗುತ್ತ ಹೋಗಿಬಿಟ್ಟ.

ನಮ್ಮ ವೃತ್ತಿ ನಮ್ಮ ಕೈ ಹಿಡಿದು ಕಾಪಾಡಿತ್ತು !

**ಪ್ರೊ. ವನಮಾಲಾ ಆಚಾರ್**
೧೦೦, ೪ನೇ ಅಡ್ಡರಸ್ತೆ, ೫ನೆಯ 'ಬಿ' ಮುಖ್ಯರಸ್ತೆ, ಆರ್.ಪಿ.ಸಿ. ಲೇಔಟ್, ಬೆಂಗಳೂರು - ೫೬೦೦೪೦.

## ಹಾಸ್ಟೆಲ್ ಸೀಟು ಗಿಟ್ಟಿಸಿದ್ದು

೧೯೬೩ನೇ ಇಸ್ವಿ. ಪಿ.ಯು.ಸಿ. ಉತ್ತೀರ್ಣನಾಗಿದ್ದೆ. ಬಿ.ಎ. ಓದುವ ಹಂಬಲ. ಮನೆಯಲ್ಲಿ ಬಡತನ ಥಕ್ಕಥೈ ಮಾಡಿತ್ತು. ತುಮಕೂರಿನ ಸಿದ್ದರಾಮಣ್ಣ ಹಾಸ್ಟೆಲಿನಲ್ಲಿ ಉಚಿತ ಸೀಟು ದೊರಕಿಸಿಕೊಳ್ಳುವ ಆಸೆ. ಟ್ರಂಕು ಹೆಗಲಿಗಿಟ್ಟು ತುಮಕೂರಿನಲ್ಲಿಳಿದೆ. ಸರ್ಕಾರಿ ಕಾಲೇಜಿನಲ್ಲಿ ಸೀಟು ಸಿಕ್ಕಿತು. ಆದರೆ ಊಟ ? ಹಾಸ್ಟೆಲಿಗೆ ಫ್ರೀ ಸೀಟಿಗಾಗಿ ಅರ್ಜಿ ಹಾಕಿದ್ದಾಯ್ತು. ಸೀಟು ಸಿಕ್ಕಲಿಲ್ಲ. ಫಸ್ಟ್ ಸೆಕೆಂಡು ಲಿಸ್ಟ್‌ಗಳೆಲ್ಲಾ ಮುಗಿದವು. ನಿರಾಶನಾದೆ.

ಶ್ರೀ ಬಿ. ಸಿ. ನಂಜುಂಡಯ್ಯನವರು ಸಮಾಜಸೇವಾಧುರೀಣರಾಗಿ ರಾಷ್ಟ್ರಪತಿಯಿಂದ ರಾಜ್ಯಸಭೆಗೆ ನಾಮಕರಣಗೊಂಡ ಸದಸ್ಯರು. ಅವರೇ ಹಾಸ್ಟೆಲಿನ ಕಾರ್ಯದರ್ಶಿ. ಅವರು ಮನಸ್ಸು ಮಾಡಿದರೆ ಸೀಟು ಸಿಗುವುದೆಂದು ಯಾರೋ ಹೇಳಿದರು. ಸರಿ, ಟೌನ್‌ನಿಂದ ೩-೪ ಕಿ. ಮೀ. ದೂರದ ಅವರ ತೋಟದ ಮನೆಗೆ ಅಲೆದೆ. ಅವರನ್ನು ಕಂಡು ನನ್ನ ತೊಂದರೆ ಹೇಳಿಕೊಂಡೆ. ಸೀಟು ಮುಗಿದಿದೆ, ಈಗ ಏನೂ ಮಾಡುವಂತಿಲ್ಲ ಎಂದರು. ಮರುದಿನ ಹೋದೆ. ನಂತರದ ದಿನವೂ ಹೋದೆ. ಸೀಟಿಲ್ಲ ಎಂಬ ಉತ್ತರ.



ಕೊನೇ ಪ್ರಯತ್ನವೆಂದು ಮತ್ತೆ ಹೋದೆ. ಅವರು ನನ್ನನ್ನು ಕಂಡವರೇ ಅಸಹನೆಯಿಂದ ಏನಯ್ಯ ಒಂದ್ಸಾರಿ ಹೇಳಿದ್ದು ಅರ್ಥವಾಗಲಿಲ್ವೆ. ಸುಮ್ನೆ ಬಂದು ನನಗೆ ತೊಂದರೆ ಕೊಡ್ತಿದ್ದೀಯ ಎಂದು ಒಳನಡೆಯಲು ಮೇಲೆದ್ದರು. ನನಗೆ ಆವೇಶ ಬಂದಂತಾಯ್ತು. ದಿಢೀರನೆ ಓಡಿ ಅವರು ಒಳನಡೆಯದಂತೆ ಅಡ್ಡನಿಂತೆ. ಸಾರ್ ನನ್‌ಮಾತು ಕೇಳಿ ಹೋಗ್ರಿ. ನೀವು ಸೀಟು ಕೊಡದಿದ್ರೂ ಪರವಾಗಿಲ್ಲ ಎಂದು ಗದ್ಗದ ಕಂಠದಿಂದ ಹೇಳಿದೆ. ರಾಜ್ಯಸಭಾ ಸದಸ್ಯರೊಬ್ಬರನ್ನು ೨೦ ವರ್ಷ ವಯಸ್ಸಿನ ಬಡಕಲು ದೇಹದ ನಾನು ಅಡ್ಡಲಾಗಿ ತರುಬಿ ನಿಂತಿದ್ದನ್ನು ನೆನೆದರೆ ನನಗೆ ಈಗಲೂ ರೋಮಾಂಚನ.

ನಂಜುಂಡಯ್ಯನವರು ನನ್ನೀವರ್ತನೆಯಿಂದ ಆಶ್ಚರ್ಯಚಕಿತರಾದರು. ''ಏನು ಹೇಳೋದು ಹೇಳು'' ಅಂದರು. ''ಸಾರ್ ಚಿತ್ರದುರ್ಗದ ಪಕ್ಕದ ಹಳ್ಳಿ ನನ್ನದು. ಅಪ್ಪ ಇಲ್ಲ. ಅಮ್ಮ ಕೂಲಿ ಮಾಡಿ ಜೀವಿಸ್ತಿದಾರೆ. ನಾನು ಮುಂದೆ ಓದ್ಬೇಕು. ಫ್ರೀ ಹಾಸ್ಟೆಲು ಅಂತಾ ಇಲ್ಲಿ ಬಂದೆ. ಮಹಾರಾಯ್ರು ಸಿದ್ರಾಮಣ್ಣನೋರು ನನ್ನಂಥ ಬಡವರಿಗೆ ಅಂತಾ ಫ್ರೀ ಹಾಸ್ಟೆಲ್ ಮಾಡಿದ್ದಾರೆ. ಸೀಟು ಕೊಡೋ ಅಧಿಕಾರ ತಮಗಿದೆ. ಬೈಕು ಸ್ಕೂಟರು ಇರೋರಿಗೆ ಸೀಟು ಕೊಟ್ಟಿದ್ದೀರಿ. ನನ್ನಂಥಾ ಬಡವನಿಗೆ ಸೀಟಿಲ್ವಾ ಸಾರ್? ಬಿ.ಇ. ಓದ್ತಿರೋ ನಮ್ಮೂರಿನ ಹುಡುಗರ ರೂಮಲ್ಲಿ ಟ್ರಂಕು ಇಟ್ಟಿದ್ದೀನಿ. ಈಗ ಮೂರು ದಿನದಿಂದ ನಾನು ಮಾಡ್ತಿರೋದು ದಿನಕ್ಕೆ ಒಂದೇ ಊಟ ಸಾರ್. ನನ್ ಮಾತು ನಂಬಿ ಸಾರ್. ನನ್ನಂಥಾ ಬಡವನಿಗೆ ಸೀಟು ಕೊಡದೆ ಮತ್ತಾರಿಗೋ ಕೊಟ್ಟಿದ್ದೀರಲ್ಲಾ ಸಾರ್. ನನ್ನಂಥೋನಿಗೆ ಯಾರು ರೆಕಮೆಂಡ್ ಮಾಡ್ಬೇಕು ಸಾರ್,'' ಅಂತಾ ಕಣ್ಣಲ್ಲಿ ಜಿನುಗುತ್ತಿದ್ದ ನೀರು ಒರೆಸಿಕೊಳ್ಳುತ್ತ ಆವೇಶದಿಂದ ಒಂದೇ ಉಸುರಿಗೆ ವದರಿದೆ.

ಅವರ ಮಕ್ಕಳು ಹಾಗೂ ಮನೆ ಆಳು ನನ್ನನ್ನೇ ನೋಡುತ್ತಿದ್ದರು. ಆಳಿನ ಕೈಲಿ ನನ್ನನ್ನು ಹೊರದೂಡಿಸಬಹುದೆಂದೆನಿಸಿತು. ಹಾಗಾಗಲಿಲ್ಲ. ನಂಜುಂಡಯ್ಯನವರು ಕೂಲಾಗಿ ನಿಂತ್ರು. ಅವರ ಮುಖದಲ್ಲಿ ಸಿಟ್ಟಾಗಲೀ ಅಸಹನೆಯಾಗಲೀ ಇರಲಿಲ್ಲ. ಟೇಬಲ್ ಮೇಲಿದ್ದ ಒಂದು ಸ್ಲಿಪ್ ತೆಗೆದುಕೊಂಡವರೇ 'ಅಡ್ಮಿಟ್ ದಿಸ್ ಬಾಯ್ ಟು ದ ಹಾಸ್ಟೆಲ್' ಎಂದು ಬರೆದು, ಸಹಿಹಾಕಿ ನನ್ನ ಕೈಗಿತ್ತರು. ಹಾಸ್ಟೆಲ್ ಮ್ಯಾನೇಜರರಿಗೆ ಅದನ್ನು ಕೊಡಲು ಹೇಳಿದರು. ''ಗುಡ್ ಲಕ್, ಚೆನ್ನಾಗಿ ಓದು. ನಿಮ್ಮಮ್ಮ ಕೂಲಿ ಮಾಡುವುದನ್ನು ತಪ್ಪಿಸು'' ಅಂತಾ ಹೇಳಿ ಕಳಿಸಿದ್ರು. ಅವರ ಮಾತು ಇಂದು ನಿಜವಾಗಿದೆ. ಅವರು ಅಂದು ಮಾಡಿದ ಸಹಾಯವೂ ಸಾರ್ಥಕವಾಗಿದೆ.

ಬಿ. ತಿಪ್ಪೇರುದ್ರಪ್ಪ
ವಿದ್ಯಾನಗರ ಬಡಾವಣೆ, ಚಿತ್ರದುರ್ಗ - ೨

# ವೈಜ್ಞಾನಿಕ ತಿಳುವಳಿಕೆಗಾಗಿ ಸಂಘಟಿತ ಪ್ರಯತ್ನ

ಸಿ. ಯತಿರಾಜು

ನಾವಿಂದು ಇಪ್ಪತ್ತೊಂದನೇ ಶತಮಾನಕ್ಕೆ ಅಂಬೆಗಾಲಿಡುತ್ತಿದ್ದೇವೆ. ಈ ಶತಮಾನವನ್ನು ಮಾಹಿತಿ ತಂತ್ರಜ್ಞಾನ ಯುಗ, ಜೀವತಂತ್ರಜ್ಞಾನ ಯುಗ, ಬಾಹ್ಯಾಕಾಶ ಯುಗ ಇತ್ಯಾದಿ ಗುಣವಾಚಕಗಳಿಂದ ವಿವರಿಸಲು ಪ್ರಯತ್ನಿಸಲಾಗುತ್ತಿದೆ. ವಿಜ್ಞಾನ ತಂತ್ರಜ್ಞಾನದ ದಿಗಂತಗಳು ವಿಸ್ತಾರಗೊಳ್ಳುವುದಕ್ಕೆ ಬದಲಾಗಿ ಆಸ್ಫೋಟಿಸುತ್ತಿವೆ. ಬದಲಾವಣೆಗಳ ವೇಗ ಶಬ್ದದ ವೇಗವನ್ನು ಮೀರಿ ಬೆಳಕಿನ ವೇಗವನ್ನು ಸರಿಗಟ್ಟಲು ಸೆಣಸುತ್ತಿದೆ. ಈ ಸೂಪರ್ ಸಾನಿಕ್ ವೇಗ ಇಂದು ಜಗತ್ತನ್ನು ಕಿರಿದಾಗಿಸಿ ಅದನ್ನು ಜಾಗತಿಕ ಹಳ್ಳಿಯಾಗಿಸಿದೆ. ಜಗದ ಮೂಲೆ ಮೂಲೆಯಲ್ಲಿನ ಘಟನಾವಳಿಗಳನ್ನ ಬೆಳವಣಿಗೆಗಳನ್ನ ನಮ್ಮ ಅಡುಗೆ ಮನೆಗೆ, ಮಲಗುವ ಕೋಣೆಗಳಿಗೆ ಆಗಿಂದಾಗ್ಗೆ ಕ್ರಿಕೆಟ್ ಆಟದ ಕಾಮೆಂಟರಿಯಂತೆ ನೇರ ಪ್ರಸಾರದಲ್ಲಿ ತಂದು ಸುರಿಯಲಾಗುತ್ತಿದೆ. ಅಮೆರಿಕಾದ ಕ್ಷಿಪಣಿಗಳು ದೀಪಾವಳಿಯ ಪಟಾಕಿಗಳಂತೆ ಆಕಾಶದಲ್ಲಿ ಚಿಮ್ಮಿ ತಾಲಿಬಾನಿಗಳ ನೆಲೆತಲೆಗಳನ್ನು ಧ್ವಂಸಮಾಡುವ ಪ್ರಯತ್ನದಲ್ಲಿ ಅಮಾಯಕ ನಿರಾಶ್ರಿತ ಹಸುಳೆ, ಹೆಣ್ಣುಗಳ ಮಹಾ ಪ್ರವಾಹವನ್ನು ಕಿರುತೆರೆಯ ಮೇಲೆ ಹಾಲಿವುಡ್ ಸಿನಿಮಾದಂತೆ ನೋಡಲಾಗುತ್ತಿದೆ. ಗುಂಡಿಯೊತ್ತಿದರೆ ನಿಮ್ಮ ಮುಂದೆ ಮಾಹಿತಿಯ ಮಹಾಪರ್ವತವೆ ರಾಶಿ ರಾಶಿಯಾಗಿ ಬೀಳುತ್ತದೆ. ಆಕಾಶದಲ್ಲಿ ನೆಲೆನಿಂತು ವಸುಂಧರೆಯ ಗರ್ಭದಲ್ಲಿ, ಸಾಗರದ ತಳದಲ್ಲಿ ಅಡಗಿರುವ ನೈಸರ್ಗಿಕ ನಿಧಿಗಳನ್ನು ಲೂಟಿಕಾರರ ಕಣ್ಣಿಗೆ ರಾಚುವಂತೆ ದರ್ಶಿಸುವ ತಂತ್ರಜ್ಞಾನ ಲಭ್ಯವಿದೆ. ಜಾಗತಿಕ ಹಳ್ಳಿಯಲ್ಲಿ ತಂತ್ರಜ್ಞಾನದ ಕಿಂದರಿಜೋಗಿ ಜಗದ ಎಲ್ಲಾ ಸಮಸ್ಯೆಗಳೆಂಬ ಇಲಿಗಳ ಹಿಂಡನ್ನ ನಾಶಮಾಡಬಲ್ಲನೆಂಬ ಭರವಸೆಯನ್ನು ಅತ್ಯಂತ ಉದಾರವಾಗಿ ನೀಡುತ್ತಿದ್ದಾನೆ. ಜೀವತಂತ್ರಜ್ಞಾನದ ಕೈಚಳಕದಿಂದ ಅಗಾಧಗಾತ್ರದ, ಬೇಕಾದ ಲಕ್ಷಣಗಳನ್ನು ಬೇಕಾದ ಪ್ರಮಾಣದಲ್ಲಿ ಹೊಂದಿರುವ, ಕಾಳು, ಹಣ್ಣು, ತರಕಾರಿಗಳನ್ನು ಸೃಷ್ಟಿಸಿಕೊಳ್ಳಬಲ್ಲ ಬ್ರಹ್ಮವಿದ್ಯೆಯನ್ನು ಕರಗತ ಮಾಡಿಕೊಳ್ಳಲಾಗಿದೆ. ಭೂಲೋಕದ ವಾಸ ಬೇಸರವಾಗಿ ಬೇರೆ ಬೇರೆ ಲೋಕಗಳ ತೀರ್ಥಯಾತ್ರೆಗೆ ಆಕಾಶ ನೌಕೆಗಳು ಹೊರಟುನಿಂತಿವೆ.

ಇಷ್ಟೆಲ್ಲಾ ಸಂಪತ್ತು ಸೇವೆಗಳನ್ನು ಕರುಣಿಸುವ ವಿಜ್ಞಾನ ಕಲ್ಪವೃಕ್ಷಕ್ಕೆ ಇಂದು ನುಸಿಪೀಡೆ ಹತ್ತುತ್ತಿದೆ. ಜನಕಲ್ಯಾಣಕ್ಕೆ ಪ್ರಬಲ ಅಸ್ತ್ರವಾಗಬೇಕಿದ್ದ ವಿಜ್ಞಾನ ಇಂದು ಕೆಲವು ಮತಿಹೀನರ ಹಿಡಿತದಲ್ಲಿ ಭಸ್ಮಾಸುರ ಸ್ವರೂಪಿಯಾಗಿ ಮನುಕುಲಕ್ಕಷ್ಟೆ ಅಲ್ಲದೆ ಸಕಲ ಜೀವಕೋಟಿಗಳು ಹಾಗೂ ಜಗತ್ತಿನ ಅಸ್ತಿತ್ವಕ್ಕೇ ಗಂಡಾಂತರಕಾರಿಯಾಗಿ ಪರಿವರ್ತನೆಗೊಂಡಿದೆ.

ಇಡೀ ಭೂಮಿಯನ್ನೇ ಹಲವಾರು ಬಾರಿ ಸುಟ್ಟು ಭಸ್ಮ ಮಾಡಬಲ್ಲ ಶಸ್ತ್ರಾಸ್ತ್ರ ಬಣವೆಯನ್ನೇ ಹಾಕಿಕೊಂಡ ಪುಂಡರು ಜಗತ್ತಿನ ಸ್ಥಿರತೆಗೆ ಅಪಾಯ ತಂದೊಡ್ಡಿದ್ದಾರೆ. ಅತ್ಯಂತ ಅಪಾಯಕಾರಿ ವೈರಾಣುಗಳನ್ನು ತಮ್ಮ ಪ್ರಯೋಗಾಲಯಗಳಲ್ಲಿ ಬೆಳೆಸಿಟ್ಟುಕೊಂಡು ಇಡೀ ಜಗತ್ತನ್ನು ಬೆದರಿಸುತ್ತಿದ್ದ ಭಯೋತ್ಪಾದಕರೇ ಇಂದು ಆಂಥ್ರಾಕ್ಸ್ ಭಯದಿಂದ ತತ್ತರಿಸಿಹೋಗಿ ಜಗದ ಜೀವರಾಶಿಗಳು ಆತಂಕ, ಅನಿಶ್ಚಿತೆಯ ಕರಾಳ ನೆರಳಿನಲ್ಲಿ ಬದುಕುವಂತೆ ಮಾಡಿದ್ದಾರೆ. ಗಾಳಿ, ನೀರು, ಭೂಮಿಗೆ ವಿಷವಿಕ್ಕಿ ಆಕಾಶದ ರಕ್ಷಾಕವಚವನ್ನು ಬಗೆದು ರೋಗಗಳ ಮಹಾಪ್ರವಾಹಕ್ಕೆ ವಿಶಾಲ ಜನಸಮೂಹಗಳನ್ನು ತಳ್ಳಿ ತಮಗೆ ಮಾತ್ರ ಸುರಕ್ಷಿತ ನೆಲೆಗಳನ್ನು ಸ್ಥಾಪಿಸಿಕೊಂಡು ಸಕಲ ಭೋಗ ಭಾಗ್ಯಗಳನ್ನು ಅನುಭವಿಸುವ ಹೊಂಚು ಹಾಕುತ್ತಿದ್ದಾರೆ. ಪರಿಸರ ನಾಶ ಮಾಲಿನ್ಯಗಳೆಂಬ ಪೆಡಂಭೂತಗಳು ಪ್ರಪಂಚದ ಭೂಪಟದಿಂದ ಕಣ್ಮರೆಯಾಗುತ್ತಿದ್ದ ಪ್ಲೇಗ್, ಮಲೇರಿಯಾದಂತಹ ರೋಗಗಳಿಗೆ ಮರು ಹುಟ್ಟು ನೀಡಿವೆ. ಇದೇ ಅಲ್ಲದೆ ಸದ್ಯದಲ್ಲಿ ವಾಸಿಮಾಡಲಾಗದ ಏಡ್ಸ್, ಎಬೋಲಾಗಳಂತಹ ಹೊಸ ಪೆಡಂಭೂತಗಳನ್ನು ಸೃಷ್ಟಿಸಿವೆ.

ಜಗತ್ತಿಗೆ ಶಾಂತಿ, ಸಹನೆ, ಸೌಹಾರ್ದತೆ ಮತ್ತು ನೆಮ್ಮದಿಯ ಭರವಸೆ ನೀಡುತ್ತಿದ್ದ ಧರ್ಮಗಳಿಗೆ ಮತಾಂಧತೆಯ ಅಫೀಮು ತಿನ್ನಿಸಿ ದ್ವೇಷಾಸೂಯೆಗಳ ಅಗ್ನಿಪರ್ವತವನ್ನು ಸೃಷ್ಟಿಸಿ ಮಾರಣ ಹೋಮ ನಡೆಸಲಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ಜಗತ್ತನ್ನು ವಿನಾಶದ ಅಂಚಿನಿಂದ ಪಾರುಮಾಡಲು ವೈಜ್ಞಾನಿಕ ಪ್ರಜ್ಞೆಯನ್ನು ಎಲ್ಲಾ ಜನರ ಮನಸ್ಸಿನಲ್ಲಿ ಮೂಡಿಸುವ ಪ್ರಯತ್ನ ಅತ್ಯಂತ ತುರ್ತಾಗಿ ಆಗಬೇಕಾಗಿದೆ.

ವಿಜ್ಞಾನದ ರೆಂಬೆ ಕೊಂಬೆಗಳ ರೂಪದಲ್ಲಿನ ತಂತ್ರಜ್ಞಾನಗಳನ್ನು ಇಂದಿನ ಜಗತ್ತು ಆರಾಧಿಸುತ್ತಿದೆ. ಅದಕ್ಕೇ ಅತಿಯಾದ ಮಹತ್ವವನ್ನು ಕಲ್ಪಿಸಲಾಗುತ್ತಿದೆ. ತಂತ್ರಜ್ಞಾನ ಕಾಮಧೇನುವಿನಿಂದ ತಮಗೆ ಬೇಕಾದ್ದನ್ನು ಬೇಕಾದ ಪ್ರಮಾಣದಲ್ಲಿ ಪಡೆದುಕೊಳ್ಳುವ ಅತ್ಯುತ್ಸಾಹದಲ್ಲಿ ಅದನ್ನು ಅದರ ಮೂಲ ಬೇರುಗಳಿಂದ ಬೇರ್ಪಡಿಸಿ ಕೊಲ್ಲಲಾಗುತ್ತಿದೆ. ವಿಜ್ಞಾನದ ಸಾಧನಗಳನ್ನು ಸನ್ಯಾಸಿಗಳಿಂದ ಹಿಡಿದು ಅತ್ಯಂತ ಸಾಮಾನ್ಯರವರೆಗೆ ವ್ಯಾಪಕವಾಗಿ ಬಳಸಲಾಗುತ್ತಿದೆ. ವಿಜ್ಞಾನದ ಸೇವೆಗಳು ಒಂದಲ್ಲ ಒಂದು ರೂಪದಲ್ಲಿ ಎಲ್ಲರಿಗೂ ಸಲ್ಲುತ್ತಿವೆ. ಆದರೆ ಈ ವಿಜ್ಞಾನದ ಸೇವೆ, ಸಾಧನಗಳನ್ನು ಬಳಸಿಕೊಳ್ಳುತ್ತಿರುವವರು ವಿಜ್ಞಾನವನ್ನು ರೂಪಿಸುವ ''ವೈಜ್ಞಾನಿಕ ವಿಧಾನಗಳನ್ನು'' ಸಂಪೂರ್ಣವಾಗಿ ಕಡೆಗಣಿಸುತ್ತಿದ್ದಾರೆ. ವಿಜ್ಞಾನ ತಂತ್ರಜ್ಞಾನವನ್ನು ರೂಪಿಸುವ ವಿಜ್ಞಾನಿಗಳೆಂಬ ಕಾರ್ಮಿಕರಿಗೆ ಅದೊಂದು ಹೊಟ್ಟೆಪಾಡಿನ ಕೆಲಸ ಮಾತ್ರವಾಗಿಬಿಟ್ಟಿದೆ. ಪ್ರಯೋಗಾಲಯದಲ್ಲಿ ವೈಜ್ಞಾನಿಕ ಮಾರ್ಗದ ಹೆಜ್ಜೆ ಹೆಜ್ಜೆಯನ್ನು ತಪ್ಪದೇ ಪರಿಪಾಲಿಸುವ ಈ ಹಮಾಲಿಗಳು ಅದರ ಹೊಸಿಲು ದಾಟುತ್ತಿದ್ದಂತೆ ಮೌಢ್ಯತೆಗಳ ದಾಸಾನುವರ್ತಿಗಳಾಗಿಬಿಡುತ್ತಾರೆ. ಜಾಗತೀಕರಣ ಮತ್ತು ಉದಾರೀಕರಣದ ನೀತಿಯ ಗುಲಾಮರಾಗಿರುವ ಈ ವಿಜ್ಞಾನಿಗಳು ''ವೃತ್ತಿಪರತೆ''ಯ ಹೆಸರಿನಲ್ಲಿ ಜೂಜಿನ ಕುದುರೆಗಳಂತೆ ತಮಗೆ ನೀಡಲಾದ ಸಮಸ್ಯೆಯನ್ನು ಪರಿಹರಿಸಿ ಅದಕ್ಕೆ ಯಶಸ್ಸಿನ ಪ್ರಶಸ್ತಿಯನ್ನು, ಹಣ, ಕೀರ್ತಿ, ಪ್ರತಿಷ್ಠೆಗಳನ್ನು ಪಡೆದು ವಿಲಾಸಿ ಜೀವನದಲ್ಲಿ ಮೈಮರೆಯುತ್ತಿದ್ದಾರೆ. ವೈಜ್ಞಾನಿಕ ಮಾರ್ಗದ ಬಗೆಗಿನ ಈ ಅಸಡ್ಡೆ ನಿರ್ಲಕ್ಷ್ಯ ಅತ್ಯಂತ ವಿಕೃತ ಬೆಳವಣಿಗೆಯನ್ನು ಸಾಧಿಸಿ ಜಗತ್ತನ್ನು ಏರುಪೇರು ಮಾಡುತ್ತಿದೆ. ಅತ್ಯಂತ ಉನ್ನತ ಆದರ್ಶಗಳನ್ನು ಇಟ್ಟುಕೊಂಡು ತಮ್ಮ ಜೀವಮಾನವನ್ನೇ ಪ್ರಯೋಗಾಲಯದಲ್ಲಿ ತೇದು ತೇದು ಮಾನವ ಕಲ್ಯಾಣದ ಶ್ರೀಗಂಧವನ್ನಿಡುತ್ತಿದ್ದ ವಿಜ್ಞಾನಿ ಪರಂಪರೆಯೆ ಕಣ್ಮರೆಯಾಗಿ ಅವರು ಇಂದು ತಮ್ಮ ಸಾಮಾಜಿಕ ಜವಾಬ್ದಾರಿಗಳನ್ನು ಮರೆತು ಹಣ, ಆಸ್ತಿ, ಅಂತಸ್ತು ಪ್ರತಿಷ್ಠೆಗಳ ದಾಸರಾಗಿದ್ದಾರೆ. ಬರ್‌ಟ್ರೆಂಡ್ ರಸೆಲ್, ಆಲ್ಬರ್ಟ್ ಐನ್‌ಸ್ಟಿನ್, ಮೇಡಂ ಕ್ಯೂರಿ, ಎಡ್ವರ್ಡ್ ಜನ್ನರ್, ಲೂಯಿ ಪಾಶ್ಚರ್, ಪಿ. ಸಿ. ರೇ, ಮೇಘನಾದ ಸಹಾ, ಸರ್. ಎಂ. ವಿಶ್ವೇಶ್ವರಯ್ಯ ಮುಂತಾದವರ ಆದರ್ಶಮಯ ಬದುಕು ವಿಚಾರಗಳು ನಮ್ಮ ವಿಜ್ಞಾನಿಗಳನ್ನು ರೂಪಿಸುತ್ತಿಲ್ಲ. ಅದಕ್ಕೆ ಬದಲಾಗಿ ಮಾರುಕಟ್ಟೆಯ ನೀತಿ ಆದರ್ಶಗಳು ನಮ್ಮ ವಿಜ್ಞಾನಿಗಳನ್ನು ಆಳುತ್ತಿವೆ. ಬಂಡವಾಳದ ದೊರೆಗಳು ಎಸೆಯುವ ಕುರುಡು ಕಾಂಚಾಣದ ತಾಳಕ್ಕೆ ಕುಣಿಯುವ ಭರಾಟೆಯಲ್ಲಿ ವೈಜ್ಞಾನಿಕ ಮನೋಭಾವ ಕಾಲಕಸವಾಗಿದೆ. ಬಂಡವಾಳಿಗರು ನಿರ್ಧರಿಸುವ ಆದ್ಯತೆಗಳ ಆಧಾರದಲ್ಲಿ ತಮ್ಮ ಸಂಶೋಧನೆಗಳನ್ನು ನಡೆಸಿ ತಮಗೆ ಬೇಕಾದ ಭೋಗ ಭಾಗ್ಯಗಳನ್ನು ಪಡೆದುಕೊಂಡು ಸುಖದ ಸುಪ್ಪತ್ತಿಗೆಯಲ್ಲಿ ಓಲಾಡುವುದನ್ನೇ ಜೀವನದ ಯಶಸ್ಸೆಂದು ಬಿಂಬಿಸಲಾಗುತ್ತಿದೆ. ತನ್ನ ಪರಿಣತಿ ಮತ್ತು ಪರಿಶ್ರಮವನ್ನು ಬಂಡವಾಳಗಾರರ ಆಸೆ ಆಕಾಂಕ್ಷೆಗಳಿಗೆ ಧಾರೆಯೆರೆದು ಅವರು ಮಾರಬಯಸುವ ಸೇವೆ, ಸಾಧನ, ಉತ್ಪನ್ನಗಳನ್ನು ಸೃಷ್ಟಿಮಾಡಿಕೊಟ್ಟು, ಅವನಿಗೆ ಪೇಟೆಂಟ್ ಪಡೆಯಲು, ಅದರ ಮೂಲಕ ಜಗದ ಜನತೆಯನ್ನು ಲೂಟಿ ಮಾಡಲು ಮುಕ್ತ ಅವಕಾಶ ನೀಡಿ ಅವನ ಲೂಟಿಯಲ್ಲಿ ತಾನೂ ಪಾಲು ಪಡೆದು ವಿಜ್ಞಾನದ ಆದರ್ಶಕ್ಕೇ ದ್ರೋಹ ಬಗೆಯುತ್ತಿದ್ದಾರೆ. ಇಂತಹ ಲಜ್ಜೆಗೆಟ್ಟ ನೀತಿಯನ್ನೇ ಹಾಡಿ ಹೊಗಳಿ ವೈಭವೀಕರಿಸುತ್ತಿರುವುದರಿಂದ ವೈಜ್ಞಾನಿಕ ಮನೋ ಭಾವ ಮೂಲೆಗುಂಪಾಗಿದೆ. ತಂತ್ರಜ್ಞಾನ ಸಂಪಾದಿಸಿ ಕೊಟ್ಟ ಅಪಾರ ಐಶ್ವರ್ಯವೇ ಆರಾಧಿಸಲ್ಪಟ್ಟು ತಂತ್ರಜ್ಞಾನದ ಅಂತಃಸತ್ವವಾದ ವೈಜ್ಞಾನಿಕ ಮನೋಭಾವವನ್ನು ಕತ್ತು ಹಿಸುಕಿ ಕೊಲ್ಲಲಾಗುತ್ತಿದೆ. ನಮ್ಮ ವಿದ್ಯಾರ್ಥಿಗಳಿಗೂ ಇಂತಹುದೇ ಆದರ್ಶಗಳನ್ನು ತುಂಬಲಾಗುತ್ತಿದೆ. ನಮ್ಮ ವಿದ್ಯಾರ್ಥಿಗಳಿಗೆ ವಿಜ್ಞಾನಮಾರ್ಗದಲ್ಲಿ ನಡೆಯುವ ಕೌಶಲ್ಯವನ್ನು ಕಲಿಸದೇ ಕೇವಲ ಅಂಕಗಳನ್ನು ಸಂಪಾದಿಸುವ ಸಿಪಾಯಿಗಳನ್ನಾಗಿಸಲಾಗಿದೆ. ಈ ಅಂಕಗಳ ಕೀಲಿ ಕೈಗಳಿಂದ ಅವರು ತಮ್ಮ ಉನ್ನತಿಯ ತಾಂತ್ರಿಕ ಕೋರ್ಸ್‌ಗಳ ಮಹಾದ್ವಾರವನ್ನು ಪ್ರವೇಶಿಸಿ ತಂತ್ರಜ್ಞಾನದ ಮಾಯಾಜಿಂಕೆಯ ಮೋಹದಲ್ಲಿ ವೈಜ್ಞಾನಿಕ ಮಾರ್ಗವನ್ನು ಕೈಬಿಡುತ್ತಾರೆ.

ಈ ಮನೋಭಾವದಿಂದಾಗಿ ಇಂದು ಶಿಕ್ಷಣ ಕೋರ್ಸ್‌ಗಳ ಬೇಡಿಕೆಗಳು ಷೇರುಮಾರುಕಟ್ಟೆಯ

ಸೂಚ್ಯಂಕದಂತೆ ಆಕಾಶಕ್ಕೆ ಹಾರಿ ಒಮ್ಮಿಂದೊಮ್ಮೆಗೆ ನೆಲಕಚ್ಚುತ್ತವೆ. ಇದರಿಂದಾಗಿ ಇಂದು ಮೂಲ ವಿಜ್ಞಾನದ ವಿಷಯಗಳನ್ನು ಕಲಿಯಲು ವಿದ್ಯಾರ್ಥಿಗಳೇ ಸೇರದೇ ವಿಜ್ಞಾನದ ಸಂಯೋಜನೆಗಳು ಕಾಲೇಜಿನಿಂದ ಎತ್ತಂಗಡಿಯಾಗುತ್ತಿವೆ. ಹೊಟ್ಟೆಪಾಡಿನ ವಿಜ್ಞಾನಿ ಉಪಾಧ್ಯಾಯರು ಈ ಬೆಳವಣಿಗೆಯ ಬಗ್ಗೆ ಗಂಭೀರವಾಗಿ ಆಲೋಚಿಸಿ ಕಾರ್ಯೋನ್ಮುಖರಾಗದಿದ್ದರೆ ವಿಜ್ಞಾನಕ್ಕೆ ಅಲ್ಲದೆ ಅವರ ವೃತ್ತಿ ಬದುಕಿಗೆ ಸಂಚಕಾರ ಬರಲಿದೆ.

> ಯಾವ ಸಮಾಜದಲ್ಲಿ ಶ್ರೇಷ್ಠತಮ ಸತ್ಯಗಳ ಅನುಷ್ಠಾನ ಸಾಧ್ಯವಾಗುವುದೋ ಅದೇ ಶ್ರೇಷ್ಠ ಸಮಾಜ. ಇದೇ ನನ್ನ ಅಭಿಪ್ರಾಯ. ಸಮಾಜದಲ್ಲಿ ಶ್ರೇಷ್ಠ ಸತ್ಯವನ್ನು ಅನುಷ್ಠಾನಕ್ಕೆ ತರಲು ಸಾಧ್ಯವಿಲ್ಲದೆ ಇದ್ದರೆ ಅದು ಸಾಧ್ಯವಾಗುವಂತೆ ಮಾಡಿ ಅದನ್ನು ಎಷ್ಟು ಬೇಗ ಮಾಡಿದರೆ ಅಷ್ಟು ಒಳ್ಳೆಯದು. ಈ ರೀತಿ ಸ್ತ್ರೀ ಪುರುಷರು ಒಂದು ಆದರ್ಶಕ್ಕೆ ನಿಲ್ಲಬೇಕು. ಸತ್ಯವನ್ನು ನಿರ್ಭಯವಾಗಿ ನಂಬಿ; ನಿರ್ಭಯವಾಗಿ ಅನುಷ್ಠಾನಕ್ಕೆ ತನ್ನಿ.
>
> – ಸ್ವಾಮಿ ವಿವೇಕಾನಂದ

ಪರಿಸ್ಥಿತಿ ಇಂತಹ ಗಂಭೀರ ಹಂತವನ್ನು ತಲುಪಿದರೂ ಹೊಟ್ಟೆಪಾಡಿನ ವಿಜ್ಞಾನಿಗಳು ತಮ್ಮ ದಂತಗೋಪುರಗಳಲ್ಲೇ ಕುಳಿತಿರುವುದು, ಇಂತಹ ಅಪಾಯಕಾರಿ ಬೆಳವಣಿಗೆಯ ಬಗ್ಗೆ ಮೌನದಿಂದಿರುವುದು ವೈಜ್ಞಾನಿಕ ಮನೋಭಾವಕ್ಕೆ ಒಂದು ದೊಡ್ಡ ಸವಾಲು ಮತ್ತು ಸಮಸ್ಯೆಯಾಗಿದೆ. ಪರೀಕ್ಷಾ ಪದ್ಧತಿಯಲ್ಲಿ ತತ್ವಾಧಾರಿತ ಪ್ರಾಧಾನ್ಯತೆ ಅತಿಯಾಗಿದ್ದು ಪ್ರಾಯೋಗಿಕ ಅಂಶಗಳು ಗೌಣವಾಗಿವೆ. ಪ್ರಾಯೋಗಿಕ ಪರೀಕ್ಷೆಗೆ ಅಂಕೆಗಳು ಕಡಿಮೆ ಇವೆ. ಈ ವಿಕೃತಿಯಿಂದಾಗಿ ವಿಜ್ಞಾನದ ವಿಷಯಗಳನ್ನು ಅತ್ಯಂತ ನೀರಸವಾಗಿ ಆಸಕ್ತಿಹೀನವಾಗಿ ಇತರ ವಿಷಯಗಳಂತೆ ಬೋಧಿಸಲಾಗುತ್ತಿದೆ. ಅತ್ಯಂತ ಸೂಕ್ಷ್ಮವೀಕ್ಷಣೆ, ದತ್ತಾಂಶ ಸಂಗ್ರಹ, ವಿಮರ್ಶಾದೃಷ್ಟಿ, ವಿಶ್ಲೇಷಣೆ-ತೀರ್ಮಾನ, ಅದರ ಪುನರಾವರ್ತಿತ ವಿಮರ್ಶೆಯ ನಂತರ ಅದನ್ನು ಸ್ವೀಕರಿಸುವ ಮನೋಭಾವಗಳನ್ನು ನಮ್ಮ ವಿಜ್ಞಾನ ತರಗತಿಗಳಲ್ಲಿ ವಿದ್ಯಾರ್ಥಿಗಳಿಗೆ ಕಲಿಸಲಾಗುತ್ತಿಲ್ಲ. ಪ್ರತಿಯೊಂದನ್ನು ಪ್ರಶ್ನಿಸುವ ಮತ್ತು ಸೂಕ್ತ ಉತ್ತರಗಳನ್ನು ಅನ್ವೇಷಿಸುವ ಕುತೂಹಲವನ್ನು ನಮ್ಮ ವಿದ್ಯಾರ್ಥಿಗಳಿಗೆ ಒದಗಿಸಲಾಗುತ್ತಿಲ್ಲ. ಘಟನೆಗಳ ಕಾರ್ಯಕಾರಣ ಸಂಬಂಧಗಳನ್ನು ಹುಡುಕುವ ಮನೋಭಾವವನ್ನು ರೂಢಿಸಲು ನಮ್ಮ ತರಗತಿಗಳು ಸಂಪೂರ್ಣವಾಗಿ ಸೋತಿವೆ. ಒಂದು ವಿಷಯದ ಅತೀ ವಿಶೇಷ ಜ್ಞಾನ ಪಡೆಯುವ ಹುಂಬತನದಲ್ಲಿ ಅವುಗಳನ್ನು ಕೃತಕವಾಗಿ ಬೇರ್ಪಡಿಸಿ ವಿಷಯಗಳ ನಡುವಿನ ಅಂತರ್ ಸಂಬಂಧಗಳ ಕೊಂಡಿಗಳನ್ನು ತುಂಡರಿಸಿ ಸಮಗ್ರ ಜ್ಞಾನದ ಪರಿಕಲ್ಪನೆಯನ್ನೇ ಕಡೆಗಣಿಸಲಾಗಿದೆ. ಕ್ಷೇತ್ರ ಕಾರ್ಯದ ಕಲಿಕೆ, ಪ್ರಾಯೋಗಿ ಕಲಿಕೆಯನ್ನು ಹೆಸರಿಗೆ ಮಾತ್ರ ಔಪಚಾರಿಕವಾಗಿ ಅನುಸರಿಸಲಾಗುತ್ತಿದೆ. ವಿಜ್ಞಾನ ಶಿಕ್ಷಣದಲ್ಲಿ ಜ್ಞಾನ ಮತ್ತು ಕೌಶಲ್ಯಗಳ ನಡುವೆ ಸಮತೋಲನ ತರಬೇಕಾಗಿದೆ. ಇಂತಹ ಗಂಭೀರ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಬೇಕಾದ ಸರ್ಕಾರ ಸಹ ವಿಜ್ಞಾನ ಶಿಕ್ಷಣಕ್ಕೆ ಮತ್ತು ವೈಜ್ಞಾನಿಕ ಮನೋಭಾವಕ್ಕೆ ಮರಣ ಶಾಸನ ಬರೆಯಲು ಮುಂದಾಗಿದೆ. ದೇಶದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸುವ ಹೆಸರಿನಲ್ಲಿ ಅತ್ಯಂತ ಅವೈಜ್ಞಾನಿಕ, ತಿರಸ್ಕರಿಸಲ್ಪಟ್ಟ ಮಧ್ಯ ಯುಗೀನ ಮೌಲ್ಯಗಳನ್ನು ಹಾಡಿ ಹೊಗಳಿ ಪಠ್ಯವಸ್ತುವನ್ನಾಗಿಸಲಾಗಿದೆ. ಇದು ಸಾಲದೆಂಬಂತೆ ವಿಶ್ವವಿದ್ಯಾಲಯಗಳಲ್ಲಿ ಜ್ಯೋತಿರ್ ಶಾಸ್ತ್ರದ ಹೆಸರಿನಲ್ಲಿ ಗಿಳಿ ಶಾಸ್ತ್ರದ ಕೋರ್ಸ್‌ಗಳನ್ನಾರಂಭಿಸಿ ವಿಜ್ಞಾನದ ವಿಷಯಗಳಿಗೆ ತರ್ಪಣ ಬಿಟ್ಟು ಪಿಂಡವನ್ನಿಡಲಾಗುತ್ತಿದೆ. ಖಾಸಗೀಕರಣಗೊಂಡ ಶಿಕ್ಷಣ ಕ್ಷೇತ್ರದಲ್ಲಿ ಮಠಾಧಿಪತಿಗಳು ತಮ್ಮ ಸಾಮ್ರಾಜ್ಯಗಳನ್ನು ಸ್ಥಾಪಿಸಿಕೊಂಡು ವೈಜ್ಞಾನಿಕ ಮನೋಭಾವವನ್ನು ತಮ್ಮ ಗದ್ದುಗೆಯ ಅಡಿಪಾಯದಲ್ಲಿ ಹೂತುಹಾಕಿ ತಾಂತ್ರಿಕ, ವೈದ್ಯಕೀಯ, ಆಡಳಿತ ಕೋರ್ಸುಗಳೆಂಬ ಶಿಕ್ಷಣ ಶೋ ರೂಂ ಸ್ಥಾಪಿಸಿ ವಿಜೃಂಭಿಸುತ್ತಿದ್ದಾರೆ. ನಮ್ಮ ರಾಜಕಾರಣಿಗಳು ಪೈಪೋಟಿಯಲ್ಲಿ ಅವರಿಗೆ ಸಾರ್ವಜನಿಕವಾಗಿ ಅಡ್ಡ ಬಿದ್ದು ಮೂಢನಂಬಿಕೆಯ ಮಹಾಪ್ರದರ್ಶನ ಮಾಡುತ್ತಿದ್ದಾರೆ.

ನಮ್ಮ ಪತ್ರಿಕೆಗಳು, ಸಮೂಹ ಮಾಧ್ಯಮಗಳು ಅವೈಜ್ಞಾನಿಕ ಸಂಗತಿಗಳನ್ನು, ಘಟನೆಗಳನ್ನು ರೋಚಕಗೊಳಿಸಿ ಪ್ರಚಾರಮಾಡಿ ತಮ್ಮ ವಾಚಕರ ಮತ್ತು ವೀಕ್ಷಕ ಸಮೂಹವನ್ನು ಮೌಢ್ಯತೆಯ ಕೂಪಕ್ಕೆ ತಳ್ಳುತ್ತಿವೆ. ಕಾಗೆ ಗುಬ್ಬಚ್ಚಿಗಳ ಅಂತೆ ಕಂತೆಗಳನ್ನು ಸಂತೆಯ ಕಾಲಜ್ಞಾನಿಗಳಂತೆ ಪ್ರಚಾರ ಮಾಡಿ ಜನರ ಮನಸ್ಸಿನಲ್ಲಿ ಅವೈಜ್ಞಾನಿಕತೆಯ ಬೀಜಗಳನ್ನು ಬಿತ್ತುತ್ತಾರೆ. ಸಿನಿಮಾಗಳಲ್ಲಿ ಮತ್ತು ಸೀರಿಯಲ್‌ಗಳಲ್ಲಿ ಮೂಢನಂಬಿಕೆಗಳನ್ನು ಪ್ರೋತ್ಸಾಹಿಸುವ, ವೈಭವೀಕರಿಸುವ ದೃಶ್ಯಾವಳಿಗಳೇ ಅತಿ ಹೆಚ್ಚಾಗಿ ಪ್ರಸಾರಗೊಳ್ಳುತ್ತಿವೆ. ಲಾಟರಿ, ಜೂಜುಗಳಂತಹ ವೀಕ್ಷಕ ಸ್ಪರ್ಧೆಗಳ ಮೂಲಕ ಆಕರ್ಷಕ ಬಹುಮಾನಗಳಿಂದ ಹಿಡಿದು ಕೋಟ್ಯಾಧಿಪತಿಯಾಗುವ ಕನಸುಗಳನ್ನು ಜನಸಾಮಾನ್ಯರಲ್ಲಿ ಬಿತ್ತಿ ಅವರನ್ನು ಅದೃಷ್ಟ ದೇವತೆಯನ್ನರಿಸಿ ಹೋಗುವಂತೆ ಪ್ರೇರೇಪಿಸಲಾಗುತ್ತಿದೆ. ಅತಿಯಾದ ಸ್ಪರ್ಧೆ, ಅನಿಶ್ಚಯತೆ, ಅಪಘಾತ, ನೋವು, ನಿರಾಶೆಗಳು ಜನರನ್ನು ಅನಿವಾರ್ಯವಾಗಿ ಮೌಢ್ಯಕ್ಕೆ ದೂಡುತ್ತಿವೆ.

ಅವೈಜ್ಞಾನಿಕ ವಿಚಾರಗಳ ಹುಚ್ಚು ಹೊಳೆಯಲ್ಲಿ ವೈಜ್ಞಾನಿಕ ಮನೋಭಾವ ಮೂಡಿಸಲು ಕೆಲವು ಸಂಘ ಸಂಸ್ಥೆಗಳು ಪ್ರಯತ್ನ ನಡೆಸುತ್ತಿದ್ದರೂ ಅದು ಹೊಳೆಯಲ್ಲಿ ಹುಣಸೇ ಹಣ್ಣು ತೊಳೆದಷ್ಟೇ ಪ್ರಯೋಜನಕಾರಿ. ಅವೈಜ್ಞಾನಿಕತೆಯ ಮಹಾಗದ್ದಲದಲ್ಲಿ ಅವರ ಕ್ಷೀಣ ಧ್ವನಿಗಳು ಕೇವಲ ನರಳಿಕೆಗಳಾಗಿವೆ. ಇದಲ್ಲದೆ ಈ ಧ್ವನಿಗಳು ಒಂಟಿ ಧ್ವನಿಯಾಗಿ ಪರಿಣಾಮವನ್ನುಂಟುಮಾಡಲು ಸಾಧ್ಯವಾಗುತ್ತಿಲ್ಲ. ವೈಜ್ಞಾನಿಕ ಮನೋಭಾವವನ್ನು ಪ್ರಚಾರ ಮಾಡುವವರಲ್ಲಿ ಐಕ್ಯತೆಯಿಲ್ಲ. ಇವರನ್ನು ಬಹುಪಾಲು ಸಂದರ್ಭಗಳಲ್ಲಿ ವಿಚಿತ್ರ ವ್ಯಕ್ತಿಗಳೆಂದು ಹಣೆಪಟ್ಟಿ ಹಚ್ಚಿ ಕಡೆಗಣಿಸುತ್ತಾರೆ. ಇದರಿಂದ ಮಾನಸಿಕ ಹಿಂಸೆಗೆ ಗುರಿಯಾಗುವ ಅನೇಕ ವಿದ್ಯಾವಂತರು ನಿಷ್ಕ್ರಿಯರಾಗಿ ಮೌನಕ್ಕೆ ಶರಣಾಗತರಾಗಿ ಮೌಢ್ಯತೆಗೆ ಪರೋಕ್ಷ ಬೆಂಬಲ ನೀಡುತ್ತಾರೆ. ಮತ್ತೆ ಕೆಲವರಲ್ಲಿ ವೈಜ್ಞಾನಿಕ ಮನೋಭಾವವೆನ್ನುವುದು ವಿಜ್ಞಾನಿಗಳಿಗೆ ಸಂಬಧಿಸಿದ ವಿಚಾರ; ಕಲೆ, ಸಾಹಿತ್ಯ, ಸಮಾಜ ವಿಜ್ಞಾನದ ವಿಷಯಗಳಿಗೂ ಅದಕ್ಕೂ ಸಂಬಂಧವಿಲ್ಲವೆಂದು ಅವರು ಭಾವಿಸುತ್ತಾರೆ. ಈ ಎಲ್ಲಾ ವಿಚಾರಗಳಲ್ಲೂ ವೈಜ್ಞಾನಿಕ ಮಾರ್ಗಾನುಸರಣೆಯನ್ನು ಅನುಸರಿಸಲಾಗುವುದೆಂಬುದನ್ನು ಕಡೆಗಣಿಸಲಾಗಿದೆ.

ವೈಜ್ಞಾನಿಕ ತಿಳುವಳಿಕೆಗೆ ಸಂಘಟಿತ ಪ್ರಯತ್ನ ನಡೆಸಲು ಕೇವಲ ವಿಜ್ಞಾನಿಗಳು, ವಿಜ್ಞಾನ ಬೋಧಕರು, ವಿದ್ಯಾರ್ಥಿಗಳು ಮಾತ್ರ ಸಾಕಾಗುವುದಿಲ್ಲ. ಅದನ್ನು ಒಂದು ಜೀವನ ಕ್ರಮವಾಗಿ ರೂಪಿಸಿ ಎಲ್ಲಾ ಜ್ಞಾನದ ಶಾಖೆಗಳ ಜನರೂ ವೈಜ್ಞಾನಿಕ ಚಳುವಳಿಯ ಭಾಗವಾದಾಗ ಮಾತ್ರ ಅದೊಂದು ಸಂಘಟಿತ ಚಳುವಳಿಯಾಗಬಲ್ಲದು. ಸಾಮಾನ್ಯ ಜನ ಮತ್ತು ಮಹಿಳೆಯರನ್ನು ಈ ಚಳುವಳಿ ಒಳಗೊಳ್ಳಬೇಕು. ವೈಜ್ಞಾನಿಕ ಮನೋಭಾವ ಪರಿಸರ ಪ್ರಜ್ಞೆಯಾಗಿ, ಸಾಮಾಜಿಕ ಕಳಕಳಿಯಾಗಿ ಶಾಂತಿಪ್ರಿಯತೆಯಾಗಿ ಹೊಸ ಹೊಸ ಆಯಾಮಗಳನ್ನು ಪಡೆದುಕೊಂಡಾಗ ಮಾತ್ರ ವ್ಯಾಪಕ ಜನಮನ್ನಣೆ ಪಡೆದು ಒಂದು ಸಂಘಟಿತ ಪ್ರಯತ್ನವಾಗುವುದು. ಅಂತಹ ಒಂದು ಸಂಘಟಿತ ಪ್ರಯತ್ನ ಇಂದಿನ ತುರ್ತು ಅಗತ್ಯ. ಈ ಅಗತ್ಯದ ಪೂರೈಕೆಗಾಗಿ ಪ್ರಗತಿಪರರೆಲ್ಲರೂ ಹಿಂದೆಂದಿಗಿಂತಲೂ ಹೆಚ್ಚಿನ ಹುರುಪಿನಿಂದ ಕೆಲಸ ಮಾಡಬೇಕಾದ ಅಗತ್ಯವಿದೆ.

ಸಿ. ಯತಿರಾಜು
ಪ್ರಾಂಶುಪಾಲರು, ಕಾಳಿದಾಸ ಕಾಲೇಜು, ತುಮಕೂರು

# ನೋ ಮ್ಯಾನ್ ಲ್ಯಾಂಡ್ ಕವಿತೆಗಳು



### ಕವಿತೆ ಒಂದು

ಎರಡು ಬೇಲಿಯ ಕಾಯುವ ಕೆಲಸ
ಎರಡು ಕನಸಿಗೂ ಸರಿವ ಕಣ್ಣುಗುಡ್ಡೆಗಳು
ಎರಗುವ ಗುಂಡುಗಳಿಗೆ ಮೈಬಿಟ್ಟ ಹೊತ್ತು
ಒಂದು ಹೊರಳು ಅಲ್ಲಿ ಒಂದು ಹೊರಳು ಇಲ್ಲಿ

ವಾರಸುದಾರರಿಲ್ಲದ ಶವ ಕಾಯುತ್ತ ಮಲಗಿದೆ
ಒಡಲ ತಣ್ಣಗಾಗಿಸುವ ಬೆಂಕಿ
ಯಾವ ನೆಲದಿಂದ ಉದಿಸುವುದೋ
ಕಡ್ಡಿ ಗೀರುವ ಮೊದಲು ಬೆಂಕಿ ಎರಚಾಟ

ಯಾರು ಆ ತಾಯಿ ಅವಳೋ ಇವಳೋ
ಕಳವಳದ ಹಾಲಿಗೆ ದಾರಿ ಸಿಗುವುದೋ ಇಲ್ಲವೋ
ಇಲ್ಲಿ ಹೊಕ್ಕಳ ಬಳ್ಳಿ ನಡಗುತ್ತಿದೆ

ಯಾವ ರಾಷ್ಟ್ರಗೀತೆಗೂ ಶವವು ಮಿಸುಗುತ್ತಿಲ್ಲ
ಯಾವ ಹೊಕ್ಕಳಿಗೂ ರಾಷ್ಟ್ರಗೀತೆಯಿಲ್ಲ

### ಕವಿತೆ ಎರಡು



ಇರುವ ಜಾಗ ಬರೆದಂತೆ
ಇರದ ಜಾಗವೂ ತೋರುವುದು

ನಕ್ಷೆ ಎಳೆಯದ ಊರಿಗೂ
ನಕ್ಷೆಯೊಂದು ಇರುವುದು

ರೆಪ್ಪೆಯೊಳಗಿನ ನೋಟ
ಆಕಾರ ಬರೆದುಕೊಳ್ಳುವಲ್ಲಿ
ರೆಪ್ಪೆಯಾಚೆಗಿನ ಲೋಕ
ಆಕಾರಗೆಡುವುದು

ಆಕಾರಗೆಟ್ಟ ಆಕಾಶ ಮೌನವಾಗಿದೆ
ಧರೆಯು ಯಾಕೋ ಸಿಡಿಯುತ್ತಿದೆ

### ಕವಿತೆ ಮೂರು



ಅವರು ಅಲ್ಲಿ ಕಾಯುತ್ತಿದ್ದಾರೆ
ತೊರೆವ ಆತುರ ಸೇರುವ ತವಕ
ಅನಾಥ ನೋಟ

ದಾಟಿಕೊಳ್ಳುವ ಯಾತನೆ
ಬಿಡುವ ಹಿಂಸೆ
ಪಡೆವ ನೋವು
ಜನರ ಸೆರೆಯಿಂದ ಜನರ ಸೆರೆಗೇ
ನಡುವೆ ಯಾರೂ ಇಲ್ಲದ ಸೇತುವೆ

ಶೂನ್ಯ ದಾಟುವ ಲಜ್ಜೆ ನೋಡಾ

### ಕವಿತೆ ನಾಲ್ಕು



ಇಳೆಗೊಂದು ಪಾದ
ಬಾನಿಗೊಂದು ಪಾದ
ಮೂರನೆಯದು ಎಲ್ಲಿ ?

ಮೂರನೆಯ ಪಾದಕ್ಕೆ
ಮೂರನೆಯ ಜಾಗ
ಬಲಿ
ಯಾದಂತೆ ಸಿಡಿದ ಖಂಡ
ಖಂಡ

ಯಾರದೋ ದೀಪಾವಳಿ
ಯಾರದೋ ಪಾಡ್ಯಮಿ

### ಕವಿತೆ ಐದು



ಗೆರೆಯೆಳೆದುಕೊಂಡವರಿಗೆಲ್ಲಾ
ಎಳೆದುಕೊಳ್ಳದವರ ಒಂದು ಸಾಕ್ಷಿ

ಮುಖವಿಟ್ಟರೆ ಪ್ರೀತಿ
ಬೆನ್ನಿಟ್ಟರೆ ಮುನಿಸು
ಮನದ ಸಾಕ್ಷಿಗೆ ಎಷ್ಟು ಮಗ್ಗಲು ?

ಅವಳು ಹೊರಳಿಯೇ ಹೊರಳಿದಳು
ತೊಳೆಯುವ ದಿನಕಾಗಿ
ಬದುಕೆಲ್ಲಾ ಮುಟ್ಟು

ಮುಟ್ಟಿಕೊಂಡೇ ಬದುಕಿದಳು

### ಕವಿತೆ ಆರು



ನನ್ನೊಳಗೆ ತಡಕಾಡುತ್ತಲೇ ಇದ್ದೇನೆ
ಹತ್ತಾರು ದ್ವೀಪಗಳು
ಯಾವಾಗ ಹುಟ್ಟಿಕೊಂಡವೋ

ಮನಸೆಲ್ಲಿ ಎದೆಯೆಲ್ಲಿ
ಯಾವಾಗ ಎಲ್ಲಿ
ಕವಿದ ಕತ್ತಲೆಯಲ್ಲಿ ಉಳಿದು ಚಡಪಡಿಕೆ

ಹುಡುಕುತ್ತ ತಡಕುತ್ತ
ಹೊರಬಂದು ನಿಂತಂತೆ
ಆ ಕಡೆ ಅವನು ಈ ಕಡೆ ಇವನು

### ಕವಿತೆ ಏಳು



ಹಕ್ಕಿಗಳು ಇಲ್ಲಿ ಇರುತ್ತವೆ
ಗಿಡಗಳು ಹೂ ಬಿಡುತ್ತವೆ
ಮಳೆ ಹನಿಗಳು ಮುತ್ತಿಡುತ್ತವೆ
ದುಂಬಿಗಳು ಹಾಡುತ್ತವೆ

ಏಕೆಂದರೆ ಅವರಾರೂ ಮನುಷ್ಯರಲ್ಲ

ಆದರೆ ಬರುವ ಯಾರೂ
ಒಂದು ಪತಾಕೆ ತರುತ್ತಿಲ್ಲವಲ್ಲ

### ಕವಿತೆ ಎಂಟು



ಸಾಲುಗಳ ನಡುವೆಯೇ ನಿಜವಾದ ಕವಿತೆ
ಪಹರೆ ಸಾಲಿನ ನಡುವೆ ಇರುವುದೇ ಕವಿತೆ ?

ಹುಡುಕುವವರೆಲ್ಲೋ ಬಿದ್ದ ಗುಂಡಿನ ಮಳೆ
ಪಾಂಚಜನ್ಯದ ನಡುವೆ ಕಳೆದ ಕೊಳಲಿನ ಕರೆ

ಕೊಳಲ ತರುವೆಯಾ ಕವಿತೆ
ಕವಿತೆ ಕರೆವೆಯಾ ಕೊಳಲೇ ?


ಜಿ. ಕೆ. ರವೀಂದ್ರಕುಮಾರ್
ಕಾರ್ಯಕ್ರಮ ನಿರ್ವಾಹಕ, ಆಕಾಶವಾಣಿ
ಧಾರವಾಡ - ೫೮೦ ೦೦೮



# ಆತ್ಮಹತ್ಯೆ

## ಬೆಳೆಯುತ್ತಿರುವ ಮನೋ-ಸಾಮಾಜಿಕ ಸಮಸ್ಯೆ

**ಡಾ॥ ಸಿ. ಆರ್. ಚಂದ್ರಶೇಖರ್**

**ಹ**ದಿನಾಲ್ಕು ವರ್ಷದ ಸುರೇಶ ರೈಲು ಹಳಿಯ ಮೇಲೆ ಬಿದ್ದು ಓಡುವ ರೈಲಿಗೆ ಸಿಕ್ಕಿ ಆತ್ಮಹತ್ಯೆ ಮಾಡಿಕೊಂಡ. ಏಳನೇ ತರಗತಿಯ ಪರೀಕ್ಷೆಯಲ್ಲಿ ಎಲ್ಲ ವಿಷಯಗಳಲ್ಲಿ ೮೦ರ ಮೇಲೆ ಅಂಕಗಳನ್ನು ತೆಗೆದಿದ್ದರೂ, ಗಣಿತದಲ್ಲಿ ೪೨ ಅಂಕಗಳು ಬಂದಿದ್ದರಿಂದ ಆತ ನಿರಾಶೆಗೊಂಡಿದ್ದ. ತಂದೆ ತಾಯಿ ಏನು ಶಿಕ್ಷೆ ಕೊಡುವರೋ ಎಂದು ಹೆದರಿದ್ದ. ಗೆಳೆಯರ ಮುಂದೆ ತಾನು ತಲೆ ಎತ್ತಿ ತಿರುಗುವುದು ಹೇಗೆ ಎಂದು ಯೋಚಿಸಿ, ಆತ್ಮಹತ್ಯೆಯೇ ತನ್ನನ್ನು ಈ ಸನ್ನಿವೇಶದಿಂದ ಪಾರು ಮಾಡಬಲ್ಲದು ಎಂದು ನಿರ್ಧರಿಸಿ, ಸತ್ತ.

ಮನೆಗೆ ಬಂದ ಅತಿಥಿಯ ಮುಂದೆ ತಾನು ಮಾಡಿದ ಅಡುಗೆ ಚೆನ್ನಾಗಿಲ್ಲ ಎಂದು ರೇಗಾಡಿದ ಗಂಡನ ವರ್ತನೆಯಿಂದ ಬೇಸತ್ತ ಸರೋಜಿನಿ ಅಡುಗೆ ಮನೆಗೆ ಹೋಗಿ, ಸೀಮೆ ಎಣ್ಣೆ ಸುರಿದುಕೊಂಡು ಬೆಂಕಿ ಹಚ್ಚಿಕೊಂಡು ಸತ್ತಳು.

ಅಕ್ಕಿ ರೊಟ್ಟಿ ತನಗೆ ಸ್ವಲ್ಪವೂ ಇಷ್ಟವಿಲ್ಲ ಎಂದು ತಿಳಿದ ತಾಯಿ ಈ ದಿನವೂ ಅಕ್ಕಿ ರೊಟ್ಟಿ ಮಾಡಿದ್ದಾಳೆ. ಅಂದರೆ ಅವಳಿಗೆ ತನ್ನನ್ನು ಕಂಡರೆ ಸ್ವಲ್ಪವೂ ಇಷ್ಟವಿಲ್ಲ. ಅಣ್ಣ ಒಂದು ಸಲ ಹೇಳಿದರೆ ಸಾಕು ಅವನು ಕೇಳಿದ ತಿಂಡಿಯನ್ನು ಮಾಡಿಕೊಡುತ್ತಾಳೆ. ನಾನು ಹುಡುಗಿ ಎಂದು ಅವಳಿಗೆ ತಾತ್ಸಾರ. ತಾಯಿಗೆ ಬೇಡದ ಮಗಳಾಗಿ ಏಕೆ ಬದುಕಬೇಕು ಎಂದು ಯೋಚಿಸಿದ ತಾರಾ, ಎಲ್ಲರೂ ಮಲಗಿದ್ದಾಗ ಮನೆಯ ಫ್ಯಾನಿಗೆ ನೇಣು ಹಾಕಿಕೊಂಡು ಸತ್ತಳು.

'ಸಾಲ, ಬಡ್ಡಿ, ಸಾಲಗಾರರ ಕಾಟ ಹೆಚ್ಚುತ್ತಲೇ ಇದೆ. ಈ ಸಲವೂ ಒಳ್ಳೆಯ ಫಸಲಿಲ್ಲ. ಈಗಾಗಲೇ ಅನೇಕ ಜನ, ನನ್ನಂತಹ ರೈತರು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ಪೇಪರ್‌ನಲ್ಲಿ ಓದುತ್ತಿದ್ದೇನೆ. ನನ್ನನ್ನು ಈ ಸ್ಥಿತಿಗೆ ನೂಕಿದ ಈ ಸರಕಾರ, ಸಮಾಜ ಕಣ್ತೆರೆಯಬೇಕಾದರೆ ನಾನು ಸಾಯಬೇಕು' ಎಂದು ನಿರ್ಧರಿಸಿದ ನಿಂಗಪ್ಪ ಕ್ರಿಮಿನಾಶಕ ಔಷಧವನ್ನು ಸೇವಿಸಿ ಮೃತಪಟ್ಟ.

ಎರಡು ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ ತನ್ನ ಮದುವೆ ಮಾಡಿದರು. ಗಂಡನಿಗೆ ಚಿನ್ನದ ಸರ, ವಾಚು, ಸ್ಕೂಟರ್ ಕೊಡಿಸಿಯಾಯಿತು. ಅವನಿಗೆ ಇನ್ನಷ್ಟು ಹಣ ಬೇಕಂತೆ. ಹೋಗಿ ಕೇಳಿ, ಹಣ ತೆಗೆದುಕೊಂಡು ಬಾ ಎಂದು ಪ್ರತಿನಿತ್ಯ ಗಂಡ, ಅತ್ತೆ, ಮಾವ ಪೀಡಿಸುತ್ತಿದ್ದಾರೆ. ಈಗಾಗಲೇ ಸಾಲ ಮಾಡಿ ಕಂಗೆಟ್ಟಿರುವ ತಂದೆಯನ್ನು ಇನ್ನಷ್ಟು ಹಣ ಕೊಡಿ ಎಂದು ಹೇಗೆ ಕೇಳಲಿ. ನಾನು ಕೇಳುವುದಿಲ್ಲ ಎಂದೆ. ಸಿಟ್ಟಿಗೆದ್ದ ಗಂಡ ತನ್ನನ್ನು ದನಕ್ಕೆ ಬಡಿಯುವಂತೆ ಬಡಿದ. ಕೆಟ್ಟ ಮಾತುಗಳಿಂದ ನಿಂದಿಸಿದ. ಅತ್ತೆ ಮಾವ ನೋಡಿಕೊಂಡು ಸುಮ್ಮನೇ ಇದ್ದರು. ಈ ಹೆಣ್ಣುಜನ್ಮದ ಸುಖ ಸಾಕು. ಸಾವಿನಿಂದ ಈ ನೋವು, ಹಿಂಸೆಗೆ ಮುಕ್ತಾಯ ಹೇಳುತ್ತೇನೆ ಎಂದು ನಿರ್ಧರಿಸಿದ ಅನುಪಮ ತನ್ನ ಎರಡು ವರ್ಷದ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಬಾವಿಗೆ ಬಿದ್ದು ಸತ್ತಳು.

''ನಾನು ಮನಸಾರೆ ಪ್ರೀತಿಸಿದ ಹುಡುಗಿ, ಲತಾ ಒಂದು ವಾರದಿಂದ ನನ್ನೊಡನೆ ಮಾತಾಡಿಲ್ಲ. 'ನಮ್ಮದು ಬೇರೆ ಬೇರೆ ಜಾತಿಯಾದರೂ, ಇಬ್ಬರ ಮನೆಯವರು ವಿರೋಧ ವ್ಯಕ್ತಪಡಿಸಿದರೂ, ಮದುವೆಯಾಗಿ, ಸಂಸಾರ ಮಾಡೋಣ. ಆದರ್ಶ ಗಂಡಹೆಂಡತಿಯರಾಗಿ ಬಾಳೋಣ. ನೀನಿಲ್ಲದೆ ನಾನು ಒಂದು ದಿನವೂ ಬದುಕಿರುವುದಿಲ್ಲ' ಎಂದು ಹೇಳುತ್ತಿದ್ದಳು. ಈಗ ಅವಳ ಜಾತಿಯ ವಿನೋದನೊಂದಿಗೆ ಲಲ್ಲೆಯಾಡುತ್ತಾಳೆ. ಮೊನ್ನೆ ಗಾರ್ಡನ್ ರೆಸ್ಟಾರೆಂಟಿನಲ್ಲಿ ಕೈ ಕೈ ಹಿಡಿದು ಕುಳಿತು ಐಸ್‌ಕ್ರೀಂ ತಿನ್ನುತ್ತಿರುವುದನ್ನು ಕಂಡು ನನ್ನ ಎದೆಗೆ ಬೆಂಕಿ ಇಟ್ಟಂತಾಯಿತು. ಅಬ್ಬಾ ಈ ಹುಡುಗಿಯರು ಇಷ್ಟು ಮೋಸಗಾತಿಯರು ಎಂದು ನಾನು ತಿಳಿದಿರಲಿಲ್ಲ. ಅವರಿಬ್ಬರನ್ನು ಅಲ್ಲೇ ಕತ್ತು ಹಿಸುಕಿ ಸಾಯಿಸಲು ಸಿದ್ಧನಾದೆ. ಆದರೆ ಧೈರ್ಯ ಬರಲಿಲ್ಲ. ನನ್ನನ್ನು ನಾನು ಕೊಂದು ಕೊಳ್ಳುವುದೇ ಸರಿ ಮತ್ತು ಸುಲಭ. ನನ್ನ ಸ್ವ ಇಚ್ಛೆಯಿಂದ ನೈಟ್ರಿಕ್ ಆಸಿಡ್ ಕುಡಿಯುತ್ತಿದ್ದೇನೆ. ನನ್ನ ಸಾವಿಗೆ ನಾನೇ ಜವಾಬ್ದಾರ. ನನ್ನ ತಂದೆ ತಾಯಿಗೆ ನನ್ನ ಕೊನೇ ನಮಸ್ಕಾರಗಳು'' – ಜಗದೀಶ. ಇದು ಅವನ ಹೆಣದ ಪಕ್ಕದಲ್ಲಿ ಕಂಡುಬಂದ ಚೀಟಿಯಲ್ಲಿನ ಬರಹ.

''ಇವನಿಗೆ ಭ್ರಮೆ ಸಾರ್. ಯಾರೋ ಇವನನ್ನು ಎಲ್ಲಿ ಹೋದರೂ ಫಾಲೋ ಮಾಡುತ್ತಾರಂತೆ. ಇವನನ್ನು ಕೊಲ್ಲಲು ಸಂಚು ಮಾಡುತ್ತಾರಂತೆ. ನಿನ್ನನ್ನು ಚಿತ್ರಹಿಂಸೆ ಮಾಡಿ ಕೊಲ್ಲುತ್ತೇವೆ ಎಂದು ಕಿವಿಯಲ್ಲಿ ಹೇಳುತ್ತಾರಂತೆ. ಕಳೆದ ಎರಡು ತಿಂಗಳಿನಿಂದ ಮನೆಬಿಟ್ಟು ಹೊರಗಡೆ ಬಂದಿಲ್ಲ. ಮೊನ್ನೆ ಇದ್ದಕ್ಕಿದ್ದಂತೆ ನನ್ನ ಬತ್ತಲೆ ಶರೀರದ ಚಿತ್ರಗಳನ್ನು ತೆಗೆದಿದ್ದಾರೆ. ಸ್ನಾನದ ಮನೆಯಲ್ಲಿದ್ದಾಗ ರಿಮೋಟ್ ಕಂಟ್ರೋಲ್ ಕ್ಯಾಮೆರಾ ಬಳಸಿ ಈ ಚಿತ್ರಗಳನ್ನು ತೆಗೆದಿದ್ದಾರೆ. ಎಲ್ಲ ಪತ್ರಿಕೆಗಳಲ್ಲಿ ಪ್ರಿಂಟ್ ಮಾಡುತ್ತಾರಂತೆ. ಗೋಡೆ ಗೋಡೆಗಳ ಮೇಲೆ ಹಚ್ಚುತ್ತಾರಂತೆ. ನನ್ನ ಮಾನ ಕಳೆಯುತ್ತಾರೆ ಎಂದು ಹೇಳತೊಡಗಿದ. ನಾವು 'ಇದೆಲ್ಲ ಸಾಧ್ಯವಿಲ್ಲ. ಹೀಗೆ ಮಾಡಿದರೆ ಯಾರಿಗೇನು ಲಾಭ ಸುಮ್ಮನಿರು' ಎಂದೆವು. ನಿನ್ನೆ ಫಾಲಿಡಾಲ್ ಕುಡಿದುಬಿಟ್ಟ. ಅದೃಷ್ಟವಶಾತ್ ಅಲ್ಲಿಗೆ ಬಂದ ನಮ್ಮ ಚಿಕ್ಕಮ್ಮ ನೋಡಿ ತಕ್ಷಣ ಆಸ್ಪತ್ರೆಗೆ ಸೇರಿಸಿ ಹೊಟ್ಟೆ ತೊಳೆಸಿದೆವು. ಈ ರೀತಿಯ ಭ್ರಮೆ ಯಾಕೆ ಬಂದಿದೆ ಸಾರ್'' ಎಂದು ಇಬ್ರಾಹಿಂನ ಅಣ್ಣ ಕೇಳಿದ. ಇಬ್ರಾಹಿಂ 'ಪೆರನಾಯಿಡ್ ಸ್ಕಿಜೋಫ್ರೀನಿಯಾ'ದಿಂದ ಬಳಲುತ್ತಿರುವ ರೋಗಿ.

''ತುಂಬಾ ಹಠಮಾರಿ ಸರ್. ಇವಳು ಹೇಳಿದಂತೆ ಎಲ್ಲರೂ ನಡೆಯಬೇಕು. ಇವಳು ಕೇಳಿದ್ದನ್ನು ಕೂಡಲೇ ಕೊಟ್ಟುಬಿಡಬೇಕು. ಇಲ್ಲದಿದ್ದರೆ ಗಲಾಟೆ ಮಾಡಿಬಿಡುತ್ತಾಳೆ. ಬೆಳೆಯುತ್ತಿದ್ದಂತೆ ಸರಿಹೋಗುತ್ತಾಳೆ ಎಂದು ಆಸೆಪಟ್ಟೆವು. ಮದುವೆ ಮಾಡಿದರೆ ಜವಾಬ್ದಾರಿ ಬಂದರೆ ಬದಲಾಗುತ್ತಾಳೆ ಎಂದುಕೊಂಡೆವು. ಉಹೂಂ, ಇವಳು ಸ್ವಲ್ಪವೂ ಬದಲಾಗಲಿಲ್ಲ. ಪಾಪ ಇವಳ ಗಂಡ ಸಾಧು ಸ್ವಭಾವದ ಮನುಷ್ಯ. ಪ್ರತಿಸಲವೂ ತಾನೇ ಸೋತು, ಇವಳನ್ನು ಸಂಭಾಳಿಸುತ್ತಿದ್ದಾನೆ. ಮೊನ್ನೆ ಶನಿವಾರ ಭಾನುವಾರ ಪಿಕ್‌ನಿಕ್ ಹೋಗಬೇಕು ಎಂದಳಂತೆ. ಆತ ಈ ತಿಂಗಳು ಬೇಡ ನನಗೆ ಕೆಲಸವಿದೆ ಎಂದರೆ, ಇವಳು ಚಾಮುಂಡಿ ಅವತಾರ ತಾಳಿದಳಂತೆ. ಅವನಿಗೂ ಸಹನೆ ಮೀರಿ ಆಗುವುದಿಲ್ಲ ಎಂದರೆ ಆಗುವುದಿಲ್ಲ. ನಿನ್ನೊಂದಿಗೆ ಸಂಸಾರ ಮಾಡಿ ನನಗೆ ಸಾಕಾಗಿಹೋಗಿದೆ. ಎಲ್ಲಾದರೂ ಹಾಳಾಗಿ ಹೋಗಬೇಕು ಎಂದು ಹೊರಗಡೆ ಎದ್ದು ಹೋದನಂತೆ. ಇವಳು 'ಹೌದು, ನಾನೇ ಹಾಳಾಗಿ ಹೋಗುತ್ತೇನೆ' ಎಂದು ಒಳಗಡೆ ಹೋಗಿ, ಒಂದು ಶೀಶೆ ತುಂಬಾ ಇದ್ದ ಸೀಮೆ ಎಣ್ಣೆಯನ್ನು ಕುಡಿದಿದ್ದಾಳೆ. ಇದು ಸರಿಯೇ, ನೀವೇ ಹೇಳಿ'' ಎಂದು ಕೇಳಿದಳು ಹೇಮಾವತಿಯ ತಾಯಿ.

''ನಾನು ಪಾಪಿ, ದೊಡ್ಡ ತಪ್ಪು ಮಾಡಿದ್ದೇನೆ. ನನ್ನಂಥವಳು ಬದುಕಿರಬಾರದು. ಸಾಯಬೇಕು'' ಎನ್ನಲು ಶುರುಮಾಡಿದರು ನಮ್ಮ ತಾಯಿ. ಅವರಿಗೆ ಈಗ ಐವತ್ತು ವರ್ಷ. ನಾವು ಕಂಡ ಹಾಗೆ ಅವರು ಯಾವ ತಪ್ಪನ್ನೂ ಮಾಡಿಲ್ಲ. ಯಾರಿಗೂ ಅನ್ಯಾಯ ಮಾಡಿಲ್ಲ. ತುಂಬಾ ಸಾತ್ವಿಕ ಸ್ವಭಾವದ ಹೆಂಗಸು. ಸರಿಯಾಗಿ ಊಟ ಮಾಡುವುದನ್ನು ಬಿಟ್ಟರು. ರಾತ್ರಿ ನಿದ್ರೆ ಮಾಡುವುದಿಲ್ಲ. ಯಾವಾಗಲೂ ಹಾಸಿಗೆಯ ಮೇಲೆ ಕೂತಿರುತ್ತಾರೆ ಅಥವಾ ಹಿತ್ತಲಿಗೆ ಹೋಗಿ, ಬಟ್ಟೆ ಒಗೆಯುವ ಕಲ್ಲಿನ ಬಳಿ ಕೂರುತ್ತಾರೆ. ನೆಂಟರು ಬಂದರೆ ಮಾತಾಡಿಸುವುದಿಲ್ಲ. ನಿನ್ನೆ ರಾತ್ರಿ ನಾನು ನೀರು ಕುಡಿಯಲು ಅಡುಗೆ ಮನೆಗೆ ಹೋಗುತ್ತಿದ್ದಾಗ ಇವರ ರೂಮಿನಲ್ಲಿ ದೀಪ

ಉರಿಯುತ್ತಿತ್ತು. ಒಳಗೆ ಹೋಗಿ ನೋಡಿದರೆ ಫ್ಯಾನ್‌ಗೆ ನೇಣು ಹಾಕಿಕೊಳ್ಳಲು ಸಿದ್ಧತೆ ಮಾಡುತ್ತಿದ್ದಾರೆ. ನನಗೆ ಶಾಕ್ ಆದಂತಾಯಿತು. 'ಯಾಕಮ್ಮಾ ಇಂತಹ ಕೆಲಸ ಮಾಡುತ್ತಿದ್ದೀಯಾ, ನೀನೇನಾದರೂ ನೇಣುಹಾಕಿಕೊಂಡು ಸತ್ತರೆ, ನಾವು ಸಮಾಜದಲ್ಲಿ ತಲೆ ಎತ್ತಿ ತಿರುಗಲು ಸಾಧ್ಯವೇ' ಎಂದೆ. ಅವರು 'ಬಿಡು ನನ್ನ ಪಾಡಿಗೆ ನನ್ನನ್ನು ಬಿಡು. ನಾನು ಸಾಯುವುದೇ ಸರಿ. ನೀವೇ ನನಗೆ ವಿಷ ಕೊಟ್ಟು ಸಾಯಿಸಿ' ಎಂದು ಅಳತೊಡಗಿದರು. ನಮ್ಮ ಫ್ಯಾಮಿಲಿ ಡಾಕ್ಟರನ್ನು ಕರೆಸಿದೆ. ಅವರು ನಿಮ್ಮ ತಾಯಿಗೆ 'ತುಂಬಾ ಡಿಪ್ರೆಶನ್' ಆಗಿದೆ. ಬೆಳಿಗ್ಗೆ ಆದ ಕೂಡಲೇ ಮನೋವೈದ್ಯರನ್ನು ಕಾಣಿ ಎಂದರು. 'ಈ ಡಿಪ್ರೆಶನ್ ಏಕೆ ಬರುತ್ತೆ. ಇದೇನು ಮನೋರೋಗವೇ' ಎಂದು ಪ್ರಶ್ನಿಸಿದ ಆಕೆಯ ಮಗ ಚಂದ್ರಕಾಂತ.

''ಡಾಕ್ಟರೇ ನನಗೆ ಈ ನೋವನ್ನು ತಡೆಯಲು ಸಾಧ್ಯವಿಲ್ಲ, ಕ್ಯಾನ್ಸರ್ ಎಲ್ಲ ಕಡೆ ಹರಡಿದೆ ಎನ್ನುತ್ತೀರಿ. ಔಷಧೀ ರೇಡಿಯೋಥೆರಪಿಗೆ ಜಗ್ಗುತ್ತಿಲ್ಲ. ಆಪರೇಶನ್ ಸಾಧ್ಯವಿಲ್ಲ ಎನ್ನುತ್ತೀರಿ. ದಿನಕ್ಕೆ ನಾಲ್ಕು ಸಲ ನೋವು ನಿವಾರಕಗಳನ್ನು ಕೊಟ್ಟರೂ ನೋವು ಸ್ವಲ್ಪವೂ ಕಡಿಮೆ ಆಗಿಲ್ಲ. ಒಂದೇ ಕಡೆ ಮಲಗಿ, ಮೈಯಲ್ಲಾ ಹುಣ್ಣಾದಂತೆ ನೋವು. ನನ್ನನ್ನು ನೋಡಿಕೊಳ್ಳುತ್ತಾ ನನ್ನ ಇಬ್ಬರು ಮಕ್ಕಳೂ ಸೋತುಹೋಗಿದ್ದಾರೆ. ಸೊಸೆಯರಿಗೆ ನನ್ನ ಬಗ್ಗೆ ಜುಗುಪ್ಸೆ ಬಂದಿದೆ. ಎಷ್ಟೊಂದು ಖರ್ಚು. ನಾನು ಬೇಗ ಸಾಯಬೇಕು. ಇನ್ನು ನನಗೆ ಬದುಕುವ ಆಸೆ ಇಲ್ಲ. ಏನಾದರೂ ಕೊಟ್ಟು ನನ್ನ ನೋವಿಗೆ ಮಂಗಳ ಹಾಡಿ, ನಿಮ್ಮ ಕಾಲಿಗೆ ಬಿದ್ದು ಕೇಳುತ್ತೇನೆ'' ಎಂದು ಗೋಗರೆದರು ಅನಂತ ಪದ್ಮನಾಭಯ್ಯ. ಅವರಿಗೆ ಎಪ್ಪತ್ತೆರಡು ವರ್ಷ ವಯಸ್ಸು.

ಹೀಗೆ ಪ್ರತಿನಿತ್ಯ ಹಲವಾರು ಜನ ಆತ್ಮಹತ್ಯೆಗೆ ಪ್ರಯತ್ನ ಮಾಡುತ್ತಾರೆ. ಕೆಲವರು ಸಾಯುತ್ತಾರೆ. ಇತ್ತೀಚೆಗೆ ನಿಮ್ಹಾನ್ಸ್ ಸಂಸ್ಥೆಯು ನಡೆಸಿದ ಸರ್ವೇಕ್ಷಣೆ ಪ್ರಕಾರ ಒಂದು ವರ್ಷದ ಅವಧಿಯಲ್ಲಿ ಬೆಂಗಳೂರಿನಲ್ಲಿ ೬೦೦೦ದಿಂದ ೭೨೦೦ ಜನ ಅಂದರೆ ತಿಂಗಳಿಗೆ ಸರಾಸರಿ ೫೫೦ರಿಂದ ೬೦೦ ಜನ ಆತ್ಮಹತ್ಯೆಗೆ ಪ್ರಯತ್ನ ಮಾಡಿದರು. ಅವರಲ್ಲಿ ೧೯೩೮ ಜನ ಸತ್ತರು. ಭಾರತದಲ್ಲಿ ಪ್ರತಿ ೭ ನಿಮಿಷಕ್ಕೊಮ್ಮೆ ಆತ್ಮಹತ್ಯಾ ಪ್ರಕರಣಗಳು ನಡೆಯುತ್ತಿವೆ. ಪ್ರತಿವರ್ಷ ಒಂದು ಲಕ್ಷಕ್ಕೂ ಹೆಚ್ಚು ಜನ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಒಂದು ಪ್ರಕರಣ ವರದಿಯಾದರೆ, ಹತ್ತು ಪ್ರಕರಣಗಳು ವರದಿಯಾಗುವುದಿಲ್ಲ! ಏಕೆಂದರೆ ಆತ್ಮಹತ್ಯಾ ಪ್ರಯತ್ನ ಭಾರತ ದಂಡ ಸಂಹಿತೆಯ ೩೦೯ನೇ ಕಲಂ ಪ್ರಕಾರ ಶಿಕ್ಷಾರ್ಹ ಅಪರಾಧ. ಜೊತೆಗೆ ಆತ್ಮಹತ್ಯಾ ಪ್ರಯತ್ನ ವ್ಯಕ್ತಿಗೆ, ಆತ/ಆಕೆಯ ಮನೆಯವರಿಗೆ ಸಾಮಾಜಿಕ ಕಳಂಕವನ್ನು ತರುತ್ತದೆ. ಹೀಗಾಗಿ ಬಹಳಷ್ಟು ಪ್ರಕರಣಗಳನ್ನು ಜನ ದಾಖಲಿಸುವುದಿಲ್ಲ.

**ಆತ್ಮಹತ್ಯೆ ಏಕೆ ?** : ಯಾವುದೇ ವ್ಯಕ್ತಿ ಆತ್ಮಹತ್ಯೆಗೆ ಪ್ರಯತ್ನ ಮಾಡುವುದು ಏಕೆ ಎಂದರೆ ಮೂರು ಉದ್ದೇಶಗಳನ್ನು ಉಲ್ಲೇಖಿಸಲಾಗುತ್ತದೆ.

**೧. ಸಾವೇ ಅಂತಿಮ ಪರಿಹಾರ** : ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಹಾಕಿಕೊಂಡು ಹೊರಬರಲಾರದವರು, ಕಷ್ಟನಷ್ಟ ನಿರಾಶೆಗಳನ್ನು ನಿಭಾಯಿಸಲಾಗದವರು, ಸಂಬಂಧಗಳು ಹಳಸಿಕೊಂಡು, ನಿತ್ಯ ಕಿರಿಕಿರಿ ಹಿಂಸೆಯನ್ನು ಅನುಭವಿಸುವವರು, ಅವಮಾನ, ಜವಾಬ್ದಾರಿಯ ಹೊರೆ, ಕ್ಲಿಷ್ಟಕರ ಸಂದರ್ಭವನ್ನು ಎದುರಿಸಲಾಗದವರು 'ಸಾವೇ ಅಂತಿಮ ಪರಿಹಾರ' ಎಂಬ ನಿರ್ಧಾರಕ್ಕೆ ಬರುತ್ತಾರೆ. ಸಾವಿನ ನಂತರ ತಾವು ಇರುವುದಿಲ್ಲವಾಗಿ ಈ ಕಷ್ಟ ನಷ್ಟ ಸಮಸ್ಯೆ, ನೋವು, ನಿರಾಶೆ, ಅವಮಾನ, ಜವಾಬ್ದಾರಿಗಳನ್ನು ಎದುರಿಸುವ ಪ್ರಶ್ನೆಯೇ ಬರುವುದಿಲ್ಲ ಎಂದು ತೀರ್ಮಾನಿಸುತ್ತಾರೆ. ಹೀಗಾಗಿ ಸಾವನ್ನು ತಾವೇ ತಂದುಕೊಳ್ಳಲು ಸಿದ್ಧರಾಗುತ್ತಾರೆ.

**೨. ಸಹಾಯಕ್ಕಾಗಿ ಯಾಚನೆ (CRY FOR HELP)** : ಮತ್ತೆ ಕೆಲವರು ಸಾಯುವ ಪ್ರಯತ್ನದ ಮೂಲಕ, ಸಂಬಂಧಪಟ್ಟವರಿಗೆ ಅಥವಾ ಇಡೀ ಸಮಾಜಕ್ಕೆ ತಮಗೆ ಸಹಾಯ ಮಾಡಲು ಯಾಚಿಸುತ್ತಾರೆ. ನಾನು ಅಸಹಾಯಕ ನಾಗಿದ್ದೇನೆ. ಸಂದರ್ಭ, ಸನ್ನಿವೇಶ ಸಮಸ್ಯೆಯನ್ನು ನಿಭಾಯಿಸಲು ಖಂಡಿತ ಸಾಧ್ಯವಿಲ್ಲ, ತುರ್ತಾಗಿ ನನಗೆ ಸಹಾಯ ಮಾಡಿ ಎಂದು ಮೊರೆ ಇಡುತ್ತಾರೆ.



**೩. ಕೋಪ-ಅಸಮಾಧಾನದ ಪ್ರಕಟಣೆ** : ನೇರವಾಗಿ ಹೇಳಿದರೂ ಕೇಳುವುದಿಲ್ಲ, ಬೇಡಿಕೊಂಡರೂ ನನ್ನ ಬೇಡಿಕೆಯನ್ನು ಈಡೇರಿಸುವುದಿಲ್ಲ, ನನಗೆ ಅನ್ಯಾಯ ವಾಗುತ್ತಿದ್ದರೂ ಯಾರೂ ಗಮನಿಸುತ್ತಿಲ್ಲ, ಎಲ್ಲರೂ ನನ್ನನ್ನು ಉದಾಸೀನ ಮಾಡುತ್ತಿದ್ದಾರೆ. ನಾನು ಸಾಯುವ ಪ್ರಯತ್ನ ಮಾಡಿ ಇವರಿಗೆ ಪಾಠ ಕಲಿಸುತ್ತೇನೆ. ನನ್ನ ನೋವು, ಕೋಪ, ಅಸಮಾಧಾನದ ಪರಿಚಯ ಇವರಿಗಾಗಲಿ ಎಂದು ವ್ಯಕ್ತಿ ಆತ್ಮಹತ್ಯಾ ಪ್ರಯತ್ನವನ್ನು ಸಂಪರ್ಕ ಮಾಧ್ಯಮವನ್ನಾಗಿ ಬಳಸಿಕೊಳ್ಳಬಹುದು. ಇದು ಹದಿವಯಸ್ಸಿನವರಲ್ಲಿ ಹೆಚ್ಚು.

❑ **ಮಾನಸಿಕ ಕಾಯಿಲೆಗಳು** : ಮಾನಸಿಕ ಕಾಯಿಲೆ ಗಳಲ್ಲಿ ವ್ಯಕ್ತಿ ಹೆಚ್ಚು ಭಾವೋದ್ರೇಕಕ್ಕೆ ಒಳಗಾಗುತ್ತಾನೆ. ಆತನ ವಿವೇಚನಾ ಶಕ್ತಿ ಹಾಳಾಗಬಹುದು. ವಾಸ್ತವಿಕತೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಹಾಗೂ ವಾಸ್ತವಿಕತೆಗೆ ಹೊಂದಿಕೊಳ್ಳುವ ಶಕ್ತಿಯೂ ಕುಗ್ಗಿಹೋಗುತ್ತದೆ. ವ್ಯಕ್ತಿ ಭ್ರಮಾಧೀನ ನಾಗಬಹುದು. ಆತ್ಮಹತ್ಯೆ ಪ್ರಯತ್ನ ಅನೇಕ ಬಗೆಯ ಮಾನಸಿಕ ಕಾಯಿಲೆಗಳಲ್ಲಿ ರೋಗ ಲಕ್ಷಣವಾಗಿ ಕಾಣಿಸಿಕೊಳ್ಳಬಹುದು. ಉದಾಹರಣೆ:

*ಖಿನ್ನತೆ ಕಾಯಿಲೆ* : ಇಲ್ಲಿ ಸ್ವಲ್ಪ ಕಾರಣಕ್ಕೆ ಅಥವಾ ವಿನಾ ಕಾರಣಕ್ಕೆ ವ್ಯಕ್ತಿ ನಿರಾಶನಾಗುತ್ತಾನೆ. ಅಸಹಾಯಕತೆ ಅವನನ್ನು ಕಾಡುತ್ತದೆ. ತಾನು ಪಾಪಿ ತಪ್ಪಿತಸ್ಥ ಎಂದು ವ್ಯಕ್ತಿ ನಂಬತೊಡಗುತ್ತಾನೆ. ಜೊತೆಗೆ ನೀನು ಕೆಟ್ಟವನು ಬದುಕಲು ನಾಲಾಯಖ್ ಎಂಬಂತಹ ನುಡಿಗಳು ಅವನಿಗೆ ಕೇಳಿಸತೊಡಗಬಹುದು (ಚಿತ್ತಭ್ರಮೆ). ಹೀಗಾಗಿ ವ್ಯಕ್ತಿ ಸಾಯುವ ಇಚ್ಛೆಯಿಂದ ಆತ್ಮಹತ್ಯೆಗಾಗಿ ತೀವ್ರ ಪ್ರಯತ್ನ ಮಾಡುತ್ತಾನೆ.

*ಸ್ಕಿಜೋಫ್ರೀನಿಯಾ* : ಈ ಕಾಯಿಲೆಯಲ್ಲಿ ರೋಗಿ ಸಂಶಯಗ್ರಸ್ತನಾಗುತ್ತಾನೆ. ಶೂನ್ಯದಲ್ಲಿ ಅವನಿಗೆ ಯಾರೋ ಮಾತಾಡಿದಂತೆ, ಹೆದರಿಸಿದಂತೆ ಹೀಗೆ ಮಾಡು, ಹಾಗೆ ಮಾಡು ಎಂದು ಆಜ್ಞಾಪಿಸಿದಂತೆ ಧ್ವನಿಗಳು ಕೇಳಿಸತೊಡಗುತ್ತವೆ. ಈ ಭ್ರಮೆ ಧ್ವನಿಗಳ ಪ್ರೇರಣೆಯಿಂದ ವ್ಯಕ್ತಿ ಆತ್ಮಹತ್ಯೆಗೆ ಪ್ರಯತ್ನಿಸಬಹುದು.

*ಮದ್ಯ-ಮದ್ದು ಸೇವನೆಯ ಚಟ* : ವ್ಯಕ್ತಿ ಮದ್ಯಸಾರಕ್ಕೆ, ಅಫೀಮು, ಗಾಂಜಾ, ನೋವು ನಿವಾರಕಗಳಿಗೆ ಚಟ ಬೆಳೆಸಿಕೊಂಡರೆ, ಆ ವಸ್ತುಗಳನ್ನು ಒಂದು ದಿನ ಸೇವಿಸದೇ ಹೋದರೆ, ಆತ ಚಡಪಡಿಸತೊಡಗುತ್ತಾನೆ. ಅತೀವ ದೈಹಿಕ, ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾನೆ. ಈ ಹಿಂದೆಗೆತದ ಲಕ್ಷಣಗಳನ್ನು ತಾಳಲಾರದೇ ವ್ಯಕ್ತಿ ಆತ್ಮಹತ್ಯೆಗೆ ಪ್ರಯತ್ನಿಸಿದರೆ ಆಶ್ಚರ್ಯವಿಲ್ಲ.

❑ **ಆತ್ಮಾಹುತಿ** : ಇತ್ತೀಚೆಗೆ, ವಿವಿಧ ಸಾಮಾಜಿಕ ಮತ್ತು ರಾಜಕೀಯ ಕಾರಣಗಳಿಗಾಗಿ ಅಥವಾ ತಮ್ಮ ನಾಯಕನಿಗಾಗಿ ಅಥವಾ ಭಯೋತ್ಪಾದನೆ ಮಾಡಲು ಅಥವಾ ತಾವು ನಂಬಿದ ಧರ್ಮ, ತತ್ವ, ದೇಶಕ್ಕಾಗಿ ಆತ್ಮಾಹುತಿ ಮಾಡಿಕೊಳ್ಳುವುದು ಹೆಚ್ಚಾಗುತ್ತಿದೆ. ಆತ್ಮಾಹುತಿ ದಳಗಳು ನಡೆಸಿರುವ ಭಯೋತ್ಪಾದನೆಯಿಂದ ಪ್ರಪಂಚವೇ ತತ್ತರಿಸಿಹೋಗಿದೆ. ಈ ಆತ್ಮಾಹುತಿಯೂ ಆತ್ಮಹತ್ಯೆಯೇ. ಆದರೆ ಈ ರೀತಿ ಆತ್ಮಾಹುತಿ ಮಾಡಿಕೊಳ್ಳುವವರು ಜನರ ದೃಷ್ಟಿಯಲ್ಲಿ ವೀರರಾಗುತ್ತಾರೆ. ಧೀರರೆನಿಸಿಕೊಳ್ಳುತ್ತಾರೆ. ರಾಜಕೀಯ ಕಾರಣಗಳಿಗಾಗಿ, ಆತ್ಮಾಹುತಿಯನ್ನು ಬೆದರಿಕೆಯ ತಂತ್ರವನ್ನಾಗಿ ಬಳಸಿಕೊಳ್ಳಲಾಗುತ್ತಿದೆ. ಬೆಂಕಿ ಹಚ್ಚಿಕೊಂಡು ಸಾಯುತ್ತೇನೆ, ಆಮರಣಾಂತ ಉಪವಾಸ ಮಾಡುತ್ತೇನೆ ಎಂದು ಕೆಲವರು ಗುಟುರು ಹಾಕುತ್ತಾರೆ.

❑ **ದಯಾಮರಣ** : ಇನ್ನೊಂದು ಬಗೆಯ ಆತ್ಮಹತ್ಯೆಗೆ ಅನೇಕರು ಕಾನೂನು, ಸಮಾಜ ಒಪ್ಪಿಗೆ ಕೊಡಬೇಕೆಂದು ಒತ್ತಾಯ ಮಾಡುತ್ತಿದ್ದಾರೆ. ಅದೇ ದಯಾಮರಣ. ಮರಣಾಂತಿಕ ಕಾಯಿಲೆಗಳಿಂದ ಅಥವಾ ನ್ಯೂನತೆಗಳಿಂದ ಅಥವಾ ಅತೀವ ಇಳಿವಯಸ್ಸಿನಲ್ಲಿ ನೋಡಿಕೊಳ್ಳುವವರು ಯಾರೂ ಇಲ್ಲದ ವ್ಯಕ್ತಿ ಸ್ವಇಚ್ಛೆಯಿಂದ ಸಾಯಲು ಬಯಸಿದರೆ ಅದನ್ನು ಕಾನೂನು ಮಾನ್ಯ ಮಾಡಬೇಕು. ಆತ ಆತ್ಮಹತ್ಯೆ ಮಾಡಿಕೊಳ್ಳಲು ಮನೆಯವರು, ವೈದ್ಯರು ನೆರವಾಗಬೇಕು ಎಂದು ಒತ್ತಾಯ ಮಾಡಲಾಗುತ್ತಿದೆ. ಇದನ್ನು ನಮ್ಮ ಕೋರ್ಟುಗಳು ಒಪ್ಪದೆ, ಈ ರೀತಿ ಸಾಯಲು ಪ್ರಯತ್ನ ಮಾಡಿದರೆ ವ್ಯಕ್ತಿಯ ದೃಷ್ಟಿಯಿಂದ ಅದು ಆತ್ಮಹತ್ಯೆ, ಇತರರ ದೃಷ್ಟಿಯಿಂದ ಕೊಲೆ ಎಂದು ಜನ

ತಿಳಿಯಬೇಕು. ಎರಡೂ ಶಿಕ್ಷಾರ್ಹ ಅಪರಾಧ, ಎಚ್ಚರಿಕೆ ಎಂದು ಸಾರಿವೆ.

ಆದರೆ ಅಪರೋಕ್ಷ ದಯಾಮರಣವನ್ನು ಅನೇಕ ಆಸ್ಪತ್ರೆಗಳು ಪಾಲಿಸುತ್ತಿವೆ. ''ರೋಗಿ ಅನುಭವಿಸುತ್ತಿರುವ ನೋವನ್ನು ನೋಡಲಾರೆವು. ಆತನ ಅಸಹಾಯಕತೆ ಪರಾವಲಂಬಿತನ ನಮ್ಮ ಕರುಳನ್ನು ಕುಯ್ಯುತ್ತಿದೆ. ಚಿಕಿತ್ಸೆಯಿಂದ ಏನೂ ಪ್ರಯೋಜನವಿಲ್ಲ ಎನ್ನುತ್ತೀರಿ. ಆದ್ದರಿಂದ ರೋಗಿಯನ್ನು ಡಿಸ್ಚಾರ್ಜ್ ಮಾಡಿಬಿಡಿ ಮನೆಗೆ ಕರೆದೊಯ್ಯುತ್ತೇವೆ. ಅಲ್ಲಿ ರೋಗಿ ಶಾಂತವಾಗಿ ಕೊನೆಯುಸಿರನ್ನೆಳೆಯಲಿ'' ಎಂದರೆ ವೈದ್ಯರು, ರೋಗಿಗೆ ಚಿಕಿತ್ಸೆ ನೀಡುವುದನ್ನು ನಿಲ್ಲಿಸುತ್ತಾರೆ. ಹಾಗೆಯೇ ಕೆಲವು ಸಲ ವೈದ್ಯರೇ ಮನೆಯವರಿಗೆ ಇದನ್ನು ಸೂಚಿಸುವುದುಂಟು. ಜೀವನಾವಶ್ಯಕ ಚಿಕಿತ್ಸಾ ಸಲಕರಣೆಗಳನ್ನು ತೆಗೆದು, ರೋಗಿ ಸಾಯಲು ಪರೋಕ್ಷವಾಗಿ ಸಹಾಯ ಮಾಡುತ್ತಾರೆ. ಆದರೆ ದಯಾಮರಣ ಒಂದು ವಿವಾದಗ್ರಸ್ತ ವಿಚಾರ. 'ರೋಗಿ ಸಾಯುವ ಅಂಚಿನಲ್ಲಿದ್ದಾನೆ' ಎಂದು ವೈದ್ಯರು ನಿಖರವಾಗಿ ಹೇಳಬಲ್ಲರೇನು? ಇನ್ನೇನು ಸಾಯುತ್ತಾನೆ ಎಂದ ರೋಗಿ, ಬದುಕಿ ಅನೇಕ ವರ್ಷಗಳ ಕಾಲ ಉಳಿಯುವ ಎಷ್ಟೊಂದು ಪ್ರಕರಣಗಳಿಲ್ಲ! ರೋಗಿ ಅರೆ ಪ್ರಜ್ಞಾವಸ್ಥೆ, ಪ್ರಜ್ಞಾಹೀನ ಸ್ಥಿತಿ ಅಥವಾ ಸಮ್ಮತಿ ಕೊಡಲಾಗದ ಸ್ಥಿತಿಯಲ್ಲಿರುವ ರೋಗಿಯ ಪರವಾಗಿ ದಯಾಮರಣಕ್ಕೆ ಯಾರು ಅರ್ಜಿ ಸಲ್ಲಿಸಬೇಕು ? ಅವರು ತಮ್ಮ ಈ ಅಧಿಕಾರವನ್ನು ದುರುಪಯೋಗಿಸಿಕೊಂಡರೆ ಏನು ಗತಿ, ಇತ್ಯಾದಿ ಹಲವು ಸಂದೇಹಗಳನ್ನು ಜನ ಎನ್ನುತ್ತಾರೆ. ದಯಾಮರಣವೇನೋ ಸರಿ ಅದನ್ನು ಜಾರಿಗೆ ತರುವ ವ್ಯವಸ್ಥೆ ಬಿಗಿಯಾಗಿರಬೇಕು ಎನ್ನುತ್ತಾರೆ.

**ಯಾರು ಆತ್ಮಹತ್ಯೆಗೆ ಪ್ರಯತ್ನ ಮಾಡುತ್ತಾರೆ ?**

- ಹದಿವಯಸ್ಸಿನವರು.
- ದಾಂಪತ್ಯ ವಿರಸದಿಂದ ಬಳಲುವವರು.
- ಗಂಡಸರಿಗಿಂತ ಹೆಂಗಸರು ಹೆಚ್ಚು.

**ವಿವಿಧ ರಾಜ್ಯಗಳಲ್ಲಿ, ೧೯೯೯ರಲ್ಲಿ ಆತ್ಮಹತ್ಯಾ ಪ್ರಕರಣಗಳು**

| ರಾಜ್ಯ | ಆತ್ಮಹತ್ಯೆ ಮಾಡಿಕೊಂಡವರ ಸಂಖ್ಯೆ | ಪ್ರಮಾಣ : ಪ್ರತಿ ಒಂದು ಲಕ್ಷ ಜನಕ್ಕೆ |
|---|---|---|
| ಪಶ್ಚಿಮ ಬಂಗಾಳ | ೧೩,೮೮೯ | ೧೭.೭೩ |
| ಮಹಾರಾಷ್ಟ್ರ | ೧೩,೫೯೪ | ೧೫.೦೩ |
| ಕರ್ನಾಟಕ | ೧೨,೪೮೮ | ೨೪.೧೮ |
| ಆಂಧ್ರಪ್ರದೇಶ | ೧೦,೩೮೬ | ೧೩.೮೫ |
| ಪಾಂಡಿಚೇರಿ | ೬೩೪ | ೫೮.೨೭ |
| ಅಂಡಮಾನ್/ನಿಕೋಬಾರ್ | ೧೩೨ | ೩೪.೯೨ |
| ಕೇರಳ | ೯,೭೭೮ | ೩೦.೪೮ |
| ತ್ರಿಪುರ | ೯೩೮ | ೨೫.೩೨ |
| ಬಿಹಾರ | ೧,೭೯೫ | ೧.೮೨ |
| ಮಣಿಪುರ | ೨೪ | ೦.೯೭ |

**ಅಂಕಿ ಅಂಶಗಳು**
**ಭಾರತದಲ್ಲಿ ಆತ್ಮಹತ್ಯಾ ಪ್ರಮಾಣ**

| ವರ್ಷ | ಒಟ್ಟು ಆತ್ಮಹತ್ಯಾ ಪ್ರಕರಣಗಳು | ಆತ್ಮಹತ್ಯಾ ಪ್ರಮಾಣ : ಪ್ರತಿ ಒಂದು ಲಕ್ಷ ಜನಸಂಖ್ಯೆಗೆ |
|---|---|---|
| ೧೯೯೦ | ೭೩,೯೧೧ | ೮.೯೪ |
| ೧೯೯೧ | ೭೮,೪೫೦ | ೯.೨೩ |
| ೧೯೯೨ | ೮೦,೧೪೯ | ೯.೨೪ |
| ೧೯೯೩ | ೮೪,೨೪೪ | ೯.೫೩ |
| ೧೯೯೪ | ೮೯,೧೯೫ | ೯.೯೧ |
| ೧೯೯೫ | ೮೯,೧೭೮ | ೯.೭೪ |
| ೧೯೯೬ | ೮೮,೨೪೧ | ೯.೪೭ |
| ೧೯೯೭ | ೯೫,೮೨೯ | ೧೦.೦೩ |
| ೧೯೯೮ | ೧,೦೪,೭೧೩ | ೧೦.೮೦ |
| ೧೯೯೯ | ೧,೧೦,೫೮೭ | ೧೧.೨೦ |

**ದೊಡ್ಡ ನಗರಗಳಲ್ಲಿ ೧೯೯೯ರಲ್ಲಿ ಆತ್ಮಹತ್ಯಾ ಪ್ರಕರಣಗಳು**

| ನಗರ | ಸಂಖ್ಯೆ | ಪ್ರಮಾಣ |
|---|---|---|
| ಬೆಂಗಳೂರು | ೧,೯೩೮ | ೩೫.೧೭ |
| ಇಂದೂರು | ೪೯೩ | ೩೪.೮೯ |
| ಕೊಯಂಬತ್ತೂರು | ೨೫೫ | ೧೯.೯೫ |
| ಕಾನ್‌ಪುರ | ೪೬೯ | ೧೯.೩೩ |
| ಚೆನ್ನೈ | ೧,೧೪೨ | ೧೭.೩೩ |
| ಭೂಪಾಲ್ | ೨೬೭ | ೧೬.೬೦ |
| ಮುಂಬಯಿ | ೧,೨೬೬ | ೭.೦೬ |
| ಲಕ್ನೋ | ೧೧೨ | ೪.೪೧ |
| ಕೊಲ್ಕತಾ | ೨೧೦ | ೧.೬೪ |

**ಲಿಂಗ/ವಯಸ್ಸು/ವಿದ್ಯಾಭ್ಯಾಸ ಇತ್ಯಾದಿ ಮತ್ತು ಆತ್ಮಹತ್ಯೆ**

- ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ
  - ಗಂಡಸರು ೫೯%
  - ಹೆಂಗಸರು ೪೧%
- ೧೫ ರಿಂದ ೨೯ ವರ್ಷ ವಯಸ್ಸಿನವರು ೩೭%
- ೩೦ ರಿಂದ ೪೪ ವರ್ಷ ೩೪%
- ಮಕ್ಕಳು ೩.೨%
- ವೃದ್ಧರು ೭.೨%
- ಅವಿದ್ಯಾವಂತರು ೨೭%
- ೧೦ನೇ ತರಗತಿಗಿಂತ ಹೆಚ್ಚು ಓದಿದವರು ೨೬%
- ಹೈಸ್ಕೂಲು ೬.೯%
- ಮಾಧ್ಯಮಿಕ ಶಾಲೆ ೨೨%
- ಪ್ರಾಥಮಿಕ ಶಾಲೆ ೨೭%
- ವಿವಾಹಿತರು ೬೭%
- ಅವಿವಾಹಿತರು ೨೩%
- ಬೇರೆಯಾದವರು ೫%
- ವಿದ್ಯಾರ್ಥಿಗಳು ೫.೨%
- ಗೃಹಿಣಿಯರು ೨೧%
- ನಿರುದ್ಯೋಗಿಗಳು ೮.೮%

**ಆತ್ಮಹತ್ಯಾ ವಿಧಾನ**

| | |
|---|---|
| ನೇಣು ಹಾಕಿಕೊಂಡು | ೨೫% |
| ವಿಷ ಸೇವನೆ | ೩೭% |
| ಸುಟ್ಟ ಗಾಯಗಳಿಂದ | ೧೧.೧% |
| ನೀರಿನಲ್ಲಿ ಮುಳುಗಿ | ೯.೦% |

**ಆತ್ಮಹತ್ಯೆಗೆ ಪ್ರೇರಣೆ ಕೊಟ್ಟ ಅಂಶಗಳು**

| | |
|---|---|
| ೧. ಕಾಯಿಲೆಗಳು | ೨೦% |
| ೨. ಕೌಟುಂಬಿಕ ಸಮಸ್ಯೆಗಳು | ೨೦.೬% |
| ೩. ಬಡತನ | ೨.೬% |
| ೪. ಭಗ್ನಪ್ರೇಮ | ೩.೪% |
| ೫. ಪರೀಕ್ಷೆಯಲ್ಲಿ ಫೇಲ್ | ೨.೧% |
| ೬. ಕಾರಣ ಗೊತ್ತಿಲ್ಲ | ೩೫% |

**೧೯೯೯ರಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಆತ್ಮಹತ್ಯಾ ಪ್ರಕರಣಗಳು**

| ಜಿಲ್ಲೆ | ಸಂಖ್ಯೆ | ಪ್ರಮಾಣ |
|---|---|---|
| ದಾವಣಗೆರೆ | ೮೭೫ | ೮.೫ |
| ಬೆಂಗಳೂರು | ೭೩೦ | ೭.೧ |
| ಬೆಳಗಾಂ | ೬೨೦ | ೬.೦ |
| ಶಿವಮೊಗ್ಗ | ೫೬೪ | ೫.೫ |
| ಚಿತ್ರದುರ್ಗ | ೫೫೦ | ೫.೪ |
| ಮೈಸೂರು ನಗರ | ೫೪೮ | ೫.೩ |
| ತುಮಕೂರು | ೫೪೨ | ೫.೩ |
| ಚಿಕ್ಕಮಗಳೂರು | ೫೨೬ | ೫.೧ |
| ದಕ್ಷಿಣ ಕನ್ನಡ | ೫೦೪ | ೪.೯ |
| ಕೊಡಗು | ೪೫೦ | ೪.೪ |
| ಹಾಸನ | ೩೮೩. | ೩.೭ |
| ಬಳ್ಳಾರಿ | ೩೭೭ | ೩.೭ |
| ಮಂಡ್ಯ | ೩೨೮ | ೩.೨ |
| ಮೈಸೂರು | ೩೨೦ | ೩.೧ |
| ಉಡುಪಿ | ೩೧೪ | ೩.೧ |
| ಕೋಲಾರ | ೩೦೫ | ೩.೦ |
| ಬಿಜಾಪುರ | ೨೫೯ | ೨.೫ |
| ಬಾಗಲಕೋಟೆ | ೨೫೧ | ೨.೪ |
| ಗುಲ್ಬರ್ಗಾ | ೨೦೫ | ೨.೦ |
| ಧಾರವಾಡ | ೧೯೦ | ೧.೯ |
| ಉತ್ತರ ಕನ್ನಡ | ೧೮೮ | ೧.೮ |
| ಚಾಮರಾಜನಗರ | ೧೪೫ | ೧.೪ |
| ರಾಯಚೂರು | ೧೪೧ | ೧.೪ |
| ಬೀದರ್ | ೧೩೫ | ೧.೩ |
| ಗದಗ | ೧೩೫ | ೧.೩ |
| ಕೊಪ್ಪಳ | ೧೨೨ | ೧.೨ |
| ಕೆ.ಜಿ.ಎಫ್. | ೧೦೬ | ೧.೦ |

- ಮನೆಯವರಿಂದ ದೈಹಿಕವಾಗಿ/ಮಾನಸಿಕವಾಗಿ ದೂರ ಇರುವವರು.
- ದೀರ್ಘಕಾಲ, ನೋವು ನರಳಿಕೆಯನ್ನುಂಟುಮಾಡುವ ರೋಗದಿಂದ ಬಳಲುವವರು.
- ಕೌಟುಂಬಿಕ-ಮನಸ್ತಾಪ-ಜಗಳ-ವರದಕ್ಷಿಣೆ ಸಮಸ್ಯೆಗಳು.
- ಮದ್ಯಪಾನ ಮಾಡುವವರು.
- ವಿಫಲತೆ/ನಿರಾಶೆಯನ್ನು ಅನುಭವಿಸುವವರು.
- ಹಣಕಾಸಿನ ಸಮಸ್ಯೆಗಳು.
- ನಿರುದ್ಯೋಗ/ಉದ್ಯೋಗಕ್ಕೆ ಸಂಬಂಧಿಸಿದ ಸಮಸ್ಯೆಗಳು

❑ **ಆತ್ಮಹತ್ಯಾ ನಿವಾರಣೆ** : ಆತ್ಮಹತ್ಯೆ ಪ್ರಯತ್ನ ಮತ್ತು ಯಶಸ್ವೀ ಆತ್ಮಹತ್ಯೆ ವ್ಯಕ್ತಿಯ ಮೇಲೆ ಮತ್ತು ಸಮಾಜದ ಮೇಲೆ ಮತ್ತು ಮನೆಯವರ ಮೇಲೆ ಸಾಕಷ್ಟು ದುಷ್ಪರಿಣಾಮವನ್ನುಂಟುಮಾಡುತ್ತದೆ. ಇವುಗಳಿಂದಾಗುವ ನಷ್ಟ ಊಹೆಗೆ ನಿಲುಕದ್ದು. ಆದ್ದರಿಂದ ಆತ್ಮಹತ್ಯೆಯನ್ನು ಅದು ನಡೆಯದಂತೆ ನೋಡಿಕೊಳ್ಳುವುದೇ ಕ್ಷೇಮ. ಈ ಕೆಳ ಕಾಣುವ ಸೌಲಭ್ಯಗಳನ್ನು ವ್ಯವಸ್ಥೆ ಮಾಡಬೇಕು.

೧. ಆಪ್ತ ಸಲಹೆ ಮತ್ತು ಸಮಾಧಾನ ನೀಡುವ ಕೇಂದ್ರಗಳು ಹಾಗೂ ತಜ್ಞರು : ಯಾರು ಕಷ್ಟನಷ್ಟ, ಸೋಲು, ನಿರಾಶೆ, ಸಮಸ್ಯೆಗಳನ್ನೆದುರಿಸುತ್ತಿದ್ದಾರೆ ಅವರಿಗೆ ಶಾಲೆ-ಕಾಲೇಜುಗಳು, ಕಾರ್ಖಾನೆ, ಉದ್ಯೋಗ ಸ್ಥಳಗಳಲ್ಲಿ, ಸಮಾಜದಲ್ಲಿ ಆಪ್ತ ಸಲಹೆ, ಸಮಾಧಾನ ನೀಡುವ ಕೇಂದ್ರಗಳಿರಬೇಕು. ದಿನದ ೨೪ ಗಂಟೆಗಳೂ ಯಾವುದೇ ಸಮಯದಲ್ಲಿ ಸಲಹೆ ಆಸರೆ ನೀಡುವ ವ್ಯವಸ್ಥೆ ಇರಬೇಕು.

**೬. ೧೯೯೦-೨೦೦೦ ಜೂನ್‌ವರೆಗೆ ಬೆಂಗಳೂರಿನಲ್ಲಿ ಆತ್ಮಹತ್ಯಾ ಪ್ರಕರಣಗಳು**

| ವರ್ಷ | ಸಂಖ್ಯೆ | ಪ್ರಮಾಣ |
|---|---|---|
| ೧೯೯೦ | ೪೨೬ | ೧೦.೪ |
| ೧೯೯೧ | ೪೭೪ | ೧೧.೩ |
| ೧೯೯೨ | ೪೭೧ | ೧೧.೧ |
| ೧೯೯೩ | ೪೯೩ | ೧೧.೩ |
| ೧೯೯೪ | ೧,೧೦೭ | ೨೪.೪ |
| ೧೯೯೫ | ೧,೧೭೫ | ೨೪.೭ |
| ೧೯೯೬ | ೮೧೭ | ೧೬.೫ |
| ೧೯೯೭ | ೧,೨೪೧ | ೨೪.೨ |
| ೧೯೯೮ | ೧,೬೬೦ | ೩೦.೩ |
| ೧೯೯೯ | ೧,೯೩೮ | ೩೪:೫ |
| ೨೦೦೦ ಜೂನ್‌ವರೆಗೆ | ೯೩೩ | |

ವ್ಯಕ್ತಿ ಫೋನ್ ಮೂಲಕ ಅಥವಾ ನೇರವಾಗಿ ಈ ಸೌಲಭ್ಯವನ್ನು ಬಳಸಿಕೊಳ್ಳುವಂತಾಗಬೇಕು.

೨. ಚಿಕ್ಕ ಮಕ್ಕಳಿಂದ ಹಿಡಿದು ಇಳಿವಯಸ್ಸಿನವರಿಗೆ, ಜೀವನ ಕೌಶಲಗಳನ್ನು ಕಲಿಸುವ ವ್ಯವಸ್ಥೆಯಾಗಬೇಕು. ನೋವು ನಿರಾಶೆಗಳನ್ನು ನಿಭಾಯಿಸುವ ಕಟು ವಾಸ್ತವಿಕತೆಯನ್ನು ಅರ್ಥಮಾಡಿಕೊಂಡು, ಹೊಂದಿಕೊಳ್ಳುವ ಅಗತ್ಯ; ನಿರೀಕ್ಷೆಗಳನ್ನು ತಗ್ಗಿಸಿಕೊಂಡು, ಸರಳವಾಗಿ ತೃಪ್ತಿಯಿಂದ ಜೀವನ ಮಾಡುವ ಕೌಶಲವನ್ನು ಕಲಿಸಬೇಕು. ಇದನ್ನು ಶಾಲಾ-ಕಾಲೇಜುಗಳು ಹಾಗೂ ವಿವಿಧ ತರಪೇತಿ ಕೋರ್ಸ್‌ಗಳಲ್ಲಿ ಅಳವಡಿಸಬೇಕು.

೩. ಖಿನ್ನತೆ, ಆತಂಕ, ಹೊಂದಾಣಿಕೆ ಸಮಸ್ಯೆಗಳು, ಸ್ಕಿಜೋಫ್ರೇನಿಯ ಮದ್ಯ ಮಾದಕ ವಸ್ತುಗಳ ಸೇವನೆಯ ಚಟ ಇತ್ಯಾದಿ ಮಾನಸಿಕ ಕಾಯಿಲೆಗಳನ್ನು ಬೇಗ ಗುರುತಿಸಿ, ಅವುಗಳಿಗೆ ಚಿಕಿತ್ಸಾ ಸೌಲಭ್ಯಗಳನ್ನು ವ್ಯವಸ್ಥೆಗೊಳಿಸಬೇಕು.

೪. ಮಾನಸಿಕ ಒತ್ತಡಗಳನ್ನು ನಿವಾರಿಸಿ ಮನಸ್ಸಿಗೆ ಉಲ್ಲಾಸ ಉತ್ಸಾಹಗಳನ್ನು ನೀಡುವ ಸಂಗೀತ, ಸಾಹಿತ್ಯ, ಕಲೆ, ಕ್ರೀಡೆಗಳು, ಸಾಂಸ್ಕೃತಿಕ ಚಟುವಟಿಕೆಗಳಿಗೆ ಜನ ಪ್ರೋತ್ಸಾಹ ನೀಡುವಂತೆ ಮಾಡಬೇಕು.

೫. ಕೌಟುಂಬಿಕ ಮತ್ತು ಸಮಷ್ಟಿ ಜೀವನಶೈಲಿಯನ್ನು ಬಲಪಡಿಸಬೇಕು.

> ೧೯೯೯ರಲ್ಲಿ ಬೆಂಗಳೂರಿನಲ್ಲಿ ಆದ ಆತ್ಮಹತ್ಯಾ ಪ್ರಕರಣಗಳಲ್ಲಿ ಶೇಕಡಾ ೨೫ ಜನ ೧೫ರಿಂದ ೧೯ ವರ್ಷ ವಯಸ್ಸಿನವರು ಹಾಗೂ ಶೇಕಡಾ ೨೩ ಜನ ೨೦ರಿಂದ ೨೪ ವರ್ಷ ವಯಸ್ಸಿನವರು ಹಾಗೂ ಶೇಕಡಾ ೧೭.೬ ಜನ ೨೫ರಿಂದ ೨೯ ವರ್ಷ ವಯಸ್ಸಿನವರು. ಅಂದರೆ ಒಟ್ಟು ಶೇಕಡಾ ೬೫.೬ ಜನ ೧೫ರಿಂದ ೨೯ ಅಂದರೆ ಚಿಕ್ಕ ವಯಸ್ಸಿನವರು ಎಂಬುದು ಆತಂಕಕಾರಿ.

**ಡಾ|| ಸಿ. ಆರ್. ಚಂದ್ರಶೇಖರ್**
ಟೈಪ್-೫, ಬ್ಲಾಕ್ ೨, ಕ್ವಾರ್ಟರ್ಸ್ ನಂ. ೧೫, ನಿಮ್ಹಾನ್ಸ್ ಕ್ವಾರ್ಟರ್ಸ್
ಬೆಂಗಳೂರು-೫೬೦ ೦೨೯

# ನೀನೆ ಬಂದು ಹೇಳಿದೆಯಾ ?

ನೀನು ಆ ಇರುಳು ನನ್ನ ಕನಸಲ್ಲಿ ಬಂದಿದ್ದೆ
ನಾನೂ ನಿನ್ನ ಕನಸಲ್ಲಿ ಬಂದಿದ್ದೆನೆಂದು ನೀನೇ ಹೇಳಿದೆ
ಅದೇ ಇರುಳು ಅದೇ ವೇಳೆ

ಒಟ್ಟಿಗೆ ಕಂಡ ಬೇರೆ ಬೇರೆ ಕನಸುಗಳಲ್ಲಿ ನಾವು
ನಿಜದ ಬೇರೆ ಬೇರೆ ತಾವುಗಳಲ್ಲಿದ್ದೆವು
ಬೇರೆ ಬೇರೆ ತಾವುಗಳಲ್ಲಿದ್ದೂ
ಒಂದೇ ಕನಸ ಕಂಡೆವೆ ?

ನಡುವೆ ಒಂದು ಚಣವೂ ಸವುಡಿಲ್ಲದಂತೆ ನಾವು
ಕನಸ ಸಂದಣಿಯಲ್ಲಿ ತಟ್ಟನೆ ಸಂಧಿಸಿದೆವು
ನೀನು ನಿನ್ನ ಕನಸ ಬಿಟ್ಟೇನಾದರೂ
ನನ್ನ ಕನಸಿಗೆ ಬಂದೆಯಾ ?



ಆ ಇರುಳು ಅರ್ಥದ ಊಳಿಗದಲ್ಲಿದ್ದ
ನಿನ್ನ ಪ್ರಾರ್ಥನೆಗಳೀಗ
ಬರಿದೆ ಸದ್ದುಗಳಾಗಿ ಅಪ್ಪಳಿಸುತಿವೆ.
ನಿನ್ನ ಕನಸಲ್ಲಿ ಬಂದ ನಾನು
ಏನು ಹೇಳಿದೆನೆಂದು
ಮರೆತಿದೆ ಈ ಜಂಗಮ ಕ್ಷಣಗಳಲ್ಲಿ
ನೀನದ ನಿನ್ನ ಕನಸಲ್ಲಿ ಅಳಿಯದೆ
ತಿಳಿಯಬಹುದೆ ?

ಕರಗಳಲ್ಲಿ ಕರಗಳು ಕರಗುವಂತೆ
ಹಿಡಿದುಕೊಳ್ಳಲಾಗಲಿಲ್ಲ
ನಾನು ನನ್ನ ಕನಸಲ್ಲಿ ನಿನ್ನನು
ನೀನು ನಿನ್ನ ಕನಸಲ್ಲಿ ನನ್ನನು
ಸ್ಪರ್ಶಿಸುವುದು ಸಾಧ್ಯವೇ
ಕೈಗಳು ಉಕ್ಕಿನಷ್ಟು ಭಾರವಾಗಿ ಬಿದ್ದಿರುವಾಗ

ಈ ನೀರವ ಇರುಳಲ್ಲಿ ಕನಸಿನಿಂದ
ಕನಸಿಗೆ ಅಲೆಯುತ್ತ ಇನ್ನೂನು
ನಿನ್ನನ್ನು ನಾನು ಹುಡುಕುತ್ತಲೇ ಇದ್ದೇನೆ
ನೀನೂ ಹುಡುಕುತ್ತಲೇ ಇರುವೆಯೆಂದು
ನನ್ನ ಕನಸಲ್ಲಿ ನೀನೇ ಬಂದು ಹೇಳಿದೆ
ನಿಜಕೂ ನೀನೇ ಬಂದು ಹೇಳಿದೆಯಾ ?
ಸ್ವತಃ ನೀನೇ ಬಂದು ?

ಸಂದೀಪನಾಯಕ
ಜೆ.ಸಿ.ಕಾಲೇಜು ಹತ್ತಿರ, ವಂದಿಗೆ ಅಂಚೆ, ಅಂಕೋಲಾ-೫೮೧ ೩೧೪ (ಉತ್ತರ ಕನ್ನಡ ಜಿಲ್ಲೆ)

# ಅಂಗವಿಕಲ ವ್ಯಕ್ತಿಗಳ ಹಕ್ಕುಗಳು ಮತ್ತು ಅನುಷ್ಠಾನ

**ಎಸ್. ರೇಣುಕಾರಾಧ್ಯ**

ಡಿಸೆಂಬರ್ ಮೂರನ್ನು ಅಂತರ ರಾಷ್ಟ್ರೀಯ ಅಂಗವಿಕಲರ ದಿನಾಚರಣೆಯನ್ನಾಗಿ ವಿಶ್ವದಾದ್ಯಂತ ಆಚರಿಸಲಾಗುತ್ತಿದೆ. ಅದೇ ರೀತಿ ನಮ್ಮ ದೇಶದಲ್ಲೂ ಅಂಗವಿಕಲರ ದಿನಾಚರಣೆಯನ್ನು ಜನರಲ್ಲಿ ಅಂಗವಿಕಲರ ಬಗ್ಗೆ ಸಾಮಾಜಿಕ ಅರಿವನ್ನು ಮೂಡಿಸಲು ಮತ್ತು ಅಂಗವಿಕಲ ಪ್ರತಿಭಾವಂತರನ್ನು ಮತ್ತು ಅಂಗವಿಕಲರ ಶ್ರೇಯೋಭಿವೃದ್ಧಿಗಾಗಿ ದುಡಿದವರನ್ನು ಗುರುತಿಸಿ ಪ್ರೋತ್ಸಾಹಿಸುವ ಸಲುವಾಗಿ ಪ್ರಶಸ್ತಿ ಪ್ರದಾನ ಸಮಾರಂಭ ಮುಂತಾದವು ಆಯೋಜಿಸಲ್ಪಡುತ್ತವೆ. ಅಂಗವಿಕಲರ ದಿನಾಚರಣೆಯ ಸಂದರ್ಭದಲ್ಲಿ ಅವರ ಸ್ಥಿತಿಗತಿಗಳ ಬಗ್ಗೆ ಸಮಾಜ ಮತ್ತು ಸರ್ಕಾರಗಳು ಹೆಚ್ಚಿನ ಗಮನಹರಿಸಬೇಕಾಗಿದೆ. ಭಾರತ ದೇಶದ ಜನಸಂಖ್ಯೆ ಈಗ ೧೦೦ ಕೋಟಿಯನ್ನು ದಾಟಿದೆ. ವಿಶ್ವಸಂಸ್ಥೆಯ ಒಂದು ಅಂದಾಜಿನ ಪ್ರಕಾರ ಅಭಿವೃದ್ಧಿಶೀಲ ದೇಶಗಳಲ್ಲಿ ಜನಸಂಖ್ಯೆಯ ಶೇ. ೧೦ರಷ್ಟು ಜನರು ಅಂಗವಿಕಲತೆಗಳಿಂದ ಕೂಡಿದ್ದಾರೆ. ಅಂದರೆ ಭಾರತದ ೧೦೦ ಕೋಟಿ ಜನಸಂಖ್ಯೆಯಲ್ಲಿ ಅಂಗವಿಕಲರ ಸಂಖ್ಯೆ ಎಷ್ಟು? ಇದಕ್ಕೆ ಖಚಿತವಾದ ಮಾಹಿತಿ ಲಭ್ಯವಿಲ್ಲ. ಅಂಗವಿಕಲರನ್ನು ಗುರುತಿಸಲು ವೈಜ್ಞಾನಿಕವಾದ ಸಮೀಕ್ಷೆಗಳನ್ನು ನಡೆಸಲು ಕೇಂದ್ರ, ರಾಜ್ಯ ಸರ್ಕಾರಗಳಿಗೆ ಇದುವರೆವಿಗೂ ಸಾಧ್ಯವಾಗಿಲ್ಲ. ಆದರೂ ಶೇ. ೫ಕ್ಕಿಂತ ಕಡಿಮೆ ಇಲ್ಲದಷ್ಟು ಅಂಗವಿಕಲರು ಭಾರತದಲ್ಲಿ ಇದ್ದಾರೆ ಎಂದು ಭಾವಿಸಿದರೂ ಕನಿಷ್ಠ ೫ ಕೋಟಿ ಜನ ಭಾರತೀಯರು ಇಂದು ವಿವಿಧ ರೀತಿಯ ಅಂಗವಿಕಲತೆಗಳಿಂದ ಕೂಡಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ. ಇಷ್ಟು ದೊಡ್ಡ ಪ್ರಮಾಣದ ಜನವಿಭಾಗ ಇಂದಿಗೂ ತನ್ನ ಮೂಲಭೂತ ಹಕ್ಕುಗಳಿಗಾಗಿ ಧ್ವನಿ ಎತ್ತಲು ಸಾಧ್ಯವಾಗಿಲ್ಲ. ಆಧುನಿಕ ಕಾಲಘಟ್ಟದಲ್ಲಿಯೂ ಭಾರತದ ಅಂಗವಿಕಲರು ಉಪೇಕ್ಷಿತ ಸಾಮಾಜಿಕ ವರ್ಗವಾಗಿಯೇ ಉಳಿದಿದ್ದಾರೆ. ಹಾಗೆಂದ ಮಾತ್ರಕ್ಕೆ ಅಂಗವಿಕಲರಿಗೆ ಅವಕಾಶಗಳನ್ನು ನೀಡಿಲ್ಲವೆಂದಲ್ಲ, ಅವರ ಉನ್ನತಿಗಾಗಿ ಕೆಲವೊಂದು ಕಾರ್ಯಗಳು ಆಗಿವೆ. ಆದರೆ ಅಂಗವಿಕಲರ ಸಂಖ್ಯೆಗೆ ಇದನ್ನು ಹೋಲಿಸಿದರೆ ಏನೇನೂ ಸಾಲದು. ಸಾಮಾಜಿಕ ಜೀವನದ ಎಲ್ಲಾ ಕ್ಷೇತ್ರಗಳಲ್ಲಿ ಅಂಗವಿಕಲರಿಗೆ ಸಮಾನ ಅವಕಾಶಗಳು ಸಿಕ್ಕುವಂತಾಗಬೇಕು. ಆಗ ಮಾತ್ರ ಅವರು ಸಮಾಜದ ಮುಖ್ಯವಾಹಿನಿಯಲ್ಲಿ ಮುನ್ನಡೆಯಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಅಂಗವಿಕಲತೆಯುಳ್ಳ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಪಾಲ್ಗೊಳ್ಳುವಿಕೆ) ಅಧಿನಿಯಮ ೧೯೯೫ ಒಂದು ಒಳ್ಳೆಯ ಪ್ರಯತ್ನವಾಗಿದೆ.

ಈ ಅಧಿನಿಯಮದ ಅನುಷ್ಠಾನದಿಂದಾಗಿ ದೇಶದ ಅಂಗವಿಕಲರ ಸಂಘ ಸಂಸ್ಥೆಗಳ ಬಹುದಿನಗಳ ಬೇಡಿಕೆಯೊಂದು ಈಡೇರಿತು. ಈ ಅಧಿನಿಯಮವನ್ನು ರೂಪಿಸಿ ಜಾರಿಗೆ ತರಲು ಏಷಿಯಾ ಪೆಸಿಫಿಕ್ ಪ್ರಾಂತಗಳ ಆರ್ಥಿಕ ಮತ್ತು ಸಾಮಾಜಿಕ ಆಯೋಗವು ೧೯೯೨ರ ಡಿಸೆಂಬರ್ ೧ ರಿಂದ ೫ರವರೆಗೆ ನಡೆಸಿದ ಅಧಿವೇಶನ ಪ್ರೇರಣೆ ನೀಡಿತು. ಆ ಸಭೆಯು ಅಂಗವಿಕಲ ವ್ಯಕ್ತಿಗಳ ಪೂರ್ಣ ಪಾಲ್ಗೊಳ್ಳುವಿಕೆ ಮತ್ತು ಸಮಾನ ಹಕ್ಕುಗಳ ಘೋಷಣೆಯನ್ನು ಹೊರಡಿಸಿತು. ಭಾರತ ಸರಕಾರವು ಸಹ ಈ ಘೋಷಣೆಗೆ ಸಹಿ ಹಾಕಿದ್ದುದರಿಂದ ಸದರಿ ಘೋಷಣೆಯನ್ನು ನಮ್ಮ ದೇಶದಲ್ಲಿ ಅನುಷ್ಠಾನಗೊಳಿಸಲು ನಿರ್ಣಯಿಸಿ, ಸಂಸತ್ತಿನ ಉಭಯ ಸದನಗಳು ೨೨-೧೨-೯೫ರಲ್ಲಿ ಸರ್ವಾನುಮತದಿಂದ ಅಂಗೀಕರಿಸಿದ್ದು, ಭಾರತದ ರಾಷ್ಟ್ರಪತಿಗಳು ೧-೧-೯೬ರಲ್ಲಿ ಕಾಯ್ದೆಗೆ ಸಹಿ ಹಾಕುವುದರೊಂದಿಗೆ ಅಂಗವಿಕಲ ವ್ಯಕ್ತಿಗಳ ಅಧಿನಿಯಮವು ವಿಧಿವತ್ತಾಗಿ ಜಾರಿಗೆ ಬಂದಿತು. ಇದರಿಂದ ದೇಶದ ಪ್ರತಿಶತ ಐದರಷ್ಟು ಅಂಗವಿಕಲ ವ್ಯಕ್ತಿಗಳಿಗೆ ಸಂವಿಧಾನಾತ್ಮಕ ಹಕ್ಕುಗಳು ದೊರಕಿದಂತಾಯಿತು. ಆದರೆ ಅಧಿನಿಯಮ ಜಾರಿಗೆ ಬಂದು ೫ ವರ್ಷಗಳೇ ಕಳೆದಿದ್ದರೂ ಅದರ ಅನುಷ್ಠಾನ ನಿರೀಕ್ಷೆಗೂ ಮೀರಿ ವಿಳಂಬವಾಗಿದೆ. ಕೇಂದ್ರ ಸರಕಾರ ಅಧಿನಿಯಮದ ಅಡಿಯಲ್ಲಿ ನಿಯಮಾವಳಿಗಳನ್ನು ರಚಿಸಿ ಕೇಂದ್ರ ಸಮನ್ವಯ ಸಮಿತಿ ಮತ್ತು ಕಾರ್ಯಕಾರಿ ಸಮಿತಿಗಳನ್ನು ರಚಿಸಿದೆ; ಅದೇ ರೀತಿ ರಾಜ್ಯ ಸರ್ಕಾರವೂ ಸಹ ರಾಜ್ಯ ಸಮನ್ವಯ ಸಮಿತಿ ಹಾಗೂ ಕಾರ್ಯಕಾರಿ ಸಮಿತಿಗಳನ್ನು ರಚಿಸಿದೆ.

ಅಂಗವಿಕಲತೆ ಒಂದು ಶಾಪ, ಕರ್ಮ, ಪೂರ್ವಜನ್ಮದ ಪಾಪದ ಫಲ ಇತ್ಯಾದಿ ನಂಬಿಕೆಗಳು ಹಾಗೂ ಅಂಗವಿಕಲ ಮಕ್ಕಳನ್ನು ಹೆತ್ತ ತಂದೆ-ತಾಯಿಗಳಿಗೆ ಇದ್ದ ಯಾವುದೋ ತಪ್ಪಿತಸ್ಥ ಭಾವನೆಗಳು ಅಥವಾ ಪಾಪ ಪ್ರಜ್ಞೆಗಳಿಂದ ಅಂಗವಿಕಲರು ಮತ್ತು ಅವರ ತಂದೆ-ತಾಯಿಗಳು ಸಮಾಜದ ದೃಷ್ಟಿಯಲ್ಲಿ ಕೀಳರಿಮೆಗಳಿಗೆ, ಅವಹೇಳನಗಳಿಗೆ ಗುರಿಯಾಗಿ ಅಥವಾ ದಯೆ, ಕರುಣೆ ಮತ್ತು ಉಳ್ಳವರ ದಾನ ಧರ್ಮಗಳ ಮರ್ಜಿಗಳಲ್ಲಿ ಬದುಕುವ ಕಾಲವೊಂದಿತ್ತು. ಆದರೆ ಇಂತಹ ಭಾವನೆಗಳು ಆಧುನಿಕ ಬದುಕಿನಲ್ಲಿ ಕಡಿಮೆಯಾಗತೊಡಗಿದಂತೆ ಅಂಗವಿಕಲರು ಬದುಕಲು ಬೇರೆ ದಾರಿ ಇಲ್ಲದೆ, ದುಡಿಯಲು ಕೈಲಾಗದೆ, ಭಿಕ್ಷಾಟನೆಗೆ ತಳ್ಳಲ್ಪಟ್ಟಿದ್ದಾರೆ. ಇದು ಯಾವುದೇ ನಾಗರಿಕ ಸಮಾಜದ ಒಳ್ಳೆಯ ಲಕ್ಷಣವಲ್ಲ. ಅಂಗವಿಕಲತೆಗಳು ನಿಸರ್ಗದ ಸೃಷ್ಟಿಯಲ್ಲಿ ಸಹಜ. ಇದರ ಜೊತೆಗೆ ಅಂಗವಿಕಲತೆಗೆ ಅನೇಕ ವೈಜ್ಞಾನಿಕ ಕಾರಣಗಳು ಇವೆ. ನಮ್ಮ ದೇಶದಲ್ಲಿ ಇತ್ತೀಚಿನ ವರ್ಷಗಳವರೆಗೆ ಪೋಲಿಯೋ, ಸಿಡುಬು ಇತ್ಯಾದಿ ಕಾಯಿಲೆಗಳಿಗೆ ಸರಿಯಾದ ಔಷಧೋಪಚಾರಗಳು ದೊರಕದೆ ಇದ್ದುದು, ಇತ್ತೀಚಿನ ವರ್ಷಗಳಲ್ಲಿನ ಪರಿಸರ ಮಾಲಿನ್ಯದಿಂದಾಗುತ್ತಿರುವ ದುಷ್ಪರಿಣಾಮಗಳಿಂದ ಹಾಗೆಯೇ ಕೆಲವೊಮ್ಮೆ ಆಧುನಿಕ ಔಷಧಿಗಳನ್ನು ಉಪಯೋಗಿಸುವುದರಿಂದ ಉಂಟಾಗುತ್ತಿರುವ ವ್ಯತಿರಿಕ್ತ ಪರಿಣಾಮಗಳಿಂದ, ವಂಶ ಪಾರಂಪರ್ಯಗಳಿಂದ ಬಂದ ದೌರ್ಬಲ್ಯಗಳು, ಮಾನಸಿಕ ಒತ್ತಡಗಳು, ಅಪಘಾತಗಳಂತೂ ದೈನಂದಿನ ಸುದ್ದಿಯಾಗಿವೆ. ಇವೆಲ್ಲಾ ಕಾರಣಗಳಿಂದ ಇಪ್ಪತ್ತೊಂದನೇ ಶತಮಾನದ ಆರಂಭದಲ್ಲಿಯೂ ನಮ್ಮ ದೇಶದಲ್ಲಿ ಅಂಗವಿಕಲತೆಯಿಂದ ಹುಟ್ಟುತ್ತಿರುವ ಅಥವಾ ಅಂಗವಿಕಲರಾಗುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಅಂಗವಿಕಲರಲ್ಲಿ ಮುಖ್ಯವಾಗಿ ನಾಲ್ಕು ವಿಧಗಳನ್ನು ಗುರುತಿಸಲಾಗುತ್ತದೆ.

೧) ಮಾನಸಿಕ ಅಸ್ವಸ್ಥರು; ೨) ಅಂಧರು; ೩) ಕಿವುಡ-ಮೂಕರು; ೪) ದೈಹಿಕ ಅಂಗವಿಕಲರು.

ಇವರಲ್ಲಿ ಮಾನಸಿಕ ಅಸ್ವಸ್ಥರಿಗೆ ವಿಶೇಷ ಶಿಕ್ಷಣ ನೀಡಿ ಕಾಳಜಿ ವಹಿಸಬೇಕಾಗುತ್ತದೆ.

ಇವರಿಗೆ ಕೆಲವೊಂದು ಸಂದರ್ಭಗಳಲ್ಲಿ ಒಳ್ಳೆಯ ತರಬೇತಿಗಳನ್ನು ನೀಡಿ ಅವರನ್ನು ವಿವಿಧ ವೃತ್ತಿಗಳಿಗೆ ಪರಿಣಾಮಕಾರಿಯಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. ಇನ್ನುಳಿದ ದೈಹಿಕ ಅಂಗವಿಕಲರನ್ನು (ಅಂಧರು, ಕಿವುಡರು, ಮೂಕರು) ಅತ್ಯಂತ ಪರಿಣಾಮಕಾರಿಯಾಗಿ ದುಡಿಮೆಯಲ್ಲಿ, ಉತ್ಪಾದನಾ ಪ್ರಕ್ರಿಯೆಗಳಲ್ಲಿ ಬಳಸಿಕೊಳ್ಳಬಹುದಾಗಿದೆ. ಇದಕ್ಕೆ ಕೆಲವೊಂದು ರಿಯಾಯಿತಿಗಳನ್ನು, ಸವಲತ್ತುಗಳನ್ನು ಅಂಗವಿಕಲರಿಗೆ ನೀಡಬೇಕಾಗುತ್ತದೆ. ಇಂದಿನ ಸ್ಪರ್ಧಾ ಪ್ರಪಂಚದಲ್ಲಿ ಅಂಗವಿಕಲರು ತಮ್ಮ ಅಂಗವಿಕಲತೆಗಳಿಂದಾಗಿ ಇತರರೊಂದಿಗೆ ಎಲ್ಲ ರಂಗಗಳಲ್ಲಿಯೂ ಸಮಾನವಾಗಿ ಸ್ಪರ್ಧಿಸಲಾರರು, ಆದರೆ ಅವರನ್ನು ಪರಾವಲಂಬಿಗಳನ್ನಾಗಿಸಬೇಕಾಗಿಲ್ಲ. ಅವರು ಸ್ವಸಾಮರ್ಥ್ಯಗಳನ್ನು, ಸ್ವಾಭಿಮಾನವನ್ನು ಬೆಳೆಸಿಕೊಳ್ಳಲು ಕೆಲವೊಂದು ಸಮಾನ ಅವಕಾಶಗಳನ್ನು ಹಾಗೂ ಪೂರ್ಣ ಪಾಲ್ಗೊಳ್ಳುವಿಕೆಯನ್ನು ಸಮಾಜ ಮತ್ತು ಸರಕಾರಗಳು ಖಾತರಿಪಡಿಸಬೇಕು.

೧೯೯೫ರ ಅಧಿನಿಯಮವು ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಒಂದು ಸಮಗ್ರ ಕಾಯ್ದೆ ಎನ್ನಲು ಅಡ್ಡಿಯಿಲ್ಲ. ಕೆಲವೊಂದು ಸಣ್ಣಪುಟ್ಟ ಲೋಪದೋಷಗಳನ್ನು ಅನುಷ್ಠಾನದ ಕಾಲಘಟ್ಟಗಳಲ್ಲಿ ಸರಿಪಡಿಸಬಹುದು. ಅಧಿನಿಯಮವು ನಮ್ಮ ದೇಶದ ಎಲ್ಲ ರೀತಿಯ ಅಂಗವಿಕಲರನ್ನು ಗುರುತಿಸಿ, ಅವರಿಗೆ ಯೋಗ್ಯ ಶಿಕ್ಷಣ, ವೈದ್ಯಕೀಯ ನೆರವು,

> ನೀತಿಯ ಗುರಿ, ಇದುವರೆಗೆ ಇರುವ ಮತ್ತು ಇನ್ನು ಮುಂದೆ ಬರುವ ವೈವಿಧ್ಯತೆಯನ್ನು ನಾಶ ಮಾಡಿ ಒಂದೇ ಆದರ್ಶವನ್ನು ಪ್ರಪಂಚಕ್ಕೆಲ್ಲಾ ಬೋಧಿಸುವುದಲ್ಲ. ಅದು ಎಂದಿಗೂ ಸಾಧ್ಯವೇ ಇಲ್ಲ. ಆದರಿಂದ ಸರ್ವನಾಶವಾಗುವುದು, ಮೃತ್ಯು ಸಂಭವಿಸುವುದು. ವೈವಿಧ್ಯತೆಯ ಹಿಂದೆ ಐಕ್ಯತೆಯನ್ನು ಕಾಣುವುದೇ ಆದರ್ಶ.
>
> —ಸ್ವಾಮಿ ವಿವೇಕಾನಂದ

ಉದ್ಯೋಗಾವಕಾಶಗಳನ್ನು ಖಾಸಗಿ ಮತ್ತು ಸರಕಾರಿ ರಂಗಗಳಲ್ಲಿ ಕಲ್ಪಿಸುವುದು, ತನ್ಮೂಲಕ ಅಂಗವಿಕಲರು ಸ್ವಾವಲಂಬಿಗಳಾಗಿ ಬದುಕುವಂತೆ ಮಾಡುವುದು, ವಿದ್ಯಾಭ್ಯಾಸಕ್ಕೆ ವಿವಿಧ ರೀತಿಯ ನೆರವು, ಅಂಗವಿಕಲತೆಯಿಂದ ಮಕ್ಕಳು ಹುಟ್ಟದಂತೆ ಮಾಡಲು ವೈಜ್ಞಾನಿಕವಾಗಿ ಗುರುತಿಸುವಿಕೆ, ಅಂಗವಿಕಲತೆಯ ನಿಯಂತ್ರಣ ಮತ್ತು ನಿವಾರಣೆ, ಎಲ್ಲಕ್ಕೂ ಮಿಗಿಲಾಗಿ ನಮ್ಮ ನಗರಗಳು, ಪಟ್ಟಣಗಳು ಮತ್ತು ಹಳ್ಳಿಗಳಲ್ಲಿ ಅಂಗವಿಕಲರು ಸಹ ಬದುಕುವಂತಹ ವಾತಾವರಣ, ನಮ್ಮ ಸಾರಿಗೆ ವಾಹನಗಳಲ್ಲಿ ಹಾಗೂ ಸಾರ್ವಜನಿಕ ಕಟ್ಟಡಗಳನ್ನು ಕಟ್ಟುವಾಗ ಇಳಿಜಾರುಗಳನ್ನು ನಿರ್ಮಿಸುವುದು, ಮೆಟ್ಟಿಲುಗಳಿಗೆ ಅಂಗವಿಕಲರು ಬಳಸಲು ಕಬ್ಬಿಣದ ಸರಳುಗಳು (ರೈಲಿಂಗ್), ಅಂಧರು ರಸ್ತೆಗಳನ್ನು ಉಪಯೋಗಿಸುವಂತಹ ಸ್ಥಿತಿಯಲ್ಲಿ ನಿರ್ಮಾಣ, ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ನೀಡುವುದು ಅಗತ್ಯ. ಪ್ರತಿಯೊಂದು ಅಂಗವಿಕಲ ಮಗುವಿಗೆ ೧೮ ವರ್ಷ ವಯೋಮಾನದವರೆಗೆ ಅದರ ಸಾಮರ್ಥ್ಯಕ್ಕೆ ಅನುಗುಣವಾದ ಶಿಕ್ಷಣವನ್ನು ಉಚಿತವಾಗಿ ನೀಡುವುದು, ಅಂಗವಿಕಲ ಮಕ್ಕಳು ಇತರ ಮಕ್ಕಳೊಂದಿಗೆ ಸಹಜವಾಗಿ ಬೆರೆತು ವಿದ್ಯಾಭ್ಯಾಸ ಮಾಡಲು ಅವಕಾಶ ಕಲ್ಪಿಸುವುದು, ಇವುಗಳಿಂದ ಅಂಗವಿಕಲರು ತಮ್ಮ ಕೀಳರಿಮೆಗಳನ್ನು ಮರೆತು ಮುಖ್ಯವಾಹಿನಿಯಲ್ಲಿ ಬೆರೆಯಲು ಸಾಧ್ಯವಾಗುತ್ತದೆ. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ ಮಾತ್ರ ವಿಶೇಷ ಶಾಲೆ, ತರಬೇತಿ ಸಂಸ್ಥೆಗಳನ್ನು ಖಾಸಗಿ ಹಾಗೂ ಸರಕಾರಿ ವಲಯಗಳಲ್ಲಿ ಸ್ಥಾಪಿಸಲು ಅಧಿನಿಯಮವು ಅವಕಾಶ ಕಲ್ಪಿಸಿದೆ. ಅಂಗವಿಕಲರಿಗೆ ಕ್ರೀಡೆ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಲು ಕ್ರೀಡಾ ಸೌಕರ್ಯಗಳನ್ನು ಕಲ್ಪಿಸುವ ಪ್ರಯತ್ನವಂತೂ ಈವರೆಗೆ ನಡೆದಿಲ್ಲ.

> **ನಾಗಾಲೋಟ**
>
> ಅ. ರಾ. ಮಿತ್ರ
>
> ಆಂಧ್ರ ಕಾಲುವೆ ತೋಡ್ತಾನೇ ಇದೆ
> ನಮ್ ಗಡಿನಾಡಿನ್ ಬಳೀನೇ ಎಲ್ಲಾ
> ಕನ್ನಡದ ಹೈಕಳು ಸುಮ್ ಕಿರಾಕಿಲ್ಲ
> ಬ್ಯಾಡ ಬ್ಯಾಡಾಂತ ಕೂಗ್ತಾನೇ ಔರಲ್ಲ !

ಅಧಿನಿಯಮದ ಅಧ್ಯಾಯ ೬ರ ನಿಯಮ ೩೨ರಿಂದ ೪೧ರವರೆಗೆ ಸರ್ಕಾರದ ಪ್ರತಿಯೊಂದು ಇಲಾಖೆ, ಸಿಬ್ಬಂದಿ ವಿಭಾಗದಲ್ಲಿ ಅಂಗವಿಕಲರು ನಿರ್ವಹಿಸಬಹುದಾದ ಹುದ್ದೆಗಳನ್ನು ಗುರುತಿಸಿ ಪ್ರತಿ ವೃಂದದಲ್ಲಿಯೂ ಶೇ. ೩ಕ್ಕೆ ಕಡಿಮೆ ಇಲ್ಲದಷ್ಟು ಹುದ್ದೆಗಳು ಇರುವಂತೆ ನೋಡಿಕೊಂಡು ತುಂಬಬೇಕು ಎಂಬ ಸ್ಪಷ್ಟ ನಿರ್ದೇಶನವಿದೆ. ಆದರೆ ರಾಜ್ಯ ಸರಕಾರ ಗ್ರೂಪ್ ಸಿ ಮತ್ತು ಡಿ ವರ್ಗದ ಹುದ್ದೆಗಳಲ್ಲಿ ಶೇ. ೫ರಷ್ಟು ನೇರ ನೇಮಕಾತಿಗಳಿಗೆ ಮಾತ್ರ ಮೀಸಲಾತಿ ನೀಡುತ್ತದೆ. ಈ ಸೌಲಭ್ಯವನ್ನು ಗ್ರೂಪ್ ಎ ಮತ್ತು ಬಿ ವರ್ಗದ ಹುದ್ದೆಗಳಿಗೂ ವಿಸ್ತರಿಸಲಿ. ಕೇಂದ್ರ ಸರಕಾರ ಈಗಾಗಲೇ ಎ ಮತ್ತು ಬಿ ವರ್ಗದ ನೇರ ನೇಮಕಾತಿಯ ಜೊತೆಗೆ ಬಡ್ತಿಗಳಲ್ಲಿ ಎಲ್ಲ ವರ್ಗದ ಹುದ್ದೆಗಳಿಗೆ ಶೇ. ೩ರ ಮೀಸಲಾತಿ ನೀಡಿ ಆದೇಶಗಳನ್ನು ಹೊರಡಿಸಿದೆ. ನಮ್ಮ ರಾಜ್ಯ ಸರಕಾರವು ಸಹ ಈ ನಿಟ್ಟಿನಲ್ಲಿ ತ್ವರಿತ ಕ್ರಮ ಕೈಗೊಳ್ಳಬೇಕಾಗಿದೆ.

ಸರಕಾರ ಮತ್ತು ಇತರ ಸಾರ್ವಜನಿಕ ಸಂಸ್ಥೆಗಳು, ಜಿಲ್ಲಾ ಪಂಚಾಯತ್‌ಗಳು, ನಗರ, ಪಟ್ಟಣ ಅಭಿವೃದ್ಧಿ ಪ್ರಾಧಿಕಾರಗಳು, ನಗರಪಾಲಿಕೆಗಳು, ಪುರಸಭೆ ಇತ್ಯಾದಿ ಸ್ಥಳೀಯ ಸಂಸ್ಥೆಗಳು ಅಂಗವಿಕಲರಿಗೆ ಆದ್ಯತೆಯ ಮೇಲೆ ಹಾಗೂ ರಿಯಾಯಿತಿ ದರದಲ್ಲಿ ಮನೆ, ನಿವೇಶನ, ಅಂಗಡಿ, ವಿಶೇಷ ಶಾಲೆ, ಮನರಂಜನಾ ಕೇಂದ್ರಗಳ ಸ್ಥಾಪನೆ, ಉದ್ದಿಮೆ ಕಾರ್ಖಾನೆಗಳ ಸ್ಥಾಪನೆಗೆ ಭೂಮಿಯನ್ನು ನೀಡಬೇಕೆಂದೂ ಸಹ ಅಧಿನಿಯಮದಲ್ಲಿ ನಿರ್ದಿಷ್ಟಪಡಿಸಲಾಗಿದೆ.

ಅಂಗವಿಕಲತೆಯುಳ್ಳ ವ್ಯಕ್ತಿಗಳ ಅಧಿನಿಯಮದ ಮೂಲಕ ಭಾರತದ ಅಂಗವಿಕಲರಿಗೆ ಶಾಸನಬದ್ಧ ಅಧಿಕಾರಗಳನ್ನು ನೀಡಲು ಸರಿಸುಮಾರು ೫೦ ವರ್ಷಗಳೇ ಹಿಡಿದಿದೆ. ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ಈಗಲಾದರೂ ಸದರಿ ಅಧಿನಿಯಮವನ್ನು ಯಥಾವತ್ತಾಗಿ ಅನುಷ್ಠಾನಗೊಳಿಸುತ್ತದೆ ಎಂದು ಅಂಗವಿಕಲ ಸಮುದಾಯ ಆಶಿಸುತ್ತದೆ.

**ಎಸ್. ರೇಣುಕಾರಾಧ್ಯ**
ನಂ. ಎ-೧೧೬/೧, ಪಿ.ಡಬ್ಲ್ಯು.ಡಿ. ಕ್ವಾರ್ಟರ್ಸ್,
ಜೀವನ್ ಭೀಮಾನಗರ, ಬೆಂಗಳೂರು-೫೬೦ ೦೭೫

# ನವಕರ್ನಾಟಕ ಪ್ರಕಾಶನದ ಪ್ರಶಸ್ತಿ ಪುರಸ್ಕೃತ ಪ್ರಕಟಣೆಗಳು

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (5ನೇ ಮುದ್ರಣ) ಡಾ|| ಎಸ್. ಬಾಲಚಂದ್ರರಾವ್ 28.00
(ಕ. ಸಾ. ಪರಿಷತ್ತಿನ ಡಾ|| ಎಚ್. ಎನ್. ದತ್ತಿನಿಧಿ ಪ್ರಶಸ್ತಿ 1988-89)

ವೈಜ್ಞಾನಿಕ ಮನೋಧರ್ಮ (5ನೇ ಮುದ್ರಣ) ಜಿ. ಟಿ. ನಾರಾಯಣ ರಾವ್ 50.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990. ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1992)

ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ. 3ನೇ ಮುದ್ರಣ)
(ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991) ಎನ್. ಪಿ. ಶಂಕರನಾರಾಯಣ ರಾವ್ 150.00

ಮಹಿಳೆ - ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ) ಡಾ|| ಎನ್. ಗಾಯತ್ರಿ 55.00
(ಬಿ. ಎಂ. ಶ್ರೀ. ಪ್ರತಿಷ್ಠಾನದ ಸಾವಿತ್ರಮ್ಮ ದತ್ತಿನಿಧಿ ಪ್ರಶಸ್ತಿ 1992)

ವೈದ್ಯಲೋಕದ ಕೌತುಕಗಳು (3ನೇ ಮುದ್ರಣ) ಡಾ|| ಎಚ್. ಡಿ. ಚಂದ್ರಪ್ಪಗೌಡ 50.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993)

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (5ನೇ ಮುದ್ರಣ ಅಚ್ಚಿನಲ್ಲಿ)
(ವರ್ಧಮಾನ ಪ್ರಶಸ್ತಿ 1993) ಡಾ|| ಮೀನಗುಂಡಿ ಸುಬ್ರಹ್ಮಣ್ಯಂ 150.00

ಜಯ ಯೌಧೇಯ ಮೂಲ : ರಾಹುಲ ಸಾಂಕೃತ್ಯಾಯನ (ಅನು : ಡಾ|| ಪ್ರಧಾನ್ ಗುರುದತ್ತ) 70.00
(ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಉತ್ತಮ ಅನುವಾದಕ್ಕಾಗಿ ಪುರಸ್ಕಾರ 1994)

ಭಾರತೀಯ ದರ್ಶನಗಳು (2ನೇ ಮುದ್ರಣ) ದೇವಿಪ್ರಸಾದ್ ಚಟ್ಟೋಪಾಧ್ಯಾಯ
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994) (ಅನು : ಬಿ. ವಿ. ಕಕ್ಕಿಲ್ಲಾಯ) 80.00

ಬಳ್ಳಿ ತರಕಾರಿಗಳು (4ನೇ ಮುದ್ರಣ) ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ 18.00
(ಧಾರವಾಡ ಕೃಷಿ ವಿಶ್ವವಿದ್ಯಾಲಯದ ಕೃಷಿ ಸಾಹಿತ್ಯ ಶ್ರೀ ಪ್ರಶಸ್ತಿ 1994-99)

ಚಕ್ರ (ಜನಪ್ರಿಯ ವಿಜ್ಞಾನ ಲೇಖನಗಳು. 2ನೇ ಮುದ್ರಣ) ಜಿ. ಆರ್. ಲಕ್ಷ್ಮಣರಾವ್ 38.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1996)

ಮನೋರೋಗ ಗೆಲ್ಲಬಹುದೇ ? (2ನೇ ಮುದ್ರಣ) ಸ್ನೇಹಾ 75.00
(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996, ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)

ಕ್ಯಾನ್ಸರ್ ಲೋಕ (2ನೇ ಮುದ್ರಣ) ಡಾ|| ಎಚ್. ಡಿ. ಚಂದ್ರಪ್ಪಗೌಡ 65.00
(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ ಕುವೆಂಪು ಪ್ರಶಸ್ತಿ 1997)

ಭಗವದ್ಗೀತೆ: ಒಂದು ವೈಚಾರಿಕ ಒಳನೋಟ (2ನೇ ಮುದ್ರಣ) ಪ್ರೊ|| ಬಿ. ವಿ. ವೀರಭದ್ರಪ್ಪ 50.00
(ಕನ್ನಡ ಸಾಹಿತ್ಯ ಪರಿಷತ್ತಿನ ಡಾ|| ಎಚ್. ಎನ್. ದತ್ತಿನಿಧಿ ಪ್ರಶಸ್ತಿ 1997)

ಕರ್ನಾಟಕ ಏಕೀಕರಣ ಇತಿಹಾಸ ಡಾ|| ಎಚ್. ಎಸ್. ಗೋಪಾಲ ರಾವ್ 160.00
(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997)

ಬದಿ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997) ಇಂದಿರಾ ಹೆಗ್ಗಡೆ 50.00

ಪ್ರಾಚೀನ ಭಾರತ (2ನೇ ಮುದ್ರಣ) ಪ್ರೊ|| ಆರ್. ಎಸ್. ಶರ್ಮ (ಅನು : ಎನ್. ಪಿ. ಶಂ. ರಾವ್) 120.00
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998)
(ಮುದ್ರಣ ವಿನ್ಯಾಸಕ್ಕಾಗಿ ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ 1998)

ಇದು ಮುಗಿಯದ ಕಥೆ ದೇವಿಪ್ರಸಾದ್ ಚಟ್ಟೋಪಾಧ್ಯಾಯ (ಅನು : ಜಿ. ಕುಮಾರಪ್ಪ) 50.00
(ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ 1999)

ಕಲಾವಿದ ಹೆಬ್ಬಾರರ ರೇಖಾಲಾವಣ್ಯ ವ್ಯಾಸರಾಯ ಬಲ್ಲಾಳ 80.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಥಮ ಬಹುಮಾನ 1999)

ಪ್ರತಿಬಿಂಬ (ಕನ್ನಡ ಪುಸ್ತಕ ಪ್ರಾಧಿಕಾರದ 'ಮಕ್ಕಳ ಪುಸ್ತಕ' ಬಹುಮಾನ 99) ಡಿ. ಆರ್. ಬಳೂರಗಿ 35.00

ಪ್ರಾಥಮಿಕ ಶಿಕ್ಷಣ : ಸಮಸ್ಯೆಗಳು-ಸವಾಲುಗಳು ಡಾ|| ಮಹಾಬಲೇಶ್ವರ ರಾವ್ 110.00
(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾಮಾನಾ ಪ್ರಶಸ್ತಿ'-1999)

ಸುಖ ನೀಡದ ಸಂಪತ್ತು (ಕನ್ನಡ ಸಾಹಿತ್ಯ ಪರಿಷತ್ತಿನ ಮಕ್ಕಳ ಪುಸ್ತಕ ಬಹುಮಾನ 1999) ಪ. ರಾಮಕೃಷ್ಣಶಾಸ್ತ್ರಿ 12.00

ಕಾಯಿಲೆಯ ಕಾರಣಗಳು : ನಿಮ್ಮ ನಂಬಿಕೆ ಎಷ್ಟು ಸರಿ ? ಡಾ|| ಸಿ. ಆರ್. ಚಂದ್ರಶೇಖರ್ 35.00
(ಡಾ|| ಪಿ. ಎಸ್. ಶಂಕರ್ ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ 1999)

ನೀವು ಬಳಸುವ ಔಷಧಗಳು (2ನೇ ಮುದ್ರಣ) ಡಾ|| ಸಿ. ಆರ್. ಚಂದ್ರಶೇಖರ್ 60.00
(ಡಾ|| ಪಿ. ಎಸ್. ಶಂಕರ್ ವೈದ್ಯ ಸಾಹಿತ್ಯ ಪ್ರಶಸ್ತಿ 2000-01)

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (ಪ್ರ. ಸಂ : ಎಂ. ಎ. ಸೇತುರಾವ್,
(4 ಸಂಪುಟಗಳ ಸೆಟ್. 2ನೇ ಮುದ್ರಣ) ಕೆ. ಎಲ್. ಗೋಪಾಲಕೃಷ್ಣ ರಾವ್) 1800.00
(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಥಮ ಬಹುಮಾನ 1998)
(ಮುದ್ರಣ ವಿನ್ಯಾಸಕ್ಕಾಗಿ ಭಾರತೀಯ ಪ್ರಕಾಶಕರ ಒಕ್ಕೂಟದ ಪ್ರಶಸ್ತಿ 2000)

**ಹೊಸತು** ಮೂರು ವರ್ಷದ ಚಂದಾದಾರರಿಗೆ 20% ರಿಯಾಯಿತಿ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಅಂಚೆಪೆಟ್ಟಿಗೆ 5159
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

**HOSATHU** Kannada Monthly / January 2002 Rs. 25

RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14

# ಕೆರೆ ನಮ್ಮದು ಸಂರಕ್ಷಿಸೋಣ



ಕೆರೆ ಸಂರಕ್ಷಣೆ ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ




ಕರ್ನಾಟಕ ಸರ್ಕಾರ

## ಜಲ ಸಂವರ್ಧನೆ ಯೋಜನೆ ಸಂಘ (ರಿ)

16/1, 5ನೇ ಮಹಡಿ, ಎಸ್.ಪಿ.ಕಾಂಪ್ಲೆಕ್ಸ್, ಲಾಲ್‌ಬಾಗ್ ರಸ್ತೆ, ಬೆಂಗಳೂರು-560 027



Designed by : VIEW POINT, #17 Sankey Road, B'lore - 20, Tel : 344 0174

Published by : JALASAMVARDHNE YOJANA SANGHA (R), B'lore

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna